


# ಮಧುರಚೆನ್ನರ ಲೇಖನಗಳು



ಸಂಪಾದಕಃ ಗುರುಲಿಂಗ ಕಾಪಸೆ

# ಮಧುರಚೆನ್ನರ ಲೇಖನಗಳು

ಸಂಪಾದಕ

ಗುರುಲಿಂಗ ಕಾಪಸೆ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

MADHURACHENNARA LEKHANAGALU :
Edited by Dr. Gurulinga Kapse, Durga Colony, Haliyal Road, Saptapur, Dharwad - 580 001, Published by Director Prasaranga. Kannada University, Hampi - 583 211, Karnataka.

Demy Octevo P. P. : 608

First Impression : 1993



ಮುಖಪುಟ ವಿನ್ಯಾಸ : ಮೇಘರಾಜ ಪವಾರ, ಧಾರವಾಡ

ಬೆಲೆ : **ರೂ. ೧೫೦-೦೦**

ಪ್ರಕಾಶಕರು :

**ಚಿ. ಶ್ರೀನಿವಾಸರಾಜು**
ನಿರ್ದೇಶಕ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ – ೫೮೩ ೨೧೧

ಮುದ್ರಕರು :

**ಸೋಮಶೇಖರ ಆಕಳವಾಡಿ**
ಮನೋಹರ ಮುದ್ರಣಾಲಯ
ಮಾರ್ಕೆಟ, ಧಾರವಾಡ – ೫೮೦ ೦೦೧

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳಿವಳಿಕೆಯೊಂದಿದೆ; ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳಿವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಶಾಸ್ತ್ರ–ಕಲೆ, ಅಭಿಜಾತ–ಜಾನಪದ, ಮಾರ್ಗ–ದೇಸಿ, ಸ್ವಕೀಯ–ಪರಕೀಯ, ಪೌರ್ವಾತ್ಯ–ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿ ಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿಬರುವ ಸಾಹಿತ್ಯ ಪ್ರಕಟವಾಗಬೇಕು; ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ

ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅವೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ; ಅರ್ಥಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ. ನಮ್ಮ ಪ್ರಸಾರಾಂಗ ಇದಕ್ಕಿಂತ ವಿಶಾಲವಾದ, ಹೆಚ್ಚು ಪರಿಣಾಮ ಕಾರಿಯಾದ ಪರಿಪ್ರೇಕ್ಷ್ಯವನ್ನು ಕಟ್ಟುವುದರಲ್ಲಿ ತೊಡಗಿದೆ. ಪ್ರಸಾರಾಂಗದ ಪ್ರಕಟನೆ ಗಳಿಗೆ ಇಂಥ ಒಂದು ಸಾರ್ಥಕವಾಗಬಲ್ಲ ಉದ್ದೇಶವಿದೆ. ಲೋಕದಲ್ಲಿಯ ತಿಳುವಳಿಕೆ ಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪ ವನ್ನು ಕೊಡುವ ಹೊಣೆಗಾರಿಕೆ ಈ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆಯೆಂದರೂ ತಪ್ಪಿಲ್ಲ. ಈ ದೃಷ್ಟಿಯಿಂದ ಈ ವರ್ಷ ಕೆಲವು ಪುಸ್ತಕಗಳನ್ನು ನಾವು ಪ್ರಕಟಿಸುತ್ತಿದ್ದೇವೆ.

ಡಾ॥ ಗುರುಲಿಂಗ ಕಾಪಸೆಯವರು ಸಂಪಾದಿಸಿರುವ 'ಮಧುರಚೆನ್ನರ ಲೇಖನಗಳು' ಪುಸ್ತಕವನ್ನು ಕನ್ನಡ ವಿಶ್ವವಿದ್ಯಾಲಯ ಮೊದಲ ಬಾರಿಗೆ ಪ್ರಕಟಿಸು ತ್ತಿದೆ. ಕನ್ನಡದ ಉತ್ತಮ ಕವಿಗಳಲ್ಲಿ ಒಬ್ಬರಾದ ಮಧುರಚೆನ್ನರ ಲೇಖನಗಳಲ್ಲಿ ಒಳನೋಟಗಳಿವೆ. ಚದುರಿ ಹೋಗಿದ್ದ ಈ ಲೇಖನಗಳನ್ನು ಸಮರ್ಥವಾಗಿ, ಪ್ರೀತಿಯಿಂದ, ಅಚ್ಚುಕಟ್ಟಾಗಿ ಸಂಪಾದಿಸಿ ಕೊಟ್ಟಿರುವ ಡಾ॥ ಗುರುಲಿಂಗ ಕಾಪಸೆಯವರಿಗೆ, ಹಲಸಂಗಿಯ ಶ್ರೀ ಪುರುಷೋತ್ತಮ ಗಲಗಲಿಯವರಿಗೆ ಮತ್ತು ಈ ಕಾರ್ಯದಲ್ಲಿ ನೆರವಾದ ಎಲ್ಲರಿಗೆ ನಮ್ಮ ಕೃತಜ್ಞತೆಗಳು.

**ಚಂದ್ರಶೇಖರ ಕಂಬಾರ**

**ಕುಲಪತಿಗಳು**
**ಕನ್ನಡ ವಿಶ್ವವಿದ್ಯಾಲಯ**
**ಹಂಪಿ**

# ಪ್ರಸ್ತಾವನೆ

– ೧ –

"ನಾನು ಕತೆಗಾರನಲ್ಲ, ಸಂಶೋಧಕನು"

–'ಕಾಳರಾತ್ರಿ', ಬರಹಗಾರನ ಬಿನ್ನಹ, ಪುಟ–೯

"ನಾನು ಆಧ್ಯಾತ್ಮ, ಸಾಹಿತ್ಯ, ಇತಿಹಾಸ, ಭಾಷಾಶಾಸ್ತ್ರ ಮತ್ತು ಸಮಾಜ ಶಾಸ್ತ್ರ ಇವೆಲ್ಲವುಗಳಲ್ಲಿ ಸತತ ಸಂಶೋಧನವನ್ನು ನಡೆಸಿರುವೆನೆಂಬುದು ತಮ್ಮೆಲ್ಲರಿಗೂ ತಿಳಿದ ವಿಷಯುವಿದೆ"

–೩೩ ನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಕವಿಗೋಷ್ಠಿ
ಅಧ್ಯಕ್ಷ ಭಾಷಣ, ಪುಟ–೧

"ನಾನು ಸತ್ಯದ ಭಕ್ತನು, ಗ್ರಹಿಕೆಯು ದಾಸನಲ್ಲ"

–ಚೆನ್ನಮಲ್ಲನ ನಿವೇದನ, 'ಶಿವಾನುಭವ', ೧೧–೧೨

ಈ ಮೇಲಿನ ಮಾತುಗಳು ಮಧುರಚೆನ್ನರ ಸಂಶೋಧಕ ವ್ಯಕ್ತಿತ್ವಕ್ಕೆ ಸ್ವಯಂ ನಿದರ್ಶನಗಳಾಗಿವೆ. ಅವರು ಬದುಕಿನುದ್ದಕ್ಕೂ ಮಾಡಿದ್ದು ಸಂಶೋಧನೆಯೇ. ಸಾಹಿತ್ಯಿಕ ಸಂಶೋಧನೆಗಿಂತ ಆಧ್ಯಾತ್ಮಿಕ ಸಂಶೋಧನೆ ಅವರ 'ಪೂರ್ವರಂಗ', 'ಕಾಳರಾತ್ರಿ', 'ಬೆಳಗು' ಮತ್ತು 'ಆತ್ಮಸಂಶೋಧನೆ'ಗಳಲ್ಲಿ ಹೆಚ್ಚು ಎದ್ದು ಕಾಣುವುದರಿಂದ, ತಮ್ಮ ಸಾಧನೆಯ ಶ್ರುತಿಯಾದ 'ನನ್ನ ನಲ್ಲ'ದಂಥ ಅತ್ಯಂತ ಪ್ರಭಾವಿಯಾದ ಕಾವ್ಯವನ್ನು ಅವರು ಸೃಷ್ಟಿಸಿರುವುದರಿಂದ, ಅವರನ್ನು ಅನುಭಾವಿಕವಿಯೆಂದು ಸಾರಸ್ವತ ಲೋಕ ಗುರುತಿಸುವಂತಾಗಿದೆ. ಆದರೆ ಅವರು ಸಂಶೋಧನಾ ಕ್ಷೇತ್ರದಲ್ಲಿಯೂ ಮೌಲಿಕ ಕಾರ್ಯ ಮಾಡಿದ್ದು, ಶಾಸನೋಕ್ತ ಸಂಶೋಧನೆಯಂಥ ಅವರ ಲೇಖನಗಳು ಸಾಹಿತ್ಯ ಚರಿತ್ರಕಾರರ, ವಿದ್ವಾಂಸರ ಗಮನವನ್ನು ಸೆಳೆದಿವೆ. ಮಹತ್ವದ ಪ್ರಾಚೀನ ಶಾಸನಗಳನ್ನು ಓದುವುದರಲ್ಲಿ, ಶಾಸನಗಳನ್ನು ಆಧರಿಸಿ ಸಾಹಿತ್ಯ ಹಾಗೂ ಸಾಮಾಜಿಕ ಜೀವನದ ಮೇಲೆ ಅಂದರೆ ನಮ್ಮ ಪರಂಪರೆಯ ಮೇಲೆ ಬೆಳಕು ಚೆಲ್ಲುವುದರಲ್ಲಿ, ಭಾಷಾಶಾಸ್ತ್ರ, ಜನಪದ ಸಾಹಿತ್ಯ, ಇತಿಹಾಸ ಮುಂತಾದ ವಿಷಯಗಳನ್ನು ಕುರಿತು ಸಮಾಲೋಚಿಸುವಲ್ಲಿ ಅವರು ತೋರಿದ ಶ್ರದ್ಧೆ, ಸತ್ಯನಿಷ್ಠೆ, ವಿಷಯದ ಆಳಕ್ಕೆ ಇಳಿದು ಮೂಲವನ್ನು ಗುರುತಿಸುವ ಪ್ರಯತ್ನ ಮುಂತಾದವುಗಳು ಅವರು ಪ್ರಕಟಿಸಿದ– ಆದರೆ ಪತ್ರಿಕೆಗಳಲ್ಲಿ ಚದರಿಹೋದ–ಲೇಖನಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ. ಈ ಲೇಖನಗಳು ತುಂಬ ಉಪಯುಕ್ತವಾಗಿದ್ದು ಪ್ರಮಾಣ ಭೂತವಾದ ಸಾಕಷ್ಟು ಸಾಮಗ್ರಿಯನ್ನೊಳಗೊಂಡಿವೆ. ಮಧುರಚೆನ್ನರ ವ್ಯಾಪಕ

ವಾದ ಅಧ್ಯಯನಕ್ಕೆ, ಬಹುಶ್ರುತತ್ವಕ್ಕೆ ಹಲವು ಲೇಖನಗಳು ನಿದರ್ಶನಗಳಾಗಿ ನಿಲ್ಲುತ್ತವೆ. ಕೆಲವು ಲೇಖನಗಳಲ್ಲಿ ಚರ್ಚಾಸ್ಪದವಾದ ಸಂಗತಿಗಳೂ ಇಲ್ಲದಿಲ್ಲ. ಈ ಶತಮಾನದ ಮೂವತ್ತರ ದಶಕದಲ್ಲಿ ಬರೆದ ಕೆಲ ಲೇಖನಗಳಲ್ಲಿ ಓರೆ–ಕೋರೆಗಳಿರುವು ದನ್ನೂ ಕಾಣಬಹುದು. ಶತಮಾನದ ಕೊನೆಯ ಅಂಚಿನಲ್ಲಿರುವ, ಎಲ್ಲ ಕ್ಷೇತ್ರಗಳಲ್ಲಿ ವಿಪುಲವಾದ ಸಾಮಗ್ರಿಯನ್ನು ಹೊಂದಿರುವ, ವಿವಿಧ ವಿಷಯಗಳ ಮೇಲೆ ಸಂಪ್ರಬಂಧದಂಥ ಸಿದ್ಧ ಪ್ರಮಾಣ ಗ್ರಂಥಗಳನ್ನೂ ಪಡೆದಿರುವ ನಾವು, ಈ ಶತ ಮಾನದ ಇಪ್ಪತ್ತರ–ಮೂವತ್ತರ ದಶಕಗಳ ಕನ್ನಡದ ಸ್ಥಿತಿ-ಗತಿಗಳನ್ನು ಲಕ್ಷ್ಯಪೂರ್ವಕ ವಾಗಿ ಗಮನಿಸಿದಾಗ ಮಧುರಚೆನ್ನರ ಕಾರ್ಯದ ಮಹತ್ವವನ್ನು ತಿಳಿಯಬಲ್ಲೆವು. ಅಷ್ಟಲ್ಲದೆ ಮಧುರಚೆನ್ನರು ಓದಿದ್ದು ಮುಲ್ಕೀ ಪರೀಕ್ಷೆಯವರೆಗೆ. ಜೀವನವನ್ನೆಲ್ಲ ಕಳೆದದ್ದು ವಾಹನ ಸೌಕರ್ಯವಿಲ್ಲದ, ಗ್ರಂಥಾಲಯವಿಲ್ಲದ, ಸಮರ್ಪಕ ಅಂಚೆಯ ವ್ಯವಸ್ಥೆಯೂ ಇಲ್ಲದ, ಗಡಿನಾಡಿಗೆ ಹೊಂದಿಕೊಂಡಿರುವ ಒಂದು ದೂರದ ಹಳ್ಳಿ ಯಲ್ಲಿ. ಮಧುರಚೆನ್ನರ 'ಕಾಳರಾತ್ರಿ'ಗೆ ಮುನ್ನುಡಿ ಬರೆಯುತ್ತ ಶ್ರೀ ದ. ರಾ. ಬೇಂದ್ರೆಯವರು "ಲೇಖಕರು ಶಾಲೆಯಲ್ಲಿ ಕಲಿತದ್ದು ಕನ್ನಡ ಮುಲ್ಕೀ ಪರೀಕ್ಷೆಯ ವರೆಗೆ. ಇರುವುದು ಹಳ್ಳಿಯಲ್ಲಿ. ಯಾವಾಗಲೂ ಹತ್ತಿರದಲ್ಲಿರುವ ಗೆಳೆಯರೂ ಅದೇ ಜಾತಿಗೆ ಸೇರಿದವರು. ಆದರೆ 'ಮಧುರಚೆನ್ನ'ರ ಜ್ಞಾನಲಾಲಸೆಯು ಅವರ ಸಾಧನೆಯಂತೆಯೇ ಅತೀ ತೀವ್ರತರವಾದದ್ದು. ಜೇನಹಂಕ ಚಿನಿವಾಲನಂತೆ ತನ್ನ ಕಡೆಗೆ ಬಂದದ್ದು ಎಂಥ ಬಂಗಾರವೆಂದು ಅದರ ಬಣ್ಣವನ್ನು ಬೇರೆ ಬೇರೆ ಒರೆಗಲ್ಲಿಗೆ ಹಚ್ಚುವುದು ಅವರ ಅವಿಶ್ರಾಂತ ಉತ್ಸಾಹ, ಪ್ರಯತ್ನ, ವಿವೇಕ. ಇಂಗ್ಲೀಷ, ಮರಾಠೀ, ಸಂಸ್ಕೃತ, ಬಂಗಾಲಿ, ಹಿಂದೀ ಸಾಹಿತ್ಯಗಳನ್ನು ಅನುಕೂಲಿಸಿದಷ್ಟೂ ತಿರುವಿ ಹಾಕಿದ್ದಾರೆ ಸ್ವಪ್ರಯತ್ನದಿಂದ." ಎಂದು ನುಡಿದಿರುವುದನ್ನು ಇಲ್ಲಿ ಸ್ಮರಿಸ ಬಹುದು. ಬೇಂದ್ರೆಯವರು ನುಡಿದಂತೆ ಮಧುರಚೆನ್ನರು ತಮ್ಮ ಕಡೆಗೆ ಬಂದದ್ದು ಅಥವಾ ತಮ್ಮ ಅಧ್ಯಯನ ವ್ಯಾಪ್ತಿಯಲ್ಲಿ ದೊರತದ್ದು ಎಂಥ ಬಂಗಾರವೆಂಬುದನ್ನು ಒರೆಗೆಹಚ್ಚಿ ನೋಡಲು ಮಾಡಿದ ಪ್ರಯತ್ನದ ಫಲವಾಗಿಯೇ ಅವರ ಲೇಖನಗಳು ಮೂಡಿಬಂದಿವೆಯೆಂದು ಹೇಳಬಹುದು. ಪ್ರಸ್ತುತ ಗ್ರಂಥವು ಆ ಲೇಖನಗಳನ್ನೆಲ್ಲ ಒಂದೆಡೆಗೆ ಬರುವಂತೆ ಮಾಡಿದ ಒಂದು ಪ್ರಯತ್ನವಾಗಿದೆ.

ಹತ್ತು ಅಧ್ಯಾಯಂಗಳುಳ್ಳ, ಎಪ್ಪತ್ಮೂರು ಲೇಖನಗಳುಳ್ಳ ಈ ಗ್ರಂಥ ಮಧುರ ಚೆನ್ನರು ಬರೆದ ಎಲ್ಲ ಲೇಖನಗಳನ್ನು ಒಳಗೊಂಡಿದೆಯೆಂದು ಹೇಳುವ ಧೈರ್ಯ ನನಗಿಲ್ಲ. ಯಾಕೆಂದರೆ ಆ ಕಾಲದಲ್ಲಿ ಕ್ರಿಯಾಶೀಲ ಲೇಖಕರಾದ ಮಧುರಚೆನ್ನರು ಯಾವ ಯಾವ ಪತ್ರಿಕೆಗಳಿಗೆ ಬರೆದಿರುವರೆಂಬುದು ಇನ್ನೂ ಸಮಸ್ಯೆಯಾಗಿಯೇ ಉಳಿದಿದೆ. ಅಷ್ಟು ಪ್ರಸಿದ್ಧವಾಗಿರದ, ಅಲ್ಪಾಯುಷಿಯಾಗಿರುವ ಕೆಲವು ಪತ್ರಿಕೆ ಗಳಿಗೂ–ಸ್ನೇಹಪರತೆಯಿಂದ– ಅವರು ಬರೆದಿರುವ ಸಾಧ್ಯತೆಯಿದೆ. ಪ್ರಮುಖ ಪತ್ರಿಕೆಗಳಾದ 'ಜಯಕರ್ನಾಟಕ', 'ಜೀವನ', 'ಶಿವಾನುಭವ' ಮುಂತಾದ ನಿಯತ

ಕಾಲಿಕೆಗಳಿಗೆ ಅವರು ಹೆಚ್ಚಾಗಿ ಬರೆದಿದ್ದು, 'ಸ್ವಧರ್ಮ', 'ಸುಕುಮಾರ', 'ಸಮರ್ಪಣ', 'ಉದಯ' ಮುಂತಾದ ಪತ್ರಿಕೆಗಳಿಗೂ ಅವರು ಆಗೀಗ ಬರೆದದ್ದುಂಟು. ನಮಗೆ ಸಾಧ್ಯವಿರುವ ಎಲ್ಲ ಮೂಲೆಗಳಿಂದಲೂ ಲೇಖನಗಳನ್ನು ಹುಡುಕಿಕೊಳ್ಳಲಾಗಿದ್ದು, ಅತ್ಯಲ್ಪ ಪ್ರಮಾಣದ ಅಂದರೆ ಕೈಬೆರಳಿನ ಮೇಲೆ ಎಣಿಸುವಷ್ಟು ಎನ್ನಬಹುದಾದ ಲೇಖನಗಳು ಉಳಿದಿದ್ದರೂ ಉಳಿದಿರಬಹುದು. ಅದೇನೇ ಇದ್ದರೂ ನಾನು ನನ್ನ ಸಂಪ್ರಬಂಧದಲ್ಲಿ ಹೇಳಿಕೊಂಡಂತೆ - "ಈ ಎಲ್ಲ ಲೇಖನಗಳು ಒಂದೆಡೆಗೆ ದೊರೆಯುವಂತಾದರೆ ಕನ್ನಡ ಸಾಹಿತ್ಯಕ್ಕೆ ಒಂದು ನಿಧಿ ದೊರೆತಂತಾಗುತ್ತದೆ" ಎಂಬುದೀಗ ಕೈಗೂಡುತ್ತಿರುವುದು ನನಗೆ ಸಂತೋಷವನ್ನುಂಟು ಮಾಡಿದೆ.

ಈ ಗ್ರಂಥದ ಅಧ್ಯಾಯಗಳ ವಿಭಜನೆ ಆಯಾ ವಿಷಯಗಳನ್ನು ಗಮನಿಸಿ ಮಾಡಲಾಗಿದ್ದು, ಪ್ರತಿಯೊಂದು ಲೇಖನದ ಕೆಳಗೆ ಅದು ಪ್ರಕಟವಾದ ಪತ್ರಿಕೆಯ ಹೆಸರು ಮತ್ತು ಪ್ರಕಟವಾದ ತಿಂಗಳು, ಇಸ್ವಿಗಳನ್ನು ನಮೂದಿಸಲಾಗಿದೆ. ೧೯೨೩ ರಿಂದ ೧೯೫೩ ರ ವರೆಗೆ ಬರೆದ ಮಧುರಚೆನ್ನರ ಲೇಖನಗಳು ನವೋದಯ ಕಾಲವನ್ನು ಸಂಪೂರ್ಣವಾಗಿ ವ್ಯಾಪಿಸಿವೆ. ಈ ಮೂರು ದಶಕಗಳ ಕಾಲಾವಧಿಯಲ್ಲಿ ಮಧುರಚೆನ್ನರ ತಾರುಣ್ಯ ಹಾಗೂ ಪರಿಣತಾವಸ್ಥೆಗಳು ಇರುವಂತೆ, ಹೊಸಗನ್ನಡ ಸಾಹಿತ್ಯದ ಶೈಶವ, ತಾರುಣ್ಯ ಮತ್ತು ಪ್ರೌಢಾವಸ್ಥೆಗಳಿರುವುದನ್ನು ಗಮನಿಸಬಹುದು.

ಇಪ್ಪತ್ತರ ದಶಕದಲ್ಲಿ ಹೊಸಗನ್ನಡ ಕಾವ್ಯ ಆದೇ ತಾನೇ ಕಣ್ಣು ತೆರೆಯುವುದರಲ್ಲಿತ್ತು. ಸಂಶೋಧನೆ ಅಂಬೆಗಾಲು ಹಾಕುವುದರಲ್ಲಿತ್ತು. ನೆಲದ ಮರೆಯ ನಿಧಾನವಾಗಿದ್ದ ವಚನ ಸಾಹಿತ್ಯ ಮೆಲ್ಲನೆ ಬೆಳಕಿಗೆ ಬರತೊಡಗಿತ್ತು. ವ್ಯಾಕರಣ, ಛಂದಸ್ಸು. ಭಾಷಾಶಾಸ್ತ್ರಗಳಂತಹ ವಿಷಯಗಳು ಒಬ್ಬಿಬ್ಬ ಪಂಡಿತರ ಆಲೋಚನೆಯ ವಿಷಯಗಳಾಗಿದ್ದವು. ಜನಪದ ಸಾಹಿತ್ಯ ಗಾಂಪರ ಸಾಹಿತ್ಯವೆಂದು ಇನ್ನೂ ಅಸ್ಪೃಶ್ಯಾವಸ್ಥೆಯಲ್ಲಿಯೇ ಇತ್ತು. ಇಂಥ ಸಂದರ್ಭದಲ್ಲಿ ಅಲ್ಪ ಶಿಕ್ಷಿತ, ಹಳ್ಳಿಯ ಯುವಕ ಚೆನ್ನಮಲ್ಲಪ್ಪ ಸಾಹಿತ್ಯದ ವಿವಿಧ ಶಾಖೆಗಳನ್ನು ಏಕಕಾಲಕ್ಕೆ ಗುರುತಿಸಲು ಹೊರಟಿದ್ದು ಒಂದು ಸಾಹಸದ ಕಾರ್ಯವಾಗಿ ಕಾಣುತ್ತದೆ. 'ಮಧುರಚೆನ್ನ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗುವ ಮೊದಲು ಅವರು 'ಚೆನ್ನಮಲ್ಲಪ್ಪ ಗಲಗಲಿ', 'ಗೆಳೆಯರ ಗುಂಪಿನ ಚೆನ್ನಮಲ್ಲ', 'ಹಲಸಂಗಿ ಚೆನ್ನಮಲ್ಲ' ಎಂಬ ಹೆಸರುಗಳಿಂದಲ್ಲದೆ 'ಜಮುನಾಲಾಲ', 'ಮರಪಂಡಿತ' ಎಂಬ ಗುಪ್ತನಾಮಗಳಿಂದಲೂ ಕವಿತೆ, ಲೇಖನಗಳನ್ನು ಬರೆದಿರುವುದು ಕಂಡುಬರುತ್ತದೆ. ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿರುವಾಗಲೇ ಅವರು ಹಳಗನ್ನಡದ ಕಾವ್ಯಗಳನ್ನು ಓದುತ್ತ, ಅದರ ಛಂದೋಬಂಧವನ್ನು ಅನುಕರಿಸುತ್ತ ಕಾವ್ಯರಚನೆಗೆ ತೊಡಗುತ್ತಾರೆ. ಮುಲ್ಕೀ ಪರೀಕ್ಷೆ ಮುಗಿಯುತ್ತಿದ್ದಂತೆ ಸಾಹಿತ್ಯದ ಗೀಳನ್ನು ಅಂಟಿಸಿಕೊಂಡು ಪ್ರಾಚೀನ ಶಿಲಾಲಿಪಿಗಳನ್ನು

ಒಳಗೊಂಡು ಆಧುನಿಕ ಕಾವ್ಯದವರೆಗೆ ಇಡೀ ಕನ್ನಡ ಸಾಹಿತ್ಯವನ್ನು, ಅದರ ಇತಿಹಾಸವನ್ನು ಅರಿತುಕೊಳ್ಳಲು ಹವಣಿಸುತ್ತಾರೆ. ಸೃಜನಶೀಲ ಕವಿಯಾಗಿ, ಸಂಶೋಧಕ ಲೇಖಕರಾಗಿ ಏಕಕಾಲದಲ್ಲಿ ಬರವಣಿಗೆ ಪ್ರಾರಂಭಿಸುತ್ತಾರೆ. ಅವರ ಪ್ರಥಮ ಕೃತಿ 'ಸತ್ವಪರೀಕ್ಷೆ' ಎಂಬ ನಾಟಕ. ಅದೇ ಸುಮಾರಿಗೆ ಬರೆದ ಇನ್ನೊಂದು ಕೃತಿ 'ವಿನೋದ ಕುಸುಮಾವಳಿ' ಕಾವ್ಯರೂಪಕ. ಅದು ೧೯೨೧ ನೆಯ ಇಸ್ವಿ. ಆಗ ಮಧುರಚೆನ್ನರಿಗೆ ೧೮ ರ ಪ್ರಾಯ. ಅವರು ಪ್ರಥಮ ಶಾಸನ ಪ್ರಕಟಿಸಿದ್ದು ೧೯೨೩ ಜನೆವರಿಯಲ್ಲಿ. ಆಗ ಅವರಿಗೆ ೧೯ ವರ್ಷ ೬ ತಿಂಗಳು. 'ಹಳ್ಳಿಯ ಹಾಡುಗಳು' ಕುರಿತು ವಿಜಾಪುರ ಕನ್ನಡ ಸಾಹಿತ್ಯ ಸಮ್ಮೇಲನದ ವೇದಿಕೆಯಿಂದ ಅವರು ಪ್ರಬಂಧ ಮಂಡಿಸಿದ್ದು ೧೯೨೩ ನವ್ಹಂಬರ ೨೨ ರಂದು. ಆಗ ಅವರಿಗೆ ೨೦ ವರ್ಷ ೪ ತಿಂಗಳು. 'ಪ್ರಾಚೀನ ಲಿಪಿಬೋಧಿನಿ' ಎಂಬ ಲಿಪಿಶಾಸ್ತ್ರಕ್ಕೆ ಸಂಬಂಧಿಸಿದ– ಕನ್ನಡದಲ್ಲಿ ಪ್ರಪ್ರಥಮವಾದ– ಪುಸ್ತಕ ಬರೆದದ್ದು ೧೯೨೪ ರಲ್ಲಿ. ಆಗ ಅವರಿಗೆ ೨೧ ವರ್ಷವೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ತಮ್ಮ ವಯಸ್ಸಿನ ಅತ್ಯಂತ ತರುಣಾವಸ್ಥೆಯಲ್ಲಿಯೇ ಕಾವ್ಯರಚನೆ, ಶಾಸನ ವಾಚನ, ಜನಪದ ಸಾಹಿತ್ಯ ಅಧ್ಯಯನ. ಐತಿಹಾಸಿಕ ಶೋಧನ, ಬಹುಭಾಷೆಗಳ ಅಧ್ಯಯನ ಮುಂತಾದವುಗಳನ್ನು– ಎಲ್ಲ ಬಗೆಯ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ – ತೆಕ್ಕೆಗೊಗ್ಗಿಸಿಕೊಳ್ಳಲು ಯತ್ನಿಸಿದ್ದುದು ಅತ್ಯಂತ ಮಹಾತ್ವಾಕಾಂಕ್ಷೆಯ ಕಾರ್ಯವಾಗಿ ಕಾಣುತ್ತದೆ. ಅವರ ಆಧ್ಯಾತ್ಮಿಕ ಸಂಶೋಧನೆಯು ಒಂದು ನೋಂಪಿಯಾಗಿ ಅನನ್ಯ ಸಾಧನೆಯಾಗಿ ಅವರ ಹನ್ನೆರಡರ ಬಾಲ್ಯಾವಸ್ಥೆಯಲ್ಲಿಯೇ ಪ್ರಾರಂಭವಾಗಿದ್ದುದು ಒಂದು ವೈಶಿಷ್ಟ್ಯಪೂರ್ಣವಾದ ಸಂಗತಿಯಾಗಿದೆ.

ಮಧುರಚೆನ್ನರ ಲೇಖನಗಳಲ್ಲಿ ಸಾಂಸ್ಕೃತಿಕ ಕಾಳಜಿ, ಆಧ್ಯಾತ್ಮಿಕ ಪ್ರಜ್ಞೆ ಮಹತ್ವದ ಕಾರ್ಯ ಮಾಡಿರುವುದನ್ನು ಗಮನಿಸಬಹುದು. ಅವರ ಇತಿಹಾಸದ ಬಗೆಗಿನ ಕುತೂಹಲಾಸಕ್ತಿ, ಪರಂಪರೆಯನ್ನು ಅರಿಯುವ, ಅರ್ಥೈಸುವ ಕಾರ್ಯದಲ್ಲಿರುವ ಅವರ ಲವಲವಿಕೆ, ಉಪಲಬ್ಧ ಸಾಮಗ್ರಿಯ ಆಧಾರದಿಂದ ಸತ್ಯವನ್ನು ಕಂಡುಕೊಳ್ಳುವ ವಿಚಾರಪರತೆ ಮತ್ತು ದಿಟ್ಟತನದ ನಿಲುವು ಇವು ಒಂದು ಕಡೆಗೆ ನಮ್ಮನ್ನು ಬೆರಗುಗೊಳಿಸುತ್ತಿದ್ದರೆ, ಅವರ ದೈವೀಶ್ರದ್ಧೆ, ಅರವಿಂದರ ಭಕ್ತಿ, ಶಿಶುತನದ ಮುಗ್ಧತೆ, ಎಲ್ಲಕ್ಕೂ ಮಿಗಿಲಾಗಿ ಎನಗಿಂತ ಕಿರಿಯರಿಲ್ಲ ಎಂಬ ಭಾವದ ವಿನಯಶೀಲತೆ ಇವು ಇನ್ನೊಂದು ಕಡೆಗೆ ನಮ್ಮನ್ನು ಮೂಕವಿಸ್ಮಿತರನ್ನಾಗಿ ಮಾಡುತ್ತವೆ. 'ಓ ಶ್ರೀ ಓಂ' ಎಂದು ಮುಕ್ತಾಯಗೊಳಿಸುವ, 'ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ' ಎಂದು ತಮ್ಮ ಧನ್ಯತೆಯನ್ನು ಅರ್ಪಿಸುವ ಲೇಖನಗಳು ಅವರದೇ ಆದ ಆಧ್ಯಾತ್ಮಿಕ ಸಮರ್ಪಣ ಭಾವವನ್ನು ಸೂಚಿಸುತ್ತವೆ. ಶ್ರೀಮಾತಾ ಮತ್ತು ಶ್ರೀ ಅರವಿಂದರಲ್ಲಿಯ ಅವರ ಭಕ್ತಿಯಂತೂ ಅನನ್ಯವಾದುದು.

ಹತ್ತು ವಿಭಾಗಗಳಲ್ಲಿ ವರ್ಗೀಕರಿಸಲಾದ ಮಧುರಚೆನ್ನರ ಲೇಖನಗಳು ನಿಸ್ಸಂದೇಹವಾಗಿ ಅಭ್ಯಸನೀಯವಾದವುಗಳು. ಅವರು ಓದಿದ ಶಾಸನಗಳಲ್ಲಿ ಅರ್ಜುನವಾಡದ ಶಾಸನ, ಅಭಿನವಪಂಪ ಮಹಾಕವಿಯು ಬರೆದ ಬಿಜಾಪುರದ ಶಿಲಾಲಿಪಿ, ಪ್ರಾಚೀನ ಕಾಲದ ಒಬ್ಬ ನಟಶ್ರೇಷ್ಠ ಹಾಗೂ ಒಬ್ಬ ಕವಿ ಇವು ಅತ್ಯಂತ ಮಹತ್ವದವು. ಅರ್ಜುನವಾಡದ ಶಾಸನ ಬಸವಣ್ಣನವರ ಚರಿತ್ರೆಯ ಮೇಲೆ ಬೆಳಕು ಚೆಲ್ಲುವಂತಹದಾಗಿದ್ದರೆ, ಅಭಿನವಪಂಪ ಕವಿಯ ಶಾಸನ ಆತನು ವಿಜಯಪುರದವನೆಂಬುದನ್ನು ತಿಳಿಸಿಕೊಡುತ್ತದೆ. ಪ್ರಾಚೀನ ಕಾಲದ ಒಬ್ಬ ನಟಶ್ರೇಷ್ಠ ಹಾಗೂ ಒಬ್ಬ ಕವಿಯನ್ನು ಪತ್ತೆ ಹಚ್ಚಿದ ಶ್ರೇಯಸ್ಸು ಮಧುರಚೆನ್ನರಿಗೆ ಸಲ್ಲುತ್ತದೆ. ನಮ್ಮ ಸಾಹಿತ್ಯ ಚರಿತ್ರಕಾರರೆಲ್ಲ ಈ ಸಂಗತಿಯನ್ನು ಉಲ್ಲೇಖಿಸಿದ್ದುದು ಸಾಹಿತ್ಯಾಭ್ಯಾಸಿಗಳಿಗೆಲ್ಲ ತಿಳಿದಿರುವ ವಿಷಯ.

'ಬಾದಾಮಿಯ ಗುಡಿಗಳ ಜೀರ್ಣೋದ್ಧಾರ' ಒಂದು ಪರಿಚಯವಾಗಿದ್ದು, 'ಕೂಡಲಸಂಗಮದೇವ' ಕುತೂಹಲಕಾರಿಯಾಗಿದೆ. 'ಕೂಡಲಸಂಗಮ' ಮತ್ತು 'ಕಪ್ಪಡಿಸಂಗಮ' ಎರಡು ಬೇರೆ ಬೇರೆ ಸ್ಥಳಗಳು. ಮಧುರಚೆನ್ನರು ಗುರುತಿಸುವ ಕೂಡಲಸಂಗಮ ಮಂಗಳವೇಡಿಗೆ ಸಮೀಪವಾದದ್ದು, ಅಲ್ಲಿ ಪ್ರಾಚೀನ ದೇವಾಲಯವೂ ಇದೆ; ಕಳಚೂರ್ಯ ಅರಸರಿಗೆ ಸಂಬಂಧಿಸಿದ ಶಾಸನವೂ ಇದೆ. ಮಧುರಚೆನ್ನರು ಬಸವಣ್ಣನವರು ಸಂಗಮನಾಥನಿಂದ ಉಪದೇಶ ಪಡೆದ ಸ್ಥಳವಿದೆಂದು ಊಹಿಸಿದ್ದುದು ತೀರಾ ಅಸಮಂಜಸವಾದದ್ದೇನೂ ಆಗಿಲ್ಲ.

ಮಧುರಚೆನ್ನರ ಸಂಶೋಧನಾತ್ಮಕ ಲೇಖನಗಳಲ್ಲಿ 'ಹೂಲಿ ಪಂಚವಣ್ಣಿಗೆ ಮಠ', 'ಇತಿಹಾಸದ ಕಣಗಳು', 'ಲಿಂಗ', 'ಲಿಂಗಿಗಳು', 'ಕಾಳಿದಾಸನ ಕಾಲನಿರ್ಣಯ' ಇವು ಅನೇಕ ದೃಷ್ಟಿಯಿಂದ ಮಹತ್ವದವು. ಸಾಧ್ಯವಿದ್ದಷ್ಟೂ ಸಾಮಗ್ರಿಯನ್ನು ಕಲೆ ಹಾಕಿ ಒಂದು ವಿಷಯವನ್ನು ಚರ್ಚಿಸುವ ಮತ್ತು ಖಚಿತಗೊಳಿಸುವ ಮಧುರಚೆನ್ನರ ಅಧ್ಯಯನ ದೃಷ್ಟಿ ಬೆರಗುಗೊಳಿಸುತ್ತದೆ. 'ಲಿಂಗ' ವಿಷಯದ ಚರ್ಚೆ ಸತ್ಯದೃಷ್ಟಿಗೆ ಅಂಟಿಕೊಂಡ ಒಂದು ವಸ್ತುನಿಷ್ಠ ಚರ್ಚೆಯಾಗಿದೆ. 'ಹೂಲಿ ಮಠ'ದ ಪ್ರಾಚೀನತೆ ಗುರುತಿಸುವಲ್ಲಿಯೂ ಅವರು ನಿಜವಾದ ಸಂಶೋಧಕನ ದೃಷ್ಟಿಯನ್ನೇ ಹೊಂದಿರುವರು. 'ಇತಿಹಾಸದ ಕಣಗಳು' ಭಾಗದಲ್ಲಿ ಉಪಲಬ್ಧ ಸಾಮಗ್ರಿಯ ಆಧಾರದಿಂದ 'ದಾಸಿಮಾರ್ಯ'ನನ್ನು ಪರಿಚಯಿಸುವಾಗ ಹರಿಹರನ 'ಯಾವ ಗ್ರಂಥಗಳಲ್ಲಿಯೂ ಬಸವಣ್ಣನವರ ಹೆಸರಿಲ್ಲ' ಎನ್ನುವುದಾಗಲಿ, 'ಬಸವಣ್ಣನವರು ಪ್ರಧಾನಿ ಪಟ್ಟವನ್ನೇರುವುದಕ್ಕೆ ಮುಂಚೆಯೇ ಹರೀಶ್ವರನು ಕಾಲವಾಗಿದ್ದನೆಂದು' ಹೇಳುವ ಮಾತಾಗಲಿ, ದಾಸಿಮಯ್ಯನ ಕಾಲ ನಿರ್ಣಯವಾಗಲಿ ನಾವಿಂದು ಒಪ್ಪಿಕೊಳ್ಳಲಾರೆವು. ಅದರ ನಂತರ ಬರುವ 'ಶಿವಲಿಂಗ'ದ ಚರ್ಚೆ ಕುತೂಹಲವನ್ನು ಹುಟ್ಟಿಸುತ್ತದೆ.

ಇದೇ ಚರ್ಚೆ 'ಲಿಂಗ' ಎಂಬ ನಿಬಂಧದಲ್ಲಿ ಮುಂದುವರಿದಿದ್ದು, ಮಧುರಚೆನ್ನರ ವಸ್ತುನಿಷ್ಠ ಸಂಶೋಧನೆಯ ಪರಿಚಯ ನಮಗಾಗುತ್ತದೆ. 'ಲಿಂಗಿಗಳು' ಎಂಬ ಲೇಖನ ಹಲವು ಶಾಸನಗಳ ಆಧಾರದಿಂದ 'ಕಾಳಾಮುಖ'ರನ್ನು ಗುರುತಿಸುವ ಕಾರ್ಯ ಮಾಡುತ್ತದೆ. ಡಾ. ಎಂ. ಚಿದಾನಂದಮೂರ್ತಿಯಂಥವರು ಕೂಡ "ಕಾಳಾಮುಖರು ಇವರನ್ನೇ (ಲಾಕುಲ–ಪಾಶುಪತ) ಹೋಲುವ ಶೈವಶಾಖೆಗೆ ಸೇರಿದವರೆಂದು ಕಾಣುತ್ತದೆ. ಈ ಬಗ್ಗೆ ನಿರ್ದಿಷ್ಟವಾಗಿ ಏನೂ ಹೇಳುವ ಸ್ಥಿತಿಯಲ್ಲಿ ನಾವಿಲ್ಲ." ಎನ್ನುವಾಗ ಮಧುರಚೆನ್ನರು ಬಹಳ ದಿನಗಳ ಹಿಂದೆಯೇ ಅಷ್ಟೆಲ್ಲ ಸಂಶೋಧಿಸಿದ್ದು ಮಹತ್ವದ ಮಾತಾಗುತ್ತದೆ.

'ಶ್ರೀ ಬಸವೇಶ್ವರರು ಹಾಗೂ ಚೆನ್ನಬಸವೇಶ್ವರರ ಪುನರಾಗಮನ ಭಾವನೆ ಅಥವಾ ಮಧ್ಯಕಾಲದ ಮಹಾಪುರುಷರು' 'ತೇರದಾಳದ ಪ್ರಭುದೇವರು' ಲೇಖನಗಳಲ್ಲಿ ಇತಿಹಾಸ ಮತ್ತು ಪುರಾಣಗಳ ಕಲ್ಪನೆ ಸಮ್ಮಿಳಿತವಾಗಿದ್ದು ನಂಬಿಗೆಯ ಸ್ತರದ ಮೇಲೆ ಅವುಗಳ ವಿಷಯ ನಿಂತುಬಿಡುತ್ತದೆ. 'ಬಸವಣ್ಣನವರ ಭೋಜನಶಾಲೆ"ಯಲ್ಲಿ ತರ್ಕಸಮ್ಮತವಾಗುವಂತಹ ನಿರೂಪಣೆಯಿರುವುದನ್ನು ಕಾಣಬಹುದು. 'ಕವಿ ಕಾಳಿದಾಸನ ಕಾಲನಿರ್ಣಯ' ಮಧುರಚೆನ್ನರ ಸಂಶೋಧನೆಯ ದೃಷ್ಟಿಗೆ ಇನ್ನೊಂದು ನಿದರ್ಶನವಾಗಿ ನಿಲ್ಲುತ್ತದೆ. ಕಾಳಿದಾಸನ ಕಾವ್ಯದ ಒಳಹೊಕ್ಕು ಐತಿಹಾಸಿಕ ಅಂಶಗಳನ್ನು ಗುರುತಿಸಿದ್ದು ಒಂದು ವಿಶೇಷ. 'ಭಾರತ ಇತಿಹಾಸ ದರ್ಶನ' ಪರಿಚಯಾತ್ಮಕವಾದ ಒಂದು ಸಮೀಕ್ಷೆ.

'ಭಾಷಾಶಾಸ್ತ್ರ'ಕ್ಕೆ ಸಂಬಂಧಿಸಿದ ಮೂರು ಲೇಖನಗಳಲ್ಲಿ 'ಆರ್ಯ–ದ್ರಾವಿಡ ಭಾಷಾ ಸಮನ್ವಯ'ವೇ ಪ್ರಮುಖವಾದದ್ದು. ಈ ಲೇಖನದಿಂದಲೇ ಮಧುರಚೆನ್ನರು ಎಷ್ಟು ಭಾಷೆಗಳನ್ನು ಕಲಿತಿದ್ದರು ಎಂಬುದು ತಿಳಿದುಬರುತ್ತದೆ. ನಾನು ನನ್ನ ಸಂಪ್ರಬಂಧದಲ್ಲಿ ಅವರು ೨೨ ಭಾಷೆಗಳನ್ನು ಬಲ್ಲವರಾಗಿದ್ದರು ಎಂದು ಹೇಳಿರುವುದಕ್ಕೆ ಇದೇ ಆಧಾರವಾಗಿತ್ತು. ಹಾಗೆ ನೋಡಿದರೆ ಅವರು ೨೪, ೨೫ ಭಾಷೆಗಳನ್ನು ಚೆನ್ನಾಗಿ ತಿಳಿದಿದ್ದರೆಂಬುದು ಅದೇ ಲೇಖನದಿಂದ ವ್ಯಕ್ತವಾಗುತ್ತದೆ. ಅದೇನೇ ಇದ್ದರೂ ಭಾಷಾವಿಜ್ಞಾನಿಗಳಿಗೆ ಆಹಾರವಾಗಬಲ್ಲ ಸಾಮಗ್ರಿ ಇಲ್ಲಿ ಸಾಕಷ್ಟಿದೆ. 'ಸಮನ್ವಯ' ಎಂಬುದು ಮಧುರಚೆನ್ನರ ಒಂದು ಚಿಂತನೀಯ ನಿಲುವಾಗಿದ್ದರೂ ದ್ರಾವಿಡ ಭಾಷೆ, ಆರ್ಯಭಾಷೆಗಳ ವೈಶಿಷ್ಟ್ಯಗಳನ್ನು ಅವರು ತಿಳಿದವರಾಗಿದ್ದರು.

'ಶಬ್ದಸಾಮ್ರಾಜ್ಯದಲ್ಲಿ ಮಂತ್ರಶಕ್ತಿಯ ಪುನರುಜ್ಜೀವನ'ದಲ್ಲಿ ಭಾಷೆಯು ಉಗಮಕ್ಕಿರುವ ಅನುಕರಣವಾದ, ಉದ್ಗಾರವಾದಗಳನ್ನು ಗಮನಿಸಿ, ಅನುಕರಣ ವಾಚಕದ ಹಲವು ಪದಗಳನ್ನು ಪಟ್ಟಿಮಾಡಿಕೊಟ್ಟಿರುವರು. ತಳ್ಳಿಹಾಕಲಾಗದ ಇಲ್ಲಿಯ ಚರ್ಚೆ ಭಾಷಾಶಾಸ್ತ್ರಜ್ಞರ ಗಮನವನ್ನು ಸೆಳೆಯಬಲ್ಲುದಾಗಿದೆ.

'ಬೇಂದ್ರೆಯವರ ಭಾಷಾಶಾಸ್ತ್ರ ವಿಷಯಕ ವಿಚಾರಗಳು' ಲೇಖನದಲ್ಲಿ 'ಬೀಜಾಕ್ಷರ ಪದ್ಧತಿ' ಮಹತ್ವದ್ದಾಗಿದೆ. ಸ್ವರಗಳಲ್ಲಿ ಅ, ಇ, ಉ ಬೀಜಾಕ್ಷರಗಳಾಗಿರುವುದು. ವರ್ಗೀಯ ವ್ಯಂಜನಗಳಲ್ಲಿ ಕ್, ಚ್, ಟ್, ತ್, ಪ್, ಗಳೇ ಬೀಜಾಕ್ಷರಗಳಾಗಿರುವುದು ವೈಜ್ಞಾನಿಕ ವಿವೇಚನೆಗೆ ಒಳಪಡುವ ವಿಷಯವಾಗಿವೆ.

ಆದ್ಯ ಜನಪದ ಸಾಹಿತ್ಯ ಸಂಗ್ರಹಕಾರರೆನಿಸಿದ ಹಲಸಂಗಿ ಗೆಳೆಯರಲ್ಲಿ ಜನಪದ ಸಾಹಿತ್ಯವನ್ನು ಕುರಿತು ಹೆಚ್ಚು ಬರೆದವರು ಸಿಂಪಿ ಲಿಂಗಣ್ಣನವರೇ. ಮಧುರಚೆನ್ನರು ಈ ನಿಟ್ಟಿನಲ್ಲಿ ಮುಂಚೂಣಿಯಲ್ಲಿದ್ದರೂ ಬರೆದದ್ದು ಬಹಳ ಕಡಿಮೆ. ಆದರೆ ಬರೆದದ್ದೆಲ್ಲ ಮಹತ್ವದ್ದಾಗಿದೆ.

ಮಧುರಚೆನ್ನರ ಜನಪದ ಸಾಹಿತ್ಯದ ಮೇಲಿನ ಪ್ರೀತಿ ಅಸಾಧಾರಣವಾದುದು. ತಮ್ಮ ಸಾಹಿತ್ಯ ಕೃಷಿಯ ಪ್ರಾರಂಭಾವಸ್ಥೆಯಲ್ಲಿಯೇ ಅವರು ಜನಪದ ಸಾಹಿತ್ಯದ ಸೊಬಗಿಗೆ ಆಕರ್ಷಿತರಾಗಿದ್ದಾರೆ. ೧೯೨೩ ರಲ್ಲಿ ಅವರು ವಿಜಾಪುರ ಕನ್ನಡದ ಸಾಹಿತ್ಯ ಸಮ್ಮೇಲನದಲ್ಲಿ 'ಹಳ್ಳಿಯ ಹಾಡುಗಳು' ಎಂಬ ನಿಬಂಧವನ್ನು ಮಂಡಿಸಿದ್ದು ಒಂದು ದಾಖಲೆಯಾಗಿದೆ. ಮರಾಠಿ ಮತ್ತು ಬಂಗಾಲಿಯಲ್ಲಿ ಜನಪದ ಸಾಹಿತ್ಯ ಆಗಲೇ ಪ್ರಕಟವಾಗುತ್ತಿರುವುದನ್ನು ಅವರು ಗುರುತಿಸಿದ್ದಾರೆ; 'ಮೈಸೂರಿನ ಶಾಸನಗಳಂತೆ ಗ್ರಾಮಸಾಹಿತ್ಯವೂ ಕೂಡ ಹಲವು ದೊಡ್ಡ ದೊಡ್ಡ ಪುಸ್ತಕಗಳಿಂದ ಮೆರೆಯಬಹುದು' ಎಂಬುದನ್ನೂ ಅರಿತಿದ್ದಾರೆ. ಜನಪದ ಸಾಹಿತ್ಯದಲ್ಲಿ ಈ ವರೆಗೆ ನಡೆದ ಕೆಲಸವನ್ನು ಗಮನಿಸಿದರೆ ಮಧುರಚೆನ್ನರು ೧೯೨೩ ರಲ್ಲಿ ನುಡಿದ ಮಾತು ಕಾಲ್ಪನಿಕವಾದುದಲ್ಲ ಎಂಬುದು ತಾನೇ ತಾನಾಗಿ ಸ್ಪಷ್ಟವಾಗುತ್ತದೆ. ಹಳ್ಳಿಯ ಹಾಡುಗಳ ಮಹತ್ವವನ್ನು ಗುರುತಿಸುವ ಸಂದರ್ಭದಲ್ಲಿ ಅವರು ಆ ತಮ್ಮ ನಿಬಂಧದಲ್ಲಿ ಉದ್ಧರಿಸಿದ ಜನಪದ ಹಾಡಿಗಿಂತ ಉತ್ತಮವಾದುದನ್ನು ಆಯ್ಕೆ ಮಾಡಬಹುದಾಗಿತ್ತು ಎನಿಸುತ್ತದೆ. ತಮ್ಮದೇ ಆದ ಜನಪದೀಯ ಶಿಷ್ಟಕವಿತೆಯೊಂದಿಗೆ ಮಾಡಿದ ತುಲನೆ ಮಾತ್ರ ಅವರ ತೌಲನಿಕ ವಿಮರ್ಶಾ ವಿವೇಕಕ್ಕೆ ಒಂದು ಕುರುಹಾಗಿದೆ.

'ಹೆಣ್ಮಕ್ಕಳ ಗಾದೆಗಳು' ಐವತ್ತು ಗಾದೆಗಳ ಒಂದು ಪುಟ್ಟ ಸಂಗ್ರಹ. ಉತ್ತರ ಕರ್ನಾಟಕದ, ಅದರಲ್ಲೂ ವಿಜಾಪುರ ಜಿಲ್ಲೆಯ ಪ್ರದೇಶದಲ್ಲಿ ಬಳಕೆಯಲ್ಲಿರುವ ಈ ಗಾದೆಗಳಲ್ಲಿ ಗಂಡುಮಕ್ಕಳ ಗಾದೆಗಳೂ ಬೆರೆತುಕೊಂಡಿವೆ.

'ರಮ್ಯ ಜೀವನ'ದಲ್ಲಿಯ ಜನಪದ ಕವಿ ಖಾಜಾಭಾಯಿಯ ಪರಿಚಯ ಅತ್ಯಂತ ಹೃದಯಸ್ಪರ್ಶಿಯಾಗಿದೆ. ಒಂದು ಕಾದಂಬರಿಗೆ ವಿಷಯವಾಗುವಷ್ಟು ವಸ್ತು ಅಲ್ಲಿರುವುದನ್ನು ಗಮನಿಸಬಹುದು. ಕನ್ನಡದಲ್ಲಿ ಬಂದ ಪ್ರಥಮ ಜನಪದ ಕವಿಯ ಪರಿಚಯವಿದು. ಮೂಲತಃ ಹಲಸಂಗಿಯವನಾದ ಖಾಜಾಭಾಯಿ ಬೇರೆ ಬೇರೆ ಊರುಗಳಲ್ಲಿ ಬದುಕು ಮಾಡಬೇಕಾದ ಪ್ರಸಂಗ ಬಂದಿದ್ದುದೇ ಒಂದು ಸ್ವಾರಸ್ಯಕರವಾದ ಕಥೆ. ಹದರಿ ಬಡೇಶಾನೊಂದಿಗಿನ ಸ್ಪರ್ಧೆ, ಆತನ ಶಿಷ್ಯತ್ವ, ಸನ್ಯಾಸತ್ವ ಇವು

ತುಂಬ ಭಾವಪೂರ್ಣವಾದ ಸನ್ನಿವೇಶಗಳು. ಖಾಜಾಭಾಯಿ ಆ ಕಾಲದ ಅತ್ಯುತ್ತಮ ಲಾವಣಿ ಕಾರನೆಂಬುದರಲ್ಲಿ ಸಂದೇಹವೇ ಇಲ್ಲ. 'ಜೀವನ ಸಂಗೀತ'ದಲ್ಲಿರುವ ಆತನ ಲಾವಣಿಗಳನ್ನು ನೋಡಬಹುದು.

ಕಾಪಸೆ ರೇವಪ್ಪನವರು ಸಂಗ್ರಹಿಸಿದ 'ಮಲ್ಲಿಗೆ ದಂಡೆ'ಕೃತಿಗೆ ಬರೆದ ಮುನ್ನುಡಿ, ಟೀಕೆ ಟಿಪ್ಪಣಿಗಳು ಮಧುರಚೆನ್ನರ ಜನಪದ ಸಾಹಿತ್ಯದ ಮೇಲಿನ ಪ್ರಭುತ್ವವನ್ನು ಸೂಚಿಸುತ್ತವೆ. ಅವರ ಆ ಮುನ್ನುಡಿ 'ಮುನ್ನುಡಿ-ಹರಕೆ-ಇತ್ಯಾದಿ' ವಿಭಾಗದಲ್ಲಿರುವು ದನ್ನು ಕಾಣಬಹುದು. 'ಟೀಕೆ-ಟಿಪ್ಪಣಿಗಳ'ನ್ನು 'ಮಲ್ಲಿಗೆ ದಂಡೆ'ಯ ಕೊನೆಯ ಪುಟಗಳಲ್ಲಿಯೇ ನೋಡಬೇಕು.

'ಕವಿ ಪರಿಚಯ' ವಿಭಾಗದಲ್ಲಿ 'ದ್ಯಾಪ್ಟಾರ ಕವಿ ಏ. ಈ.' ಅವರ ಪರಿಚಯ ಮಹತ್ವದ್ದಾಗಿದೆ. ಆತನ ವ್ಯಕ್ತಿತ್ವ, ಕಾವ್ಯ, ಅನುಭಾವಿಕ ನಿಲುವು ಮುಂತಾದವು ಗಳನ್ನು ಮಧುರಚೆನ್ನರು ಇಲ್ಲಿ ಮನೋಜ್ಞವಾಗಿಯೇ ನಿರೂಪಿಸಿದ್ದಾರೆ. ಜನಪದ ಕವಿ ಖಾಜಾಭಾಯಿಯನ್ನು ಪರಿಚಯಿಸಿದ ಮಧುರಚೆನ್ನರು ಈ ದ್ಯಾಪ್ಟಾರ ಕವಿಯನ್ನೂ ಪರಿಚಯಿಸುವಲ್ಲಿ ತಮ್ಮ ಅಧ್ಯಯನದ ವ್ಯಾಪ್ತಿ ಎಂತಹದೆಂಬುದನ್ನು ಪರೋಕ್ಷವಾಗಿ ತೋರಿಸಿಕೊಟ್ಟಂತಿದೆ. 'ದ್ಯಾಂಪುರ ಚೆನ್ನಕವಿ'ಗಳ ಪರಿಚಯವನ್ನು ಅವರ ಕೃತಿಗಳ ವಿಶೇಷತೆಗಳೊಂದಿಗೇ ಮಾಡಿಕೊಟ್ಟಿದ್ದಾರೆ. ಮಧುರಚೆನ್ನರ ಬಹುಶ್ರುತತ್ವಕ್ಕೆ, ವೈವಿಧ್ಯಪೂರ್ಣವಾದ ವ್ಯಾಸಂಗಕ್ಕೆ ಇವೂ ನಿದರ್ಶನಗಳಾಗುತ್ತವೆ.

ಮಧುರಚೆನ್ನರು ಸಾಹಿತ್ಯ ಉಪನ್ಯಾಸಗಳನ್ನು ಮಾಡುವಾಗ ಟಿಪ್ಪಣಿಗಳನ್ನು ಮಾಡಿಕೊಳ್ಳುತ್ತಿದ್ದರು. ಅಗತ್ಯವೆನಿಸಿದಾಗ ಸಂಪೂರ್ಣವಾಗಿ ಬರೆದು ಬಿಡು ತ್ತಿದ್ದರು. ೧೯೪೫ರಲ್ಲಿ ಲಚ್ಯಾಣದಲ್ಲಿ ಸರ್ವಧರ್ಮ ಸಮ್ಮೇಲನ ಜರುಗಿತು. ಅದರ ಸ್ವಾಗತಾಧ್ಯಕ್ಷರು ಮಧುರಚೆನ್ನರು. ಲಚ್ಯಾಣಕ್ಕೆ ಸಮ್ಮೇಲನದ ಪೂರ್ವ ಸಿದ್ಧತೆಗಾಗಿ ಬಂದಿದ್ದ ಅವರು ತಮ್ಮ ಭಾಷಣವನ್ನು ಅಲ್ಲಿಯೇ ಬರೆಯಬೇಕಾಯಿತು. ಸಾಹಿತ್ಯಿಕ ಸಾಮಗ್ರಿಯ ಅಭಾವವಿರುವ ಆ ಹಳ್ಳಿಯಲ್ಲಿ ತಮ್ಮ ನೆನಪಿನಿಂದಲೇ ಆ ಭಾಷಣವನ್ನು ಸಿದ್ಧಪಡಿಸಿದರು. ಆದರೆ ಆ ಭಾಷಣ ಎಲ್ಲಿಯೂ ಮುದ್ರಣಗೊಳ್ಳ ಲಿಲ್ಲ. ಹಸ್ತಪ್ರತಿಯು ಆಗಲೇ ಮಾಯವಾಗಿ ಬಿಟ್ಟಿತು. ಬೆಳಗಾವಿ ಜಿಲ್ಲೆಯ ಸಂದಗಡ ಸಾಹಿತ್ಯ ಸಮ್ಮೇಲನದ ಅವರ ಅಧ್ಯಕ್ಷ ಭಾಷಣವೂ ನೆನಪಿನಿಂದಲೇ ಬರೆ ದದ್ದು. ಕಾವ್ಯದ ಪ್ರಯೋಜನ, ಕಾವ್ಯದ ಪ್ರಕಾರಗಳು ಮುಂತಾದವುಗಳು ಇಲ್ಲಿ ಗಮನಿಸುವಂತಿವೆ. ನಲಿನಿಕಾಂತ ಗುಪ್ತರ, ಶ್ರೀ ಅರವಿಂದರ ಕಾವ್ಯ ವಿಚಾರಗಳಿಗೆ ಪ್ರಭಾವಿತರಾದ ಮಧುರಚೆನ್ನರು ಅನುಭಾವ ಕಾವ್ಯದ ಕಡೆಗೆ ವಾಲಿದ್ದುದು ಸ್ವಾಭಾ ವಿಕವಾಗಿದೆ. ಇದು ಅವರ ವೈಯಕ್ತಿಕ ಆಸಕ್ತಿಯೂ ಅಹುದು. ಪ್ರಗತಿಶೀಲ ಸಾಹಿತ್ಯದ ಭೌತಿಕ ದೃಷ್ಟಿಯ ಬಗ್ಗೆ ಅವರ ಸಹಮತವಿಲ್ಲದಿರುವುದು ಇಲ್ಲಿಯೇ ಕಂಡುಬರುತ್ತದೆ. ಹಾಗಿದ್ದರೂ ಹೊಸ ಕಾವ್ಯದ ಬಗ್ಗೆ ಅವರಿಗೆ ಪ್ರೀತಿಯಿಲ್ಲದಿಲ್ಲ.

ಅವರ ಸೊಲ್ಲಾಪುರ ಕನ್ನಡ ಸಾಹಿತ್ಯ ಸಮ್ಮೇಲನದ ಕವಿಗೋಷ್ಠಿಯ ಅಧ್ಯಕ್ಷ ಭಾಷಣ ಅವರ ವೈಯಕ್ತಿಕ ಕಾವ್ಯಸಾಧನೆಯ ಜೊತೆಗೆ ಕನ್ನಡ ನವೋದಯ ಕಾವ್ಯ ರೂಪಗೊಂಡಿದ್ದುದರ ವಿಚಾರವನ್ನು ತಿಳಿಸಿಕೊಡುತ್ತದೆ.

'ಶರಣ ಸಾಹಿತ್ಯ' ಮತ್ತು 'ಶ್ರೀ ಅರವಿಂದ ಸಾಹಿತ್ಯ'ದಲ್ಲಿಯ ಲೇಖನಗಳು ಆಧ್ಯಾತ್ಮಿಕ ವಿಷಯವನ್ನು ಪ್ರತಿಪಾದಿಸುತ್ತವೆ. ಇಲ್ಲಿ ಮಧುರಚೆನ್ನರ ಶರಣತನ, ಅರವಿಂದ ಭಕ್ತಿ ಎರಡೂ ಕಂಡುಬರುತ್ತವೆ. 'ಬಸವಣ್ಣನ ಭಕ್ತಿ' ಬಸವಣ್ಣನವರ ವಚನಗಳಲ್ಲಿ ವ್ಯಕ್ತವಾದ ಭಕ್ತಿಭಾವವನ್ನು ಅವರ ವಚನಗಳ ಮೂಲಕವೇ ತಿಳಿಯ ಪಡಿಸುತ್ತಿದ್ದರೂ ಮಧುರಚೆನ್ನರ ವೈಯಕ್ತಿಕ ಭಾವವನ್ನೂ ಅವು ಸೂಚಿಸುತ್ತವೆ.

'ಪ್ರಕಾಶಮಯ ಜೀವನ' 'ಪ್ರಾಣಲಿಂಗಾರ್ಚನೆ' 'ಸಗುಣ–ನಿರ್ಗುಣ ಸಮ ನ್ವಯ ಅಥವಾ ಶಿವಯೋಗ ರಹಸ್ಯ' ಇವು ಶರಣರ ಸಾಧನೆಯನ್ನು ಸೂಚಿಸುತ್ತವೆ. 'ಸಿದ್ಧಾಂತ ಶಿಖಾಮಣಿ'ಯಲ್ಲಿ ನಿರೂಪಿತವಾದ ಕೊನೆಯ ೫೭ ಸ್ಥಲಗಳ ಚರ್ಚೆ 'ಪ್ರಕಾಶಮಯ ಜೀವನ'ದಲ್ಲಿದ್ದರೆ, ಮೊದಲಿನ ೪೪ ಸ್ಥಲಗಳ ವಿವೇಚನೆ 'ಪ್ರಾಣ ಲಿಂಗಾರ್ಚನೆ'ಯಲ್ಲಿದೆ. ಇವು ಒಂದಕ್ಕೊಂದು ಪೂರಕವಾಗಿವೆ. ಮೊದಲಿನ ಲೇಖನ ದಲ್ಲಿ ಕ್ರಿಯಾಪ್ರಕಾಶನ, ಭಾವಪ್ರಕಾಶನ, ಜ್ಞಾನಪ್ರಕಾಶನ ಇವು ಮುಖ್ಯವಾಗಿದ್ದರೆ, ಎರಡನೆಯ ಲೇಖನದಲ್ಲಿ 'ಅಂತರ್ಗತವಾದ ಚಿದಾಕಾರ ಪರಶಿವಲಿಂಗವನ್ನು ಭಾವ ಪುಷ್ಪಗಳಿಂದ ಪೂಜಿಸುವುದೇ ಪ್ರಾಣಲಿಂಗಾರ್ಚನೆ' ಎಂಬ ಸಿದ್ಧಾಂತ ಶಿಖಾಮಣಿಯ ಚಿಂತನೆ ಎದ್ದು ಕಾಣುತ್ತದೆ.

'ಸಗುಣ–ನಿರ್ಗುಣ ಸಮನ್ವಯ ಅಥವಾ ಶಿವಯೋಗ ರಹಸ್ಯ' ಎಂಬ ಲೇಖನ ದಲ್ಲಿ ಮಧುರಚೆನ್ನರು ಮಂತ್ರಯೋಗ, ಲಯಯೋಗ, ಹಠಯೋಗ, ರಾಜ ಯೋಗಗಳ ವೈಶಿಷ್ಟ್ಯವನ್ನು ಸಂಕ್ಷಿಪ್ತವಾಗಿ ಹಾಗೂ ಸ್ಪಷ್ಟವಾಗಿ ತಿಳಿಸಿಕೊಟ್ಟು, 'ಶಿವಯೋಗ'ದ ಮಹತ್ವವನ್ನು ಎತ್ತಿತೋರಿಸಿದ್ದಾರೆ. ಭ್ರೂಮಧ್ಯದ ಮೇಲ್ಗಡೆಗೆ ಸಹಸ್ರದಳ ಕಮಲವಿದೆ, ಅದರಲ್ಲಿ ಚಂದ್ರಬಿಂಬವಿದೆ, ಆ ಬಿಂಬದಲ್ಲಿ ಸೂಕ್ಷ್ಮವಾದ ರಂಧ್ರವಿದೆ. ಅಲ್ಲಿಯೇ ಕೈಲಾಸವಿದೆ. ಶಂಕರನು ವಾಸಿಸುವುದು ಅಲ್ಲಿಯೇ. ಈ ಸಿದ್ಧಿಯನ್ನು ಪಡೆಯುವುದೇ ಶಿವಯೋಗ. ಶ್ರೀ ನಿಜಗುಣ ಶಿವಯೋಗಿಗಳ 'ಪಾರಮಾರ್ಥ ಪ್ರಕಾಶಿಕೆ'ಯನ್ನು ಅನುಸರಿಸಿ ಬರೆದ ಈ ಲೇಖನದಲ್ಲಿ ಅಲ್ಲಿಯ "ಶಿವ ಧ್ಯಾನವು ಸಗುಣವೆಂದು ನಿರ್ಗುಣವೆಂದೆರಡು ಪ್ರಕಾರವದರೊಳಗೆ ಮೊದಲು ಸಗುಣ ಧ್ಯಾನವನ್ನಾಶ್ರಯಿಸಿ ಮೇಲೆ ನಿರ್ಗುಣ ಧ್ಯಾನವನ್ನಾಶ್ರಯಿಸುವದೇತಕೆನೆ..." ಎಂಬ ಮಾತನ್ನು ಗಮನಿಸಿ, ಸಗುಣ–ನಿರ್ಗುಣ ಸಮನ್ವಯವು ಶಿವಯೋಗದಲ್ಲಾಗು ವುದನ್ನು ಸೂಚಿಸುವಂತೆ ಲೇಖನದ ಶೀರ್ಷಿಕೆ ಇದೆಯೆಂದು ಹೇಳಬಹುದು. 'ಕೈವಲ್ಯ ಪದ್ಧತಿ' 'ಜ್ಞಾನಸಿಂಧು' 'ಹಠಯೋಗ ಪ್ರದೀಪಿಕೆ' ಇತ್ಯಾದಿ ಗ್ರಂಥಗಳಿಂದ ನೆರವು ಪಡೆದ ಈ ಲೇಖನ ಬಸವಣ್ಣ, ಅಲ್ಲಮಪ್ರಭು, ಲಿಂಗಮ್ಮ, ಷಣ್ಮುಖ ಶಿವಯೋಗಿ

ಗಳ ವಚನಗಳನ್ನು ಆಧಾರಕ್ಕೆ ಇಟ್ಟುಕೊಳ್ಳುತ್ತದೆ. ಶಿವಯೋಗ ಕುರಿತಾದ ಒಂದು ಮಿಂಡಿ ಸಂಪ್ರಬಂಧ ಇದಾಗಿದೆಯೆಂದು ಹೇಳಬಹುದು.

'ಶಿವಯೋಗೀಶ್ವರರ ಶಿವಪೂಜೆ' ಸಾಲೋಟಗಿಯ ಶಿವಯೋಗೀಶ್ವರರ ಪೂಜಾ ವೈಶಿಷ್ಟ್ಯವನ್ನು ನಿರೂಪಿಸುತ್ತದೆ. ಯೋಗದ ಅನುಭವಗಳಾದ ನಾದ, ಬಿಂದು, ಕಲೆಗಳು ಈ ಪೂಜೆಯಲ್ಲಿ ಹೇಗೆ ಸಾಂಕೇತಿಕವಾಗಿ ವ್ಯಕ್ತವಾಗಿವೆ ಎಂಬುದನ್ನು ಮಧುರಚೆನ್ನರು ಗುರುತಿಸುತ್ತಾರೆ. ಆಸಕ್ತರು ಈಗಲೂ ಈ ಪೂಜಾದೃಶ್ಯವನ್ನು ಕಾಣಬಹುದಾಗಿದೆ.

ಮಧುರಚೆನ್ನರು 'ಲಿಂಗ' 'ಲಿಂಗಿಗಳು' 'ಹೂಲಿ ಪಂಚವಣ್ಣಿಗೆ ಮಠ' 'ಶ್ರೀ ಬಸವೇಶ್ವರರು ಹಾಗೂ ಶ್ರೀ ಚೆನ್ನಬಸವೇಶ್ವರರ ಪುನರಾಗಮನ' ಇತ್ಯಾದಿ ಲೇಖನಗಳನ್ನು ಬರೆಯುವಾಗ ಒಬ್ಬ ಸಂಶೋಧಕರಾಗಿ ಕಾಣುತ್ತಿದ್ದರೆ. 'ಬಸವಣ್ಣನ ಭಕ್ತಿ'ಯನ್ನೊಳಗೊಂಡು 'ಶಿವಯೋಗ ರಹಸ್ಯ'ದ ವರೆಗಿನ ಲೇಖನಗಳನ್ನು ಬರೆಯುವಾಗ ಸಾಧಕರಾಗಿ ಕಾಣುತ್ತಾರೆ, ಹಾಗೆಯೇ ಅವರ ವೈಯಕ್ತಿಕ ಅಧ್ಯಾತ್ಮಿಕ ಸಾಧನೆಯೂ ಒಂದು ಸಂಶೋಧನೆಯೇ ಆಗಿತ್ತೆಂಬುದನ್ನು ಮರೆಯುವಂತಿಲ್ಲ.

ಶ್ರೀ ಅರವಿಂದ ಸಾಹಿತ್ಯವನ್ನು ಕುರಿತು ಬರೆದ ಲೇಖನಗಳೆಲ್ಲ ಪರಿಚಯಾತ್ಮಕ ವಾಗಿಯೇ ಇವೆ. ಕನ್ನಡಿಗರಿಗೆ ಆಗ ಅಪರಿಚಿತರಾಗಿದ್ದ ಶ್ರೀ ಅರವಿಂದರನ್ನು, ಅವರ ಸಾಧನೆಯನ್ನು, ಅವರ ಸಾಧನೆಯಲ್ಲಿರುವ ಹೊಸತನವನ್ನು ಪರಿಚಯಿಸುವ ಅಪೇಕ್ಷೆ ಮಧುರಚೆನ್ನರದು. 'ಪೂರ್ಣ ಯೋಗ' ಕುರಿತಾದ ಲೇಖನಗಳಲ್ಲಿ God himself is Guru ಎಂಬ ಶ್ರೀ ಅರವಿಂದರ ಅಭಿಪ್ರಾಯವನ್ನು ಬೆಂಬಲಿಸಿ, ಅವರ ಪೂರ್ಣಯೋಗದಿಂದ ಸಾಧಿತವಾಗುವ ಹೊಸ ಸಂಗತಿಯೆಂದರೆ - ಉರ್ಧ್ವ ತತ್ತ್ವವೊಂದನ್ನು ಮಾನವನ ಹೊಸ ಎಚ್ಚರದವರೆಗೆ ಇಳಿಸಿ ತರುವ ಕಾರ್ಯವೆಂಬು ದನ್ನು ಸೂಚಿಸಿ, ವ್ಯಕ್ತಿತ್ವವನ್ನು ದೇವತ್ವದಲ್ಲಿ ಮಾರ್ಪಡಿಸಿಕೊಳ್ಳುವ ಸಾಧ್ಯತೆಯೂ ಪೂರ್ಣಯೋಗಕ್ಕಿರುವುದನ್ನು ಅವರು ತಿಳಿಸಿಕೊಡುತ್ತಾರೆ. You are individual God and He isuniversal God ಎಂಬ ಶ್ರೀ ಅರವಿಂದರ ಸಂದೇಶದ ಮೇಲೆ ಒತ್ತುಕೊಡುತ್ತಾರೆ. ಶ್ರೀ ಅರವಿಂದರ ಪೂರ್ಣಯೋಗದ ಸಾಧನೆಗೆ ಸಮರ್ಪಣ, ಸುಕಲ್ಪ, ನಿಜಾಕಾಂಕ್ಷೆಇವು ಮೂರು ಮಹತ್ವದ ವ್ರತಗಳು ಎಂಬುದನ್ನೂ ಅವರು ತಿಳಿಸಿಕೊಟ್ಟಿರುವರು.

'ಸತ್-ಚಿತ್ ಅಥವಾ ಶಿವ-ಶಕ್ತಿಯರು' ಒಂದು ವಿಶಿಷ್ಟವಾದ ಲೇಖನ. ಸತ್= ಪರಶಿವರೂಪ, ಚಿತ್=ಜಗನ್ಮಾತೆ, ಪರಶಿವ=ಶಾಂತಿರೂಪ, ಜಗನ್ಮಾತೆ=ಶಕ್ತಿರೂಪ. ಶಾಂತಿಮಯ ಶಿವನ ಸಂಕಲ್ಪ, ಶಕ್ತಿಮಯಿಯಾದ ಜಗನ್ಮಾತೆಯ ಕಾರ್ಯಕಾರಿತೆ; ಇವೆರಡೂ ಕೂಡಿದ್ದೇ ವಿಶ್ವಲೀಲೆ. ಹೀಗೆಂದು ನಾವು ಅರಿತುಕೊಳ್ಳಬಹುದು. ಇದಕ್ಕೆ ಪೋಷಕವಾಗಿ 'ಸಾವಿತ್ರಿ' ಮಹಾಕಾವ್ಯದ ಚರಣಗಳಿವೆ; ಅರವಿಂದ ಸಾಹಿತ್ಯದ ಆಧಾರವೂ ಇದೆ.

'ಶ್ರೀ ಅರವಿಂದ ಯೋಗಿಗಳ ದರ್ಶನ' ಎಂಬುದು ಪ್ರಥಮಬಾರಿಗೆ ತಾವು ಶ್ರೀ ಅರವಿಂದರನ್ನು ಶ್ರೀಮಾತೆಯವರನ್ನು ಕಂಡಾಗ ಆದ ಅನುಭವವನ್ನು ಅತ್ಯಂತ ಭಕ್ತಿಪೂರ್ವಕವಾಗಿ ನಿರೂಪಿಸಿದ್ದಾರೆ. ಮಧುರಚೆನ್ನರ ಮುಗ್ಧ, ಸ್ನಿಗ್ಧ ಭಕ್ತಿ ಎಂತಹದೆಂಬುದಕ್ಕೆ ಇದೂ ಒಂದು ಕುರುಹು. ಅದು ಅವರ ಬದುಕಿನಲ್ಲಿ ಹಾಸು ಹೊಕ್ಕಾಗಿತ್ತು.

ಮಧುರಚೆನ್ನರ ಚಿಂತನಶೀಲತೆ ಬಹುಮುಖವಾದುದು. ಅವರ ಎಲ್ಲ ಬಗೆಯ ಲೇಖನಗಳಲ್ಲಿ ಸಂಶೋಧನಾ ದೃಷ್ಟಿ, ಸಾಹಿತ್ಯಿಕ ಅಭಿರುಚಿ, ಆಧ್ಯಾತ್ಮಿಕ ಶ್ರದ್ಧೆಗಳು ವಿವಿಧ ರೀತಿಯಲ್ಲಿ ಕಾಣಿಸಿಕೊಳ್ಳುತ್ತವೆ. 'ಬಾಳು' ಎಂಬ ಲೇಖನದಲ್ಲಿ ಮನುಷ್ಯನ ಆಯುರ್ಮಾನವನ್ನು ಗುರುತಿಸಲಾಗಿದೆ. ಮಹಾಭಾರತದ ವ್ಯಕ್ತಿಗಳ ಆಯುಷ್ಯವನ್ನು ಅವರು ಕಂಡುಕೊಂಡಿದ್ದರಲ್ಲಿ ಸಂಶೋಧಕನ ನಿಲುವಿದ್ದರೆ, ಇತರ ವ್ಯಕ್ತಿಗಳ ಆಯುರ್ಮಾನವನ್ನು ಪರಿಗಣಿಸಿದ್ದರಲ್ಲಿ ಕ್ಷೇತ್ರ ಕಾರ್ಯವೂ ಇದೆ. ಶರೀರ ವಿಜ್ಞಾನ, ಮನೋ ವಿಜ್ಞಾನ, ಮಾನವಿಕ ವಿಜ್ಞಾನ ಇತ್ಯಾದಿ ಕ್ಷೇತ್ರಗಳಿಗೆ ವಸ್ತುವಾಗಬಲ್ಲ ಮಾಹಿತಿ ಇಲ್ಲಿರುವುದನ್ನು ಕಾಣಬಹುದು. 'ಬ್ರಾಹ್ಮಣರು' ಎಂಬುದು ಸಮಾಜ ವಿಜ್ಞಾನದ ಆಲೋಚನೆಯ ವಿಷಯ. ಸತ್ಯಯುಗ, ಕಲಿಯುಗದ ವಿಷಯವನ್ನಲ್ಲದೆ ಐತಿಹಾಸಿಕವಾದ ಶಾಸನಗಳ ಆಧಾರವನ್ನೂ ಗಮನಿಸುವ ಈ ಲೇಖನ ಬ್ರಾಹ್ಮಣತ್ವದ ಅವನತಿಗಳನ್ನು ಎತ್ತಿತೋರಿಸುತ್ತದೆ. ಶ್ರೀ ಅರವಿಂದರ ವಿಚಾರಸರಣಿಯನ್ನು ಬೆಂಬಲಿಸುವ ಮಧುರಚೆನ್ನರು ಆರ್ಯಚರಿತ್ರೆಯ ಪುನರ್ಘಟನೆಯಾಗಬೇಕೆನ್ನುವ ಹಳೆಯ ವಿಚಾರವನ್ನು ಬಿಟ್ಟರೆ, ಉಳಿದ ವಿಷಯ ಅವಲೋಕನೀಯವಾಗಿದೆ. 'ಋಷಿಗಳ ಕಾಲದಲ್ಲಿ' ಲೇಖನ ತುಂಬ ಪ್ರಗತಿಪರವಾದುದು. ಸಂಪ್ರದಾಯಕ್ಕಿಂತ ಪ್ರಖರ ಸತ್ಯ ಮಹತ್ವದ್ದು. ಗೋತ್ರ ಸೂತ್ರಗಳಿಗಿಂತ ಪ್ರಾಮಾಣಿಕತೆ ಬೆಲೆಯುಳ್ಳದ್ದು ಎಂಬ ವಿಚಾರವನ್ನು ಅರ್ಥ ಪೂರ್ಣವಾಗಿ ಈ ಲೇಖನ ಪ್ರತಿಪಾದಿಸುತ್ತದೆ.

'ಗುರುಪೂಜೆ', 'ಗುರುದೇವ' ಬರಹಗಳಲ್ಲಿ ಗುರುವಿನ ಬಗೆಗೆ ಚಿಂತನೆಯಿದೆ. 'ಗುರುವೆಂಬ ಬಿರುದು ಅನಂತನಿಗಲ್ಲದೆ ಇನ್ನಾರಿಗೆ ತಾನೆ ಸಲ್ಲಬಲ್ಲುದು?' ಎಂಬ ವಿಚಾರ ಮಧುರಚೆನ್ನರದಾಗಿರುವಂತೆ God himself is Guru ಎಂಬುದು ಶ್ರೀ ಅರವಿಂದರದಾಗಿದೆ. ಈ ಎರಡೂ ಬರೆಹಗಳ ತಿರುಳು ಒಂದೇ ಆಗಿರುವುದನ್ನು ಗಮನಿಸಬಹುದು. 'ಲೀಲೆ', 'ಆಶ್ರಯ' ಇವೆರಡು ಆಧಾತ್ಮಿಕ ಚಿಂತನೆಯ ರೂಪಕ ಗಳು. ಜಗತ್ತು ಮಿಥ್ಯವಲ್ಲವೆಂಬುದರ ಕಡೆಗೆ 'ಲೀಲೆ' ಗಮನ ಹರಿಸಿದೆ. 'ದೇವ ನಿದ್ದಾನೆಂಬ' ನಂಬಿಕೆಯು 'ಆಶ್ರಯ'ದಲ್ಲಿ ಪ್ರಕಟಗೊಂಡಿದೆ. 'ನಾಲ್ಕು ಶಕ್ತಿಗಳು'– ಜ್ಞಾನ, ಬಲ, ಸಾಮರಸ್ಯ ಮತ್ತು ಪೂರ್ಣತೆ. ಇವುಗಳ ಅರ್ಥವಿವರಣೆಯೇ ಈ ಲೇಖನದ ವಸ್ತು. ಹೀಗಾಗಿ ಇವೆಲ್ಲ ಬರಹಗಳು ಆಧ್ಯಾತ್ಮಿಕ ಚಿಂತನೆಗಳಾಗಿ, ಮಧುರಚೆನ್ನರ ವೈಯಕ್ತಿಕ ಸಾಧನೆಯ ಸ್ಮರಗಳಾಗಿ ಕಾಣುತ್ತವೆ,

ಸತ್ಯವನ್ನು ಕುರಿತು ಬರೆದ ಮೂರು ಲೇಖನಗಳೂ ಗಮನಾರ್ಹವಾಗಿವೆ. 'ಸತ್ಯ' ಎಂಬಲ್ಲಿಯ ವಿವೇಚನೆ ಅರ್ಥಪೂರ್ಣವೂ ಮನೋಜ್ಞವೂ ಆಗಿದೆ. ಅಮೂರ್ತ ವಿಷಯದ ಮೇಲಿನ ಈ ದೀರ್ಘ ನಿಬಂಧ ಮಧುರಚೆನ್ನರ ಆಲೋಚನಾಶಕ್ತಿಯ ವೈಶಿಷ್ಟ್ಯಕ್ಕೆ ಕುರುಹಾಗಿದೆ. ಇಲ್ಲಿಯ ಪ್ರತಿಯೊಂದು ಮಾತು ಅವರ ಸ್ವಯಂ ಪೂರ್ಣವಾದ ಚಿಂತನೆಯನ್ನೇ ಪ್ರತಿಬಿಂಬಿಸುತ್ತಿದೆ. ಈ ಬಗೆಯ ನಿಬಂಧಗಳು ಕನ್ನಡದಲ್ಲಿ ವಿರಳ. 'ಸತ್ಯವೂ ಸಿದ್ಧಿಯೂ', 'ಸತ್ಯದೃಷ್ಟಿ' ಇವೆರಡರಲ್ಲಿ ಅರವಿಂದರ, ಮಹಾತ್ಮಾಜಿಯವರ ಚಿಂತನೆಗಳಿದ್ದರೂ ಮಧುರಚೆನ್ನರ ಸ್ವಂತಿಕೆ ನಮ್ಮ ಗಮನ ವನ್ನು ಸೆಳೆಯುತ್ತದೆ.

'ಇತಿಹಾಸ' ಒಂದು ಸೂತ್ರಪ್ರಾಯವಾದ ನಿಬಂಧ. "ಜೀವನದ ಕ್ರಮಬದ್ಧ ವಾದ ನೆನಪಿನ ಸರಪಳಿಯೇ ಚರಿತ್ರೆ, ಇತಿಹಾಸ" ಇದು ಮುಖ್ಯವಾಗಿರುವ ಸೂತ್ರ. ಒಬ್ಬ ವಿಜ್ಞಾನಿಯಂತೆ ಮಧುರಚೆನ್ನರು ಈ ನಿಬಂಧ ಬರೆದಿದ್ದುದು ಗಮನಾರ್ಹ ವಾಗಿದೆ.

'ವಿಜಯೀ ವಿಶ್ವಾಮಿತ್ರ', 'ಋಗ್ವೇದದ ಪಂಚದೇವತೆಗಳು ಮತ್ತು ಪಂಚ ಕ್ಷಿತಿಗಳು' ಅವು ವಿಭಿನ್ನ ಬಗೆಯ ಲೇಖನಗಳು. ಸಾಹಸಿ ವಿಶ್ವಾಮಿತ್ರ ಮಧುರ ಚೆನ್ನರ ಗಮನ ಸೆಳೆದಿದ್ದು ಅಚ್ಚರಿಯನ್ನುಂಟುಮಾಡಿದರೂ ಆತನ ಹೋರಾಟ ಅವರಿಗೆ ಪ್ರಿಯವಾಗಿತ್ತೆಂದು ತೋರುತ್ತದೆ. ಪೌರಾಣಿಕ ಕತೆಯನ್ನು ಕ್ರಮವಾಗಿ ನಿರೂಪಿಸುವ ಮಧುರಚೆನ್ನರು ತಮ್ಮದೇ ಆದ ರೀತಿಯಲ್ಲಿ ವಿಶ್ವಾಮಿತ್ರನ ಕತೆ ಹೇಳಿದ್ದು ಇಲ್ಲಿಯ ವೈಶಿಷ್ಟ್ಯ.

'ಋಗ್ವೇದದ ಮುಖ್ಯ ಪಂಚದೇವತೆಗಳು ಹಾಗೂ ಪಂಚಕ್ಷಿತಿಗಳು' ತಾತ್ತ್ವಿಕ ಚಿಂತನೆಯಲ್ಲಿ ಮಹತ್ವದ ಲೇಖನವಾಗಿದೆ. ಪಂಚದೇವತೆಗಳು, ಪಂಚಕ್ಷಿತಿಗಳು ನಮ್ಮೊಳಗೆ, ಜಗತ್ತಿನೊಳಗೆ ಇರಬಲ್ಲವು. ಈ ಲೇಖನದ ಆರಂಭದ ಒಂದು ವಾಕ್ಯಾ ವಳಿಯಲ್ಲಿ ಮಧುರಚೆನ್ನರು ನೀಡುವ ವಿವರಣೆ ಹೀಗಿದೆ— "ನಮ್ಮೊಳಗೆ, ಜಗತ್ತಿ ನೊಳಗೆ ಹಾಗೂ ಸೂಕ್ಷ್ಮಜಗತ್ತಿನೊಳಗೆ ಅವೇ ಶಕ್ತಿಗಳು ಬೇರೆ ಬೇರೆ ಪ್ರಕಾರದಿಂದ ಕಾರ್ಯ ಮಾಡುತ್ತಿರುವವೆಂಬುದು ಉಪನಿಷತ್ಕಾರರ ಅನುಭವ. ನಮ್ಮೊಳಗೆ ಆತ್ಮ ಶಕ್ತಿಗಳಾಗಿಯೂ ಜಗತ್ತಿನೊಳಗೆ ನಿಸರ್ಗಕ್ರಿಯೆಗಳಾಗಿಯೂ ಸೂಕ್ಷ್ಮಜಗತ್ತಿನೊಳಗೆ ದೇವತೆಗಳಾಗಿಯೂ ಅವೇ ಶಕ್ತಿಗಳು ಬೇರೆ ಬೇರೆ ನಾಮಗಳಿಂದಲೂ ಸ್ವರೂಪ ಗಳಿಂದಲೂ ಕಾರ್ಯಮಾಡುವವೆಂಬುದು ಅನುಭವದ ಅರ್ಥ." ಅಷ್ಟಲ್ಲದೆ ಚರ್ಚೆ ಯನ್ನು ಆಧಾರಗಳೊಡನೆ ಮುಂದುವರಿಸುತ್ತ, ಶಾಂತಿಮಂತ್ರವನ್ನು ಉದ್ಧರಿಸಿ, ಅರ್ಥನೀಡಿ, ಶ್ರೀ ಅರವಿಂದರ ದಿವ್ಯ ಜೀವನವನ್ನು ಸಾಂಗತ್ಯಗೊಳಿಸಿ, "ಸಾಮಾನ್ಯ ಪ್ರಕೃತಿಯನ್ನು ದೈವೀಪ್ರಕೃತಿಯಾಗಿ ರೂಪಾಂತರಿಸಿ ದೇವನಿಗಾಗಿ ಬಾಳಿಬದುಕುವವ ರಾಗಬೇಕೆಂಬುದೇ ಅವರ ಉಪದೇಶ" ಎಂದು ನಿರ್ಣಯಿಸುವಾಗ, ಇಹದ ಬದುಕು ಇಹದಲ್ಲಿಯೇ ಸಾರ್ಥಕ್ಯಗೊಳ್ಳಬೇಕಾದುದರ ಅಗತ್ಯವನ್ನು ಸೂಚಿಸಿದಂತಾಗಿದೆ.

ಪ್ರಸ್ತುತ ಗ್ರಂಥದಲ್ಲಿ 'ಇತರ' ಎಂಬ ೮ ಲೇಖನಗಳ ವಿಭಾಗವೊಂದಿದ್ದು, ಈ ವಿಭಾಗದಲ್ಲಿ 'ವಾಙ್ಮಯ ಪರೀಕ್ಷಣ'ವೊಂದನ್ನು ಬಿಟ್ಟರೆ ಉಳಿದವೆಲ್ಲ ಗುಪ್ತನಾಮ ದಿಂದ ಬರೆಯಲ್ಪಟ್ಟಿವೆ. ಮಧುರಚೆನ್ನರು 'ಜಮುನಾಲಾಲ' ಎಂಬ ಹೆಸರಿನಿಂದ 'ನಡೆಯಂತೆ ನುಡಿ' 'ಭಾವಬಂಧನ' 'ಕ್ರೈಸ್ತವಾಙ್ಮಯ' 'ಶಿಲ್ಪಿ' ಎಂಬ ಲೇಖನಗಳನ್ನು ಪ್ರಕಟಿಸಿದ್ದಾರೆ. ಇವೆಲ್ಲ 'ಜಯಕರ್ನಾಟಕ' ಮಾಸಪತ್ರಿಕೆಯಲ್ಲಿಯೇ ಬೆಳಕು ಕಂಡಿವೆ. 'ಮರಪಂಡಿತ' ಎಂಬ ಹೆಸರಿನಿಂದ ಬರೆದ 'ಮರ್ಕಟ ವಿಚಾರ' 'ಯದ್ವಾತದ್ವಾ' 'ಕುವಿಚಾರ' 'ಸುವಿಚಾರ' 'ನಿರ್ವಿಚಾರ'* 'ಹರಟೆ' ಎಂಬ ಲೇಖನಗಳು 'ಸ್ವಧರ್ಮ' ಮತ್ತು 'ಜಯ ಕರ್ನಾಟಕ' ಮಾಸಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈ ಲೇಖನಗಳ ಲ್ಲಿಯೂ ಚಿಂತನೀಯ ಗುಣ ಇದ್ದೇ ಇದೆ. ಜೊತೆಗೆ ಕೆಲವೆಡೆಗಳಲ್ಲಿ ವ್ಯಂಗ್ಯ ಮತ್ತು ಹರಟೆಯ ಸ್ವರೂಪಗಳು ಬಳಕೆಯಾಗಿವೆ.

ಗಂಭೀರ ಚಿಂತನಶೀಲರಾಗಿದ್ದ ಮಧುರಚೆನ್ನರು ಹಾಸ್ಯಮಯ ಹರಟೆಗಳನ್ನೂ ಬರೆಯಬಲ್ಲವರಾಗಿದ್ದರು. ಅವರ 'ವಾಙ್ಮಯ ಪರೀಕ್ಷಣ' ಈ ಮಾತಿಗೆ ಒಂದು ಉದಾಹರಣೆಯಾಗಿ ನಿಲ್ಲುತ್ತದಲ್ಲದೆ ಅವರು ಮರಪಂಡಿತ ಎಂಬ ಹೆಸರಿಂದ ಬರೆದ 'ಮರ್ಕಟ ವಿಚಾರ' 'ಯದ್ವಾತದ್ವಾ'ಗಳೂ ಹರಟೆಗಳೇ ಆಗಿವೆ. 'ಹರಟೆ'ಯನ್ನು ಕುರಿತು ಬರೆದ ಲೇಖನ ಮಾತ್ರ ಹರಟೆಯ ಸ್ವರೂಪದಲ್ಲಿದ್ದರೂ ಚಿಂತನಶೀಲವಾಗಿದೆ. ಅದೆ ತಾನೇ ಸಂಶೋಧನೆಗೆ ತೊಡಗಿದ ಮಧುರಚೆನ್ನರು 'ವಾಙ್ಮಯ ಪರೀಕ್ಷಣ' ಬರೆದದ್ದರಲ್ಲಿ ವಿಡಂಬನೆ ಹೆಚ್ಚಾಗಿದೆ. 'ವಾಙ್ಮಯ ಪರೀಕ್ಷಣ' ಒಂದು ಉದಾತ್ತ ಗ್ರಂಥ. ಅದರ ಲೇಖಕ 'ನಾಣಲಿದೇವ', ಅದರ ಕಾಲ, ವಂಶಾವಳಿ, ದೇವತಾ ಸ್ತುತಿಗಳನ್ನು ಗುರುತಿಸುವಿಕೆಯಲ್ಲಿ ವಿನೋದವಿರುವದನ್ನು ಗಮನಿಸಬಹುದು. ಗಣಪತಿ, ಶ್ರೀರಾಮ, ಸರಸ್ವತಿಯವರನ್ನು ವರ್ಣಿಸುವ ಕಂದ ಪದ್ಯಗಳು ಮಧುರ ಚೆನ್ನರೇ ಬರೆದಂಥವುಗಳು. ಅವರ 'ವಿನೋದ ಕುಸುಮಾವಳಿ'‡ ಎಂಬ ರೂಪಕ ಕಾವ್ಯ ಕೃತಿಯಲ್ಲಿ ಇಂಥ ಪದ್ಯಗಳಿರುವುದನ್ನು ಕಾಣಬಹುದು. 'ವಾಙ್ಮಯ ಪರೀ ಕ್ಷಣ' ವಿನೋದಕ್ಕೆಂದೇ ಬರೆದ ಲೇಖನವೆಂಬುದು ಅದರ ಒಟ್ಟು ಬರವಣಿಗೆ ತಿಳಿಸಿ ಕೊಡುತ್ತದೆ. 'ಮರ್ಕಟ ವಿಚಾರ'ದಲ್ಲಿ ಮಂಗನಂಥ ಚಾಂಚಲ್ಯದ ಒಂದು ಸ್ವರೂಪ ವಿದ್ದರೆ, 'ಯದ್ವಾತದ್ವಾ'ದಲ್ಲಿ ಅದರ ಬೆಳವಣಿಗೆಯೇ ಇದೆ. 'ಹರಟೆ'ಯಲ್ಲಿಯೂ ವಿನೋದವಿದೆಯಾದರೆ ಬೀಳಪ್ಪ, ಬಾಳಪ್ಪರ ಸಂಭಾಷಣೆಯ ಮೂಲಕ ತಾತ್ವಿಕ ಚರ್ಚೆಯನ್ನು ಪರ್ಯಾಯವಾಗಿ ಮಾಡಲಾಗಿದೆ.

---

* ಕುವಿಚಾರ, ಸುವಿಚಾರ. ನಿರ್ವಿಚಾರ— ಇವು ಮೂರನ್ನು 'ವಿಚಾರ ವೀಚಿ' ಎಂಬ ಶೀರ್ಷಿಕೆಯ ಅಡಿಯಲ್ಲಿ ಹೊಂದಿಸಲಾಗಿದೆ. —ಸಂ.

‡ 'ಮಧುರಚೆನ್ನ– ಜೀವನ ಹಾಗೂ ಕೃತಿಗಳ ಸಮೀಕ್ಷೆ' —ಡಾ. ಜಿ. ಎಸ್. ಕಾಪಸೆ. ಅನುಬಂಧ– ಪುಟ ೩೯೩–೩೯೪ ನೋಡಬಹುದು.

'ಭಾವಬಂಧನ' ವಿನೋದ ಬೆರೆತಿರುವ ಒಂದು ಕತೆ, ಒಬ್ಬ ಹುಡುಗೆಯ ಕನಸು ಇಲ್ಲಿ ಕತೆಯಾಗಿ ಬಿಚ್ಚಿಕೊಳ್ಳುತ್ತದೆ. ಬರೆಹ ಸೊಗಸಾಗಿದೆ. 'ಕ್ರೈಸ್ತವಾಙ್ಮಯ' ಧರ್ಮಪ್ರಸಾರಕರಾದ ಕ್ರೈಸ್ತ ಲೇಖಕರ ಮನೋಧರ್ಮವೆಂತಹದೆಂಬುದನ್ನು ತೋರಿಸಿ ಕೊಡುತ್ತದೆ. ಒಂದಿಷ್ಟು ಚುರುಕು ತಟ್ಟಿಸುವಂತಿದೆ. 'ಶಿಲ್ಪಿ' ಒಂದು ಅನುವಾದಿತ ಪುಟ್ಟ ಬರಹ. 'ಮೋಹಿನಿ' ಮೂರ್ತಿಯನ್ನು ಕಂಡರಿಸುವ ಬಡಶಿಲ್ಪಿಯ ಕತೆ ಇಲ್ಲಿದೆ. ಇದರಲ್ಲಿಯ ಚಿಂತನೆ ಗಂಭೀರ ಸ್ವರೂಪದ್ದು.

'ಕುವಿಚಾರ' 'ಸುವಿಚಾರ' 'ನಿರ್ವಿಚಾರ'– ವಿಚಾರಗಳನ್ನು ಸ್ವಲ್ಪದರಲ್ಲಿ ಹಿಂಜಿ ನೋಡುವ ಕಾರ್ಯವಿಲ್ಲಿ ನಡೆದಿದೆ. "ಸು ಎಂದರೆ ಸತ್, ಸತ್ ಎಂದರೆ ಓಂ! ಸುವಿಚಾರವೆಂದರೆ ಸದ್ವಿಚಾರ, ಸದ್ವಿಚಾರವೆಂದರೆ ಪರಮಾತ್ಮನನ್ನು ಕುರಿತ ವಿಚಾರ. ಇದಿಲ್ಲದಿದ್ದರೆ ಏನಿದ್ದರೂ ಕುವಿಚಾರ..." ಹೀಗೆಂದು ವಿವರಿಸುವಲ್ಲಿ ಸುವಿಚಾರ ಮತ್ತು ಕುವಿಚಾರಗಳ ಅರ್ಥ ಬಿಚ್ಚಿಕೊಳ್ಳುತ್ತದೆ. 'ನಿರ್ವಿಚಾರ'ವೆಂದರೆ ವಿಚಾರ ರಾಹಿತ್ಯವಲ್ಲ, ಅದು ತಿಳಿಗೇಡಿತನ. ಇದಕ್ಕೆ ಅಂಧಶ್ರದ್ಧೆಯ ಉದಾಹರಣೆಗಳನ್ನು ಮಧುರಚೆನ್ನರು ನೀಡಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಇಂಥ ನಿರ್ವಿಚಾರಗಳಿಗೆ ಕೊರತೆಯಿಲ್ಲ.

ಮಧುರಚೆನ್ನರು ಬರೆದ 'ಮುನ್ನುಡಿ, ಹರಕೆ ಇತ್ಯಾದಿ'ಗಳು ಸಮಕಾಲೀನ ಸಾಹಿತ್ಯದ ಸಮಾಲೋಚನೆಗಳಂತಿವೆ. ಅಷ್ಟಲ್ಲದೆ ಗ್ರಂಥದ ವಸ್ತುವಿಗೆ ಸಂಬಂಧಿಸಿ ದಂತೆ ಸಾಮಾಜಿಕ, ಸಾಂಸ್ಕೃತಿಕ ಹಾಗೂ ತಾತ್ತ್ವಿಕ ಚರ್ಚೆಯನ್ನೂ ಅವರು ಅಲ್ಲಿಗಲ್ಲಿಗೆ ಮಾಡಿರುವುದುಂಟು. ಮಧುರಚೆನ್ನರದು ಮೂಲತಃ ಗುಣಗ್ರಾಹಕ ದೃಷ್ಟಿ, ಗ್ರಂಥಕರ್ತರನ್ನು ಪ್ರೋತ್ಸಾಹಿಸುವುದೂ ಅವರ ಒಂದು ಹಿರಿಯ ಗುಣ. ಅದರಿಂದಾಗಿ ಮುನ್ನುಡಿಗಳು ಹೆಚ್ಚಾಗಿ ಪ್ರಶಂಸೆಯ ಕಡೆಗೆ ವಾಲುತ್ತವೆ. ಮುನ್ನುಡಿ, ಹರಕೆ ಗಳನ್ನು ಬರೆಯಿಸಿಕೊಂಡವರು ಅವರ ಸ್ನೇಹಿತರೂ ಆತ್ಮೀಯರೂ ಆಗಿದ್ದುದರಿಂದ ಸಹಜವಾಗಿಯೇ ಒಳ್ಳೆಯುದನ್ನು ಮಧುರಚೆನ್ನರು ಎತ್ತಿ ತೋರಿಸಿರುವರು. ಆದಾಗ್ಯೂ ಸಾಹಿತ್ಯಿಕ ಚಿಂತನೆಯ ಕಾಳಜಿಯಿಂದೊಡಗೂಡಿದ ವಿಮರ್ಶೆಯ ಮಾತು ಗಳು ಅವರ ಇಂಥ ಬರೆಹಗಳಲ್ಲಿ ಗಮನವನ್ನು ಸೆಳೆಯುತ್ತವೆ. ಪ್ರಾರಂಭದ 'ಮುನ್ನುಡಿ'ಗಳಲ್ಲಿ ವಸ್ತುವಿನ ವಿಷಯ ವಿವೇಚನೆಯೇ ಪ್ರಮುಖವಾಗಿದೆ. ಉದಾ:– ಜನಜೀವನ (ನಾಟಕ), ಭಕ್ತಿರಹಸ್ಯ (ನಾಟಕ); ಇವೆರಡೂ ಮಧುರಚೆನ್ನರ ಹತ್ತಿರದ ಗೆಳೆಯರಾದ ಸಿಂಪಿ ಲಿಂಗಣ್ಣನವರ ಕೃತಿಗಳು. 'ಭಕ್ತಿರಹಸ್ಯ'ದಲ್ಲಿ 'ನಾಟಕವು ಇತಿಹಾಸವಲ್ಲ, ಅದು ಕಾವ್ಯ. ಒಂದು ತೋರಿಸಿ ಮತ್ತೊಂದನ್ನು ಕೈಗೆ ಹಚ್ಚುವ ಮಾಟಗಾರ್ತಿಯ ರೀತಿ ಕಾವ್ಯದ್ದು' ಎಂಬ ಮಾತು ತಟ್ಟನೆ ಗಮನ ಸೆಳೆಯುತ್ತದೆ. ನಾಟಕ ದೃಶ್ಯಕಾವ್ಯ ತಾನೆ? ಅದು ಇತಿಹಾಸದಿಂದ ಭಿನ್ನವಾಗಿರುವುದು ಸ್ವಾಭಾವಿಕ.

'ಮಲ್ಲಿಗೆ ದಂಡೆ'ಯ ಮುನ್ನುಡಿಯಲ್ಲಿ 'ಕಾವ್ಯದ ಉಗಮ' ಮತ್ತು 'ಕಾವ್ಯದ ಲಕ್ಷಣ'ದ ಬಗ್ಗೆ ಒಂದಿಷ್ಟು ಚರ್ಚೆಯಿದ್ದು, ಜನಪದ ಸಾಹಿತ್ಯ ಸಂಗ್ರಹ ಕಾರ್ಯದ ಒಗ್ಗೆ ಆಗ ಯಾವ ವಿಚಾರವಿತ್ತೆಂಬ ಬಗ್ಗೆ ಅವರು ಹೇಳಿದ ಮಾತು ಗಮನಿಸುವಂತಿದೆ "ಈ ಹಾಡುಗಳ ಭಾಷೆ ಕೇವಲ ಇದ್ದಕ್ಕಿದ್ದಂತೆ ಗ್ರಾಮ್ಯವಾಗಿಯೇ ಅದನ್ನು ಇಡಬೇಕೆಂದು ಕೆಲವರ ಅಭಿಪ್ರಾಯ. ತುಸು ಮಟ್ಟಿಗೆ ಸಂಸ್ಕರಿಸಿ ಗ್ರಾಂಥಿಕ ಸ್ವರೂಪಕ್ಕೆ ತರಬೇಕೆಂದು ಇನ್ನು ಕೆಲವರ ಅಭಿಪ್ರಾಯ. ಆದರೆ ಇವೆರಡೂ ಮಾತುಗಳು ಈ ಪುಸ್ತಕದಲ್ಲಿ ಸರಿಯಾಗಿ ಸಾಧಿಸಿಲ್ಲ...... ಮುಂದಿನವರು ಈ ಕೆಲಸವನ್ನು ತಕ್ಕಂತೆ ಸರಿಪಡಿಸಿಕೊಳ್ಳಲಿ." ಜನಪದ ಸಂಗ್ರಹಕಾರ್ಯ ಬೆಳೆದಂತೆ ಅದರಲ್ಲಿ ನಿರ್ದಿಷ್ಟತೆ, ಸಮಂಜಸತೆ ಬೆಳೆಯಬೇಕಾದ ಅಗತ್ಯವನ್ನು ಈ ಅಭಿಪ್ರಾಯ ಸೂಚಿಸುತ್ತಿದೆಯಾದರೂ 'ಮಲ್ಲಿಗೆ ದಂಡೆ' ಒಂದು ಉತ್ತಮ ಸಂಗ್ರಹವೆಂಬುದರಲ್ಲಿ ಸಂಶಯವಿಲ್ಲ.

ಸಿಂಪಿ ಲಿಂಗಣ್ಣನವರ ಅನುವಾದಿತ ಕಾವ್ಯ 'ಮಿಲನ'ವನ್ನು ಕುರಿತು ಬರೆಯುವಾಗ ಅನುವಾದಿತ ಕೃತಿ ಹಾಗೂ ಮೂಲ ಕೃತಿಗಳಿಗಿರುವ ವ್ಯತ್ಯಾಸಗಳನ್ನು ಮಧುರಚೆನ್ನರು ಗುರುತಿಸುತ್ತಾರೆ. "ಮೂಲ ಮತ್ತು ಭಾಷಾಂತರಗಳು ಯಾವ ಕಾಲದಲ್ಲಿಯೂ, ಯಾವ ಭಾಷೆಯಲ್ಲಿಯೂ, ಯಾವ ದೇಶದಲ್ಲಿಯೂ ಸಂಪೂರ್ಣವಾಗಿ ಸಮಸ್ವರೂಪದಲ್ಲಿರಲಾರವು. ಮೂಲವು ಮೂಲವೇ, ಅನುವಾದವು ಅನುವಾದವೇ. ಅವೆರಡೂ ಸೂರ್ಯಚಂದ್ರರಿದ್ದಂತೆ. ಒಂದರ ಪ್ರತಾಪವು ಇನ್ನೊಂದರಲ್ಲಿ ಕೇವಲ ಪ್ರಕಾಶ ಮಾತ್ರವಾಗಿ ತೋರುವದು." ಮಧುರಚೆನ್ನರು ಯಾವ ಕ್ಷೇತ್ರವನ್ನು ಕುರಿತು ಆಲೋಚಿಸಲಿ, ತಮ್ಮದೇ ಆದ ವಿಚಾರಗಳನ್ನು ಪ್ರಕಟಿಸದೆ ಬಿಡಲಾರರು ಎಂಬುದಕ್ಕೆ ಇಲ್ಲಿಯ ವಿಚಾರಸರಣಿ ಒಂದು ಉದಾಹರಣೆಯಾಗಿ ನಿಲ್ಲುತ್ತದೆ.

'ವೀರಪಥಿಕ' 'ಮುಗಿಲಜೇನು' 'ತರಂಗಿಣಿ' 'ನನ್ನ ಹಾಡು' 'ಪುಷ್ಪಗುಚ್ಛ' ಈ ಐದು ಕವನ ಸಂಗ್ರಹಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಾಗ ಕಾವ್ಯದ ಬಗೆಗಿನ ತಮ್ಮ ಪ್ರೀತಿಯನ್ನೂ ಹೊಸಕವಿಗಳ ಬಗೆಗಿನ ಭರವಸೆಯನ್ನೂ ಕೆಲಮಟ್ಟಿಗಿನ ವಿಮರ್ಶೆಯನ್ನೂ ಬೆರಸಿ, ಅವರು ಅಂತಃಕರಣ ಪೂರ್ವಕವಾಗಿಯೇ ಆಡಿದ ಮಾತುಗಳಲ್ಲಿ ಸಾಂಸ್ಕೃತಿಕ ಕಾಳಜಿ ಇರುವುದು ಕಂಡುಬರುತ್ತದೆ. ಕವಿ ರವೀಂದ್ರರ, ಶ್ರೀ ಅರವಿಂದರ, ಏ. ಇ. ಅವರ ಮಾತುಗಳು ಅಲ್ಲಿಗಲ್ಲಿಗೆ ಅವರ ಸ್ಮರಣೆಗೆ ಬರುತ್ತಿದ್ದು, ಉದಾತ್ತವಾದ ಹಾಗೂ ಉದಾರವಾದ ಅಭಿಪ್ರಾಯಗಳು ಕಾಣಿಸಿಕೊಳ್ಳುತ್ತವೆ. ಇಷ್ಟೊಂದು ಔದಾರ್ಯ ಅಗತ್ಯವಾಗಿತ್ತೆ ? ಎಂದು ಪ್ರಶ್ನಿಸುವಂತಿದ್ದರೂ ಮಧುರಚೆನ್ನರ ಸ್ವಭಾವಸಿದ್ಧವಾದ ನಿಲುವು ನಮ್ಮನ್ನು ಮೂಕರನ್ನಾಗಿ ಮಾಡುತ್ತದೆ.

'ಭಕ್ತ ಪ್ರಹ್ಲಾದ' ನಾಟಕದಲ್ಲಿ ಶೈವ-ವೈಷ್ಣವ ವಾದ ಮತ್ತು ಆರ್ಯ-ದ್ರಾವಿಡ ಜನಾಂಗ ವಾದ ಮುಂತಾದವು ಅಗತ್ಯಕ್ಕಿಂತ ಹೆಚ್ಚಿಗೆ ಬೆಳೆದಿದ್ದುದು ಸ್ವತಃ

ಮಧುರಚೆನ್ನರೇ ತಿಳಿದವರಾಗಿದ್ದರು. 'ಸ್ತ್ರೀ ನೀತಿ ಸುಧಾಕರ'ದ ಮುನ್ನುಡಿಯೂ ಪ್ರಶಂಸಾತ್ಮಕವಾಗಿಯೇ ಇದೆ. ಮಧುರಚೆನ್ನರ ಮುನ್ನುಡಿಗಳ ವೈಶಿಷ್ಟ್ಯವೆಂದರೆ ಆತ್ಮೀಯವಾಗಿ ಕೃತಿಯನ್ನು ಕೃತಿಕಾರರನ್ನೂ ನೆನೆದುಕೊಳ್ಳುವುದು. ಅತ್ಯಂತ ಸಹೃದಯತೆಯಿಂದ ಕೃತಿಯೊಂದರ ಉತ್ತಮಾಂಶಗಳನ್ನು ಎತ್ತಿತೋರಿಸುವುದು. ಹಾಗಿದ್ದರೂ ತಮ್ಮ ಐತಿಹಾಸಿಕ ಪ್ರಜ್ಞೆಯನ್ನು ಜಾಗೃತವಾಗಿರಿಸಿಕೊಂಡು ಸಮಕಾಲೀನ ಸಾಹಿತ್ಯಿಕ ಸಂದರ್ಭಗಳನ್ನು ತಪ್ಪದೇ ದಾಖಲಿಸುವ ಗುಣ ಉಳ್ಳದು. ಹೀಗಾಗಿ ಮುನ್ನುಡಿಗಳು ಅಭ್ಯಾಸಕ್ಕೆ ಸಾಮಗ್ರಿಗಳನ್ನು ಒದಗಿಸುತ್ತವೆ.

'ಮಧುರಚೆನ್ನರ ಲೇಖನಗಳು' ಪ್ರಕಟಿತ ಕಾಲಮಾನವನ್ನು ಗಮನಿಸಿದರೆ (ಈ ಪ್ರಸ್ತಾವನೆಯ ಪ್ರಾರಂಭ ಭಾಗದಲ್ಲಿ ಗುರುತಿಸಿದಂತೆ) ೧೯೨೩ ರಿಂದ ೧೯೫೩ ರ ಕಾಲಾವಧಿಯಲ್ಲಿ ಬೆಳಕು ಕಂಡಂತಹವುಗಳು. ನವೋದಯದ ಆರಂಭ, ಬೆಳವಣಿಗೆ ಮತ್ತು ವೈಭವದ ಈ ಕಾಲದಲ್ಲಿ ಮಧುರಚೆನ್ನರ ಬರಹಗಳು ರೂಪಗೊಂಡಿದ್ದರಿಂದ, ಅಂದಿನ ಲೇಖಕರು ನಾಡು, ನುಡಿಗಳ ಉಪಾಸನೆಯನ್ನು ಹೇಗೆ ಮಾಡುತ್ತಿದ್ದರೆಂಬುದನ್ನು ಅರಿಯಬಹುದಾಗಿದೆ. ಮಧುರಚೆನ್ನರ ವ್ಯಕ್ತಿ ವಿಶೇಷತೆಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಐತಿಹಾಸಿಕ ಮತ್ತು ಸಂಶೋಧಕ ದೃಷ್ಟಿಯ ಲೇಸಿನ ಉಪಾಸನೆ, ಶ್ರದ್ಧೆ ಮತ್ತು ಸಾಧನ ಮಾರ್ಗದ ಆಧ್ಯಾತ್ಮಿಕ ಚಿಂತನೆ ಇಲ್ಲಿ ಎದ್ದು ಕಾಣುವ ಗುಣಗಳಾಗಿವೆ. ಈ ಗುಣಗಳು ಯಾವ ಕಾಲಕ್ಕೂ ಅಪೇಕ್ಷಣೀಯವಾದವುಗಳೆಂದು ಬೇರೆ ಹೇಳಬೇಕಾಗಿಲ್ಲ.

— ೩ —

ಮಧುರಚೆನ್ನರ ಸಮಗ್ರಸಾಹಿತ್ಯದ ಒಂದು ಸಂಪುಟ ಪ್ರಕಟಿಸುವ ಅಪೇಕ್ಷೆ ಬಹಳ ದಿನಗಳಿಂದ ನನ್ನಲ್ಲಿತ್ತು. ಮಧುರಚೆನ್ನರ ಚಿರಂಜೀವರೂ ನನ್ನ ಆತ್ಮೀಯ ಮಿತ್ರರೂ ಆದ ಶ್ರೀ ಪುರುಷೋತ್ತಮ ಗಲಗಲಿಯವರು ನನ್ನ ಅಪೇಕ್ಷಿತ ಸಂಪುಟವು ಬೇಗ ಪ್ರಕಟವಾಗಬೇಕೆಂದು ಹಂಬಲಿಸುತ್ತಲೂ ಅದನ್ನು ಸಿದ್ಧಪಡಿಸಲು ಒತ್ತಾಯಿಸುತ್ತಲೂ ಇದ್ದರು. ಮಧುರಚೆನ್ನರ ಲೇಖನಗಳನ್ನು ಕಲೆಹಾಕುವುದು ತುಂಬ ಪ್ರಯಾಸದ ಕೆಲಸವಾದ್ದರಿಂದ ಅವುಗಳ ಶೋಧನೆಯಲ್ಲಿ ನಾಲ್ಕಾರು ವರುಷಗಳೇ ಕಳೆದವು. ನಾನು ಮಧುರಚೆನ್ನರನ್ನು ಕುರಿತು ಸಂಪ್ರಬಂಧ ಬರೆಯುವಾಗಲೇ ಗುರುತಿಸಿಕೊಂಡಿದ್ದ 'ಜಯಕರ್ನಾಟಕ' 'ಶಿವಾನುಭವ' ಇತ್ಯಾದಿ ನಿಯತಕಾಲಿಕೆಗಳ ಹಿಂದಿನ ಸಂಚಿಕೆಗಳನ್ನು ಹುಡುಕಿಕೊಳ್ಳುವುದೂ ಕಷ್ಟದ ಕೆಲಸವಾಯಿತು. 'ಸ್ವಧರ್ಮ' ಸಂಚಿಕೆಗಳು ನಾನು ನಿರೀಕ್ಷಿಸಿದ ಗ್ರಂಥಾಲಯದಲ್ಲಿ ದೊರೆಯಲೇ ಇಲ್ಲ. ಕೊನೆಗೆ ಡಾ. ವಾಮನ ಬೇಂದ್ರೆಯವರು ತಮ್ಮಲ್ಲಿ ದೊರೆತ ಆ ಪತ್ರಿಕೆಗಳಲ್ಲಿಯ ಲೇಖನಗಳನ್ನು ಒದಗಿಸಿಕೊಟ್ಟರು. 'ವಸಂತ' ಮಾಸಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಎನ್ಕೆ ಅವರು ಆ ಪತ್ರಿಕೆಯ ಸಂಚಿಕೆಗಳನ್ನು ಪೂರೈಸಿದರು. ಕಳೆದುಹೋದ

ಶ್ರೀ ಬಿಂದುಮಾಧವ ಕುಲಕರ್ಣಿಯವರ 'ಅರೆಯಾಳು' ಕಥಾಸಂಗ್ರಹವನ್ನು ಶ್ರೀ ಶೀಲಾಕಾಂತ ಪತ್ತಾರ ಅವರು ಹುಡುಕಿಕೊಟ್ಟರು. ಇನ್ನೂ ದೊರೆಯಬೇಕಾದ ಕೆಲವು ಪತ್ರಿಕೆಗಳಿದ್ದರೂ ಸಂಗ್ರಹಕಾರ್ಯ ಬಹುಪಾಲು ಪೂರ್ಣಗೊಂಡಿದ್ದರಿಂದ 'ಮಧುರಚೆನ್ನರ ಲೇಖನಗಳು' ಹಸ್ತಪ್ರತಿ ಸಿದ್ಧವಾಯಿತು.

ಮಧುರಚೆನ್ನರ ಪ್ರಕಟಿತ ಗ್ರಂಥಗಳನ್ನು ಬಹಳ ದಿನಗಳ ಹಿಂದೆಯೇ ಕಲೆ ಹಾಕಲಾಗಿತ್ತು. ಪ್ರಕಟಿತ ಗ್ರಂಥಗಳು ಹಾಗೂ ಸಂಗ್ರಹಿಸಿದ ಲೇಖನಗಳು ಕೂಡಿಯೇ ಮಧುರಚೆನ್ನರ ಒಂದು ಸಮಗ್ರ ಸಂಪುಟ ಪ್ರಕಟಿಸುವುದು ಸೂಕ್ತವಾಗಿ ತೋರಿದ್ದರಿಂದ ಆ ರೀತಿ ಮಾಡಲು ಯೋಜನೆ ಹಾಕಿಕೊಂಡಿದ್ದರೂ 'ಮಧುರಚೆನ್ನರ ಲೇಖನಗಳು' ಪ್ರತ್ಯೇಕವಾಗಿ ಬರುವುದೇ ಸೂಕ್ತವೆಂದು ಆಮೇಲೆ ಅನಿಸಿದ್ದರಿಂದ, ಈಗ ಅದು ಪ್ರಕಟವಾಗುತ್ತಲಿದೆ. ನನ್ನ ಮಟ್ಟಿಗೆ ಇದು ಅತ್ಯಂತ ಸಂತೋಷದ ಹಾಗೂ ತೃಪ್ತಿಯ ವಿಷಯವಾಗಿದೆ.

ಮಧುರಚೆನ್ನರ ಸಮಗ್ರಸಂಪುಟ ಪ್ರಕಟವಾಗಬೇಕೆಂದು ಹಾರೈಸಿದವರಲ್ಲಿ ನನ್ನ ಆತ್ಮೀಯ ಸ್ನೇಹಿತರೂ, ಕನ್ನಡದ ಮಹತ್ವದ ಕವಿಗಳೂ ಆದ ಶ್ರೀ ಚೆನ್ನವೀರ ಕಣವಿಯವರು ಪ್ರಮುಖರು. ಮಧುರಚೆನ್ನರ ಗದ್ಯ ಕೃತಿಗಳನ್ನು ಕ್ರೈಸ್ಟ ಕಾಲೇಜಿನ ಪ್ರಕಟನೆಯಾಗಿ ತರಬೇಕೆಂದು ಯೋಚಿಸಿದವರು ಗೆಳೆಯ ಶ್ರೀ ಚಿ. ಶ್ರೀನಿವಾಸರಾಜು ಅವರು. ಯೋಗಾಯೋಗವೆಂಬಂತೆ ಶ್ರೀ ಕಣವಿಯವರು ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಆಡಳಿತ ಮಂಡಳಿಯ ಸದಸ್ಯರು; ಶ್ರೀ ಶ್ರೀನಿವಾಸರಾಜು ಅವರು ಪ್ರಸಾರಾಂಗದ ನಿರ್ದೇಶಕರು. ಕನ್ನಡದ ಪ್ರತಿಭಾವಂತ ಕವಿಗಳೂ, ಜನಪದ ಸಾಹಿತ್ಯದ ವಿದ್ವಾಂಸರೂ ಆದ ಡಾ. ಚಂದ್ರಶೇಖರ ಕಂಬಾರ ಅವರು ಕುಲಪತಿಗಳು. ಇವರೆಲ್ಲರು 'ಮಧುರಚೆನ್ನರ ಲೇಖನಗಳು' ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿಸು ವುದು ಸೂಕ್ತವೆಂದು ಭಾವಿಸಿ, ನನ್ನ ವಿನಂತಿಯನ್ನು ಮನ್ನಿಸಿ ಉಪಕರಿಸಿದ್ದಾರೆ. ಈ ಸಂದರ್ಭದಲ್ಲಿ ಹಲಸಂಗಿ ಗೆಳೆಯರು ಮಾಡಿದ ಇನ್ನೊಂದು ಮಹತ್ವದ ಕಾರ್ಯ ನನ್ನ ನೆನಪಿಗೆ ಬರುತ್ತದೆ. ೧೯೩೬ ರಲ್ಲಿ ಹಂಪಿಯಲ್ಲಿ ವಿಜಯನಗರ ಸಾಮ್ರಾಜ್ಯದ ಆರು ನೂರು ವರುಷಗಳ ಸ್ಮಾರಕೋತ್ಸವ ನಡೆದ ಸಂದರ್ಭದಲ್ಲಿ ಮಧುರಚೆನ್ನರು ಸಂಪಾದಕ ರಾಗಿದ್ದ ಹಲಸಂಗಿಯ ಅರವಿಂದ ಗ್ರಂಥಮಾಲೆಯಲ್ಲಿ 'ಕನ್ನಡಿಗರ ಕುಲಗುರು' ಎಂಬ ಪುಸ್ತಕವನ್ನು ಪ್ರಕಟಿಸಿ ಸ್ಮಾರಕೋತ್ಸವದಲ್ಲಿ ಆರುನೂರು ಪ್ರತಿಗಳನ್ನು ಪುಕ್ಕಟೆಯಾಗಿ ಹಂಚಲಾಯಿತು. ಹಲಸಂಗಿ ಗೆಳೆಯರ ಶ್ರದ್ಧಾಪೂರ್ವಕವಾದ ಈ ಸೇವೆಗೆ ಕೃತಜ್ಞತೆ ಸೂಚಿಸಲೆಂಬಂತೆ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಮಧುರಚೆನ್ನರ ನಲವತ್ತ ನೆಯ ಪುಣ್ಯತಿಥಿಯ ದಿನದಂದು (೧೫–೮–೧೯೯೩ ರಂದು) ಹಲಸಂಗಿಯಲ್ಲಿಯೇ ಪ್ರಸ್ತುತ ಗ್ರಂಥದ ಬಿಡುಗಡೆ ಸಮಾರಂಭ ಏರ್ಪಡಿಸುತ್ತಿರುವುದು ತುಂಬ ಸಂತೋಷದ ವಿಷಯವಾಗಿದೆ.

'ಮಧುರಚೆನ್ನರ ಲೇಖನಗಳು' ಗ್ರಂಥವನ್ನು ಸಿದ್ಧಪಡಿಸುವಲ್ಲಿ ನೆರವಾದ ಡಾ. ವಾಮನ ಬೇಂದ್ರೆ, ಶ್ರೀ ಎನ್. ಕೆ. ಕುಲಕರ್ಣಿ, ಶ್ರೀ ಶೀಲಾಕಾಂತ ಪತ್ತಾರ ಇವರುಗಳಿಗೆ, ಅವರ ಪ್ರಕಟನಾ ಕಾರ್ಯದಲ್ಲಿ ಆಸ್ಥೆ ವಹಿಸಿದ ಶ್ರೀ ಚೆನ್ನವೀರ ಕಣವಿ, ಡಾ. ಚಂದ್ರಶೇಖರ ಕಂಬಾರ, ಡಾ. ಕೆ.ವಿ. ನಾರಾಯಣ, ಶ್ರೀ ಚಿ. ಶ್ರೀನಿವಾಸರಾಜು ಹಾಗೂ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಆಡಳಿತ ಮಂಡಳಿಯ ಸದಸ್ಯರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಹಸ್ತಪ್ರತಿ ಸಿದ್ಧಪಡಿಸುವಲ್ಲಿ ನೆರವಾದ ನನ್ನ ಚಿರಂಜೀವ ರವಿಯನ್ನೂ ನಾನು ನೆನೆಯದಿರಲಾರೆ. ಗ್ರಂಥವು ಸುಂದರವಾಗಿ ಮುದ್ರಣವಾಗುವಂತೆ ನೋಡಿಕೊಂಡ ಮನೋಹರ ಮುದ್ರಣಾಲಯದ ಶ್ರೀ ರವೀಂದ್ರ ಆಕಳವಾಡಿಯವರಿಗೂ ನನ್ನ ಕೃತಜ್ಞತೆಗಳು.

ಧಾರವಾಡ
೩೧-೭-೯೩

—**ಗುರುಲಿಂಗ ಕಾಪಸೆ**

# ಪರಿವಿಡಿ

## ೩. ಜನಪದ ಸಾಹಿತ್ಯ



## ೪. ಕವಿ ಪರಿಚಯ



## ೫. ಸಾಹಿತ್ಯಿಕ ಉಪನ್ಯಾಸಗಳು



## ೬. ಶರಣ ಸಾಹಿತ್ಯ



## ೭. ಶ್ರೀ ಅರವಿಂದ ಸಾಹಿತ್ಯ



## ೮. ಚಿಂತನಶೀಲ

## ೯. ಇತರ



## ೧೦. ಮುನ್ನುಡಿ, ಹರಕೆ ಇತ್ಯಾದಿ

# ಬಾದಾಮಿಯ ಗುಡಿಗಳ ಜೀರ್ಣೋದ್ಧಾರ

( ವಿಜಯನಗರದರಸರಿಂದ ಕ್ರಿ. ಶ. ೧೫೩೩ ನೆಯ ಇಸ್ವಿಯಲ್ಲಿ ಕೆತ್ತಿಸಿರುವ ಶಾಸನ )

---

(ಸೂರ್ಯ) (ಈಶ್ವರ ಲಿಂಗ) (ಚಂದ್ರ)

ಶುಭಮಸ್ತು ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ ತ್ರೈಲೋಕ್ಯ ನಗರಾರಂಭ ಮೂಲ ..ಂಭಾಯ ಶಂಭವೆ। ಅಂತರಾಯ ತಿಮಿರ ದಿಶಾಂತಯೆ ಶಾಂತಪಾವನಮಚಿಂತ್ಯನ್ನೆ ಭವಂತಂ ನರಂ ವಸುಧಿ ಕುಂಜರಂ....ತುಂದಿಲ ಮಹಃ।(?) ಸ್ವಸ್ತಿಶ್ರೀಜಯಾಭ್ಯುದಯ ಶಾಲಿವಾಹನ ಶಕ ವರುಷ ೧೪೫೫ ನೆಯ ನಂದನ ಸಂವತ್ಸರದ ಜೇಷ್ಠ ಶು(॥) ೫ ಗುರುವಾರದಲೂ ಸಕಲ ಸಾಮಂತ ಚಕ್ರ ಮಕುಟ ಮಣಿ ಮರೀಚಿ ಮಂಜರಿ ವಿರಾಜಿತ ಚರಣಕಮಲ ರಾಜೇಂದ್ರ ಶೇಖರ ಶ್ರೀಮನ (ಶ್ರೀಮಾನ್) ಮಹಾರಾಜಾಧಿರಾಜ ರಾಜವರ ಪರಮೇಶ್ವರ ಶ್ರೀವೀರಪ್ರತಾಪ ಶ್ರೀ ಅಚ್ಯುತರಾಯ ಮಹಾರಾಯರೂ ಸುಖಸಂಕಥಾ ವಿನೋದದಿಂ ಪೃಥ್ವಿರಾಜ್ಯಂ-ಗೆಯಿ ಉತಯಿರಲು (ಗೆಯ್ಯುತಿರಲು) ಮಹಾರಾಜಕರಿಂದಲೂ (?)ಬಾದಾಮಿಯ.... ಶ್ರೀ ಬನದ ಮಹಾಂಮಾಯಿ ಮೊದಲಾದ ದೇವಸ್ಥಾನಗಳೂ ಖಿಲವಾಗಿ ಇರಲೂ.... ಅಚ್ಯುತರಾಯರ ಸೇನಾಧಿಪ ಚಿನ್ನಪ್ಪ ನಾಯಕರೂ ಬಾದಾಮಿಯ ದುರ್ಗ... ಶ್ರೀ ಬನದ ಮಹಾಂಮಾಯಿ ಮೊದಲಾದ ದೇವಸ್ಥಾನಗಳೂ ಜೀರ್ಣೋದ್ಧಾರವಾಗಿ ...ಪ್ರತಿಷ್ಠೆ ಮಾಡ ಹೇಳಿ ತಮ್ಮ ಕುಮಾರ ಚಿಕ್ಕಚಿನ್ನಪ್ಪ ನಾಯಕರನು ಕಳುಹಲಾಗಿ ಆ ಚಿಕ್ಕಚಿನ್ನಪ್ಪ ನಾಯಕರು ತಮ್ಮ ಸ್ವಾಮಿಯ ನಿರೂಪದಿಂದಲೂ ಬಾದಾಮಿಯ ಕೋಟೆಯನ್ನು ಯಿಕ್ಕಿಸಿ (ಕವಿ ಚರಿತೆಯ ದ್ವಿತೀಯ ಭಾಗದ ಅವತರಣಿಕೆ ೧೨ ನೆಯ ಪೃಷ್ಠದಲ್ಲಿರುವ ಒಂದು ಕಂದದಲ್ಲಿ 'ಇಕ್ಕು' ಎಂಬ ಶಬ್ದವು 'ಕಟ್ಟು' ಎಂಬ ಅರ್ಥದಲ್ಲಿದೆ.) ಅಚ್ಯುತ ಮಹಾರಾಯರಿಗೂ ತಮ್ಮ ಸ್ವಾಮಿ (?) ಚಿನ್ನಪ್ಪ ನಾಯಕರಿಗೂ ಆಯುರಾರೋಗ್ಯ ಆಯಶ್ವಯಾಭಿ ಉದ್ಧಿ (ಐಶ್ವರ್ಯಾಭಿವೃದ್ಧಿ) ಯಾಗಬೇಕೂ ಯೆಂ . (ಎಂದು)...ಮಾಹಾಂಮಾಯಿ ಚರಣದರ್ಶ ಭುವನಾಧೀಶ್ವರಿ ಉದ್ದಂತ ರಾಜಕುಲ ಸಂ... ಶ್ರೀ ಬನಪುರವತೆ ಶ್ರೀ ಬನದ ..ಜೀರ್ಣೋದ್ಧಾರವಾಗಿ...

(ಜ. ಕ. ೧-೩ ಜನೇವರಿ ೧೯೨೩)

## ಕೂಡಲ ಸಂಗಮದೇವ

ಶ್ರೀ ಬಸವೇಶ್ವರ ದೇವರು ಉಪದೇಶ ಹೊಂದಿದ ಸ್ಥಳವು.

---

೧) ಕೂಡಲ – ಭೀಮಾ ಸೀನಾ ನದಿಗಳು ಕೂಡುವ ಸ್ಥಳದಲ್ಲಿ

೨) ಸಂಗಮ – ಕೃಷ್ಣಾ ಮಲಾಪಹಾರಿಗಳ ಸಂಗಮ ಸ್ಥಳದಲ್ಲಿ

ಇವುಗಳಲ್ಲಾವುದೆಂಬುದನ್ನು ನಿರ್ಣಯಿಸುವುದೇ ಈ ಲೇಖಕನ ಆಕಾಂಕ್ಷೆಯು. ಇವುಗಳಲ್ಲಿ ೨ನೆಯದೇದೇ ಇಂದಿನವರೆಗೆ ಎಲ್ಲರೂ ಹೇಳುತ್ತ ಬಂದಿದ್ದಾರೆ. ಈ ಸಂಗಮಕ್ಕೆ ಕಪ್ಪಡಿಸಂಗಮವೆಂದೂ ಹೆಸರುಂಟು. ಇದಲ್ಲದೆ ಈ ಸ್ಥಳವು ಬಸವನ ಜನ್ಮಸ್ಥಳವಾದ ಬಾಗೇವಾಡಿಗೆ ಕೂಡಲಕ್ಕಿಂತಲೂ ಸ್ವಲ್ಪ ಸಮೀಪದಲ್ಲಿಯೂ ಉಂಟು. ಆದುದರಿಂದ ಉಪನಯನದ ನಿಮಿತ್ತ ಮನೆಯಲ್ಲಿ ಜಗಳಾಡಿದ ಬಸವೇಶ್ವರನು ಈ (ಹುನಗುಂದ ತಾಲೂಕಿನಲ್ಲಿರುವ) ಸಂಗಮಕ್ಕೇ (ಕೃಷ್ಣಾನದಿಯನ್ನು ದಾಟಿ) ಹೋಗಿರಬೇಕೆಂದು ಎಲ್ಲರ ತಿಳಿವಳಿಕೆ. ನಾವಾದರೂ ಇದನ್ನೇ ಗೃಹೀತವಾಗಿಟ್ಟುಕೊಂಡು ಹೊರಡೋಣ.

(ಅ) ಕಲ್ಯಾಣವು ಬಾಗೇವಾಡಿಯಿಂದ ಉತ್ತರ ದಿಕ್ಕಿನ ನಾಡಿನಲ್ಲಿಯೂ, ಸಂಗಮವು ದಕ್ಷಿಣ ಭಾಗದಲ್ಲಿಯೂ ಇವೆಯಷ್ಟೇ. "ಬಸವೇಶ್ವರನ ಸೋದರ ಮಾವನಾದ ಬಲದೇವನು ಆಗ ಬಿಜ್ಜಳನ ಮಂತ್ರಿಯಾಗಿದ್ದನು. ಅವನು ಉಪವರಳಾದ ತನ್ನ ಮಗಳನ್ನು ಸಂಗಮದಲ್ಲಿರುವ ಬಸವೇಶ್ವರನಿಗೇ ಮದುವೆ ಮಾಡಿಕೊಡಬೇಕೆಂದು ನಿಶ್ಚಯಿಸಿ ಅವನಿದ್ದಲ್ಲಿಗೆ ಬಂದು ಈ ಸಂಗತಿಯನ್ನರುಹಿ ತಿರುಗಿ ಕಲ್ಯಾಣಕ್ಕೆ ಹೋದನು. ವಿವಾಹದ ಸಿದ್ಧತೆಯಾದ ಮೇಲೆ ಬಲದೇವನು ಪುನಃ ಸಂಗಮಕ್ಕೆ ಬಂದು ಬಸವೇಶ್ವರನನ್ನು ಕಲ್ಯಾಣಕ್ಕೆ ಕರೆದುಕೊಂಡು ಹೋಗಿ ಲಗ್ನ ಸಮಾರಂಭವನ್ನು ಮುಗಿಸಿದನು. ಆಮೇಲೆ ಬಸವೇಶ್ವರನು ಗಂಗಾಂಬಿಕೆಯೊಂದಿಗೆ ತಿರುಗಿ ಕಪ್ಪಡಿಗೆ ಬಂದನು. ಇಷ್ಟರಲ್ಲಿ ಬಲದೇವನು ಕಾಲವಾಗಲು ಬಿಜ್ಜಳನು ತನ್ನ ಜನರೊಂದಿಗೆ ವಿಚಾರಮಾಡಿ ಬಸವೇಶ್ವರನನ್ನೇ ಮಂತ್ರಿಪದಕ್ಕಾಗಿ ಕರೆಸಿಕೊಂಡನು." ಇಷ್ಟೆಲ್ಲಾ ಮುಗಿದರೂ ಬಸವೇಶ್ವರನ ತಾಯಿತಂದೆಗಳ ಸುಳಿವೇ ಇಲ್ಲ. ಬಸವೇಶ್ವರನು (ಹುನಗುಂದದ ಹತ್ತಿರ) ಸಂಗಮದಲ್ಲಿಯೇ ಇದ್ದನಷ್ಟೇ.

ಕಲ್ಯಾಣ ಮತ್ತು ಸಂಗಮಗಳ ಪ್ರವಾಸದಲ್ಲಿ ಬಾಗೇವಾಡಿಯು ಹೇಗೆ ಬರಲಿಲ್ಲವೋ ತಿಳಿಯದು. ಇಂತಹ ಮಹಾಕಾರ್ಯವನ್ನು ತಂಗಿಯು ನೆನಪಿಲ್ಲದೆ ಬಲದೇವನೂ, ತಂದೆತಾಯಿಗಳನ್ನು ಮರೆತು ಬಸವೇಶ್ವರನೂ ಹೇಗೆ ಜರುಗಿಸಿದನೋ ಆಶ್ಚರ್ಯ! ಅಂತು ಬಸವೇಶ್ವರನು ಬಾಗೇವಾಡಿಯಿಂದ ದಕ್ಷಿಣದಲ್ಲಿರಲಿಕ್ಕಿಲ್ಲವೆಂಬ ಶಂಕೆಗೆ ಆಸ್ಪದವುಂಟು.

(ಆ) ಹುನಗುಂದ ತಾಲೂಕಿನಲ್ಲಿರುವ ಸಂಗಮಕ್ಕೆ ಕಪ್ಪಡಿಸಂಗಮವೆಂದು ಈಗಲೂ ಹೇಳುತ್ತಾರೆ. ಬಸವೇಶ್ವರನು ಈಯೂರಿನ ಸಂಗಮೇಶ್ವರನಿಂದಲೇ ಉಪದೇಶ ಹೊಂದಿದ್ದುದಾದರೆ ತಾನು ತನ್ನ ಆವುದಾದರೊಂದು ಗ್ರಂಥದಲ್ಲಿ "ಸಂಗಮೇಶ್ವರ"ನೆಂದಾಗಲಿ, "ಕಪ್ಪಡಿ ಸಂಗಮೇಶ್ವರ"ನೆಂದಾಗಲಿ ತನ್ನ ಗುರುವನ್ನು ಸ್ತುತಿಸಬೇಕಾಗಿದ್ದಿತಷ್ಟೆ. ಆದರೆ ಬಸವೇಶ್ವರನು ಹಾಗೆ ಮಾಡದೆ ತನ್ನ ಷಟ್ಸ್ಥಲ ವಚನವನ್ನೂ ಶಿಖಾರತ್ನವಚನವನ್ನೂ "ಕೂಡಲಸಂಗಮದೇವರ" ಅಂಕಿತದಲ್ಲಿ ಬರೆದಿದ್ದಾನೆ. ಹಾಗಾದರೆ ಇಲ್ಲಿ "ಕೂಡಲ" ಎಂಬ ಶಬ್ದಕ್ಕೆ ಅರ್ಥವೇನು? 'ಕೂಡು' ಎಂಬ ಧಾತುವಿನಿಂದ ಹುಟ್ಟಿ "ಸಂಗಮ"ವೆಂಬ ಸಂಸ್ಕೃತ ಶಬ್ದಕ್ಕೆ ಸಮಾನಾರ್ಥವನ್ನು ಕೊಡುವದೆಂದು ಹೇಳೋಣವೇ? ಹೀಗಾದರೆ "ಕೂಡಲ ಸಂಗಮದೇವ" ಎಂಬುದಕ್ಕೆ 'ಎರಡು ನದಿಗಳು ಕೂಡುವ ಸ್ಥಳದಲ್ಲಿರುವ ಸಂಗಮೇಶ್ವರ ದೇವರು' ಎಂದು ಹೇಳಬೇಕಾಗುವದು. "ಸಂಗಮದೇವ" ಎಂಬ ಒಂದೇ ಪದದಿಂದ ಇಷ್ಟೆಲ್ಲಾ ಅರ್ಥವನ್ನು ಹೇಳಲಿಕ್ಕೆ ಸಾಧ್ಯವಿರಲು 'ಕೂಡಲ' ಎಂಬ ಮತ್ತೊಂದು ಶಬ್ದವನ್ನು ಸೇರಿಸಿ ದ್ರಾವಿಡೀ ಪ್ರಾಣಾಯಾಮವನ್ನನುಸರಿಸುವದೇಕೆ? ಆದುದರಿಂದ 'ಕೂಡಲ' ಎಂಬ ಶಬ್ದವನ್ನು ಅಂಕಿತನಾಮವನ್ನಾಗಿ ಮಾಡಿ "ಕೂಡಲವೆಂಬ ಊರಲ್ಲಿರುವ ಸಂಗಮೇಶ್ವರ"ನೆಂದು ಹೇಳುವುದು ಸಮಂಜಸವಾಗಿ ತೋರುತ್ತದೆ. ಹೀಗಾದರೆ ಕಪ್ಪಡಿಸಂಗಮದ ಗತಿಯೇನು? ಅದಕ್ಕೆ ಕೂಡಲವೆಂಬ ಹೆಸರಂತೂ ಇಲ್ಲವೇ ಇಲ್ಲ. ಇದನ್ನೆಲ್ಲ ಬಿಟ್ಟು, "ಬಸವೇಶ್ವರನು ಕಪ್ಪಡಿಸಂಗಮದೇವನಲ್ಲಿ ಉಪದೇಶಹೊಂದಿ ಇನ್ನಾವನೋ ಒಬ್ಬ ಕೂಡಲಸಂಗಮದೇವನ ಅಂಕಿತದಲ್ಲಿ ಗ್ರಂಥಗಳನ್ನು ಬರೆದನೆಂ"ದು ಹೇಳೋಣವೇ?

(ಇ) ಇನ್ನೇನು? "ನೆರೆನಂಬೊ ನೆರೆನಂಬೊ... ನಂಬಿದೆಯಾದೊಡೆ ತನ್ನನೀವ ಕೂಡಲಸಂಗಮದೇವ" ಎಂದು ಹೇಳಿದ ಬಸವೇಶ್ವರರ ಸೂತ್ರವನ್ನೇ ಹಿಡಿದು ಆ ಕೂಡಲಸಂಗಮದೇವರನ್ನೇ ನೆರೆನಂಬಿ ಹೊರಡೋಣ, ಭೀಮಾ ಸೀನಾ ನದಿಗಳು ಕೂಡುವ ಸ್ಥಳದಲ್ಲಿ 'ಕೂಡಲ'ವೆಂಬ ಊರು ಇದೆಯೆಂದು ಹಿಂದೆಯೇ ಹೇಳಿರುವೆನಷ್ಟೇ. ಆ ಊರಲ್ಲಿ ಸಂಗಮಸ್ಥಾನದಲ್ಲಿಯೇ ಸಂಗಮೇಶ್ವರ ದೇವಾಲಯವೂ ಇದೆ. ಆ ಗುಡಿಯಲ್ಲಿರುವ ಒಂದು ಶಿಲಾಶಾಸನದಲ್ಲಿ—

"ಸ್ವಸ್ತಿ" ಸಮಸ್ತ ಪ್ರಶಸ್ತಿ ಸಹಿತಂ ಸ್ವಸ್ತಿ "ಶ್ರೀ ಕಳಚೂರ್ಯ್ಯ ಪ್ರತಾಪ ಚಕ್ರವರ್ತ್ತಿರಾಯನಾರಾಯಣ (ಇವನು ಬಿಜ್ಜಳನ ಮಗನಾದ ರಾಯಮುರಾರಿ

ಸೋಮಿದೇವನ ಮಗನೆಂದು ತೋರುತ್ತದೆ). ದೇವವರಿಸಿದ ೧ನೆಯ ಹೇಮಳಂಬಿ ಸಂವತ್ಸರದ (ಈ ಕಾಲವು ಕ್ರಿಸ್ತಾಬ್ದ ೧೧೭೭ ಕ್ಕೆ ಸಮನ್ವಯಿಸುವಂತಿದೆ) ಚೈತ್ರ ಶುದ್ಧ ಪೂರ್ಣಿಮೆಯಾದಿವಾರ ಬೀತಪಾತ..... ... ವಿಜಯ ಕಲ್ಯಾಣದಲು ವೀರರಾಜ ಪಟ್ಟಮಂ ಬಿಟ್ಟಿಟ್ಟು (?) ಸುಖಸಂಕಥಾ ವಿನೋದದಿಂ ಗೆಯ್ಯುತ್ತಮಿರ್ಪ್ಪದರ ಪುಣ್ಯ ನಿಮಿತ್ತವಾಗಿ... ಶ್ರೀ ಕೂಡಲ ಸಂಗಮೇಶ್ವರ ದೇವರ್ಗ್ಗೆ ಧಾರಾಪೂರ್ವಕಂ... ಈ ಧರ್ಮಮಂ ಪಾಲಿಸಿದರು." ಎಂದು ಹೇಳಿದೆ. ಇದೊಂದರಿಂದ ಬಸವೇಶ್ವರನು ಈ ಕೂಡಲದಲ್ಲಿಯೇ ಸಂಗಮನಾಥನಿಂದ ಉಪದೇಶ ಹೊಂದಿದನೆಂದು ನಿಶ್ಚಯವಾಗಿ ಹೇಳಬಹುದು.

ಈ ಲೇಖಕನು ತನ್ನ ಅತ್ಯಲ್ಪ ಬುದ್ಧಿಗೆ ಹೊಳೆದಿರುವಷ್ಟನ್ನು ನಿವೇದಿಸಿದ್ದಾನೆ. ಆದರೆ ವೀರಶೈವ ಧರ್ಮಾಭಿಮಾನಿಗಳೂ ಕರ್ನಾಟಕದ ಇತಿಹಾಸ ಸಂಶೋಧಕರೂ ಈ ವಿಷಯವನ್ನು ಕುರಿತು ಹೆಚ್ಚು ಶೋಧ ಮಾಡುವುದು ಈಗಿನ ಕಾಲದಲ್ಲಿ ಅತ್ಯಾವಶ್ಯಕ.

ಧನ್ಯವಾಗಲಿ ನಮ್ಮ ಹಿರಿಯ ಕನ್ನಡ ನಾಡು.

(ಜ. ಕ. ೨-೧ ನವಂಬರ ೧೯೨೩)

## ಹೂಲಿಯ ಪಂಚವಣ್ಣಿಗೆ ಮಠವು

(ವೀರಶೈವ ಧರ್ಮದ ಪ್ರಾಚೀನತೆಯ ಬಗ್ಗೆ ಹೊಸ ಶೋಧಗಳು)

---

ಹೂಲಿಯ ಮಠದ ಹಳೇ ಕಾಗದ ಪತ್ರಗಳು ಸಿಕ್ಕಿರದಿದ್ದರೆ ಅಲ್ಲಿಯ ಶಿಲಾಲಿಪಿಗಳಿಗೆ ಮಹತ್ವ ಬರುವ ಹಾಗಿರಲಿಲ್ಲ. ಇಂದಿಗೆ ಶೋಧಿಸಲ್ಪಟ್ಟಿರುವ ಹತ್ತಿಪ್ಪತ್ತು ಸಾವಿರ ಶಿಲಾಲಿಪಿಗಳಿಂದ ವೀರಶೈವ ಧರ್ಮಕ್ಕೆ ಇನ್ನೆಷ್ಟು ಲಾಭವೋ, ಅಷ್ಟೇ ಈ ಲಿಪಿಗಳಿಂದಲೂ ಸರಿ.

ಹೀಗೆಯೇ ಅಲ್ಲಿಯ ಶಿಲಾಲಿಪಿಗಳು ಸಿಕ್ಕಿರದಿದ್ದರೆ ಮಠದ ಕಾಗದ ಪತ್ರಗಳಿಗೂ ಐತಿಹಾಸಿಕ ದೃಷ್ಟಿಯಿಂದ ಬೆಲೆಯಿರಲಿಲ್ಲ. ಇದೇ ಕಾರಣದಿಂದ ಇಂದಿಗೆ ಎಷ್ಟೋ ಮಠಮಾನ್ಯಗಳ ರಿಕಾರ್ಡುಗಳು ನಿರಾಧಾರವೆಂದು ಐತಿಹಾಸಿಕರಿಂದ ನಿರಾಕರಿಸಲ್ಪಡುತ್ತವೆ. ಇದಿರಲಿ.

ಹೂಲಿಯು ಬೆಳಗಾವ ಜಿಲ್ಲೆಯಲ್ಲಿ ಸವದತ್ತಿಯಿಂದ ಐದು ಮೈಲು ದೂರದಲ್ಲಿದೆ. ಇತಿಹಾಸ ಸಂಶೋಧಕರಿಗೆ ಇಲ್ಲಿ ತುಂಬಾ ಅನ್ನವಿದೆ. ಸಂಶೋಧಕರೆಂಬವರು ಒಮ್ಮೆಯಾದರೂ ಹೂಲಿಯನ್ನು ಕಾಣುವದು ಅತ್ಯಾವಶ್ಯಕ, ಇದು ಭಾವುಕರಿಗೆ ಪುಣ್ಯಕ್ಷೇತ್ರವಾಗಿದೆ. ಕವಿಗಳಿಗೆ ಸೊಬಗಿನ ಸುಗ್ಗಿಯಾಗಿದೆ. ಬೇಕಾದವರು ಕಂಡುಂಡು ತಣಿಯಲಿ.

ಹೂಲಿಯಿಂಥಾದ್ದೆಂದು ಇದು ಮೊದಲು ನಮಗೆ ಗೊತ್ತಿದ್ದಿಲ್ಲ. ಏನೋ ಶಿಲಾಲಿಪಿಗಳ ಆಗರವೆಂದು ಮಾತ್ರ ಕೇಳಿದ್ದೆವು. ಇದೊಂದೇ ಕಾರಣದಿಂದ ಅಲ್ಲಿಗೆ ಹೋಗಿ ಬರಬೇಕೆಂದು ಬಲುದಿನದ ಬಯಕೆಯಿತ್ತು. ಅಲ್ಲದೆ ಅಲ್ಲಿಯ ಸಂಶೋಧಕರೂ, ಜೋತಿಷಿಗಳೂ ಆದ ಸಿದ್ಧಾಂತಿ ಶ್ರೀ ಶಿವಬಸಯ್ಯನವರಿಗೂ ನಮ್ಮ ಗುಂಪಿನ ಗೆಳೆಯರೊಬ್ಬರಿಗೂ ಈ ಮೊದಲೆ ಪರಿಚಯವು ಬೆಳೆದು ಬಂದಿತ್ತು. ಇವೆಲ್ಲ ಕಾರಣಗಳಿಂದ ಅಲ್ಲಿಗೊಮ್ಮೆ ಹೋಗಬೇಕಾಗಿದ್ದಿತು. ಮನಸ್ಸಿನಲ್ಲಿದ್ದಂತೆ ಮೊನ್ನೆ ನಮ್ಮ ಗುಂಪಿನ ಇಬ್ಬರು ಗೆಳೆಯರು (ರಾಮಚಂದ್ರ ಬೆಳಗಾಂವಕರ ಬಿ. ಎ. ಹಾಗೂ ಹಲಸಂಗಿಯ ಚೆನ್ನಮಲ್ಲ) ಕೂಡಿ ಅಲ್ಲಿಗೆ ಹೋದೆವು. ಅಲ್ಲಿಯ ಶಿಲಾಲಿಪಿಗಳ ವಿಷಯವನ್ನು ಹೇಳುವ ಮೊದಲು ಅಲ್ಲಿಯ ಹಿರೇಮಠದ ಬಗ್ಗೆ ಒಂದೆರಡು ಮಾತುಗಳನ್ನು ಹೇಳದಿರಲಿಕ್ಕೆ ಮನವೊಪ್ಪದು.

ಹೂಲಿಯ ಹಿರೇಮಠವು ಪುರಾತನ ಪುಣ್ಯ ಕೀರ್ತಿಯುಳ್ಳದು. ಈ ಮಠದ ಮೊಟ್ಟ ಮೊದಲಿನ ಪಟ್ಟದದೇವರು ಶಿವಪ್ರಸಾದದಿಂದ ಕಾಂಚಿಯಲ್ಲಿ ಜನ್ಮವೆತ್ತಿ, ಸಹ್ಯಾದ್ರಿಯ ಪೂರ್ವ ಶಾಖೆಯಾದ ಸಿದ್ಧಾಚಲದ ತಡಿಯಲ್ಲಿರುವ ಈ ಪೂವಲ್ಲಿ (ಹೂಲಿ)ಯಲ್ಲಿ ತಪೋನಿರತರಾಗಿ ಸಿದ್ಧ (Perfected by yoga) ಪದಕ್ಕೇರಿ "ಪರವಿ ಪುರುಷ"ರೆಂದು ಪ್ರಖ್ಯಾತರಾದರು. ಇವರ ಹೆಸರು ಶ್ರೀ ಸಿದ್ಧಚೈತನ್ಯ ಶಿವಾಚಾರ್ಯರು. ಇವರು ಪಂಚವರ್ಣ ಮಹಾಸೂತ್ರಕ್ಕೆ ಭಾಷ್ಯವನ್ನು ಬರೆದಿರುವರಂತೆ.* ಅಂತೆಯೇ ಇವರ ಮಠಕ್ಕೆ ಪಂಚವರ್ಣ್ಣಗಿಯ ಮಠವೆಂದು ಹೆಸರು ಬಂದಿರಬೇಕು. ಅಥವಾ ಕಾಶೀ ಸಿಂಹಾಸನದ ಪಂಚವರ್ಣ ಮಹಾಸೂತ್ರಕ್ಕೆ ಸೇರಿದ್ದೆಂದು ಈ ಹೆಸರು ಬಿದ್ದಿರಲೂ ಬಹುದು. ಆದರೆ ೧೬ ನೆಯ ಪಟ್ಟದ್ದೇವರನ್ನು ಸ್ತುತಿಸುವಾಗ ಒಂದು ಲೇಖ† "ಪಂಚವರ್ಣ ಮಹಾಸೂತ್ರ ಸಂಪ್ರದಾಯ ಪ್ರವರ್ತಕ", ಎಂದು ಹೇಳಿರುವದರಿಂದ ಕೊನೆಯ ಮಾತೇ ಬಲವಾಗುವಂತಿದೆ. ಈ ಸಿದ್ಧಚೈತನ್ಯರು ಇಂದಿಗೆ ಎರಡು ಸಾವಿರದ ಎರಡು ನೂರಾ ಹತ್ತೊಂಬತ್ತು ವರ್ಷಗಳ ಹಿಂದೆ ಪಟ್ಟಾಧಿಕಾರಿಗಳಾಗಿ ೧೫೧ ವರ್ಷ ಅಧಿಕಾರ ನಡೆಸಿದರೆಂದು ಮಠದ ಪಟ್ಟಾವಳಿಯಿಂದ ಗೊತ್ತಾಗುವದು. ಇವರು ದಿವ್ಯಯೋಗ ಬಲದಿಂದ ಇಷ್ಟುಕಾಲ ಜೀವಿಸಿದ್ದು ಆಶ್ಚರ್ಯವಲ್ಲ. ಇದಿರಲಿ, ಶ್ರೀ ಸಿದ್ಧಚೈತನ್ಯ ಶಿವಾಚಾರ್ಯರು ಬ್ರಹ್ಮಸೂತ್ರಗಳಿಗೆ ವೃತ್ತಿಯನ್ನು ಬರೆದಿರುವ

---

* ಈ ಮಠದ ಪಟ್ಟಾವಳಿಯ ಪ್ರತಿಗಳು ಮೂರಿವೆಯಂತೆ. ನಮಗೆ ಮಾತ್ರ ೬೦ ವರ್ಷಗಳ ಹಿಂದೆ ಬರೆದ ಒಂದೇ ಪ್ರತಿಯು ನೋಡಲಿಕ್ಕೆ ಸಿಕ್ಕಿತು. ಇನ್ನುಳಿದ ಎರಡು ಪ್ರತಿಗಳು ಕಾರಣಾಂತರದಿಂದ ಬೇರೂರಲ್ಲಿ ಉಳಿದಿವೆಯೆಂತಲೂ ಅವುಗಳಲ್ಲೊಂದರಲ್ಲಿ: ಆಯಾ ಸ್ವಾಮಿಗಳು ಬರೆದ ಗ್ರಂಥಗಳ ನಾಮ ನಿರ್ದೇಶವಿದೆಯೆಂದೂ ಶ್ರೀ ಸಿದ್ಧಾಂತಿ ಶಿವಬಸಯ್ಯ-ನವರು ಹೇಳಿದರು. ಈ ಪ್ರತಿಗಳು ನಮ್ಮ ಕೈಗೆ ಸಿಕ್ಕಮೇಲೆ ಶಿವಾನುಭವ ವಾಚಕರಿಗೆ ಹೆಚ್ಚಿನ ವಿಷಯಗಳನ್ನೆಲ್ಲ ವಿವರವಾಗಿ ತಿಳಿಸುವ ಇಚ್ಛೆಯಿಂದೆ.

† ನಾವು ನೋಡಿದ ಪಟ್ಟಾವಳಿಯ ಕೋರಿಕಾಗದದ ಹೊತ್ತಿಗೆಯಲ್ಲಿ ಕೊನೆಗೆ ಒಂದು ಶಿಲಾಲೇಖದ ನಕಲು ಇದೆ. "ಶಿಲಾಲೇಖಾದುದ್ಧೃತ್ಯಲಿಖಿತಮಿದಂ ತಾಲಪತ್ರಂ" ಎಂದು ಹೇಳಿ ಮುಂದೆ ಬರೆಯುತ್ತ ಹೋಗಿದ್ದಾರೆ. ನಮಗೆ ಮೂಲ ಶಿಲಾಲಿಪಿಯು ಸಿಕ್ಕಲಿಲ್ಲ. ಇದರಲ್ಲಿ ೧೬ ನೆಯ ಪಟ್ಟದ್ದೇವರಾದ ಶ್ರೀ ಸಿದ್ಧೇಶ್ವರ ಶಿವಾಚಾರ್ಯರಿಗೆ ಪುಲಿಕೇಶಿಯ ಮಾಂಡಲೀಕನಾದ ವೀರವರ್ಮನೆಂಬ ರಟ್ಟರಾಜನು ೫೪೬ ನೇ ಶಕದ ತಾರಣ ಸಂವತ್ಸರದ ಶ್ರಾವಣ ಬಹುಳಾಷ್ಟಮಿ ಗುರುವಾರದಲ್ಲಿ ಒಂಬತ್ತು ಊರುಗಳನ್ನು ಉಂಬಳಿಯಾಗಿಕೊಟ್ಟ ಹಾಗೆಯೂ ಹೇಳಿದೆ. ಆ ಸ್ವಾಮಿಗಳಿಂದ ಅವನು ಶಿವದೀಕ್ಷೆ ಹೊಂದಿದ ಹಾಗೆಯೂ ಹೇಳಿದೆ. ಆದರೆ ಪುಲಿಕೇಶಿಯ ಬಿರುದಾವಳಿಯ ರೀತಿಯನ್ನು ನೋಡಿದರೆ (ಶ್ರೀ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀ-ವಲ್ಲಭ ಮಹಾರಾಜಾಧಿರಾಜ ಪರಮ ಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಭಾರತ ಸಾರ್ವಭೌಮ ಇತ್ಯಾದಿ) ೫೪೬ ನೇ ಶಕದ ಮೂಲ ಲೇಖದ ಯಥಾಯಥ ನಕಲಾಗಿರದೆ ಕ್ರಿಸ್ತೀಯ ೧೧-೧೨ ನೇ ಶತಮಾನದ ನಂತರ ತಿದ್ದಿ ಬೆಳೆಸಿದ ಹಾಗೆ ತೋರುತ್ತದೆ.

ರೆಂದು ಇದೇ ಮಠದ ಪ್ರಾಚೀನ ಸ್ವಾಮಿಗಳಲೊಬ್ಬರಾದ ಶ್ರೀ ಶಿವಾನುಭವ ಶಿವಾಚಾರ್ಯರು ತಮ್ಮ ಶಿವಾದ್ವೈತ ದರ್ಪಣದಲ್ಲಿ ಹೇಳಿದ್ದಾರೆ.*

ಶ್ರೀ ಸಿದ್ಧಚೈತನ್ಯರಿಂದಿತ್ತ ಸ್ಥಿರಪಟ್ಟದ ಮೇಲೆ ೫೦ ಮಂದಿ ಸ್ವಾಮಿಗಳೂ, ಚರಪಟ್ಟದ ಮೇಲೆ ೪೩ ಮಂದಿ ಸ್ವಾಮಿಗಳೂ ಬಂದಿದ್ದಾರೆ. ಈಗಿನ ಪಟ್ಟದ್ದೇವರು, ೫೧ ನೆಯವರು; ಚರಮೂರ್ತಿಗಳು ೪೪ ನೆಯವರು. ಪೂರ್ವಿಕರ ಪುಣ್ಯಾಂಶವು ಇಂದಿಗೂ ಸರಿದಿಲ್ಲ. ಇದೀಗ ಚರಪಟ್ಟವನ್ನಲಂಕರಿಸುವವರು ಶ್ರೀ ಶ್ರೀ ನೀಲಕಂಠ ಶಿವಾಚಾರ್ಯರು. ಇವರು ತುಂಬಾ "ವಿನೀತ ವಿದಗ್ಧ"ರು; "ಎಲ್ಲ ಬಲ್ಲವರು." "ಸರ್ವತ್ರ ಸಮದರ್ಶಿ"ಗಳು, ಕಾಶಿಯಲ್ಲಿ ವಿದ್ಯಾಭ್ಯಾಸಂಗ ಮಾಡಿದವರು; ಅನೇಕ ಬಿರುದಿನ ಉಪಾಧಿಗಳನ್ನು ಪಡೆದ ಬಹುಶ್ರುತರು. ಹಿಂದೆ ಬೆಳಗಾಂವಿಯ ಹಿಂದೂ ಮಹಾಸಭೆಗೆ ಸ್ವಾಗತಾಧ್ಯಕ್ಷರಾಗಿದ್ದರು. ಶ್ರೀಗಳು ತುಂಬಾ ಬಹುಶ್ರುತರಾದ್ದರಿಂದ ಅವರ ಸನ್ನಿಧಿಯಲ್ಲಿ ಕಳೆದ ಒಂದೆರಡು ದಿನಗಳು ತುಂಬ ಮೋಜಿನವು. ಅವರ ಮಾತಿನಲ್ಲಿ ನಿಷ್ಠುರ ಕರ್ಮಠತನದ ಕಠೋರ ಕಾಠಿಣ್ಯವೂ ಇಲ್ಲ. ನಿರ್ಬೀಜ ಪ್ರಳಾಪಗಾರಿಕೆಯ ನಿಸ್ಸಾರ ಶಿಥಿಲತೆಯೂ ಇಲ್ಲ. ತುಂಬಾ ರಸಾಳವಾಣಿ; ಉಪಯುಕ್ತ ವಿಷಯ. ಶ್ರೀಗಳ ತಮ್ಮಂದಿರೆ ಪಟ್ಟದ್ದೇವರು; ಅಣ್ಣಂದಿರು ಜ್ಯೋತಿಷಿಗಳು. ಅಣ್ಣಂದಿರ ವಯಸ್ಸು ೪೫ ವರ್ಷ, ಇವರು ತುಂಬಾ ಸಾಹಸಿಗರು. ಕೈಕಟ್ಟಿಕೊಂಡು ಕುಳಿತು ಕಾಲ ಕಳೆಯುವದು ಇವರಿಗೆ ಎಷ್ಟೂ ಸೇರದು. ಯಾವಾಗಲೂ ಕೈಯಲ್ಲಿ ಏನಾದರೊಂದು ಕೆಲಸವಿದ್ದೇ ತೀರಬೇಕು. ಶ್ರೀಗಳೂ ಶಿವಬಸಯ್ಯನವರೂ ರಥಿ ಸಾರಥಿಗಳಂತಿದ್ದಾರೆ. ಅವರ ಸುಜ್ಞಾನ ಇವರ ಸಾಹಸ ಎರಡೂ ಸೇರಿ ತುಂಬಾ ಒಳಿತಾಗಿದೆ, ಆದ್ದರಿಂದಲೇ ಈ ಮಠದಿಂದ ಪಾಠಶಾಲೆ, ವಾಚನಾಲಯ, ಪಂಚಾಂಗ, ಗ್ರಂಥಪ್ರಚಾರ ಮುಂತಾದ ಎಷ್ಟೋ ಮಹತ್ವದ ಕಾರ್ಯಗಳು ಜರುಗುತ್ತಿವೆ. ಅಲ್ಲದೆ ಶ್ರೀ ಶಿವಬಸಯ್ಯನವರು ಸ್ವಪ್ರಯತ್ನದಿಂದ ಶಿಲಾಲಿಪಿಗಳನ್ನೋದುವದಕ್ಕೆ ಕಲಿತಿದ್ದಾರೆ. ಅಲ್ಲಿಯ ಸಂದಿಗೊಂದಿಯೊಳಗಿನ ಲಿಪಿಗಳನ್ನೆಲ್ಲಾ ಓದಿ :ಸಂಗ್ರಹಿಸಿದ್ದಾರೆ. ಅಲ್ಲದೆ ಹಾಳಾಗಿ ಹೋಗುತ್ತಿದ್ದ ಎಷ್ಟೋ ಲಿಪಿಗಳನ್ನು ಸರಕಾರದವರ ಸಹಾಯದಿಂದ ಭದ್ರವಾಗಿಡಿಸಿದ್ದಾರೆ. ಇಷ್ಟೊಂದು ಕಷ್ಟಪಟ್ಟು ಪ್ರಯತ್ನಿಸುವವರಿಗೆ ನಮ್ಮವರ ಸಹಾಯವೆಂದರೆ ದೊಡ್ಡ ಶೂನ್ಯ. ನಮ್ಮವರಿಗೆ ಗೊತ್ತಿದ್ದ ಮಾತೆಂದರೆ ಒಂದೇ ಒಂದು. ಅದೇನೆಂಬಿರಾ ? ಸಾಯುವವರೆಗೆ ಕಣ್ಣೆತ್ತಿಯೂ ನೋಡದೆ, ಸತ್ತಮೇಲೆ ಎತ್ತಿಕೊಂಡು ಅಳುವುದು ನಮ್ಮವರ ರೂಢಿ. ಇರುವವರೆಗೆ ಕೈಮೇಲೆ ನೀರು ಸಹ ಹನಿಸದೆ, ಸತ್ತಮೇಲೆ— "ಕರ್ನಾಟಕದ್ದೊಂದು ರತ್ನವು ಕಳಚಿ

* ಈ ಗ್ರಂಥದ ಹೊತ್ತಿಗೆ ಮಠದಲ್ಲಿದೆ. ವ್ಯಾಸರ ಮೂಲ ಬ್ರಹ್ಮಸೂತ್ರಗಳನ್ನೂ, ಸಿದ್ಧಚೈತನ್ಯರ ಚೈತನ್ಯ ವೃತ್ತಿಯನ್ನೂ, ನೀಲಕಂಠ ಶಿವಾಚಾರ್ಯರ ಭಾಷ್ಯವನ್ನು ಮಥಿಸಿ ಈ ಗ್ರಂಥವನ್ನು ಬರೆದಂತೆ ಗ್ರಂಥಕಾರರು ಹೇಳಿದ್ದಾರೆ.

ಹೋಯಿತು" ಎಂದು ವರ್ತಮಾನ ಪತ್ರದಲ್ಲಿ ಕೂಗಿಕೊಳ್ಳುವದಕ್ಕೆ ಮಾತ್ರ ನಮ್ಮವರು ತುಂಬಾ ಶೂರರು, ಸತ್ತಮೇಲೆ ದುಃಖಪ್ರದರ್ಶನ ಮಾಡುವರಂತೆ ! ಇರುವವರೆಗೆ ಅಂಥವರು ಕಷ್ಟಬಟ್ಟು ತೊಳಲಿ ಬಳಲಿ ದುಃಖಿಸಿ ಜೀವ ಕಳಕೊಳ್ಳಬೇಕು. ಆಮೇಲೆ ಇವರು ಉಂಡು ತಿಂದು ವಾದ್ಯ ಘೋಷದೊಡನೆ ದನಿಗೂಡಿಸಿ ದುಃಖಪ್ರದರ್ಶನ ಮಾಡುವದಕ್ಕೆ ಹೊರಟು ತಮ್ಮ ವ್ಯಾಖ್ಯಾನ ಶಕ್ತಿಯ ಹೆಮ್ಮೆಯನ್ನೂ ಹೊರಸೂಸಬೇಕು !!! ಒಳ್ಳೇ ನ್ಯಾಯ. ಬಹಳವೆಂದರೆ ಸತ್ತವನ ಹೆಸರಿನಿಂದ ಚಿತ್ರವನ್ನೋ ಗೊಂಬೆಯನ್ನೋ ನಿಲ್ಲಿಸಿ, ಸ್ಮಾರಕವೆಂದು ಸಮಾಧಿಯೆಂದು ಕೈಮುಗಿದರೆ ತೀರಿತು, ಕೃತಾರ್ಥರಾದರು. ಇಂಥ ಧರ್ಮಾಭಿಮಾನಿಗಳಿಗೆ ಏನು ಕೊರತೆ ? ಇದಿರಲಿ.

ಶ್ರೀಗಳೂ ಸಿದ್ಧಾಂತಿಗಳೂ ನಮಗೆ ತುಂಬಾ ನೆರವು ಕೊಟ್ಟರು. ಶ್ರೀ ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ ಪೂರ್ವದ ಸ್ವಾಮಿಗಳು ಬರೆದ ಪ್ರಾಚೀನ ಗ್ರಂಥಾದಿಗಳ ವಿಷಯವನ್ನು ಹೇಳಿಕೊಟ್ಟರು, ಇದ್ದ ಕೆಲವು ಗ್ರಂಥಗಳನ್ನು ತೋರಿಸಿದರು, ತಕ್ಕಷ್ಟು ಓದಿಯೂ ಹೇಳಿದರು. ಇವುಗಳಲ್ಲೊಂದು ವೈಶೇಷಿಕ ದರ್ಶನದ ಮೇಲೆ ಬರೆದ ಪ್ರಕರಣ ಗ್ರಂಥ. ಇದು ಸಾವಿರ ವರ್ಷಗಳ ಹಿಂದೆ ಚರಪಟ್ಟಕ್ಕೆ ಬಂದ ಮೊಟ್ಟಮೊದಲನೆಯ ಚರಮೂರ್ತಿಗಳಾದ ಶಿವಾದಿತ್ಯ ಶಿವಾಚಾರ್ಯರು ಅಥವಾ ವ್ಯೋಮಶಿವಾಚಾರ್ಯರು ಬರೆದದ್ದು. ಇವರೇ ಬರೆದ ವ್ಯೋಮವತಿ ಭಾಷ್ಯವೆಂಬುದೊಂದು ಗ್ರಂಥವು ವೈಶೇಷಿಕ ದರ್ಶನದ ಮೇಲಿದೆಯೆಂದೂ, ಅದು ತಮ್ಮಲ್ಲಿ ಉಪಲಬ್ಧವಿದೆಯೆಂದೂ ಹೇಳಿದರು. ಅಲ್ಲದೆ ಚರಪಟ್ಟದ ಮೇಲಿನವರೊಬ್ಬರಾದ ಶ್ರೀ ಶಿವಾನುಭವ ಶಿವಾಚಾರ್ಯರೆಂಬ ಪ್ರಾಚೀನಾಚಾರ್ಯರು– ಬ್ರಹ್ಮಸೂತ್ರ, ಚೈತನ್ಯವೃತ್ತಿ, ನೀಲಕಂಠ ಭಾಷ್ಯಗಳನ್ನು ಮಥಿಸಿ ಬರೆದ ಶಿವಾದ್ವೈತ ದರ್ಪಣವೆಂಬ ಗ್ರಂಥವ ಆದಿಭಾಗವನ್ನು ಓದಿ ಹೇಳಿದರು. ಈ ಗ್ರಂಥವ ಆದಿಯಲ್ಲಿ ಆಚಾರ್ಯರು ವ್ಯಾಸಮಹರ್ಷಿಗಳನ್ನೂ, ಪೂರ್ವಲ್ಲೀ ಸಿದ್ಧ ಚೈತನ್ಯರನ್ನೂ, ನೀಲಕಂಠ ಶಿವಾಚಾರ್ಯರನ್ನೂ ಹತ್ತಿಪ್ಪತ್ತು ಶ್ಲೋಕಗಳಿಂದ ಸ್ತುತಿಸಿದ ಬಳಿಕ ತಮ್ಮ ಹಿಂದಿನ ಗುರುಪರಂಪರೆಯನ್ನು ಹೇಳಿಕೊಂಡಿದ್ದಾರೆ.* "ಅಥಾತೋ ಬ್ರಹ್ಮ ಜಿಜ್ಞಾಸಾ"

---

* ಈ ಶಿವಾನುಭವ ಶಿವಾಚಾರ್ಯರು ಹೇಳಿಕೊಂಡಿರುವ ತಮ್ಮ ಹಿಂದಿನ ಗುರುಪರಂಪರೆಯಲ್ಲಿ ನಾಲ್ಕೈದು ಮಾತ್ರವೇನೋ ಹೆಸರುಗಳಿವೆ. ಆಗ ನಮಗೆ ಟಿಪ್ಪಣಿ ಮಾಡಿಕೊಳ್ಳುವದಕ್ಕೆ ಮರವೆಯಾಯಿತು. ಆದರೂ ಶಿವಾನುಭವ ಶಿವಾಚಾರ್ಯರೆಂಬ ಹೆಸರಿನ ಸ್ವಾಮಿಗಳಾದವರೇ ಇಬ್ಬರು. ಚರಪಟ್ಟದಲ್ಲಿ ಆರನೆಯವರೊಬ್ಬರು, ಹತ್ತೊಂಬತ್ತನೆಯವರೊಬ್ಬರು. ಒಬ್ಬರು ಶಾಲಿವಾಹನಶಕದ ಮೂರನೇ ಶತಮಾನದಲ್ಲಿದ್ದರು. ಇನ್ನೊಬ್ಬರು ಶಾಲಿವಾಹನಶಕದಒಂಬತ್ತನೇ ಶತಮಾನದಲ್ಲಿದ್ದರು. ಒಟ್ಟಿಗೆ ಶ್ರೀ ಬಸವಣ್ಣನವರಿಗಿಂತ ಪ್ರಾಚೀನರು. ಸದ್ಯಕ್ಕೆ ಅಲ್ಲಿಯ ಸ್ವಾಮಿಗಳು ಈ (ಶಿವಾದ್ವೈತ ದರ್ಪಣವೆಂಬ) ಗ್ರಂಥವನ್ನು ಅಚ್ಚುಗೊಳಿಸಲಿಕ್ಕಿರುವರು.

→

ಎಂಬ ಪ್ರಥಮ ಸೂತ್ರವನ್ನು ಕುರಿತು ಹೇಳುವಾಗ "ಅತಃ" ಎಂಬ ಪದಕ್ಕೆ "ಅಷ್ಟಾವರಣನಿಷ್ಠನೂ ಪಂಚಾಚಾರ ಪರಾಯಣನೂ ಆದ ಮೇಲೆ" ಎಂದು ವಿವರಣೆಯನ್ನು ಹೇಳಿ, ಮುಂದೆ ಬ್ರಹ್ಮನ ಲಕ್ಷಣವನ್ನು ಹೇಳತೊಡಗಿದ್ದಾರೆ. ಇದನ್ನು ನೋಡಿದರೆ ಇದು ಕೇವಲ ವೀರಶೈವ ಗ್ರಂಥವೆಂಬುದಕ್ಕೆ ಸಂದೇಹವಿಲ್ಲ.

ಸಿದ್ಧಾಂತಿ ಶ್ರೀ ಶಿವಬಸಯ್ಯನವರು ನಮ್ಮನ್ನು ಜೊತೆಯಲ್ಲಿ ಕರೆದುಕೊಂಡು ಎಲ್ಲಾ ಕಡೆಗೆ ಅಡ್ಡಾಡಿ ಮಹತ್ವದ ಸ್ಥಾನಗಳನ್ನೂ, ಶಿಲಾಲಿಪಿಗಳನ್ನೂ, ಗುಡಿಗುಂಡಾರಗಳನ್ನೂ ಶ್ರಮವಹಿಸಿ ತೋರಿಸಿದರು.

ಹೂಲಿಯು ಪೂರ್ವಕಾಲದಲ್ಲಿ ಒಳ್ಳೇ ದೊಡ್ಡ ಪಟ್ಟಣವೂ ಪುಣ್ಯಕ್ಷೇತ್ರವೂ ಆಗಿದ್ದಿತು. ಸುಮಾರು ಕ್ರಿಸ್ತೀಯ ಹತ್ತು ಹನ್ನೊಂದನೆಯ ಶತಮಾನಗಳಲ್ಲಿ ಕಟ್ಟಿಸಿದ ಹಳೇ ಗುಡಿಗಳು ಅನೇಕವಾಗಿವೆ. ಈವೂರು ಗುಡ್ಡದ ಅಡಿಯಲ್ಲಿ ಕೊಳ್ಳದ ಬದಿಯಲ್ಲಿ ಇರುವುದರಿಂದ ತುಂಬಾ ಮನೋಹರವಾಗಿದೆ. ಊರ ಬಡಗಲ ಬದಿಗೆ ಹೊಂದಿ ಗುಡ್ಡದ ಬುಡವಿಡಿದು ಗುಡಿಗಳ ಗುಂಪಿದೆ. ಇಲ್ಲಿಯಿಂದ ಪಶ್ಚಿಮಕ್ಕೆ ಒಂದೆರಡು ಫರ್ಲಾಂಗಿನ ಮೇಲೆ ಕೊಳ್ಳದ ಕಡಿವಾಡಿಯಲ್ಲೊಂದು ಗುಡಿಯಿದೆ. ಅದರ ಬಳಿ ನಾಲ್ಕು ಮೂಲೆಗೆ ನಾಲ್ಕು ಲಿಂಗಮುದ್ರೆಯ ಕಲ್ಲುಗಳಿರುವದರಿಂದ ಅದೊಂದು ಮಠವೆಂಬುದರಲ್ಲಿ ಸಂಶಯವಿಲ್ಲ. ಕಟ್ಟಡವೂ ಹೊಸ ಕಾಲದ್ದಲ್ಲ, ಹಿಂದಿನದು. ಮುಂದೆ ಮಂಟಪ, ಹಿಂದೆ ಚಿಕ್ಕ ಗರ್ಭಗುಡಿ, ಗರ್ಭಗುಡಿಯು ಮೂಲತಃ ಕಲ್ಲಲ್ಲಿ ಸ್ವಾಭಾವಿಕವಾಗಿ ಪೊಳ್ಳುಗೊಂಡದ್ದೊಂದು ಚಿಕ್ಕ ಗವಿ. ಇದಕ್ಕೆ ಸಾಮಾನ್ಯ ಜನರು ಕೊಳ್ಳಸಿದ್ದಪ್ಪನ ಗುಡಿಯೆನ್ನುವರು, ಆದರೆ ಮಠದ ಸ್ವಾಮಿಗಳು ಸಿದ್ಧನಂಜೇಶ್ವರರ ತಪೋಭೂಮಿಯೆಂದು ಹೇಳುವರು. ಆದರೆ ಯಾವ ಕಾಲದಲ್ಲಾದ ಸಿದ್ಧನಂಜೇಶ್ವರರೋ ಏನೋ ತಿಳಿಯದು. ಯಾಕೆಂದರೆ ಈ ಮಠದ ಪಟ್ಟಾವಳಿ

---

→ ಇನ್ನೊಮ್ಮೆ ನಾವು ಈ ಶಿವಾನುಭವ ಶಿವಾಚಾರ್ಯರು (ಇಬ್ಬರಲ್ಲಿ) ಯಾರೆಂಬುದನ್ನು ವಿಚಾರ ಮಾಡಿ ಮುಂದೆ ಬರೆಯಬಹುದು. ಇದಿರಲಿ, ಇವರೇ ನೀಲಕಂಠ ಶಿವಾಚಾರ್ಯರ ಭಾಷ್ಯವನ್ನು ಆಧಾರವಾಗಿಟ್ಟುಕೊಂಡಂತೆ ಹೇಳುವರು. ಇದುವರೆಗೆ— ಭಾಷ್ಯಕಾರರಾದ ನೀಲಕಂಠ ಶಿವಾಚಾರ್ಯರ ವಿಷಯಕ್ಕೆ ಹೆಚ್ಚಿನ ಸಂಗತಿಗಳು ತಿಳಿದಿಲ್ಲ. ಅವರಿಗೆ ಹರದತ್ತನೆಂಬ ಶಿಷ್ಯನಿದ್ದ ಹಾಗೇನೋ ತಿಳಿದು ಬಂದ ಹಾಗಿದೆ. ಆದರೆ ಈ ಮಠದ ಪಟ್ಟಾವಳಿಯಲ್ಲಿ ಸ್ಥಿರಪಟ್ಟದಲ್ಲಿ ೧೦ನೆಯವರು ನೀಲಕಂಠ ಶಿವಾಚಾರ್ಯರೆಂಬವರಿದ್ದಾರೆ. ಈ ಗುರುಶಿಷ್ಯರ ನಾಮಸಾದೃಶ್ಯದ ಮಟ್ಟಿಗೆ ನೋಡಿದರೆ ಭಾಷ್ಯಕಾರರಾದ ನೀಲಕಂಠ ಶಿವಾಚಾರ್ಯರು ಇವರೇ ಆಗಿರಬಹುದೋ ಏನೋ ಎಂಬ ವಿಚಾರಕ್ಕೆ ಅವಕಾಶವಿದೆ. ತಾಳೋಲೆಯ ಒಂದು ಪಟ್ಟಾವಳಿಯಲ್ಲಿ ಆಯಾ ಸ್ವಾಮಿಗಳ ಗ್ರಂಥಗಳನ್ನು ಹೇಳಿದೆಯಂತೆ. ಅದರಲ್ಲಿ ಈ ವಿಷಯವದೆಯೋ ಇಲ್ಲವೋ ಮುಂದೆ ವಿಚಾರಿಸಬಹುದು.

ಯಲ್ಲಿ ಈ ಹೆಸರಿನ ಸ್ವಾಮಿಗಳು ಅನೇಕರಿದ್ದಾರೆ.* ಈ ಮಠದ ಒಂದು ಕಂಬದ ಮೇಲೆ ಪಡುವಲ ಮುಖವಾಗಿರುವ ಒಂದು ಶಿಲಾಲಿಪಿಯಲ್ಲಿ ಬರೆದದ್ದೇನಂದರೆ :

೧. ॥ ಶ್ರೀ ವಿಜಯಃ ॥ ರಟ್ಟ ವಂಶೋದ್ಭವಂ ಖ್ಯಾತೋ ವೀರಭೂಪೇನ ಕಾರಿತಂ ಶ್ರೀಮತ್ಪಂಚವಣಿ

೨. ಗಿ ಗುರುಗೇಹಂ ಶುಭಪ್ರದಂ ॥ ಸ್ವಸ್ತಿ ಪೂವಲಿಯೂರೊಡೆಯ ವೀರವಿಜಯಂ

೩. ರಸಂ ತನ್ನ ಪಿರಿಯ ವೀರವರ್ಮರಸರುಂ ಪಿಂದೆ ಮಾಡಿಸಿದೀ ಸ್ಥಾನಾಚಾರ್ಯ್ಯರಪ್ಪ

೪. ಷ್ಟಾವರಣ ಸಂಪನ್ನರುಂ ರುಗ್ಯಜುಃ ಸಾಮಥರ್ವಣ ವೇದಶಾಸ್ತ್ರ ಕೋವಿದರುಂ

೫. ಪಂಚವಣಿಗೆ ಶ್ರೀ ಸಿದ್ಧನಂಜಾರ್ಯ್ಯರಾಲಯಮುಂ ಶ್ರೀ ಶಾಲಿವಾಹನ ಶಕೆ

೬. ೯೦೧ ನೇ ಪ್ರವಾದಿ ಸಂವಚ್ಛರೇ ಶ್ರಾವಣಶುದ್ಧ ಪೂರ್ಣಮಿಯುಲು ಪುನಃ ಜೀ

೭. ರ್ಣೋದ್ಧಾರಕ್ಕಂ ಮಾಡಿಸಿದ ಕಾರ್ಯ್ಯಕ್ಕಂ ಶುಬಂ ಬದ್ರಂ ಮಂಗಳಂ ॥

೮. ಆ ಪುಣ್ಯತಿಥಿಯುಲು ವೀರವಿಜಯರಸಂ ತಂನ ಪಳಿಹಿತಂ ಬೆಳವಾ

೯. ಡಿಯ ಕುರುಕೇತಿಮಯ್ಯರಸನಂ ಕರೆದಗ್ರಹಾರಂ ಪೂವಲಿಯ ಶ್ರೀ

೧೦. ಸಿದ್ಧನಂಜಾರ್ಯ್ಯರ ಪಾದಪ್ರಕ್ಷಾನಲಂಗೆಯ್ದು ವರ ನಿಜಲಿಂಗ ಪೂಜಾಧರ್ಮ

೧೧. ಕಾರ್ಯ್ಯೋದ್ದೇಶದಿಂ ದಂಡದೋಷದೊಳಗೊಂದು ಬಾಗಂ ಮೂಡಣ ದಿಸಿಯುಲಂ ಯ

೧೨. ಡವನ ಹಳದ ಬಟ್ಟೆಯ ಮೇಲಣ ಭೂಮಿಯಂ ನಿಟ್ಟದರ್ಮಮುಂ ಸಾಸಿರ್ವರುಂ

೧೩. ಸದ್ದರ್ಮದಿಂ ಪ್ರತಿಪಾಳಿಪರ್ ॥ ಮಂಗಳಮಹಾ ॥ ಶ್ರೀ ॥ ೦ ॥

ಈ ಶಿಲಾಲಿಪಿಯು ಮೂಲತಃ ಮೇಲೆ ಹೇಳಿರುವ ೯೦೧ ನೇ ಶಕದಲ್ಲಿ ಬರೆದದ್ದಲ್ಲ. ಆದರೆ ಆ ಕಾಲದಲ್ಲಿ ಬರೆದದ್ದೆಂಬ ಭ್ರಮೆಯುಂಟಾಗುವಂಥ ಪ್ರಯತ್ನವನ್ನು ಮೇಲ್ಕಂಡ ಲೇಖವನ್ನು ಬರೆಯುವವರು ಮಾಡದೆ ಬಿಟ್ಟಿಲ್ಲ. ಅನುಸ್ವರದ ಪೂಜಿಗಳನ್ನೆಲ್ಲ ಅಕ್ಷರಗಳ ತಲೆಯ ಮೇಲೆ ಕೊಟ್ಟಿದ್ದಾರೆ. ಒಂದಾದರೂ ಅನುಸ್ವರದ

* ಸಿದ್ಧನಂಜೇಶ್ವರರೆಂಬವರು ನಂಜು ನುಂಗಿ ದಕ್ಕಿಸಿದ್ದರಿಂದ ಸಿದ್ಧನಂಜೇಶ್ವರರೆಂಬ ಹೆಸರಿನಿಂದ ಪ್ರಸಿದ್ಧರಾದರೆಂದು ಒಂದು ಆಖ್ಯಾಯಿಕೆಯಿದೆ. ಪಟ್ಟಾವಳಿಯಲ್ಲಿ ಚರಪಟ್ಟದ ಮೇಲೆ ಬಂದವರಲ್ಲಿ ಮಾತ್ರ ಸ್ಪಷ್ಟವಾಗಿ ನಂಜೇಶ ಎಂಬ ಹೆಸರಿನವರು ಇಬ್ಬರಿದ್ದಾರೆ. ಚರಪಟ್ಟದ ೩೫ ನೇ ಹಾಗೂ ೩೭ ನೇ ಹೆಸರುಗಳನ್ನು ನೋಡಿರಿ. ಉಳಿದವರಲ್ಲೆಷ್ಟೋ ಸ್ವಾಮಿಗಳು ಸಿದ್ಧನಂಜೇಶ್ವರ ಹಾಗೂ ಸಿದ್ಧಬಸವ ಎಂಬ ಸಮಾನಾರ್ಥದ ಹೆಸರಿನವರಿದ್ದಾರೆ.

ಪೂಜೆಯನ್ನು ಮರೆತಾದರೂ ಅಕ್ಷರದ ಮುಂದುಗಡೆಗೆ ಕೊಟ್ಟಿಲ್ಲ. ಯಾಕೆಂದರೆ ೯೦೧ನೇ ಶಕದ ಸುಮಾರಿನ ಲಿಪಿಗಳಲ್ಲಿ ಈ ಪದ್ಧತಿಯಿದ್ದಿತು. ಠ ಎಂಬುದೊಂದು ಕನ್ನಡ ರಕಾರ ಭೇದ. ಸಂಸ್ಕೃತದಲ್ಲಿದರ ಸಂಬಂಧವಿಲ್ಲ. ಆದರೆ ಮೇಲ್ಕಾಣಿಸಿರುವ ಲಿಪಿಯಲ್ಲಿ ಕನ್ನಡ ಸಂಸ್ಕೃತ ಎಲ್ಲಾ ವಿಧದ ರಕಾರಗಳಿಗೆ ಶಕಟರೇಫ(ಱ)ವೊಂದನ್ನೇ ಬರೆದಿದ್ದಾರೆ. ಅಲ್ಲದೆ ಎಷ್ಟೋ ಅಕ್ಷರಗಳ ಉಕಾರ ಚಿಹ್ನವನ್ನು ಅಕ್ಷರದ ಮುಂದು ಗಡೆ ಕೊಡದೆ ಕೆಳಗಡೆಗೆ ಕೊಟ್ಟಿದ್ದಾರೆ. ಯಾಕೆಂದರೆ ಶಿಲಾಲೇಖದಲ್ಲಿ ಹೇಳಿರುವ ಕಾಲದಲ್ಲಿ ಹಾಗೆ ರೂಢಿಯಿತ್ತು. ಇವೆಲ್ಲ ಕಾರಣಗಳಿಂದ ಇದು ಹಿಂದಿನ ಕಾಲದ ಬರಹದ ರೀತಿಯನ್ನನುಸರಿಸಿ ಮುಂದಿನ ಕಾಲದಲ್ಲೆಂದೋ ಬರೆದದ್ದೆಂದು ತೋರು ತ್ತದೆ. ಇನ್ನು ೫ನೇ ಓಳಿಯಲ್ಲಿ 'ಶಾಲಿವಾಹನ ಶಕೆ" ಎಂದು ಹೇಳಿದೆ. ಆದರೆ ಕ್ರಿಸ್ತೀಯ ೧೪ನೇ ಶತಮಾನಕ್ಕಿಂತ ಮೊದಲು ಶಕವರ್ಷವನ್ನು ಹೇಳುವಾಗ "ಶಾಲಿ ವಾಹನ" ಎಂಬ ಶಬ್ದವನ್ನು ಸೇರಿಸುತ್ತಿದ್ದಿಲ್ಲ. ಬರೇ "ಶಕವರ್ಷ"ವೆಂದಾಗಲಿ, "ಶಕವರ್ಷ ಕಾಲಾತೀತ ಸಂವತ್ಸರಂಗಳ್" ಎಂದಾಗಲಿ ಬರೆಯುವ ರೂಢಿಯಿತ್ತು. ಶಾಲಿವಾಹನ ಶಕವೆಂದುಪಯೋಗಿಸುವ ಶಿಲಾಲಿಪಿಗಳಲ್ಲಿ ಈಗ ಸಿಕ್ಕಿರುವ ಮಟ್ಟಿಗೆ ೧೨೭೬ನೇ ಶಕ(ಕ್ರಿ. ಶ. ೧೩೫೪)ದಲ್ಲಿ ಬರೆದದ್ದೇ ಮೊಟ್ಟಮೊದಲನೆಯದೆಂದು ಇತಿ ಹಾಸ ಸಂಶೋಧಕರು ಹೇಳುತ್ತಾರೆ. ಆದ್ದರಿಂದ ಈ ಲಿಪಿಯು ೯೦೧ನೇ ಶಕದಲ್ಲಿ ಬರೆದದ್ದಿರದೆ ೧೨೭೬ ರಿಂದಿತ್ತೀಚೆಗೆ ಎಂದೋ ಬರೆದದ್ದಿರುತ್ತದೆ. ಅಲ್ಲದೆ ಆರನೇ ಓಳಿಯಲ್ಲಿ ಪ್ರಮಾದಿ ಸಂವತ್ಸರವೆಂದಿದೆ. ಆದರೆ ಲೆಕ್ಕದಂತೆ ೯೦೧ರಲ್ಲಿ ಪ್ರಮಾದಿ ಯಿರದೆ ಪ್ರಮಾಥಿ ಸಂವತ್ಸರವಿತ್ತು.

ಇದೇ ಮಠದ ಎಡಮಗ್ಗಲಿಗೊಂದು ಕೋಣೆಯಿದೆ. ಅಲ್ಲಿ ನವಲಿಂಗೇಶ್ವರ ನಿದ್ದಾನೆ. ಲಿಂಗಾಯತ ಧರ್ಮರೀತಿಯಲ್ಲಿ ನವಲಿಂಗ ಸಕೀಲವು ತುಂಬಾ ಮಹತ್ವ ದ್ದೆಂದು ಎಲ್ಲರಿಗೂ ಗೊತ್ತು. ಅಲ್ಲಿಯೂ ಒಂದು ಶಿಲಾಲೇಖದ ತುಂಡು ಬಿದ್ದಿದೆ. ಅದು ತುಂಬಾ ಕಚ್ಚು ಬಿದ್ದುಹೋಗಿದೆ. ಅಲ್ಲದೆ ಮೇಲ್ಭಾಗವು ಒಡೆದೂ ಹೋಗಿದೆ. ಅದರಲ್ಲಿ :

(೧) ... ... ... ... ... ... ... ...
(೨) ... ... ... ... ... (ಕುಬೇ)ರನಳಕಾಪುರಮುಂ ನಗಂಗುಂ
(೩) ವಿಳಾಸದಿಂ ॥ಅಲ್ಲಿ॥ ಅಷ್ಟಾವರಣ ಸಂಪನ್ನರುಂ
(೪) ರುಗ್ಯಜಃ ಸಾಮಾಥರ್ವ್ವಣ ಸಮಸ್ತ ವೇದವೇದಾಂಗಾ
(೫) ನೇಕ ಶಾಸ್ತ್ರಪ್ರವೀಣರುಂ ಪೂವಲೀಪುರದೇವ
(೬) ನಾದಾರ ವೀರ ವಿಜಯರಸನ ಸುದರ್ಪ್ಪಣರ್ತಾ
(೭) ಪನಿಪ ಪಂಚವಣಿಗೆಯ ಶ್ರೀ ಸಿದ್ಧನಂಜಾರ್ಯ್ಯರೆ

(೮) ನೆ ಮೆಚ್ಚಿದರಾರ್ ॥೦॥ ಸ್ವಸ್ತಿ ಶಕವರ್ಷ ೯೦೧ನೆಯ
(೯) ಪ್ರಮಾದಿ ಸಂವತ್ಸರದ ಶ್ರಾವಣ ಶುದ್ಧ ಪೌ
(೧೦) ರ್ಣಮೆಯಲಿಯೂರೊಡೆಯ ಶ್ರೀಮದಾಚಾರ್ಯ್ಯರಮ
(೧೧) ಠಮುಮಂ ಜೀರ್ನ್ನೋದ್ಧಾರಮುಂ ಮಾಡೆ ಇವರ ನಿಜಲಿಂಗ
(೧೨) ಶೋಬೆಗೆಂದುಂ ಪಂಚವಲ್ಲಿಯನಿಟ್ಟು ಕರಮೆಸೆದರ್ ॥
(೧೩) ಮಂಗಳ ಮಹಾಶ್ರೀ ॥

ಈ ಲಿಪಿಯೂ ಕೂಡ ಮೇಲ್ಕಂಡ ೯೦೧ನೆಯ ಶಕದ ಕಾಲಕ್ಕೆ ಸರಿಯಾಗಿ ಬರೆಯಿಸಿದ್ದಲ್ಲ. ಆದರೆ ಮೊದಲನೇ ಶಿಲಾಲಿಪಿಯಿಂದ ಇದು ನೂರಾರು ವರ್ಷ ಮುಂಚಿನದು. ಇಷ್ಟು ಮಾತ್ರ ಸರಿ. ಎರಡೂ ಲಿಪಿಯ ಅಕ್ಷರಗಳು ಪ್ರಾಚೀನವಲ್ಲ. ಆದರೂ ಎರಡರಲ್ಲೂ ಒಂದೇ ವಿಷಯವಿದೆ. ಎರಡರಲ್ಲೂ ಸಂವತ್ಸರವು ಪ್ರಮಾದಿ ಯೆಂದೇ ಇದೆ. ಮೊದಲನೆಯ ಲಿಪಿಯಲ್ಲಿ ವೀರವಿಜಯರಾಜನು ವೀರವರ್ಮನ ವಂಶಜನೆಂದು ಹೇಳಿದೆ. ಆದರೆ ಸವದತ್ತಿಯಲ್ಲಿ ನಾವು ನೋಡಿದ ರಟ್ಟರಾಜರ ಶಿಲಾಲಿಪಿಗಳಲ್ಲಿ ಹೇಳಿರುವ ವಂಶಾವಳಿಯಲ್ಲಿ ಈ ಹೆಸರುಗಳು ಸಿಕ್ಕುವುದಿಲ್ಲ. ಆದರೆ ಮೊದಲನೇ ಲಿಪಿಯಲ್ಲಿ ಹೇಳಿರುವ ವಿಜಯರಸನ ಪಳಿಹಿತಂ ಕರಿಕೇತಿಮಯ್ಯನ ಹೆಸರು ಮಾತ್ರ ಅದೇ ಪ್ರಾಂತದಲ್ಲಿರುವ ಸೊಗಲ ಕ್ಷೇತ್ರದ ಶಿಲಾಲಿಪಿಯಲ್ಲಿ ಸಿಕ್ಕುವದು.* ಅಲ್ಲದೆ ಸೊಗಲದ ಶಿಲಾಲಿಪಿಯ ಕಾಲವೂ ಇವೆರಡರ ಲಿಪಿಯ ಕಾಲವೂ ಒಂದೇ. ಆದ್ದರಿಂದ ಈ ವೀರವಿಜಯರಾಜನು ತೀರಾ ಕಾಲ್ಪನಿಕ ವ್ಯಕ್ತಿ ಯಾಗಿರದೆ ಐತಿಹಾಸಿಕ ವ್ಯಕ್ತಿಯಾಗಿರಬೇಕೆಂಬ ಊಹೆಗೆ ಆಸ್ಪದವಿದೆ. ಈಗ ಸಿಕ್ಕಿ ರುವ ಎರಡು ಲಿಪಿಗಳಿಗೂ ಮೂಲವಾದ ಇನ್ನೊಂದು ಯಾವುದೋ ಲಿಪಿಯು ಇರ ಬಹುದು. ಅದು ಈಗ ನಷ್ಟವಾಗಿ ಹೋಗಿದ್ದರೂ ಹೋಗಿರಬಹುದು, ಅಥವಾ ಹಿಂದಿನಿಂದ ಬರೆದಿಡುತ್ತ ಬಂದ ಛಪ್ಪನ್ನ ಪಟ್ಟಿಯ† ಆಧಾರದಿಂದ ಮುಂದಿನವರು

---

* ಸೊಗಲದ ಶಿಲಾಲಿಪಿಯು ಎಪಿಗ್ರಾಫಿಯಾ ಇಂಡಿಕಾದ ೧೬ ನೆಯ ಸಂಪುಟದಲ್ಲಿ ಮೂರನೇ ನಂಬರಿನಿಂದ ಪ್ರಸಿದ್ಧವಾಗಿದೆ. ಈ ಶಾಸನದಲ್ಲಿ ಚಾಳುಕ್ಯ ರಾಜನಾದ ನೂರ್ಮ್ಮಡಿ ತೈಲಪನ ಆಳಿಕೆಯಲ್ಲಿ ಶಕವರ್ಷದ ೯೦೨ ವಿಕ್ರಮ ಸಂವತ್ಸರದಲ್ಲಿ (ಕರಿಕೇತಿಮಯ್ಯನ ಹೆಂಡತಿ) ಕಂಚಿಯಬ್ಬೆಯು ಸುವರ್ಣಾಕ್ಷಿ ದೇವಾಲಯಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

† ಪ್ರತಿಯೊಂದು ಮಠದಲ್ಲಿ ತಮ್ಮ ತಮ್ಮ ಶಿಷ್ಯರ ಮನೆತನಗಳ ಟಿಪ್ಪಣಿಯ ಹೊತ್ತಿಗೆಯೊಂದಿರು ವುದುಂಟು. ಅದರಲ್ಲಿ ತಮ್ಮ ಶಿಷ್ಯ ಮನೆತನಗಳ ವಂಶಾವಳಿ ಹಾಗೂ ಆಯಾ ವಂಶಾವಳಿಗೆ ಸಂಬಂಧಿಸಿದ ವಿಶೇಷ ವಿಷಯಗಳು ಮುಂತಾದವುಗಳನ್ನೆಲ್ಲಾ ಬರೆಯುತ್ತ ಬರುವ ರೂಢಿ ಯಿದೆ. ಇಂಥ ಟಿಪ್ಪಣಿಗಳ ಹೊತ್ತಿಗೆಗೆ ಛಪ್ಪನ್ನಪಟ್ಟಿಯೆನ್ನುವರು. ಇಂಥಾದ್ದೊಂದು ಛಪ್ಪನ್ನಪಟ್ಟಿಯು ಹೂಲಿಯ ಮಠದಲ್ಲಿ ಈಗಲೂ ಇದೆ. ಅದರಲ್ಲಿ ರಟ್ಟರಾಜರ ವಿಷಯಕ್ಕೆ ತುಂಬಾ ವಿವರವಾಗಿ ಹೇಳಿದೆಯಂತೆ. ಹಿಂದಿನಿಂದ ಇಂದಿನವರೆಗೆ ಅವರ ಇತಿಹಾಸವು ಅದರಲ್ಲಿದೆಯಂತೆ. ರಟ್ಟವಂಶದ ಮನೆತನಗಳು ಇಂದಿಗೂ ತುಂಕಾರಿ (ತುರುಂಕರ ಅರಿ) ಎಂಬ ಹೆಸರಿನವಾಗಿ ಇದ್ದಾರಂತೆ. ಇಂದಿಗೂ ಅವರು ಲಿಂಗಾಯತರಿದ್ದು ಹೂಲಿಯ ಮಠದ ಶಿಷ್ಯ ಮನೆತನದವರಾಗಿಯೇ ಇದ್ದಾರಂತೆ. (ಇಲ್ಲಿ ಶಿಷ್ಯರೆಂದರೆ ಮತಾನುಯಾಯಿಗಳು).

ಶಿಲಾಲಿಪಿಯಾಗಿ ಬರೆಯಿಸಿರಲೂ ಬಹುದು. ಏನೇ ಇರಲಿ, ಈ ೯೦೧ನೇ ಶಕಕಾಲದ ಸುಮಾರಿಗೆ ಸ್ಥಿರಪಟ್ಟದ ಮೇಲೆ ೨೪ನೆಯವರಾದ ಸಿದ್ಧನಂಜೇಶ್ವರರೆಂಬವರು ಆಚಾರ್ಯರಾಗಿದ್ದರೆಂದು ಪಟ್ಟಾವಳಿಯಿಂದ ಗೊತ್ತಾಗುವದರಿಂದ ಈ ಲಿಪಿಗಳ ವಿಷಯವು ತೀರಾ ನೀರಾಧಾರವಾದದ್ದೆಂದು ಹೇಳಲಿಕ್ಕೆ ಬರುವಂತಲ್ಲ, ಇದಿರಲಿ.

ನವಲಿಂಗೇಶ್ವರನ ಕೋಣೆಯ ಮುಂದೆ ಒಂದು ಮುನಿಯ ಮೂರ್ತಿಯಿದೆ. ತಲೆಯ ಮೇಲೆ ಜಡೆ, ಬಲಗೈಯಲ್ಲಿ ಜಪಮಾಲೆ, ಎಡಗೈಯಲ್ಲಿ ಇಷ್ಟಲಿಂಗ, ಕೊರಳಲ್ಲಿ ಜನ್ನಿವಾರದೊಡನೆ ಕಂಠಾಭರಣ. ಕುಳಿತಿದ್ದು ಧ್ಯಾನಸ್ಥವಾಗಿ. ಮೂರ್ತಿಯು ಹನ್ನೆರಡನೇ ಶತಮಾನಕ್ಕಿಂತ ಈಚಿನದೆಂದು ಕಾಣುವದಿಲ್ಲ. ಕಲಾರೀತಿ ಅದಕ್ಕೂ ಮುಂಚಿನದು. ಶ್ರೀಗಳು ತಾವು ಸೊಗಲ ಕ್ಷೇತ್ರದಲ್ಲಿ ಹೀಗೆ ಇಷ್ಟಲಿಂಗವನ್ನು ಕೈಯಲ್ಲಿ ಹಿಡಿದ ಹೆಣ್ಣುಮೂರ್ತಿಯನ್ನು ನೋಡಿದ ಹಾಗೆ ಹೇಳಿದರು. ಅದು ಕಂಚಿಯಬ್ಬೆಯದಾಗಿರಬಹುದೋ ಏನೋ, ವಿಚಾರಕ್ಕೆ ಅವಕಾಶವಿದೆ.

ಇದೇ ಸ್ಥಳದಲ್ಲಿ ತುಸು ಎತ್ತರದ ಮೇಲೆ ಗುಡ್ಡದ ಘಡಿಯ ಮೇಲೊಂದು ಅಡಿ ನಟ್ಟು ಹೆಜ್ಜೆ ಮೂಡಿದ ಹಾಗಿದೆ. ಸಿದ್ಧನಂಜೇಶ್ವರರು ಈ ಪರಿ ಇಲ್ಲಿ ತಪೋನಿರತರಾಗಿ ನಿಂತಿದ್ದರೆಂದು ಹೇಳುತ್ತಾರೆ. ಆದರೆ ಮುಸಲ್ಮಾನರು ತಮ್ಮ ಹಜರತ್ ಅಲಿಯ ಪಾದವೆಂದು ಮೇಲೆ ಗುಮಟವನ್ನು ಕಟ್ಟಿದ್ದಾರೆ. ಇಂದಿಗೂ ಹೂಲಿಯ ಮಠದಲ್ಲಿ ಹೊಸದಾಗಿ ಪಟ್ಟಾಧಿಕಾರವಾಗಬೇಕಾದರೆ ಸಿದ್ಧನಂಜೇಶ್ವರರ ನಿಜಲಿಂಗ ಪೂಜೆಯು ಈ ಮಠದಲ್ಲಿಯೇ ಎಲ್ಲ ವಿಧಾನಗಳನ್ನು ಜರುಗಿಸುವ ರೂಢಿಯಿದೆ. ಈ ಕೊಳ್ಳದ ಮಠದ ನಾಲ್ಕು ದಿಕ್ಕಿಗೆ ನಾಲ್ಕು ಸಿದ್ಧಸ್ಥಾನಗಳಿವೆ. ಪೂರ್ವ ದಿಕ್ಕಿಗೆ ಗುಡಿಗಳ ಗುಂಪಿನಲ್ಲಿ ಕೆರೆಸಿದ್ದಪ್ಪನ ಗುಡಿ, ದಕ್ಷಿಣಕ್ಕೆ ಒಂದು ಗುಡ್ಡದ ತುದಿಯ ಮೇಲೆ ಮಳಸಿದ್ದಪ್ಪನ ಗುಡಿ, ಪಶ್ಚಿಮಕ್ಕೆ ಮೂರು ಮೈಲು ದೂರದಲ್ಲಿ ನಿರ್ಜನ ಪ್ರದೇಶದಲ್ಲಿ ಮೂರು ಕೊಳ್ಳಗಳು ಕೂಡಿದ ಕಾಡಿನಲ್ಲಿ ವರವೀ ಸಿದ್ದಪ್ಪನ ಗುಡಿ, ಉತ್ತರ ದಿಕ್ಕಿಗೆ ಒಂದು ಮೈಲು ದೂರ ಗುಡ್ಡದ ಕೊಳ್ಳದಲ್ಲಿ ಗವಿಸಿದ್ದಪ್ಪ, ಈ ನಾಲ್ಕರ ನಡುವೆ ಅಡಿಮುಟ್ಟಿ ನಿಂತ ಸಿದ್ಧನಂಜೇಶ್ವರನನ್ನು ಕುರಿತು, ಅವರ ಶಿಷ್ಯರಲ್ಲೊಬ್ಬರಾದ ನಂದ್ಯಾಲ ನಂಜೇಶನೆಂಬ ಕವಿಯು ತನ್ನ ಗುರುಂಗಳಾದ ಸಿದ್ಧನಂಜೇಶ್ವರರ ಚರಿತ್ರರೂಪವಾದ ಗುರುರಾಜ ಚರಿತ್ರೆ* ಎಂಬ ಕಾವ್ಯದಲ್ಲಿ :

---

* ಗುರುರಾಜ ಚಾರಿತ್ರವನ್ನು ಕುರಿತು ಕವಿಚರಿತ್ರಕಾರರು ತಮ್ಮ ಕವಿಚರಿತೆಯ ಎರಡನೆಯ ಸಂಪುಟದ ೩೮೫ನೇ ಪುಟದಲ್ಲಿ ಕೆಲವು ಮಾತುಗಳನ್ನು ಹೇಳಿದ್ದಾರೆ. ಈ ಗ್ರಂಥದ ಒಂದು ಪ್ರತಿಯು ಹೂಲಿಯ ಮಠದಲ್ಲಿದೆ. ಕವಿಚರಿತೆಯಲ್ಲಿ ಹೇಳಿರುವದನ್ನು ನೋಡಿದರೆ ಈ ಗ್ರಂಥದಿಂದ ಎಷ್ಟೋ ಮಹತ್ವದ ವಿಷಯಗಳು ಗೊತ್ತಾಗಬಹುದೆಂದು ತೋರುತ್ತದೆ. ಸದ್ಯದ ಮಟ್ಟಿಗೆ ಇಷ್ಟು ಮಾತ್ರ ಹೇಳಬಲ್ಲೆವು.

ಆಚಾರ್ಯರ್ ರೇವಣಾಸಿದ್ದೇಶ ಮರುಳ ಸಿ
ದ್ಧಾಚಾರ್ಯರ್ ರಾಮದೇವಾಚಾರ್ಯರ್ ಗುರು ಪಂಡಿ
ತಾಚಾರ್ಯರ್ ಚೌಕಮಧ್ಯದಿ ನಿಂದ ಪಂಚವರ್ಣಗೆ ಸಿದ್ಧನಂಜೇಶ ॥

ಎಂದು ಸ್ತುತಿಸಿ ಐದನೆಯ ಆಚಾರ್ಯರ ಬದಲಾಗಿ ತನ್ನ ಗುರುಗಳನ್ನು ಹೇಳಿದ್ದಾನೆ. ಈ ಮಠವು ಶ್ರೀ ವಿಶ್ವಾರಾಧ್ಯರ ಪೀಠಕ್ಕೆ ಸೇರಿದ್ದು. ಆದ್ದರಿಂದ ಕವಿಯು ಹೀಗೆ ಹೇಳತ್ತಾನೆ.

ಪಶ್ಚಿಮ ದಿಕ್ಕಿಗಿರುವ ವರವೀ ಸಿದ್ದಪ್ಪನ ಸ್ಥಾನವು ಬಹಳೇ ಮನೋಹರವಾಗಿದೆ. ಸಿದ್ಧನಂಜೇಶ್ವರ ಮಠದಿಂದ ಪಡುವಲಿಗೆ ಮೂರು ಮೈಲು ಗುಡ್ಡದಲ್ಲಿ ನಡೆದುಕೊಂಡು ಹೋದರೆ ಘನವಳ್ಳಿಗೂ ಹೂಲಿಗೂ ನಡುವೆ ಮೂರು ಕೊಳ್ಳಗಳು ಕೂಡಿದಲ್ಲಿ ಭವ್ಯವಾದೊಂದು ನಿರ್ಜನಸ್ಥಾನದಲ್ಲಿ ಗುಡ್ಡದ ಒಂದು ಮೈಗೆ ತನ್ನಿಂತಾನೆ ಉಂಟಾದ ಒಂದು ದೊಡ್ಡ ಹೊದರಿನಲ್ಲಿ ಮೂರು ಲಿಂಗಗಳಿವೆ. ಅರವತ್ತಡಿ ಆಳವಾದ ಕಿರಿಯಗಲದ ಕೊಳ್ಳದಲ್ಲಿ ಗಿಡಮರಗಳ ಜಂಪಿನಲ್ಲಿ ಇದೊಂದು ಒಳ್ಳೇ ರಮಣೀಯವಾದ ಸ್ಥಳ, ಇದಕ್ಕೆ ವರವಿಯೆನ್ನುವರು. ಆದರೆ ಇದರ ಹತ್ತರ ಸಮೀಪದಲ್ಲಿ ಈ ಹೆಸರಿನ ಊರುಗೀರು ಏನೂ ಇಲ್ಲ. ಇದನ್ನು ನೋಡಿದರೆ ತುಂಬಾ ಭಾವೋದ್ದೀಪನವಾಗುತ್ತದೆ. ಇದೊಂದು ಯೋಗಾರಾಮವೆಂದು ಮನವು ಥಟ್ಟನೆ ಒಪ್ಪಿಕೊಂಡು ಬಿಡುತ್ತದೆ. ಈ ನಿಸರ್ಗ ಸಿದ್ಧವಾದ ಗುಹೆಯ ಇದುರಿಗೆ ಗುಡ್ಡದ ಮೈಗೆ ದೊಡ್ಡದೊಂದು ಲೇಖವಿದೆ. ಅದು ಸುಮಾರು ಹದಿನಾಲ್ಕುನೂರು ವರ್ಷಗಳಿಗೆ ಮುಂಚಿನದು. ಬಾದಾಮಿಯ ಸತ್ಯಾಶ್ರಯ ಪೊಲಿಕೇಸಿವಲ್ಲಭರಾಜನು ಇಲ್ಲಿ ಭೂದಾನ ಮಾಡಿದ ಹಾಗೆ ಉಲ್ಲೇಖವಿದೆ. ಇದರ ಮೇಲಿಂದ ಪುಲಿಕೇಶಿಯ ಕಾಲಕ್ಕೆ ಇದು ಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿದ್ದಿತೆಂಬುದು ನಿರ್ವಿವಾದವಾಗಿದೆ. ಈ ಸ್ಥಾನವು ಈ ಊರ ಮಠದ ಮೂಲಸ್ವಾಮಿಗಳಾದ ಶ್ರೀ ಸಿದ್ಧಚೈತನ್ಯರ ತಪೋಭೂಮಿಯಾಗಿರಬಹುದೆಂಬ ಊಹೆಗೆ ಅವಕಾಶವಿದೆ. ಯಾಕೆಂದರೆ ಪಟ್ಟಾವಳಿಯ ಒಂದಾನೊಂದು ಪ್ರತಿಯಲ್ಲಿ ಸಿದ್ಧಚೈತನ್ಯರಿಗೆ " ವರವೀವ ಸಿದ್ಧಚೈತನ್ಯ "ರೆಂದು ಹೇಳಿದೆಯಂತೆ, ಇದರ ಮೇಲಿಂದಲೇ ವರವೀ ಸಿದ್ದಪ್ಪನ ಗುಡಿಯೆಂದು ರೂಢಿಯಾಗಿರಬಹುದಾಗಿ ತೋರುತ್ತದೆ.

ಇಲ್ಲಿ ಹೂಲಿ ಮಠದ ಪಟ್ಟಾವಳಿಯ ಬಗ್ಗೆ ವಿಚಾರ ಮಾಡುವಾ.

## ಶ್ರೀಮತ್ಪೂವಲ್ಲೀ ಪಂಚವರ್ಣ ಬೃಹನ್ಮಠ ಪಟ್ಟಾವಲಿ :

| ನಂ. | ಸ್ಥಿರ | | ಜೀವಿಸಿದ ಕಾಲ ಶಕದಿಂದ ಶಕದವರೆಗೆ | ಶಿವೈಕ್ಯ ಸ್ಥಾನ |
|---|---|---|---|---|
| ೧ | ಶ್ರೀ ಸಿದ್ಧಚೈತನ್ಯ | ಶಿವಾಚಾರ್ಯರು | ೧೫೦ | ಪೂವಲ್ಲೀ |
| ೨ | ,, ಘನಲಿಂಗ | ,, | ೬೫ | ,, |
| ೩ | ,, ಕಾಲಮುಖ | ,, | ೪೪ | ,, |
| ೪ | ,, ನಂದಿಕೇಶ್ವರ | ,, | ೯೮ | ,, |

| | | | | |
|---|---|---|---|---|
| ೫ | ಶ್ರೀ ಚಿದ್ಘನಲಿಂಗ ಶಿವಾಚಾರ್ಯರು | | ೩೫ | ಮುನಿಪಲ್ಲೀ |
| ೬ | ,, ಕಾಲಾನನ ,, | ೩೫ | ೧೧೦ | ಪೂವಲ್ಲೀ |
| ೭ | ,, ಶಿಲೆಕಂಠ ,, | ೧೧೦ | ೧೬೭ | ಸಿದ್ಧಾಚಲ |
| ೮ | ,, ಚಿದ್ಘನಲಿಂಗ ,, | ೧೬೭ | ೧೯೬ | ಪೂವಲ್ಲೀ |
| ೯ | ,, ಶಿವಶಕ್ತಿ ,, | ೧೯೬ | ೨೦೯ | ಸಿದ್ಧಾಚಲ |
| ೧೦ | ,, ನೀಲಕಂಠ ,, | ೨೦೯ | ೨೭೨ | ,, |
| ೧೧ | ,, ಹರದತ್ತ ,, | ೨೭೨ | ೨೯೮ | ಪೂವಲ್ಲೀ |
| ೧೨ | ,, ಚಿದ್ಘನಲಿಂಗ ,, | ೨೯೮ | ೩೫೯ | ಮುನಿಪಲ್ಲೀ |
| ೧೩ | ,, ಕಾಲಾನನ ,, | ೩೫೯ | ೪೦೮ | ಪೂವಲ್ಲೀ |
| ೧೪ | ,, ಶಿವಯೋಗಿ ,, | ೪೦೮ | ೫೦೩ | ನಖಪುರ |
| ೧೫ | ,, ಯೋಮ ,, | ೫೦೩ | ೫೩೧ | ಪೂವಲ್ಲೀ |
| ೧೬ | ,, ಸಿದ್ಧೇಶ್ವರ ,, | ೫೩೧ | ೬೧೬ | ,, |
| ೧೭ | ,, ವಿಶ್ವೇಶ್ವರ ,, | ೬೧೬ | ೬೭೨ | ನಖಪುರ |
| ೧೮ | ,, ಶಿವಯೋಗಿ ,, | ೬೭೨ | ೭೦೮ | ಮಹಾಕೂಟ |
| ೧೯ | ,, ಚಿದ್ಘನ ,, | ೭೦೮ | ೭೨೨ | ನಖಪುರ |
| ೨೦ | ,, ಮಹೇಶ್ವರ ,, | ೭೨೨ | ೭೫೯ | ಪೂವಲ್ಲೀ |
| ೨೧ | ,, ಚಂದ್ರಶೇಖರ ,, | ೭೫೯ | ೭೬೮ | ,, |
| ೨೨ | ,, ಸಿದ್ಧೇಶ್ವರ ,, | ೭೬೮ | ೮೧೧ | ಸಿದ್ಧಾಚಲ |
| ೨೩ | ,, ವಿಶ್ವೇಶ್ವರ ,, | ೮೧೧ | ೮೩೨ | ,, |
| ೨೪ | ,, ಸಿದ್ಧನಂದೀಶ್ವರ ,, | ೮೩೨ | ೯೧೨ | ,, |
| ೨೫ | ,, ಲಕುಲೀಶ ,, | ೯೧೨ | ೯೩೫ | ಪೂವಲ್ಲೀ |
| ೨೬ | ,, ಏಕೋದೇವ ,, | ೯೩೫ | ೯೫೧ | ಸಿದ್ಧಾಚಲ |
| ೨೭ | ,, ಈಶಾನಯೋಗಿ ,, | ೯೫೧ | ೯೭೩ | ಪೂವಲ್ಲೀ |
| ೨೮ | ,, ಸೋಮದೇವ ,, | ೯೭೩ | ೯೮೬ | ,, |
| ೨೯ | ,, ಜ್ಞಾನಶಕ್ತಿ ,, | ೯೮೬ | ೧೦೧೫ | ಸಿದ್ಧಾಚಲ |
| ೩೦ | ,, ತತ್ಪುರುಷ ,, | ೧೦೧೫ | ೧೦೨೮ | ಪೂವಲ್ಲೀ |
| ೩೧ | ,, ಸಿದ್ಧೇಶ್ವರ ,, | ೧೦೨೮ | ೧೦೮೬ | ಸಿದ್ಧಾಚಲ |
| ೩೨ | ,, ಚಿದ್ಘನ ,, | ೧೦೮೬ | ೧೧೦೭ | ,, |
| ೩೩ | ,, ಶಿವಶಕ್ತಿ ,, | ೧೧೦೭ | ೧೧೨೬ | ಪೂವಲ್ಲೀ |
| ೩೪ | ,, ವಾಮಶಕ್ತಿ ,, | ೧೧೨೬ | ೧೧೭೯ | ಗುಂಮಗೊಳ್ಳ |
| ೩೫ | ,, ರುದ್ರಶಕ್ತಿ ,, | ೧೧೭೯ | ೧೨೧೬ | ನಖಪುರ |
| ೩೬ | ,, ಈಶಾನಯೋಗಿ ,, | ೧೨೧೬ | ೧೨೩೧ | ಸಿದ್ಧಾಚಲ |

| | | | | | |
|---|---|---|---|---|---|
| ೩೭ | ಶ್ರೀ | ಜ್ಞಾನಶಕ್ತಿ ಶಿವಾಚಾರ್ಯರು | ೧೨೩೧ | ೧೨೫೮ | ಪೂವಲ್ಲೀ |
| ೩೮ | ,, | ಸಾಂಬಶಕ್ತಿ ,, | ೧೨೫೮ | ೧೨೯೩ | ನಖಪುರ |
| ೩೯ | ,, | ಸಿದ್ಧೇಶ್ವರ ,, | ೧೨೯೩ | ೧೩೧೬ | ಪೂವಲ್ಲೀ |
| ೪೦ | ,, | ಚಂದ್ರಶೇಖರ ,, | ೧೩೧೬ | ೧೪೦೭ | ಮುನಿಪಲ್ಲೀ |
| ೪೧ | ,, | ಸಿದ್ಧಲಿಂಗ ,, | ೧೪೦೭ | ೧೪೫೦ | ಅಸುಂಡಿ |
| ೪೨ | ,, | ಸಿದ್ಧಬಸವ ,, | ೧೪೫೦ | ೧೫೦೨ | ,, |
| ೪೩ | ,, | ಗುರುಸಿದ್ಧ ,, | ೧೫೦೨ | ೧೫೨೨ | ಗುಮಗೊಳ್ಳ |
| ೪೪ | ,, | ಸಿದ್ಧಲಿಂಗ ,, | ೧೫೨೨ | ೧೫೫೧ | ಹಂಚಿನಾಳ |
| ೪೫ | ,, | ಸಿದ್ಧಬಸವ ,, | ೧೫೫೧ | ೧೬೩೦ | ಬೂದಿಹಾಳ |
| ೪೬ | ,, | ಸಿದ್ಧಲಿಂಗ ,, | ೧೬೩೦ | ೧೬೫೮ | ಪೂವಲ್ಲೀ |
| ೪೭ | ,, | ಸಿದ್ಧಬಸವ ,, (ಗಡ್ಡದ ಪಟ್ಟದ) | ೧೬೫೮ | ೧೭೫೪ | ,, |
| ೪೮ | ,, | ಶ್ರೀರುದ್ರ ,, | ೧೭೫೪ | ೧೭೭೪ | ನಾವಳ್ಳಿ |
| ೪೯ | ,, | ಗುರುಬಸವ ,, | ೧೭೭೪ | ೧೮೦೩ | ಉಗರಗುಳ್ಳ |
| ೫೦ | ,, | ಸಿದ್ಧಬಸವ ,, | ೧೮೦೩ | ೧೮೩೨ | ,, |
| ೫೧ | ,, | ಮಹೇಶ್ವರ ,, | ೧೮೩೨ | | |

| ನಂ. | | ಚರಪಟ್ಟಾಧಿಕಾರಿಗಳ ನಾಮಾವಳಿಯು | ಜೀವಿಸಿದ ಕಾಲ ಶಕದಿಂದ | ಶಕದವರೆಗೆ | ಶಿವೈಕ್ಯ ಸ್ಥಾನ |
|---|---|---|---|---|---|
| ೧ | ಶ್ರೀ | ಸಿದ್ಧಚೈತನ್ಯ ಶಿವಾಚಾರ್ಯರು | | ೧೫೦ | ಪೂವಲ್ಲೀ |
| ೨ | ,, | ಶಿವಾದಿತ್ಯ ,, | | ೯೫ | ಕಂಚೀ |
| ೩ | ,, | ವಿಶ್ವೇಶ್ವರ ,, | | ೭೮ | ಪೂವಲ್ಲೀ |
| ೪ | ,, | ನೀಲಕಂಠ ,, | | ೮೦ | ಹೃಷಿಕೇಶ |
| ೫ | ,, | ಚಿದ್ಘನ ,, | ೮೦ | ೧೧೮ | ಶ್ರೀಶೈಲ |
| ೬ | ,, | ಶಿವಾನುಭವ ,, | ೧೧೮ | ೧೯೩ | ಪೂವಲ್ಲೀ |
| ೭ | ,, | ಸ್ವಪ್ರಭಾನಂದ ,, | ೧೯೩ | ೨೩೦ | ,, |
| ೮ | ,, | ಚಿದಂಬರ ,, | ೨೩೦ | ೨೪೨ | ನಖಪುರ |
| ೯ | ,, | ಚಿಚ್ಛಕ್ತಿ ,, | ೨೪೨ | ೨೯೧ | ಸಿದ್ಧಾಚಲ |
| ೧೦ | ,, | ಯೋಮ ,, | ೨೯೧ | ೩೦೧ | ,, |
| ೧೧ | ,, | ಚಿದಾನಂದ ,, | ೩೦೧ | ೩೫೮ | ಪೂವಲ್ಲೀ |
| ೧೨ | ,, | ಧವಳಾಂಗ ,, | ೩೫೮ | ೩೯೪ | ಧವಳೇಶ್ವರ |

| | | | | | |
|---|---|---|---|---|---|
| ೧೩ | ಶ್ರೀ ಜ್ಞಾನಶಕ್ತಿ ಶಿವಾಚಾರ್ಯರು | | ೩೯೪ | ೪೩೯ | ಪೂವಲ್ಲೀ |
| ೧೪ | ,, ಶಿವಶಕ್ತಿ | ,, | ೪೩೯ | ೫೧೩ | ಮುನವಳ್ಳೀ |
| ೧೫ | ,, ವಾಮಶಕ್ತಿ | ,, | ೫೧೩ | ೬೧೦ | ಪೂವಲ್ಲೀ |
| ೧೬ | ,, ಲೋಕನಾಥ | ,, | ೬೧೦ | ೬೬೩ | ಲೋಕಾಪುರ |
| ೧೭ | ,, ಅಘೋರ | ,, | ೬೬೩ | ೭೯೮ | ಪೂವಲ್ಲೀ |
| ೧೮ | ,, ಸಿದ್ಧನಂದೀಶ್ವರ | ,, | ೭೯೮ | ೮೧೩ | ,, |
| ೧೯ | ,, ಶಿವಾನುಭವ | ,, | ೮೧೩ | ೮೭೧ | ಧವಳೇಶ್ವರ |
| ೨೦ | ,, ಈಶಾನಯೋಗಿ | ,, | ೮೭೧ | ೯೪೩ | ನಖಪುರ |
| ೨೧ | ,, ಶಿವಶಕ್ತಿ | ,, | ೯೪೩ | ೧೦೦೬ | ಸಂಗಳ |
| ೨೨ | ,, ಶ್ರೀರುದ್ರಶಕ್ತಿ | ,, | ೧೦೦೬ | ೧೦೨೧ | ಪೂವಲ್ಲೀ |
| ೨೩ | ,, ಅಘಹರ | ,, | ೧೦೨೧ | ೧೦೪೨ | ,, |
| ೨೪ | ,, ಮುನೀಶ್ವರ | ,, | ೧೦೪೨ | ೧೦೬೧ | ನಖಪುರ |
| ೨೫ | ,, ಜ್ಞಾನಶಕ್ತಿ | ,, | ೧೦೬೧ | ೧೦೯೨ | ಹಂಪಿ |
| ೨೬ | ,, ಬ್ರಹ್ಮಶಕ್ತಿ | ,, | ೧೦೯೨ | ೧೧೬೭ | ಪೂವಲ್ಲೀ |
| ೨೭ | ,, ಧವಳಾಂಗ | ,, | ೧೧೬೭ | ೧೨೦೮ | ಸಂಗಳ |
| ೨೮ | ,, ತತ್ಪುರುಷ | ,, | ೧೨೦೮ | ೧೨೪೫ | ನಖಪುರ |
| ೨೯ | ,, ಸಿದ್ಧನಂದೀಶ್ವರ | ,, | ೧೨೪೫ | ೧೨೮೪ | ಕುರವತ್ತಿ |
| ೩೦ | ,, ರುದ್ರಮುನಿ | ,, | ೧೨೮೪ | ೧೩೧೧ | ಮುನವಳ್ಳಿ |
| ೩೧ | ,, ಅಘೋರ | ,, | ೧೩೧೧ | ೧೩೧೭ | ಪೂವಲ್ಲೀ |
| ೩೨ | ,, ಸಿದ್ಧನಂದೀಶ್ವರ | ,, | ೧೩೧೭ | ೧೩೪೮ | ಬುಕ್ಕಸಾಗರ |
| ೩೩ | ,, ಈಶಾನಶಿವಯೋಗಿ | ,, | ೧೩೪೮ | ೧೩೭೦ | ಪೂವಲ್ಲೀ |
| ೩೪ | ,, ಸಿದ್ಧನಂದೀಶ್ವರ | ,, | ೧೩೭೦ | ೧೪೪೧ | ,, |
| ೩೫ | ,, ಚಿಕ್ಕನಂಜೇಶ್ವರ | ,, | ೧೪೪೧ | ೧೪೯೮ | ,, |
| ೩೬ | ,, ಸಿದ್ಧಲಿಂಗ | ,, | ೧೪೯೮ | ೧೫೨೪ | ಸಿರಸಂಗಿ |
| ೩೭ | ,, ಸಿದ್ಧನಂಜೇಶ್ವರ | ,, | ೧೫೨೪ | ೧೫೬೨ | ಸವದತ್ತಿ |
| ೩೮ | ,, ಸಿದ್ಧವೀರ | ,, | ೧೫೬೨ | ೧೬೩೫ | ಅವರಾದಿ |
| ೩೯ | ,, ಸಿದ್ಧೇಶ್ವರ | ,, | ೧೬೩೫ | ೧೬೯೨ | ಹಡಗಲಿ |
| ೪೦ | ,, ಗುರುಸಿದ್ಧ | ,, | ೧೬೯೨ | ೧೭೨೨ | ಲೋಕಾಪುರ |
| ೪೧ | ,, ಸಿದ್ಧಬಸವ | ,, | ೧೭೨೨ | ೧೭೫೧ | ಕೊಟಬಾಗಿ |
| ೪೨ | ,, ಸಿದ್ಧಲಿಂಗ | ,, | ೧೭೫೧ | ೧೭೭೨ | ಪೂವಲ್ಲೀ |
| ೪೩ | ,, ಗುರುಸಿದ್ಧ | ,, | ೧೭೭೨ | ೧೮೨೩ | ,, |
| ೪೪ | ,, ನೀಲಕಂಠ | ,, | ೧೮೨೩ | | |

ಮೇಲ್ಕಾಣಿಸಿದ ಪಟ್ಟಾವಳಿಯ ಸತ್ಯತೆಯ ಬಗ್ಗೆ ಪ್ರಮಾಣಗಳೆಂದರೆ ಹೂಲಿಯ ಮದನಾಸುರದೇವರ ಗುಡಿಯಲ್ಲಿಯೂ ಕೆರೆಸಿದ್ಧೇಶ್ವರ ದೇವರ ಗುಡಿಯಲ್ಲಿಯೂ ಇರುವ ಎರಡು ಶಿಲಾಲಿಪಿಗಳೇ ಸರಿ. ಇವೆರಡರಲ್ಲಿ ಮಂದನಾಸುರದೇವರ ಗುಡಿಯೊಳಗಿರುವ ಲಿಪಿಯಲ್ಲಿ ನಾಲ್ಕು ಕಾಲದ ಶಾಸನಗಳು (ಸನದುಗಳು) ಇವೆ. ಈ ನಾಲ್ಕು ಶಾಸನಗಳು ಕ್ರಮವಾಗಿ ಶಾಲಿವಾಹನ ಶಕದ ೧೦೨೬ನೇ ತಾರಣ, ೧೦೮೪ನೇ ಚಿತ್ರಭಾನು, ೧೧೦೬ನೇ ಕ್ರೋಧಿ, ೧೧೪೬ನೇ ತಾರಣ ಸಂವತ್ಸರಗಳಲ್ಲಿ ಬರೆಯಲ್ಪಟ್ಟಿವೆ. ಕೆರೆಸಿದ್ಧೇಶ್ವರ ದೇವಾಲಯದ ಶಾಸನವು ಶಾಲಿವಾಹನ ಶಕದ ೧೦೨೯ನೇ ಸರ್ವಜಿತು ಸಂವತ್ಸರದಲ್ಲಿ ಬರೆಯಲ್ಪಟ್ಟಿದೆ. ಒಟ್ಟಿಗೆ ಎರಡೂ ಲಿಪಿಗಳಲ್ಲಿ ಐದು ಸನದುಗಳಿವೆ. ಇವುಗಳಲ್ಲಿ :

**ಮೊದಲನೆಯದು :** ಚಾಳುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ದಂಡನಾಯಕನಾದ ಅನನ್ತಪಾಳನ ಅಳಿಯ ಲಕ್ಷ್ಮರಸನು ಬೆಳವಲನಾಡನ್ನಾಳುತ್ತಿದ್ದು, ಹೆಗ್ಗಡೆ ಸಿಂಗರಸನಿಗೆ ಹೇಳಿ ಹೂಲಿಯ ಶ್ರೀಮಂದನಾಸುರ ದೇವರಿಗೆ ಅಲ್ಲಿಯ ದಂಡ ದೋಷದೊಳಗೊಂದು ಭಾಗವನ್ನು ಸ್ಥಾನಾಚಾರ್ಯರಾದ ತತ್ಪುರುಷ ಪಂಡಿತರ ಸಮಕ್ಷಮದಲ್ಲಿ ದಾನವಾಗಿ ಬಿಡಿಸಿರುವರು. ಇದಲ್ಲದೆ ಹೂಲಿಯ ಊರೊಡೆಯರಾದ ಸಾವಿರ ಮಂದಿ ಬ್ರಾಹ್ಮಣರೂ ಶಿವಯ್ಯಗೇರಿಯ ನಾಲ್ಕುಜನ ಪ್ರಮುಖರೂ ಅನ್ಧಾಸುರ ದೇವರಿಗೆ ಕೆಲವು ಸುಂಕಗಳನ್ನೂ ಭೂಮಿಯನ್ನೂ ದಾನವಾಗಿ ಬಿಟ್ಟಿರುವರು.

ಈ ಶಾಸನದಲ್ಲಿ ಸ್ಥಾನಾಚಾರ್ಯರ ಪೂರ್ವ ಪರಂಪರೆ ಹೀಗೆ ಹೇಳಿದೆ :

ಈ ಮಹಿಯೊಳ್ನೆಗಳ್ದರ್ ವಿ ।
ದ್ಯಾ ಮಹಿಮೋನ್ನತಿಯೊಳುಗ್ರತಪದೊಳ್ ಮುಕ್ತಿ ॥
ಶ್ರೀಮುಖ ಮಣಿಮುಕುರರ್ ಕಾ ।
ಳಾಮುಖರೇನೋ ಪರಾನ್ಮುಖರ್ ಮುನಿಮುಖ್ಯರ್ ॥

ಅವರೊಳ್ಪೂಲಿಯ ದೇವರೆಂಬವರೆಸೆದರ್ ನಿಷ್ಠಾಗ್ರಗಣ್ಯರ್ ಬಳಿ ।
ಕ್ಕವರಿಂದಂ ಲಕುಳೀಶ ದೇವರವರಿಂ ಪಖ್ಖಾಣಿದೇವರ್ ಗುಣ ॥
ಪ್ರವರರ್ ಸರ್ವ್ವಕಳಾಗಮ ಪ್ರಥಿತ ವಿದ್ಯೇಶಾನಯೋಗೀಂದ್ರರೇ ।
ನವರಿಂ ಪೆಂಪಿನ ಸೋಮದೇವಮುನಿಪರ್ ವಿಶ್ವಂಭರಾಭಾಗದೊಳ್ ॥

ರುಚಿರೊಂದ್ಯಪ್ರತ್ನರೋಚಿಸ್ತಬಕ ವಿಳಸಿತಾನೇಕ ಭೂಪಾಳ ಚೂಡಾ ।
ನಿಚಯ ಪ್ರೋದ್ಭೃಷ್ಟ ಪಾದದ್ವಯನುಪಗತ ಸಾರಸ್ವತಂ ನೂತ್ನ ಧರ್ಮ್ಮೋ ॥
ಪಚಯಂಭೋರಾಶಿ ಕಾಳಾನನ ನಿಖಿಳ ಮುನೀಂದ್ರೋತ್ತಮಂ ಮೋಕ್ಷಲಕ್ಷ್ಮೀ ।
ಕುಚಕುಂಭಾಳಂ ಕೃತೋರಸ್ಥಳನಮಳ ಯಶ ಜ್ಞಾನಶಕ್ತಿವ್ರತೀಂದ್ರಂ ॥

ಏಕರಿಯುಂತೆ ಬಹುತರ್ಕ ।
ವ್ಯಾಕರಣಂ ಜ್ಞಾನಶಕ್ತಿ ಪಂಡಿತ ದೇವ- ॥
ಗೇಕಾಕ್ಷರಮೆಂದು ಮಹೀ ।
ಲೋಕ ಬಣ್ಣಿಸುವುದವರ ಮಹಿಮೋನ್ನತಿಯುಂ ॥

ವಿತತಯಶಂ ಚಳುಕ್ಯಕುಳತಿಗ್ಮಕರಂ ಭುವನಯ್ಕಮಲ್ಲ ಭೂ ।
ಪತಿ ಬಳಿಯಟ್ಟಿ ತನ್ಮುನಿಪದಾಬ್ಜಯುಗಕ್ಕೆ ವಿನಮ್ರನಾಗಿ ನಿ ॥
ಕ್ಷಿತಮತಿ ಕೊಟ್ಟಪೂಜೆಯೊಳೆ ಮಾಡಿಸಿದರ್ ಶಿವಗೇಹಮಂ ಶಿಳಾ ।
ಯುತನಮಿಂತು ಮಾಡಿಪರೆ ಪೇಳೆನುತಂ ಧರೆಬಣ್ಣಿಪನ್ನೆಗಂ ॥

ಅವರಣುಗಿನ ಶಿಷ್ಯರಿಳಾ ।
ಪ್ರವರರ್ ಗುಣಗಣ ಸಮನ್ವಿತರ್ ನಾನಾ ಶಾ ॥
ಸ್ತ್ರವಿದರ್ ತತ್ಪುರುಷರ್ ದಿ ।
ಗ್ವಿವರಂಗಳನಮಳ ಕೀರ್ತಿಯುಂ ಧವಳಿಸಿದರ್ ॥

(ಈ ಆರು ವೃತ್ತಗಳು ಮೂಲ ಶಿಲಾಲಿಪಿಯಲ್ಲಿ ೭ ನೇ ಪಂಕ್ತಿಯಿಂದ ೧೮ ನೇ ಪಂಕ್ತಿಯವರೆಗೆ ಅಡಕವಾಗಿವೆ.)

ಪ್ರಖ್ಯಾತರಾದ ಕಾಳಾಮುಖ ಮುನೀಶ್ವರರನೇಕರಲ್ಲಿ* ಪೂಲಿಯ ದೇವರೆಂಬವರೊಬ್ಬರು ಆಜನ್ಮಬ್ರಹ್ಮಚಾರಿಗಳು, ಅವರ ಶಿಷ್ಯರು ಲಕುಳೀಶ್ವರ ದೇವರು. ಅವರ ಶಿಷ್ಯರು ವಖ್ಖಾಣಿ ದೇವರು. ಅವರ ಶಿಷ್ಯರು ಜ್ಞಾನಶಕ್ತಿ ವ್ರತೀಂದ್ರರು. ಇವರು ಅನೇಕ ರಾಜರಿಂದ ಪೂಜೆಗೊಂಡವರು. ಕಲ್ಯಾಣದ ಚಾಳುಕ್ಯ ವಿಕ್ರಮಾದಿತ್ಯನ ತ್ರಿಭುವನಮಲ್ಲ ರಾಜನ ಅಣ್ಣನಾದ ಭುವನೈಕಮಲ್ಲ ಸೋಮೇಶ್ವರನು ಪಾದಪೂಜೆ ಮಾಡಿ ಕೊಟ್ಟ ದ್ರವ್ಯದಿಂದ ಇವರು ಶಿವಾಲಯವನ್ನು ಕಟ್ಟಿಸಿದರು. ಇವರ ಶಿಷ್ಯರೇ ತತ್ಪುರುಷ ಪಂಡಿತರು.

---

* ಮೈಸೂರು ಸೀಮೆಯಲ್ಲಿ ಹಾಸನ ತಾಲೂಕಿನ ಮುದುಗೆರೆ ಗ್ರಾಮದ ಶಿಲಾಲಿಪಿಯಲಿ :
"ಒಪ್ಪುಗುಂ । ಮುದೇಗೆರೆ ದೇವರಾಜನ ಪುರಕ್ಕೆಣೆಯಾಗಿ ಮಹೀವಿಭಾಗದೊಳ್ । ಅಲ್ಲಿಗೆ ಮುನಿಪತಿ ಕೀರ್ತಿವಲ್ಲಿಯೆ ಮಿಸುಪಂತೆ ಧವಳತನು ಕೆಂಜೆಡೆ ಸುಲಿಪಲ್ಲು ವರಮುದ್ರೆ ಲಾಕುಳ ಸಲ್ಲಕ್ಷಣವೊಗೆದನಂದು ಮುದುಗೆರೆ ಮುನಿಪಂ। ಆ ಮಹಾಮುನೀಂದ್ರನ ನಿಜನಾಮಾಂಕಿತವೆಂತೆಂದಡೆ, ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮನೋನುಷ್ಠಾನ ಜಪ ಸಮಾಧಿಶೀಲ ಸಂಪನ್ನರುಂ ಜ್ಞಾನಪ್ರಸನ್ನರುಂ ಸಕಲಶಾಸ್ತ್ರ ಯಂತ್ರ ತಂತ್ರ ಪ್ರವೀಣರುಂ ಪರಿಚಿತ್ತಜ್ಞರುಂ ಶ್ರೀಮನ್ಮಹಾದೇವ ದೇವೋತ್ತಮ ಪಾದಾಂಭೋಜ ಭೃಂಗರಪ್ಪ ಶ್ರೀಮದುನಾಗರಾಶಿ ಪಂಡಿತ ದೇವರು"

ಎಂದು ನಾಗರಾಶಿ ಪಂಡಿತರಿಗೆ ಮುದುಗೆರೆ ಮುನಿಪನೆಂದು ಹೇಳಿರುವ ಹಾಗೆ ಮೇಲ್ಕಾಣಿಸಿದ ಹೂಲಿಯ ಶಿಲಾಶಾಸನದಲ್ಲಿ ಅಲ್ಲಿಯ ಶ್ರೀ ಸಿದ್ಧೇಶ್ವರ ಮುನಿಗಳೆಂಬವರಿಗೇ ಪೂಲಿಯ ದೇವರೆಂದು ಕರೆದಿರುವುದು ಆಶ್ಚರ್ಯವಲ್ಲ.

ಈ ಏಳು ಹೆಸರುಗಳೂ ಪಟ್ಟಾವಳಿಯಲ್ಲಿ ಕ್ರಮವಾಗಿ ಸಿಕ್ಕುತ್ತವೆ. ಪಟ್ಟಾವಳಿಯಲ್ಲಿ ೨೪ ರಿಂದ ೩೦ ರ ವರೆಗಿನ ಪಟ್ಟದ ಸ್ವಾಮಿಗಳ ಹೆಸರುಗಳನ್ನು ಈ ಶಾಸನೋಕ್ತಗಳಾದ ಹೆಸರುಗಳಿಗೆ ಸರಿ ಹಚ್ಚಿ ನೋಡಿದರೆ ೨೪ ನೆಯವರಾದ ಏಕೋದೇವರನ್ನು ಪಟ್ಟಾಣಿ ದೇವರೆಂದೂ ಶಿಲಾಲಿಪಿಯಲ್ಲಿ ಹೇಳಿದ್ದು ಕಾಣುತ್ತದೆ. ಆದರೆ ಉಳಿದ ಹೆಸರುಗಳು ತುಂಬಾ ಯಥಾಯಥವಾಗಿವೆ. ಬಾಧಕವೇನೂ ಇಲ್ಲ. ಅಲ್ಲದೆ ಶಾಸನದಲ್ಲಿ ಹೇಳುವ ಕಾಲದಲ್ಲಿ ತತ್ಪುರುಷ ಪಂಡಿತರು ಸ್ವಾಮಿಗಳಾಗಿ ಇದ್ದರೆಂದು ಪಟ್ಟಾವಲಿಯ ಕಾಲದಿಂದಲೂ ಗೊತ್ತಾಗುತ್ತದೆ. ಇದಿರಲಿ.

ಮದನಾಸುರ ದೇವಾಲಯದ ಒಂದೇ ಶಿಲಾಲಿಪಿಯಲ್ಲಿ ಒಂದರ ಕೆಳಗೊಂದರಂತೆ ಬರೆದ ನಾಲ್ಕು ಶಾಸನಗಳೊಳಗೆ **ಎರಡನೆಯದರಲ್ಲಿ :**

ಬಿಜ್ಜಳರಾಯನ ಆಳಿಕೆಯ ಏಳನೇ ವರ್ಷದಲ್ಲಿ ಎಂದರೆ ಶಾಲಿವಾಹನ ಶಕದ ೧೦೮೪ ನೆಯ ಚಿತ್ರಭಾನು ಸಂವತ್ಸರದಲ್ಲಿ ಶ್ರೀಮದನಾಸುರ ದೇವರ ಸ್ಥಾನದಾಚಾರ್ಯರಾದ ಶ್ರೀ ಜ್ಞಾನಶಕ್ತಿದೇವರು ಹೂಲಿಯಗ್ರಹಾರದೊಡೆಯರಾದ ಸಾವಿರಮಂದಿ ಬ್ರಾಹ್ಮಣರ ಸಮಕ್ಷಮದಲ್ಲಿ ದೇವರಿಗೆ ಭೂಮಿಯನ್ನು ಬಿಟ್ಟಿರುವರು. ಈ ಜ್ಞಾನಶಕ್ತಿದೇವರು ಪಟ್ಟಾವಲಿಯಲ್ಲಿ ಚರಪಟ್ಟದ ೨೫ನೇ ಸ್ವಾಮಿಗಳೆಂದು ತೋರುತ್ತದೆ.

**ಮೂರನೆಯ ಶಾಸನದಲ್ಲಿ :** ಊರೊಡೆಯರೂ ಸೆಟ್ಟಿಗಳೂ ಭೂದಾನ ಮಾಡಿದ ಹಾಗೆ ಹೇಳಿದೆ. ಆದರೆ ಸ್ಥಾನಾಚಾರ್ಯರ ನಾಮ ನಿರ್ದೇಶವಿಲ್ಲ.

**ನಾಲ್ಕನೆಯ ಶಾಸನದಲ್ಲಿ :** ಸಾಲಿಗ ಸಮಯದವರು ಊರೊಡೆಯರಾದ ಸಾವಿರ ಮಂದಿಯ ಸನ್ನಿಧಾನದಲ್ಲಿ ಶ್ರೀಮದಂಧಾಸುರ ದೇವರ ಸ್ಥಾನಾಚಾರ್ಯರಾದ ವಾಮಶಕ್ತಿ ದೇವರಿಗೆ ದಾನಕೊಟ್ಟ ಹಾಗೆ ಹೇಳಿದೆ. ಇಲ್ಲಿ ಹೇಳಿರುವ ಹೆಸರಿನ ಸ್ವಾಮಿಗಳು ಸ್ಥಿರಪಟ್ಟದ ಮೇಲೆ ೩೪ ನೆಯವರಾಗಿದ್ದಾರೆ.

**ಕೆರೆಸಿದ್ಧೇಶ್ವರ ದೇವರ ಗುಡಿಯ ಶಾಸನದಲ್ಲಿ :** ಹೂಲಿಯ ಕಳಸವಳ್ಳಿಗೇರಿಯ ನೂರು ಮಂದಿ ಮಹಾಜನಂಗಳು ಕಳಸೇಶ್ವರ ದೇವರಿಗೆ ಶಾಲಿವಾಹನ ಶಕದ ೧೦೨೯ ನೆಯ ಸರ್ವ್ವಜಿತು ಸಂವತ್ಸರದಲ್ಲಿ ದತ್ತಿಯನ್ನು ಬಿಟ್ಟ ಹಾಗೆ ಹೇಳಿದೆ. ಇದರಲ್ಲಿ ಕಳಸೇಶ್ವರ ಪದಕಮಳ ಭೃಂಗರಾದ ಸೋಮೇಶ್ವರ ಬ್ರತೀಶನನ್ನು, ಅವರ ಗುರುವನ್ನು ಹೀಗೆ ಹೊಗಳಿದೆ :

ಅಲ್ಲಿಯಾಚಾರ್ಯರು ॥
ಸ್ನಾನ ಜಪ ಹೋಮ ನಿಯಮ ।
ಧ್ಯಾನಾನುಷ್ಠಾನ ಶೀಲ ತತ್ಪರನಂ ಸ ॥
ಜ್ಞಾನನಿಧಿ ಮೌನ ನಿಧಿಯೆಂ ।
ದಾನಂದದೆ ಪೊಗಳ್ವುದವನಿ ಸಿದ್ಧೇಶ್ವರನಂ ॥

ಬೌದ್ಧಾರ್ಹತ ಸಾಂಖ್ಯಯಾ ।
ಬೋದ್ಧೃಗಳೆಂದೆಂಬ ಬಿರುದು ಸಂದುದು ಜಗದೊಳ್ ॥
ಸಿದ್ಧೇಶ್ವರ ಪಂಡಿತರ್ಗ ।
ತ್ಯುದ್ಧತವಾದೀಭ ಸಿಂಹನೆನೆ ಮೆಚ್ಚದರಾರ್ ॥

ಅವರ ಶಿಷ್ಯರು ॥

ಅಘಹರ ಮುನೀಶ್ವರ ।
ಜಘನ್ಯಯತಿ ತತಿಯೊಳೆಂದು ಸಮನೆನಬಕ್ಕುಂ ॥
ಲಘು ಗುಣರಹಿತಂ ಭುವನದೊ
ಳಘೋರಜಪ ನಿಷ್ಠಿತಾ(ತ್ಮ)ಸೋಮೇಶ್ವರನಂ ॥

ಜಳನಿಧಿ ಪರೀತ ವಸುಧಾ ।
ತಳದೊಳು ನೈಷ್ಠಿಕ ಮುನೀಶ್ವರಾರಾಧ್ಯಂ ಶ್ರೀ ॥
ಕಳಸೇಶ ದೇವ ಪದಕಮಂ ।
ಳ ಬೃಂಗ* ಸೋಮೇಶ್ವರ ಬ್ರತೀಶ ಸ್ತುತ್ಯಂ ॥

(ಈ ನಾಲ್ಕೂ ಕಂದಪದ್ಯಗಳು ಮೂಲ ಶಿಲಾಲಿಪಿಯಲ್ಲಿ ೧೭ ನೇ ಪಂಕ್ತಿಯಿಂದ ೨೪ನೇ ಪಂಕ್ತಿಯ ವರೆಗೆ ಅಡಕವಾಗಿವೆ.)

ಇಲ್ಲಿ ಪರವಾದಿ ಗಜಗಳಿಗೆ ಸಿಂಹನಂತಿದ್ದ ಸಿದ್ಧೇಶ್ವರ ಹಾಗೂ ಅವರ ಶಿಷ್ಯ ಸೋಮೇಶ್ವರ ವ್ರತಿ, ಈ ಸೋಮೇಶ್ವರ ವ್ರತಿಗಳಿಗೆ ಅವರ ಅಘೋರ ಜಪನಿಷ್ಠೆ-ಯಿಂದ ಅಘಹರ ಮುನೀಶ್ವರರೆಂಬ ಹೆಸರು ಬಂದ ಹಾಗೆ ಹೇಳಿದೆ. ಇವರಲ್ಲಿ ಮೊದಲನೆಯುವರು ಪಟ್ಟಾವಳಿಯಲ್ಲಿ ಸ್ಥಿರಪಟ್ಟದ ೩೧ನೇ ಸ್ವಾಮಿಗಳೂ, ಎರಡನೆ ಯುವರು ಚರಪಟ್ಟದ ೨೩ನೇ ಸ್ವಾಮಿಗಳೂ ಆಗಿರಬಹುದೆಂದು ತೋರುತ್ತದೆ.

ಇದುವರೆಗಿನ ವಿವರಣಯಿಂದ ಹೂಲಿಯ ಮಠದ ಪಟ್ಟಾವಳಿಯು ಕಾಲ್ಪನಿಕ ವಾಗಿರದೆ ಐತಿಹಾಸಿಕವಾಗಿದೆಯೆಂಬುದು ಸ್ಪಷ್ಟ ಸಿದ್ಧಾಂತವಾದಂತಾಯಿತಂ.

ಇನ್ನು-ಮೇಲ್ಕಾಣಿಸಿದ ಶಿಲಾಲಿಪಿಗಳಲ್ಲಿ ಈ ಸ್ವಾಮಿಗಳಿಗೆ (ಸ್ಥಾನಾಚಾರ್ಯರಿಗೆ) ಕಾಳಾಮುಖ ಮುನಿಮುಖ್ಯರೆಂದು ಹೇಳಿದೆ. ಹಾಗಾದರೆ ಈ ಕಾಳಾಮುಖರು ಯಾರು? ಇಂದಿನವರೆಗೆ ಕಾಳಾಮುಖರ ಶಿಲಾಲಿಪಿಗಳು ಸಾವಿರಾರು ಸಿಕ್ಕಿವೆ. ಆದರೂ ನಿಶ್ಚಿತವಾಗಿ ಇವರು ಇಂಥವರೇ ಎಂದು ಯಾವ ಐತಿಹಾಸಿಕರೂ ಸ್ಥಿರ ಸಿದ್ಧಾಂತವನ್ನು ಸಪ್ರಮಾಣವಾಗಿ ಹೇಳಿಲ್ಲ. ಎಷ್ಟೋ ಶಿಲಾಲಿಪಿಗಳಲ್ಲಿ ಕಾಳಾ-ಮುಖರಿಗೆ- "ವರಮುನಿಪ ಶಿವಾಗಮದೊಳ್ ನಿರತರ್"+ "ಲಾಕುಳಾಗಮ

* ಇಲ್ಲಿ ಪ್ರಾಸ ತಪ್ಪಿದೆ.

\+ ಹಾಸನ ಜಿಲ್ಲೆಯ ಅರಸೀಕೆರೆಯ ತೊಂಬತ್ತನೇ ಶಾಸನದಲ್ಲಿ ಈ ಮಾತು ಹೇಳಿದೆ.

ಸಮುದ್ಧರಣರ್"‡ "ಶಿವಧರ್ಮ ಪ್ರತಿಪಾಳಕರ್"† ಮುಂತಾದುದಾಗಿ ವಿಶೇಷಿಸಿ ಹೇಳಿದೆ. ಹಾಗಾದರೆ ಇವರು ಎಂಥಾ ಶೈವರಾಗಿರಬಹುದು ? ಕ್ರಿಸ್ತೀಯ ೧೧ನೇ ಶತಮಾನದಿಂದ ೧೩ನೇ ಶತಮಾನದವರೆಗಿನ ಶಿಲಾಲಿಪಿಗಳೆಷ್ಟು ಸಿಕ್ಕಿವೆಯೋ ಅಷ್ಟೂ ಪರೀಕ್ಷಿಸಿ ನೋಡಿದರೆ ಇಡೀ ಕನ್ನಡ ನಾಡಿನ ಊರೂರಿನ ಶಿವದೇವಾಲಯಂಗಳ ಸ್ಥಾನಾಚಾರ್ಯರೆಲ್ಲ ಕಾಳಾಮುಖರೇ ಇದ್ದರೆಂದು ಕಾಣುವದು. ಹಾಗಾದರೆ ಇಂಥಾ ವಿಸ್ತಾರವಾದ ಜನಾಂಗವು ಯಾವ ಕಾಲದಲ್ಲಿ ಏನಾಗಿ ಹೋಯಿತು ? ಇತಿಹಾಸ ಸಂಶೋಧಕರ ಹೊರತು ಈ ಕಾಳಾಮುಖ ಶಬ್ದವು ಇನ್ನಾರಿಗೆ ಗೊತ್ತಿದೆ ? ಇಷ್ಟೊಂದು ಹೇಳಹೆಸರಿಲ್ಲದೆ ಹ್ಯಾಗೆ ಹೋಯಿತು ? ಧರ್ಮಾಂತರ ಮಾಡಿದರೆಂದರೆ ಯಾವ ಕಾಲಕ್ಕೆ ಮಾಡಿದರು ? ಎಲ್ಲರೂ ಮಾಡಿದರೇ ? ಕ್ರಿಸ್ತೀಯ ಹದಿಮೂರನೇ ಶತಮಾನದವರೆಗೂ ಕಾಳಾಮುಖರಿದ್ದರೆಂದು ಶಿಲಾಲಿಪಿಗಳಿಂದ ತಿಳಿಯುತ್ತದೆ. ಅನಂತರ ಅಂಥಾ ಪ್ರಬಲವಾದ ಹೊಸ ಕ್ರಾಂತಿಯು ಹೊರತು ಇನ್ನಾವುದೂ ಆ ಕಾಲಕ್ಕಿರಲಿಕ್ಕಿಲ್ಲ. ಆದರೆ ಇಂಥಾ ಓಜಸ್ವಿಯಾದ ಕಾಲಾಮುಖರು ತಮ್ಮ "ಶಿವಧರ್ಮ ಪ್ರತಿಪಾಳಕತ್ವ"ವನ್ನು ತೊರೆದು ಎಲ್ಲಾರೂ ವೈಷ್ಣವರಾಗಿರುವ ಸಂಭವವಿಲ್ಲ. ಹಾಗಾದರೆ ಯಾವಾಗ ಏನಾದರು ?

ಇವರು ಮೂಲತಃ ಯಾವದೋ ಒಂದು ವಿಧದ ಶೈವರಾಗಿದ್ದು ಮುಂದೆ ವೀರಶೈವರಾದರೆಂದು ಇಟ್ಟುಕೊಂಡರೂ ಒಪ್ಪುವದಿಲ್ಲ. ಯಾಕೆಂದರೆ ಬಸವಣ್ಣನವರ ಕಾಲದಿಂದ ಮುಂದೆ ವೀರಶೈವ ಧರ್ಮದಲ್ಲಿ ಇಂಥಾ ಭರತಿಯಾಗುವಷ್ಟು ತೇಜವುಳಿದದ್ದು ಇತಿಹಾಸಕ್ಕೆ ಗೊತ್ತಿಲ್ಲ. ಅವರು ಧರ್ಮಾಂತರ ಮಾಡಿದ್ದೇ ಆದರೆ ಬಸವಣ್ಣನವರ ಕಾಲದಲ್ಲಿ ಮಾಡಬಹುದಾಗಿತ್ತು. ಅನಂತರದ ಕಾಲದಲ್ಲಿ ಇಂಥಾ ತೇಜಸ್ವಿಗಳಾದ ಕಾಳಾಮುಖರನ್ನು ಸೋಲಿಸಿ ಧರ್ಮಾಂತರ ಮಾಡಿಸುವ ಸಾಮರ್ಥ್ಯವು ವೀರಶೈವ ಧರ್ಮದಲ್ಲುಳಿದಿರಲಿಲ್ಲವೆಂಬುದು ಸರ್ವಸಮ್ಮತವಾಗಿದೆ. ಆದ್ದರಿಂದ ಅವರು ಧರ್ಮಾಂತರ ಮಾಡಿರುವ ಸಂಭವವಿಲ್ಲ*.

‡ ಹಾಸನ ಜಿಲ್ಲೆಯ ಅರಸೀಕೆರೆಯ ೪೬ನೇ ಶಾಸನದಲ್ಲಿ ಈ ಮಾತು ಹೇಳಿದೆ.

† ,, ,, ಹಾಸನ ತಾಲೂಕಿನ ೭೧ನೇ ,, ,, ,,

* ಹೂಲಿಯ ಮಠದ ಪೂರ್ವಾಚಾರ್ಯರು ಬರೆದ ಗ್ರಂಥಗಳ ವಿಷಯದಲ್ಲಿ ಹೀಗೆ ಹೇಳಿದೆಯಷ್ಟೇ. ಅದನ್ನು ನೆನೆದರೆ ಈ ಮಠದ ಪೂರ್ವಾಚಾರ್ಯರು ಸಾಮಾನ್ಯರಾಗಿರಲಾರರೆಂದು ತೋರುತ್ತದೆ. ಬಸವಣ್ಣನವರ ಅನಂತರ ಮುನ್ನೂರು ವರ್ಷಗಳವರೆಗೂ ಇವರು ಕಾಳಾಮುಖರಾಗಿದ್ದು ಅನಂತರ ವೀರಶೈವ ಸ್ವಾಮಿಗಳಾದರೆಂದು ಹೇಳುವುದು ಅಷ್ಟೊಂದು ಸಮಂಜಸವಾಗಿ ಕಾಣದು. ಸ್ಥಿರಪಟ್ಟಾವಳಿಯನ್ನು ನೋಡಿದರೆ ೪೦ ನೇ ಪಟ್ಟದಿಂದೀಚಿಗಿನ ಹೆಸರುಗಳು ಮಾತ್ರ ವೀರಶೈವರ ಹೆಸರುಗಳಂತೆ ಕಾಣುತ್ತವೆ. ಮುಂಚಿನ ಹೆಸರುಗಳೆಲ್ಲಾ ಕಾಳಾಮುಖರ ಹೆಸರುಗಳೆಂದು ಶಿಲಾಲಿಪಿಗಳಲ್ಲಿ ಸಿಕ್ಕುವಂಥವುಗಳಂತಿವೆ. ಇಂದಿಗೆ ಮುನ್ನೂರೇ ವರುಷಗಳ ಹಿಂದೆ ಇಂಥಾ ಮಠವು ಧರ್ಮಾಂತರ ಮಾಡಿದ್ದಿತೆಂಬುದು ಸಮರ್ಪಕವಾಗಿ ಕಾಣದು. ಆದರೂ ನಾವು ಆ ಮಠದ ಪಟ್ಟಾವಳಿಯ ಇನ್ನುಳಿದ ಎರಡು ಪ್ರತಿಗಳನ್ನು ನೋಡಿ ಹೆಚ್ಚಿನ ಐತಿಹಾಸಿಕ ವಿವರಣೆಯನ್ನು ಮುಂದೆ ಪ್ರಸಿದ್ಧಿಸುವೆವು.

ಹಾಗಾದರೆ ಈ ಕಾಲಾಮುಖರ ಬಗ್ಗೆ ಇಂದಿಗೆ ನಮಗೆ ತಿಳಿದ ಮಟ್ಟಿಗೆ ವಿವರಿಸಿ ಹೆಚ್ಚಿನ ಶೋಧಗಳಿಗಾಗಿ ಮುಂದೆ ಯತ್ನಿಸುವ ಬಯಕೆಯನ್ನು ಮಾತ್ರ ಅರಿಕೆ ಪಡಿಸುವೆವು.

ಮೈಸೂರ ಸೀಮೆಯ ಶಿಕಾರಿಪುರದ ತಾಲೂಕಿನಲ್ಲಿರುವ ಬಳ್ಳಿಗಾಂವೆಯೆಂಬುದು ಈ ಕಾಳಾಮುಖರದೊಂದು ಮುಖ್ಯಸ್ಥಾನವಂತೆ. (ಶ್ರೀ ಅಲ್ಲಮಪ್ರಭುಗಳು ಇದೇ ಬಳ್ಳಿಗಾಂವೆಯವರೆಂದು ತೋರುತ್ತದೆ, ಇದಿರಲಿ) ಅಲ್ಲಿಯ ಶಿಲಾಲಿಪಿಗಳಲ್ಲಿ ಅವರ ವಿಷಯವು ಸಂಪೂರ್ಣವಾಗಿ ಹೇಳಿದೆಯಂತೆ. ಆದರೆ ನನ್ನಲ್ಲಿ ಆ ಶಾಸನ ಪುಸ್ತಕವಿಲ್ಲ. ಮುಂದೆ ಸಂಪಾದಿಸಿ ಹೆಚ್ಚಿಗೆ ಬರೆಯುವೆ.+

ನಮಗೆ ತಿಳಿದಿರುವ ಮಟ್ಟಿಗೆ ಕಾಳಾಮುಖರ ಹೆಸರುಗಳ ಮುಂದೆ : ದೇವ ಪಂಡಿತ, ರಾಶಿ, ಶಕ್ತಿ, ಶಿವ, ಜೀಯ್ಯ ಮುಂತಾದ ಉಪಾಧಿಗಳು ಸೇರಿರುವದುಂಟು. ದೃಷ್ಟಾಂತಕ್ಕೆಂದು ಅವರ ಕೆಲವು ಹೆಸರುಗಳನ್ನಿಲ್ಲಿ ಹೇಳುವೆವು :

---

\+ ಶ್ರದ್ಧೆಯ ಶ್ರೀ ಹರ್ಡೇಕರ ಮಂಜಪ್ಪನವರು ತಮ್ಮ ಬಸವಚರಿತ್ರೆಯ ೮ನೇ ಪುಟದಲ್ಲಿ ಈ ಬಗ್ಗೆ ಹೀಗೆ ಹೇಳಿರುವರು :

"ಮಿ. ರೈಸ ಸಾಹೇಬರು ಮೈಸೂರು ಇನ್‌ಸ್ಕ್ರಿಪ್‌ಶನ್ ಎಂಬ ಪುಸ್ತಕದಲ್ಲಿ ಬಳ್ಳಿ-ಗಾವಿಯ ಶಿಲಾಲಿಪಿಗಳ ವಿಷಯಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ೮ ನೇ ಲಿಪಿಯಲ್ಲಿರುವ ದೇನೆಂದರೆ : ಹಿರೇಮಠ, ಪಂಚಘನಲಿಂಗನಮಠ, ತ್ರಿಪುರಾಂತಕನ ಮಠ, ವಾಮಶಕ್ತಿ ಮಠ, ಕೋಡಿಯ ಮಠ ಎಂಬ ಐದು ಮಠಗಳಲ್ಲಿ ಮೂಳಿಗ ಮಧುಕೇಶ್ವರ ಪಂಡಿತ, ಸರ್ವೇಶ್ವರ ಪಂಡಿತದೇವ, ಜ್ಞಾನಶಕ್ತಿದೇವ ಮೊದಲಾದ ಮಠಾಧಿಕಾರಿಗಳಿದ್ದರು. ಈ ಪಟ್ಟಣದಲ್ಲಿ ಮಾಚಿಸೆಟ್ಟಿ, ಮಾಣಿಕಸೆಟ್ಟಿ, ಮಹಾದೇವಸೆಟ್ಟಿ ಮೊದಲಾದ ವೀರ ಬಣಜಿಗರು ಪ್ರಮುಖ ರಾಗಿದ್ದರು.

ಹತ್ತನೇ ಲಿಪಿಯಲ್ಲಿ ಹೇಳಿರುವದೇನೆಂದರೆ- ಈ ಸೆಟ್ಟರು ನೇಪಾಳ, ಕುರುಂಬ, ಕಾಂಬೋಜ, ಗೊಲ್ಲ, ಲಾಳ, ಬರ್ಬರ ಮೊದಲಾದ ದೇಶಗಳಿಗೆ ಜಲ ಸ್ಥಲ ಮಾರ್ಗಗಳಿಂದ ವ್ಯಾಪಾರಕ್ಕೋಸ್ಕರ ಹೋಗುತ್ತಿದ್ದರು. ಇವರು ಲಿಂಗವನ್ನು ಮಸ್ತಕದಲ್ಲಿ ಧರಿಸುತ್ತಿದ್ದರು.

ಈ ವೀರ ಬಣಜಿಗರು ವೀರಶೈವರಲ್ಲಿಯೇ ಒಂದು ವರ್ಗಕ್ಕೆ ಸೇರಿದವರೆಂದು ಮಿ. ರೈಸ್ ಸಾಹೇಬರು ಹೇಳಿದ್ದಾರೆ. ಈ ಶಿಲಾಲಿಪಿಗಳು ಕ್ರಿಸ್ತಶಕದ ೧೧೧೨ ನೆಯ ಇಸವಿಯಲ್ಲಿ ಬರೆಯಲ್ಪಟ್ಟಿವೆ........." ಇತ್ಯಾದಿ.

ಶ್ರೀ ಮಂಜಪ್ಪನವರ ಪುಸ್ತಕದಲ್ಲೇನೋ ಹೀಗೆ ಅವತರಣವಿದೆ. ಆದರೆ ನಾವು ನೋಡಿದ್ದರಲ್ಲಿ ಐಹೊಳ್ಳಿಯ ಐನೂರು ಮಂದಿ ಬ್ರಾಹ್ಮಣರ ಒಕ್ಕಣಿಕೆಯಲ್ಲಿ— "...... ಚತುಸ್ಸಮಯ ನಿಸ್ತಾರಕರುಂ ॥ ವೀರ ಬಣಂಜಸಮಯ ಸಮುದ್ಧರಣರುಂ...... ನಾಮಾದಿ ಪ್ರಶಸ್ತಿ ಸಹಿತಂ । ಚತುರ್ಯುಗ ಚತುರಾಭಿದಾನಪಗಂ ಪರಾಯಮಾನಮಪ್ಪ ಶ್ರೀ ಮಾದ ನಾದಿಯಗ್ರಹಾರಂ ಬಣಂಜದಾದಿ ಪಟ್ಟಣ... ಮಪ್ಪ ಅಯ್ಯಾವಳಿಯ ಅಯ್ನೂರ್ವಸ್ವಾಮಿಂ ಗಳು ॥ ಎಂದು ಹೇಳಿದೆ (ವಿಚಾರಾರ್ಹವಾಗಿದೆ). ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲೂಕಿನ ೨೮೯ ನೇ ಶಾಸನ.

ಭುಜಂಗದೇವರು, ತ್ರಿಲೋಚನದೇವರು, ಶಿವದೇವರು, ಶಿವಶಕ್ತಿ, ರುದ್ರ ಶಕ್ತಿ, ಈಶಾನ್ಯಶಕ್ತಿ, ತ್ರೈಲೋಕ್ಯಶಕ್ತಿ, ಅನಂತಶಕ್ತಿ, ಉತ್ತಮಶಕ್ತಿ, ವಿಮಳಶಕ್ತಿ, ಶಾಸ್ತ್ರಿಶಕ್ತಿ, ರೇಜಶಕ್ತಿ, ಸರ್ವಶಕ್ತಿ, ತ್ರಿಭುವನಶಕ್ತಿ, ವಾಮಶಕ್ತಿ, ನಾರಸಿಂಹ ಶಕ್ತಿ; ಬ್ರಹ್ಮರಾಶಿ, ತೇಜೋರಾಶಿ, ಗಂಗರಾಶಿ, ಧರ್ಮರಾಶಿ, ದೇವರಾಶಿ, ನಾಗರಾಶಿ; ಕಾಲಭೈರವ ಪಂಡಿತದೇವರು, ಯೋಗೇಶ್ವರ ಪಂಡಿತದೇವರು, ಸೂರ್ಯಾಭರಣ ಪಂಡಿತದೇವರು, ಅಪರೇಶ್ವರ ಪಂಡಿತದೇವರು, ಪರೇಶ್ವರ ಪಂಡಿತದೇವರು, ಲೋಕಾಭರಣ ಪಂಡಿತರು, ಕೊಮರಸಿಂಗ ಪಂಡಿತರು, ಜೀವಿತೇಶ್ವರ ಪಂಡಿತರು; ಲಕುಳೀಶ್ವರ ಬ್ರತೇಶ್ವರರು.* ಕಾಶ್ಮೀರ ಮುನೀಂದ್ರರು, ಹೊನ್ನಜೀಯ್ಯರು, ಹೊಲಜೀಯ್ಯ, ಬೆಟ್ಟಜೀಯ್ಯ, ದುದ್ದಜೀಯ್ಯ, ಸಂಕರಜೀಯ್ಯ, ಮಾರಜೀಯ್ಯ, ಕರ್ತಾರಜೀಯ್ಯ, ಕಲ್ಲಜೀಯ್ಯ, ಭೀಮಜೀಯ, ಸಾತಜೀಯ, ಬೈರಜೀಯ, ರುದ್ರ ಜೀಯ, ಮಾರಜೀಯ, ಬಿನಕಜೀಯ, ಸಿಂಗಜೀಯ, ಗದ್ಮಜೀಯ, ಮಾದಜೀಯ?, ಭೂತಜೀಯ, ಅನಂತಜೀಯ ಇತ್ಯಾದಿ.+

ಇದರಲ್ಲಿ ಕೆಲವರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದ ಮುನಿಗಳೂ, ಕೆಲವರು ಸಂಸಾರಿಗಳೂ ಇರುತ್ತಿದ್ದರೆಂಬ ಬಗ್ಗೆ ಹೇರಳವಾಗಿ ಆಧಾರಗಳು ಸಿಕ್ಕುವವು. ಇವರ ಪೆಸರಿನ ಬರೆಯುವ ಒಕ್ಕಣಿಕೆಗಳಲ್ಲಿಯೂ ವಿಪ್ರರ ಒಕ್ಕಣೆಗಳಲ್ಲಿಯೂ ಭೇದಗಳಿವೆ. ವಿಪ್ರರ ಒಕ್ಕಣಿಕೆಗಳಲ್ಲಿ ಯಜನಯಾಜನಾದಿ ಷಟ್ಕರ್ಮ ನಿರತರೆಂದು ಹೇಳಿರುವಂತೆ

---

* ಈ ಹೆಸರು ವಿಜಾಪುರ ಜಿಲ್ಲೆಗೆ ಸೇರಿದ ಬಾಗೇವಾಡಿ ತಾಲೂಕಿನ ಮಂತ್ರಿಗೆಯ ಶಿವನಗುಡಿ ಯೊಳಗಿನದೊಂದು ಶಿಲಾಲಿಪಿಯಲ್ಲಿದೆ. ಪೂಲಿಯ ದೇವರ್ ಮುದಗೆರೆ ಮುನಿಪಂ ಎಂಬ ಹೆಸರುಗಳಂತೆಯೇ ಇದೂ ಇರಬಹುದೋ ಏನೋ ವಿಚಾರಾರ್ಹವಾಗಿದೆ. ಮಂತ್ರಿಗೆಯ ಶಾಸನದಲ್ಲಿ :

"ಶ್ರೀ ಮದ್ಭುಜಂಗದೇವರ ಶಿಷ್ಯರು ತ್ರಿಲೋಚನದೇವರವರ ಶಿಷ್ಯರು ಬಾಳಸೂರ್ಯಾರ್ಯ ರವರ ಶಿಷ್ಯರು ಶ್ರೀ ಕಾಶ್ಮೀರ ಪಂಡಿತದೇವರು......"

ಸೂರಿಜನಂಗಳೊಳ್ಪಡಿಯಂನೀ ಜಗದೊಳ್ಜಯವಾದಿಯಾಗೆ ಕೈ ।
ವಾರದೆ ವೇದಸಾರ ರಚಿತಾಭರಣಾನ್ವಿತೆಯಾಗಿ ವಾಣಿ ಕಾ ॥
ಶ್ಮೀರದೆ ಕೂಡಿಬಂದು ವಿಜಯಾಪುರದೊಳ್ನೆಲಸಲ್ಕೆಗಳ್ದ ಕಾ ।
ಶ್ಮೀರ ಮುನೀಂದ್ರನೊಳ್ನುಡಿಗೆ ಸೋಲದರಾರ್ನುಡಿದಂದು ತಾರ್ಕಿಕರ್ ॥

ಎಂದು ಹೇಳಿದೆ. ಕಾಶ್ಮೀರದಲ್ಲಿ ಜಯಹೊಂದಿ ಬಂದು ವಿಜಾಪುರದಲ್ಲಿ ಶಾರದಾದೇವಿಯನ್ನು ನೆಲೆಗೊಳಿಸಿದನೋ ಅಥವಾ ಮೂಲ ಕಾಶ್ಮೀರದಿಂದಲೇ ಬಂದನೋ ಸಂದೇಹಾಸ್ಪದವಾಗಿದೆ.

\+ "......... ಕಲ್ಯಾಣಶಕ್ತಿ ಪಂಡಿತರ ತಮ್ಮ ಕರಿಯಜೀಯರ ಮಗಂ ಧರ್ಮರಾಶಿ ಪಂಡಿತಂ ಕಿರಿಯ ಮಹಾದೇವರಾಶಿ ಪಂಡಿತರ ಕಾಲಂಕರ್ಚಿ...... ಮಹೇಶ್ವರ ಗಣಾವತಾರನುಮೆನಿಸಿದ ಬೆಳ್ಳಪ್ಪಯ್ಯ ನಾಯಕನು...... ಕಲಿದೇವರ ದೇಗುಲಂ ಮಾಡಿಸಿದರು" (ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ೨೧೦ ನೇ ಶಾಸನ) ಆದ್ದರಿಂದ ರಾಶಿ, ಶಕ್ತಿ, ಜೀಯ ಇವು ಭಿನ್ನ ಸಮಯಗಳಲ್ಲ.

ಇವರ ಒಕ್ಕಣಿಕೆಗಳಲ್ಲಿ ಕಾಣುವದಿಲ್ಲ. ಆದರೆ ಕೆಲವು ಕಡೆಗೇನೋ ಹೋಮಂಗಳ ಉಲ್ಲೇಖವಿದೆ. ಹಿಂದಿನ ಕಾಲದಲ್ಲಿ ಊರೂರಿನ ಮಹಾಜನಗಳೆಂದರೆ ಬ್ರಾಹ್ಮಣ ರೆಂದೇ ಕಾಣುತ್ತದೆ. ಊರಲ್ಲಿ ಯಾವ ಕಾರ್ಯವೂ ಇವರ ಸನ್ನಿಧಾನದಲ್ಲೇ ಆಗು ತ್ತಿದ್ದವು. ಅಲ್ಲಲ್ಲಿಯ ದೇವಾಲಯಗಳಲ್ಲಿ ಈ ಮಹಾಜನಂಗಳೂ ಸ್ಥಾನಾಚಾರ್ಯರ ಪಾದಮಜ್ಜನ ಮಾಡಿ ಎಷ್ಟೋ ದಾನಧರ್ಮಗಳನ್ನು ಮಾಡುತ್ತಿದ್ದರು ಎಂದು ಶಿಲಾ ಲಿಪಿಗಳಿಂದ ತಿಳಿಯುವದು.

ಮೈಸೂರು ಸೀಮೆಯ ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ಹಿರಿಯೂರಲ್ಲಿ ಸಿಕ್ಕ ೧೦೮ ನೇ ಶಾಸನದಲ್ಲಿ ಕಾಳಾಮುಖರಿಗೆ ಗಣಂಗಳು ಎಂದು ಹೇಳಿದೆ. ಆ ಶಾಸನದ ಮುಖ್ಯಾಂಶವನ್ನಿಲ್ಲಿ ಕೊಟ್ಟು, ಕೆಲವು ಮಾತುಗಳನ್ನು ಹೇಳಿ ಸಧ್ಯದ ಮಟ್ಟಿಗೆ ಲೇಖವನ್ನು ಮುಗಿಸುವೆ.

ಮಲೆಯಾಳ ಕುಳದ ವಡ್ಡವ್ಯವಹಾರಗಳಲ್ಲಿ ಕಂಡನಂಬಿಸೆಟ್ಟಿಯೆಂಬವನಿಗೆ ಕುಂಜನಂಬಿಸೆಟ್ಟಿಯೆಂಬ ಮಗನಿದ್ದನು, ಅವನು :

"ಹರಪದ ಪೂಜೆಯೊಳ್ ಹರಕಥೋಚಿತ ತತ್ತ್ವಸುಖಾನು ಸೇವೆಯೊಳ್ ।
ಹರಸಮಯ ಪ್ರಭಾವ ಪರಿವರ್ತನದೊಳ್ ಹರಭಕ್ತಿಯೊಳ್ ಹರ ॥
ಸ್ಮರಣದೊಳಾವಗಂ ತನುಧನಂ ಮನಮೆಂಬಿವನೆಯ್ದೆ ಕೂಡಿ ಸು ।
ಸ್ಥಿರಮೆನಿಸಿರ್ಪ್ಪನೇಂ ಸುಕೃತ ಪುಂಜನೊ ಕುಂಜನಿಳಾತಳಾಗ್ರದೊಳ್ ॥

ತನುವಂ ಜಂಗಮದೆಡೆಯೊಳ್ ।
ಮನಮಂ ಶ್ರೀಸೋಮನಾಥ ಪದಪಂಕಜದೊಳ್ ॥
ವಿನಿಯೋಗಿಸಿ ಕುಂಜಂ ನೆ
ಟ್ಟನೆ ಪಡೆದಂ ಪುಣ್ಯಪದಮನಾ ಶಿವಪದಮಂ ॥

ಅಂತಾತಂ ದೇವಲೋಕಾವಳೋಕನ ಸಿದ್ಧನಪ್ಪುದುಮಿತ್ತಲೂ ।
... ... ಮುತ್ತಮು ಹೊಸವೂರೆಸವುದು ಸಮಸ್ತ ಸೌಖ್ಯಾವಾಸಂ ॥
.................................................

ಅಲ್ಲಿ ನಿಜಸುತ ಪರೋಕ್ಷದೊ ।
ಳಲ್ಲಲ್ಲಿಗೆ ಕೆಲಸವೆಸೆಯೆ ಕುಂಜನ ಹೆಸರಿಂ ॥
ಕಲ್ಲ ಶಿವಾಲಯಮಂ ಪಡಿ ।
ಯಿಲ್ಲೆಂದೆನೆ ಕಂಡನಂಬಿ ತಾನೆತ್ತಿಸಿದಂ ॥
....................................

ಇಂತೀ ಸಮಸ್ತ ಭೂಮಿಯೆಲ್ಲಮಂ ಸಕನೃಪ ವರುಷ ೧೧೭೭ ಆನಂದ ಸಂವತ್ಸರದ ಪುಶ್ಯ ಶುದ್ಧ ೧೧ ಸೋಮವಾರ.........ಆ ಕಂಡನಂಬಿಸೆಟ್ಟಿಯರು* ಶ್ರೀ ಕುಂಜೇಶ್ವರ ದೇವರ ಶ್ರೀಪಾದಂಗಳ ಮೇಲೆ ಧಾರಾಪೂರ್ವಕಂ ಮಾಡಿ ಆ ಕುಂಜೇಶ್ವರ ದೇವರ ಸ್ಥಾನಮಂ ಆ ಕಂಡನಂಬಿಸೆಟ್ಟಿಯರು ತಮ್ಮ ಮಗಳು ಗಣಕುಮಾರಿಚಂದವ್ವೆಗೆ ಆ ಕುಂಜೇಶ್ವರ ದೇವರ ಶ್ರೀ ಕಾರ್ಯವ ನಡಸಿ ಆ ಸ್ಥಾನಕ್ಕೆ ತಾನೊಡೆಯಳಾಗಿ ಆಕೆಗೆ ಹೊಂಬಳಿಯ ಭೂಮಿಯನ್ನು ಸಲ್ಲುವಂತಾಗಿ ಶ್ರೀ ಕುಂಜೇಶ್ವರ ದೇವರ ಸನ್ನಿಧಾನದಲುಂ ಶ್ರೀಮತ್ರಿಭುವನ ರಾಜಧಾನಿ ದೋರ ಸಮುದ್ರ ರಾಜಗುರು ರುದ್ರಶಕ್ತಿದೇವರುಂ ನೂರಿಪ ತ್ತು ಸ್ಥಾನಿಕರ ಕಂಪಣಾಚಾರ್ಯರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಸನ್ನಿಧಾನದಲಂ ಎರಡು ಮುತ್ತಿನ ಹೊಸವೂರು ಸಮಸ್ತ ಪ್ರಜೆ ಗಾವುಂಡಗಳ ಸ್ಥಾನಿಕರ ಸನ್ನಿಧಾನದಲು ಧಾರೆಯನೆರೆದು ಕೊಟ್ಟರು. ಆ ರಾಜಗುರು ರುದ್ರಶಕ್ತಿದೇವರುಂ ನೂರಿಪ್ಪತ್ತು ಸ್ಥಾನಿಕರುಂ ಕಂಪಣಾಚಾರಿ ರಾಜಧಾನಿ ಅರಸಿಕೆರೆಯ ಮಾದಜೀಯ ಭೂತಜೀಯ ಮಚ್ಚರ ಅನಂತಜೀಯನೊಳಗಾದ ಅಸಂಖ್ಯಾತ ಮಹಾಗಣಂಗಳು ನೆರೆದು ಆ ಚಂದವ್ವೆಗೆ ವಿಭೂತಿ ಪಟ್ಟವನು ಕಟ್ಟಿ ಗಣಕುಮಾರಿತನವನು ಕೊಟ್ಟು ಯಿ ಕುಂಜೇಶ್ವರ ದೇವ ಸ್ಥಾನಕ್ಕೆ ಮಠದೆರೆ ಮುಖ್ಯವಾಗಿ ಸಮಸ್ತ ತೆರೆಯನುಂ ಅಚಂದ್ರಾರ್ಕಂಬರಂ ಸರ್ವ ಸಾಮಾನ್ಯವಾಗಿ ಧಾರೆಯನೆರೆದು ಕೊಟ್ಟರು".

ಈ ಶಾಸನದಿಂದ ಕಾಳಾಮುಖರು ಮಾಹೇಶ್ವರ ಗಣಂಗಳೇ (ಜಂಗಮರೇ) ಎಂಬಂಶವು ಸ್ಪಷ್ಟವಾಗುತ್ತದೆ. ಬಲ್ಲವರು ಹೆಚ್ಚಿಗೆ ಸಂಶೋಧನೆ ಮಾಡುವರೆಂದು ನಂಬಿ ನಾನಿಲ್ಲಿಗೆ ಬೀಳ್ಕೊಳ್ಳುವೆ. ಇತಿ ಓಂ ಶ್ರೀ ಓಂ ॥

(ಶಿವಾನುಭವ ೨-೭ ಸಪ್ಟೆಂಬರ ೧೯೨೭)

---

* ಈ ಕಂಡನಂಬಿಯನ್ನು ಹರಸುವ—

ಸಿರಿಯಾಳ್ವಂ ಬಸವಯ್ಯನೊಳ್ಪೆಸೆವ...... ಮಂಬಾಣನು ।
ದ್ವರಭೋಗಂ ಸಲಚೋಳನುದ್ಭಟನತರ್ಕ್ಯಂ ಸಿಂದಬಲ್ಲಾಳನೀ ॥
ಧರೆ ಕೊಂಡಾಡುವ ದಾಸಿಮಯ್ಯನೆಸೆದಿರ್ದ ಭಕ್ತಸಂದೋಹವಾ ।
ದರದಿಂ ಕಾಕರ ಕಂಡನಂಬಿ ನಿನಗೀಗುದ್ಬೋಧ ಸಂಪತ್ತಿಯಂ ॥

ಎಂಬ ಪದ್ಯದಲ್ಲಿ ಬಸವಣ್ಣನವರ ಹಾಗೂ ಪುರಾತನರ ಹೆಸರು ಹೇಳಿರುವುದನ್ನು ನೋಡಿದರೆ ಇವನ ಮಗಳ ಗಣಕುಮಾರಿತನದ ವಿಭೂತಿಪಟ್ಟಕ್ಕೆ ನೆರೆದ ಅಸಂಖ್ಯಾತ ಮಹಾಗಣಂಗಳು ವೀರಶೈವ ಜಂಗಮರೇ ಆಗಿರಬಹುದೆಂಬ ಊಹೆಗೆ ಹೆಚ್ಚು ಅವಕಾಶವಿದೆ.

(ಈ ಪದ್ಯವನ್ನು ಅರಸೀಕೆರೆಯ ೧೦೯ ನೇ ಶಿಲಾಲಿಪಿಯಿಂದ ಎತ್ತಿ ಬರೆದಿರುವೆ.)

## ಅರ್ಜುನವಾಡದ ಶಾಸನ

---

೧ ನಮಸ್ತುಂಗ ಸಿರ(=ಶಿರ)ಶ್ಚುಂಬಿ ಚಂದ್ರಚಾಮರ ಚಾರ
೨ ವೇ ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂ
೩ ಭವೇ॥ ಶ್ರೀಯುಂ ಶ್ರೀಕಲ್ಲಿನಾಥಂ ಕುಡು
೪ ಗೆ ಭವಹರಂ ಭಕ್ತ ಬ್ರಿಂದಕೀ (=ವೃಂದಕ್ಕೆ) ಗೌರೀಜಾಯಾ ಕಾಯಾ
೫ ನುಂಷಂಗಾಕಳಿತ ಲಳಿತತಾ ಪ್ರೋಲ್ಲಸದ್ವಾಮಭಾಗಂ ಸ್ವೀಯ ಸ್ವಾ
೬ ಯತ್ತ ಶಕ್ತಿತ್ರಯ ಮಯಮಹಿಮಂ ದೇವದಾಯಾದ ಮಾ
೭ ಯಾ ಪ್ರಾಯಾಭಿಪ್ರಾಯಲೀಲಂ ಪ್ರಣತ ಜನ ದುರಾಂತಪ ಸಂಘಟಿತ ಶೀಲಂ ॥
೮ [ಶ್ರೀ] ಮಂತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಸ್ವರ(=ಶ್ವರ) ಮಾದಿರಾಜ ತನೂ
೯ ಜಂ ಬಸವರಾಜನ ಮಹಿಮೆಯೆಂತೆಂದಡೆ॥ ಮಂಗಳ ಕೀರ್ತಿ ಪುರಾತನ ಜಂಗಮಂ ಲಿಂ
೧೦ ಗೈಕಭಕ್ತಿ ನಿರ್ಭರಲೀಲಾ ಸಂಗಂ ಸಂಗನಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳ
೧೧ ಗನವರತಂ॥ಯಾದವ ಭೂಮಿಪಾಳರಿಳೆಯಂ ಚತುರರ್ದ್ಧಿ (=ಚತುರಬ್ಧಿ)ಪರೀ
೧೨ ತೆಯಂ ನಿಸರ್ಗ್ಗೋದಯರಾಳ್ವರನ್ತವರೊಳಸ್ವ(=ಶ್ವ) ಚಮೂತಯ ವಾರ್ದ್ಧಿ ಸಿಂಹಣ
೧೩ ಕ್ಷ್ಮಾದಯಿತಂ ತದಗ್ರ್ರತನಯಂ ಪ್ರಭವಂ ನ್ರಿಪ(=ನೃಪ)ಕಂನರಂ ಸಮಸ್ತೋದಧಿ
೧೪ ವೇಳೆಯಿಂ ಪೊರಗೆ ಬೆಳ್ಗೊಡೆಯೊಳ್ನೆಳಲಂ ನಿಮಿರ್ಚ್ಚಿದಂ॥ಸಲೆ ಭೂದೇವ
೧೫ ಕ್ಕರ್ಳ್ಗಿತ್ತಲಸದೆ ಗೋ-ಭೂಮಿ-ಹೇಮ-ವಸ್ತ್ರಾದಿಗಳಂ ಮಲೆವರಸುಂಗಳೊ
೧೬ ಳ್ಕೊಂಬಂ ಬಲವಂತಂ ಕಂನರಂ ಪ್ರತಾಪಸಹಾಯಂ॥ ಸ್ವಸ್ತಿ ಸಮಸ್ತ
೧೭ ಭುವನಾಶ್ರಯ ಶ್ರೀಪ್ರಿಥ್ವೀ(=ಪೃಥ್ವೀ)ವಲ್ಲಭ ಮಹಾರಾಜಾಧಿರಾಜ ಪರಮೇ
೧೮ ಶ್ವರ ಪರಮಭಟ್ಟಾರಕ ದ್ವಾರಾವತೀ ಪುರವರಾಧೀಶ್ವರ ಯಾ
೧೯ ದವ-ಕುಳ-ಕಮಳ-ಕಳಿಕಾ-ವಿಕಾಸ ಭಾಸ್ಕರಯರಿರಾಯ (=ಅರಿರಾಯ)
೨೦ ಜಗಜ್ಝಂಪ ಮಾಳವರಾಯ-ಮದನ-ತ್ರಿನೇತ್ರ ಗೂರ್ಜ್ಜರರಾಯ ಭಯಂಕರ
೨೧ ತೆಲುಂಗರಾಯ ಸ್ಥಾಪನಾಚಾರ್ಯ ಇತ್ಯಾದಿ ನಾಮಾವಳೀ ಸಮಳಂಕ್ರಿತ(=ಕೃತ)

೨೨ ಶ್ರೀಮತ್ಪ್ರೌಢ ಪ್ರತಾಪ ಚಕ್ರವರ್ತ್ತಿ ಶ್ರೀಕಂನರದೇವಂ ದೇವಗಿ
೨೩ ರಿಯಂ ನೆಲೆವೀಡಿನೊಳು ಸುಖಸಂಕಥಾ ವಿನೋದದಿನನವರತಂ ರಾ
೨೪ ಜ್ಯಂ ಗೆಯ್ಯುತ್ತಮಿರೆ ತತ್ಪಾದ ಪದ್ಮೋಪಜೀವಿ॥ ಚಿಕ್ಕನ ಚಿಕ್ಕಮಗಂ ವಿಭವಕ್ಕೆ
೨೫ ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕಂ ಬೀಚುಗಿಯೌ
೨೬ ದಾರ್ಯ್ಯಕ್ಕಾಕರಿಂ ಪಿರಿಯನಾತನೂಣಂ ಮಲ್ಲಂ॥ಆತನ ತನೂಭವಂ॥
೨೭ ಚಾವುಂಡಂ ಪಾರ್ವತೀವಲ್ಲಭ ಚರಣ ಸರೋಜದ್ವಯಾಮೋದ ಭ್ರಿಂಗಂ (=ಭೃಂಗಂ) ಚಾವುಂ
೨೮ ಡಂ ತ್ಯಾಗ-ಭೋಗಾನಂಭವ ಭವಸುಖಶ್ರೀವಧೂನ್ರಿತ್ಯ(=ನೃತ್ಯ)ರಂಗಂ ಚಾವುಂಡ ಸಾಮಂ
೨೯ ಭೇದ ಪ್ರಭ್ರುತಿ(=ಪ್ರಭೃತಿ) ಸಕಳ ಮಂತ್ರಾಂಗ ವಿದ್ಯಾಸಮುದ್ರಂ ಚಾವುಂಡಂ ವೀರ-ವೈರಿ-ಪ್ರ
೩೦ ಕರ ಸಮರ ಸಂಘಟ್ಟ ಕಾಳಾಗ್ನಿ ರುದ್ರಂ॥ಯೆನೆ(=ಎನೆ) ನೆಗಳ್ದಾ ಚಾವುಂಡನ ಮನದನ್ನಂ
೩೧ ನಾಗರಾಜನಕ್ಷಿಳ(=ನಖಿಳ) ನಿಯೋಗಜ್ಞ (=ನಿಯೋಗಜ್ಞ)ನೆನಿಪ್ಪ ದಿವಾಕರ ದೇವನ ಪುತ್ರಂ ಮಾಣಸಾನ್ವ
೩೨ ಯಾಂಬರ ಮಿತ್ರಂ॥ ತ್ಯಾಗಗುಣಕ್ಕೆ ತಾಯ್ವನೆ ಸಮಸ್ತ ನ್ರಿಪಾಳ (=ನೃಪಾಳ) ನಿಯೋಗ ಮ
೩೩ ರ್ತ್ತನಾಶ್ರೀಗೆ ನಿವಾಸವಿಷ್ಟರ ವಿಶಿಷ್ಟರ ತೋಷಣ ಪೋಷಣಂಗಳೊಳ್ಳಾಗ
೩೪ ರಮೆಂದು ಬಂಣ್ಣಿಸುವುದೀ ಧರೆ ಪಂಡಿತ ಪಾರಿಜಾತನಂ ನಾಗನನಾ ಜನಾರ್ದನನ ಭ
೩೫ ಕ್ತಿ ಭರ ಪ್ರಭವಾನುರಾಗನಂ॥ ಸಂಗನಬಸವನ ಅಘ್ರು.. ...ಗೈಕಂ
೩೬ ದೇವರಾಜ ಮುನಿಪನ ತನಯಂ ಜಂಗಮ ಪರುಸಂ...ರ
೩೭ ಸಂಗಂ ಪ್ರಿಯಂ ಸುತನೆನಿಪ್ಪ ಕಲಿದೇವರಸಂ॥ಕಲಿದೇವ ಮುನಿ
೩೮ ಪನಾತ್ಮಜ ಸಲೆ ಮೂಜಗದೊಳಗೆ ಮೆಱೆವ ಮಾನವ ದೇವಂ ಗೆಲಿದಂ ಅಸನ (=ಅಶನ)
೩೯ ಬೆಸನವ[ಂ] ಭಲರಧಿಕಂ ಹಾಲಬಸವಿದೇವ ಮುನೀಸಂ (=ಮುನೀಶಂ) ಸ್ವಸ್ತಿ ಸಮಸ್ತ
೪೦ ಭುವನಾಸ್ರಯಂ(=ಶ್ರಯಂ) ಮಹಾಮಹೇಸ್ವರಂ(=ಶ್ವರಂ)ಕವಿಳಾಸಪುರವ
೪೧ ರಾಧೀಸ್ವರರುಂ(=ಶ್ವರರುಂ) ಸುವರ್ಣ್ನ ವ್ರಿಷಭ (=ವೃಷಭ) ಧ್ವಜಂ ತೇಸರ್ತ್ತಿ ಪುರಾಥಪಾದಾರ್ಚ್ಚಕ
೪೨ ರಂ ಮಹಾಲಿಂಗ-ಜಂಗಮ ಪ್ರಸಾದನಿಯತರುಂ ಸಮ
೪೩ ಯ ಭಕ್ತಿ ಸಂಪನ್ನ ಶ್ರೀ ಬಸವರಾಜನನ್ವಯರುಮಪ್ಪ ತಪಚಕ್ರ

೪೪ [ವ]ರ್ತಿ ವೀರ ಪ್ರತಿ (=ಬ್ರತಿ, ವೃತಿ) ಹಾಲಬಸವದೇವಂಗೆ ಆ ಮಹಾಪ್ರಧಾನರಂ ರ
೪೫ ಟ್ಟ ರಾಜ್ಯ ಪ್ರತಿಷ್ಠಾಚಾರ್ಯ್ಯನುಮಪ್ಪ ನಾಗರಸರು ಸಕ (=ಶಕ) ವರುಷಂ ಸಾಸಿರ
೪೬ ದ ನೂಱಯೆಂಬತ್ತಯೆರಡನೆಯ ಸಿದ್ಧಾರ್ಥಿ ಸಂವಛರದ ಚೈ
೪೭ ತ್ರ ಬಹುಳ ಅಮಾಸೆ ಸೋಮವಾರ ಸೂರ್ಯ್ಯ ಗ್ರಹಣದಲ್ಲಿ ಪುಲಿಗಿ
೪೮ ಱಯ ಸೋಮನಾಥ ದೇವರ ಸಂನಿಧಿಯಲ್ಲಿ ಆ ಚೌಡಸೆಟ್ಟಿಯರ್
೪೯ ತೀರ್ಥ ವಿಶೇಸಮಂ (=ವಿಶೇಷಮಂ)ಬೆಸಗೊಳಲು ನೂಲೆನಾಡೊಳಗಿನ ಕವಿಳಾಸ ತೀ[ರ್ಥಂ]
೫೦ ನಾಲ್ಕು ಯುಗದ ಪುರಾಣೋಕ್ತದಿಂ ಬಂದಕ್ಷತ್ರ(=ಕ್ಷೇತ್ರ)ವದಂತೆಂದಡೆ ಕ್ರಿತ
೫೧ ದಲ್ಲಿ ಕವಿಳಾಸ ಮುನಿ ಕವಿಳಾಸನಾಥ[;]ತ್ರತೆಯಲಿ ಅಂಕರಾಜ ಮುನಿ ಅಂಕ
೫೨ ನಾಥ[;]ದ್ವಾಪರದಲ್ಲಿ ಮಹಾರಾಜ ಮುನಿ ಮಹಾಲಿಂಗದೇವ[:]ಕಲಿಯುಗದಲ್ಲಿ
೫೩ ಕಲಿರಾಜಮುನಿ ಕಲಿದೇವನಾಮ [॥] ಇ (=ಈ) ಮುನಿಗಳು ಮುಂಕ್ಷ (=ಮುಂಖ್ಯ) ಸಮಸ್ತ ಗಣೇಶ್ವ
೫೪ [ರ]ರು (=ಗಣೇಶ್ವರರು) ಆರಾಧಿಸಿ ಸಾಲೋಕ್ಯ ಸಾಮೀಪ್ಯ ಸಾಯುಂಜ್ಜಮಂ (=ಸಾಯುಂಜ್ಯಮಂ) ಪಡೆ
೫೫ ದರು ಆ ದೇವರಿಗೆ ಅಂಕನಾಥವೆಸರಿಂ ಅಂಕವಲ (=ವೊಲ) ತಳವರ್ತ್ತಿ (=ವೃತ್ತಿ) ಕೊ
೫೬ ತ್ತಸಿಕಱುವನಿಗೆ (=?) ಇ (=ಈ) ಹಳ್ಳಿ ಮೂಂಧಾತ ಚಕ್ರವರ್ತ್ತಿ ಬಿಟ್ಟ ಧಂರ್ಮ್ಮ (॥) ಆ
೫೭ ತೀರ್ಥಕ್ಕದು ಸಾಸನಸ್ಥವೆಂಬುದಂ ಚವುಡಿಸೆಟ್ಟಿಯರ ಕೇಳಿ ಪು[ನಾ]ನಾಗ
೫೮ ರಸರೂ ತಾವು ಏಕಸ್ಥವಾಗಿ ಕವಿಳಾಸಪುರದೊಳಗೆ ಸ್ವಯಂಭು (=ಭೂ)ಮ
೫೯ ಲ್ಲಿಕಾರ್ಜುನ ಸಂಗಮೇಸ್ವರ(=ಶ್ವರ) ನಾಗೇಸ್ವರ(=ಶ್ವರ) ಯೀ[=ಈ]ಮೂಱು ಲಿಂಗಕಂ ಅಂಗ
೬೦ ಭೋಗ ರಂಗಭೋಗ ಜೀರ್ಣ್ನೋದ್ಧಾರಕಂ ಪಾರಣೆಯ ಜಂಗಮಾ
೬೧ ರಾಧನೆಗಂ ಕೊತ್ತಸೆಕಱುವನಿಗೆ ತಳವ್ರಿತ್ತಿ(=ವೃತ್ತಿ) ಅಂಕವಲ ಕೂಂ....
೬೨ ನಾಡೊಳು ಸಲುವಂತೆ ಹೆಜ್ಜುಗ್ಗಿಯವೊಭತ್ತು ..ಸುಂಕ
೬೩ ನೊಱೆತಿನ ಪರಿಹಾರಯಿಂತಿನಿತುಮಂ ಸರ್ವಬಾಧೆ [ಪರಿಹಾರಾರ್ಥಂ]
೬೪ ಸರ್ವ್ವನಮಸ್ಯಮಂ ಮಾಡಿ ಚವುಡಿಸೆಟ್ಟಿಯಂರು ನಾಗರಸರು
೬೫ ಯತಿರಾಯ ಹಾಲಬಸವಿದೇವಂಗೆ ಪೂರ್ವ್ವದತ್ತವೆಂದು
೬೬ ಧಾರಾಪೂರ್ವ್ವಕಂ ಮಾಡಿಕೊಟ್ಟರಂ [॥] ಆ ಚವುಡಿಸೆಟ್ಟಿಯಂರ ನಿ
೬೭ ಯಾಮದಿಂ ನಾಗರಸರು ಪುರದಿಂ ಪಡುವಲು ತೊಱೆಯ ಕೂ
೬೮ ಡಿದಹಳ್ಳ ನೀರುವರಿಯೆ ಮೇರೆಯಾಗಿ ಮೇಗೆ ಕಲಗಡಿಗ ಗೆಱೆ

೧೯ ...ಸಪನೆಣೋಡಿ ಬಡಗಲು ಮೊಸರಗುತ್ತಿ ಊರಾರ(=?)ವಿಡಿದು ಮೂಡಲು
೨೦ ...ಗಲ್ಲಕಣಿ...ಗೋಡಿಯ ಬಂದಹಳ್ಳ ನೀರುವರಿಐ(=ಯೇ)ತೆಂಕ-
೨೧ ಲು ತೋಱಿಯ ಕೂಡಲುಯೀ(=ಈ) ಚತುಸ್ಸೀಮಾಭ್ಯಂತರ ಕವಿಳಾಸಪು
೨೨ ರದಲ್ಲಿ ಸುಂಕ...
೨೩ ಧೀ ನಿಕ್ಷೇಪ ಅಂಕೆ ಟಂಕೆ...ಗೋಸನೆ ಮುದ್ರೆ ನಾಗೇಸ್ವರ[=ಶ್ವರ] ಮಮಲ್ಲೇಸ್ವರ (=ಮಮಲ್ಲೇಶ್ವರ)
೨೪ ಕೆ ಕುಱುವನಿಗೆ [।] ಸಂಗಮೇಶ್ವರಕೆ ಪಾರಣೆಯ ಜಂಗಮಾರಾಧ
೨೫ ನೆಗೆ ಕೊತ್ರಸಿಗೆ (=?) ಇ [=ಈ]ಧಂರ್ಮ್ಮಕೆಯಿದು ವಿವರವೆಂದು ನಾಗರಸರು ಕೊಟಿ [=ಕೊಟ್ಟ]
೨೬ ಸಾಸನ [=ಶಾಸನ] ನಾಲ್ಕು...ಪಟ್ಟಣಂಗಳು ನೂಲೆನಾಡೊಳಗೆ ಸಂತೆಗಳ
೨೭ ಆದಾಯದ ಇ [=ಈ] ಪರಿ....ಮಯಿದೆಱಿ ಸುಂಕ ಹದಿನೆಂ
೨೮ ಟ್ಟ ಸಮಯಮೆಲ್ಲಱು ಮತ ಮೂವರು ಬಣಜು ಭಕುತಿ ಭೇದ ವಿ
೨೯ ...[?] ಕವಿಳಾಸಪುರವೆ ಸಾಸನ (=ಶಾಸನ)ದವನೆ ಬಸವರಾಜನೆ ಸಾಸನಿಕ (=ಶಾಸನಿಕ) ನೆಂ
೩೦ ದುಮುಭಯು ನಾನಾದೇಸಿ ಮುಂಮುರಿ ದಂಡಂಗಳು ಕಾವ ಸಾಸನ [=ಶಾಸನ] [॥]

(ಒಪ್ಪ : ಮೂಲ ಶಿಲಾಲಿಪಿಯನ್ನು ನಾನು ಕಣ್ಣಾರೆ ಕಂಡು ಪರೀಕ್ಷಿಸುವಲ್ಲಿ ಲೇಖನ ಪದ್ಧತಿಯು ಶಾಸನೋಕ್ತ ಕಾಲಕ್ಕೆ ತುಂಬಾ ಹೊಂದುತ್ತದೆ. ಆದ್ದರಿಂದ ಇದು ಖೊಟ್ಟಿ ಲೇಖನವಲ್ಲ. — ಚಿನ್ನಮಲ್ಲ)

(ಶಿವಾನುಭವ ೩-೯ ಮಾರ್ಚ ೧೯೨೮)

# ಇತಿಹಾಸದ ಕಣಗಳು

## ಬಸವಣ್ಣನವರಿಗಿಂತ ಮುಂಚಿನ ಶರಣರು

---

### ೧. ದಾಸಿಮಾರ್ಯ

ಗಿರಿಜಾಕಲ್ಯಾಣವನ್ನೂ ಪಂಪಾಶತಕ ರಕ್ಷಾಶತಕಗಳನ್ನೂ ಬರೆದ ಹಂಪೆಯ ಹರಿಹರದೇವನೇ ಶರಣರ ರಗಳೆಗಳನ್ನೂ ಬರೆದಿದ್ದಾನಷ್ಟೆ, ಇವನ ಯಾವ ಗ್ರಂಥಗಳಲ್ಲಿಯೂ ಬಸವಣ್ಣನವರ ಹೆಸರಿಲ್ಲ. ಆದರೆ ಇವನ ಅಳಿಯ ರಾಘವಾಂಕನು ಸ್ವತಃ ಬಸವಣ್ಣನ ಶರಣಮಂಡಳಿಯೊಳಗೊಬ್ಬನಾದ ಸೊಲ್ಲಾಪುರದ ಸಿದ್ಧರಾಮನ ಪುರಾಣವನ್ನು ಬರೆದಿದ್ದಾನೆ. ಅಲ್ಲದೆ ಅದರಲ್ಲಿ ಬಸವಾದಿ ಪ್ರಮಥರ ಸ್ತುತಿಯೂ ಇದೆ. ಇದನ್ನು ನೋಡಿದರೆ ಬಸವಣ್ಣನವರ ಮೇಲಾಗಲಿ, ಅವರ ಶರಣರ ಮೇಲಾಗಲಿ, ಹರೀಶ್ವರನಿಗೆ ದ್ವೇಷವಿದ್ದಿತೆಂದು ಹೇಳಬೇಕು, ಇಲ್ಲದಿದ್ದರೆ ಬಸವಣ್ಣನವರು ಖ್ಯಾತಿಗೆ ಬರುವದಕ್ಕಿಂತ ತೀರ ತುಸು ಮುಂಚೆಯೇ ಅವನು ಮರಣ ಹೊಂದಿರಬೇಕು. ಇವೆರಡರ ಹೊರತು ಇನ್ನೇನೂ ಹೇಳಲಿಕ್ಕೆ ಬರುವಂತಿಲ್ಲ. ಹರಿಹರನ ಪಂಪಾಶತಕವನ್ನೋದಿದವನಿಗೆ ಹರಿಹರನ ಹೃದಯವೆಂಥ ದಿವ್ಯಭಕ್ತಿ, ಪ್ರೀತಿಗಳ ನೆಲೆಯೆಂಬುದು ಸಹಜವಾಗಿ ತಿಳಿಯುವಂತಿದೆ. ಅಂಥಾ ಭಕ್ತಶಿರೋಮಣಿಯಾದ ಹರಿಹರನ ಹೃದಯವು ದುಷ್ಟವಾಗಿದ್ದಿತೆಂದು ಹೇಳುವುದಕ್ಕೆ ಯಾವನಿಗೂ ಸಾಹಸವಾಗದು. ಈ ಕಾರಣದಿಂದಲೂ ಮತ್ತು ಇವನು ಬರೇ ಪುರಾತನ ಕಥೆಗಳನ್ನೇ ಬರೆದದ್ದರಿಂದಲೂ ಪಂಪಾಶತಕದಲ್ಲಿ ಪುರಾತನರಿಗೇ ಶಿವಶರಣರೆಂದು ಹೇಳಿ ಕೊಂಡಾಡಿದ್ದರಿಂದಲೂ, ಬಸವಣ್ಣನವರು ಪ್ರಧಾನಪಟ್ಟವನ್ನೇರುವುದಕ್ಕೆ ಮುಂಚೆಯೇ ಹರೀಶ್ವರನು ಕಾಲವಾಗಿದ್ದನೆಂದು ಹೇಳಬೇಕಾಗುತ್ತದೆ.

ಪಂಪಾಶತಕದ ಕೆಳಗಿನ ಮೂರು ಪದ್ಯಗಳಿಂದ ಶರಣರ ಬಗ್ಗೆ ಅವನಿಗಿದ್ದ ಆದರವು ವ್ಯಕ್ತವಾಗುವದು.

ಶರಣಂ ಸಂಸಾರಿಯೇ ಮಾಣ್ ಪುಸಿಪುಸಿಯೆನಿಸುಂ ಕಾಮಿಯೇ ಪೇಳಲೆಂತಂ ।
ಶರಣಂ ತಾಂ ಕ್ರೋಧಿಯೇ ಸಲ್ಲದು ತೆಗೆ ಶರಣಂ ಮರ್ತ್ಯನೇ ಅಲ್ಲವೈ ಕೇಳ್ ॥
ಶರಣಂ ನಿರ್ಮಾಯನೆಂತುಂ ಶರಣನತುಳ ನಿಷ್ಕಾಮಿಯೆಲ್ಲಂದದಿಂದಂ ।
ಶರಣಂ ಶಾಂತಂ ನಿತಾಂತಂ ಶರಣನಮಮ ತಾನೆ ವಿರೂಪಾಕ್ಷಲಿಂಗಂ ॥೪೩॥

ಉಣಿಸುಂ ಸ್ತ್ರೀಸಂಗಮುಂ ನಿದ್ರೆಯುಂಮವಿವು ಮಲ ಮೂತ್ರಂಗಳುಂ
ಕುಂದಂಗುಂ ಸ ।
ದ್ಗುಣಮುಂ ಶಾಂತತ್ವಮುಂ ಕಾಂತಿಯುಮಂರತರಮಾರೋಗ್ಯಮುಂ
ಪೆರ್ಚುಗುಂ ಸಂ ॥
ದಣಿಸಿರ್ದಾ ಕ್ರೋಧಮುಂ ಮತ್ಸರಮಂತಿಭಯಮುಂ ಗರ್ವಮುಂ ತ ।
ಲ್ಲಣಮುಂ ತೀರ್ಗುಂ ದಿಟಂ ನಿನ್ನಯ ನಿಜಶರಣಂಗಂ ವಿರೂಪಾಕ್ಷಲಿಂಗಾ ॥೪೫॥

ಪರಿಕಿಪರುಂಟೆ ಹಂಪಿಯಧಿನಾಥನ ಭಕ್ತರ ಸದ್ಗುಣಂಗಳಂ ।
ಹರಹರ ಪೇಳ್ವೊಡೆನ್ನಳವೇ ಕೇಳ್ವೊಡೆ ನಿನ್ನಳವೇ ? ಪುರಾತನರ್ ॥
ಪರಿದುದೆ ಗಂಗೆ ನಿಂದುದೆ ಸುತೀರ್ಥಮೊಡರ್ಚಿದುದೇ ಸುಕಾರ್ಯಮಿ ।
ನ್ನರಿಯುವರಿರ್ದುದೇ ಸಭೆ ನಿರೀಕ್ಷಣಂಗೆಯ್ದುದೇ ಲೋಕಪಾವನಂ ॥೪೬॥

ಈ ಕೆಳಗಿನ ನಾಲ್ಕು ಪದ್ಯಗಳಲ್ಲಿ ಪುರಾತನರ ಹೆಸರುಗಳು ಬಂದಿವೆ. ಕೊನೆಯ ಪದ್ಯದಲ್ಲಿ ಪುರಾತನರ ಹೆಸರುಗಳ ಜೊತೆಯಲ್ಲಿಯೇ ದಾಸಿಮಾರ್ಯನ ಹೆಸರೂ ಬಂದಿದೆ.

ಅದು ಕಣ್ಣಪ್ಪನ ಪೂಜೆಯೋಜೆ ಬಗೆಯಲ್ ವೇದೋಕ್ತಮೆ ? ಬೇಂಟೆಯಾ ।
ಡಿದ ಜೊಮ್ಮಣ್ಣನ ಭಕ್ತಿ ಭಾವವರಿಯಲ್ ವೇದೋಕ್ತಮೇ? ತಂದೆಯೆ ॥
ನ್ನದೆ ಚಂಡೇಶ್ವರ ಪಿಳ್ಳೆ ಮಾಡಿದುದು ಪೇಳ್ ವೇದೋಕ್ತಮೆ? ಆತನೋ ।
ಲ್ದುದೆ ವೇದಾಗಮನೀತಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥ ೪೪ ॥

ಕೊಂದಂ ಭಕ್ತಿಪುರಸ್ಸರಂ ಮಗನನಾ ಶ್ರೀಯಳನೇನಾಯ್ತು ? ಮೇಣ್ ।
ಕೊಂದಂ ಭಕ್ತಿಪುರಸ್ಸರಂ ಜನಕನಂ ಚಂಡೇಶನೇನಾಯ್ತು ? ಪೋ ॥
ಕೊಂದಾ ಭಕ್ತಿಪುರಸ್ಸರಂ ಜನನಿಯಂ ತಾ ರಾಮನಾಥಂಗದೇಂ ।
ಕುಂದಾಯ್ತೆ, ತೆಗೆ, ಭಕ್ತಿಯುಳ್ಳೊಡೆ ಸದಾಚಾರಂ ವಿರೂಪಾಕ್ಷಲಿಂಗಾ ॥೫೫॥

ಶಿವಭಕ್ತರ್ ಮುಟ್ಟಿದಂಭಃಕಣವೆ ಸಕಲತೀರ್ಥಂಗಳೆಂದೆಂಬುದಂ ಕಂ ।
ಡೆವಲಾ ಕಣ್ಣಪ್ಪನೊಳ್ ! ಮಾಡಿದುದೆ ಜಸಕೆ ಸನ್ಮಾರ್ಗವೆಂದೆಂಬುದಂ ಕಂ ।
ಡೆವಲಾ ಜೋಮಣ್ಣನೊಳ್ ! ಮುಟ್ಟಿದ ಧರೆ ಪರಮಕ್ಷೇತ್ರಮೆಂದೆಂಬುದಂ ಕಂ ।
ಡೆವಲಾ ಭೋಗಣ್ಣನೊಳ್ ಹೋ ! ಶರಣರೆ ಪರದೈವಂ ವಿರೂಪಾಕ್ಷ ನಿನ್ನಾ
॥ ೫೯ ॥

ಬಿಡು ಮಾಣ್ಮಾಣೆಲೆ ಬೊಮ್ಮವಾದಿ ಸಟೆಯಂ ನೀಂ ! ನಂಬಿಗೋ ಎನ್ನನೆ ।
ಮ್ಮೃಡನಂದಾಡನೆ ನಮ್ಮಗೂಡಯನ ಮುಂದಾ ದಾಸಿಮಯ್ಯಂ ಕುಡ ॥
ಲ್ಕುಡನೇ ಸೀರೆಯನುಣ್ಣನೇ ಸಿರಿಯನಾಳ್ವಂ ಪೇಳೆ ಕೈಲಾಸಮುಂ ।
ಕುಡನೇ ಸೂರೆಯನೆಮ್ಮನಿಂಬಿಗೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೬೬ ॥

ಹರಿಹರನು ಹೇಳಿದ ಶರಣರು ಬಸವಣ್ಣನವರಿಗಿಂತ ಪೂರ್ವಿಕರಾಗಿದ್ದಿರಲೇ ಬೇಕು. ಯಾಕೆಂದರೆ ಹರಿಹರನು ಬಸವಣ್ಣನವರಿಗಿಂತ ತುಸುವಾದರೂ ಮುಂಚಿನವ ನೆಂಬುದಕ್ಕೆ ಸಂದೇಹವೇ ಇಲ್ಲ. ಶಿವನಿಗೆ ಸೀರೆಯನ್ನುಡಿಸಿದ ದಾಸಿಮಯ್ಯನು ಬಸವಣ್ಣನವರಿಗಿಂತ ಪೂರ್ವಿಕನಾದ ಶರಣನೆಂಬುದೀಗ ಸಿದ್ಧವಾದಂತಾಯಿತು. ಇನ್ನು—

ಈ ದಾಸಿಮಯ್ಯನೇ ಚಾಳುಕ್ಯ ಜಗದೇಕಮಲ್ಲನ ಹೆಂಡತಿಯಾದ ಸುಗ್ಗಳದೇವಿಗೆ ಶಿವದೀಕ್ಷೆಯನ್ನಿತ್ತ ಹಾಗೆ ಅವನ ಸಂಸ್ಕೃತ ಪುರಾಣದಲ್ಲಿ ಹೇಳಿದೆಯೆಂದು ಶ್ರೀ ಮಹಾಂತಣ್ಣನವರು ಇದೇ ಶಿವಾನುಭವದಲ್ಲಿ ಹೇಳಿದ್ದಾರೆ. ಆದರೆ ನಾನೋದಿದ ಶಂಕರದಾಸಿಮಯ್ಯನ ಕನ್ನಡ ಪುರಾಣದಲ್ಲಿ ಅವನೇ ಸುಗ್ಗಳದೇವಿಗೆ ದೀಕ್ಷೆಕೊಟ್ಟವ ನೆಂದೂ ದೇವರದಾಸಿಮಯ್ಯನ ಗರ್ವಹರಣ ಮಾಡಿದನೆಂದೂ ಹೇಳಿದೆ. ಏನೇ ಇರಲಿ, ಇವರಿಬ್ಬರೂ ದಾಸಿಮಯ್ಯಗಳು ಸಮಕಾಲೀನರಿರಬಹುದು ಮತ್ತು ಇವರಲ್ಲಿ ಯಾವನೋ ಒಬ್ಬ ದಾಸಿಮಯ್ಯನು ಸುಗ್ಗಳದೇವಿಯ ಮನ್ನಣೆಗೆ ಪಾತ್ರನಾಗಿರ ಬಹುದು. ಹೀಗೆಂದೂಹಿಸಲು ಅಡ್ಡಿಯಿಲ್ಲ.

ಜಗದೇಕಮಲ್ಲನೆಂದು ಬಿರುದುಳ್ಳ ಚಾಳುಕ್ಯ ಜಯಸಿಂಹರಾಜನು ಕ್ರಿಸ್ತಶಕದ ೧೦೩೮ ರಿಂದ ೧೦೪೦ ರ ವರೆಗೆ ಆಳಿದನು. ಇವನ ಹೆಂಡತಿಯಾದ ಸುಗ್ಗಳದೇವಿಯು ಒಳ್ಳೇ ಪ್ರಖ್ಯಾತಳಾಗಿದ್ದಳೆಂಬುದಕ್ಕೆ ನನಗೊಂದು ಪ್ರಮಾಣವಿದೆ. ಅದೇನಂದರೆ :

ಸುಮಾರು ಕ್ರಿಸ್ತಶಕದ ೧೨೨೦ ರಲ್ಲಿ ಬರೆದ ಒಂದು ಶಿಲಾಲಿಪಿಯಲ್ಲಿ ದ್ವಾರ ಸಮುದ್ರದ ರಾಜನಾದ ವೀರಬಲ್ಲಾಳನು ಸಾಯಲು ಅವನ ದಂಡನಾಯಕನಾದ ಕುಮಾರ ಲಕ್ಷ್ಮನೂ ಅವನ ಹೆಂಡತಿ ಸುಗ್ಗಳೆಯೂ ಅವನ ಸಾವಿರಮಂದಿ ಸೇವಕರೂ ಕೂಡ ಬೇಕಿಯಲ್ಲಿ ಸುಟ್ಟುಕೊಂಡು ಸತ್ತರೆಂದು ಹೇಳಿದೆ. ಈ ದಂಡಾಧಿಪತಿಯ ಹೆಂಡತಿಯನ್ನು ಜಯಸಿಂಹನ ಹೆಂಡತಿಯಾದ ಸುಗ್ಗಳದೇವಿಗೆ ಸಮಾನಳೆಂದು ಹೇಳಿದೆ. ಆ ಪದ್ಯವನ್ನಿಲ್ಲಿ ಹೇಳುವೆನು :

"ಜಯಸಿಂಹ ಕ್ಷಿತಿಪಾಳಕಂಗೆ ಜಗಮೆಲ್ಲಂ ಬಣ್ಣಿಸಲ್
ಪೂಣ್ದು ಭಾ। ಷೆಯನಾ ಸುಗ್ಗಲದೇವಿ ಕೊಟ್ಟ ತೆರದಿಂ ಬಲ್ಲಾ
ಳ ಭೂಪೋತ್ತಮ। ಪ್ರಿಯ ಪುತ್ರಂಗೆ ಕುಮಾರ ಲಕ್ಷ್ಮರಥನೀ
ನಾಥಂಗೆ ಕೊಟ್ಟಳ್ ಮನಃ। ಪ್ರಿಯೆಯೀ ಸುಗ್ಗಲದೇವಿ
ಭಾಷೆಯನಿಳಾಚಕ್ರಂ ಪೊಗಳ್ವನ್ನೆಗಂ॥*

* ಈ ಶಿಲಾಲಿಪಿಯು ಹಳೆಬೀಡಿನಲ್ಲಿ (ಪ್ರಾಚೀನ ದ್ವಾರಸಮುದ್ರದಲ್ಲಿ) ಇದೆ. ಇದು ಮೈಸೂರು ಶಾಸನ ಗ್ರಂಥಮಾಲೆಯ ಹಾಸನ ಜಿಲ್ಲೆಯ ಪುಸ್ತಕದಲ್ಲಿ ಬೇಲೂರು ತಾಲೂಕಿನ ೧೧೨ ನೇ ನಂಬರಿನಲ್ಲಿ ಅಚ್ಚಾಗಿದೆ.

ಇದನ್ನು ನೋಡಿದರೆ ೧೦೫೦ ಕ್ಕೆ ಮುಂಚೆ ಇದ್ದ ಸುಗ್ಗಳದೇವಿಯು ೧೨೨೦ ರ ಸುಮಾರಿಗೆ ಅಂದರೆ ೧೭೦ ವರ್ಷಗಳ ನಂತರ ಅನ್ಯರಾಜ್ಯದಲ್ಲಿ ಕೂಡ ಇಷ್ಟೊಂದು ಆದರ್ಶವತಿಯಾಗಿದ್ದರೆ ಅವಳು ತನ್ನ ಜೀವಮಾನಕಾಲದಲ್ಲಿ ಒಳ್ಳೇ ಪ್ರಖ್ಯಾತಳಿರಲೇ ಬೇಕು. ಇಂಥವಳು ಶಿವದೀಕ್ಷೆ ಹೊಂದಿರದಿದ್ದರೂ ಶರಣರನ್ನು ಮನ್ನಿಸುವ ಸಂಭವ ವಾದರೂ ಇದೆ. ಇದರ ಮೇಲಿಂದ ಬಸವಣ್ಣನವರ ಕಾಲದ ಶಿವಶರಣರ ಚಳವಳದ ಮೂಲಾರಂಭವು ಅವರಿಗಿಂತ ನೂರು ವರ್ಷಗಳಿಗೆ ಮೊದಲೇ ಸಣ್ಣಾಗಿ ಆರಂಭ ವಾಗಿತ್ತೆಂದು ತೋರುತ್ತದೆ.

## ೨. ತ್ರಿಷಷ್ಠಿ ಪುರಾತನರು

ಲಿಂಗವಂತರು ಪುರಾತನರನ್ನು ತಮ್ಮವರೆಂದು ಹೇಳಕೊಳ್ಳಹತ್ತಿ ಬಹುದಿನ ಗಳಾದವು. ಬಸವಣ್ಣನವರ ವಚನಗಳಲ್ಲಿ ಇವರ ಹೆಸರುಗಳು ಅಡಿಗಡಿಗೆ ಬರುತ್ತವೆ. ಅಲ್ಲದೆ ಹಂಪಿಯ ಹರಿಹರೇಶ್ವರನು ಶಿವಶರಣರ ರಗಳೆಯೆಂಬ ತನ್ನ ಗ್ರಂಥದಲ್ಲಿ ಇವರ ಪುರಾಣವನ್ನೇ ಹೇಳಿದ್ದಾನೆ. ಅಲ್ಲದೆ ಬಸವಣ್ಣನವರ ವಂಶದವರದೊಂದು ಶಿಲಾಲಿಪಿಯು ಅರ್ಜುನವಾಡದಲ್ಲಿ ಇತ್ತೀಚೆಗೆ ಸಿಕ್ಕಿದ್ದು ಅದರಲ್ಲಿಯೂ ಬಸವಣ್ಣ ನವರ ಮರಿಮಗನಿಗೆ "ತೇಸಷ್ಠಿ ಪುರಾತನ ಪಾದಾರ್ಚಕಂ" ಎಂದು ಹೇಳಿದೆ. ಅಲ್ಲದೆ ವೀರಶೈವ ಸಿದ್ಧಾಂತ ಶಿಖಾಮಣಿಯಲ್ಲಿಯೂ ಕೂಡ (೧೧ ನೇ ಪರಿಚ್ಛೇದದಲ್ಲಿ).

> ಅತ್ಯಂತ ಪಾಪಕರ್ಮಾಪಿ ಶಿವಭಕ್ತ್ಯಾವಿಶುದ್ಧತೇ ॥
> ಚಂಡೋಯಥಾ ಪುರಾ ಭಕ್ತ್ಯಾಪಿತೃಕಾಪಿ ಶಿವೋಭವತ್ ॥ ೫೦ ॥

ಪುರಾತನರ ಕೊಂಡಾಟವಿದೆ. ಇದೆಲ್ಲಾ ನೋಡಿದರೆ ಈ ಪುರಾತನರೆಂಬವರು ಲಿಂಗವಂತರಿಗೆ ಪೂಜ್ಯರಾದ ಪುರಾಣಪುರುಷರೆಂಬುದು ನಿರ್ವಿವಾದದ ಮಾತು.

ಆದರೆ ಈ ಪುರಾತನರು ಅರುವತ್ತುಮೂವರೆಂಬ ಮಾತಿನ ಬಗ್ಗೆ ಒಂದು ಇತಿಹಾಸವನ್ನು ಹೇಳುವಂತಿದೆ. ಅದೇನೆಂದರೆ :

ಈ ದೇಶದಲ್ಲಿ ಜೈನರ ವಾಙ್ಮಯವು ಬಹಳೇ ವಿಸ್ತಾರವಾದದ್ದೂ ಮಹತ್ವದ್ದೂ ಇದೆ. ಇವರ ಪ್ರಾಚೀನ ಪುರಾಣವಾಙ್ಮಯವನ್ನು ಐತಿಹಾಸಿಕ ದೃಷ್ಟಿಯಿಂದ ಇನ್ನೂ ಹೆಚ್ಚಾಗಿ ಅಭ್ಯಾಸ ಮಾಡಿದವರಿಲ್ಲ. ಇವರ ೨೪ ತೀರ್ಥಂಕರರಲ್ಲಿ ೨೦ ತೀರ್ಥಂಕರರು ಕಲಕತ್ತೆಯ ಪ್ರಾಂತದ ಸಮ್ಮೇದ ಶಿಖರದಲ್ಲಿಯೂ ಇನ್ನುಳಿದವರು ಗಿರ್ನಾರ, ಪಾವಗಡ, ಕೈಲಾಸಶಿಖರ ಮುಂತಾದವುಗಳಲ್ಲಿಯೂ ಮೋಕ್ಷಕ್ಕೆ ಸಂದಿರುವುದಾಗಿ ಜೈನರು ಇದುವರೆಗೂ ಆಯಾ ಸ್ಥಾನಗಳನ್ನು ಸಿದ್ಧಕ್ಷೇತ್ರಗಳಾಗಿ ಪರಿಗಣಿಸುವುದನ್ನು ಐತಿಹಾಸಿಕ ದೃಷ್ಟಿಯಿಂದ ವಿಮರ್ಶಿಸಿ ಸಿದ್ಧಪಡಿಸಿದರೆ ಜೈನಧರ್ಮವೂ ಹಿಂದುಸ್ತಾನ ದಲ್ಲಿ ಆರ್ಯರು ಬರುವದಕ್ಕಿಂತ ಮುಂಚೆ ನೆಲೆಗೊಂಡಿದ್ದ ಬಹುಪುರಾತನ ಧರ್ಮ ಗಳಲ್ಲೊಂದೆಂದು ಸಿದ್ಧವಾಗುವಂತಿದೆ.

ಒಂದುಸ್ಥಾನದಲ್ಲಿ ಈ ಜೈನರನ್ನು ಒಂದಿಲ್ಲೊಂದು ಬಗೆಯಿಂದ ಹುರುಡುಗಟ್ಟಿದವರು ಬಹಳ. ಬೌದ್ಧರೂ ಕೂಡ ಶಾಕ್ಯಮುನಿ ಗೌತಮಬುದ್ಧನಿಗಿಂತ ಮೊದಲು ಇನ್ನೂ ಇಪ್ಪತ್ತುಮೂರು ಮಂದಿ ಬುದ್ಧರಾಗಿ ಹೋದರೆಂದೂ ತಮ್ಮ ಧರ್ಮವು ಸನಾತನವೆಂದೂ ಹೇಳುವರು. ಹೇಳುವರೆಂಬುದಿಷ್ಟೇ ಅಲ್ಲ, ಅಶೋಕ ಮಹಾರಾಜನ ಶಿಲಾಲಿಪಿಯಲ್ಲಿಯೂ ಕೂಡ ೨೩ ನೆಯವನಾದ ಕನಕಮುನಿಬುದ್ಧನ ಉಲ್ಲೇಖವಿದೆ. ನೇಪಾಳ ಪ್ರದೇಶದಲ್ಲಿ ಬಸ್ತಿ ಜಿಲ್ಲೆಯಲ್ಲಿ ರುಮ್ಮಿನದೇವಿ ಮತ್ತು ನಿಗ್ಲೀವಾ ಎಂಬ ಎರಡು ಸ್ಥಳಗಳಲ್ಲಿ ಅಶೋಕ ಮಹಾರಾಜನ ಎರಡು ಶಿಲಾಲಿಪಿಗಳು ಸಿಕ್ಕಿವೆ. (ಅಶೋಕ ಮಹಾರಾಜನು ಕ್ರಿಸ್ತನಿಗಿಂತ ಮೂರು ಶತಮಾನ ಮುಂಚಿನವನು.) ಇವುಗಳಲ್ಲಿ ರುಮ್ಮಿನದೇವಿಯು ಗೌತಮಬುದ್ಧನ ಜನ್ಮಸ್ಥಾನವೆಂದೂ, ನಿಗ್ಲೀವವು ಕನಕಮುನಿಬುದ್ಧನ ಜನ್ಮಸ್ಥಾನವೆಂದೂ ಹೇಳಿದೆ.+ ಇಷ್ಟೇ ಅಲ್ಲ, ಜೈನರು ತಮ್ಮ ತೀರ್ಥಂಕರರು ಭೂತಕಾಲದಲ್ಲಿ ೨೪ ಮಂದಿ, ಈ ಕಾಲದಲ್ಲಿ ೨೪ ಮಂದಿ, ಬರುವ ಕಾಲದಲ್ಲಿ ೨೪ ಮಂದಿಯೆಂದು ಹೇಳುವಂತೆ ಬೌದ್ಧರೂ ಕೂಡ ತಮ್ಮ ಬುದ್ಧರ ಬಗ್ಗೆ ಹೇಳುತ್ತಾರೆ.* ಇದನ್ನು ನೋಡಿದರೆ ಜೈನರಂತೆ ಬೌದ್ಧರೂ ಪುರಾತನವಾದ ಕೆಲವು ಜನ ಮಹಾಪುರುಷರನ್ನು ಹುಡುಕಿ ಆಯ್ದು ಒಟ್ಟುಗೂಡಿಸಿ ಸಂಖ್ಯಾಭರತಿ ಮಾಡಿದರೆಂದು ಸಿದ್ಧವಾಗುತ್ತದೆ.

ಹೀಗೆಯೇ ಬೌದ್ಧರಂತೆ ಶೈವರಲ್ಲಿಯೂ ತೋರುತ್ತದೆ. ಅವರು ೬೩ ಮಂದಿಯನ್ನು ಹುಡುಕಿಕೊಂಡಂತೆ ತೋರುತ್ತದೆ. ಯಾಕಂದರೆ ಜೈನರಲ್ಲಿ ತ್ರಿಷಷ್ಠಿ ಶಲಾಕಾ

---

\+ ರುಮ್ಮಿನದೇವಿ ಲಿಪಿ– ದೇವಾನಂ ಪಿಯೇನ ಪಿಯದಸಿನ ಲಾಜಿನ ವೀಸತಿವ ಸಾಭಿಸತೇನ ಆತನ ಆಗಾಚ ಮಹೀಯತೇ ಹಿದ ಬುಧೇ ಜಾತೇ ಸಕ್ಕಮುನೀತಿ ಸಿಲಾವಿಗಡ ಭೀಚಾ ಕಾಲಾಪಿತ ಸಿಲಾಥ ಭೇಚ ಉಸ ಪಾಪಿತೇ ಹಿದಭಗವಂ ಜಾತೇತಿ ಲುಂಮಿನಿ ಉಬಲಿಕೆ ಕಟೇ ಅಠ ಭಾಗಿಯೇಚ ।

ನಿಗ್ಲೀವ ಲಿಪಿ– ದೇವಾನಂ ಪಿಯೇನ ಪಿಯದಸಿನ ಲಾಜಿನ ಚೋದಸವಸಾಭಿಸಿತೇನ ಬುಧಸ ಕೋನಕ ಮನಸ ಥು ಬೇ ದುತಿಯಂ ಬಢಿತೇ । ವೀಸತಿ ವಸಾಭಿಸಿತೇನ ಚ ಆತನ ಅಗಾಚ ಮಹೀಯತೇ ಸಿಲಾಥಬೇಚ ಉಸಪಾಪಿತೇ ।

[ರುಮ್ಮಿ– ಅಶೋಕನು ತನ್ನಾಳಿಕೆಯ ೨೦ ನೆಯ ವರ್ಷದಲ್ಲಿ ಶಾಕ್ಯಮುನಿಬುದ್ಧನ ಜನ್ಮಸ್ಥಾನಕ್ಕೆ ಬಂದು ಪೂಜಿಸಿ ಕಂಬ ನಿಲ್ಲಿಸಿದನು. ಈ ಲುಂಬಿನೀ ಗ್ರಾಮದ ಕರವನ್ನು ತೆಗೆದು ಹಾಕಿ ತೆರಿಗೆಯನ್ನು ೮ ನೇ ಪಾಲೆಂದು ಮಾಡಿದನು.

ನಿಗ್ಲೀವ– ಕನಕಮುನಿಬುದ್ಧನ ಗೋಡೆಯನ್ನು ಅಶೋಕನು ೧೪ ನೇ ವರ್ಷ ೨ ನೇ ಸಾರಿ ವೃದ್ಧಿಗೊಳಿಸಿದನು ಮತ್ತು ಇಪ್ಪತ್ತನೇ ವರ್ಷ ಬಂದು ಪೂಜಿಸಿ ಶಿಲಾಸ್ತಂಭವನ್ನು ಸ್ಥಾಪಿಸಿದನು.]

* ಯೇಚ ಬುದ್ಧಾ ಅತೀತಾಚ ಯೇಚ ಬುದ್ಧಾ ಅನಾಗತಾ ॥ ಪಚ್ಚುಪನ್ನಾಚ ಯೇ ಬುದ್ಧಾ ಅಹಂ ವಂದಾಮಿ ಸಬ್ಬದಾ ॥ — ಸಿಲೋನದ ಬೌದ್ಧ ಎಲಿಹಲಾ

ಮಹಾಪುರುಷರೆಂಬವರ ಮಹತ್ವವು ತೀರಾ ಹೆಚ್ಚಾಗಿ ಇದೆ. ಈ ೬೩ ಮಂದಿ ಮಹಾಪುರುಷರ ಪುರಾಣಕ್ಕೇ ಅವರು ಮಹಾಪುರಾಣವೆನ್ನುವರು. ಈ ಅರವತ್ತು ಮೂವರೂ ಒಂದೇ ವಿಧದ ಯೋಗ್ಯತೆಯುಳ್ಳವರಲ್ಲ. ೨೪ ಮಂದಿ ತೀರ್ಥಂಕರರು, ೧೨ ಚಕ್ರವರ್ತಿಗಳು, ೯ ವಾಸುದೇವರು, ೯ ಬಲದೇವರು, ೯ ಪ್ರತಿವಾಸುದೇವರು; ಇವರೆಲ್ಲಾ ಕೂಡಿ (೨೪ + ೧೨ + ೯ + ೯ + ೯ =) ೬೩ ಮಂದಿ ಮಹಾಪುರುಷರು. ಈ ತ್ರಿಷಷ್ಠಿ ಶಲಾಕಾ ಮಹಾಪುರುಷರ ಸಂಖ್ಯೆಯಲ್ಲಿ ತಾರತಮ್ಯದ್ದೊಂದು ವೈಶಿಷ್ಟ್ಯವಿದೆ. ಆದರೆ ತ್ರಿಷಷ್ಠಿ ಪುರಾತನರೆಂಬವರದು ಹೀಗಲ್ಲ.

ಹರಿಹರನ "ಶಿವಶರಣರ ರಗಳೆ"ಯನ್ನು ಕುರಿತು ಹೇಳುವಾಗ ಕವಿಚರಿತ್ರಕಾರರು "ಇದರಲ್ಲಿ ತಮಿಳು ಭಾಷೆಯಲ್ಲಿರುವ ಪೆರಿಯ ಪುರಾಣವೆಂಬುವದರಲ್ಲಿ ಹೇಳಿರುವ ೬೩ ಮಂದಿ ಪುರಾತನರ ಕಥೆಗಳಿವೆ" ಎಂದು ಹೇಳಿದ್ದಾರೆ. ಜೈನರು ತಮ್ಮದಕ್ಕೆ "ಮಹಾಪುರಾಣ"ವೆಂದು ಹೆಸರಿಟ್ಟಂತೆ ತಮಿಳು ಶೈವರು "ಪೆರಿಯ ಪುರಾಣ"ವೆಂದು ಹೆಸರಿಟ್ಟಿದ್ದು ಮೇಲ್ಕಂಡ ಸಿದ್ಧಾಂತಕ್ಕೆ ಸಾಧಕವಾಗಿದೆ.

## ೩. ಶಿವಲಿಂಗ

ಲಿಂಗವಂತರು ಲಿಂಗವನ್ನು ಶಿವಶಕ್ತಿ ಸಂಯೋಗದ ತತ್ತ್ವಸಂಕೇತವೆಂದು ಭಾವಿಸಿದ್ದಾರೆ. ಗದ್ದುಗೆಯೇ (ಪೀಠ) ಶಕ್ತಿಯೆಂದೂ ಪಿಂಡವೇ (ಲಿಂಗ) ಶಿವನೆಂದೂ ಇವರ ಮತ. ಆದರೆ ೮ನೆಯ ಶತಮಾನದವರೆಗೆ ಶಿವಲಿಂಗದ ಬಗ್ಗೆ ಈ ಕಲ್ಪನೆಗಳಿದ್ದಿಲ್ಲವೆಂದು ಊಹಿಸಲು ಕೆಲವು ಆಧಾರಗಳಿವೆ. ಹೇಗೆಂದರೆ : ಲಿಂಗದ ಪೀಠಕ್ಕೆ ಜಲಹರಿ, ಪಾನಬಟ್ಟಲ ಮುಂತಾದ ಪ್ರಚಲಿತ ಶಬ್ದಗಳಿವೆಯಷ್ಟೆ. ಈ ಪೀಠವು ದುಂಡಗಿನ ಆಕಾರದ್ದಿದ್ದು ಅಭಿಷೇಕದ ನೀರು ಹರಿದು ಹೋಗುವುದಕ್ಕೆ ಹರನಾಳಿಗೆಯುಳ್ಳದ್ದಾಗಿರುತ್ತದೆ. ಇಂಥ ಹರನಾಳಿಗೆಯುಳ್ಳ ಚೌಕುಪೀಠಗಳು ದೇವದೇವಿಯರ ಪ್ರತಿಮೆಗಳಿಗೂ ಇರುತ್ತವೆ. ಇದನ್ನು ಬೇರೆ ಬೇರೆ ಪ್ರಾಚೀನ ದೇವಾಲಯಗಳಲ್ಲಿ ಕಂಡುಕೊಳ್ಳಬಹುದು. ಈ ವಿಷಯವು ನನ್ನ ಕಣ್ಣಿಗೆ ಬಿದ್ದಾಗ ಲಿಂಗಪೀಠ ದುಂಡಗೆಂದೂ ಅನ್ಯಪ್ರತಿಮೆಯ ಪೀಠ ಚೌಕೆಂದೂ ಭಾವಿಸಿಕೊಂಡಿದ್ದೆನು. ಆದರೆ ಮೊನ್ನೆ ಮೊನ್ನೆ ನಾನು ಎರಡನೇ ಸಲ ಸಂಗಮ, ಐಹೊಳೆ, ಪಟ್ಟದಕಲ್ಲು, ಬಾದಾಮಿಗಳನ್ನು ನೋಡಲಿಕ್ಕೆ ಹೋದಾಗ ಐಹೊಳೆಯ ಒಂದು ದೇಗುಲದ ಹತ್ತಿರ ಚೌಕಪೀಠದ ಲಿಂಗವನ್ನು ನೋಡಿದೆನು. ಆಗ ಹೆಚ್ಚು ಸೂಕ್ಷ್ಮವಾಗಿ ಪರೀಕ್ಷಿಸಲಿಕ್ಕೆ ನಿಂತೆನು. ಯಾಕೆಂದರೆ ಮೊದಲು ಅನ್ಯಪ್ರತಿಮೆಯಿರುವಲ್ಲಿ ಧರ್ಮಕ್ರಾಂತಿಯ ಚಳುವಳಿಯ ಕಾಲದಲ್ಲಿ ಲಿಂಗಪ್ರತಿಷ್ಠೆಯಾಗಿರುವ ಸಂಭವವೂ ಉಂಟು. ಆದ್ದರಿಂದ ಬೇರೆ ಕೆಲವು ಲಿಂಗಗಳನ್ನು ಪರೀಕ್ಷಿಸಬೇಕೆಂದೆನು. ಆ ಪ್ರಕಾರ ನಾನು ಐಹೊಳೆಯಲ್ಲಿಯೇ ಇರುವ ಒಂದೇ ಕಲ್ಲಿನಲ್ಲಿ ಗುಡ್ಡದೊಳಗೆ ಕೊರೆದ ಶೈವಗವಿಯಲ್ಲಿ (ರಾವಳಗವಿಯೆಂದು ಅಲ್ಲಿ ಹೇಳುವರು) ಲಿಂಗವಿದ್ದುದನ್ನು ನೆನೆದು ಅಲ್ಲಿಗೆ ಹೋದೆನು.

ಅಲ್ಲಿ ಯಾವ ಚಿತ್ರಗೊಂಬೆಗಳನ್ನೂ ಹೊರಗಿನ ಕಲ್ಲಿನಿಂದ ಮಾಡಿ ನಿಲ್ಲಿಸಿಲ್ಲ. ಎಲ್ಲಾ ಮೂಲಗವಿಯ ಬಂಡೆಯ ಕಲ್ಲಿನಲ್ಲೇ ಕೆತ್ತಿದ್ದಾರೆ. ಆ ಗವಿ ಮುಖ್ಯಸ್ಥಾನದಲ್ಲಿದ್ದ ಅಖಂಡ ಲಿಂಗಕ್ಕೆ ಚೌಕಾದ ಗದ್ದುಗೆ ಇತ್ತು. ಅದು ಸುಮಾರು ೭ನೇ ಶತಮಾನದಲ್ಲಿ ಕೊರೆದ ಗವಿ, ಅದರಲ್ಲಿದ್ದ ಲಿಂಗವೂ ಅದೇ ಕಾಲದ್ದೆಂಬುದು ನಿಸ್ಸಂಶಯ. ಯಾಕೆಂದರೆ ಅದೂ ಅಲ್ಲಿಯ ಮೂಲ ಒಂಟು ಬಂಡೆಗಲ್ಲಿನೊಳಗೆ ಅಲ್ಲಿಯದಲ್ಲೇ ಕೊರೆದು ಮಾಡಿದ್ದಾಗಿದೆ. ಆಗ ನಾನು ಆ ಕಾಲದಲ್ಲಿ ಪೀಠವು ಗದ್ದುಗೆಮಾತ್ರವಾಗಿದ್ದು ಈಗಿನಂತೆ ಶಕ್ತಿಪದವಾಚ್ಯವೂ ಆಗಿರಲಿಲ್ಲವೆಂದು ಭಾವಿಸಿದೆನು. ಆಗ ಲಿಂಗವೆಂದರೆ ಮೇಲಿನ ಸಿಲಿಂಡರಿನಂಥ ಪಿಂಡವಷ್ಟೇ ಎಂಬ ಭಾವನೆಯಿದ್ದಿರಬೇಕೆಂದು ತಿಳಿದೆನು. ಆ ಮೇಲೆ ಪಟ್ಟದಕಲ್ಲಿಗೆ ಬಂದರೆ ಅಲ್ಲಿ ೮ನೇ ಶತಮಾನದ ಆದಿಭಾಗದಲ್ಲಿ ಬಾದಾಮಿಯ ಚಾಲುಕ್ಯ ವಿಕ್ರಮನ ಹೆಂಡತಿಯಾದ ಲೋಕಮಹಾದೇವಿಯು ಕಟ್ಟಿಸಿದ ಲೋಕೇಶ್ವರ (ಈಗ ವಿರೂಪಾಕ್ಷೇಶ್ವರ) ದೇವಾಲಯದಲ್ಲಿಯೂ ಇದೇ ಸ್ಥಿತಿ. ಆ ದೇವಾಲಯದಲ್ಲಿ ಒಳ್ಳೇ ಘನವಾದ, ಸುಂದರವಾದ, ಸತೇಜ ಲಿಂಗವಿದೆ. ಆ ಲಿಂಗದ ಪೀಠವಾದರೋ ತೀರಾ ಒರಟಾದ ಕೆಲವು ಬೂರಸುಗಲ್ಲಿನ ಚೌಕು ಗದ್ದುಗೆಯೇ ಇದೆ. ಮೇಲಿನ ಲಿಂಗವೋ ನೋಡಿದರೆ ಹಸಿವು ನೀರಡಿಕೆ ಹಾರಬೇಕು; ಇಂಥ ಹೊಳಪುಳ್ಳ ಕರೇಕಲ್ಲಿನದು. ಇದನ್ನು ನೋಡಿದರೂ ನನಗೆ ಆ ಕಾಲದಲ್ಲಿ ಮೇಲಿನ ಪಿಂಡಕ್ಕಿದ್ದ ಮಹತ್ವವು ಪೀಠಕ್ಕೆ ಎಳ್ಳಷ್ಟೂ ಇರಲಿಲ್ಲವೆಂದು ಸ್ಪಷ್ಟವಾಗಿ ಅನಿಸಿತು. ದ್ವಾದಶ ಜ್ಯೋತಿರ್ಲಿಂಗ ಗಳಲ್ಲೊಂದಾದ ಓಂಕಾರೇಶ್ವರ ಮಹಾಕ್ಷೇತ್ರದಲ್ಲಿ ನಾಲ್ಕು ಮುದಿಯ ತೆಕ್ಕೆಗೆ ಅಮರದಂಥ ಒಂದು ಒಳ್ಳೇ ದೊಡ್ಡ ಲಿಂಗವು ಪೀಠವಿಲ್ಲದೆ ಬರೇ ಪಿಂಡ ಮಾತ್ರವೇ ಇರುವುದಾಗಿಯೂ ಕಾಶಿಯಲ್ಲಿ ತಿಲಭಾಂಡೇಶ್ವರನ ಬಲು ಎತ್ತರವಾದ ಲಿಂಗಕ್ಕೂ ಪೀಠವೇ ಇಲ್ಲವೆಂಬುದಾಗಿಯೂ ಪ್ರತ್ಯಕ್ಷದರ್ಶಿಗಳಾದ ನನ್ನೊಬ್ಬ ಶ್ರದ್ಧೇಯ ಸ್ವಾಮಿಗಳು ತಿಳಿಸುತ್ತಾರೆ. ಉಳಿದ ಪ್ರತಿಮೆಗಳಿಗೆಲ್ಲ ಹೇಗೋ ಹಾಗೆ ಲಿಂಗಕ್ಕೂ ಪೀಠವೆಂದರೆ ಬರೇ ಪೀಠವೇ ಸರಿ, ಗದ್ದುಗೆಯೇ ಸರಿ. ಪಟ್ಟದಕಲ್ಲಿನ ದೇವಾಲಯಗಳೆಲ್ಲ ಸಾಧಾರಣವಾಗಿ ಅದೇ ಕಾಲದವು. ಅವೆಲ್ಲವುಗಳಲ್ಲಿಯೂ ಪೀಠದ ಸ್ಥಿತಿಯುಇದೇ. ಆಮೇಲೆ ಬಾದಾಮಿಗೆ ಬಂದು ನೋಡಿದೆನು. ನಾಲ್ಕು ಮೇಣಬಸ್ತಿಗಳಲ್ಲೊಂದಾದ ಶೈವ ಗುಹೆಯಲ್ಲಿಯೂ ಐಹೊಳೆಯ ಗವಿಯಂತೆಯೇ ಲಿಂಗದ ಪೀಠ ಚೌಕೇ ಸರಿ.

ಇದನ್ನೆಲ್ಲಾ ನೋಡಿದರೆ ಎಂಟನೇ ಶತಮಾನಕ್ಕಿಂತ ಪೂರ್ವದಲ್ಲಿ ಡಬ್ಬುಕೊಳಗ ದಂಥ ಸಿಲಿಂಡರಾಕಾರದ ಪಿಂಡಕ್ಕಷ್ಟೇ ಲಿಂಗವೆನ್ನುತ್ತಿದ್ದರೆಂದೂ ಲಿಂಗವೆಂಬ ಶಬ್ದ ಕಿವಿಗೆ ಬಿದ್ದಾಗ ಪೀಠದ ಕಲ್ಪನೆಯೇ ಬಾರದೆ ಬರೇ ಪಿಂಡವೇ ನೆನಪಿಗೆ ಬರುತ್ತಿದ್ದಿ ತೆಂದೂ ಊಹಿಸಬಹುದಾಗಿದೆ. ಈಗೊಂದು ಸರಸ್ವತಿಯ ಪ್ರತಿಮೆ ಇದೆ ಎಂದು ತಿಳಿಯುವಾ. "ಸರಸ್ವತಿ" ಎಂಬ ಶಬ್ದ ಕಿವಿಗೆ ಬಿದ್ದರೆ ಪೀಠದ ಹೊರತು ಬರೇ ಮೂರ್ತಿಯ ಕಲ್ಪನೆ ನೆನಪಿಗೆ ಬಂದಿತೇ ವಿನಾ ಗದ್ದುಗೆಯ ನೆನಪಾಗಲಿಕ್ಕಿಲ್ಲ.

ಯಾಕೆಂದರೆ ಪೀಠವೆಂಬುದು ಕೂತುಕೊಳ್ಳುವ ಮಣಿ, ಗದ್ದುಗೆ, ಕಟ್ಟೆ ಇಷ್ಟೇ ಸರಿ. ಇಷ್ಟೊಂದು ಮಹತ್ವವುಳ್ಳದ್ದು ಪೂಜಾಯೋಗ್ಯವಾದ ಮೂರ್ತಿಗೆ ಸರಿಗಟ್ಟಿಕೊಂಡು ಮುಂದೆ ಬರಲಾರದು.

ಮುಂದೆ ಕಲಾಕೌಶಲ್ಯದ ಉನ್ನತಿಯು ಮತ್ತೊಮ್ಮೆ ಆದ ಕಾಲದಲ್ಲಿ ಅಂದರೆ—ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ಕಾಲದಿಂದೀಚೆಗೆ— (ವಿಕ್ರಮನ ಆಳಿಕೆ ೧೦೭೬–೧೧೨೬ ಕ್ರಿಸ್ತಶಕ) ಲಿಂಗದ ಪೀಠವು ವರ್ತುಲಾಕಾರವನ್ನು ಹೊಂದಿದ ಹಾಗೆ ತೋರುತ್ತದೆ. ಯಾಕಂದರೆ ಆ ಕಾಲದಲ್ಲಿ ಕಲಾಕೌಶಲ್ಯವು ಒಳ್ಳೇ ಅಭಿವೃದ್ಧಿಗೆ ಬಂದಿತು. ಶಿಲಾಲಿಪಿಗಳ ಅಕ್ಷರಗಳನ್ನು ನೋಡಿದರೂ ಈ ಮಾತು ಸಿದ್ಧವಾಗುತ್ತದೆ. ಯಾಕೆಂದರೆ ಇದೇ ಕಾಲದಲ್ಲಿಯೇ ಕನ್ನಡದ ಅಕ್ಷರಗಳು ಮುತ್ತಿನಂತಾದವು. ಅವು ಮೊದಲು ತೀರಾ ಒರಟಾಗಿದ್ದವು. ಈ ಕಾಲದಲ್ಲಿ ಕಲಾಕುಶಲರ ಕಲ್ಪನಾ ಶಕ್ತಿಗೆ ಹೆಚ್ಚು ಅನುವು ದೊರೆತದ್ದು ಆ ಕಾಲದ ಕಲೆಯಲ್ಲಿ ಕಂಗೊಳಿಸುತ್ತದೆ. ಆಗ ಮೂರ್ತಿಗಳು ಇದಿರು ಮೋರೆ ಮಾಡಿ ಕುಳಿತಿರಲು ಅಥವಾ ನಿಂತಿರಲು ಅದು ಎಡ ಬಲಕ್ಕೆ ಉದ್ದಾಗಿಯೂ ಇದಿರು–ಬದಿರು ಕಿರಿಯಾಗಲಾಗಿಯೂ ಇರುವ ಸಂಭವವಿರುವದರಿಂದ ಅದರ ಆಕಾರವನ್ನನುಸರಿಸಿ ಅದರ ಗದ್ದುಗೆಯೂ ಕೂಡ ಎಡಬಲಕ್ಕೆ ಉದ್ದಾಗಿಯೂ ಇದಿರುಬದಿರು ಕಿರಿದಾಗಿಯೂ ಇರುವಂತೆ ಕಾಟಕೋಣ ಚೌಕೋಣಾಕಾರವಾಗಿ ಚೌಕಾದದ್ದಿರಲೇಬೇಕೆಂದೂ, ದುಂಡಗಿನ ಸುತ್ತಳತೆಯುಳ್ಳ ಲಿಂಗಕ್ಕೆ ಅದರ ಆಕಾರವನ್ನನುಸರಿಸಿ ದುಂಡಾಕಾರದ ಗದ್ದುಗೆಯಿರುವುದು ಚೆಂದವೆಂದೂ ಶಿಲ್ಪಿಗಳು ಕಲ್ಪಿಸಿದರೆಂದು ತೋರುತ್ತದೆ. ಈ ಕಾರಣದಿಂದಲೇ ಸುಮಾರು ಈ ಕಾಲದಿಂದಿತ್ತೀಚಿನ ಕಾಲದ ಗುಡಿಗಳಲ್ಲೆಲ್ಲ ವರ್ತುಲಾಕಾರದ (ದುಂಡು) ಜಲಹರಿಯು (ಪೀಠವು) ಲಿಂಗಕ್ಕೆ ಇದ್ದದ್ದು ಕಾಣುತ್ತದೆ. ಅಲ್ಲದೆ ೧೧ನೇ ಶತಮಾನದಿಂದಿತ್ತೀಚಿನ ಕಾಲದ ಲಿಂಗಗಳಿಗೆಲ್ಲ ಪೀಠಕ್ಕೂ ಲಿಂಗಕ್ಕೂ ಒಂದೇ ಬಗೆಯಾದ ಕಲ್ಲನ್ನು ಉಪಯೋಗಿಸಿ ಕಲಾದೃಷ್ಟಿಯಿಂದ ಎರಡಕ್ಕೂ ಸಮಾನ ಮಹತ್ವವನ್ನು ಕೊಟ್ಟಂತೆ ಕಾಣುತ್ತದೆ. ಪಟ್ಟದಕಲ್ಲಿನ ೮ನೇ ಶತಮಾನದ ಗುಡಿಗಳಲ್ಲಿರುವಂತೆ ಜ್ಯೋತಿರ್ಮಯವಾದ ಸೌಂದರ್ಯಪೂರ್ಣ ಲಿಂಗಗಳಿಗೆ ಕಾಸಿನ ಕಲ್ಲಿನ ಹುರಬರಕು ಒರಟು ಗದ್ದುಗೆಯನ್ನು ಮುಂದಿನ ಶತಮಾನಗಳಲ್ಲಿ ಮಾಡಿಲ್ಲ.

ಇದನ್ನು ನೋಡಿದರೆ ೧೧–೧೨ನೇ ಶತಮಾನಗಳಿಗಿಂತ ಮೊದಲು ಪೀಠಕ್ಕೆ ಮಹತ್ವವಿರಲಿಲ್ಲವೆಂದು ಸಿದ್ಧವಾಗುವದು.

ಆದ್ದರಿಂದ ಪೀಠಕ್ಕೆ ಶಕ್ತಿಯೆಂದೂ, ಪಿಂಡಕ್ಕೆ ಲಿಂಗವೆಂದೂ ಜೋಡಣೆ ಮಾಡಿ ಈ ಯುಗ್ಮವನ್ನು ಪೂಜಿಸುವುದು ಪ್ರಾಚೀನ ಪದ್ಧತಿಯಾಗಿರದೆ ಬಸವಣ್ಣನವರ ಕಾಲಕ್ಕೆ ತುಸು ಹಿಂದು–ಮುಂದೆ ಎಂದೋ ರೂಢಿಗೆ ಬಂದಿರಬೇಕೆಂದು ಸಿದ್ಧವಾಗುತ್ತದೆ. ಈ ತತ್ವದಂತೆ ಲಿಂಗವನ್ನು ನಿರ್ಮಿಸಬೇಕೆಂದು ಹೇಳುವ ಗ್ರಂಥಗಳೆಲ್ಲಾ ಪುರಾತನವಲ್ಲವೆಂಬುದು ಸಿದ್ಧಾಂತವೇ ಸರಿ.

## ೪. ಸಿದ್ಧಾಂತ ಶಿಖಾಮಣಿ ಮತ್ತು ನೂರಾ ಒಂದು ಸ್ಥಲಗಳು

ಸಿದ್ಧಾಂತ ಶಿಖಾಮಣಿಯು ಲಿಂಗವಂತರಿಗೆ ಪ್ರಾಚೀನ ಪ್ರಮಾಣಗ್ರಂಥ. ಇದನ್ನು ಬಿಟ್ಟರೆ ಪೂರ್ವದ್ದೆಂಬ ಇನ್ನಾವ ಪ್ರಮಾಣಗ್ರಂಥವಿಲ್ಲೆಂದು ಸದ್ಯಕ್ಕೆ ತಿಳಿಯಲ್ಪಟ್ಟಿದೆ. ಆದರೆ ಇದರ ಕಾಲವು ಬಸವಣ್ಣನವರ ಕಾಲಕ್ಕಿಂತ ಬಹಳ ಪ್ರಾಚೀನವಾಗಿರಲಾರದೆಂದು ನಿಶ್ಚಯಿಸುವುದಕ್ಕೆ ಕಾರಣಗಳಿಲ್ಲದೆ ಇಲ್ಲ. ನನಗೆನಿಸುವ ಮಟ್ಟಿಗೆ ಈ ಕಾರಣಗಳನ್ನಿಲ್ಲಿ ನಿವೇದಿಸುವೆನು.

ನೂರೊಂದು ಸ್ಥಲಗಳು "ಜೀವ"ದ ಉತ್ಕ್ರಾಂತಿಯ ಕ್ರಮಪರ್ಯಾಯಗಳೆಂದು ನನ್ನ ಮತ. ಹಾಗಿದ್ದುದಾದರೆ ಅದ್ವೈತ ಸತ್‌ವಸ್ತುವೊಂದರಲ್ಲೇ ಚಿತ್ ಶಕ್ತಿಯ ಪ್ರಕಾಶನವಾಗಿ ವಿಶ್ವವು ಮೈದೋರಿತೆಂದು ಹೇಳಬಹುದು, ಇರುವಿನಲ್ಲಿ ಅರಿವುಂಟಾಗಿ ದೇವನಲ್ಲಿ ಜೀವ ಉದಿಸಿತೆಂದು ಭಾವಿಸಬಹುದು. ಈ ಜೀವವು ಪರವೆಯಿಲ್ಲದೆ ಸಂಸಾರಮೋಹದಲ್ಲಿ ಮುಳುಗಿ ದುಃಖಾತಿಶಯದಿಂದ ಕೊನೆಗೊಮ್ಮೆ ಎಚ್ಚತ್ತು ಸಂಸಾರಕ್ಕೆ ಬೇಸರಿಸಿ ಸತ್ಯದ ಸಂಧಾನಕ್ಕೆ ನಿಂತಿತು. ಇಲ್ಲೇ ಧರ್ಮದ ಆರಂಭ. ನನ್ನ ಅಭಿಪ್ರಾಯದಂತೆ ಇಲ್ಲಿಗೆ ಮೂರು ಸ್ಥಲಗಳು ಸಂದವು. ಅವು : ೧. ಪಿಂಡ ಸ್ಥಳ, ೨. ಪಿಂಡಜ್ಞಾನ ಸ್ಥಳ, ೩. ಸಂಸಾರಹೇಯ ಸ್ಥಳ. ಈ ಅವಸ್ಥೆಯಿಂದ ಮುಂದೆ ಜೀವನ ವೃತ್ತಿಯಂತೆ ಒಂದು ಹಾದಿ ಹತ್ತಿತು. ಇವೇ ಭಕ್ತಿ, ಜ್ಞಾನ, ಯೋಗಗಳೆಂಬ ಮಾರ್ಗ ತ್ರಯದ ಆರಂಭ, ಹೃದಯ ಪ್ರಧಾನ ಜೀವವು. ವಿಶ್ವವು ವಿಶ್ವೇಶ್ವರನ ಕುರುಹೆಂದೂ ಸೃಷ್ಟಿಯು ಸೃಷ್ಟಿಕರ್ತನ ಸೃಷ್ಟಿಯೆಂದೂ ಬಗೆದು, ಆ ದೇವನ ಮಹಿಮೆಗೆ ಬೆರಗಾಗಿ ಭಕ್ತನಾಗಿ ಭಾವರಾಜನಾಗಬಹುದು. ಬುದ್ಧಿಪ್ರಧಾನ ಜೀವಗಳು ತತ್ತ್ವಜ್ಞಾನದ ಸೆಳವಿಗೆ ಬಿದ್ದು ಜ್ಞಾನಮಾರ್ಗಿಗಳೂ ಯೋಗಮಾರ್ಗಿಗಳೂ ಆಗಬಹುದು. ದುರ್ಬಲ ಜೀವಿಗಳು ವಿಶ್ವರಹಸ್ಯವನ್ನು ಬಿಚ್ಚಿ ಹೇಳಿ ಕೈಹಚ್ಚಿ ಎತ್ತುವ ಬಲ್ಲವರನ್ನು ಬಯಸಿ ಬಾಯ್ಬಿಡಬಹುದು. ಜೀವನು ತನ್ನ ಬಯಕೆಯನ್ನು ನೆರವೇರಿಸಬಲ್ಲಂಥ ಬಲ್ಲವನಿಗೇ ಗುರುತರನೆಂದು ಭಾವಿಸಿ ಕೃತಜ್ಞತೆಯಿಂದ ಗುರುವೆಂದೊಪ್ಪಿ ಸೇವಿಸಬಹುದು. ಇದೇ ೪ನೆಯದಾದ ಗುರುಕಾರುಣ್ಯ ಸ್ಥಳವು. ಇಲ್ಲೇ ಸಂಪ್ರದಾಯಗಳ ಆರಂಭ. ದುರ್ಬಲ ಜೀವಿಗಳಿಗೆ ಸ್ವತಂತ್ರವಾಗಿ ಮುಂದರಿಯುವದಕ್ಕೆ ಬಲವಿಲ್ಲದ್ದರಿಂದ ಅನ್ಯರ ಶಕ್ತಿಪಾತದ ಅಗತ್ಯವುಂಟು, ಇದಕ್ಕೇ ದೀಕ್ಷೆಯೆನ್ನುವದು. ಈ ದೀಕ್ಷೆಯ ಫಲವೆಂದರೆ– ಜಿಜ್ಞಾಸು ಜೀವನಿಗೆ ಸಾಧನೋಪಯುಕ್ತವಾದ ಶಕ್ತಿಪಾತ ಶಿವಚಿಹ್ನದ (ಲಿಂಗದ) ಲಾಭವೆಂದು ಲಿಂಗವಂತ ಮತೋಕ್ತ ರೀತಿಯಿಂದ ಹೇಳಬಹುದು. ಈ ದೀಕ್ಷೆಗೆ ೫ ನೆಯದಾದ ಲಿಂಗಧಾರಣ ಸ್ಥಳವೆಂದು ಹೆಸರು. ಆ ಬಳಿಕ ಜೀವನು ಕ್ರಮವಾಗಿ ಸಾಧನೆಯಲ್ಲಿ ಮುಂದರಿಯುತ್ತ ೪೪ನೆಯ ಅವಸ್ಥೆಯಲ್ಲಿ (ಸ್ಥಳದಲ್ಲಿ) ಜೀವಭಾವದಿಂದ ಮುಕ್ತನಾಗಿ ಆತ್ಮಭಾವ ಸಂಪನ್ನನಾದ ಜೀವನ್ಮುಕ್ತನಾದ ಬಳಿಕ ತನ್ನ ದಿವ್ಯಶಕ್ತಿಯನ್ನು ಲೋಕದ ದುರ್ಬಲ ಜೀವಗಳಿಗೆರೆಯುತ್ತ ಅಧಿಕಾರದ ೫೭ ನೆಯ ಅವಸ್ಥೆಯಲ್ಲಿ ಹಾಯ್ದು ಪೂರ್ವಪಿಂಡದಲ್ಲೇ ಬಯಲಾಗ

ಬಲ್ಲನು. ಇದೇ ವಿದೇಹ ಮುಕ್ತಿ. ಹೀಗೆ ದೇವನಲ್ಲಿ ಜೀವ ಹುಟ್ಟಿ, ತಿರುಗಿ ಅದು ದೇವನಲ್ಲೆ ಬೆರೆತು ಹೋಗುವ ಪರಿಯಂತರದ ನೂರೊಂದವಸ್ಥೆಗಳಿಗೆ (ವೀರಶೈವ ಮತೋಕ್ತರೀತ್ಯಾ) ಷಟ್‌ಸ್ಥಲ ಸಿದ್ಧಾಂತ ಇಲ್ಲವೆ ನೂರೊಂದು ಸ್ಥಲದ ಸಿದ್ಧಾಂತ ವೆನ್ನಬಹುದು. ಆದಿಯಿಂದ ಅಂತ್ಯದವರೆಗೆ ಹೀಗೆ ಅಕ್ರಮವಿಲ್ಲದೆ ಹೇಳಿದ್ದರೆ ಮಾತ್ರ ಅಗಸ್ತ್ಯರು ರೇಣುಕರ ಪ್ರವಚನವನ್ನು ಕೇಳಿದ್ದಾರು. ಇಲ್ಲದಿದ್ದರೆ ಅಸಂಬದ್ಧ ಸಾಮಯಿಕ ಮತಾಚಾರಗಳನ್ನು ಕೇಳುತ್ತ ಕೂಡುವಷ್ಟು ಅವನು ನಿರುದ್ಯೋಗಿ ಯಾಗಿರಲಾರನು. (ಯಾಕೆಂದರೆ ಅವನೊಬ್ಬ ಆರ್ಯ ವಸಹಾತುಗಾರನಾಗಿದ್ದನೆಂದು ಇತಿಹಾಸಜ್ಞರ ಮತ.)

ಇದೀಗ ಪ್ರಸಿದ್ಧವಿರುವ ಸಿದ್ಧಾಂತಶಿಖಾಮಣಿಯೆಂಬ ಗ್ರಂಥದಲ್ಲಿಯ ಆರಂಭದ ಸ್ಥಳಗಳ ವ್ಯಾಖ್ಯೆಗಳು ಆವೊಂದು ವಿಚಾರಾರ್ಹವಾಗಿವೆ. ಹೇಗೆಂದರೆ :

ಪಿಂಡಸ್ಥಳ : ಬಹುಜನ್ಮಕೃತ ಪುಣ್ಯದಿಂದ ಪಾಪವನ್ನು ಕ್ಷೀಣಗೊಳಿಸಿಕೊಂಡ ಶುದ್ಧಾಂತಃಕರಣನಾದ ದೇಹಿಗೇ ಪಿಂಡವೆಂಬ ಹೆಸರು.

ಪಿಂಡಜ್ಞಾನಸ್ಥಳ : ತಾನು ಶರೀರವಲ್ಲದೆ ಇನ್ನೇನೂ ಅಲ್ಲವೆಂದು ಬಗೆಯದೆ, ತಾನು ಶರೀರದ ವ್ಯತಿರಿಕ್ತ ಬೇರೆಯಿರುವುದಾಗಿ ವಿವೇಕವುಳ್ಳವನಿಗೆ ಪಿಂಡಜ್ಞಾನಿ ಯೆಂದು ಹೆಸರು.

ಸಂಸಾರ ಹೇಯಸ್ಥಳ : ಹೃದಯದ ಕಳಂಕಗಳೆಲ್ಲ ಲೋಪವಾಗಿರುವ, ನಿತ್ಯ ಅನಿತ್ಯಗಳ ವಿಚಾರವುಳ್ಳವನಿಗೆ ವಾಸನಾಬಲದಿಂದ ಸಂಸಾರದಲ್ಲಿ ಹೇಸಿಕೆ ಯುಂಟಾಗುವುದು.

ಗುರುಕಾರುಣ್ಯ ಸ್ಥಳ : ವಿವೇಕ ಸಂಪನ್ನನೂ ವಿರಾಗಿಯೂ ಆದ ಜಿಜ್ಞಾಸುವು ಗುರುವನ್ನು ಪಡೆಯುವನು.

ಲಿಂಗಧಾರಣ ಸ್ಥಳ : ಅವನಿಗೆ ಗುರುವು ಲಿಂಗಧಾರಣೆ ಮಾಡುವನು.

ಮೊಟ್ಟಮೊದಲಿನ ಇವೈದು ಸ್ಥಳಗಳನ್ನು ನೋಡಿದರೆ ಜೀವನ ಆದಿ ವಿಚಾರವನ್ನೇನೂ ಹೇಳದೆ – ಸುವಿಚಾರಿಗಳಾದವರಿಗೆ ಮತಾಂತರಗೊಳಿಸುವ ಹೇತು ವನ್ನೇ ವ್ಯಕ್ತಪಡಿಸಿದಂತಾಗುವದು. ಪೂರ್ವ ಪ್ರಚಲಿತ ಧರ್ಮಗಳ ಸಿದ್ಧಾಂತಗಳ ಗ್ರಂಥಗಳಲ್ಲಿ ಹೀಗೆಂದಿಗೂ ಹೇಳಿರುವ ಸಂಭವವಿಲ್ಲ. ಹೀಗಿದ್ದರೆ ಲಿಂಗಾಯತರಿಗೆ ವಿವೇಕಸಂಪನ್ನರಾದ ವೈರಾಗ್ಯಶಾಲಿಗಳಾಗುವವರೆಗೆ ಲಿಂಗಧಾರಣೆಯೇ ಆಗುತ್ತಿರಲಿಲ್ಲ ವೆಂದು ಹೇಳಬೇಕಾಗುವದು. ಈ ಕಾರಣದಿಂದ ಈ ಗ್ರಂಥವು ಮತಾಂತರದ ಚಳವಳದ ಕಾಲದಲ್ಲಿ ರಚಿತವಾಗಿರಬೇಕೆಂದು ಸಿದ್ಧವಾಗುವದು. ಇದಲ್ಲದೆ ರುದ್ರಾಕ್ಷಧಾರಣ ಸ್ಥಳದಲ್ಲಿ :

ಬ್ರಾಹ್ಮಣೋ ವಾಂತ್ಯಜೋ ವಾಪಿ
ಮೂರ್ಖೋ ವಾ ಪಂಡಿತೋಪಿ ವಾ ॥
ರುದ್ರಾಕ್ಷಧಾರಣೌ ದೇವ
ಮುಚ್ಯತೇ ಸರ್ವಪಾತಕೈಃ ॥ ೬೩ ॥

ಎಂದು ಬ್ರಾಹ್ಮಣರನ್ನೂ ಚಾಂಡಾಲರನ್ನೂ ಕೂಡ ಸೆಳೆದಿರುವುದು ಮತಾಂತರ ಚಳವಳದ ನಿದರ್ಶನವಾಗಿದೆ. ಅಲ್ಲದೆ ಮಾಹೇಶ್ವರ ಸ್ಥಳಾಂತರ್ಗತವಾದ ಪೂರ್ವಾಶ್ರಮ ನಿರಸನ ಸ್ಥಳದಿಂದಲೂ ಈ ಮಾತು ಬಲಪಡುತ್ತದೆ. ಆದ್ದರಿಂದ ನೂರಾ ಒಂದು ಸ್ಥಲಗಳನ್ನು ನಿರ್ಮಿಸಿದ್ದು ಈಚೀಚೆಗೆಂದು ತೋರುತ್ತದೆ. ಅಂದರೆ ಬಸವಣ್ಣನಕಿಂತಲೂ ಸ್ವಲ್ಪ ಹಿಂದು ಮುಂದಾಗಿರಬಹುದು. ಅದರಂತೆ ನೂರಾ ಒಂದು ಸ್ಥಲಗಳನ್ನು ವಿವರಿಸುವ ಗ್ರಂಥಗಳಾದರೂ ಈಚಿನವಿರಬಹುದೆಂಬ ಊಹೆಗೆ ಆಸ್ಪದವಾಗುತ್ತದೆ.

( ಶಿವಾನುಭವ ೩-೧೧, ಸಪ್ಟೆಂಬರ ೧೯೨೮ )

# ವಿಜಯಪುರದ ಶಿಲಾಶಾಸನ

ಕ್ರಿಸ್ತಶಕ ೧೧೫೧

---

ವಿಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ ।
ದಕ್ಷಿಣೋನ್ನತ ದಂಷ್ಟ್ರಾಗ್ರಂ ವಿಶ್ರಾಂತಂ ಭುವನಂ ವಪುಃ ॥

(೧) ಸ್ವಸ್ತಿ ॥ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜ ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಶ್ರೀಮತ್ರೈಳೋಕ್ಯಮಲ್ಲದೇವರ ವಿಜಯರಾಜ್ಯಮುತ್ತರೋತ್ತರ ಪ್ರವರ್ಧಮಾನಮಾ ಚಂದ್ರಾರ್ಕತಾರಂಬರಂ ಸಲುತ್ತಮಿರೆ ಕಲ್ಯಾಣದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂ ರಾಜ್ಯಗೆಯ್ಯುತ್ತಮಿರೆ ॥

ತತ್ಪಾದ ಪದ್ಮೋಪಜೀವಿ ॥

(ಮಹಾಸ್ರಗ್ಧರಾ ವೃತ್ತ)

(೨) ಮುಳಿಸಿಂ ಮಾರಾಂಪರಾತಿ ಕ್ಷಿತಿಪರ ತಲೆಯಂ ಕಿತ್ತು ಸೆಂಡಾಡನೇ ಕೇ ।
ರಳ ಕಾಂತಾರಾಸಳಂ ಮಾಳವಗಿರಿಕುಳಿಶಂ ಲಾಳ ಕಾಳಾಹಿ ತಾರ್ಕ್ಷ್ಯಂ ॥

---

ವಿಜಾಪುರದ ಜಜ್ಜಕೋರ್ಟಿನ ಸುತ್ತಲಿರುವ ಕೋಟೆಯ ಆಗ್ನೇಯ ಭಾಗದಲ್ಲಿ ಒಂದು ಖಿಲವಾದ ಮಂದಿರವಿದೆ. ಅಲ್ಲಿ ಈಗ (ಪೂರ್ವಕಾಲದಲ್ಲಿದ್ದ) ನರಸಿಂಹದೇವರ ಗುಡಿಯ ಕಂಬಗಳು ಮಾತ್ರ ನಿಂತಿವೆ. ಇಲ್ಲಿ ಅರಸನು (ಮಹಮ್ಮದೀಯ ಬಾದಶಹನು) ಮದ್ದನ್ನು ಸಂಗ್ರಹಿಸುತ್ತಿದ್ದನಂತೆ. ಈ ಸ್ಥಳದಲ್ಲಿ ನಿಂತಿರುವ ಕಂಬಗಳಲ್ಲೊಂದರ ಮೇಲೆ ಈ ಶಾಸನವು ದಕ್ಷಿಣಾಭಿಮುಖವಾಗಿ ಕಂಗೊಳಿಸುತ್ತಿದೆ.

೧) ತ್ರೈಲೋಕ್ಯಮಲ್ಲ. ನೂರ್ಮಡಿ ಮುಂತಾದ ಬಿರುದುಗಳುಳ್ಳ ತೈಲಪನೆಂಬ ಚಾಲುಕ್ಯ ಅರಸನು ೧೧೫೦ ರಿಂದ ೧೧೬೧ ರ ವರೆಗೆ ಕಲ್ಯಾಣದಲ್ಲಿಯೂ ಅಲ್ಲಿಂದ ಬಿಜ್ಜಳನು ತಳ್ಳಲು ಮುಂದೆ ಅಣ್ಣಿಗೇರಿ, ಬನವಾಸಿಗಳಲ್ಲಿಯೂ ಅರಸೊತ್ತಿಗೆ ಮಾಡಿದನು. (ಆದರೆ ಡಾ ವೆಂಕಟಸುಬ್ಬಯ್ಯನವರು ಬರೆದಿರುವ ಕಲ್ಯಾಣಚಾಳುಕ್ಯರ ವಂಶಾವಳಿಯಲ್ಲಿ ಇವನ ಹೆಸರೇ ಇಲ್ಲದಿರುವದು ಆಶ್ಚರ್ಯ ! ).

೨) ಜತ್ತ ಸಂಸ್ಥಾನದಲ್ಲಿರುವ ಮಾಡಗಿಹಾಳದ ಶಿಲಾಶಾಸನದಲ್ಲಿ :
"ಕುಂತಳ ದೇಶಕ್ಕೆ ಸೇರಿದ ತರಿಕಾಡು ನಾಡಿನಲ್ಲಿ ಮಂಗಳವೇಡವೆಂಬ ಪಟ್ಟಣವುಂಟು. (ಇದು ಈಗ ಸಾಂಗಲಿ ಸಂಸ್ಥಾನದಲ್ಲಿ ಒಂದು ತಾಲೂಕಿನ ಸ್ಥಳವಿದೆ.) ಅದಕ್ಕೆ ಕನ್ನಮನೆಂಬುವನು

→

ಬಳವನ್ನೇಪಾಳ ಮತ್ತದ್ವಿರದ ನಿಶಿತ ವಜ್ರಾಂಕುಶಂ ಗೂರ್ಜರಾಭ್ರಾ- ।
ನಿಳನಾಂಧ್ರ ಕ್ಷಾಜ ತೀಕ್ಷ್ಣಕ್ರಕಚನತಿಬಳಂ ಬಿಜ್ಜಳ ಕ್ಷೋಣಿಪಾಳಂ ॥
ತತ್ಪಾದ ಪದ್ಮೋಪಜೀವಿ ॥

(ಮತ್ತೇಭ ವಿಕ್ರೀಡಿತ)

(೩) ಅಹಿತಧ್ವಾಂತ ಸಹಸ್ರರೋಚಿಯೆನೆ ಶಿಷ್ಟಪಾತ್ರ ಕಲ್ಪಾವನೀ- ।
ರುಹನೀತಂ ಪುರುಷಾರ್ಥಮೇರುವೆನೆ ತನ್ನಾಳ್ದಂಗೆ ಚಿತ್ತ ಪ್ರಸ- ॥
ನ್ನಹಿತಂ ಮಾಳ್ಪ ಮರುತ್ತನೂಜನೆನೆ ಪೆಂಪಂ ತಾಳ್ದಿದಂ ದುಷ್ಟನಿ- ।
ಗ್ರಹ ಶಿಷ್ಟ ಪ್ರತಿಪಾಳನೋಚಿತಗುಣಂ ಮೂಳಾರ ದಂಡಾಧಿಪಂ ॥ ೨ ॥

ತತ್ ಪ್ರಮುಖ ಕರಣಂಗಳ್ ॥

ಕಂದ॥ ತನಗಂ ಮನುಗಂ ಚರಿತಂ ।
ತನಗಂ ಸುರತುರಗವಾಪ್ಪ್ರ್ವ ಗಂಭೀರಗುಣಂ ॥
ತನಗಂ ಪಾರ್ಥಿಗಮೆನಿಪಂ ।
ಘನಶೌರ್ಯಂ ಮಲ್ಲನಹಿತ ಕುಳಹೃತ್ಸೆಲ್ಲಂ ॥ ೩ ॥

ಸುರಭೂರುಹದಗೆಯಂ ಬಿ– ।
ತ್ತರದಿಂ ಪರಮೇಷ್ಟಿ ತಂದು ಮನುಜಾಕೃತಿಯಿಂ ॥
ವಿರಚಿಸಿ ಪುಟ್ಟಿಸಿದನೆನಲ್ ।
ದೊರೆವೆತ್ತಂ ಬೀಲನಖಿಳಲಕ್ಷ್ಮೀಲೋಲಂ ॥ ೪ ॥

ರಾಮಂಗೆ ಸುಕವಿ ಕಲ್ಪಾ
ರಾಮಂಗನವದ್ಯ ವಾಗ್ವಧೂಕಚ ಸುಮನೋ
ಧಾಮಂಗೆ ಸಕಳಗುಣಗಣ
ಧಾಮಂಗೆಣೆಯೊಳರೆ ವಸುಮತೀ ಮಂಡಳದೊಳ್ ॥ ೫ ॥

---

→ ಅಧಿಪತಿಯಾಗಿದ್ದನು. ಅವನ ಮಗನಾದ ರಾಜನೆಂಬವನಿಗೆ ಅಮ್ಮುಗಿ, ಸಂಕಮಂ, ಜೋಗಮಂ ನೆಂಬ ಮೂವರು ಮಕ್ಕಳು. ಜೋಗಮನ ಮಗನಾದ ಹೆಮ್ಮಾಡಿಯ ಮಗನೇ ಕಲಚೂರ್ಯ ವಂಶಸ್ಥಾಪಕನಾದ ಬಿಜ್ಜಳನು" ಎಂದು ಹೇಳಿದೆ (ಯಂತೆ).

೩) ತೈಲಪನ ಮಾಂಡಲಿಕನಾದ ಬಿಜ್ಜಳನು (ತರ್ದವಾಡಿ ಸಾಸಿರಧಿಪತಿಯಾದ ಮೂಳಾರಯ್ಯನೆಂಬ ಮುಖ್ಯಮಂತ್ರಿ ಮತ್ತು ಮಲ್ಲ, ಬೀಲ, ರಾಮ, ಮಾಧವರೆಂಬ ನಾಲ್ಕು ಜನ ಪ್ರಮುಖ ಕರಣಂಗಳು ಇವರ (ಈ ಪಂಚಪ್ರಧಾನರ) ಸಹಾಯದಿಂದ ತನ್ನ ರಾಜ್ಯಕಾರಭಾರವನ್ನು ನಡೆಸುತ್ತಿದ್ದನೆಂದು ತೋರುತ್ತದೆ. (ಕರಣವೆಂಬ ಶಬ್ದಕ್ಕೆ [ಹರಿಶ್ಚಂದ್ರ ಕಾವ್ಯದಲ್ಲಿ] ಲೇಖಪತ್ರವೆಂದು ಅರ್ಥವಾಗುತ್ತದೆ. ಇದರ ಮೇಲಿಂದ ಲೇಖಪತ್ರಗಳನ್ನಿಡುವವರಿಗೆ ಕರಣಂಗಳೆಂದೆನ್ನುತ್ತಿದ್ದರೆಂದು ತೋರುತ್ತದೆ).

ಬುಧಜನದೊದವಿದಾರ್ಪ- ।
ತ್ಕುಧರಮನೌದಾರ್ಯವಜ್ರದಿಂ ಪೊಯ್ದು ಯಶಾಂ- ॥
ಬುಧಿಯೊಳವಗಾಹ ವಿಧಿಸಿದ- ।
ನಧವರ ಸಿಧಿ ಮಾಧವಂ ದಿಶಾಸಿಂಧುರಮಂ ॥ ೬ ॥

(೪) ॥ ವಚನ ॥ ಎನಿಸಿ ನೆಗಳ್ದ ಶ್ರೀಮನು ಮಹಾಪ್ರಧಾನಂ ಸೇನಾಧಿಪತಿ ದಂಡನಾಯಕ ಮುಳಾರಯ್ಯ ಪ್ರಮುಖ ಕರಣಂಗಳು ತರ್ದ್ದವಾಡಿ ಸಾಸಿರಮಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿನಾಳ್ದರಸುಗೆಯ್ಯುತ್ತಮಿರೆ ॥

(೫) ಕಂದ ॥ ಭಯಲೋಭದುರ್ಲಭಂ ದು
ರ್ಜ್ಜಯವೈರಿಮದೇಭಸಿಂಹನೆನೆ ನೆಗಳ್ದಿರ್ದಂ ॥
ಜಯಲಕ್ಷ್ಮೀಪತಿ ತಳವೃ- ।
ತ್ತಿಯ ಪೆರ್ಗ್ಗಡೆ ಮಲ್ಲದೇವನೆನೆ ಪೊಗಳದರಾರ್ ॥ ೭ ॥

ಪಿರಿಯ ಕರಣಂಗಳು ॥
॥ ಕಂ ॥ ವಾಚಾಳಬ್ಬ್ರಳ ಬಳಿಗರ್ ।
ಶೂಚೀಪಕ್ರರ್ ಪರಾರ್ಥನಿಪುರಣರೆನಿಪ್ಪೀ ॥
ನೀಚವರ್ಮ್ಮಳ್ಪರೆ ಕರಣವ ।
ರೇಚಣನಂತಿಷ್ಟಜನಕಮಾಶ್ರಿತ ಜನಂ (?) ॥ ೮ ॥

---

೪) ಪೂರ್ವಕಾಲದಲ್ಲಿ ಈ ವಿಜಾಪುರ ಪ್ರಾಂತಕ್ಕೆ 'ತರ್ದ್ದವಾಡಿ ಸಾಸಿರಂ'ವೆಂಬ ಹೆಸರಿತ್ತೆಂದು ತೋರುತ್ತದೆ. ಈ ವಿಜಾಪುರ ಜಿಲ್ಲೆಯಲ್ಲಿ (ಇಂಡಿ ತಾಲೂಕಿನಲ್ಲಿ) 'ತದ್ದೇವಾಡಿ' ಎಂಬುದೊಂದು ಹಳ್ಳಿಯಿದೆ. ಈ ಹಳ್ಳಿಯ ಜನರು ಈಗ ಮೊದಲಿನ ಊರನ್ನು ಬಿಟ್ಟು ಅದರ ನೆರೆಯಲ್ಲಿಯೇ ಮತ್ತೊಂದು ಹೊಸ ಊರನ್ನು ಕಟ್ಟಿಕೊಂಡು ಇದ್ದಾರೆ. ಭೀಮಾನದಿಗೆ ಪೂರ ಬಂದರೆ ಮೊದಲಿನ ಹಳ್ಳಿಯಲ್ಲಿ ಎಲ್ಲೆಲ್ಲಿಯೂ ನೀರು ಹೋಗುತ್ತಿದ್ದುದೇ ಇದಕ್ಕೆ ಕಾರಣ. ಈ ಹಳ್ಳಿಯ ಮೂಲಕವೇ ಈ ನಾಡಿಗೆ ಈ ಹೆಸರು ಬಂದಿರಬಹುದೋ ಏನೋ ಎಂದು ಸಂಶಯ. ಆದರೆ ಆ ಹಾಳುಹಳ್ಳಿಯಲ್ಲಿ ಶಿಲಾಶಾಸನಗಳೇ ಮುಂತಾದ ಪ್ರಾಚೀನ ಸಾಧನಗಳಾವವೂ ಇಲ್ಲ. 'ತರ್ದ್ದವಾಡಿ ಸಾಸಿರ' ಎಂಬ ಹೆಸರು ಬೇರೆ ಎರಡು ಶಾಸನಗಳಲ್ಲಿಯೂ ಸಿಕ್ಕುತ್ತದೆ—

೧) ವಿಜಾಪುರದ ಮ್ಯೂಝಿಯಮಿನಲ್ಲಿರುವ (೧೨೪೪ನೆಯ ಇಸವಿಯ) ಶಾಸನದಲ್ಲಿ "...ಸಿಂಘಣದೇವ...ಪಾದಪದ್ಮೋಪಜೀವಿ (ಗಳಾದ) ಭಾಗುಭಾಯಿಗಳು ... ತರ್ದ್ದವಾಡಿ ಸಾಸಿರಮಂ... ಪಾಲಿಸುತ್ತಮಿರೆ."

೨) ವಿಜಾಪುರದಲ್ಲಿಯೇ ಇರುವ (೧೧೯೭ನೆಯ ಇಸವಿಯ) ಒಂದು ಶಾಸನದಲ್ಲಿ "...ಶ್ರೀಮನ್ಮಹಾ ಪ್ರಧಾನಂ ಸೇನಾಧಿಪತಿ ಸಂಕರಸ ದಂಡನಾಯಕರುಂ ಕರಣಂ ಕೇಸಿಯಣಯ್ಯ ನಾಯಕರುಂ ತರ್ದ್ದವಾಡಿ ಸಾಯಿರಮಂ... ಆಳುತ್ತಮಿರ್ದು."

೩) ಈ ಮುಳಾರಯ್ಯನಿಗೂ ತರ್ದ್ದವಾಡಿ ಸಾಸಿರಮನಾಳಲಿಕ್ಕೆ ಬೇರೆ ೫ ಜನ ಪ್ರಧಾನರ ಸಹಾಯವಿದ್ದಿತೆಂದು ತೋರುತ್ತಿದೆ. ಈ ಐವರಲ್ಲಿ 'ಹೆಗ್ಗಡೆ ಮಲ್ಲದೇವ'ನೇ ಮುಖ್ಯ ಪ್ರಧಾನನು. ರೇಚಣ, ಕೇದಾರ, ಬೊಮ್ಮರಸ, ಗೋಂವಿದರೇ ಉಳಿದ ನಾಲ್ಕು ಜನ ಪಿರಿಯ ಕರಣಂಗಳೆಂಬುದನ್ನು ಇದೇ ಶಾಸನದ ೮ ರಿಂದ ೧೧ರ ವರೆಗಿನ ಪದ್ಯಗಳಿಂದ ತಿಳಿದುಕೊಳ್ಳಬಹುದು.

ಸುಜನ ಜನ ವನಜ ದಿನಮಣಿ !
ನಿಜಕುಲ ವಾರಿಧಿ ಸುಧಾಂಶುಬಿಂಬಂ ವಿಬುಧ ॥
ಬ್ರಜಚಿತ್ತ ವಲ್ಲರೀ ಪಾ- ।
ರಿಜಾತನೆನೆ ನೆಗಳ್ದನವನಿಯೊಳ್ ಕೇದಾರಂ ॥ ೯ ॥

ಪರಹಿತ ಚರಿತದೊಳಂಬರ ।
ಚರಪತಿಗಂ ಮಿಗಿಲೆನಿಪ್ಪ ಬೊಮ್ಮರಸನೊಳೇಂ ॥
ದೊರೆಯೇ [ತುಟಿ ನಾಲಗೆಯಿಂ] ।
ಬೆರಲಿಂದಂಟಂಟು ತೊಡೆದು ಬರವಣ್ಣಲೆಗಳ್ ? ॥ ೧೦ ॥

ಭೂವಿಶ್ರುತ ವಿಶದಯಶಂ- ।
ದೇವದ್ವಿಜಗುರು ಪದಾಬ್ಜಭೃಂಗಂ ಬಂಧಕ ॥
ಳ್ಪಾವನಿಜನೆನಿಸಿ ನೆಗಳ್ದಂ ।
ಗೋವಿಂದಂ ಸುಕವಿನಿಕರಪಿಕಮಾಕಂದಂ ॥ ೧೧ ॥

ಇಂತಿವರು ॥

ಸ್ವಸ್ತಿ ॥ ಶ್ರೀಮಚ್ಚಾಳುಕ್ಯ ಚಕ್ರವರ್ತಿ ತ್ರೈಳೋಕ್ಯಮಲ್ಲದೇವ ವರಿಷದ ಮೂರನೆಯ (?) ಪ್ರಜಾಪತಿ ಸಂವತ್ಸರದ (ಭಾ)ದ್ರಪದ ಪುಣ್ಣಮಿ ಸೋಮವಾರ ಸೋಮಗ್ರಹಣ ಪರ್ಬ್ಬ ನಿಮಿತ್ತವಾಗಿ ಶ್ರೀಮದ್ರಾಜಧಾನಿ ವಿಜಯಾಪುರದ ಜಳ ಮಂಟಪದ ಶ್ರೀನಾರಸಿಂಹ ದೇವರ್ಗ್ಗೆ ತಳವೃತ್ತಿಯೆ ಪೆರ್ಗ್ಗಡೆ ಮಲ್ಲದೇವ+ ಪ್ರಮುಖ ಕರಣಂಗಳು ಕೆಂಚನಾರಾಯಣ ಭಟ್ಟರ ಸ್ಥಳದ ಮತ್ತರು* ೧೦೦ (ನೂರು) ಕಡಿತವರ್ಗ್ಗಡೆ ವೃಜನಾಗಯ್ಯನ ಸ್ಥಳದ ಮತ್ತರು ನೂರು ಅನು ೨ ಮತ್ತರು ಇನ್ನೂರರ ಗ್ರಾಸ ಪರಿಧಾನ ನಿಬಂಧಮಂ ಸರ್ಬ್ಬ ನೇಮಸ್ಥವಾಗಿ ಬಿಟ್ಟರು-

(ಸಂಸ್ಕೃತ)

ಸ್ವದತ್ತಾಂ ಪರದತ್ತಾಂ ವಾಯೋ ಹರೇತ ವಸುಂಧರಾಂ ।
ಷಷ್ಠಿರ್ವರುಷಸಹಸ್ರಾಣಿ ವೀ (—) ಯಾಂ ಜಾಯತೀ ಕ್ರಿಮಿಃ ॥

---

\+ ಮುಳಾರಯ್ಯನ ಪ್ರಮುಖ ಪ್ರಧಾನನೇ ಇವನು (ಇದೇ ಶಾಸನದ ಪದ್ಯ ೭ನೆಯದರಲ್ಲಿ ನೋಡಿಕೊಳ್ಳಬಹುದು).

* 'ಮತ್ತರು' ಎಂಬ ಶಬ್ದಕ್ಕೆ 'ನೆಲದ ಪವಣ' (ಭೂಮಿಯ ಅಳತೆ) ಎಂದು ಕೆಲವು ಕೋಶಗಳಲ್ಲಿ ಸಿಕ್ಕುತ್ತದೆ. ಆದರೆ ಒಂದು ಮತ್ತರು ಈಗಿನ ಎಷ್ಟು ಎಕರೆ ಅಥವಾ ಗುಂಟೆಗಳಿಗೆ ಸಮಾನವಾದುದೆಂಬುದರ ನಿರ್ಣಯವು ಐತಿಹಾಸಿಕ ಸಂಗತಿಗಳ ಸಂಶೋಧನದಲ್ಲಿಯೇ ಮುಖ್ಯವಾದ ಪಂಡಿತರನ್ನು ಕೂಡಿದೆ.

ಕಂದ॥ ಶಾಸನಮಿದೋವಿದೆಲ್ಲಿಯು।
ಶಾಸನವಾರಿತ್ತರೇಕೆ ಸಲಿಸುವೆ ನಾನೀ ॥
ಶಾಸನವುನೆಂಬ ಪಾತಕ ।
ನಾಸಕಳಂ ರೌರವಕ್ಕೆ ಗಳಗಳನಿಳಿಗುಂ ॥ ೧೨ ॥

ಮತ್ತಮಾ ಶ್ರೀನಾರಸಿಂಹ ದೇವರಿಂ ಪಡುವಣ ಸಂಜೆ ಮಠಕ್ಕೆ ಕಂತಿಯು ಹೊಲದಿಂ ಪಡುವಣ ಸ್ಥಳದ ಹನ್ನೆರಡು ಮತ್ತಕೆಯ್ಯಂ ಸರ್ಬ್ಬ ನಮಸ್ಯವಾಗಿ ಬಿಟ್ಟರು ॥

॥ ಮಂಗಳ ಮಹಾ ಶ್ರೀ ಶ್ರೀ ಶ್ರೀ ॥

[ಕಲ್ಯಾಣದಲ್ಲಿ ಚಾಲುಕ್ಯ ಚಕ್ರವರ್ತಿಯಾದ ತೈಲಪನು ಅರಸನಾಗಿರುವಾಗ ಬಿಜ್ಜಳನು ಅವನ ಮಾಂಡಲಿಕ ರಾಜನಾಗಿದ್ದನು. ಇವನ ಅನುಮತಿಯಂತೆ ಆಗ ಮುಳಾರಯ್ಯನು ವಿಜಯಪುರವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ತರ್ದ್ದವಾಡಿ ಸಾಸಿರನಾಡನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಮುಳಾರ ದಂಡಾಧಿಪನ ಮುಖ್ಯ ಪ್ರಧಾನನಾದ ತಳವೃತ್ತಿಯ ಹೆಗ್ಗಡೆ ಮಲ್ಲದೇವನೇ ಈ ವಿಜಯಪುರದ ಶ್ರೀನರಸಿಂಹದೇವರಿಗೆ ಭೂಕಾಣಿಕೆಯನ್ನು ಕೊಟ್ಟನು. ಇದುವೆ ಈ ಶಾಸನದ ವಿಷಯವು]

"ಧನ್ಯವಾಗಲಿ ನಮ್ಮ ಹಿರಿಯ ಕನ್ನಡ ನಾಡು"

(ಜ. ಕ. ೧-೭. ಎಪ್ರೇಲ್ ೧೯೨೩)

# ಅಭಿನವ ಪಂಪ ಮಹಾಕವಿಯು ಬರೆದ ಬಿಜಾಪುರದ ಶಿಲಾಲಿಪಿ

## ಮುನ್ನುಡಿ

ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಇದುವರೆಗೂ ತೊಡಕಾಗಿ ಉಳಿತಿರುವ ವಾದ ಗ್ರಸ್ತ ವಿಷಯಗಳಲ್ಲಿ ಅಭಿನವಪಂಪ ನಾಗಚಂದ್ರನ ವಾಸಸ್ಥಳವೂ ಒಂದು. ಪಂಡಿತ ರಲ್ಲಾದರೋ ಭಿನ್ನಾಭಿಪ್ರಾಯ; ಕವಿಯೋ ತನ್ನ ಮಲ್ಲಿನಾಥ ಪುರಾಣದಲ್ಲಿ ಧಾರಾಳ ವಾಗಿ ಹೇಳಿಬಿಡುತ್ತಾನೆ, ಇದೊಂದು ಮೋಜು. ಒಂದೊಂದು ನಿಟ್ಟಿನ ಪಂಡಿತರೂ ಕವಿಯ ಕೂಗನ್ನು ಕಿವಿಯಲ್ಲಿ ಕೂಡ ಹಾಕಿಕೊಳ್ಳದೆ ಅವನನ್ನು ತಮ್ಮ ನಾಡಿಗೆ ಕಾಲು ಕಟ್ಟಿ ಎಳೆಯುತ್ತಿದ್ದಾರೆ. ಇದೇನೋ ಅವರವರ ಕರುಳಲ್ಲಿ ಗಟ್ಟಿಗೊಂಡ ಗುಣ ಪೂಜೆಯ ಮಹಿಮೆಯಾದರೂ ಸತ್ಯವನ್ನು ಮುಚ್ಚಿ ಮರೆಮಾಡಲಿಕ್ಕಿರುವದರಿಂದ ತ್ಯಾಜ್ಯ. ಕೊಡಗಿನವರು ತಮ್ಮವನೆಂದು ಹೇಳಿಕೊಳ್ಳುತ್ತಾರೆ. ಮಂಗಳೂರವರು ತಮ್ಮವನೆಂದು ಹೇಳಿಕೊಳ್ಳುತ್ತಾರೆ. ಆದರೆ ಕವಿಯು ತಾನೆ ವಿಜಯಪುರದವನೆಂದು ಕೂಗಿಕೊಂಡಿದ್ದಾನೆ. ಮಲ್ಲಿನಾಥ ಪುರಾಣವನ್ನು ಬಿಟ್ಟು ಪ್ರಮಾಣವೇನಾದರೂ ಉಂಟೇ ಎಂದರೆ, ಅದು ತಾನೆ ವಿಜಾಪುರದ ಮ್ಯುಜಿಯಮಿನಲ್ಲಿ ನೆಟ್ಟನೆ ನಿಂತು ಕೊಂಡ ಶಿಲಾಲಿಪಿ. ಪಂಪನ ಹೆಸರೂ ಕೂಡ ಸಿಕ್ಕದ ಈ ಲಿಪಿಯನ್ನು ಅವನೇ ಬರೆದನೆಂದು ಹೇಳುವದು ತಾನೇ ಹೇಗೆಂದು ಕೇಳಿದರೆ, ಹೀಗೆ ಹೇಳಬಹುದು—

ಪಂಪರಾಮಾಯಣದಲ್ಲಿ ಈ ಲಿಪಿಯೊಳಗಿನ ಪದ್ಯಗಳೂ ಪದ್ಯಾಂಶಗಳೂ ಸಿಕ್ಕುತ್ತವೆ—

'ಪಿರಿದಾಯುಶದಿನಿನ್ನೆಗಂ ತಳೆದ ಧಾತ್ರೀಭಾರಮಂ ವಿಕ್ರಮಾ ।
ಭರಣಂಗೊಪ್ಪಿಸಿ ಬೇಳ್ಪುದುಂ ಪಡೆದುವೆಂತಾನುಂ ದಿಶಾದಂತಿ ದಿ ॥
ಕ್ಕರಿಣೀ ಪೇಚಕಚುಂಬನೈಕ ಸುಖಮಂ ಶೇಷೋರಗಂ ಭೋಗಿನೀ ।
ಪರಿರಂಭೋತ್ಸವಮಂ ಪುರಾಣಕಮಠಂ ನಿದ್ರಾಂಗನಾಸಂಗಮಂ ॥

ಇದು ಲಿಪಿಯಲ್ಲಿ ೨ನೆಯ ಪದ್ಯ, ಇದಕ್ಕೆ ಸರಿಯಾದ ಮುಂದಿನ ಪದ್ಯವು ಪಂಪರಾಮಾಯಣದಲ್ಲಿದೆ. (ಷಷ್ಠಾಶ್ವಾಸ–೮೪)—

ಧರೆಯಂ ದ್ವಾದಶ ಚಕ್ರವರ್ತಿಗಳಿಗಿತ್ತಲ್ ದೇವ ನಿಮ್ಮ ಭುಜಾ ।
ಪರಿಘಕ್ಕೊಪ್ಪಿಸಿ ಬೇಳ್ಪುದಂ ಪಡೆದುಪೆತ್ತಾನುಂ ದಿಶಾದಂತಿ ದಿ ॥
ಕ್ಕರಿಣೀ ಪೇಚಕಚುಂಬನೈಕ ಸುಖಮಂ ಶೇಷೋರಗಂ ಭೋಗಿನೀ ।
ಪರಿರಂಭೋತ್ಸವಮಂ ಪುರಾಣಕಮಠಂ ನಿದ್ರಾಂಗನಾಸಂಗಮಂ ॥

ಮಂತ್ತು

ಆ ಕ್ಷೋಣೀಧರ ವಧುವುಂ ।
ದಕ್ಷಿಣ ದಿಗ್ಮುಖದೊಳೆಸೆವ ಶಸಿಖಂಡದವೋ ॥
ಲೀಕ್ಷಣ ಸುಖಮಯಂಮಿರ್ಪುದಂ ।
ದಕ್ಷಿಣ ಭರತತ್ರಿಖಂಡದಾರ್ಯ ಖಂಡಂ ॥

ಇದು ಲಿಪಿಯಲ್ಲಿ ೨೦ನೆಯ ಪದ್ಯ, ಇದಕ್ಕೆ ಸರಿಯಾದ ಮುಂದಿನ ಪದ್ಯವು ಪಂಪರಾಮಾಯಣದಲ್ಲಿದೆ. (ಪ್ರಥಮಾಶ್ವಾಸ-೪೫)-

ಆ ಕ್ಷೋಣೀಧರ ವಲ್ಲಭ ।
ದಕ್ಷಿಣ ದಿಙ್ಮುಖದೊಳೆಸೆವ ಶಶಿಖಂಡದವೋ ॥
ಲೀಕ್ಷಣ ಸುಖಮಯಮಿರ್ಪುದು ।
ದಕ್ಷಿಣ ಭರತತ್ರಿಖಂಡದಾರ್ಯ ಖಂಡಂ ॥

ಅಲ್ಲದೆ—

ಶ್ರೀಮಚ್ಚುಳುಕ್ಯ ವಂಶಲ ।
ಲಾಮಂ ಚತುರುದಧಿ ಮೇಖಳಾಳಂಕೃತ ಧಾ ॥
ತ್ರೀ ಮಂಡಲಮಂ ವಿಕ್ರಮ ।
ಧಾಮಂ ನಿಜಭುಜ ಕೃಪಣದಿಂ ರಕ್ಷಿಸಿದಂ ॥

ಲಿಪಿಯಲ್ಲಿದು ಪ್ರಥಮ ಪದ್ಯ, ಇದರ 'ಚತುರುದಧಿ' ಇತ್ಯಾದಿ ಅಂಶವು ಪಂಪರಾಮಾಯಣದ ಮುಂದಣ ಎರಡು ಪದ್ಯಗಳಲ್ಲಿ ಕಾಣುತ್ತದೆ.

ಚತುರುದಧಿ ಮೇಖಲಾಲಂ ।
ಕೃತ ವಸುಧಾದೇವಿಗಜ್ಜಗಾವಿನವರ್ ದಿ ॥
ಕ್ಪತಿಗಳೆನೆ ಸಾರ್ವಭೌಮೋ ।
ನ್ನತಿಯಂ ತಳೆದಂ ಸುಕೌಶಲಂ ಕ್ಷಿತಿನಾಥಂ ॥ (ದ್ವಿತೀಯಾಶ್ವಾಸ-೩೯)

ಚತುರುದಧಿ ಮೇಖಲಾಲಂ ।
ಕೃತ ವಸುಧೆಯನಾಳ್ದು ಪಡೆದು ಸುತರಿನ್ನರನಾ ॥
ಜಿತಶತ್ರು ವಿಜಯಸಾಗರ ।
ರತರ್ಕ್ಯ ಭುಜವೀರ್ಯರರಸುಗೆಯ್ಯುತ್ತಿರ್ದರ್॥ (ದಶಮಾಶ್ವಾಸ-೭೭)

ಇಷ್ಟಕ್ಕೂ ಈ ಲಿಪಿ ಪಂಪಕೃತವೆಂದೊಪ್ಪದೆ– "ಶ್ರವಣಬೆಳ್ಗೊಳದ ಎಷ್ಟೋ ಲಿಪಿಗಳಲ್ಲಿ ಪಂಪರಾಮಾಯಣದ ಪದ್ಯಗಳು ಸಿಕ್ಕುವದರಿಂದ ಪಂಪನು ಅಲ್ಲಿಯವ ನಾಗಿರಲಾರನೇಕೆ?" ಎಂದು ಯಾರಾದರೂ ಕೇಳುವರಾದರೆ ನಾನು ಹೀಗೆ ಹೇಳ ಬಲ್ಲೆನು–

ಪಂಪನ ಜೀವಮಾನದಲ್ಲೆಲ್ಲಾ ನಡೆದುಂದನೇನೋ ನಾವು ತಿಳಿಯಲುಂ ಆರೆವು. ಅವನುಂ ಯಾವ ಯಾವ ಕಾರಣದಿಂದ ಎಲ್ಲೆಲ್ಲಿ ಯಾವ ಯಾವ ಕಾಲಕ್ಕೆ ವಾಸಮಾಡಿ ಕೊಂಡಿದ್ದನೆಂಬುದನ್ನು ತಿಳಿಸುವ ಆಧಾರಗಳಿಲ್ಲ. ೧೮೩೮ ರಲ್ಲಿದ್ದ ದೇವಚಂದ್ರನುಂ ತನ್ನ ರಾಜಾವಳಿ ಕಥೆಯಲ್ಲಿ 'ದೋರರಾಯನಾಸ್ಥಾನದ ಕನ್ನಡ ಸಂಸ್ಕೃತ ಮಹಾಕವಿ ಗಧಿಪಂ ಪಂಪಕವಿ'ಯೆಂದುಂ ಯಾವ ಆಧಾರದಿಂದ ಹೇಳಿದನೋ ? ಈ ದೋರ ರಾಯನಾದರೋ ೧೧೦೦ ರಿಂದ ೧೧೦೬ ರ ವರೆಗಾಳಿದ ಬಲ್ಲಾಳನಾಗಿರಬೇಕೆಂದುಂ ಕವಿಚರಿತ್ರಕಾರರ ಊಹೆ. ಪ್ರಸ್ತುತ ಲಿಪಿಯಾದರೋ ೧೦೭೪ (೯೯೬ನೆಯ ಶಾ. ಶಕ)ರಲ್ಲಿ ಬರೆದುದು. ಈ ಕಾಲದಿಂದ ಬಲ್ಲಾಳನ ಆಸ್ಥಾನಕ್ಕೆ ಸೇರುವವರೆಗೆ ೨೬ ವರ್ಷಗಳನ್ನು ಎಲ್ಲಿ ಕಳೆದನೋ (ಈ ಲಿಪಿಯುಂ ಏತತ್ಕೃತವಲ್ಲವೆಂದರೂ ಪಂಪರಾಮಾ ಯಣವು ಇದಕ್ಕೆ ಮೊದಲೇ ರಚಿತವಾಗಿರಲಿಕ್ಕೆ ಸಾಕೆಂದು ಗ್ರಹಿತವಾಗಿಟ್ಟುಕೊಂಡುಂ ೨೬ ವರ್ಷವೆಂದು ಹೇಳಿರುವೆನು.) ದೋರರಾಯನ ಬಳಿಕ ಯಾರ ಆಸ್ಥಾನವನ್ನು ಸೇರಿದನೋ ?

"ನಿಜ ವಿಭವೋದಯಂ ಸಫಲಮಾಯ್ತೆನೆ ಮಲ್ಲಿಜಿನೇಂದ್ರ ಗೇಹಮಂ
ವಿಜಯಪುರಕ್ಕಲಂಕರಣಮಾಗಿರೆ ಮಾಡಿಸಿ, ತಚ್ಚರಿತ್ರಮಂ

(ಮಲ್ಲಿನಾಥ ಪುರಾಣವನ್ನು)....... ಪೇಳಿ" ಕೃತಕೃತ್ಯನಾದುದುಂ ಎಂದೊ ? ದೋರನಲ್ಲಿದ್ದಾಗ ಇದೆಲ್ಲಾ ಆಯ್ತೊ ? ಹಾಗಿದ್ದುದಾದರೆ ದ್ವಾರಸಮುದ್ರದಲ್ಲಿಯೇ ಯಾಕೆ ಕಟ್ಟಿಸಲಿಲ್ಲ ? ವಿಜಯಪುರದಲ್ಲಿಯೇ ಕಟ್ಟಿಸಲಿಕ್ಕೇನಾದರೂ ಕಾರಣವಿರ ಲಾರದೆ ? ದೋರನ ತರುವಾಯದಲ್ಲಿ ಇವನು ಜೈನಕ್ಷೇತ್ರದಲ್ಲೇನಾದರೂ ದಿವ್ಯ ಜೀವನ ಲಾಭಕ್ಕಾಗಿ ವಾಸವಾಗಿರಲಾರನೆ ? ಶ್ರವಣಬೆಳ್ಗೊಳದಂಥ ಪುಣ್ಯಕ್ಷೇತ್ರವು ಇವನನ್ನು ತನ್ನೆಡೆಗೆ ಎಂದೂ ಸೆಳೆಯದೆ ಇರಬಹುದೆ ? ವಿಜಯಪುರದ ಸಂಬಂಧ ವಿವನಿಗಿರದಿದ್ದರೆ ಮಲ್ಲಿನಾಥ ಜಿನಾಲಯವನ್ನು ಶ್ರವಣಬೆಳ್ಗೊಳದಲ್ಲಾದರೂ ಕಟ್ಟಿಸ ಬಹುದಾಗಿದ್ದಿತು. ಹೀಗೇಕೆ ಮಾಡಲಿಲ್ಲವೋ ? ಇವನ ಪದ್ಯಗಳನ್ನುಳ್ಳ ಬೆಳ್ಗೊಳದ ಲಿಪಿಗಳೆಲ್ಲಾ ದೋರನ ಕಾಲದ ತರುವಾಯದಲ್ಲಿ ಬರೆಯಲ್ಪಟ್ಟಿಲ್ಲವೆ ? ಪ್ರಸ್ತುತ ಲಿಪಿಯಲ್ಲಿ ರಾಮಾಯಣದ ಪದ್ಯಗಳೂ ಪದ್ಯಾಂಶಗಳೂ ಸಿಕ್ಕುವಂತೆ ಮಲ್ಲಿನಾಥ ಪುರಾಣದ ಅಂಶಗಳು ಸಿಕ್ಕದಿರುವದರಿಂದ ಈ ಪುರಾಣವು ಲಿಪಿಕಾಲದ (೧೦೭೪) ಅನಂತರದಲ್ಲಿ ಬರೆಯಲ್ಪಟ್ಟಿರಬೇಕೆಂಬ ಊಹೆಗೆ ಅವಕಾಶವಿಲ್ಲವೆ ? ಪಂಪನು ಮಲ್ಲಿ ನಾಥಜಿನಾಲಯವನ್ನು ಕಟ್ಟಿದ 'ವಿಜಯಪುರ'ವು ಈಗಿನ ಬಿಜಾಪುರವೇ ಆಗಿರ ಲಾರದೆ ? ಇಲ್ಲವಾದರೆ, ಯಾವುದೋ ಒಂದು ಅಜ್ಞಾತ ವಿಜಯಪುರದಲ್ಲಿದ್ದವನ

ಕಾವ್ಯವು (ಪಂಪರಾಮಾಯಣವು) ಇಷ್ಟು ಬೇಗನೆ ಹುಟ್ಟುಹುಟ್ಟುವದರೊಳಗಾಗಿಯೇ ಎಷ್ಟು ದೂರದಲ್ಲಿಯೋ ಇರುವ ಬಿಜಾಪುರದವರೆಗೂ ಪ್ರಚಾರವಾಗಿರುವದು ಸಂಭವವೆ ? ಅಷ್ಟೊಂದು ಪ್ರಚಾರದಲ್ಲಿದ್ದರೆ ಲಿಪಿಯಲ್ಲಿ ಶೈಲಿಸಾಮ್ಯವೂ ಪದಸಾದೃಶ್ಯವೂ ಒಡಮೂಡುವದು ಶಕ್ಯವೇ ? ಅಲ್ಲದೆ—

"ಶರಧಿ–ಸರೋವರವುನಳಂ ।
ಕರಿಸಿದ ಧರಣೀ ಸರೋಜ ಕರ್ಣಿಕೆಯೆಂಬಂ ॥
ಶಿರೆ ಕಪಿಳ ಕಿರಣದಂತಂ
ಬರಮಂ ಪಜ್ವಳಿಸಿದತ್ತು ಮೇರು ನಗೇಂದ್ರಂ ॥ ೧೯ ॥

ಈ ಲಿಪಿ ಪದ್ಯವು ಕವಿಕುಂಜರ–ನೇಮಿಚಂದ್ರನ (ಕ್ರಿ.ಶ. ೧೧೭೦) ಅರ್ಧನೇಮಿ ಪುರಾಣದ ದ್ವಿತೀಯಾಶ್ವಾಸದಲ್ಲಿ ಅಚ್ಚಳಿಯದೆ ವಚನರೂಪವಾಗಿ ಬಂದಿದೆ. ಆದಂದರಿಂದ ನೇಮಿಚಂದ್ರನು ಈ ಕವಿತೆಯನ್ನು ನೋಡಿರಲಿಕ್ಕೆ ಸಾಕು, ಎಲ್ಲಿ ನೋಡಿದನು ? ಲಿಪಿಯಲ್ಲೆ ? ಲಿಪಿಕಾರನ ಇನ್ನಾವುದೋ ಒಂದು ಕಾವ್ಯದಲ್ಲೆ ? ಲಿಪಿಯಲ್ಲಿ ನೋಡಿರುವ ಸಂಭವವು ಬಹಳ ಕಡಿಮೆ. ಹಾಗಾದರೆ ಈ ಲಿಪಿಕಾರನು ಬೇರೆ ಕಾವ್ಯಗಳನ್ನು ಬರೆದು ನೇಮಿಚಂದ್ರನಂಥ ಕವಿಕುಂಜರರನ್ನು ಕೂಡ ದಂಗುಬಡಿಸಿದ ಮಹಾಕವಿಯಾಗಿರಬೇಕಷ್ಟೆ. ಇಂಥವನು ಪಂಪನಲ್ಲದೆ ಇನ್ನಾವನೋ ಅಜ್ಞಾತ ಕವಿಯಾಗಿರಬಹುದೆ ? ಈ ಶಿಲಾಲಿಪಿಯಲ್ಲಿ ಮಹಾಕಾವ್ಯ ಕ್ರಮದಂತೆ ಸಮುದ್ರ, ಪರ್ವತ, ದೇಶ, ನಗರ ವರ್ಣನೆಗಳಿರುವದರಿಂದಲೂ ಇದು ಮಹಾಕವಿಕೃತವಾಗಿರಬೇಕೆಂಬ ಊಹೆಗೆ ಸ್ಥಳವಿದೆ.

ಇಷ್ಟೆಲ್ಲ ವಿವರಣೆಯಿಂದ ಅಭಿನವಪಂಪನೇ ಈ ಶಿಲಾಲಿಪಿಯ ಗದ್ಯಗಳನ್ನು ರಚಿಸಿದವನೆಂದು ಧಾರಾಳವಾಗಿ ಒಪ್ಪಬಹುದು.

ಶ್ರೀಮಾನ್ ರಾ. ನರಸಿಂಹಾಚಾರ್ಯರವರಿಗೆ ಅವಲೋಕನೆಗಾಗಿ ಈ ಲಿಪಿಯನ್ನು (ಮೇಲ್ಕಾಣಿಸಿದ ಮುನ್ನುಡಿಯೊಂದಿಗೆ) ಕಳುಹಿಸಲು ಅವರು ತಾವು ತಮ್ಮ ಕವಿಚರಿತ್ರೆಯ ಪರಿಶಿಷ್ಟಕ್ಕೆ ಸೇರಿಸಿಕೊಂಡು ಲಿಪಿಕರ್ತನ ವಿಷಯಕ್ಕೆ ಅದರಲ್ಲಿ ಬರೆದದ್ದೇನೆಂದರೆ–

"ಈ ಶಾಸನವು ಬಿಜಾಪುರದೊಡನೆ ಸಂಬಂಧವುಳ್ಳ ನಾಗಚಂದ್ರನಿಂದ ರಚಿತವಾಗಿರಬಹುದೋ ಎಂಬ ಊಹೆಗೆ ಅವಕಾಶವಿದೆ."*

## ಈ ಶಿಲಾಲಿಪಿಯ ಗುರುತು

ಈ ಲಿಪಿಯು ಸುಮಾರು ೬ ಗೇಣು ಉದ್ದ, ೪ ಗೇಣು ಅಗಲ; ೨ ಗೇಣು ಪಿಂಡ; ನುಣುಪಾದ ಕಲ್ಲು. ಮುತ್ತಿನಂಥ ಬರೆಹ, ಇದಿರು ಮಗ್ಗಲ ಬಲಗಡೆಯ

* ಕವಿಚರಿತ್ರೆ ಪ್ರಥಮ ಸಂಪುಟದ ನವೀನ ಮುದ್ರಣದ ಪ್ರಸ್ತಾವನೆಯ ೩೦ ನೆಯ ಪುಟದಲ್ಲಿ.

ಮೂಲೆಯೊಂದಿಷ್ಟು ಒಡೆದು ಹೋಗಿದೆ. ಬಿಜಾಪುರದಲ್ಲಿಯೇ ಒಂದೆಡೆ ಹಾಳು ನೆಲದಲ್ಲಿ ಸಿಕ್ಕಿತೆಂದು ಹೇಳುತ್ತಾರೆ. ಈಗ ಗೋಲಗುಮ್ಮಟದ ಮುಂದೆ ನಗಾರ ಖಾನೆಯ ಕೆಳಚೌಕದಲ್ಲಿ (ವಸ್ತುಸಂಗ್ರಹಾಲಯದಲ್ಲಿ) ಕಾದಿಡಲ್ಪಟ್ಟಿದೆ. ಮುಮ್ಮಗ್ಗಲಿಗೆ ೩೦ ಪದ್ಯಗಳು, ಹಿಮ್ಮಗ್ಗಲಿಗೆ ಉದ್ದಕ್ಕಾಗಿ ಕನ್ನಡ ವಚನ, ಸಂಸ್ಕೃತ ಗದ್ಯಪದ್ಯ ಹಾಗೂ ಕೊನೆಗೆ ೩ ಕನ್ನಡ ಪದ್ಯಗಳು, ಬಲಮಗ್ಗಲಿಗೊಂದು ಗದ್ಯಶಾಸನ. ಇದು ಯಾದವರಾಜನಾದ ಸಿಂಘಣನ ಕಾಲದಲ್ಲಿ (೧೨೪೪ನೆಯ ಇಸವಿಯಲ್ಲಿ) ಸರ್ವಾಧಿಕಾರಿ ಭಾಗುಬಾಯಿಗಳು ಬರಿಸಿದ್ದು. ಹಿಮ್ಮಗ್ಗಲಲ್ಲಿದ್ದುದೆಲ್ಲಾ "ಇಂಡಿಯನ್ ಅಂಟಿಕ್ವರಿ"ಯ ೧೦ನೇ ಭಾಗದ ೧೨೩ನೆಯ ನಂಬರಿನಲ್ಲಿ ಅಚ್ಚಾಗಿದೆ. ಈ ಲಿಪಿಯಲ್ಲಿ "ಎ" ಕಾರದ ಸ್ವರಚಿಹ್ನವು ಅಕ್ಷರದ ಹಿಂದೆಯೂ, ತಲೆಯ ಮೇಲೆಯೂ (ಎರಡೂ ವಿಧವಾಗಿ) ಬಳಿಸಲ್ಪಟ್ಟಿದೆ. ಈ ಲಿಪಿಯ ಮುಖ್ಯ ವಿಷಯವೆಲ್ಲ ಹಿಮ್ಮಗ್ಗಲಿಗೇ ಇದೆ. ಮುಮ್ಮಗ್ಗಲಲ್ಲಿರುವ ೩೦ ಪದ್ಯಗಳೆಲ್ಲಾ ಪ್ರಶಸ್ತಿಯೇ ಆಗಿರಬಹುದಾಗಿ ಕಾಣುತ್ತದೆ. ಎಲ್ಲಕ್ಕಿಂತ ಕೆಳಗಿನ ಸಾಲು ಚಕಳೆ ಹಾರಿ ಕೆಟ್ಟುಹೋಗಿರದಿದ್ದರೆ ಸರಿಯಾಗಿ ಗೊತ್ತಾಗಬಹುದಿತ್ತು.

## ಲಿಪಿಯ ಭಾಷೆ

ಭಾಷೆ ಬಿಗುವಿನ ಹಳಗನ್ನಡ, ಕೆತ್ತುವವನ ಕೈತಪ್ಪುಗಳೂ 'ಸ್ವತಂತ್ರ' ಪ್ರತ್ಯಯಗಳ ಸೇರುವೆಯೂ ಹೇರಳವಾಗಿವೆ. ಕವಿಯು ಹಳಗನ್ನಡದಲ್ಲಿ ರಚಿಸಿರುವನಾದರೂ ಕೆತ್ತುವವನು (ರೂವಾರಿಯು) ತಿಳಿಗನ್ನಡ (ಹೊಸಗನ್ನಡ) ದೀಕ್ಷೆಯನ್ನು ಮಾಡದೆ ಬಿಟ್ಟಿಲ್ಲ. ವ್ಯಂಜನಾಂತ ಶಬ್ದಗಳನ್ನು ಎಷ್ಟೋ ಕಡೆಗೆ ಸ್ವರಾಂತಗೊಳಿಸಿ ಆ ಕಾಲದ ಸರ್ವಸಾಮಾನ್ಯರಲ್ಲಿ ಪ್ರಚಲಿತವಾಗಿರುವ ಭಾಷಾಸ್ವರೂಪವನ್ನು ತಿಳುಹಿಸಿಕೊಟ್ಟುದರಿಂದ ರೂವಾರಿಯ ತಪ್ಪು ಕೂಡ ಒಪ್ಪಾಗಿದೆ. ಕವಿತೆಯೇ ಉದ್ದಾಮ ಕವಿಯ ವಾಣಿ. ಆದುದರಿಂದ ಒಂದಿಷ್ಟು ಬಿಗಿ, ಅದರೂ ಸರಸ.

## ಲಿಪಿ ವಿಷಯ

ಇದೀಗ ಸಂದೇಹಕ್ಕೆ ಒಂದು ಸ್ಥಳ. ಮುಮ್ಮಗ್ಗಲಿನ ಹಾಗೂ ಹಿಮ್ಮಗ್ಗಲಿನ ಬರೆಹವೆಲ್ಲಾ ಒಂದೇ ಶಾಸನವೇ ? ಅಥವಾ ಎರಡೂ ಸ್ವತಂತ್ರ ಶಾಸನಗಳೇ ? ಮುಂಮ್ಮಗ್ಗಲು "ನಮಸ್ತುಂಗ ಶಿರಶ್ಚುಂಬಿ" ಇತ್ಯಾದಿ ಸ್ತೋತ್ರದಿಂದ ಆರಂಭವಾಗಿದ್ದುದು ಸಹಜ. ಆದರೆ ಹಿಮ್ಮಗ್ಗಲೂ ಸ್ವತಂತ್ರ ಶಾಸನದ ಮಾದರಿಯಾಗಿ "ನಮಸ್ತುಂಗ"ವೆಂಬ ಶಿವಸ್ತೋತ್ರದಿಂದಲೇ ಆರಂಭವಾಗಿದ್ದುದೊಂದು ಆಲೋಚನೆಯ ವಿಷಯು. ಮುಮ್ಮಗ್ಗುಲಲ್ಲಾದರೋ ಚಾಲುಕ್ಯ ವಿಕ್ರಮಾಂಕನ ಶೌರ್ಯ ಸಾಹಸಾದಿಗಳ ವರ್ಣನೆ, ಅವನ ಮಗ ಮಲ್ಲಿಕಾರ್ಜುನ ಯುವರಾಜನ ಕೊಂಡಾಟ, ಬಳಿಕ ಭಾಯಲ ದಂಡನಾಯಕನ ವಂಶಾನುಕ್ರಮ ಮತ್ತು "ಜನ್ಮಭೂಮಿ"ಯ ವರ್ಣನೆ

ಮುಗಿದ ಬಳಿಕ "ಏ ಬಳಮೆನಿಸಿದ ಲಕ್ಷ್ಮಿಯು ? ನಪನೀಶಂ ಮಲ್ಲಿಕಾರ್ಜುನಂ ಕೂಡೆ" ಭಾಯಲದೇವನು ಧರ್ಮ ವ್ಯವಸಾಯದಲ್ಲಿ ಪ್ರವೃತ್ತನಾಗಿ ಕೀರ್ತಿಹೊಂದಿದನೆಂದು ಹೇಳಿ ಮುಮ್ಮಗ್ಗಲನ್ನು ಮುಗಿಸಿ ಆಗಿದೆ.

ಹಿಮ್ಮಗ್ಗಲಿಗೆ ಮತ್ತೆ ಹೊಸ ಶಾಸನದಂತೆ ಆರಂಭಿಸಿ ಚಾಲುಕ್ಯಭುವನೈಕಮಲ್ಲ (ವಿಕ್ರಮನ ಅಣ್ಣ ಸೋಮೇಶ್ವರ)ನನ್ನು ಗದ್ಯದಲ್ಲಿ ಕೊಂಡಾಡಿ, ತರ್ದವಾಡಿ ಸಾಸಿರ ನಾಡನ್ನು ಪ್ರತಿಪಾಲಿಸುವ ದಂಡನಾಯಕ ನಾಕಿಮಯ್ಯಗಳು ಬಿಂಕಾಪುರದ ಶ್ರೀಬಲ್ಲವರಸರಿಗೆ ಬಿನ್ನವಿಸಿ ವಿಜಯಪುರದ ಸಿದ್ಧೇಶ್ವರ ದೇವಾಲಯುವನ್ನು ಕಟ್ಟಿಸಿ ಅಲ್ಲಿಯ ಆಚಾರ್ಯರಾದ ಯೋಗೀಶ್ವರ ಪಂಡಿತರಿಗೆ ಕನ್ನವುರಿ ಪನ್ನೆರಡರಲ್ಲಿರುವ ಬಿಜ್ಜನ ಹಳ್ಳಿಯಲ್ಲಿ ಮುನ್ನೂರು ಮತ್ತರು ಭೂಮಿಯನ್ನು ಕೊಟ್ಟರೆಂದು ಹೇಳಿದ ಬಳಿಕ ಯಾವನೋ ಒಬ್ಬ "ತ್ರ್ಯಂಬಕ"ನನ್ನು ಕೊಂಡಾಡುವ ಮೂರು ಪದ್ಯಗಳಿವೆ.

ಹಿಮ್ಮಗ್ಗಲಲ್ಲಿ ಮಿತಿಯಿದೆ. ೯೯೬ನೆಯ ಶಕದ (ಕ್ರಿ. ಶ. ೧೦೭೪) ಆನಂದ ಸಂವತ್ಸರದ ಪೌಷ್ಯ ಶುದ್ಧ ಪಂಚಮಿ ಬೃಹಸ್ಪತಿವಾರವೆಂದು ಹೇಳಿದೆ. ಮುಮ್ಮಗ್ಗಲಿಗಿರುವದು ಇದರ ಸಮಕಾಲೀನವಾಗಿಯೋ ಮುಂಚಿನದಾಗಿಯೋ ಇರಬೇಕು. ಮುಂಚಿನದಾಗಿದ್ದುದಾದರೆ ವಿಕ್ರಮಾಂಕನ ಯಾವುದೋ ಒಂದು ವಿಜಯವನ್ನು ಕುರಿತು ಅವನ ಮಗ ಮಲ್ಲಿಕಾರ್ಜುನನು ಸೇನಾಪತಿಗೆ ಬಹುಮಾನ ಮಾಡಿದ ನೆನಪಿಗಾಗಿ ನೆಟ್ಟ ಕಲ್ಲಾಗಿರಬೇಕು. ಆದರೆ ಶಿರೋಭಾಗದಲ್ಲಿ ಕೆತ್ತಿದ ಗೊಂಬೆಗಳನ್ನು ನೋಡಿದರೆ ಹಾಗೆನಿಸುವಂತಿಲ್ಲ; ಇದೊಂದು ದಾನವೃತ್ತವಾಗಿರಬೇಕೆಂದೇ ಭಾವನೆಯಾಗುತ್ತದೆ.

ಎರಡೂ ಮಗ್ಗಲಿಗೂ ಒಂದೇ ಶಾಸನವಾದರೆ ಅಣ್ಣನಿಗಿಂತ ಮೊದಲು ತಮ್ಮನನ್ನೇಕೆ ಕೊಂಡಾಡಿದರೋ ? ಶೂರಧೀರನೆಂದೋ ? ಶಾಸನ ಕಾಲದಲ್ಲಿ ಇನ್ನೂ ವಿಕ್ರಮಾಂಕನು ಪಟ್ಟಾಧಿಕಾರಿಯಾಗಿರಲಿಲ್ಲ; ಮುಂದೆರಡು ವರ್ಷಕ್ಕೆ (೧೦೭೬ ಕ್ರಿ.ಶ.) ಮಾತ್ರ ವಿಕ್ರಮಾಂಕನೇ ಪಟ್ಟಾಧಿಕಾರಿಯಾಗಿ ಸ್ವತಂತ್ರ ಶಕವನ್ನು ಸ್ಥಾಪಿಸಿದ್ದುದು ಇತಿಹಾಸ ಪ್ರಸಿದ್ಧ.

ಇನ್ನೊಂದು ಸಂದೇಹವೆಂದರೆ— ವಿಕ್ರಮಾಂಕನಿಗೆ ಮಲ್ಲಿಕಾರ್ಜುನನೆಂಬ ಮಗನಿದ್ದನೋ ಎಂಬುದು. ಶ್ರೀ ನರಸಿಂಹಾಚಾರ್ಯರೂ ಹೀಗೆಯೇ ಒಂದು ಪತ್ರದಲ್ಲಿ— "ವಿಕ್ರಮನಿಗೆ ಮಲ್ಲಿಕಾರ್ಜುನನೆಂಬ ಮಗನಿದ್ದ ಬಗ್ಗೆ ಎಲ್ಲಿಯೂ ಬಂದಿಲ್ಲ. ಜಯಕರ್ಣನೆಂಬೊಬ್ಬ ಮಗನು ಮಾತ್ರ ಬಿಜಾಪುರದ ನಾಡಿಗೆ ಕೆಲದಿನಗಳ ಮಟ್ಟಿಗೆ ಮಾತ್ರ ಅಧಿಕಾರಿಯಾಗಿದ್ದು ೧೧೦೨ರಲ್ಲಿ ಮೃತನಾದಂತೆ ತಿಳಿಯುತ್ತದೆ." ಎಂದು ಬರೆದಿದ್ದಾರೆ. ವಿಕ್ರಮನಿಗೆ ಸೋಮೇಶ್ವರನೊಬ್ಬ ಜಯಕರ್ಣನೊಬ್ಬ ಹೀಗೆ ಇಬ್ಬರು ಮಕ್ಕಳೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಮಲ್ಲಿಕಾರ್ಜುನನ ಹೆಸರು ಮಾತ್ರ ಎಲ್ಲರಿಗೂ

ಹೊಸದು. ಆದರೆ "ಕರ್ನಾಟಕ ವರ್ಣನೆಯೂ ಇತಿಹಾಸವೂ" ಎಂಬ ಪುಸ್ತಕದ ೪೯ನೆಯ ಪುಟದಲ್ಲಿ ಶ್ರೀ ಮುಗದಾಳ ವೆಂಕಟರಾಯರು ಮಾತ್ರ ಹೀಗೆ ಹೇಳುತ್ತಾರೆ– "ಈತನಿಗೆ (ವಿಕ್ರಮನಿಗೆ) ಮೂವರು ಮಕ್ಕಳು. ಇವರಲ್ಲಿ ೨ನೆಯವನಾದ ಸೋಮೇಶ್ವರನು ಇವನ (ವಿಕ್ರಮನ) ಬಳಿಕ ಕಲ್ಯಾಣದಲ್ಲಿ ಪಟ್ಟವೇರಿದನು." ಈ ಮೂವರೂ ಯಾರ್‍ಯಾರೆಂದು ನಾವು ಅವರಿಗೆ ಮೂರು ಪತ್ರ ಬರೆದರೂ ಉತ್ತರವನ್ನೇ ಕಾಣದೆ ಹೋದೆವು !! ಆದರೂ ಇವರು ಹೇಳಿದ್ದು ಯಾವುದೋ ಒಂದು ಪ್ರಸಿದ್ಧವಾದ ಇಂಗ್ಲಿಷ ಗ್ರಂಥದ ಆಧಾರದಿಂದೆಂದು ಭಾವಿಸಿ ಪ್ರಮಾಣವಾಗಿ ಹಿಡಿಯಬಹುದು.

ಇವರೆಲ್ಲರನ್ನು ಬಿಟ್ಟರೂ ಕಲ್ಯಾಣಪುರದ ವಿಖ್ಯಾತ ವಿಕ್ರಮನಿಗೆ ಮಲ್ಲಿಕಾರ್ಜುನನೆಂಬ ಮಗನಿದ್ದುದಾಗಿಯೂ, ಅವನು ಯುವರಾಜನಿದ್ದುದಾಗಿಯೂ ಮುತ್ತಗಿಯ ಒಂದು ಶಾಸನದಲ್ಲಿ ಹೇಳಿದೆ. ಶಿವನ ಗುಡಿಯೊಳಗೆ ಮೂಡಲ ಗೋಡೆಯಲ್ಲಿ ನೆಟ್ಟಿರುವ ಶಿಲಾಲಿಪಿಯ ೭೭ ನೆಯ ಓಳಿಯಲ್ಲಿ—

"ಆತಂಗಂ ಆತನರಸಿ ಚಾಳುಕ್ಯ ಚಕ್ರವರ್ತಿಯ ಮಗಂ ಯುವರಾಜ ಮಲ್ಲಿಕಾರ್ಜುನ ದೇವನ ಮಗಳಂ ಶ್ರೀ ಮಹಾದೇವಿಗಂ ಬಿನ್ನಪಂಗೆಯ್ಯಲು—" ಎಂದು ಸ್ಪಷ್ಟವಾದ ಉಲ್ಲೇಖವಿದೆ.

ಈ ಮೂವರಲ್ಲಿ ಕೊನೆಯವನಾಗಿರಬಹುದಾದ ಜಯಕರ್ಣನಾದರೋ ತಂದೆಯಿರುವಾಗಲೇ ಸತ್ತು ಹೋದನು. ವಿಕ್ರಮನ ಆಳಿಕೆಯಾದರೋ ಈ ಲಿಪಿಕಾಲದ ಅನಂತರ (೧೧೨೬ರ ವರೆಗೆ) ೫೨ ವರುಷ, ಇಷ್ಟು ದೀರ್ಘಕಾಲದಲ್ಲಿ ಹಿರಿಯಮಗನಾದ ಯುವರಾಜ ಮಲ್ಲಿಕಾರ್ಜುನನೂ ಸತ್ತಿರಬಹುದು. ಅಂತೆಯೆ ನಡುವಿನ ಮಗನು ತಂದೆಯ ಅನಂತರದಲ್ಲಿ ಪಟ್ಟಕ್ಕೆ ಬರಬೇಕಾಯಿತು.

"ಎಪಿಗ್ರಾಫಿಯಾ ಕರ್ನಾಟಕ"ದ ೮ ನೆಯ ಪುಸ್ತಕದ ೨ ನೆಯ ಸಂಚಿಕೆಯ ಕನ್ನಡ ಪ್ರತಿಯ ೨೦೧ ನೆಯ ಪುಟದಲ್ಲಿ ಸೊರಬ ತಾಲೂಕಿನ ೪೪೦ನೆಯ ಲಿಪಿಯಲ್ಲಿ—

೧ ..................ಂಬಿತ ಚಂದ್ರಚಾಮರ ಚಾ
೨ ..................ರಂಭ ಮೂಲಸ್ತಂಭಾಯ
೩ ..................ಸ್ತ ಪ್ರಶಸ್ತಿ ಸಹಿತಂ ಶ್ರೀಪೃಥ್ವೀ
೪ ..................ಧಿ ರಾಜಂ ಸತ್ಯಾಶ್ರಯ ಕುಳತಿ
೫ ..................ಮಲ್ಲಿಕಾರ್ಜುನ ದೇವ ವರುಷದ
೬ ೪೨ ನೆಯ ಕೀ........................ ......

(ಅಪೂರ್ಣ)

ಸತ್ಯಾಶ್ರಯ ಕುಲ (ಚಾಳುಕ್ಯವಂಶ) ತಿಲಕನಾದೊಬ್ಬ ಮಲ್ಲಿಕಾರ್ಜುನನ ಹೆಸರೇನೋ ಹೇಳಿದೆ. ಆದರೆ ಇವನು ಯಾವ ಮಲ್ಲಿಕಾರ್ಜುನನೋ ತಿಳಿಯದು. ಮೇಲ್ಕಂಡ ಲಿಪಿಯಲ್ಲಿ ಕಾಣುವ ಕೀ (ಲಕ) ಸಂವತ್ಸರವಾದರೊ ಈಸವೀಯ ೧೧೬೮ ರಲ್ಲಿದ್ದಿತು.

ಇಪ್ಪು ಪೊತ್ತಿಗೆ ೯೨ ವರುಷ ಅರಸೊತ್ತಿಗೆ ಮಾಡಿರುವುದು (ವಿಕ್ರಮನ ಮಗನ ಪಟ್ಟಿಗೆ) ಅಶಕ್ಯ. ಏನೋ ಚಾಲುಕ್ಯರಲ್ಲಿ ಮಲ್ಲಿಕಾರ್ಜುನನೆಂಬ ಹೆಸರಿನವರಾದರೆಂದು ಮಾತ್ರ ಈ ಲಿಪಿಯಿಂದ ಭಾವಿಸಬಹುದು. ಹೀಗೆಯೇ ಪ್ರಸ್ತುತ ಪಂಪನ ಲಿಪಿಯಲ್ಲೂ ಮಲ್ಲಿಕಾರ್ಜುನನ ಹೆಸರು ಉಕ್ತವಾಗಿದೆ.

ಇನ್ನೊಂದು ಸಂದೇಹ— "ಮತ್ತರೆಂದರೆ" ??? ಒಂದಿನ ಕಾಲದ ಶಿಲಾಲಿಪಿಗಳಲ್ಲೂ ಧಾತುಲಿಪಿಗಳಲ್ಲೂ ತಪ್ಪದೆ ಬರುವ ಶಬ್ದವೆಂದರೆ 'ಮತ್ತರು'. ಇದು ಭೂಮಿಯ ಅಳತೆಯನ್ನು ಹೇಳುವದರಲ್ಲಿ ಬರುತ್ತದೆ. ನಿಘಂಟುಕಾರರಾದರೋ "ಮತ್ತರೆನಲ್ ನೆಲದ ಪವಣ್" ಎಂದು ಹೇಳಿ ಹಾರಿಹೋಗುತ್ತಾರೆ. ಈ ವಿಷಯವನ್ನು ಜಯಕರ್ನಾಟಕದ ಪ್ರಥಮ ಸಂಪುಟದ ೪೯೩ನೆಯ ಪುಟದಲ್ಲಿ ಅರಿಕೆಪಡಿಸಿದ್ದೇನಾದರೂ ಮುಂದೆ ಶ್ರೀತಾತರೂ ದ್ವಿತೀಯ ಸಂಪುಟದ ೬೫೨ನೆಯ ಪುಟದ ಅಡಿನೋಟದಲ್ಲಿ "ಮತ್ತರೆಂದರೆ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ"ಯೆಂದಿಷ್ಟೇ ಹೇಳಿಬಿಟ್ಟರು.

ಮುಂದೆ ಕೆಲವು ದಿನಗಳಲ್ಲಿ ನನ್ನ ಕೈಗೆ ಬಿದ್ದ (ಇತಿಹಾಸ ಮಂಡಲದವರ) ನರಗುಂದದ ಶಿಲಾಲಿಪಿಯ ಒತ್ತಡ(ಅಚ್ಚೊತ್ತು)ದಲ್ಲಿ ಈ ಬಗೆಗೆ ಒಂದು ಪದ್ಯವು ಸಿಕ್ಕಿತು. ಅದು—

'ಪಡೆದಾ ಗೊಣ್ಣೆಯಗೆಯ್ಯ ಸಂಸ್ಥಳದ ಮತ್ತರ್ಪತ್ತರೊಳ್ ಬಿಟ್ಟಪಂ । ಬಡವರ್ಗನ್ನವನಿಕ್ಕಲಯ್ದು ವಿಶಿಖಾನೀಕಂಗಳಂ ಭಕ್ತಿಯಿಂ । ತೊಡರ್ದಾ ಶಂಕರ ದೇವತಾರ್ಚಗಮಯ್ದುಂ ಪುತ್ತರಂ ಹೇಮರೊಳ್ । ಮೃಡರೊಳ್ ಕುಪ್ಪಟಿಯೇಚಿಸೆಟ್ಟಿಯಂದರಿಂದಾತಂಗೆ ಭದ್ರಂ ಜಯಂ ॥ ೨೪ ॥

ಕುಪ್ಪಟಿಯೇಚಿಸೆಟ್ಟಿಯೆಂಬವನು ಬಡವರಿಗೆ ಅನ್ನವನ್ನು ನೀಡುವದಕ್ಕೆಂದು ೫ ವಿಶಿಖಗಳನ್ನು ಶಂಕರದೇವರ ಪೂಜೆಗೆಂದು ೫ ಮತ್ತರುಗಳನ್ನು ಹೀಗೆ ೧೦ ಮತ್ತರು ಭೂಮಿಯನ್ನು ಕೊಟ್ಟನಂತೆ. ಈ ಪದ್ಯದಲ್ಲಿ ಮತ್ತರಿಗೆ ಪರ್ಯಾಯ ಶಬ್ದವೊಂದುಂಟು; ಅದು ವಿಶಿಖ. ಈ ಶಬ್ದಕ್ಕಾದರೂ ಸಂಸ್ಕೃತದಲ್ಲಿ ಬಾಣವೆಂದರ್ಥ, ಒಂದು ಸಲ ಬಿಲ್ಲಿಗೆ ಬಾಣ ಹೂಡಿ ಬಿಟ್ಟರೆ ಅದು ಕ್ರಮಿಸುವಷ್ಟು ನೆಲಕ್ಕೊಂದು ಮತ್ತರೆಂದು ಭಾವಿಸಿದೆನು. ಆದರೂ ಸರಿಯಾದ ಅಳತೆ ಸಿಕ್ಕಲಿಲ್ಲ.

ಮೊನ್ನೆ ಮೊನ್ನೆ ಶ್ರೀ ಬಸವಣ್ಣನವರ ವಚನ ಸಂಗ್ರಹದಲ್ಲಿ ಒಂದು ವಚನವು ಕಣ್ಣಿಗೆ ಬಿತ್ತು. ಅದು— "ಹತ್ತುಮತ್ತರು ಭೂಮಿ, ಬತ್ತದ ಹಯನ, ನಂದಾದೀವಿಗೆಯ ನಡಸಿಹನೆಂಬವರ ಮುಖವ ನೋಡಲಾಗದು, (ಇಂಥವರ) ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣನೆ ಕೂಡಲಸಂಗಮದೇವಾ" ಅಚ್ಚಿನ ಪ್ರತಿಯಲ್ಲಿದು ಭಕ್ತಸ್ಥಳದ ೨೨೫ನೆಯ ವಚನ. ಇದಕ್ಕೆ ಪ್ರಾಚೀನ ಟೀಕೆಯೇನಿದೆಯೋ

ಎಂದು ಕುತೂಹಲದಿಂದ ಕಷ್ಟಬಟ್ಟು ನನ್ನೊಬ್ಬ ಗೆಳೆಯನಿಂದ ಅಂಥ ಟೀಕೆಯನ್ನು ದೊರಕಿಸಿದೆನು. ಅದರಲ್ಲಿ "ಮತ್ತರೆಂದರೆ ನೂರುಮಾರು ಭೂಮಿ" ಎಂದು ಹೇಳಿದ್ದಿತು. ಮತ್ತರೆಂದರೆ ೧೦೦ ಮಾರಿನ ಚೌರಸಾಕೃತಿ, ಎಂದರೆ ಇನ್ನೂರು ಯಾರ್ಡ ಚೌರಸು. ಆದುದರಿಂದ ($\frac{೨೦೦\times೨೦೦}{೪೮೪೦} = \frac{೪೦೦೦೦}{೪೮೪೦} = ೮\frac{೮}{೧೨೧}$) ಒಂದು ಮತ್ತರೆಂದರೆ ಸುಮಾರು ಒಂಬತ್ತು ಎಕರೆ. ಈ ವಿಷಯದಲ್ಲಿ ಇತಿಹಾಸಜ್ಞರು ಗಮನ ಕೊಡುವರೆಂದು ನಂಬುಗೆ.

## ಲಿಪಿಯಲ್ಲಿ ಹೇಳಿದ ಸ್ಥಳಗಳು

**ತರ್ದವಾಡಿ ಸಾಸಿರ :** ಊರು, ಪಟ್ಟಣ ಮುಂತಾದವುಗಳ ಮುಂದೆ ಸೇರಿಸುವ ಸಾಸಿರ ಮುಂತಾದ ಅಂಕೆಯೇನು ? ಉತ್ಪನ್ನ ಸೂಚಕವಾದ ವರಹಾದಿಗಳ ಸಂಖ್ಯೆಯೇ ? ಅಥವಾ ಆಯಾ ನಾಡಿನ ಊರುಗಳ ಸಂಖ್ಯೆಯೇ ? ಇಲ್ಲಿ ತರ್ದವಾಡಿಯ ಮುಂದೆ ಸೇರಿಸಿದ ಸಾಸಿರ ಸಂಖ್ಯೆಯು ಮಾತ್ರ ಊರುಗಳನ್ನೇ ಸೂಚಿಸುವುದು ನಿಸ್ಸಂದೇಹ. ಯಾಕೆಂದರೆ ಮುತ್ತಿಗೆಯ ಮಲ್ಲಿಕಾರ್ಜುನ ದೇವರ ಗುಡಿಯ ಪಡುವಲ ಮಗ್ಗುಲಲ್ಲಿ ಬಿದ್ದಿರುವದೊಂದು ದೊಡ್ಡ ಶಿಲಾಲಿಪಿಯಲ್ಲಿ—

> ಸಲೆ ಧನ ಧಾನ್ಯ ಜನಂಗಳಿ– ।
> ನಿಳೆಗೊಪ್ಪುವ ತರ್ದವಾಡಿ ನಾಡೊಳಗಣ ನೀ– ॥
> ಶ್ಚಲಿತ ಸಹಸ್ರಗ್ರಾಮಂ ।
> ಗಳೊಳೆಲ್ಲ ಸುಸ್ಥಮಾಗಿ ಮುತ್ತಿಗೆಯೆಸೆಗುಂ ॥ ಶಾಸನದ ೧೬ನೆಯ ಪಂಗ್ತಿ

ಹೀಗೆ ಹೇಳಿರುವುದೇ ಸಾಕ್ಷಿ.

ತದ್ದೆವಾಡಿಯೆಂಬುದೊಂದು ಚಿಕ್ಕ ಹಳ್ಳಿಯು ಬಿಜಾಪುರ ಜಿಲ್ಲೆಯ ಬಡಗಣ ಮೇರೆಗೆ ಭೀಮಾ ತೀರದಲ್ಲಿದೆ. ಇಲ್ಲೀಗ ಯಾವ ಪೂರ್ವಚಿಹ್ನಗಳೂ ಇಲ್ಲ. ಇದು ಸಾವಿರ ಊರುಗಳ ಮುಖ್ಯಸ್ಥಳವಾಗಿದ್ದ ಬಗೆಗೆ ಬಹಳ ಶಿಲಾಲಿಪಿಗಳಲ್ಲಿ ಉಲ್ಲೇಖವುಂಟು. ಈ ತರ್ದವಾಡಿ ನಾಡೆಂಬುದು ತೆಂಕಲಿಗೆ ಕೃಷ್ಣೆಯವರೆಗೂ ಇದ್ದ ಹಾಗೆ ಆ ಕಡೆಯ ಲಿಪಿಗಳಿಂದ ಗೊತ್ತಾಗುತ್ತದೆ. "ಅಸ್ತಿ ಕಶ್ಚಿಜ್ಜನಪದಸ್ತರ್ದವಾಡೀತಿ ವಿಶ್ರುತಃ ಯದ್ಗ್ರಾಮಾ ಬಹಿರಂತರಶ್ಚ ನಾನಾರಾಮೋಪ ಶೋಭಿತಃ ॥" ಎಂದೊಂದು (ಸಾಲೊಟಗಿಯ) ಪ್ರಾಚೀನ ಲಿಪಿಯಲ್ಲಿ ಹೇಳಿದೆ. ಅದೇ ಊರ ಇನ್ನೊಂದು ಲಿಪಿಯಲ್ಲಿ—

> ಮೇರುವಿನ ತೆಂಗದೆಸೆಯೊಳ್ ।
> ಭಾರತ ಸುಕ್ಷೇತ್ರಮಲ್ಲಿ ಕುಂತಳ ವಿಷಯಂ ॥
> ಸಾರಂ ಕುಂತಳ ಭೂಮಿಯೊ
> ಳಾರಯ್ವೊಡೆ ತರ್ದವಾಡಿ ವಿಷಯಂ ಚೆಲುವಂ ॥

ಎಂದು ಬಣ್ಣಿಸಿ ಹೇಳಿದೆ. ಈ ತರ್ದವಾಡಿ ನಾಡಿಗೆ ಬಿಜಾಪುರವು ಎಂದಿನಿಂದ ರಾಜಧಾನಿಯಾಯಿತೋ ತಿಳಿಯದು. ಬಿಜಾಪುರದಲ್ಲಿ ಸಿಕ್ಕುವ ಎಲ್ಲಾ ಶಿಲಾಲಿಪಿಗಳಲ್ಲಿಯೂ "ಶ್ರೀಮದ್ರಾಜಧಾನಿ ವಿಜಯಪುರ"ವೆಂದೇ ಹೇಳಿದೆ. ಇದಿರಲಿ, ಪ್ರಸ್ತುತ ಪಂಪನ ಶಿಲಾಲಿಪಿಯಿಂದ ಇನ್ನೊಂದು ಮಾತು ಹೊರಪಡುವಂತಿದೆ. ಅದು—

**ಬಿಜ್ಜನಹಳ್ಳಿ** – ಬಿಜಾಪುರದ ಹಳೇ ಹೆಸರು ಬಿಜ್ಜನಹಳ್ಳಿಯೆಂದು ಬಹಳ ಜನರ ಅಭಿಪ್ರಾಯವಿದೆ. ಪಾಶ್ಚಾತ್ಯರಲ್ಲದೆ ನಮ್ಮವರೂ ಕೂಡ ಹೇಳುತ್ತಿದ್ದಾರೆ. ಕೆಳದಿನೃಪವಿಜಯ ಕಾವ್ಯದಲ್ಲಿ ಲಿಂಗಣ್ಣ ಕವಿಯು ಬಿಜಾಪುರ ದಂಡಿಗೆ "ಗಿಜಗನ ಹಳ್ಳಿಯ ಬಲ"ವೆನ್ನು ಕರೆದಿದ್ದಾನೆ. ಸಾಲೊಟಗಿಯ 'ಶಿವಯೋಗೀಶ್ವರ ಪುರಾಣ" ದಲ್ಲಿಯೂ ಕೂಡ—

ಇರಧೆ ಪೋದರು ದೇವನಲ್ಲಿಗೆ ।
ಧರೆಗಧಿಕ ಗೀಜಗನ ಹಳ್ಳಿಯ ।
ಲಿರುವ ಪಾಚ್ಚನ ಕಂಡು ಕರಮುಗಿದವರು ನಿಂದಿರಲು ॥

ಪ್ರಾಚೀನ ಪ್ರತಿ : ೧೬-೧೯

ಎಂದು ಹೇಳಿದೆ.

ಆದರೆ ಇದೀಗಿನ ಲಿಪಿಯಲ್ಲಿ ಬಿಜಾಪುರವೇ ಬಿಜ್ಜನಹಳ್ಳಿಯೆಂದು ಹೇಳದೆ ಅದೊಂದು ಬೇರೆ ಹಳ್ಳಿಯಾಗಿ ಹೇಳಿದೆ. "ರಾಜಧಾನಿ ವಿಜಯಾಪುರದ...ಯೋಗೇಶ್ವರ ಪಂಡಿತದೇವರ ... ಕಾಲಂ ಕರ್ಚಿ (= ತೊಳೆದು) ಕನ್ನವುರಿ ಪನ್ನೆರಡರ ಬಳಿಯಿರುವ ಬಿಜ್ಜನಹಳ್ಳಿಯಲ್ಲಿರುವ ಮತ್ತರ್ ೩೦೦ ಕೊಟ್ಟರು." ಇದನ್ನು ನೋಡಿದರೆ ಬಿಜಾಪುರವೇ ಬೇರೆ, ಬಿಜ್ಜನಹಳ್ಳಿಯೇ ಬೇರೆ. ಕನ್ನವುರಿಯೆಂಬುದು ಇದೀಗಿನ ಕನ್ನೂರ. ಇದು ಈಗ ೧೨ ಊರುಗಳ ಮುಖ್ಯಸ್ಥಳ. ಈಗ ಬಿಜಾಪುರ ತಾಲೂಕಿನಲ್ಲಿದೆ. ಇವರ ಬಳಿಯಿರುವ ಬಿಜ್ಜನಹಳ್ಳಿಯು ಈಗಿನ ಮಿಂಚನಾಳವಾಗಿರಬಹುದೋ ಏನೋ ಎಂಬ ಶಂಕೆಗೆ ಅವಕಾಶವಿದೆ. ಈ ಬಗೆಗೆ ಹೆಚ್ಚು ಶೋಧ ಮಾಡಿ ಮುಂದೆ ಅನುಕೂಲ ಸಮಯದಲ್ಲಿ ಬರೆಯಬೇಕೆಂಬ ಮನದ ಆಶೆ.

**ಅಂತರ್ವೇದಿ** - ಗಂಗಾಯಮುನೆಗಳ ನಡುವಿನ ಪ್ರವೇಶ, ಅಂತರ್ವೇದಿಯ ರಾಜರ ನಾಣ್ಯಗಳೂ ಕೂಡ ಉಪಲಬ್ಧವಿರುವವೆಂದು ಬೆಂಗಾಳೀ "ಪ್ರಾಚೀನ ಮುದ್ರಾ" ಎಂಬ ಪುಸ್ತಕದಲ್ಲಿ ಉಲ್ಲೇಖವಿದೆ.

**ವಾರಿಭಟ್ಟಗ್ರಾಮ** - ಇದು ಈಗಿನ ಸಂಯುಕ್ತ ಪ್ರಾಂತದಲ್ಲೇನಾದರೂ ಇರಬಹುದೇ ? ಗಂಗಾಯಮುನೆಗಳ ನಡುವೆ ಕಾಶಿಯಿಂದ ಈಶಾನ್ಯದಲ್ಲಿ "ಬಾರಗಾಂವ" ಎಂಬುದೊಂದು ಊರು ಮಾತ್ರವಿದೆ. ಆದರೆ ಕಾಶಿಯಿಂದ ಮೇಲ್ಗಡೆಗಿರುವ "ವರ್ಭಾಟ" ಎಂಬುದೇ. "ವಾರಿಭಟ್ಟ ಗ್ರಾಮ"ವಾಗಿರಬೇಕು. ಇದು "ಕರಣ ಗ್ರಾಮ"ವೆಂದು ಶಾಸನದ ೨೩ನೆಯ ಪದ್ಯದಲ್ಲಿ ಹೇಳಿದೆ. ಆ ಕಾಲದ ಪಂಚಪ್ರಧಾನರಿಗೆ

"ಪಂಚಕರಣಂ"ಗಳೆಂಬ ಹೆಸರಿದ್ದಿತು. ಶಾಸನದಲ್ಲಿ ನಿರ್ದಿಷ್ಟನಾದ "ಭಾಯಲದೇವ"ನ ವಂಶಜರಿಗೆ ಕರಣಿಕೆಗಾಗಿ ಉಂಬಳಿಯಾಗಿ ಈ ಊರು ಸಿಕ್ಕಿರಬೇಕಾಗಿ ಕಾಣುವದು.

ಉತ್ತರ ಹಿಂದುಸ್ತಾನಕ್ಕೂ ದಕ್ಷಿಣ ಹಿಂದುಸ್ತಾನಕ್ಕೂ ಬಹಳ ವಂಟ್ಟಿಗೆ ರಾಜಕೀಯ ಸಂಬಂಧವಿದ್ದುದಾಗಿ ಕಾಣುವದು. ಇಲ್ಲಿಯ ಎಷ್ಟೋ ಅಧಿಕಾರಿಗಳು ಉತ್ತರ ಹಿಂದುಸ್ತಾನದಿಂದ ಬಂದವರೂ ಆಗಿರುತ್ತಿದ್ದರು. "ಭಾಯಲದೇವ"ನೂ ಇಂಥವರಲ್ಲಿ ಒಬ್ಬನು.

## ಅಭಿನವ ಪಂಪ ಮಹಾಕವಿಯು ಬರೆದ ವಿಜಾಪುರದ ಶಿಲಾಲಿಪಿ

## ಮೂಲಶಾಸನ

ಶ್ರೀ॥ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ।
ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭುವೇ ॥*
ಶ್ರೀಮಂಚ್ಚಳುಕ್ಯ ವಂಶ ಲ ।
ಲಾಮಮಂ ಚತುರುದಧಿ ಮೇಖಳಾಳಂಕೃತ ಧಾ ॥
ತ್ರೀಮಂಡಲಮಂ ವಿಕ್ರಮ ।
ಧಾಮ ನಿಜಭುಜ ಕೃಪಾಣದಿಂ ರಕ್ಷಿಸಿದಂ ॥ ೧ ॥

ಪಿರಿದಾಯಸದಿನಿನ್ನೆಗಂ ತಳೆದ ಧಾತ್ರೀಭಾರಮಂ ವಿಕ್ರಮಾ ।
ಭರಣಂಗೊಪ್ಪಿಸಿ ಬೇಳ್ಪುದಂ ಪಡೆದುವೆಂತಾನುಂ ದಿಶಾದಂತಿದಿ ॥
ಕ್ಕರಣೀಪೇಚಕ ಚುಂಬನೈಕ ಸುಖಮಂ ಶೇಷೋರಗಂ ಭೋಗಿನೀ ।
ಪರಿರಂಭೋತ್ಸವಮಂ ಪುರಾಣಕಮಂಠಂ ನಿದ್ರಾಂಗನಾ ಸಂಗಮಂ ॥೨॥

ಪುದವಿಲ್ಲಬ್ಧಿ ವರಂ ನೆಲಕ್ಕೆ ಬೆರಗಿಲ್ಲಾರ್ಪಿಂಗೆ ಕೂರ್ಪಿಂಗೆ ಬೆ ।
ಚ್ಚದರಿಲ್ಲಾಜ್ಞೆಗೆ ಸೀಮೆಯಿಲ್ಲ ತಳತಂತ್ರಕ್ಕಂತಮಿಲ್ಲಾಹವ ॥
ಕ್ಕಿದಿರಿಲ್ಲೋಡಿದ ವೈರಿಗಳ್ಗೆ ಪವಣಿಲ್ಲಾರ್ದತ್ತಿ ಕಿತ್ತೆತ್ತಿ ಪೋ ।
ಗದ ದುರ್ಗತ್ರಯಮಿಲ್ಲದೇಂ ಪಿರಿಯನೋ ಚಾಳುಕ್ಯ ಚಕ್ರೇಶ್ವರಂ ॥೩॥

ಇರಲೀಗುಂ ಚರಣಾಂ(ಗು)ಳೀ ವಿಪಿನದುರ್ಗಂ ಪಾದಪೀಠಸ್ಥಳೀ ।
ಗಿರಿದುರ್ಗಂ ನಖರಶ್ಮಿಜಾಳ ಜಳದುರ್ಗಂ ವಿಕ್ರಮಾದಿತ್ಯನಿಂ ॥
ಶರಣಾಗೆಂದಪವಾಶ್ರಿತಂಗೆ ಪನ ಭೂಭೃತ್ತೋಯ ದುರ್ಗಾಶ್ರಿತಂ ।
ಗಿರವುಂಟೇ ತ್ರಿಪಥೈಕಚಕ್ರಿಯ ಲಲಾಟಸ್ಥಾನದೊಳ್ ತೋರ್ಪುದು ॥೪॥

---

* ನಾಗಚಂದ್ರನು ಜೈನಕವಿಯಾದರೂ ಶಿವಸ್ತೋತ್ರವನ್ನು ಬರೆಯಲಿಕ್ಕೆ ಹಿಂದು ಮುಂದು ನೋಡಲಿಲ್ಲ. ಇದೆಂಥಾ ಉದಾರ ಹೃದಯ !!! ಈಗ ಅಚ್ಚಾಗಿರುವ ಜನ್ನಕವಿಯ ಶಾಸನಗಳಲ್ಲಿಯೂ ಕೂಡ ಹೀಗೆಯೇ. ಆದಿಗೆ ವಿಷ್ಣುಸ್ತೋತ್ರವಿದ್ದುದೊಂದು ಆ ಕಾಲದ ಧರ್ಮಜೀವನದ ಉಜ್ವಲ ಚಿತ್ರ ! "ನಾನ್ಯಪಿ ಕುರುತೇ ಕಾವ್ಯಂ" "ಮುಪಿಬಲವಿಲ್ಲದವಂ ಕವಿವೃಷನೆನಿಪುದಶಕ್ಯಂ."

ಆತನ ತನಯಂ ತಂದೆಗ ।
ಮೀತನ ಮಿಗಿಲೆನಿಪ ಮಹಿಮೆಯಿಂ ಯುವರಾಜ ॥
ಖ್ಯಾತಿವೆರಸುರ್ವಿಯಂ ತಳೆ ।
ದಾತಂ ಕೇವಳಮೆ ಮಲ್ಲಿಕಾರ್ಜುನದೇವಂ ॥೫॥

ಕಡಲೊಳ್ ಪುಟ್ಟಿದ ಮಣಿಗಳ್ ।
ಪಡೆಗುಮೆ ಕೌಸ್ತುಭನ ಮಹಿಮೆಯಂ ನೃಪತನಯರ್ ॥
ಪಡೆಗುಮೆ ಕುಮಾರರೆಂಬೀ ।
ಪಡಿಮಾತಂ ಮಲ್ಲಿದೇವ ಮಹಿಮಾಸ್ಪದಮಂ ॥೬॥

ಮಣಿವೆಸರಂ ಪಡೆದು ನಭೋ ।
ಮಣಿವೋಲ್ ಬೆಳಗುಗುಮೆ ಕೋಣಮಣಿಗಳ್ ಪೆಸರಿಂ ॥
ದೆಣಿಕೆಗೆ ಕುಮಾರರೆನಿಸುವ ।
ರೆಣೆಯೆನಿಸುವರಾರೊ ಮಲ್ಲಿಕಾರ್ಜುನ ನೃಪನೊಳ್ ॥೭॥

ಆತನ ರಾಜಶ್ರೀಗೆ ನಿ ।
ಕೇತನಮೆನೆ ತನ್ನ ಭುಜಬಳಂ ಮಂತ್ರಬಳಂ ॥
ಚಾತುರ್ದಂತಬಳಂ ವಿ ।
ಖ್ಯಾತಿಗೆ ಛಾಯಲ ಚಮೂಪನಾಶ್ರಯಮಾದಂ ॥೮॥

ಆತತ ಕೀರ್ತಿಯೆನಲ್ ನೆಗ ।
ಳ್ದಾತನ ದೊರೆವೆತ್ತ ಮಂಶಮೀರ್ಯಶ್ರುತ ವಿ ॥
ಖ್ಯಾತಿಯನಭಿವರ್ಣಿಪೆನೆಂ ।
ಬಾತಂ ದ್ವಿಸಹಸ್ರಜಿಹ್ವನಾಗಲೆವೇಳ್ಕುಂ ॥೯॥

ಅನವದ್ಯಮಖಂಡಿತಮಂವಂ ।
ರನದೀ ಸಲಿಲಪ್ರವಾಹದ (ಸ್ತಿ) ಜಗತ್ಪಾ ॥
ವನಮೆನಿಸಿದ ಛಾಯಲದೇ ।
ವನವಂಶಂ ಸಕಲವಿಪ್ರ ವಂಶೋತ್ತಂಸಂ ॥೧೦॥

ಅದು ಮತ್ತೆಂತೆನೆ ದಾನವ ।
ಮದನನ(ವರ) ನಾಭಿಕಮಳದೊಳ್ ಪರಿಮಳದಂ ॥
ತುದಯಿಸಿದ ತನ್ನ ಚತು ।
ರ್ವದನದೊಳುದಯಿಸೆ ಸಮಸ್ತ ದೇವ ನಿನಾದಂ ॥೧೧॥

ಅವರೊಳಗೆ ವೇದ ವೇದಾಂ ।
ಗವಿದಂ ಬ್ರಹ್ಮದ್ವಿತೀಯ ಮೂರ್ತಿಯೆನಲ್ ಭೂ ॥

ಭುವನಮನೆರಗಿಸಿದಂ ಬ್ರ ।
ಹ್ಮವರ್ಚಸಂ ತನನೆ ಸಹಜವೆನಿಸಿದ ಸಿದ್ಧಂ ॥ ೧೨ ॥

ಆ ಪರಮಂಬ್ರಹ್ಮಪ್ರತಿ ।
ರೂಪಮೆನಲ್ ನೆಗಳ್ದ ಮುನಿಯ ಪೆಸರಿಂ ಜಗಮಂ ॥
ವ್ಯಾಪಿಸೆ ವಶಿಷ್ಠ ಗೋತ್ರಮಿ ।
ಳಾಪಾವನಮಾಯ್ತು ದಿವ್ಯ ಮನುಸೂತ್ರದವೋಲ್ ॥ ೧೩ ॥

ಆ ಗೋತ್ರದೊಳ್ ಬಹು ವಿ ।
ದ್ಯಾಗುಣ ಚಾರಿತ್ರ ನಿರತರಾರಿನ್ನರಿಳಾ ?* ॥
ಭಾಗದೊಳಿಕೆ ಗೋವಿಂದಂ ।
ಶ್ರೀಗೆಡೆಗೊಟ್ಟಂ ವಿಶಾಳವಕ್ಷಸ್ಥಳಮಂ ॥ ೧೪ ॥

ಶ್ರೀವಧು ವಕ್ಷದೊಳಿರೆ ವಾಕ್ ।
ಶ್ರೀವಧು ಮುಖಕಮಳದೊಳ್ ವಿರಾಜಿಸೆ ವಿಜಯ ॥
ಶ್ರೀವಧು ನಿಲೆ ನಿಜಭುಜದೊಳ್ ।
ಗೋವಿಂದಂ ಕೀರ್ತ್ತಿ ವಧುಗೆ ವಲ್ಲಭನಾದಂ ॥ ೧೫ ॥

ಪ್ರಿಯಮಂನೊಡರಿಸುವ ನುಡಿಯಂ ।
ಲ್ತು ಯಥಾರ್ಥಂ ಜಗದ ಮನುಜರೊಳ್ ಗೋವಿಂದಂ ॥
ಭಯಲೋಭ ದುರ್ಲಭಂ (ತಾಂ) ।
(ಭುವಿಯೊಳವನ) ಜನ್ಮಭೂಮಿ ಪುಣ್ಯಕ್ಷೇತ್ರಂ ॥ ೧೬ ॥

ಆದರಿಂದಾ ಪುರುಷನ ಪು ।
ಟ್ಟಿದ ನಾಡುಂ ಕಲಿಯಂಗ ಪ್ರತಾಪಕ್ಕೊಳಗಾ ॥
ಗದಂದಂ ಬಣ್ಣಿಸುವೊಡೆ ತ ।
ಕ್ಕುದು ಪುಣ್ಯಕ್ಷೇತ್ರ ವರ್ಣನಂ ಕೇವಳಮೇ ॥ ೧೭ ॥

ಮಹಾಸ್ರಗ್ಧರಾವೃತ್ತ

ಪಲವುಂ ರತ್ನಾಂಶುಗಳ್ ತಳ್ ದೆರೆಗಳ ಪಲವುಂ ಬಂಧದಿಂ ಚೆಲ್ವು ತನ್ನೊಳ್ ।
ನಿಲೆ ಜಂಬೂದ್ವೀಪಮಂ ಮಂಡಳಿಸಿದ ಪರವೇಶಂಬೊಲಿಂಬಾಯ್ತು ಮುಕ್ತಾ ॥
ಫಲ ಜನ್ಮಸ್ಥಾನ ಮುಜ್ಜೃಂಭಿತ ಜಳಚರ ಕೋಳಾಹಳ ಧ್ವಾನಮಂತ ।
ರ್ವಿಲಂಳತ್ ಪಾಠೀನ ಪಾಶಾಮುಖ ಲಿಖಿತ ಸಮುತ್ಪನ್ನಮಂಭೋ
ನಿಧಾನಂ ॥೧೮॥

* "ನಿರತ ರಾರೆನ್ನಲಿಳಾ । ಭಾಗದೊಳಿರೆ" ಎಂದಾಗಬಹುದೇ ?

ಶರಧಿ ಸರೋವರಮನಳಂ।
ಕರಿಸಿದ ಧರಣೀಸರೋಜ ಕರ್ಣಿಕೆಯೆಂಬ ॥
ತಿರೆ ಕಪಿಳ ಕಿರಣದಿಂದ ।
ಬರಮಂ ಪಜ್ಜಳಿಸಿದತ್ತು ಮೇರುನಗೇಂದ್ರಂ ॥ ೧೯ ॥

ಆ ಕ್ಷೋಣಿಧರ ವಧುವಿಂ ।
ದಕ್ಷಿಣ ದಿಗ್ಮುಖದೊಳೆಸೆವ ಶಶಿಖಂಡದವೋ ॥
ಲೀಕ್ಷಣ ಸುಖಮಂಯಮಿರ್ಪುದಂ ।
ದಕ್ಷಿಣ ಭರತ ತ್ರಿಖಂಡದಾರ್ಯಖಂಡಂ ॥ ೨೦ ॥

ಕರ ತುರಗ ರಜತ ರತ್ನಾಂ ।
ಬರ ಕಾಂಜನ ಸಸ್ಯಗರ್ಭಮೆ (ನಲೊಪ್ಪಿರೆ ಸಿಂ॥
ಗರ) ವಾಗಿ ಮಧ್ಯದೇಶಂ ।
ಧರಾವಧೂ ಮಧ್ಯದೇಶಮೆನೆ ಸೊಗಯಿಸುಗುಂ ॥ ೨೧ ॥

ಆ ದೇಶದ ಗಂಗಾಯ ।
ಮ್ನಾದೇವಿಯ ಮಧ್ಯಭೂಮಿ ಪಾವನಮಂತ ॥
ರ್ವೇದಿಯೆನಿಸಿತ್ತು ಮಂಗಳ ।
ವೇದಿ ಚತುರ್ಮುಖ ಮುಖಕ್ಕೆ ತಾನಾದುದರಿಂ ॥ ೨೨ ॥

ಆ ಮೇದಿನಿಯೊಳ್ ಮಣಿಮಯ ।
ಧಾಮದಿನುತ್ತುಂಗಮೆನಿಪ ದೇವಾಯತನ ॥
ಸ್ತೋಮದಿನೆಸೆವುದು ಕಿರಣ ।
ಗ್ರಾಮಮೆನಲ್ ನೆಗಳ್ದ ವಾರಿಭಟ್ಟ ಗ್ರಾಮಂ ॥ ೨೩ ॥

ಬಹುವೇದ ಧ್ವನಿಯಿಂ ಸಮುದ್ರದುಲಿಯಿಂ ಕೀಳ್ಮಾಡುಗುಂ ಯಜ್ಞಭಾ।
ಗ ಹವಿರ್ಭಾಗಮನೀವ ವಿಪ್ರಜನದಿಂ ದೇವರ್ಕಳಿಂ ಕಲ್ಪಭೂ ॥
ರುಹಮಂ ಮನ್ನಿಸಲೀವುದಲ್ಲಗರು ಧೂಮಾಭಾರದಿಂ ತಾಂಡವ ।
ಕ್ರಿಯೆಯಂ ಪುಟ್ಟಿಸುಗುಂ ಶಿಖಂಡಿಗೆನೆ ಲಕ್ಷ್ಮೀನೂಪುರಂ ತತ್ಪುರಂ ॥ ೨೪ ॥

ಆ ಪುರದೊಳ್ ಗೋವಿದಂ ।
ಗೀ ಪುರುಷನೆ ಪುಣ್ಯಪುರುಷನೆನೆ ಜನಿಯಿಸಿದಂ ॥
ಶ್ರೀಪತಿ (ಸಮ್ಮತಿ) ಸತ್ಯಾ ।
ಳಾಪಂ ನಾರಾಯಣಂ ನಿಜಾನ್ವಯ ತಿಳಕಂ ॥ ೨೫ ॥

ಮನುಸೂತ್ರಕ್ಕೆಡೆಗೊಟ್ಟ ಮುತ್ತಿನಸರಂ ಚಾರಿತ್ರಮಾಳಾನ್ವಿತಂ ।
ಬಿನಿಗಾಲೇಪನ ಸಾಂದ್ರ ಚಂದನರಸಂ ವಿಖ್ಯಾತಿ ವಿದ್ಯಾವಿಳಾ ॥
ಸಿನಿಗಾಳೋಕನ ದರ್ಪಣಂ ಕೃ .....ಕ್ಷ್ಮೀವಲ್ಲಭಂ ಶ್ರೀಪದ ।
ಕ್ಕೆ ನಿವಾಸಂ ಮನಮೆಂದೊಡೇವೊಗಳ್ವೆನಾ ನಾರಾಯಣ
ಖ್ಯಾತಿಯಂ ॥ ೨೬ ॥

ನಾರಾಯಣ ನರ (–ಸಿಂಹನ) ।
(ಧಾ)ರಿತ್ರಿ ಪವಿತ್ರ ರೂಪವತಿ ಗಂಣವತಿ ಕಾಂ ।
ತಾರತ್ನಮೆನಿಪ ಲೋಹಿಣಿ
ವಾರಿರುಹೋದರನ ಲಕ್ಷ್ಮಿಯಂ ಗೆಲೆವಂದಳ್ ॥ ೨೭ ॥

... ... ... ... ...ಶಿಖರಂ ।
ಜಳರಾಶಿ ಕುಮುದಬಂಧು ಪುಟ್ಟುವವೋಲ್ ಭಾ ।
ಯಲದಂಡನಾಥ ಸದೃಶಮೆ ।
ನಲೊಡಂ ... ... ... ... ... ... ... ॥ ೨೮

(.) ವಿಬಳಮೆನಿಸಿದ ಲಕ್ಷ್ಮಿಯ ॥
ನವನೀಶಂ ಮಲ್ಲಿಕಾರ್ಜುನಂ ಕೊಡೆಧರ್ಮ ॥
ವ್ಯವಸಾಯದೊಳೊಂದಿ......... ।
... ... ... ... ... ...ರೆ ಪೆರರೊಳರೇ ॥ ೨೯ ॥

ಶಾಶ್ವತ ಕೀರ್ತಿಯಂ ತಳೆದನಿಕ್ಕೆಲದೊಳ್ ರವಣೀಯಮಾಗೆ ।
.... .... ... ... ... ... ... ನ ಸ್ತವನೀಯಮಪ್ಪಿನಂ ॥
ಶಾಶ್ವತಮಪ್ಪಿನಂ ... ... .... ... ... .... ... ... ... ।
.... ... ... ... ಬೆತ್ತಿರೆ ಭಾಯಂಲ ದಂಡನಾಯಕಂ ॥ ೩೦ ॥

[ಇಂತಿಲ್ಲಿಗೆ ಮುಮ್ಮಗ್ಗಲು ಮುಗಿದುದು. ಹಿಮ್ಮಗ್ಗಲಲ್ಲಿ ಮುಖ್ಯವಾಗಿರುವಷ್ಟು ಭಾಗವನ್ನು ಮಾತ್ರವಿಲ್ಲಿ ಎತ್ತಿ ಬರೆಯುವೆನು].

"... ಶ್ರೀಮದ್ಭುವನೈಕ ಮಲ್ಲದೇವರಾಜ್ಯಮುತ್ತರೋತ್ತರಾಭಿವೃದ್ಧಿ...... (ಹೊಂದುತ್ತಿರಲು).....ಶ್ರೀಮನ್ಮಹಾ ಪ್ರಚಂಡ ದಂಡನಾಯಕ ನಾಕಿಮಯ್ಯಂಗಳ್ ತರ್ದವಾಡಿ ಸಾಸಿರಮುಮಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನಂಗೆಯ್ದು ಸುಖದಿನನು ಭವಿಸುತ್ತಮಿರ್ದು ಶಕವರ್ಷಂ ೯೯೬ನೆಯ ಆನಂದ ಸಂವತ್ಸರದ ಪುಶ್ಯ ಶುದ್ಧ ಪಂಚಮಿ ಬೃಹಸ್ಪತಿವಾರದಂದಿನುತ್ತರಾಯಣ ಸಂಕ್ರಾಂತಿ ಪರ್ವನಿಮಿತ್ತಮಾಗಿ ಮಂಕಾ

ಪುರದ ನೆಲೆವೀಡಿನೊಳ್ ಶ್ರೀ ಬಲ್ಲಪರಸರ್ಗೆ ಬಿನ್ನಪಂಗೆಯ್ದು ರಾಜಧಾನಿ ವಿಜಯಾಪುರದ ಶ್ರೀ ಸ್ವಯಂಭು ಸಿದ್ಧೇಶ್ವರ ದೇವರ ದೇಗುಲಮಂ ಮಾಡಿಸಿಯಲ್ಲಿಯಾಚಾರ್ಯರ್...... ...(ಕಾಳಾಮುಖ ತಿಳಕರ್). ಶ್ರೀ ಯೋಗೀಶ್ವರ ಪಂಡಿತ ದೇವರ ಕಾಲಂ ಕರ್ಚಿ ಕನ್ನವುರಿ ಪನ್ನೆರಡರ ಬಳಿಯಿರುವ ಬಿಜ್ಜನಹಳ್ಳಿಯಲ್ಲಿರುವ ಮತ್ತರ್ ೩೦೦ ಕೊಟ್ಟರು. ॥"

(ಇದರ ಮುಂದೆ ತ್ರ್ಯಂಬಕನೆಂಬವನನ್ನು ಬಣ್ಣಿಸುವ ಮೂರು ಪದ್ಯಗಳಿವೆ. ಮೇಲ್ಕಂಡ ಶಾಸನ ಕಾಲಾನಂತರದಲ್ಲಿ ಬರೆದವುಗಳಾಗಿರಬಹುದೋ ಏನೋ. ಶ್ರೀ ನರಸಿಂಹಾಚಾರ್ಯರಾದರೋ ತಮ್ಮ "ಶಾಸನ ಪದ್ಯಮಂಜರಿ"ಯ ೨೬ನೆಯ ಪುಟದಲ್ಲಿ "ಸುಮಾರು ೧೦೮೦"ರ ಪದ್ಯಗಳೆಂದು ಈ ಮೂರನ್ನು ಎತ್ತಿ ಬರೆದಿದ್ದಾರೆ. ಆದುದರಿಂದ ಅವುಗಳನ್ನಿಲ್ಲಿ ಬರೆಯದೆ ಬಿಟ್ಟರೆ ತಪ್ಪಾಗಲಿಕ್ಕಿಲ್ಲ.)

(ಜ. ಕ. ೮–೨, ೩, ಡಿಶಂಬರ ೧೯೨೯ ಮತ್ತು ಜನೇವರಿ ೧೯೩೦)

# ಲಿಂಗ

---

ಪ್ರಾಚೀನ ಶಿವಾಲಯಗಳಲ್ಲೆಲ್ಲಾ ಲಿಂಗಗಳ ಮೇಲೆ ಕೊರೆದ ಒಂದು ಗೆರೆಯನ್ನು ನೋಡಿ ನನಗೆ ಶಿವಲಿಂಗವು ಮಾನವ ಲಿಂಗದ ಆಕಾರವೇ ಇರಬಹುದೋ ಏನೋ ಎಂದು ಅನಿಸಹತ್ತಿತು. ಆ ಗೆರೆ ಹೇಗೆ ಇರುವದೆಂದರೆ– ಲಿಂಗದ ಹಿಂಭಾಗದಲ್ಲಿ ಉಡುದಾರದಂತೆ ನೆಟ್ಟಗೆ ಹಾಯ್ದಿದ್ದು ಇದಿರಿಗೆ ಮೇಲಕ್ಕೇರಿ ಅದೇ ಕ್ರಮದಲ್ಲಿ ಕೆಳಕ್ಕೆ ಎರಡು ಸಮಾಂತರ ಗೆರೆಗಳು ಕೊರೆಯಲ್ಪಟ್ಟಿರುತ್ತವೆ. ಇದಿರಿನಿಂದ ನೋಡಿದರೆ ಈ ಆಕಾರವು ಬಾಣದಂತೆ ಕಾಣುವದರಿಂದ ಇದಕ್ಕೆ ಜನರು ರಾಮಬಾಣವೆಂದು ಹೇಳುತ್ತಿರುತ್ತಾರೆ. ಆದರೆ ಈ ಒಟ್ಟು ಗೆರೆಯು ಮಾನವಲಿಂಗದ ಅಗ್ರಭಾಗವನ್ನು ಸೂಚಿಸುತ್ತಿರಬಹುದೆಂದು ನನಗೆ ಅನಿಸುತ್ತಿತ್ತು.

ಶಿವಾನುಭವ ಪತ್ರಿಕೆಯಲ್ಲಿ 'ಇತಿಹಾಸದ ಕಣಗಳು' ಎಂಬ ಲೇಖನದಲ್ಲಿ ನಾನೊಂದು ಕಡೆಗೆ ಕ್ರಿಸ್ತಶಕದ ೮ನೇ ಶತಮಾನಕ್ಕಿಂತ ಮುಂಚೆ ಲಿಂಗದ ಪೀಠಕ್ಕೆ ಮಹತ್ವವಿದ್ದಿಲ್ಲವೆಂದು ಬದ್ಧಗೊಳಿಸಿದ್ದೆನಷ್ಟೆ. ಆದರೂ ನಾನು ಹೆಚ್ಚು ಸಂಶೋಧನವನ್ನು ನಡಿಸಿಯೇ ಇದ್ದೆನು. ತ್ರಾವಣಕೋರದ ಇತಿಹಾಸ ಇಲಾಖೆಯ ಡಾಯರಕ್ಟರರಾದ ಶ್ರೀ ಗೋಪಿನಾಥರಾಯರ "ಹಿಂದೂ ಮೂರ್ತಿಶಾಸ್ತ್ರದ ಮೂಲ ತತ್ತ್ವಗಳು" ಎಂಬ ಇಂಗ್ಲಿಷ ಪುಸ್ತಕವನ್ನೋದುವಾಗ ನನ್ನ ಮೇಲ್ಕಾಣಿಸಿದ ಊಹೆಯೇ ತಿದ್ದುಪಡಿ ಹೊಂದಿ ಬಲಗೊಂಡಿತು. ಅದು ಹೇಗೆಂದರೆ ರೇನಿಗುಂಟಾ ಸ್ಟೇಶನ್ನಿನಿಂದ ಆರು ಮೈಲು ದೂರದಲ್ಲಿರುವ ಗುಡಿಮಲ್ಲಂ ಎಂಬ ಸ್ಥಳದಲ್ಲಿರುವ ಶಿವಾಲಯದ ಶಿವಲಿಂಗವು ತುಂಬಾ ಮಾನವಲಿಂಗವೇ ಇದ್ದುದಲ್ಲದೆ ಅದು ಪೀಠದಲ್ಲಿ ಸಿಕ್ಕಿಕೊಂಡಿರದೆ ಕಂಬದಂತೆ ನಿಂತುಕೊಂಡಿದೆ. ಆ ಕಂಬಕ್ಕೆ ಶಿವನದೊಂದು ಭೈರವ ವಿಗ್ರಹವು ಕೆತ್ತಲ್ಪಟ್ಟಿದೆ. ಲಿಂಗಾಗ್ರವು ಆ ವಿಗ್ರಹದ ಮೇಲ್ಗಡೆಗೆ ಕೊಡೆಯಂತೆ ಕಾಣುತ್ತದ. ಈ ವಿಗ್ರಹದ ರೂಪವು ಸಾಂಚೀಸ್ತೂಪದ ಗೊಂಬೆಗಳಂತಿರುವದರಿಂದ ಈ ಲಿಂಗವು ಕ್ರಿಸ್ತಶಕದ ಆರಂಭದ ಕಾಲಕ್ಕಿಂತ ಈಚಿನದಾಗಿರಲಾರದೆಂದು ಐತಿಹಾಸಿಕರೆನ್ನುತ್ತಾರೆ. ಇದರಲ್ಲಿ ನನಗೆ ಎರಡು ಮಾತುಗಳು ಸಿಕ್ಕವು. ಅವು ಯಾವವೆಂದರೆ :

(೧) ಒಂದಾನೊಂದು ಕಾಲದಲ್ಲಿ ಶಿವಲಿಂಗವು ಮಾನವ ಲಿಂಗದ ಆಕಾರದಲ್ಲೇ ಇತ್ತು.

(೨) ಸುಮಾರು ಕ್ರಿಸ್ತಶಕಕ್ಕೆ ಮುಂಚೆಯಾದರೂ ಪೀಠಕ್ಕೆ ಮಹತ್ವವಿರಲಿಲ್ಲ. ಲಿಂಗಸ್ತಂಭವನ್ನು ಶಿವನೆಂದೂ ಪೀಠವನ್ನು ಶಕ್ತಿಯೆಂದೂ ಭಾವಿಸುವ ಶಿವಶಕ್ತಿ ಸಮನ್ವಯದ ತತ್ತ್ವವು ಅದಕ್ಕಿಂತ ಈಚಿನದು.

ಉತ್ತರ ಹಿಂದುಸ್ತಾನದಲ್ಲಿ ಭೀಟಾ ಎಂಬಲ್ಲಿ ಇನ್ನೊಂದು ಲಿಂಗವು ಸಿಕ್ಕಿದೆ. ಅದೂ ಸ್ತಂಭಾಕಾರದ್ದೇ ಇದ್ದು ಅದರ ತುದಿಗೆ ಮಾನವಲಿಂಗಾಗ್ರದ ಆಕಾರವಿರದೆ ಐದು ಮೋರೆಗಳಿವೆ. ಸುತ್ತುಮುತ್ತು ನಾಲ್ಕು; ಮೇಲೆ ಒಂದು. ಈ ಲಿಂಗದ ಮೈಗೆ ಒಂದು ಶಿಲಾಲೇಖವು ಬರೆಯಲ್ಪಟ್ಟಿದೆ. ಆ ಅಕ್ಷರಗಳು ಅಶೋಕನ ಶಿಲಾಲಿಪಿಗಳ ಬ್ರಾಹ್ಮಿ ಅಕ್ಷರಗಳು. ಆದುದರಿಂದ ಇದೂ ಕೂಡ ಕ್ರಿಸ್ತಶಕಕ್ಕಿಂತ ಮುಂಚಿನದೇ ಎಂಬುದು ನಿಸ್ಸಂದೇಹ. ಇದಕ್ಕೂ ಪೀಠವಿಲ್ಲ. ಬರೇ ಸ್ತಂಭ. ಪೀಠದಲ್ಲಿ ಹುಗಿದಿರಬೇಕಾದ ಕೆಳಭಾಗದಲ್ಲಿಯೇ ಲಿಪಿಯನ್ನು ಬರೆದಿರುವದರಿಂದ ಅದನ್ನು ಪೀಠದಲ್ಲಿ ಹುಗಿದು ಮುಚ್ಚುವಂತೆ ಮಾಡಿರಲಾರರು. ಇದೂ ಕೂಡ ಆ ಲಿಂಗಕ್ಕೆ ಪೀಠವಿರಲಿಲ್ಲವೆಂಬುದನ್ನೇ ಸೂಚಿಸುವದು. ಅಲ್ಲದೆ ಇನ್ನೊಂದು ಮಾತು ಇದರಿಂದ ಗೊತ್ತಾಗುವದೇನಂದರೆ, ಪುರಾಣದ ಪಂಚಮುಖದ ಕಲ್ಪನೆಯು ಕ್ರಿಸ್ತಶಕಕ್ಕಿಂತ ಮುಂಚಿನದು. ಗುಡಿಮಲ್ಲಂ ಮತ್ತು ಭೀಟಾ ಇವೆರಡೂ ಸ್ಥಳಗಳ ಲಿಂಗಗಳ ಫೋಟೋಗಳನ್ನು ಶ್ರೀ ಗೋಪಿನಾಥರಾಯರ ಪುಸ್ತಕದಲ್ಲಿ ನೋಡಿ ಕೊಳ್ಳಬಹುದು.

ಗುಡಿಮಲ್ಲಂ ಲಿಂಗವು ರಾಮಬಾಣದ ಸಮಸ್ಯವನ್ನು ನಿವಾರಣಗೊಳಿಸಿತು. ಅದು ಕೇವಲ ಲಿಂಗಾಗ್ರದ ನಿದರ್ಶಕ ಚಿಹ್ನವು. ಇದಕ್ಕೆ ಆಗಮಗಳಲ್ಲಿ ಬ್ರಹ್ಮಸೂತ್ರ ವೆಂದು ಹೇಳಿದುದಾಗಿ ಶ್ರೀ ಗೋಪಿನಾಥರಾಯರು ಬರೆಯುತ್ತಾರೆ. ಇದನ್ನು ನೋಡಿದರೆ ಲಿಂಗಾಗ್ರದ ಸ್ಪಷ್ಟಾಕಾರವು ಕಲೆಯಲ್ಲಿ ಮಾಯವಾಗಿ ಬರೇ ಗೆರೆಯ ರೂಪಕ್ಕೆ ಬಂದ ಕಾಲದಲ್ಲಿ ಈ ಆಗಮಗಳು ಈಗಿನ ರೂಪಕ್ಕೆ ಬಂದವೆಂದು ಸಿದ್ಧ ವಾಗುವದು. ಅಂತೇ ಅವುಗಳಲ್ಲಿ "ಸೂತ್ರ"ವೆಂಬ ಶಬ್ದವು ಪ್ರಯೋಗಿಸಲ್ಪಟ್ಟಿದೆ. ಈ ಬ್ರಹ್ಮಸೂತ್ರ ರಾಮಬಾಣಗಳ ಸಮಸ್ಯೆ ಬಗೆಹರಿದಾಗಳೇ ಋಗ್ವೇದದೊಳಗಿನ ಅನಾರ್ಯರ "ಶಿಶ್ನೋದೇವ"ನು ಈ ಲಿಂಗಪ್ಪನೇ ಎಂದು ಸ್ಪಷ್ಟವಾಗುತ್ತದೆ. ಈ ಮಂತ್ರಗಳನ್ನು ನಾನು ಮೊಟ್ಟಮೊದಲಿಗೆ ರೆ॥ ಕಿಟ್ಟೆಲ್ ಸಾಹೇಬರ 'ಪರಮಾತ್ಮ ಜ್ಞಾನ'ವೆಂಬ ಪುಸ್ತಕದಲ್ಲಿ ನೋಡಿದ್ದೆನು. ನನ್ನ ರಾಮಬಾಣದ ಸಂದೇಹಕ್ಕೆ ಇದೂ ಒಂದು ಕಾರಣವಾಗಿತ್ತು. ಆದರೆ ಗೋಪಿನಾಥರಾಯರ ಪುಸ್ತಕದಲ್ಲಿ ಈ ಫೋಟೊ ಗಳನ್ನೂ ಋಗ್ವೇದದ ಆ ಮಂತ್ರಗಳ ಉಲ್ಲೇಖವನ್ನೂ ನೋಡಿ ನನ್ನ ಸಂದೇಹವು ಸಿದ್ಧಾಂತವಾಯಿತು.

ಇದರ ಮೇಲಿಂದ ಆರ್ಯ ವೈದಿಕರಿಗಿಂತ ಮುಂಚೆ ಈ ದೇಶದಲ್ಲಿ ವಾಸಿ ಸುತ್ತಿದ್ದ ಜನಾಂಗದವರು ದೇವರನ್ನು ಸೃಷ್ಟಿಕರ್ತನೆಂದೂ ತಂದೆಯೆಂದೂ ಭಾವಿಸಿ

ಅದಕ್ಕೆ ಸಂಕೇತವಾಗಿ ಪುರುಷ ಚಿಹ್ನವನ್ನು ಮೂರ್ತಿಗೊಳಿಸಿದ್ದರೆಂದಾಯಿತು. ಇದನ್ನು ನೆನೆದರೆ ಆ ಕಾಲದಲ್ಲಿ ಇಂಥಾದ್ದೇ ಇನ್ನೊಂದು ತತ್ತ್ವಸಂಕೇತವು ಪ್ರಚಾರದಲ್ಲಿದ್ದಿರ ಬಹುದೆಂದು ತರ್ಕವುಂಟಾಗುತ್ತದೆ. ತಂದೆಯೆಂದು ಪೂಜಿಸುವವರಂತೆ ದೇವರನ್ನು ತಾಯಿಯೆಂದು ಪೂಜಿಸುವವರೂ ಇದ್ದಿರಲೇಬೇಕು. ಐಹೊಳ್ಳಿಯಲ್ಲಿ ತೆಂಕಣಕ್ಕೆ ಎರಡು ಮೈಲು ದೂರದಲ್ಲಿ ಸಿದ್ಧನಕೊಳ್ಳವೆಂಬ ಹಳ್ಳಿಯೂ ಒಂದು ದೊಡ್ಡ ಕೊಳ್ಳವೂ (ಗೊಂದಿಯೂ) ಇದ್ದು ಆ ಕಾಂತಾರದ ಕೊಳ್ಳದಲ್ಲಿ ಏಳೆಂಟನೇ ಶತ ಮಾನದ ಒಂದು ಶಿವಾಲಯು ಹಾಗೂ ಒಂದು ಸಪ್ತಮಾತೃಕೆಯರ ಗಂಡಿ ಇದ್ದದ್ದಲ್ಲದೆ ಅಲ್ಲೊಂದು ಗವಿಯಲ್ಲಿ ಕಲ್ಲುಪಡಿಯ ಮೇಲೆ ಮೈಥುನಾಸನದಲ್ಲಿ ಬತ್ತಲೆ ಮಲಗಿದ ಮುಖವಿಲ್ಲದ್ದೊಂದು ಹೆಣ್ಣುಗೊಂಬೆಯು ಕೆತ್ತಲ್ಪಟ್ಟಿದೆ. ಇಂಥದೊಂದು ಗೊಂಬೆಯು ಮಹಾಕೂಟದಲ್ಲಿಯೂ ಇತ್ತು. ಅದಕ್ಕೆ ಲಜ್ಜೆಗೌರಿಯೆಂದು ಜನರು ಅನ್ನುತ್ತಿದ್ದರು. ಅದು ಈಗ ಒಡೆದು ನಾಚಿಕೆಯ ಭಾಗವು ಲೋಪವಾಗಿ ಹೋಗಿದೆ. ಮುಖದ ಸ್ಥಳದಲ್ಲಿ ಒಂದು ಅರೆಬಿರಿದ ಕಮಲದ ಮೊಗ್ಗೆಯನ್ನು ಮಾಡಿದ್ದಾರೆ. ಇಂಥ ಮೂರ್ತಿಗಳಿಗೆ ಮುಖವಿಲ್ಲದೆ ಇರುವುದರಲ್ಲಿ ಒಂದು ಅರ್ಥವಿದೆ. ಅದೇನೆಂದರೆ ಈ ಉಪಾಸನೆಯು ಒಂದು ವ್ಯಕ್ತಿಯ ಪೂಜೆಯಾಗಿರದೆ ಒಂದು ತತ್ತ್ವದ ಪೂಜೆ ಯಾಗಿದ್ದದ್ದನ್ನೇ ಇದು ಸೂಚಿಸುತ್ತದೆ. ಹಿಂದಿನ ಕಾಲದ ಎಷ್ಟೋ ಶಿವಾಲಯುಗಳ ಗೋಡೆಗೆ ಮೈಥುನಾಸನಗಳ ವಿಧವಿಧದ ಚಿತ್ರಗಳನ್ನು ಕೆತ್ತಿರುವುದು ಆ ಕಾಲದ ಶಕ್ತಿಯುಪಾಸನೆಯನ್ನೇ ಸೂಚಿಸುವದೆಂದು ತೋರುತ್ತದೆ. ಅಥವಾ ಆ ಚಿತ್ರಗಳು ಕಾಮಶಾಸ್ತ್ರದ ಕಲೆಯನ್ನು ವಿಸ್ತರಿಸುವ ರಂಜಕಚಿತ್ರಗಳಾಗಿದ್ದರೂ ಇರಬಹುದು. ಇದೇನೇ ಇರಲಿ, ಆದರೆ ಗವಿಗಳಲ್ಲಿದ್ದ ಮಸ್ತಕಹೀನ ನಗ್ನಸ್ತ್ರೀಮೂರ್ತಿಗಳು ಮಾತ್ರ ಯೋನಿಪೂಜೆಯನ್ನೇ ಸೂಚಿಸುತ್ತವೆ. ಇಂಥ ಕಾಂತಾರದ ಕೊಳ್ಳಗಳಲ್ಲಿ ವಾಸ ವಾಗಿದ್ದ ಯೋಗಿಗಳು ಒಂದಾನೊಂದು ಕಾಲದಲ್ಲಿ ಇಂಥ ಉಪಾಸನೆಯನ್ನು ನಡೆಯಿ ಸುತ್ತಿದ್ದರಿಂದಲೇನೋ ಏನೋ ನಮ್ಮ ಕನ್ನಡ ನಾಡಿನಲ್ಲಿ ಯೋಗಿ ಎಂಬ ಶಬ್ದಕ್ಕೆ ಜೋಗಿ ಎಂಬ ಅಪಹಾಸ್ಯಕಾರಕ ಶಬ್ದವು ಪ್ರಚಾರದಲ್ಲಿ ಬಂದಂತೆ ಕಾಣುತ್ತದೆ. ಒಟ್ಟಿಗೆ ಶಿವತತ್ತ್ವ ಶಕ್ತಿತತ್ತ್ವವೂ ಆರ್ಯರು ಬರುವದಕ್ಕಿಂತ ಬಹುಪೂರ್ವದಲ್ಲಿಯೇ ಭರತಖಂಡದಲ್ಲಿ ನೆಲೆಗೊಂಡಿದ್ದವೆಂದು ಹೇಳಬಹುದು. ಅದರಲ್ಲಿಯೂ ಇನ್ನೊಂದು ಮಾತೇನೆಂದರೆ ಲಿಂಗದ ಅಗ್ರವು ಊರ್ಧ್ವಮುಖವಾಗಿ ಇರುವುದನ್ನು ನೋಡಿದರೆ ಇದು ಮಾನವರಿಗೆ ಸಂಯಮವನ್ನೂ ಅಧೋಮುಖೀ ವೃತ್ತಿಗಳ ಊರ್ಧ್ವೀಕರಣ ವನ್ನೂ ಸೂಚಿಸುವಂತಿದೆ. ಆದುದರಿಂದ ಅನಾರ್ಯ ಜನಾಂಗದಲ್ಲಿ ಮೊದಲಿಗೆಲ್ಲಾ ಪ್ರಕೃತಿ ಸುಲಭವಾದ ಅಧೋವೃತ್ತಿಗಳಿಗೇ ಒಂದು ರೂಪು ಕೊಟ್ಟು ಅದರಲ್ಲೇ ಒಂದು ಉಪಾಸನೆಯನ್ನು ಕಲ್ಪಿಸಿಕೊಡುವ ಶಾಕ್ತತತ್ತ್ವವೇ ಬಳಕೆಯಲ್ಲಿದ್ದು ಮುಂದೆ ಬರ ಬರುತ್ತ ಸುಸಂಸ್ಕೃತಿ ಬೆಳೆದು ಬಂದಂತೆಲ್ಲಾ ಸಂಯಮ ಸೂಚಕವೂ ನೀತಿಯುಕ್ತವೂ ಆದ ಲಿಂಗತತ್ತ್ವವು ಹೊಳೆದು ಪ್ರಚಾರಕ್ಕೆ ಬಂದಿರಬೇಕೆಂದು ತೋರುತ್ತದೆ. ಇದನ್ನು

ನೋಡಿದರೆ ಲಿಂಗೋಪಾಸನೆಯು ಆರ್ಯರಿಗಿಂತ ಮುಂಚೆ ಇದ್ದದ್ದರಲ್ಲಿಯೇ ಸುಧಾರಿಸಿದ ಅನಾರ್ಯರ ಧರ್ಮವಾಗಿತ್ತೆಂದು ಹೇಳಬಹುದು. ಇನ್ನೊಂದು ಮಾತೇನೆಂದರೆ, ಎಂಥ ತತ್ತ್ವವಾದರೇನಾಯಿತು, ಹೀಗೆ ನಾಚಿಕೆಗೇಡಾದ ಆಕಾರದಲ್ಲಿ ದೇವತತ್ತ್ವವನ್ನು ಉಪಾಸಿಸಬೇಕೇ ? ಎಂದು ಕೆಲವರು ಅನಬಹುದು. ಆದರೆ ಅದು ಆ ಕಾಲದಲ್ಲಿ ನಾಚಿಕೆಯ ಚಿಹ್ನವೇ ಆಗಿರಲಿಕ್ಕಿಲ್ಲವೆಂದು ನನಗೆ ಅನಿಸುತ್ತದೆ. ಆರೇಳುನೂರು ವರುಷಗಳ ಹಿಂದಿನ ಗುಡಿಗಳಲ್ಲೇ ತುಸು ನಿಂತು ನೋಡಿರಿ. ಹೆಣ್ಣುಗೊಂಬೆಗಳೆಲ್ಲಾ ಮೊಲೆ ತೆರೆದುಕೊಂಡೇ ನಿಂತಿರುತ್ತವೆ. ರಾಣಿಯ ಗೊಂಬೆಯೂ ಹಾಗೇ ರಂಭೆಯ ಗೊಂಬೆಯೂ ಹಾಗೇ. ಈ ರೀತಿಯಾಗಿ ಮೊನ್ನೆ ಮೊನ್ನೆಯೇ ಹೆಣ್ಣುಮಕ್ಕಳಿಗೆ ಕುಪ್ಪಸವಿಲ್ಲದೆ ಸೆರಗಿಲ್ಲದೆ ಬೇಕಾದಂತೆ ಅಡ್ಡಾಡಲಿಕ್ಕೆ ನಾಚಿಕೆಯಿದ್ದಿಲ್ಲವೆಂದ ಮೇಲೆ ಅದಕ್ಕಿಂತ ಬಹು ಸಹಸ್ರ ವರ್ಷಗಳ ಹಿಂದೆ ಬತ್ತಲೆ ಅಡ್ಡಾಡುವ ಕಾಲವೇ ಇತ್ತೆಂದು ನಾವು ಯಾಕೆ ಭಾವಿಸಬಾರದು. ಯಾವ ಕಾಲದಲ್ಲಿ ಯಾವದು ತೆರೆದು ಇರುವದೋ ಅದರ ಬಗ್ಗೆ ಆ ಕಾಲದ ಜನಾಂಗದಲ್ಲಿ ಅಷ್ಟೊಂದು ಅತಿ ವಿಶೇಷತ್ವವಿರುವದಕ್ಕೆ ಕಾರಣವೇ ಇಲ್ಲ. ಮುಕ್ತಸೃಷ್ಟಿಯಲ್ಲಿ ಮಾನವನು ಮುಚ್ಚುಮರೆಯಿಲ್ಲದೆ ಅಡ್ಡಾಡುತ್ತಿದ್ದಾಗ ಮೂಡಿದ ತತ್ತ್ವವು ಮುಂದೆ ಬಂದ ಆರ್ಯಕುಲದವರಿಗೆ ಅಸಹ್ಯವಾಗಿ ಕಂಡಿರುವದು ಸಹಜ. ಅಂತೇ ಅವರು ಇವರನ್ನು "ಶಿಶ್ನೋದೇವಪೂಜಕ"ರೆಂದು ಹಳಿದರು. ಇದರಲ್ಲೇನು ಆಶ್ಚರ್ಯ ?

ಅನಾರ್ಯರ ಈ ತತ್ತ್ವಜ್ಞಾನವು ಮುಂದೆ ಮುಂದೆ ಆರ್ಯರ ಮನಸ್ಸನ್ನು ಆಕರ್ಷಿಸದೆ ಬಿಡಲಿಲ್ಲ. ಅಥರ್ವವೇದದಲ್ಲಿನ ಏಕಮೇವಾದ್ವಿತೀಯಂ ಸ್ತಂಭದ ವರ್ಣನೆಯು ಈ ಲಿಂಗತತ್ತ್ವದ್ದೊಂದು ಹೊಸ ಆವೃತ್ತಿಯೇ ಸರಿ. ಅವರು ಅದರ ನಾಚಿಕೆಯ ಭಾಗವನ್ನೆಲ್ಲ ಅಳುಕಿಸಿ ಬರೇ ಒಂದು ಕಂಬವಾಗಿ ಅದನ್ನು ಸ್ವೀಕರಿಸಿದರು. ಕೇನೋಪನಿಷತ್ತಿನಲ್ಲಿ ಈ ಕಂಬದ ವೃತ್ತಾಂತವಿದ್ದದರಿಂದಲೇ ಅದು ಅಥರ್ವವೇದದ ಉಪನಿಷತ್ತುಗಳಲ್ಲೊಂದೆಂದು ಪ್ರಸಿದ್ಧವಾಗಿರಬಹುದು.

ಹೀಗೊಮ್ಮೆ ಆರ್ಯರ ತತ್ತ್ವಕ್ಕೂ ದ್ರಾವಿಡರ ತತ್ತ್ವಕ್ಕೂ ಏಕರೂಪತೆಯು ಬಂತು. ಇದೇ ಮೊದಲನೆಯ ಐಕ್ಯ. ಮೊದಲಿನ ಶಿಶ್ನೋದೇವನು ಹೀಗೊಮ್ಮೆ ತ್ರೈಲೋಕ್ಯನಗರಾರಂಭ ಮೂಲಸ್ತಂಭದ ಶಂಭುವಾದನು. ಆ ಮೇಲೆ ಮತ್ತೊಂದು ಸ್ಥಿತ್ಯಂತರದ ಕಾಲವು ಬಂತು. ಆಗ ಪುರಾಣ ಕಲ್ಪನೆಯ ತ್ರಿಮೂರ್ತಿಗಳ ತಂಟೆ. ಆ ತ್ರಿಮೂರ್ತಿತತ್ತ್ವವೆಲ್ಲಾ ಒಂದೇ ಎಂದು ತೋರಿಸುವದಕ್ಕೆ ಮುಂದೆ ಆ ಕಂಬಕ್ಕೇ ಮೂರು ಭಾಗಗಳನ್ನು ಕಲ್ಪಿಸಿ ಬುಡವನ್ನು ಬ್ರಹ್ಮಭಾಗವೆಂದೂ ನಡುವನ್ನು ವಿಷ್ಣುಭಾಗವೆಂದೂ ತುದಿಯನ್ನು ರುದ್ರಭಾಗವೆಂದೂ ತೋರಿಸಿ ಲಿಂಗವನ್ನು ತ್ರಿಮೂರ್ತ್ಯಾತ್ಮಕವಾಗಿ ರೂಪಿಸಿದರು. ಇದೇ ಎರಡನೆಯ ತತ್ತ್ವಸಮನ್ವಯವು.

ಹಾಳು ಶಿವಾಲಯಗಳಲ್ಲಿ ನೀವು ಈ ರೂಪವನ್ನು ಪ್ರತ್ಯಕ್ಷವಾಗಿ ನೋಡಬಹುದು. ಪೀಠವೆಲ್ಲಾ ಒಡೆದು ಹೋಗಿ ಬರೀ ಲಿಂಗವಷ್ಟೇ ಉಳಿದಿದ್ದರೆ ಅಲ್ಲಿ

ನಿಮಗೆ ಇದು ಕಾಣಬಹುದು. ಅವು ಪೀಠದ ಮೇಲೆ ಕಾಣಿಸುವ ಲಿಂಗಕ್ಕಿಂತ ಮುಮ್ಮಡಿಯಷ್ಟು ಉದ್ದವಾಗಿರುವ ಸ್ತಂಭಗಳೇ ಸರಿ. ಬುಡದ ಬ್ರಹ್ಮಭಾಗವು ಚೌಕಾಗಿಯೂ ನಡುವಿನ ವಿಷ್ಣುಭಾಗವು ಎಂಟೇಣಿನದಾಗಿಯೂ ಮೇಲಿನ ರುದ್ರಭಾಗವು ದುಂಡಗೆ ಕೊಳಗಿನಾಕಾರದ್ದಾಗಿಯೂ ಸ್ಪಷ್ಟವಾಗಿ ಕಾಣುತ್ತದೆ. ಇಂಥ ಪಿಂಡವೊಡೆದ ಲಿಂಗದಂಡಗಳನ್ನು ಮಹಾಕೂಟದಲ್ಲಿ ಹೇರಳವಾಗಿ ಕಾಣಬಹುದು.

ಲಿಂಗದ ತ್ರಿಮೂರ್ತ್ಯಾತ್ಮಕತ್ವದ ಬಗ್ಗೆ ಶಿವಪುರಾಣಗಳಲ್ಲಿ ಕೂಡ ಉಲ್ಲೇಖವಿರುವುದಾಗಿ ನಾನು ವಾರದವರ ಗ್ರಂಥಮಾಲೆಯಲ್ಲೊಂದಾದ "ವೀರಶೈವ ಉಪಯುಕ್ತವೇಂಚೀ" ಎಂಬ ಪುಸ್ತಕದಲ್ಲಿ ಓದಿದ್ದೇನೆ. ಭಕ್ತನ ಕಾಲುಗಳೇ ಬ್ರಹ್ಮಭಾಗವೆಂದೂ ದಂಡವೇ ವಿಷ್ಣುಭಾಗವೆಂದೂ ರುಂಡವೇ ರುದ್ರಭಾಗವೆಂದೂ ಹೀಗಿದ್ದದರಿಂದಲೇ ಭಕ್ತನು ಲಿಂಗಕಾಯನೆಂದೂ ಬಣ್ಣಿಸುವ ಶ್ಲೋಕಗಳಿವೆ. ಈ ತ್ರಿಮೂರ್ತ್ಯಾತ್ಮಕತ್ವದ ಸ್ಥಿತ್ಯಂತರದ ಕಾಲವು ಮುಗಿದ ಬಳಿಕ ಇನ್ನೊಂದು ಕಾಲವು ಬಂತೆಂದು ತೋರುತ್ತದೆ. ಇದುವರೆಗೂ ಆದರಿಸದ ಶಾಕ್ತರನ್ನು ಈ ಕಾಲದಲ್ಲಿ ಐಕ್ಯಪಡಿಸಿಕೊಂಡರೆಂದು ಹೇಳಬಹುದು.

ಆಗ ಲಿಂಗದ ಕೆಳಗಿನ ಎರಡು ಭಾಗಗಳೂ ಮುಳುಗುವಂತೆ ಪೀಠದಲ್ಲಿ ತೂತು ತೋಡಿ ಅದರಲ್ಲಿ ಅದನ್ನು ಸೇರಿಸಿ ರುದ್ರಭಾಗವನ್ನಷ್ಟೇ ಮೇಲೆ ತೆರೆದು ಹೀಗೆ ಶಿವಶಕ್ತಿ ತತ್ತ್ವಗಳಲ್ಲಿ ಐಕ್ಯವನ್ನುಂಟುಮಾಡಿದರು. ಇದೇ ಕೊನೆಯ ಸ್ಥಿತ್ಯಂತರ. "ಉಮಾಯೈ ಭಗರೂಪಿಣ್ಯೈ ಲಿಂಗರೂಪಧರಾಯ ಚ ಶಂಕರಾಯ ನಮಸ್ತುಭ್ಯಮ್ ॥ (ಕಾಮಿಕಾಗಮ, ಹಿಂ.ಮೂ.ಶಾ)" ಲಿಂಗಕ್ಕೆ ಹೀಗೆ ತತ್ತ್ವಸಮನ್ವಯದ ಸಲುವಾಗಿ ನಾನಾ ಕಾಲಗಳಲ್ಲಿ ನಾನಾ ರೂಪಗಳು ಬಂದವು. ಏಸು ಹೊಸ ರೂಪಗಳು ಬಂದರೂ ಹಳೆಯ ರೂಪಗಳ ಚಿಹ್ನಗಳು ತುಸುವಾದರೂ ಉಳಿಯುತ್ತಲೇ ಬಂದಿರುವವು. ಹಳೆಯದನ್ನೆಲ್ಲ ಪೂರ್ಣ ತ್ಯಜಿಸಿಲ್ಲ. ಬ್ರಹ್ಮಸೂತ್ರ ಅಥವಾ ರಾಮಬಾಣದ ಸುತ್ತುಗೆರೆಯೇ ಇದಕ್ಕೆ ಸಾಕ್ಷಿ. ಪೀಠಕ್ಕೆ ಮೃದುವಾದ ಹೆಣ್ಣುಗಲ್ಲನ್ನೂ ಲಿಂಗಕ್ಕೆ ಬಿರುಸಾದ ಒಪ್ಪಿನ ಗುಂಡುಗಲ್ಲನ್ನೂ ಉಪಯೋಗಿಸಬೇಕೆಂದು ಆಗಮಗಳಲ್ಲಿಯೂ ಶಿವತತ್ತ್ವ ರತ್ನಾಕರದಲ್ಲಿಯೂ ಅಂತೇ ಇದೆ.

ಬೇರೆ ಬೇರೆ ಜನಾಂಗಗಳು ನೆರೆನೆರೆಯಾಗಿ ಕೂಡಿ ಬಾಳುವಾಗ ತನ್ನಿಂದ ತಾನೇ ಒಂದರ ನಾತು ಇನ್ನೊಂದಕ್ಕೆ ಬಡಿಯುವ ಮಾತು ಒತ್ತಟ್ಟಿಗಿರಲಿ, ಆದರೆ ಪರಸ್ಪರರ ಸುಖಶಾಂತಿಗಳಿಗಾಗಿ ಒಬ್ಬರಿಗೊಬ್ಬರು ಒಡಂಬಟ್ಟು ಬುದ್ಧಿಪುರಸ್ಸರವಾಗಿ ಪರಸ್ಪರರ ಸಂಸ್ಕೃತಿಗಳ ಸರಿಬೆರಕೆಯನ್ನು ಮಾಡಿಕೊಳ್ಳದೇ ನಿರ್ವಾಹವೇ ಬೀಳುವದಿಲ್ಲ. ಹೀಗೆಂತಲೇ ಲಿಂಗರೂಪದಲ್ಲಿ ಬದಲಾವಣೆಗಳಾದಂತೆ ಮೂರ್ತಿರೂಪಗಳೂ ಬದಲಾಗಿವೆ. ಹರಿ ಹರ ವಾದವನ್ನು ನೀಗಿಸುವದಕ್ಕೆ ಹರಿಹರ ಮೂರ್ತಿಯೂ ಶಿವ ಶಕ್ತಿ ವಾದವನ್ನು ನೀಗಿಸುವದಕ್ಕೆ ಅರ್ಧನಾರೀಶ್ವರ ಮೂರ್ತಿಯೂ ಕಾಲಕಾಲಕ್ಕೆ ಪ್ರಕಾಶಕ್ಕೆ

ಬಂದವು. ಅಷ್ಟೇಕೆ ? ಹಿಂದೂ ಮುಸಲ್ಮಾನರನ್ನು ಐಕ್ಯಗೊಳಿಸುವುದಕ್ಕೆ ಕಬೀರ, ನಾನಕ, ಸಾಲುಟಗಿಯ ಶಿವಯೋಗೀಶ್ವರ, ಶಿರಹಟ್ಟಿಯ ಫಕೀರಸ್ವಾಮಿ, ಹುಮನಾಬಾದಿಯ ಮಾಣಿಕಪ್ರಭು ಮುಂತಾದ ಜ್ಞಾನಿಗಳು ಉಭಯ ವೇಷಗಳನ್ನೂ ಧರಿಸಿ ನಿಲ್ಲಲಿಲ್ಲವೇ ? ಇಂಥ ಕಾರಣಗಳಿಂದಲೇ ಲಿಂಗದ ರೂಪರೇಷೆಯಲ್ಲಿ ಕೂಡ ಕಾಲಕಾಲಕ್ಕೆ ಬದಲಾಗುತ್ತ ಬಂತು.

ಲಿಂಗದ ಆಕಾರವು ಮೂಲತಃ ಅದೊಂದು ತತ್ತ್ವಸಂಕೇತವಾಗಿದೆ. ಆದರೆ ಇಂಥಾ ತತ್ತ್ವಗಳೆಲ್ಲಾ ಪುರಾಣ ಯುಗದಲ್ಲಿ ಮೂರ್ತಿಗಳಾಗಿ ಕದನ ಮಾಡಹತ್ತಿದವು. ಶಿವನಿಗೆ ಪಂಚಮುಖಗಳಿವೆಯೆಂದೂ ತ್ರಿಶೂಲಾದಿ ಆಯುಧ ಮುಂತಾದವುಗಳ ಧಾರಣವಿದೆಯೆಂದೂ ಇನ್ನೂ ಏನೇನೋ ಕಲ್ಪಿಸಿ ಜನಗಳಲ್ಲಿ ಕೋಲಾಹಲವಾಗು ವದಕ್ಕೆ ಕಾರಣವಾಗಿದೆ. ಶಿವನ ಪಂಚಮುಖಗಳು ಆಕಾಶಾದಿ ಪಂಚತತ್ತ್ವಗಳೆಂದು ಪಂಚಬ್ರಹ್ಮೋಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಿದೆ. ಅಲ್ಲದೆ ದೇವರೂಪಗಳೆಲ್ಲಾ ಪ್ರತಿಭಾಸಂಪನ್ನತೆಯಿಲ್ಲದ ಅಲ್ಪಬುದ್ಧಿಯ ಭಕ್ತರ ಸಲುವಾಗಿ ಕಲ್ಪಿಸಪಟ್ಟವುಗಳೆಂದು ಮಹಾನಿರ್ವಾಣತಂತ್ರದಲ್ಲಿ ಘಂಟಾಘೋಷವಾಗಿ ಹೇಳಿದೆ. "ಏವಂ ರೂಪಾಣಿ ವಿವಿಧಾನಿ ಚ ಕಲ್ಪಿತಾನಿ ಹಿತಾರ್ಥಾಯ ಭಕ್ತಾನಾಯ್ ಅಲ್ಪಮೇಧಸಾಮ್" ಮಹಾ ನಿರ್ವಾಣ ತಂತ್ರದ ೧೩ನೆಯ ಉಲ್ಲಾಸದಲ್ಲಿರುವ ಈ ಉಪದೇಶವು ನನ್ನ ಮನಸ್ಸಿಗೆ ಒಳ್ಳೇ ನಟ್ಟಿತು.

ವಸ್ತುಸ್ಥಿತಿ ಈ ರೀತಿಯಾಗಿದ್ದರೂ ಇಂದು ನಾವು ನಾನಾ ದೇವದೇವಿಯರ ರೂಪರಾಶಿಯನ್ನು ಕಟ್ಟಿಕೊಂಡು ದುರಹಂಕಾರದಿಂದ ವ್ಯರ್ಥವಾಗಿ ಒಬ್ಬರನ್ನೊಬ್ಬರು ಜರಿದು ಜನಾಂಗದಲ್ಲಿ ಕೋಲಾಹಲವನ್ನೆಬ್ಬಿಸುವೆವಲ್ಲ ! ಇದೆಂಥಾ ಮರುಳತನ ! ನೆಲ ಮುಗಿಲು ಗಾಳಿ ಬೆಂಕಿ ನೀರುಗಳೇ ಶಿವನ ಪಂಚಮುಖಗಳೆಂದು ಉಪನಿಷತ್ತಿ ನಲ್ಲಿ ಸ್ಪಷ್ಟವಾಗಿ ಹೇಳುತ್ತಿದ್ದರೂ, ದೇವರೂಪಗಳೆಲ್ಲಾ ಮಂದಮತಿಗಳ ಸಲುವಾಗಿ ಕಲ್ಪಿಸಲ್ಪಟ್ಟಿರುವವೆಂದು ಶಾಸ್ತ್ರಗಳು ಕೂಗಿಕೊಳ್ಳುತ್ತಿದ್ದರೂ ತಿಳಿದವರೂ ಕೂಡ ಇತ್ತ ಕಿವಿಗೊಡದೆ 'ಆ ಜಾತಿ ತಲೆಯಲ್ಲಿ ಹುಟ್ಟಿತು, ಈ ಜಾತಿ ಕಾಲಲ್ಲಿ ಹುಟ್ಟಿತು, ಪಂಚಾಚಾರ್ಯರು ಪಂಚಮುಖಗಳಿಂದ ಹುಟ್ಟಿದರು, ಇನ್ನ್ಯಾವನೋ ಎಲ್ಲಿಂದಲೋ ಹುಟ್ಟಿದನು." ಮುಂತಾಮುದಾಗಿ ಮೂಢೋಚಿತ ಕೋಲಾಹಲವನ್ನೆಬ್ಬಿಸಿಕೊಂಡು ಸುಮ್ಮಸುಮ್ಮನೆ ದುರಹಂಕಾರಕ್ಕೆ ತುತ್ತಾಗಿ ತಮ್ಮ ಆಯುಷ್ಯವನ್ನು ಹಾಳುಮಾಡಿ ಕೊಂಡು ಜನಾಂಗದ ಜೀವನಕ್ಕೂ ಕಂಟಕರಾಗಿ ಎಲ್ಲೆಲ್ಲೂ ಅಶಾಂತಿಯನ್ನುಂಟು ಮಾಡುವದರಲ್ಲಿ ಯಾವ ಜಾಣತನವಿದೆ ? ಇಷ್ಟೂ ಕೂಡ ಅರಿತುಕೊಳ್ಳದಿದ್ದರೆ ನಾವು ಅರುವುಳ್ಳವರೇ ? ಎಲ್ಲರೂ ಒಂದಿಷ್ಟು ಬುದ್ಧಿಯನ್ನು ಸತ್ಯವನ್ನರಿತುಕೊಳ್ಳು ವದಕ್ಕೆ ದುಡಿಸಿದರೆ ಇಂದಿನ ಅನರ್ಥಕ್ಕೆ ತಾನೇ ತಡೆಯಾಗಲಿಕ್ಕಿಲ್ಲವೇ ?

(ಜ. ಕ. ೮-೪, ಫೇಬ್ರುವರಿ ೧೯೩೦)

# ಲಿಂಗಿಗಳು

ಇವನೀಯುಂದದೊಳೆಯ್ದೆ ರಕ್ಷಿಸಿದವಂಗಿಷ್ಟಾರ್ಥಸಂಸಿದ್ಧಿ ಸಂ ।
ಭವಿಕುಂ ಪೂಣ್ದಳಿದಂಗೆ ಗಂಗೆ ಗಯೆ ಕೇದಾರಂ ಕುರುಕ್ಷೇತ್ರಮುಂ ॥
ಬಿವರೊಳ್ ಪೇಸದ ಪಾರ್ವರಂ ಕವಿಲೆಯುಂ ಸ್ತ್ರೀ ಬಾಳರಂ ಲಿಂಗಿಯು ।
ಪ್ಪವರಂ ಕೊಂದನವಂ ಸ್ವಗೋತ್ರ ಸಹಿತಂ ಬೀಳ್ಗುಂ ಮಹಾಘೋರದೊಳ್ ॥

ಗಂಗಾಯುಮುನಾ ಸಾಗರ ।
ಸಂಗಮದೊಳ್ ಕೋಟಿ ಪಾರ್ವರುಂ ಕವಿಲೆಗಳುಂ ॥
ಲಿಂಗಿಗಳುಂ ಬೆರಸಳಿದಂ ।
ಲಿಂಗಮುನೀ ಧರ್ಮವಂ ಕರುತ್ತಳಿದಧಮಂ ॥

ಕವಿಲೆಗಳಂ ಕೋಟಿಯುನೊಸೆ ।
ದವನೀಸುರಕೋಟಿಗಿತ್ತನೀ ಧರ್ಮಕ್ಕು ॥
ದ್ಭವಮಂ ಪಡೆದವನಾ ತೀ ।
ರ್ಥವಿತತಿಯೊಳ್ ಲಿಂಗ ಲಿಂಗಿಜನ ಸನ್ನಿಧಿಯೊಳ್ ॥

ಇವುಗಳಲ್ಲಿ ಮೊದಲನೇ ಪದ್ಯವು ಬಸವಣ್ಣನಿಗಿಂತ ೮೫ ವರ್ಷ ಮುಂಚಿನದು; ಮತ್ತು ಎರಡನೇ ಮೂರನೇ ಪದ್ಯಗಳು ೪೮ ವರುಷ ಮೊದಲಿನವು. ಕ್ರಿ. ಶ. ೧೦೭೪ರಲ್ಲಿ ಬರೆದ ಶಿಕಾರಿಪುರ ತಾಲೂಕಿನ ಬಳ್ಳಿಗಾಂವಿಯ ೯೪ನೇ ಶಿಲಾಲಿಪಿಯಿಂದ ಮೊದಲನೆಯುದನ್ನೂ, ೧೧೧೩ ರ ೯೯ನೇ ಶಾಸನದಿಂದ ಕೊನೆಯುವುಗಳನ್ನೂ ಆರಿಸಿದೆ. ಈ ಲಿಪಿಗಳಲ್ಲಿ ಕಾಣುವ "ಲಿಂಗಿಗಳು" ಯಾರೆಂಬುದನ್ನು ವಿವೇಚಿಸುವಾ.

ಇಲ್ಲಿ "ಪಾರ್ವರಂ" ಮತ್ತು "ಲಿಂಗಿಗಳಂ" ಎಂದು ಎರಡು ಪೂಜ್ಯ ಜನಾಂಗಗಳನ್ನೇ ಹೇಳಿದೆ. ಹಾಗಾದರೆ ಬ್ರಾಹ್ಮಣರ ಹೊರತು ಈ 'ಬ್ರಾಹ್ಮಣೇತರ' ಪೂಜ್ಯರು ಯಾರು ?

ಇನ್ನೂ ಕೆಲವು ಶಿಲಾಲಿಪಿಗಳ ಫಲಶ್ರುತಿಯಲ್ಲಿ ಹೇಳಿರುವುದೇನೆಂದರೆ—

ಇವನೀಯುಂದದೊಳೆಯ್ದೆ ಪಾಳಿಸಿದವಂಗಿಷ್ಟಾರ್ಥಸಂಸಿದ್ಧಿ ಸಂ ।
ಭವಿಕುಂ ಕೊಂಡಳಿದಂಗೆ ಗಂಗೆ ಗಯೆ ಕೇದಾರ ಕುರುಕ್ಷೇತ್ರಮುಂ ॥

ಬಿವರೊಳ್ ಪೇಸದೆ ಪಾರ್ವರಂ ಗೊರವರಂ ಗೋವೃಂದಮಂ ಪೆಂಡಿರಂ ।
ತವೆ ಕೊಂದಿಕ್ಕಿದ ಪಾಪಮೆಯ್ದುಗುಮವಂ ಬೀಳ್ಗುಂ ಸಿರೋಧಂಗಳೊಳ್ ॥

ಪ್ರಿಯದಿಂದಿಂತಿದನೆಯ್ದೆ ಕಾವ ಮನುಜಂಗಾಯುಂ ಜಯಶ್ರೀಯುಮಾ ।
ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರಂಗಳೊಳ್ ವಾರಣಾ ॥
ಸಿಯೊಳೆಳ್ಕೋಟಿ ಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದುದೊಂ ।
ದಯಶಂ ಪೊರ್ದುಗುಮೆಂದು ಸಾರಿದಪುವೀ ಶೈಲಾಕ್ಷರಂ ಧಾತ್ರಿಯೊಳ್ ॥

ಈ ಎರಡು ಪದ್ಯಗಳು ಕ್ರಿ.ಶ. ೧೧೪೦ ರಿಂದ ೧೧೭೩ರ ವರೆಗೆ ಆಳಿದ ಮೊದಲನೇ ನರಸಿಂಹ ಬಲ್ಲಾಳನ ಆಳಿಕೆಯಲ್ಲಿ ಬರೆಯಿಸಿದ ಬೇಲೂರಿನ ೫೮ನೇ ಹಾಗೂ ೫೩ನೇ ಶಿಲಾಲಿಪಿಗಳಿಂದ ಆರಿಸಲ್ಪಟ್ಟಿವೆ. ಈ ಪದ್ಯಗಳಲ್ಲಿ 'ಲಿಂಗಿ'ಗಳೆಂಬುದಕ್ಕೆ ಬದಲಾಗಿ "ಗೊರವರಂ" "ಮುನೀಂದ್ರರಂ" ಎಂಬುದಾಗಿ ಹೇಳಿದೆ. ಅಂದ ಬಳಿಕ ಲಿಂಗಿಗಳು ಎಂಬ ಶಬ್ದಕ್ಕೆ ಲಿಂಗರೂಪದಲ್ಲಿ ಸನಾತನಬ್ರಹ್ಮವನ್ನರ್ಚಿಸುವ ತಪಸ್ವಿಗಳೆಂದು ಅರ್ಥವಾಯಿತು. ಶಿಲಾಲಿಪಿಗಳ ಫಲಶ್ರುತಿಗಳಲ್ಲಿ ಹೀಗೆ "ವೇದಾಢ್ಯರನ್ನೂ "ಏಳ್ಕೋಟಿ ಮುನೀಂದ್ರ"ರ ಬಗ್ಗೆ ಆಲೋಚಿಸುವಾ.

ಸೊರಬ ತಾಲೂಕಿನ ೨೭೫ನೇ ಶಾಸನದಲ್ಲಿ "ನಿತ್ಯಜ್ಞಾನಾನಂದ ಪರಶಿವ ಸ್ವರೂಪಾವಲೋಕನ ತತ್ಸ್ವರೂಪರುಂ ಯತಿಸಾರ್ವಭೌಮರುಂ ಯೆಕ್ಕೋಟಿಸಮಯ ಚಕ್ರವರ್ತಿ ಸಪ್ತಾಹತ್ತರಿ ಸ್ಥಾಪನಾಚಾರ್ಯರುಂ (ಆದ), ಕಾಳಾಮುಖ ವ್ರತಾನ್ವಯ ಶೀಲಗುಣಂ ಶಿವಕಥಾದ್ಯನೇಕ ಸ್ಮೃತ್ಯ॥ ರ್ಥಾಳಂಕಾರ ಸುವಾಕ್ಯಂ। ಪಾಳಿತ ಸಜ್ಜನಪಸೂತ ಯತಿಸರ್ವೇಶಂ॥ ಎಂಬುದಾಗಿ ಏಳ್ಕೋಟಿ ಮುನಿಗಳೆಂದರೆ ಕಾಳಾಮುಖ ಮುನಿಗಳೆಂದು ಹೇಳಿದೆ.

ಈ ಕಾಳಾಮುಖರಿಗೆ ಅರಸೀಕೆರೆಯ ೯೦ನೇ ಶಾಸನದಲ್ಲಿ "ಶಿವಾಗಮದೊಳ್ ನಿರತರ್" ಎಂದೂ ಅದೇ ತಾಲೂಕಿನ ೪೭ನೇ ಶಾಸನದಲ್ಲಿ "ಲಾಕುಳಾಗಮಸಮಯ ಸಮುದ್ಧರಣರ್" ಎಂದೂ ಹಾಸನದ ೭೧ನೇ ಶಾಸನದಲ್ಲಿ "ಶಿವಧರ್ಮಪ್ರತಿಪಾಲಕರ್" ಎಂಬುದಾಗಿಯೂ ವಿಶೇಷಿಸಿ ಹೇಳಿದ್ದಲ್ಲದೆ ಅರಸೀಕೆರೆಯ ೧೦೮ನೇ ಶಾಸನದಲ್ಲಿ ಇವರಿಗೇ "ಅಸಂಖ್ಯಾತ ಮಹಾಗಣಗಳೆಂ"ದೂ ಶಿಕಾರಿಪುರ ತಾಲೂಕಿನ ೨೩೭ನೇ ಶಾಸನದಲ್ಲಿ "ಮಾಹೇಶ್ವರ"ರೆಂದೂ ಹೇಳಿದೆ. ಬಸವಣ್ಣನಿಗಿಂತ ಪೂರ್ವದಲ್ಲಿ ಕರ್ನಾಟಕದೊಳಗೆ ಪ್ರಬಲವಾಗಿದ್ದ ಶೈವಧರ್ಮವೆಂದರೆ ಈ ಕಾಳಾಮುಖ, ಮಾಹೇಶ್ವರ ಗಣಂಗಳದೇ ಸರಿ. ಇದು ಶಾಸನಸಮ್ಮತವಾದ ಮಾತು. ಈ ವಿಷಯವು ವಾಚಕರಿಗೆ ಹೆಚ್ಚು ಸ್ಪಷ್ಟವಾಗಬೇಕೆಂದು ಮಾಚಿಗನೆಂಬ ದಂಡನಾಯಕನ ಹಾಗೂ ಅವನ ಗುರುವಾದ ಒಬ್ಬ ಕಾಳಾಮುಖಿ ಮುನಿಯ ವಿಷಯವನ್ನು ಉಲ್ಲೇಖಿಸುವೆನು—

ಶಿವತತ್ತ್ವಂ ಶಿವಧರ್ಮನಿರ್ಮಳಗುಣಾಲಂಬಂ ಶಿವಾರಾಧನಂ ।
ಶಿವಪೂಜಾವಿಧಿ ಸಲ್ಗುಮೀ ವಿಭುವಿನಿಂ ಧಾತ್ರೀಜನಕ್ಕೆಂದುಂ ತಾಂ ॥
ಶಿವನೀಯಲ್ ಪಡೆದಳ್ ಮಹೇಶವರದಿಂ ಮಲ್ಲವ್ವೆ ವಿಖ್ಯಾತನಂ ।
ಶಿವಪಾದಾಂಬುಜಭೃಂಗನಂ ತನಯನಂ ಸದ್ಭಾವಿಚಿಯಂ ಮಾಚಿಯಂ ॥

............ತದ್ಗುರುವುಂ ಜಗದ್ಗುರುವುವೆನಿಸಿ–
ಯಮಮುಖ್ಯಾಷ್ಟಾಂಗ ಯೋಗಾನುಭವರಖಿಳ ವೇದಾಂತ ಸಿದ್ಧಾಂತಶೈವಾ ।
ಗಮದುಗ್ಧಾಂಬೋಧಿ ಪಾರಾಯಣರಮಳ ಕಳಾಜ್ಞಾನಸಾರರ್ ಪ್ರಸಿದ್ಧೋ ॥
ತಮಯೋಗೀಂದ್ರಾಗ್ರಗಣ್ಯರ್ ನಿರುಪಮ ಮಹಿಮಾಳಂಕೃತರ್ ಪೆಂಪು-
ವೆತ್ತರ್ ।
ಕ್ರಮಯುಕ್ತರ್ ಖ್ಯಾತ ಕಾಳಾಮುಖಕುಳತಿಳಕರ್ ದೇವಶಕ್ತಿವ್ರತೀಂದ್ರರ್ ॥

ಸ್ವಸ್ತಿಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪಸಮಾಧಿ ಶೀಲಸಂಪನ್ನರಿಪ್ಪ ಒಮ್ಮಕೂರ ಹಿರಿಯ ಮಠದಾಚಾರ್ಯರ್ ದೇವಶಕ್ತಿ ದೇವರು ಮಾಚಯ್ಯ ನಾಯಕಂಗೆ ಕಾರುಣ್ಯದಿಂದನುಗ್ರಹಂ ಮಾಡಲಾತನಂ ಧರ್ಮತತ್ಪರನಾಗಿ

ಶರಣೆಂದರೆದೆಯ ಕೈ ಮ ।
ಚ್ಚರಿಪಧಟರ ಮೊಗದ ಕೈ ಜನಸ್ತುತ ಮಾಹೇ ॥
ಶ್ವರತತಿಯ ಮುಗಿದ ಕೈ ಬೇ ।
ಳ್ಪರ ಪಿಡಿದ ಕೈ ಮಾಚಿಗಂ ಚತುರ್ಭುಜನಾದಂ ॥

...... ದೇವಶಕ್ತಿ ವ್ರತನಾಥ ಪ್ರಸಾದಾಸಾಧಿತ ಮಾಹೇಶ್ವರಾಚಾರಾಮೃತ ಪ್ರಕ್ಷಾಳಿತ ಮನೋಮಳ (ನಾದನಾ ಮಾಚಯ್ಯಂ)*

ಇದರ ಮೇಲಿಂದ ಕರ್ನಾಟಕದಲ್ಲಿ ಕಾಳಾಮುಖರು ಜಗದ್ಗುರುಗಳಾಗಿಯೂ ಹಿರೇಮಠದವರಾಗಿಯೂ ರಾಜಪೂಜಿತರಾಗಿಯೂ ಒಳ್ಳೇ ಹೆಸರುಗಂಡ ಶೈವಮಾಹೇಶ್ವರರಾಗಿದ್ದರೆಂದು ತೋರುವದಿಲ್ಲವೆ ?

ಕ್ರಿ.ಶ. ೧೧೨೫ ರಲ್ಲಿದ್ದ ಬ್ರಹ್ಮಶಿವನೆಂಬ ಕವಿಯು ತಾನು ಒಮ್ಮೆ ಮಾಹೇಶ್ವರ ಧರ್ಮವನ್ನು ತೊರೆದು ಜೈನನಾದಂತೆ ಈ ಕೆಳಗಿನ ಪದ್ಯದಲ್ಲಿ ಹೇಳಿರುವದನ್ನು ನೋಡಿದರೆ ಆ ಕಾಲದ ಕರ್ನಾಟಕದ ಪ್ರಸಿದ್ಧ ಶೈವಧರ್ಮವು ಈ ಮಾಹೇಶ್ವರ ಸಂಪ್ರದಾಯವೇ ಎಂದು ಬಲಪಡುತ್ತದೆ.

ಪಿರಿದಳ್ತಿಯಿಂದೆ ಮಾಹೇ ।
ಶ್ವರಧರ್ಮದೊಳದರೊಳ್ಪುಗಾಣದೆ ಮಗಳ್ದಿ ॥

* ಶಿಕಾರಿಪ್ತುರ ತಾಲೂಕಿನ ೨೪೨ನೇ ಶಾಸನ ಕ್ರಿ.ಶ. ೧೧೬೩ ಮತ್ತು ೨೩೬ನೇ ಶಾಸನ ೧೧೭೪.

ಪರಮಂ ಜಿನಧರ್ಮದೊಳ ಪೊ ।
ಕ್ಕರಾಗಿ ಪೊಡೆ ಸುಕವಿ ಬ್ರಹ್ಮಶಿವನೇ ಬಲ್ಲಂ ॥+

ಈ ಮಹೇಶ್ವರ ವರ್ಗದಲ್ಲಿ ಮುನಿಗಳಿಗೆ ಕಾಳಾಮುಖರೆಂದೂ, ಸಂಸಾರಿಗಳಿಗೆ ಮಹಾಗಣಂಗಳೆಂದೂ ಹೆಸರಿದ್ದುದಾಗಿ ತಿಳಿಯುತ್ತದೆ. ಮುನಿಗಳು ಪೀಠಾಚಾರ್ಯ ರಾಗಿ ಮಠಗಳಲ್ಲಿರುತ್ತಿದ್ದರು. ಗಣಂಗಳಲ್ಲಿ ಕೆಲವರು ಶಿವಾಲಯಗಳಲ್ಲಿ ಪೂಜಾರಿಕೆಯ ವೃತ್ತಿಯನ್ನೂ, ಉಳಿದವರು ಪುರೋಹಿತ ವೃತ್ತಿಯನ್ನೂ ಮಾಡಿಕೊಂಡು ಇರು ತ್ತಿದ್ದರು.

"ಕಾಳಾಮುಖಕುಳತಿಳಕಂ" ಎಂಬುದು "ಸತ್ಯಾಶ್ರಯಕುಳತಿಳಕಂ" ಎಂಬುದರ ಹಾಗೆ ಇದೆ. ಚಾಲುಕ್ಯ ರಾಜರಲ್ಲಿ ಸತ್ಯಾಶ್ರಯ ಪುಲಿಕೇಶಿವಲ್ಲಭನು ಅತ್ಯಂತ ಪ್ರಖ್ಯಾತನಾಗಿ ರಾಜ್ಯವನ್ನು ಸ್ಥಿರಗೊಳಿಸಿದಂತೆ ಮಾಹೇಶ್ವರ ಸಂಪ್ರದಾಯದಲ್ಲಿ ಕಾಳಾಮುಖ ಸ್ವಾಮಿಯೆಂಬವನು ಉದಯಿಸಿ ಶಿವಧರ್ಮವನ್ನು ಸಮುದ್ಧರಿಸಿರ ಬಹುದಾಗಿ ತೋರುತ್ತದೆ.

ಕೆಳದಿಯ ಬಸವಪ್ಪನಾಯಕನ ಶಿವತತ್ತ್ವರತ್ನಾಕರದ ಒಂಬತ್ತನೆಯ ಕಲ್ಲೋಲದ ೪ ನೇ ತರಂಗದಲ್ಲಿ :

ಶೈವಂ ಪಾಶುಪತಂ ಕಾಲಮುಖಂ ಕಾಪಾಲಿಕಂ ತಥಾ ॥
ಬೌದ್ಧಮಾರ್ಹತಕಂ ಚೇತಿ ಸಮಯಾಷ್ಷಡುದೀರಿತಾಃ ॥
ಲಕುಲೀಶೋದಿತಂ ಶೈವಂ । ಶ್ರೀಕಂಠೋದಿತಮಿತ್ಯಪಿ ॥
ಸಾಮಾನ್ಯಾತ್ ಸಮಯಶ್ಶೈವೋ ದ್ವಿಧೈವ ಪರಿಪಠ್ಯತೇ ॥
ತತ್ರ ಪಾಶುಪತಂ ಕಾಲವಕ್ತ್ರಂ ಮಹಾವ್ರತಂತ್ವಿತಿ ॥
ಲಕುಲೀಶೋದಿತಂ ತ್ರೇಧಾ ದರ್ಶನಂ ಭಿದ್ಯತೇ ಪೃಥಕ್ ॥

ಎಂಬುದಾಗಿ ಷಟ್‌ಸಮಯಗಳಲ್ಲೊಂದಾದ ಶಿವಸಮಯದಲ್ಲಿ ಮುಖ್ಯವಾಗಿ ಲಕುಲೀಶಶೈವವೆಂದೂ, ಶ್ರೀಕಂಠಶೈವವೆಂದೂ ಎರಡು ಭೇದಗಳಿದ್ದು, ಲಕುಲೀಶಶೈವ ದಲ್ಲಿ ಪಾಶುಪತ, ಕಾಲಾಮುಖ, ಮಹಾವ್ರತಗಳೆಂಬ ಮೂರು ಶಾಖೆಗಳೊಡೆದಿವೆ.

ವಾಯವೀಯ ಸಂಹಿತೆಯ ಉತ್ತರಭಾಗದ ೨೨ ನೇ ಅಧ್ಯಾಯದಲ್ಲಿಯೂ ಕೂಡ ಹೀಗೆಯೇ ಎರಡು ಶಿವಸಮಯಗಳನ್ನು ಹೇಳಿದೆ. ಹೇಗೆಂದರೆ :

ಶೈವೈರ್ಮಾಹೇಶ್ವರೈಶ್ಚೈವ ಕಾರ್ಯಮಾರ್ತರ್ಬಹಿಃಕ್ರಮಾತ್ ॥
ಶಿವೋ ಮಹೇಶ್ವರಶ್ಚೇತಿ ನಾತ್ಯಂತಮಿಹ ಭಿದ್ಯತೇ ॥

---

+ ಕವಿಚರಿತೆಯ ಪ್ರಥಮ ಸಂಪುಟ ದ್ವಿತೀಯಾವೃತ್ತಿ, ಪುಟ ೧೩೧

ಯಥಾತಥಾ ನ ಭಿದ್ಯತೇ ಶೈವ ಮಾಹೇಶ್ವರಾ ಅಪಿ ॥
ಶಿವಾಶ್ರಿತೇಷು ತೇ ಶೈವಾ ಜ್ಞಾನ ಯಜ್ಞರತಾ ನರಾಃ ॥
ಮಾಹೇಶ್ವರಾಃ ಸುಮಾಖ್ಯಾತಾಃ ಕರ್ಮಯಜ್ಞರತಾ ಭುವಿ ॥

ಇಲ್ಲಿ ಮಾಹೇಶ್ವರರು ಕರ್ಮಮಾರ್ಗಿಗಳೆಂದು ಹೇಳಿದೆ. ಇದಕ್ಕೆ ಅನುಕೂಲವಾಗಿ ನಮ್ಮ ಈ ಕಾಳಾಮುಖರೆಂಬ ಮಾಹೇಶ್ವರರ ವಿಷಯದಲ್ಲಿ ಬೆಳಗಾಂವಿ ಜಿಲ್ಲೆಯ ಸವದತ್ತಿ ತಾಲೂಕಿನ ಹೂಲಿಯೆಂಬಲ್ಲಿಯ ಕೆರೆಸಿದ್ದೇಶ್ವರ ದೇವಾಲಯದ ಶಿಲಾಲಿಪಿಯಲ್ಲಿ ಹದಿನೇಳನೇ ಪಂಕ್ತಿಯೊಳಗೆ ಒಂದು ಪದ್ಯವಿದೆ. ಅದೇನೆಂದರೆ :

ಸ್ನಾನ ಜಪ ಹೋಮ ನಿಯಮ ।
ಧ್ಯಾನಾನುಷ್ಠಾನ ಶೀಲತತ್ಪರನು ಸ ॥
ಜ್ಞಾನನಿಧಿ ಮಾನನಿಧಿಯೆಂ ।
ದಾನಂದದೆ ಪೊಗಳ್ವುದವನಿ ಸಿದ್ಧೇಶ್ವರನಂ ॥

ಇಲ್ಲಿ ಸಿದ್ಧೇಶ್ವರನೆಂಬ ಕಾಳಾಮುಖ ಮುನಿಯು ಹೋಮಾದಿ ಕರ್ಮಗಳಲ್ಲಿ ರತನಾಗಿದ್ದದ್ದು ಕಾಳಾಮುಖರ ಕರ್ಮಮಾರ್ಗಿತ್ವವನ್ನು ಸೂಚಿಸುವದಿಲ್ಲವೇ ?

ಈ ಮಾಹೇಶ್ವರ ಸಂಪ್ರದಾಯದವರ ಹೆಸರುಗಳ ಮುಂದೆ ದೇವ, ಪಂಡಿತ, ರಾಶಿ, ಶಕ್ತಿ, ಶಿವ, ಜೀಯ ಮುಂತಾದ ಉಪಾಧಿಗಳು ಸೇರಿರುವುದುಂಟು. ಇವು ಭಿನ್ನ ಭಿನ್ನ ಸಮಯಗಳಲ್ಲಿ ಅರಸೀಕೆರೆ ತಾಲೂಕಿನ ೨೧೦ನೇ ಶಾಸನದಲ್ಲಿ ಈ ಮಾತಿಗೆ ದೃಷ್ಟಾಂತವಿದೆ. "ಕಲ್ಯಾಣಶಕ್ತಿಪಂಡಿತರ ತಮ್ಮ ಕರೀಯಜೀಯರ ಮಗಂ ಧರ್ಮರಾಶಿಪಂಡಿತಂ ಕಿರಿಯ ಮಹದೇವರಾಶಿಪಂಡಿತರ ಕಾಲಂಕರ್ಚಿ........." ಇತ್ಯಾದಿ.

ಇವರು ಲಿಂಗಧಾರಿಗಳು ಅಹುದೋ ಅಲ್ಲವೋ ಎಂಬುದನ್ನು ನಿರ್ಣಯಿಸುವುದು ಕಷ್ಟಕರವಾಗಿದೆ. ಪೂಜಾರಿಕೆಯ ವೃತ್ತಿಯನ್ನು ಮಾಡುವವರಿಗಂತೂ ಲಿಂಗಧಾರಣವಿರಲಿಲ್ಲವೆಂಬುದಕ್ಕೆ ಪ್ರಮಾಣಗಳುಂಟು. ಹೇಗೆಂದರೆ- ಶಿವಾಲಯಗಳಲ್ಲಿರುವ ಶಿಲಾಲಿಪಿಗಳ ಮೇಲ್ಭಾಗದ ಚಿತ್ರಪಟ್ಟಿಕೆಯಲ್ಲಿ ಒಂದು ಲಿಂಗವೂ, ಬಲಕ್ಕೆ ನಂದಿಯೂ, ಎಡಕ್ಕೆ ಒಬ್ಬ ಪೂಜಕನೂ ಚಿತ್ರಿಸಲ್ಪಟ್ಟಿದ್ದು ಪೂಜಕನ ಕೊರಳಲ್ಲಿ ಜನಿವಾರವೂ, ಒಂದು ಕೈಯಲ್ಲಿ ಗಂಟೆಯೂ ಇನ್ನೊಂದು ಕೈಯಲ್ಲಿ ಧೂಪಾರತಿಯೂ, ತಲೆಯ ಮೇಲೆ ಜಡೆಯೂ ಇರುವವು.

ಶಿಲಾಲಿಪಿಗಳಲ್ಲಿ "ಲಿಂಗಿಗಳು" ಎಂಬುದಕ್ಕೆ ಪರ್ಯಾಯವಾಗಿ ಮುನಿಗಳೆಂದು ಹೇಳಿರುವದರಿಂದ ಕಾಲಾಮುಖ ಮುನಿಗಳಿಗೆ ಮಾತ್ರ ಲಿಂಗಧಾರಣೆ ಇದ್ದರೂ ಇರಬಹುದು.

ಈ ಮಹಾಶ್ವೇರರು ಮಾಯಾವೀಯ ಸಂಹಿತೆಯ ಉತ್ತರ ಭಾಗದ ಹದಿಮೂರನೆಯ ಅಧ್ಯಾಯದ :

ಶೂದ್ರಾಣಾಮಂತ್ಯಜಾತಿನಾಂ
ಪತಿತಾನಾಂ ವಿಶೇಷತಃ ।
ತಥಾ ಸಂಕರಜಾತೀನಾಂ
ನಾಧ್ವಶುದ್ಧಿರ್ವಿಧೀಯಂತೆ ॥ ೬೭ ॥

ಎಂಬ ಶ್ಲೋಕದಲ್ಲಿ ಹೇಳಿದಂತೆ ವಿಶಿಷ್ಟ ಮರ್ಯಾದೆಗೊಳಪಟ್ಟಿರಲಿಕ್ಕೇ ಬೇಕು. ಅಂತೆಯೇ ಜಾತಿ ಬಂಧನವನ್ನು ಕಿತ್ತಿಹಾಕುವುದಕ್ಕೆ ಹೊರಟ ಬಸವಾದಿ ಶರಣರ ಚಳವಳಿಯು ಈ ಪುರಾಣ ಮತವಾದಿಗಳಿಗೆ ಬಹುದಿನ ರುಚಿಸಲಿಲ್ಲವೆಂದು ತೋರುತ್ತದೆ. ಅಂತೆಯೇ ವಿಜಯನಗರದ ಪ್ರೌಢದೇವರಾಯನ ಕಾಲದವರೆಗೂ ಇವರು ಬಸವನ ಹೊಸ ಸುಧಾರಣೆಗೆ ದೂರವಾಗಿ ಸಿಡಿದು ನಿಂತಿದ್ದರೆಂದು ತೋರುತ್ತದೆ. ಕ್ರಿಸ್ತಶಕದ ೧೪೪೯ ರಿಂದ ೧೪೪೫ರ ವರೆಗೆ ಆಳಿದ ಪ್ರೌಢದೇವರಾಯನ ಮಂತ್ರಿಗಳಲ್ಲಿ ಲಕ್ಕಣ್ಣ ದಂಡೇಶನೂ, ಜಕ್ಕಣಾಚಾರ್ಯನೂ ಲಿಂಗವಂತ ಮತ ಪ್ರಚಾರಕವಾಗಿ ನಿಂತಿದ್ದರಿಂದಲೂ ಮುಂದೆ ವಿರೂಪಾಕ್ಷರಾಯನ ಆಳಿಕೆಯಲ್ಲಿ (೧೪೬೭ – ೧೪೭೮) ತೋಂಟದ ಸಿದ್ಧಲಿಂಗ ಯತಿಯು ಒಳ್ಳೇ ಬೆಳಕಿಗೆ ಬಂದದ್ದರಿಂದಲೂ ಮೊದಲಿನ ಮಾಹೇಶ್ವರರೆಲ್ಲಾ ಹೊಸಪಂಥದ ಗುರುವರ್ಗವಾಗಿ ಸೇರಿದರು.

ಆ ಕಾಲದಲ್ಲಿಯೂ ಸೇರದೆ ಇನ್ನೂ ಹೊರಗೆ ಉಳಿದ ಆ ಪ್ರಾಚೀನ ಮಾಹೇಶ್ವರ ಧರ್ಮದ ಭಗ್ನಾವಶೇಷವನ್ನು ಈಗಲೂ ಕಾಣಬಹುದು. ಅವರು ಯಾರೆಂದರೆ:

ಪ್ರಾಚೀನ ಮಾಹೇಶ್ವರರಲ್ಲಿ ಮುನಿಗಳಿಗೆ "ಗೊರವ"ರೆಂದೂ ಪೂಜಾರಿಗಳಿಗೆ "ಜೀಯ"ರೆಂದೂ ಉಪನಾಮಗಳಿದ್ದವಷ್ಟೇ ? ಈಗಲೂ ಕೂಡ ಅದೇ ಹೆಸರುಗಳಿಂದ ಒಂದು ಜಾತಿಯು ಅಲ್ಲಲ್ಲಿಗೊಂದು ಮನೆತನವಾಗಿ ಉಳಿದುಕೊಂಡಿದೆ. ಇವರನ್ನು ಉತ್ತರ ಕರ್ನಾಟಕದಲ್ಲಿ "ಗೊರವರು" ಅಥವಾ "ಗೊರ್ರು" ಎಂದೂ ದಕ್ಷಿಣ ಕರ್ನಾಟಕದಲ್ಲಿ "ಜೀರರು" ಅಥವಾ "ಜೀರ್ರು" ಎಂತಲೂ ಕರೆಯುವದುಂಟು. ಇವರು ಜನಿವಾರವನ್ನೂ ಹಾಕುವರು, ವಿಭೂತಿಯನ್ನೂ ಧರಿಸುವರು, ಶಿಖೆಯನ್ನೂ ಇಡುವರು.

ಪ್ರಾಚೀನ ಮಾಹೇಶ್ವರರ ಮತ ತತ್ತ್ವಗಳಿಗೂ, ಬಸವನ ಕಾಲದ ಶಿವಶರಣರ ಮತ ತತ್ತ್ವಗಳಿಗೂ ಭೇದವಿಲ್ಲದೆ ಇಲ್ಲ. ಪ್ರಾಚೀನರು ಕರ್ಮಮಾರ್ಗಾವಲಂಬಿಗಳಾಗಿ ವಿಶಿಷ್ಟ ಜಾತಿಮರ್ಯಾದೆಯಲ್ಲಿ ಹುದುಗಿಕೊಂಡಿದ್ದರು. ಆದರೆ ಮುಂದಿನ ಕಾಲದ ಶರಣರು ಜ್ಞಾನಭಕ್ತಿಗಳನ್ನವಲಂಬಿಸಿ ಜಾತಿ ವಿಜಾತಿಯೆನ್ನದೆ ಸರ್ವರನ್ನೂ ಶುದ್ಧೀಕರಣದಲ್ಲಿ ಸೆಳೆಯತೊಡಗಿದರು. ಪ್ರಾಚೀನರ ತತ್ತ್ವದಲ್ಲಿ ಪಶು, ಪಾಶ, ಪತಿ ಎಂಬ ತ್ರಯಿಗಿದ್ದ ಪ್ರಾಧಾನ್ಯವು ಶರಣರ ಕಾಲದಲ್ಲಿ ಜೀವ, ಶಕ್ತಿ, ಶಿವ ಎಂಬ ತ್ರಯಿಗೆ ಬಂದಿತು.

ಹಿಂದೆ ೧೯೨೭ ರಲ್ಲಿ ನಾನು "ಹೂಲಿಯ ಪಂಚವಣ್ಣಿಗೆಯ ಮಂಠ"ದ ಪೂರ್ವೇತಿಹಾಸವನ್ನು ಸಂಶೋಧಿಸುತ್ತಿರುವಾಗ ಈ ತಾತ್ವಿಕ ತಾರತಮ್ಯವು ನನಗೆ ಹೆಚ್ಚಾಗಿ ಹೊಳೆದಿರಲಿಲ್ಲ. ಅಲ್ಲದೆ ಆ ಮಠದ ಗ್ರಂಥಗಳಲ್ಲೊಂದಾದ "ಶಿವಾದ್ವೈತ ದರ್ಪಣ"ವೂ ಇನ್ನೂ ಅಚ್ಚಾಗಿರದೆ ಇದ್ದುದರಿಂದ ನನಗೆ ಸಂಪೂರ್ಣವಾಗಿ ಓದುವ ದಕ್ಕೂ ಅದು ಸಿಕ್ಕಿರಲಿಲ್ಲ. ಈಗ ಅದು ಅಚ್ಚಾಗಿ ಕೈಗೆ ಬಂದಿದೆ. ಅದರ ವಿಷಯ ಈಗ ಚೆನ್ನಾಗಿ ಹೇಳಬಲ್ಲೆನು.

'ಶಿವಾದ್ವೈತ ದರ್ಪಣ'ದ ಪೀಠಿಕಾ ಪ್ರಕರಣದಲ್ಲಿ ಹೇಳಿರುವ ಗ್ರಂಥಕಾರನ ಪೂರ್ವಪರಂಪರೆಯನ್ನು ನೋಡಿದರೆ ಆ ಮಠದ ಪಟ್ಟಾವಲಿಯ ಪ್ರಕಾರ ಕ್ರಿ.ಶ. ಮೂರನೇ ಶತಮಾನದ ಮಧ್ಯದಲ್ಲಿ ಅದು ರಚಿಸಲ್ಪಟ್ಟಿತೆಂದು ಸಿದ್ಧವಾಗುತ್ತದೆ. ಆದರೆ ಅದರಲ್ಲಿ ಕಂಡು ಬರುವ ಆಧುನಿಕ ವಿಷಯಗಳು ಅದರ ಪ್ರಾಚೀನತೆಯನ್ನು ನಿಷಿದ್ಧಗೊಳಿಸುತ್ತವೆ. ಇತಿಹಾಸ ಸಂಶೋಧನದ ಮರ್ಮವು ಇತಿಹಾಸ ಸಂಶೋಧಕ ರಿಗೇ ಗೊತ್ತು. ಆದರೆ ಆ ದೃಷ್ಟಿಯಲ್ಲಿ ಪರಿಪೂರ್ಣರಲ್ಲದ ಅದರ ಪ್ರಕಾಶಕ ಮಹಾಶಯರು ಸಮರ್ಥ ವಿದ್ವಾಂಸರಿದ್ದರೂ ಅದನ್ನು ಪ್ರಾಚೀನವೆಂದೇ ನಂಬಿ ಬಿಟ್ಟಿದ್ದಾರೆ. ಆ ಗ್ರಂಥವು ಪ್ರಾಚೀನವಲ್ಲವೆಂಬುದಕ್ಕೆ ಅದರಲ್ಲಿಯೇ ಸಿಕ್ಕುವ ಪ್ರಮಾಣಗಳಾವವೆಂದರೆ :

(೧) ಭಕ್ತದೇಹಿಕ ದೇವನೆಂದು ಹೇಳುವಾಗ (೪೯)ನೆಯ ಪುಟದಲ್ಲಿ ಸ್ವೀಕರಿಸಿದ ಅನ್ಯ ಗ್ರಂಥ ಪ್ರಮಾಣವು ಕ್ರಿ. ಶ. ೧೧ ನೇ ಶತಮಾನಕ್ಕಿಂತ ಈಚೆಗಿನದಿದೆ, ಅದು—

ಪೀಠ ಪಾದಾದಿ ಜಾನ್ವಂತಂ
ಆನಾಭೇರ್ಮಧ್ಯಮೀರಿತಂ ।
ಹೃದಯಾಂತ ವರ್ತುಲಸ್ಯಾತ್
ಕಂಠಾಂತಂ ಗೋಮುಖಂ ಸ್ಮೃತಂ ।
ಭ್ರೂಮಧ್ಯಾಂತಂ ಲಿಂಗಕಂಠೋ
ಮಸ್ತಕೋ ಲಿಂಗಮಸ್ತಕಃ ॥

ಈ ವರ್ಣನೆಯು ವರ್ತುಲಾಕಾರದ ಡಮರುಗ ಪೀಠದ ಲಿಂಗಕ್ಕೂ, ಮಾನವಾಕೃತಿಗೂ ಸರಿಹೋಲುತ್ತದೆ. ಆದರೆ ರಾಷ್ಟ್ರಕೂಟದ ರಾಜ್ಯವು ಮುರಿದು ಕಲ್ಯಾಣದ ಚಾಲುಕ್ಯರ ರಾಜ್ಯವೆದ್ದು ಸ್ಥಿರಶಾಂತಿಯುಂಟಾಗುವವರೆಗೂ ಲಿಂಗಪೀಠವು ಚಚ್ಚೌಕಾಗಿಯೇ ಇದ್ದಿತೆಂಬುದಕ್ಕೆ ಆ ಕಾಲದ ಶಿವಾಲಯಗಳಲ್ಲಿ ನೋಡಿ ತಿಳಕೊಳ್ಳ ಬಹುದು. ಎಷ್ಟೋ ಮಟ್ಟಿಗೆ ಪ್ರಾಚೀನವೆಂದೆನಿಸುವ ವಿದ್ಯೇಶ್ವರ ಸಂಹಿತೆಯಲ್ಲಿ ಇದೇ ವಿಷಯವು ತತ್ಕಾಲೋಚಿತವಾಗಿ ಯಥಾರ್ಥವಾಗಿ ವರ್ಣಿಸಲ್ಪಟ್ಟಿರುವುದನ್ನು ಇಲ್ಲಿ ಮೇಲಿನ ಶ್ಲೋಕದೊಡನೆ ತುಲನೆ ಮಾಡಿ ನೋಡಬಹುದು, ಅದು :

ನಾಭೇರಧೋ ಬ್ರಹ್ಮ ಭಾಗಂ
ಆಕಂಠ ವಿಷ್ಣು ಭಾಗಕಂ ।
ಮುಖಂ ಲಿಂಗಮಿತಿ ಪ್ರೋಕ್ತಂ
ಶಿವಭಕ್ತ ಶರೀರಕಂ ॥

ಇದು ಮಾತ್ರ ಪ್ರಾಚೀನ ವರ್ಣನೆ, ಬೇರಿಲ್ಲದೆಯಿರುವದರಿಂದ ಪ್ರಸ್ತುತ ಗ್ರಂಥವು ಪ್ರಾಚೀನ ಕಾಲದ್ದಲ್ಲ.

(೨) ಗ್ರಂಥಾಂತ್ಯದ ಗದ್ಯದಲ್ಲಿ—

"......ಪೂವಲ್ಲೀ ಪಂಚವರ್ಣ ಮಹಾಮಠಾಧಿಷ್ಠಿತ ಶ್ರೀ ಶಿವಾನುಭವ ಶಿವಾಚಾರ್ಯ ವಿರಚಿತ......" ಎಂದು ಹೇಳಿದೆ. ಆದರೆ ಪೂವಲ್ಲಿಯೆಂಬುದು ಹೂಲಿಯ ಪ್ರಾಚೀನ ನಾಮವಲ್ಲ. ೧೬ನೇ ಶತಮಾನದಲ್ಲಿ ರಚಿತವಾದ ರಾಘವಾಂಕ ಚರಿತ್ರ ಮತ್ತು ಗುರುರಾಜ ಚರಿತ್ರದಲ್ಲಿ ಮಾತ್ರ ಈ ಹೆಸರು ಸಿಕ್ಕುತ್ತದೆ. ತತ್ಪೂರ್ವದ ಶಿಲಾಲಿಪಿಗಳಲ್ಲಿ 'ಪೂಲಿ" ಎಂದೇ ಇದೆ.

೧೫-೧೬ನೇ ಶತಮಾನಗಳಿಗಿಂತ ಮುಂಚೆ ಇವರ ಮಠಕ್ಕೆ ಪಂಚವಣ್ಣಿಗೆಯ ಮಠವೆಂದು ಹೆಸರಿರಲಿಲ್ಲ. ಕ್ರಿ. ಶ. ೧೧೦೪ರಲ್ಲಿ ಬರೆದ ಹೂಲಿಯ ಶಿಲಾಲಿಪಿಯಲ್ಲಿ ಈ ಮಠವು ಕಾಲಾಮುಖಸ್ಥಾನವೆಂದು ಸ್ಪಷ್ಟವಾಗಿ ಉಲ್ಲೇಖವಿದೆ. ಆದುದರಿಂದ ಶಿವಾದ್ವೈತ ದರ್ಪಣವು ಪ್ರಾಚೀನವಲ್ಲ.

(೩) ಶಿವಾದ್ವೈತ ದರ್ಪಣದಲ್ಲಿ ಕಂಡು ಬರುವ ಕೆಳಗಿನ ಪ್ರಬಂಧ ಶೈಲಿಯು ಪಾಶ್ಚಾತ್ಯ ಪ್ರಬಂಧ ಪದ್ಧತಿಯಾಗಿದೆ. ಅದು—

(ಅ) "......ಇತಿ ವಿಸ್ತರೇಣ ಪ್ರಪಂಚಿತಂ ವಿಸ್ತರ ಭಯಾನ್ನೇಹ ಲಿಖ್ಯತೇ" (ಪುಟ ೪೬)

(ಬ) "...ಸಚಾಸ್ಮತ್ಕೃತ ಶಿವಾನುಭವ ಸಿದ್ಧಾಂತೇ ವಿಸ್ತರೇಣ ಪ್ರತಿಪಾದಿತ ಇತ್ಯತ್ರೈವ ವಿರಮ್ಯತೇ" (ಪುಟ ೫೦)

ಇವೆಲ್ಲ ಕಾರಣಗಳಿಂದ ದರ್ಪಣವು "ನಾತಿಪ್ರಾಚೀನ"ವಾಗಿದೆ. ಅಂತೆಯೇ ಈ ಗ್ರಂಥದಲ್ಲಿ ಪ್ರತಿಪಾದಿತವಾದ ತತ್ತ್ವವಿಷಯವು ಪ್ರಾಚೀನ ಮಾಹೇಶ್ವರರ ತತ್ತ್ವವಲ್ಲವೆಂಬುದು ಸ್ಪಷ್ಟವಿದೆ.

ಲಿಂಗಗಳ ವಿಷಯದಲ್ಲಿ ಸಿಕ್ಕುವ ಅತಿ ಪ್ರಾಚೀನ ಉಲ್ಲೇಖಗಳನ್ನು ಕೊಟ್ಟು ನನ್ನ ಲೇಖನವನ್ನು ಮುಗಿಸುವೆನು :

ರಾಜಾ ಗುರುದಾಸ ಸ್ಟ್ರೀಟ ಭಾರತ ಯಂತ್ರದಲ್ಲಿ ಶ್ರೀ ಪ್ರತಾಪಚಂದ್ರರಾಯ ರಿಂದ ಮುದ್ರಿತವಾದ ಮಹಾಭಾರತ (೪೧ ನೇ ಖಂಡದ) ಅನುಶಾಸನ ಪರ್ವದ ೨೨ ನೇ ಅಧ್ಯಾಯದ ಆರಂಭದ ಎರಡು ಶ್ಲೋಕಗಳು :

ಯುಧಿಷ್ಠಿರ ಉವಾಚ—

ಕಿಮಾಹರ್ಭರತ ಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಾಃ ।
ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣಂ ವಾಪ್ಯಲಿಂಗಿನಂ ॥ ೧ ॥

ಭೀಷ್ಮ ಉವಾಚ—

ಸ್ವವೃತ್ತಿಮಭಿಪನ್ನಾಯ ಲಿಂಗಿನೇ ಚೇತರಾಯಚ ।
ದೇಯ ಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥ ೨ ॥

ಕಲಕತ್ತೆಯ ಶ್ರೀ ವಸಂತಕುಮಾರ ಭಟ್ಟಾಚಾರ್ಯ ಸಂಪಾದಿತ ಸ್ವಪ್ನಫಲ ವಿಜ್ಞಾನವೆಂಬ ಗ್ರಂಥದಲ್ಲಿ :

ದೇವತಾಶ್ಚ ದ್ವಿಜಾ ಗಾವಃ ಪಿತರೋ ಲಿಂಗಿನಸ್ತಥಾ ।
ಯದ್ದದಾತಿ ಮಿಥಃ ಸ್ವಪ್ನೇ ತತ್ತಥೈವ ಭವಿಷ್ಯತಿ ॥ ೨೮ ॥

ಕಲಕತ್ತೆಯ ವಸುಮತಿ ಸಾಹಿತ್ಯ ಮಂದಿರದಿಂದ ಪ್ರಕಾಶಿತವಾದ ಕಾಲಿದಾಸ ಗ್ರಂಥಾವಲಿಯ ದ್ವಾತ್ರಿಂಶತ್ ಪುತ್ತಲಿಕಾ ಕಥಾ ಪ್ರಬಂಧದ ಚತುರ್ಥೋಪಾಖ್ಯಾನ ದಲ್ಲಿ :

ಉಕ್ತಂಚ ಸ್ವಪ್ನಾಧ್ಯಾಯೋ—
ದೇವೋ ದ್ವಿಜೋ ಗುರುರ್ಗಾವಃ ಪಿತರೋ ಲಿಂಗಿನೋ ನೃಪಃ ।
ಯದ್ವದಂತಿ ವಚಃಸ್ವಪ್ನೇ ತತಥೈವ ವಿನಿರ್ದಿಶೇತ್ ॥

ಇಲ್ಲಿ ಮುಖ್ಯವಾಗಿ ಹೇಳಬೇಕಾದದ್ದೇನಂದರೆ ಕೊನೆಯ ಎರಡು ಗ್ರಂಥಗಳ ಸಂಪಾದಕರಾದ ಬಂಗಾಲೀ ಪಂಡಿತರೂ ಕೂಡ ನಮ್ಮ ಪ್ರಾಚೀನ ಶಿಲಾಲಿಪಿಕಾರರಂತೆ "ಲಿಂಗಿನ್" ಎಂಬ ಶಬ್ದಕ್ಕೆ "ಸನ್ಯಾಸಿ" ಎಂತಲೇ ಟೀಕೆ ಬರೆದಿದ್ದಾರೆ. ಅವರು ಯಾವ ಪ್ರಾಚೀನ ಆಧಾರಗಳಿಂದ ಹಾಗೆ ಬರೆದರೋ ತಿಳಿಯದು.

ಇತಿಹಾಸ ಸಂಶೋಧಕರಿಗೆ ಇನ್ನೂ ಹೆಚ್ಚು ಸಂಶೋಧನ ಮಾಡುವದಕ್ಕೆ ನನ್ನ ಈ ಪ್ರಬಂಧವು ತುಸುವಾದರೂ ಸಹಾಯಕವಾಗದಿರದೆಂದು ನಂಬಿರುವೆನು.

(ಜ. ಕ. ೯–೧. ನವ್ಹಂಬರ ೧೯೩೦)

# ಪ್ರಾಚೀನ ಕಾಲದ ಒಬ್ಬ ನಟಶ್ರೇಷ್ಠ ಹಾಗೂ ಒಬ್ಬ ಆದಿಕವಿ

---

ವಿಜಾಪುರ ಜಿಲ್ಲೆಯಲ್ಲಿರುವ ಪಟ್ಟದಕಲ್ಲಿನ ಪ್ರಖ್ಯಾತ ದೇವಸ್ಥಾನದ ವಿರೂಪಾಕ್ಷೇಶ್ವರ ಮಂದಿರದ ಮೂಡಣ ಮಂಟಪದಲ್ಲಿರುವ ಎರಡು ಚಿಕ್ಕ ಶಿಲಾಲೇಖ ಗಳಿಂದ ಸುಮಾರು ಕ್ರಿಸ್ತಶಕದ ಎಂಟನೆಯ ಶತಮಾನದ ಕೊನೆಯ ಭಾಗದಲ್ಲಿ ಕರ್ನಾಟಕದ ನಾಟ್ಯಕಲೆಯು ಉಚ್ಚಸ್ಥಿತಿಯಲ್ಲಿತ್ತೆಂದು ತಿಳಿದು ಬರುವದರಿಂದ ಅವೆರಡೂ ಶಿಲಾಲೇಖಗಳನ್ನು ಇವರಡಿಯಲ್ಲಿ ಕೊಟ್ಟಿರುವೆನು.

೧ನೆಯ ಶಿಲಾಲೇಖ

(ಈಶಾನ್ಯ ದಿಕ್ಕಿನ ಕಂಬದ ಮೇಲೆ ಪಶ್ಚಿಮ ಮಗ್ಗಲಿಗೆ)

೧) ಭರತ ನುತ ವಚನ ರಚನಾ ವಿರಚಿತ ನಟಸೇವ್ಯ*
೨) ಸಿಂಘ ನಾದೇನ ವರನಟ ಮದಾಂಧ ಹಸ್ತಿಃ ಪರಿಹೀನದೋ
೩) ಭವತ್ಯೇವ॥ ನಟಸೇವ್ಯ ಭರತ ಮತಯುಂತ ಪಟುಂತ
೪) ರ ವಚನಾಶನಿ ಪ್ರಪಾತೇನ ಕುಟಿಲೋನ್ನತ ನಟಶೈಲ
೫) ಸ್ಫುಟಿತಾನತ ಮಸ್ತಕಃ ಪತತಿ॥ ಅಚಲನ್†

೨ ನೆಯ ಶಿಲಾಲೇಖ

( ದಕ್ಷಿಣದ ಗೋಡೆಯ ಒಳಮಗ್ಗಲಿಗೆ )

೧) ಖ್ಯಾತ ಮಹಾಪ್ರಭಾವ ಭರತಾಗಮಯುಂಕ್ತ ಬಹು ಪ್ರಕಾ
೨) ರದಾ ಮಾತಿನೊಳೆಲ್ಲಮೇನೋ ನಟಸೇವ್ಯನ ಮುನ್ತೆ ಎಥೋ
೩) ಕ್ತ ಮಾರ್ಗದಿನ್ದೀ ತೆರದಿಳ್ದುದಗ್ರತರ ಸಞ್ಚರಮಂಮ್ಬ
೪) ದಿದೆನ್ದು ಪೇಳ್ವೊಡಿನ್ನಾತನೆ ನರ್ತಕಂ ನಟ

---

* ಇದು ಬಿರುದಾಗಿರಬಹುದು : ಹೆಸರಿನ ಉಲ್ಲೇಖವಿಲ್ಲ.

† ಅಚಲನ್ : ಇವನು ಈ ಶಿಲಾಲೇಖವನ್ನು ರಚಿಸಿದ ಕವಿಯಾಗಿರಬಹುದು : ಇದುವರೆಗೆ ಹೆಸರು ಗೊತ್ತಾದ ಪ್ರಾಚೀನ ಕವಿಗಳಲ್ಲೆಲ್ಲ ಇವನೇ ಮೊದಲಿನವನು. ಇವನ ತಂದೆ ದೇವಯ್ಯ. ಇದಕ್ಕಿಂತ ಹೆಚ್ಚಿಗೇನೂ ತಿಳಿಯದು.

೫) ರೊಳಗ್ಗಳಮೀ ಭುವನಾನ್ತರಾಳದೊಳ್ ದೇವಯ್ಯ

೬) ಗಳಾ ಮಗ ಅಚಲನ್

ಅರ್ಥ : ಭರತ ಮುನಿಯಿಂದ ಪ್ರಶಂಸಿತನಾದ ರೀತಿಯಲ್ಲಿ ನಟಸೇವ್ಯನಂಗೈದ ವಚನ ರಚನೆಯೆಂಬ ಸಿಂಹನಾದದಿಂ ಅನ್ಯ ನಟವರ್ಗವೆಂಬ ಮದಾಂಧವಾದ ಮದ್ದಾನೆಯು ಮದಹೀನವಾಗುತ್ತದೆ ॥ ನಟಸೇವ್ಯನ ಭರತ ಶಾಸ್ತ್ರೋಕ್ತವಾದ ಪಟುತರ ವಾಣಿಯೆಂಬ ವಿದ್ಯುತ್ಪಾತದಿಂದ ಹುರುಳಿಲ್ಲದ ಹೊರಹೊಂಪುದೋರಿ ಬೆಳಕಿಗೆ ಬಂದ ಅನ್ಯ ನಟವರ್ಗವೆಂಬ ಬೆಟ್ಟವು ಒಲೆದು ಬಾಗಿ ತೆಲೆಕೆಳಗಾಗುತ್ತದೆ.॥

ವಿಖ್ಯಾತವೂ ಮಹಾ ಪ್ರಭಾವಶಾಲಿಯೂ ಆದ ಭರತ ಶಾಸ್ತ್ರಕ್ಕೆ ಸರಿಹೋಗುವ ಬಹುಪ್ರಕಾರದ ವಿಷಯಗಳಲ್ಲೆಲ್ಲ ನಟಸೇವ್ಯನ ಮುಂದೆ ಯಥೋಕ್ತ ಮಾರ್ಗದಿಂದ ಸಾಗುವದೆಂದರೆ ಅನ್ಯ ನಟವರ್ಗಕ್ಕೆ ಏರುಳ್ಳ ನೆಲವನ್ನೇರಿದಂತಾಗುವದೆಂದು ಹೇಳ ಬಹುದು. ಹೀಗೆಂದ ಬಳಿಕ ಈ ಭುವನಾಂತರಾಳದಲ್ಲಿ ಅವನೊಬ್ಬನೆ ನರ್ತಕನು; ಅವನೊಬ್ಬ ನಟಶ್ರೇಷ್ಠ.

ಟಿಪ್ಪಣಿ : ಈ ಶಿಲಾಲೇಖಗಳಿಂದ ಆ ಕಾಲದ ಒಬ್ಬ ಪ್ರಖ್ಯಾತ ನಟಶ್ರೇಷ್ಠನ ವಿಷಯವು ಗೊತ್ತಾದದ್ದೊಂದಲ್ಲದೆ ಕವಿಚರಿತೆಗೆ ಸೇರುವದಕ್ಕೆ ಒಬ್ಬ ಪ್ರಾಚೀನ ಕವಿಯೂ ಸಿಕ್ಕ ಹಾಗಾಯಿತು. ಕನ್ನಡದಲ್ಲಿ ಹೆಸರು ಗೊತ್ತಾದ ಕವಿಗಳೊಳಗೆ ಈ ಅಚಲನೇ ಮೊಟ್ಟ ಮೊದಲಿಗನು.

( ಜ. ಕ. ೯–೫. ೬ ಎಪ್ರಿಲ್ ೧೯೩೦ )

# ಬಸವಣ್ಣನವರ ಭೋಜನಶಾಲೆ

---

ಶ್ರೀ ಬಸವಣ್ಣನವರು ಕಲ್ಯಾಣ ಪಟ್ಟಣದಲ್ಲಿ ಪ್ರತಿ ದಿವಸ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜನರಿಗೆ ಊಟ ಮಾಡಿಸುತ್ತಿದ್ದರೆಂಬ ಸಂಗತಿಯನ್ನು ಓದುತ್ತಿದ್ದ ಹಾಗೆಲ್ಲಾ ಒಂದು ಸಂದೇಹವು ತಟ್ಟನೆ ಮನಸ್ಸಿನಲ್ಲಿ ಏಳುತ್ತದೆ. ಅದೇನಂದರೆ, ಒಬ್ಬರ ಮನೆಯಲ್ಲಿ ಇಂಥ ದೊಡ್ಡ ಪಂಕ್ತಿಯ ಭೋಜನವು ಶಕ್ಯವೆ ? ಸಹಜವೆ ?? ಮೇಲೆ ಕಾಣಿಸಿದ ಸಂಖ್ಯೆಯಲ್ಲಿ ಅತಿಶಯೋಕ್ತಿಯಿರಲಾರದೆ ? ಇದಕ್ಕೆ ಐತಿಹಾಸಿಕ ಭಿತ್ತಿಯಿರಬಹುವೆ ?

ಎರಡು ಸಾವಿರ ವರ್ಷಗಳಿಗಿಂತ ಮುಂಚೆ ಆಳಿದ ಅಶೋಕ ಚಕ್ರವರ್ತಿಯು ಗಿರ್ವಾಣ ಪರ್ವದಲ್ಲಿ ಬರೆಯಿಸಿದ ಚತುರ್ದಶಗಿರಿ ಲಿಪಿಗಳೊಳಗೆ ಮೊದಲನೆಯದರಲ್ಲಿ ಅಹಿಂಸೆಯ ಆಜ್ಞೆಯನ್ನು ಹೇಳುತ್ತ :

“ಪೂರಾ ಮಹಾನಸಮ್ಹಿ ದೇವಾನಂಪಿಯಂ ಪಿಯದಸಿನೊ ರಾಜ್ಞೊ ಅನಂ ದಿವಸಂ ಬಹೂನಿ ಪ್ರಾಣ ಸತಸಹಸ್ರಾಣಿ ಆರಭಿಸು ಸೂಪಾಥಾಯ”

“ಮೊದಲು ದೇವಪ್ರಿಯನೂ ಪ್ರಿಯದರ್ಶಿಯೂ ಆದ (ಅಶೋಕ) ರಾಜನ ಅಡುಗೆಯ ಮನೆಯಲ್ಲಿ ಆತನಿಗೆ ವ್ಯಂಜನ ಪದಾರ್ಥಗಳನ್ನು ಸಿದ್ಧಪಡಿಸುವ ಸಲುವಾಗಿ ಪ್ರತಿದಿವಸವೂ ಬಹು ಶತಸಹಸ್ರ ಪ್ರಾಣಿಗಳು ಹತವಾಗುತ್ತಿದ್ದವು” ಎಂದು ತನ್ನ ಅರಮನೆಯ ಭೋಜನಶಾಲೆಯ ಲೆಕ್ಕವನ್ನು ಹೇಳಿದ್ದಾನೆ. ಅಡುಗೆಗೇ ಬಹುಲಕ್ಷ ಪ್ರಾಣಿಗಳ ವಧೆಯಾಗುತ್ತಿರುವಾಗ ಭೋಜನಕ್ಕೆ ಬರುವವರು ಇನ್ನೆಷ್ಟು ಲಕ್ಷ ಜನರಾಗಿದ್ದಿರಬಹುದು ? ಮೇಲಾಗಿ ಇದು ಐತಿಹಾಸಿಕ ಲೇಖನವಾಗಿರುವದರಿಂದ ಇದರಲ್ಲಿ ಅತಿಶಯೋಕ್ತಿಗೆ ಆಸ್ಪದವಿಲ್ಲ. ಅಶೋಕ ರಾಜನ ಅರಮನೆಯಲ್ಲಿ ಅನುದಿನವೂ ಬಹು ಶತಸಹಸ್ರ ಜನರ ಭೋಜನವಾಗುತ್ತಿದ್ದರೆ ಬಸವಣ್ಣನವರ ಮನೆಯಲ್ಲಿ ಬರೇ ದ್ವಿಶತ ಸಹಸ್ರ (ಎರಡು ಲಕ್ಷ) ಜನರ ಊಟವಾಗುತ್ತಿರುವಲ್ಲಿ ಅತಿಶಯೋಕ್ತಿಯೇನು ?

ಇದಲ್ಲದೆ ಇನ್ನೊಂದು ಸಾಕ್ಷಿಯೂ ಸಿಕ್ಕುತ್ತದೆ. ಮೂರು ಸಾವಿರ ವರುಷಗಳ

ಹಿಂದೆ ಪಶ್ಚಿಮ ಏಶಿಯಾ ಖಂಡದಲ್ಲಿ ಆಳಿದ ಸೊಲೊಮೋನನೆಂಬ ರಾಜನ ಸಹ ಪಂಕ್ತಿಯ ಪ್ರತಿ ದಿನದ ಲೆಕ್ಕವು ಬಾಯ್ಬಲ್ಲಿನಲ್ಲಿ ಹೇಳಿದ್ದು ಹೇಗೆಂದರೆ ;

"ಸೊಲೊಮೋನನ ಅರಮನೆಗೆ ದಿನಂಪ್ರತಿ ಬೇಕಾಗುವ ಆಹಾರ ಪದಾರ್ಥಗಳು ಗೋದಿಯ ಹಿಟ್ಟು ಮೂವತ್ತು ಕೋಕ್ (ಅಂದರೆ ಅರವತ್ತು ಖಂಡಗ) ಮತ್ತು ಜವೆಗೋದಿಯ ಹಿಟ್ಟು ಅರವತ್ತು ಕೋಕ್ (ಅಂದರೆ ನೂರಾ ಇಪ್ಪತ್ತು ಖಂಡಂಗ) ಕಟ್ಟಿ ಮೇಯಿಸಿದ ಎತ್ತುಗಳು ಹತ್ತು, ಹಾಗೂ ಬಿಟ್ಟು ಮೇಯಿಸಿದ ಎತ್ತುಗಳು ಇಪ್ಪತ್ತು ಮತ್ತು ನೂರು ಕುರಿಗಳು. ಇವುಗಳ ಹೊರತು ದುಪ್ಪಿ, ಜಿಂಕೆ, ಸಾರಗ, ಕೊಬ್ಬಿದ ಕೋಣಗಳು ಇವು ಬೇರೆ."*

ಇವೆಲ್ಲ ಪ್ರಮಾಣಗಳನ್ನು ನೋಡಿದರೆ ದೊಡ್ಡದೊಡ್ಡವರ ಮನೆಯಲ್ಲಿ ಅವರ ಕಾರ್ಯಕಲಾಪದ ಜನರೆಲ್ಲ ಏಕತ್ರವಾಗಿ ಊಟ ಮಾಡುವ ಪದ್ಧತಿಯಿತ್ತೆಂದು ಕಂಡು ಬರುತ್ತದೆ.

(ಜ. ಕ. ೧೩-೨, ಜನೇವರಿ ೧೯೩೫)

---

* ಹಳೆ ಒಡಂಬಡಿಕೆಯ- ಆರನೆಯ ಆವೃತ್ತಿಯ ಪುಟ ३೮೦

# ಹಲಸಂಗಿಯ ಹಿಂದಿನ ಇತಿಹಾಸ

---

(ಹಳೆಯ ಕಾಗದದ ಮೇಲಿಂದ)

[ ಹಳೆಯ ಕಾಗದದ ಒಡೆಯರು : ಶ್ರೀ ವೆಂಕಟೇಶ ಬಳವಂತ ಕುಲಕರ್ಣಿ ]

— ಮಸೂದಾ ಹಿಂದಿನ ಹಳೀ ಕಾಗದದ ಮೇಲಿಂದ ಇಳಿಸಿರುತ್ತದೆ.

೧. ಯಾದದಾಸ್ತ -ದಿಲ್ಲೀ ಬಾದಶಹಾನ ಹುಕುಂ ಆಯಿತಲ್ಲಾ—

ದಕ್ಷಿಣ ದೇಶದಲ್ಲಿ ನಮ್ಮ ಸ್ವಥಾ ಜಾತಿಯಿಂದ ಕಿಲ್ಲೇ ಕಟ್ಟಿ ಸರಂಜಾಮು ಅಂದ್ರೆ ಲಷ್ಕರಿ ಇಡಲಿಕ್ಕೆ ಜಾಗ ಮಾಡಬೇಕು. ಸದರೀ ಹುಕುಮದ ಮೇಲಿಂದ ಸುಲತಾನ ಬಾದಶಹಾ ಈತನು ಖಾಜೀಜ್ಯಹಾನ್ ಸರದಾರಗ ಕಳಿಸಿಕೊಟ್ಟನು. ಆತನು ಈ ಸರಹದ್ದಿಗೆ ಬಂದು ಹಲಸಂಗಿಯಲ್ಲಿ ಸಂಗಿ ಅಂಬುವಾಕಿ ಕುರುಬರಾಕಿ ಕುರೀ ಹಟ್ಟಿ ಹಾಕಿಕೊಂಡು ಇದ್ದಳು. ಸದರೀ ಹಟ್ಟೀ ಬದಲಿ ಒಂದು ವಸ್ತೀ ಮಾಡಲಿಕ್ಕೆ ಸರದಾರನು ಹೇಳಿದನು. ಅವನು ಹಲಸಂಗಿಯಲ್ಲಿ ಸಂನ್ ೮೦೦ ಫಸಲಿ ಯಲ್ಲಿ ಕಿಲ್ಲೇ ಕಟ್ಟಿ ಇರೋದು ಮಾಡಿದನು. ಕಿಲ್ಲೇ ಕಟ್ಟಿದ ಜಾಗೆಯಲ್ಲಿ ಸಂಗಿ ಅಂಬುವಾ ಕುರುಬರಾಕಿ ಹಟ್ಟೀ ಹಾಕಿಕೊಂಡು ಇದ್ದಳು. ಅದರ ದಶಿಯಿಂದ ಆಕೀ ಹೆಸರ್ಲೆ ಹಲ್ಸಂಗಿ ಅಂತ ಹೆಸರು ಇಟ್ಟರು ಮತ್ತು ಸದರೀ ದಿವಸದ ಹಿಡದೂ ಹಲ ಸಂಗಿ ಅಂತ ಕಾಗದ ಪತ್ರದಲ್ಲಿ ಬರೀತ ಬರತಾರೆ. ವ ಹಲಸಂಗೀ ವಸ್ತೀನೂ ತುಂಬಿಸಿದರು.

೨. ಆ ಮೇಲೆ ಖಾಜೀಜ್ಯಹಾ ಈತನು ವಿಜಾಪುರಕ್ಕೆ ಬಂದು ಮೊದಲು ನವರಸಪುರದ ಕಿಲ್ಲಾ ಕಟ್ಟಿದನು. ಆ ಮೇಲೆ ವಿಜ್ಯಾಪುರದ ಕಿಲ್ಲಾ ಕಟ್ಟಿ ಅಲ್ಲಿ ಬಾದ ಶಹಾ ಇವರು ರಾಜ್ಯ ಮಾಡಕೋತ ಬಂದರು. ಹೀಂಗ ಬಾದಶಾಹಾಗಳ ೨/೪ ಪೀಡಿ ತನಕಾ ರಾಜ್ಯ ಮಾಡಿಕೋತ ಬಂದರು.

೩. ಆ ಮೇಲೆ ಹಿಂದ ದಿಲ್ಲಿಯಲ್ಲಿ ಬಾದಶಾಹಾನ ರಾಜ್ಯದಲ್ಲಿ ಗರ್ದೀ ಆದದ್ದ ರಿಂದ ಅವರಂಗಜೇಬ ಬಾದಶಾಹಾ ವಿಜ್ಯಾಪುರದಲ್ಲಿ ನಿಂತು ರಾಜ್ಯ ಮಾಡಿದನು. ಅವನು ಹಿಂಬರಕಿ ಬಂದು ಅವರಂಗಾಬಾದದಲ್ಲಿ ಇದ್ದನು. ಅಲ್ಲಿ ಹಲ್ಲಾ ಆದುದರಿಂದ

ದಿಲ್ಲಿಗೆ ಬಂದು ಹೈದರಾಬಾದದಲ್ಲಿ ಮೊಗಲಾಯೀ ವಜೀರ ನಿಜಾಮ ಮುಲಖ ಈತನ ತಂದಿಗೆ ದಕ್ಷಿಣದ ಸುಭಾ ಕೊಟ್ಟು ಕಳಿಸಿಕೊಟ್ಟನು.

೪. ಅವನು ಹೈದರಾಬಾದದಲ್ಲಿ ಇದ್ದು ರಾಜ್ಯ ಕಾಬೀಜ (ಹಸ್ತಗತ ಮಾಡಿಕೊಂಡು) ರಾಜ್ಯ ಮಾಡುತ್ತ ಬಂದನು.

೫. ನಿಜಾಮ ಮುಲುಖನ ಹೊಟ್ಟೀಲೆ ನಿಜಾಮ ಅಲ್ಲಿ ಅಂತ ಮಗನು ಇದ್ದನು. ಈತನು ರಾಜ್ಯ ಮಾಡುತ್ತ ಬಂದನು. ಪರಂತು ಮೊಗಲಾಯಿ ಇದ್ದ ಕಾರಣಾ ಮೊಗಲಾಯಿ ರಾಜ್ಯದಲ್ಲಿ ಅಂದಾಧುಂದಿ ಇದ್ದು ಸ್ಥಳಸ್ಥಳದಲ್ಲಿ ಬಂಡ ಆಗಿ ರಾಜ್ಯ ಐರಾಣ ಆಗಿ (ಹಾಳುಬಿದ್ದು) ರಾಜ್ಯದಲ್ಲಿ ಗಿಡಗಳು ಕಂಟಿಗಳು ಹತ್ತಿದವು.

೬. ರಾಜ್ಯಮಂಡಳ ಸಾತಾರೇದಲ್ಲಿ ನಿಂತು ಸರದಾರ ಚವ್ಹಾಣ ಬಂಡಗಾರ ಕಳಿಸಿಕೊಟ್ಟು ಸ್ವಾರಿ ಸಿಕಾರೀ ಮಾಡಿ ಚವಹಾಣಗ ಭತಗುಣಕೀ ಠಾಣೆ ಕೊಟ್ಟು ಅಮಲ ತೆಗೊಂಡರು. (ಮಾರಹಾಣ ಕರೂನ ಬಗಡ) ಆಗಿ ಇರತಿದ್ದರು.

೭. ಹೀಂಗ ಇರುತ್ತಾ ಸನ್ ೧೧೬೬ ಫಸಲೀ ಸಾಲದಲ್ಲಿ ಸಾತಾರೇ ರಾಜಾ ಕಡಿಯಿಂದ ಪೇಸವೇ ಸರಕಾರದವರಿಗೆ ರಾಜ್ಯಾಧಿಕಾರ ಬಂತು.

೮. ಪೇಶ್ವೇರು ಲಷ್ಕರ ಸಹ ತೆಗೊಂಡು ಸ್ವಥಾ ಸ್ವಾರೀ ಪ್ರಾಂತದಲ್ಲಿ ಬಂದು ಎಷ್ಟು ಠಾಣೇದ ಜಾಗ ಇದ್ದವು ಅಷ್ಟು ಠಾಣೇದ ಠಾಣೇಹಾಕಿ ಮುಲಕಾಸ ಕೌಲ ಕೊಟ್ಟು ಊರತುಂಬಸಲಿಕ್ಕೆ ಹತ್ತಿದರು (ವಸಹತ ಕರೂ ಲಾಗಲೆ).

೯. ಭೀಮರಾವ ಯಶವಂತ ಪಾನಶೆ ಇವರು ಹಲಸಂಗೀ ಠಾಣೇದ ಕಮಾವೀಸ ಕೆಲಸ ೧೧೬೬ ಹಿಡದೂ ೧೧೭೧ ಫಸಲೀತನಕಾ ಮಾಡಿದರು.

೧೦. ಆಮ್ಯಾಲೆ ನಿಜಾಮ ಅಲ್ಲೀ ತನ್ನ ದಂಡ ಸಹಿತ ತೆಗೊಂಡು ಬಂದು ಲಢಾಯಿಮಾಡಿ ಹಲಸಂಗಿ ಠಾಣೆ ತೆಗೊಂಡನು. ಈತನು ೧೧೭೨ ಫಸಲಿಯಲ್ಲಿ ಆರು ತಿಂಗಳುತನಕಾ ಅಮಲ ನಡಿಸಿದನು.

೧೧. ಶ್ರೀಮಂತ ಪಂತ ಪ್ರತಿನಿಧಿ ಸಹಿತ ಬಂದು ಲಢಾಯಿ ಮಾಡಿ ಸನ್ ೧೧೭೩ ಫಸಲಿಯಲ್ಲಿ ಹಲಸಂಗಿ ಠಾಣೇ ತೆಗೊಂಡು ಮುದಾಜೀ ಚವ್ಹಾಣನ ಕಡೆಗೆ ಸರಂಜಾಮ ಕೆಲಸ ಕೊಟ್ಟರು. ಈತನು ೧೧೭೩ ಫಸಲಿ ಭಾದ್ರಪದ ತಿಂಗಳತನಕಾ ತನ್ನ ಕಡಿಯಿಂದ ಹಣಮಂತರಾವ ಅಡಪಡೀದಂವಗ ಅಮಲಕೊಟ್ಟನು.

೧೨. ಆಮ್ಯಾಲೆ ವೀರ ಅಬ್ಬಾಸಖಾ ಈತನು ತನ್ನ ಲಷ್ಕರ ಸಹಿತ ತೆಗೊಂಡು ಬಂದು ಲಢಾಯಿ ಮಾಡಿ ಹಲ್ಲಾ ಮಾಡಿ ಊರ ತೆಗೊಂಡನು. ಹಣಮಂತರಾವ ಅಡಪಡೆದವನು ಊರ ಅಬ್ಬಸ ಕಡಿಯಿಂದ ಸಖ್ಯದಿಂದ ಕಮಾವೀಸ ಪತಕರಿಸಿ

ಹೆಲಸಂಗಿ ಠಾಣೆ ಹಾಕಿ ಅಮಲ ನಡಿಸಿದನು. ಇವನು ೯ ತಿಂಗಳ ೧೧೭೩ ಫಸಲಿಯಲ್ಲಿ ಮಾಡಿದನು.

೧೩. ಆಮ್ಯಾಲೆ ಪೇಸವಾಯಿ ಕಡೆಯಿಂದ ಗೋಪಾಳರಾವ ಪಟವರ್ಧನ ಈತನು ಲಷ್ಕರ ಸರಂಜಾಮು ಸಹಿತ ಬಂದು ಮುಗಲಾಯಿ ವೀರ ಅಬ್ಬಸಖಾನ ಠಾಣಾ ಎಬಿಸಿ ಹಚಕೊಟ್ಟನು. ಆ ವ್ಯಾಳೆಕ್ಕೆ ಕಸಬೆ ಹಲಸಂಗಿ ಠಾಣೆ ದಸಿಯಿಂದ ಲಢಾಯಿ ಆಗಿ ಹಲ್ಲಾ ಆಗಿ ತಗೊಂಡರು. ಸದರಿ ಲಢಾಯಿ ವ್ಯಾಳೆಕ್ಕೆ ಗೋಪಾಳರಾವ ಪಟವರ್ಧನ ಇವರಿಗೆ ಜಖಮು ಹತ್ತಿತು, ಮುತ್ತು ಹಲ್ಲಾದಿಂದ ಊರ ತಗೊಂಡರು.

೧೪. ಸಲ್ಲೇದಿಂದ ಮೊಗಲಾಯಿ ಕಮಾವೀಸದಾರ ಮೀರ ಸೆಫರ್ದೀನ ಈತಗ ಪಾರಮಾಡಿ ತಮ್ಮ ಠಾಣಾ ಗೋಪಾಳರಾವ ಪಟವರ್ಧನ ಹಾಕಿ ನರಸಿಂಗರಾವ ಧಾಯಗೋಡೆ ಇವರ ಕಡೆಗೆ ಸನ್ ೧೨೭೪ ಫಸಲಿ ಸಾಲದಲ್ಲಿ ತಮ್ಮ ಸರಂಜಾಮು ಕೆಲಸ ಕೊಟ್ಟರು.

೧೫. ನರಸಿಂಗರಾವ ಧಾಯಗೋಡೆ ಇವರು ಪೇಸ್ವೆಯರ ಕಡೆಯಿಂದ ಸನ್ ೧೧೭೪ ಫಸಲಿ ಹಿಡಿದು ೧೧೮೮ ಫಸಲಿ ತನಕಾ ಸರೆರಾಸ ಕೆಲಸ ಮಾಡಿದರು.

೧೬. ಸನ್ ೧೧೮೮ ಫಸಲಿ ಅಖೈರ ಸಾಲದಲ್ಲಿ ನರಸಿಂಗರಾವ ಧಾಯಗೋಡೆ ಈತನ ಕಡಿ ಇದ್ದ ಕಮಾವೀಸ ಪಣಾ ತಗದು ಪೇಶ್ವೆಯವರು ತವ್ಮು ಕಡಿಯಿಂದ ಭೀಮರಾವ ಪಾನಸೇದಿ ಮುತ್ತು ತೋಫಖಾನಾ ಈತನ ಕಡೆಗೆ ಸರಂಜಾಮಿ ಕೆಲಸ ನೇಮಿಸಿದರು. ಅವರು ಸನ್ ೧೧೮೯ ಫಸಲಿ ಹಿಡಿದು ಸನ್ ೧೨೧೬ ಫಸಲಿ ಅಖೈರ ಸನ್ ೧೨೧೭ ಅಶ್ವಿನ ತಿಂಗಳ ಪೂರಾ ಆಗುವತನ ಸರೆರಾಸ ಅಮಲ ನಡೆಯಿತು.

೧೭. ಸನ್ ೧೧೮೯ ಹಿಡಿದು ಸನ್ ೧೨೦೦ ತನಕಾ ಪರಗಣೆಯಲ್ಲಿ ಹಲಸಂಗಿ ಪರಗಣೆಯಲ್ಲಿ ಅಮಂದಾನಿ ಆಗತಾ ನಡೆಯಿತು.

೧೮. ಸನ್ ೧೨೦೧ ಸನ್ ೧೨೦೨ ಈ ಎರಡು ವರುಷಗಳಲ್ಲಿ ಭೂಮಿ ಬೀಳ (ನಾಪೀಕ) ಬಿದ್ದ ಕಾರಣ ದುಷ್ಕಾಳ ಬಿದ್ದು (ಬರಾ ಬಿದ್ದ ಕಾರಣ) ಊರ ವಸ್ತಿ ಕಾಲಹಾರಿತು (ವಸ್ತಿ ಉಡಾಲಿ).

೧೯. ಸನ್ ೧೨೦೩ ಫಸಲಿ ಹಿಡದು ಸನ್ ೧೨೦೭ ಫಸಲಿ ತನಕಾ ಹಲಸಂಗಿ ಪರಗಣೆದ ಜಮೀನುಗಳ ಕವಲ ಕರಾರ ಮಾಡಿಕೊಟ್ಟು ಊರ ವಸ್ತಿ ತುಂಬಿಸಿದರು. (ವಸ್ತಿ ಕರವಿಲಿ)

೨೦. ಸನ್ ೧೨೦೮ ಫಸಲಿ ಲಾಗಾಯತ ಲಷ್ಕರದ ದಂಗಾ ಧಾಂದಲೆ ಮಾಹಾಲದ (ಹಲಸಂಗಿ ಠಾಣೆದ) ಬಖೇಡಾ ಆಗಿ ಸನ್ ೧೨೧೦ ಫಸಲಿ ಆಖೇರತನಕಾ ಮಹಾಲದ ಆಕಾರ ಕಮ್ಮಿ ಆಯಿತು.

೨೧. ಸನ್ ೧೨೧೧ ಫಸಲಿ ಸಾಲದಲ್ಲಿ ಹಲಸಂಗಿ ಹಳ್ಳಾ ಮಹಾಪೂರಬಂದು ಅರ್ಧ ಊರು ಮುಣಗಿ ಹೋಯಿತು. ಅದರಿಂದ ಹಲಸಂಗಿ ಆವಾರಾ ಅಗಸಿ ವಗೈರೆ ಹೊಸದಾಗಿ ಪಾನಸೆ ಇತನು ಕಟ್ಟಿಸಿದನು.

೨೨. ಸನ್ ೧೨೧೩ ಫಸಲಿಯಲ್ಲಿ ಲಷ್ಕರ ದಾಂದಲಿದಿಂದಾ ಮತ್ತು ಜಮೀನ ಬೆಳೆಯದೆ ಬೀಳ ಬಿದ್ದುದರಿಂದ ಬರಾಬಿದ್ದು ಜೋಳದ ಧಾರಣಿ ಸಾತಾರೆ ಸೊಲಗಿಲೆ ಮೂರು ಆದ್ದನಾ ಧಾರಣಿ ಮಾರಿತ್ತು. ಧಾನ್ಯ ಸಿಗದೆ ಎಷ್ಟೋ ಜನರು ಸತ್ತರು ಊರುಗಳು ಹಾಳಾದವು.

೨೩. ಸನ್ ೧೨೧೪ ಫಸಲಿಗೆ ವಸ್ತಿ ತುಂಬಿಸಿ ಜಮೀನ ಕವಲ ಕರಾರ ಮಾಡಿಕೊಟ್ಟುದರಿಂದ ಸರೆರಾಸ ಸನ್ ೧೨೧೬ ಫಸಲಿ ತನಕಾ ಪಾನಸೇನ ಕಡೆಗೆ ಅಮಲ ನಡೆಯಿತು.

೨೪. ಸನ್ ೧೨೧೭ ಫಸಲಿ ಬಾಜಿರಾವ ಸಾಹೇಬ ಸರಕಾರ ಅವರು ತೋಫ ಖಾನೆಯುವರ ಕಡೆಗೆ ಹಲಸಂಗಿ ಠಾಣೆ ಇದ್ದದ್ದು ತಗದು ತ್ರಿಂಬಕಜಿ ಡೇಂಗಳೆ ಇವರ ಕಡೆಗೆ ಕಮಾವೀಸ ನೇಮಿಸಿದರು. ತ್ರಿಂಬಕಜಿ ಡೇಂಗಳೆ ಈತನ ಸನ್ ೧೨೧೭ ಫಸಲಿ ಹಿಡದು ೧೨೨೪ ಫಸಲಿ ಅಖೇರತನಕಾ ಅಮಲ ನಡೆಯಿತಂ.

೨೫. ಮಹಾರಾಜ ಸರಕಾರ ಇವರು ತ್ರಿಂಬಕಜಿ ಡೇಂಗಳೇನ ಕಡೆಯಿಂದ ಹಲಸಂಗಿ ಠಾಣೆದ ಕಮಾವೀಸ ಪಣಾ ತಗದು ತಮ್ಮ ಕಡೆಯಿಂದ ನಿಳೋ ಬಾಬುರಾವ ಗೋಡಬೋಲೆ ಇವರ ಕಡೆಗೆ ಕಮಾವೀಸ ಪಣ ನೇಮಿಸಿದರು. ಸದರೀಯುವನಂ ತನ್ನ ತರ್ಫೆ ಕಮಾವೀಸದಾರ ಕಳಿಸಿ ವಹಿವಾಟ ಮಾಡಿದಾ. ಇವನಂ ಸನ್ ೧೨೨೫ ಫಸಲಿ ಹಿಡಿದು ಸನ್ ೧೨೨೭ ಅಖೈರ ಫಸಲಿತನಕಾ ಅಮಲು ನಡಿಸಿದನು.

೨೬. ಸನ್ ೧೨೨೮ ಫಸಲಿಯಲ್ಲಿ ಬ್ರಿಟಿಷ ಸರಕಾರ ಠಾಣಾ ಹಾಕಿ ಹಲಸಂಗಿ ಪರಗಣೆ ತಗೊಂಡು ಸನ್ ೧೨೩೦ ಫಸಲಿ ಅಖೇರತನಕಾ ತಮ್ಮ ಅಮಲ ಭರಚಕ್ಕ ನಡಿಸಿದರಂ.

೨೭. ಪುನಾ ಶ್ರೀಮಂತ ಬಾಜೀರಾವ ಇವರಂ ಸನ್ ೧೨೩೧ ಫಸಲಿ ಹಿಡದು ಸನ್ ೧೨೫೧ ಅಖೇರ ವರೆಗೆ ಹಲಸಂಗಿ ಠಾಣೆ ತಗೊಂಡು ತಮ್ಮ ಅಮಲು ನಡಿಸಿದರಂ.

೨೮. ಪುನಾಃ ಇಂಗ್ರೇಜಿ ಸರಕಾರ ಅಂದರೆ ಬ್ರಿಟಿಷ ಸರಕಾರದವರು ತಮ್ಮ ಇಲಾಖೆ ಪೈಕಿ ೨ ಪರಗಣೆ ಶ್ರೀಮಂತ ಬಾಜೀರಾವ ಸಾಹೇಬರ ಕಡೆಗೆ ಅಂದರೆ ಸಾತಾರೆ ಮಹಾರಾಜರ ಕಡೆಗೆ ಕೊಟ್ಟು ಹಲಸಂಗಿ ಪರಗಣೆ ಮತ್ತು ಹೊರ್ತಿ ಪರಗಣೆ

ತಗೊಂಡು ಮಹಾಲ ಮುಬದಲೆ ಮ॥ ಕಲೇಕ್ಟರ ಸಾಹೇಬ ಬಾಹುದ್ದೂರ ಸೋಲಾಪುರ ಜಾವಕ ನಂಬರ ೮೮೦/೨೪-೯-೪೨ (೧೮೪೨) ಹುಕುಮದ ಮೇಲಿಂದ ಮಹಾಲ ಮುಬದಲೆದಿಂದ ತಾ॥ ೨೪-೯-೪೨ (೨೪-೯-೧೮೪೨) ಇಸ್ವಿ ಹಿಡಿದು ಇಂಗ್ರೇಜಿ ಸರಕಾರ ಆಂದರೆ ಬ್ರಿಟಿಷ ಸರಕಾರದ ಕಡಿಗೆ ಅಮಲ ನಡೆಯಲಿಕ್ಕೆ ಹತ್ತಿತು.

೨೯. ಸನ್ ೧೮೫೫ ಇಸ್ವಿ ತನಕಾ ಬ್ರಿಟಿಷ ಸರಕಾರ ಕಂಪಣಿ ಕಡಿಗೆ ಅಮಲ ನಡೆಯಿತು. ಮುಂದೆ ಮಹಾರಾಣಿ ಸಾಹೇಬರ ಕಡಿಗೆ ಗಾದಿಸ್ಥಾಪನಾ ಆಗಿ ಈಪತ್ತಿನ ವರೆಗೆ ಬ್ರಿಟಿಷ ಸರಕಾರದ ಕಡೆಗೆ ಆಮಲ ಜಾಹರ ಇರುತ್ತದೆ— ಅಂದರೆ ಸನ್ ೧೯೧೮ ಇಸ್ವಿವರೆಗೆ.

—ದಸ್ತೂರ : ಬಲವಂತ ಮಾಧವ ಕುಲಕರ್ಣಿ ಹಲಸಂಗಿ (ಸಹಿ ಮರಾಠಿಯಲ್ಲಿ)

(ಜ. ಕ. ೨೨-೭ ಜುಲೈ ೧೯೪೪)

# ಶ್ರೀ ಬಸವೇಶ್ವರರು ಹಾಗೂ ಶ್ರೀ ಚೆನ್ನಬಸವೇಶ್ವರರ ಪುನರಾಗಮನ - ಭಾವನೆ - ಅಥವಾ ಮಧ್ಯಕಾಲದ ಮಹಾಪುರುಷರು

---

ಶ್ರೀ ಚೆನ್ನಬಸವೇಶ್ವರ ಪುರಾಣದಲ್ಲಿ ಶ್ರೀ ಬಸವೇಶ್ವರ ಶ್ರೀ ಚೆನ್ನಬಸವೇಶ್ವರರು ಪುನಃ ಭೂಮಿಗೆ ಬರುವ ಕಾಲನಿರ್ಣಯದ ಬಗೆಗೆ ಒಂದು ಪದ್ಯವು ಕಾಲಜ್ಞಾನ ಸಂಧಿಯಲ್ಲಿ ಹೇಳಲಾಗಿದ್ದು ಅಲ್ಲಿ ಹೇಳಿದ ಕಲಿಯುಗ ಶಕವರ್ಷವೂ, (೪೬೮೩) ಕೊನೆಯ ಸಂಧಿಯಲ್ಲಿ ಹೇಳಿದ ಅದೇ ಪುರಾಣದ ಮುಗಿತಾಯದ ಶಾಲಿವಾಹನ ಶಕ ವರ್ಷವೂ (೧೫೦೭) ಲೆಕ್ಕದಿಂದ ಒಂದೇ ವರ್ಷ (ಅಂದರೆ ಕ್ರಿಸ್ತಶಕ ೧೫೮೪) ಆಗುತ್ತದೆ. ಅರ್ಥಾತ್ ಶ್ರೀ ಚೆನ್ನಬಸವೇಶ್ವರ ಪುರಾಣವನ್ನು ಬರೆದ ಕವಿ ವಿರೂಪಾಕ್ಷ ಪಂಡಿತನ ಕಾಲವೂ ಶರಣರ ಪುನರಾಗಮನ ಕಾಲವೂ ಒಂದೇ ಎಂದರೆ ಸಮಕಾಲವೆಂದು ಇದರಿಂದ ಸಿದ್ಧವಾಗುತ್ತದೆ.* ಈ ವಿರೂಪಾಕ್ಷ ಪಂಡಿತನಿದ್ದ ಕಾಲವು ವಿಜಯನಗರ ಸಾಮ್ರಾಜ್ಯವು ಹಾಳಾದ ತೀರ ಕೆಲವೇ ವರುಷಗಳ ನಂತರ ಅಂದರೆ ಕ್ರಿಸ್ತಶಕ ೧೫೮೪ ರಲ್ಲಿ.

ವಿಜಯನಗರ ಸಾಮ್ರಾಜ್ಯವು ಹಾಳಾದ ಬಳಿಕ ದೇಶದಲ್ಲಿ ಶಾಂತತೆ ನೆಲಿಸುವ ಕೆಲಸವನ್ನು ಅನೇಕ ಮಹಾಪುರುಷರು ಅನೇಕ ಪ್ರಕಾರದಿಂದ ಅಲ್ಲಲ್ಲಿ ಮಾಡಿದಂತೆ ಕಾಣುತ್ತದೆ. ಅವರಲ್ಲಿ ಈ ವಿರೂಪಾಕ್ಷ ಪಂಡಿತನೂ ಅಂಥ ಒಬ್ಬ ಮಹಾಪುರುಷರ ಮಂಡಲಿಯಲ್ಲಿದ್ದನು. ಹೇಗೆಂದರೆ ತನ್ನ ಕಾಲದಲ್ಲಿದ್ದ "ಮಳೆಯ ಮಲ್ಲೇಶ"ನೆಂಬ ಜ್ಞಾನಿಯು ಮಕ್ಕಾ ಪಟ್ಟಣಕ್ಕೆ ಹೋಗಿ ಅಲ್ಲಿದ್ದ ಏಳುನೂರು ಮಂದಿ ಕಲಿಂದರರಿಗೆ ಗುರುವಾಗಿ ಬಂದು ಮಹಾತ್ಮನೆನಿಸಿಕೊಂಡಿದ್ದನೆಂದು ಹೇಳಿದ್ದಲ್ಲದೆ ಆತನಿಗೂ ಸಾಂಪ್ರದಾಯಿಕ ಸಂಬಂಧವಿದ್ದ ಬಗೆಗೆ ವಿರೂಪಾಕ್ಷ ಪಂಡಿತನು ಹೇಳಿಕೊಂಡಿದ್ದಾನೆ. ಈತನು ತನ್ನ ಗುರು ಪರಂಪರೆಯನ್ನು ಹೀಗೆ ಹೇಳಿದ್ದಾನೆ :

---

* ಚರಿತ್ರೆಗೆ ಸಂಬಂಧಪಟ್ಟ ಕೆಲವಂಶಗಳೂ ಇದರಲ್ಲಿ (ಶ್ರೀ ಚೆನ್ನಬಸವೇಶ್ವರ ಪುರಾಣದಲ್ಲಿ) ಹೇಳಿವೆ :

"........... ಕಲಿ (ಕಲಿಯುಗ ಶಕದ) ೪೬೮೩ ನೆಯ ಸ್ವಭಾನುವಿನಲ್ಲಿ (ಕ್ರಿ. ಶ, ೧೫೮೪) ವೀರ ವಸಂತರಾಯನು ಕರ್ಣಾಟ ದೇಶಕ್ಕೆ ಬಂದು ಆಳಿದನು........."

—ಕವಿಚರಿತ್ರೆ ಭಾಗ ೨; ಪುಟ ೩೧೦

ಶಿವನೇ ಮಲ್ಲೇಶನೆಂಬ ಅಭಿಧಾನದಿಂದ ಭೂಮಿಯಲ್ಲಿ ಅವತರಿಸಿದನು. ಸಕಲ ದೇಶಗಳನ್ನು ಸಂಚರಿಸಿ ೭೦೦ ಖಲಿಂದರರಿಗೆ ಗುರುವಾಗಿ ಮಖ್ಯಕ್ಕೆ (ಮಕ್ಕೆಗೆ) ಹೋಗಿ ಮಹಿಮೆಯನ್ನು ತೋರಿ ತುರುಕಾಣ್ಯದಲ್ಲಿ ಪ್ರಾಪ್ತವಾಗಿದ್ದ ಅನಾವೃಷ್ಟಿಯನ್ನು ಪವಾಡದಿಂದ ನಿವಾರಣೆ ಮಾಡಿ ಸುರಿತಾಳನಿಂದ (ಸುಲ್ತಾನನಿಂದ) ಪೂಜೆಯನ್ನು ಕೈಕೊಂಡು ಘನತರವಾದ ಕೀರ್ತಿಯನ್ನೂ ಮಳೆಯ ಮಲ್ಲೇಶ ಎಂಬ ಹೆಸರನ್ನೂ ಪಡೆದನು. ಇವನ ಸಂಪ್ರದಾಯದಲ್ಲಿ ಷಟ್‌ಸ್ಥಲಾಬ್ಧಿವರ್ಧನ ಪೂರ್ಣ ಸೋಮನಾದ ಸಿದ್ಧವೀರೇಶನು ಪ್ರಖ್ಯಾತನಾಗಿ ವಿದ್ಯಾನಗರಿಯ (ವಿಜಯನಗರದ?) ಹಿರಿಯ ಮಠದಲ್ಲಿ ಗುರುವಾಗಿದ್ದನು. ಇವನ ಶಿಷ್ಯ ಕವಿ ವಿರೂಪಾಕ್ಷ ಪಂಡಿತ.

— **ಕವಿಚರಿತ್ರೆ ಭಾಗ ೨, ಪುಟ ೩೦೭. ೮**

ಇಷ್ಟೇ ಏಕೆ? ಶ್ರೀ ಚೆನ್ನಬಸವೇಶ್ವರ ಪುರಾಣದ ಪೀಠಿಕಾದಿ ಆರಂಭಭಾಗದಲ್ಲಿ "ಆದಿ ನಂದೀಶ್ವರನು ತನ್ನ ಎರಡು ಕೋಡುಗಳಿಂದ ಭೂಮಿಯ ಖದ್ದಿ ಹೊಡೆದದ್ದರ ಫಲವಾಗಿ ಒಂದು ಕೋಡು ತಾಕಿದಲ್ಲಿ ಮಕ್ಕಾ ಪಟ್ಟಣವೂ, ಇನ್ನೊಂದು ಕೋಡು ತಾಕಿದಲ್ಲಿ ಕಲ್ಯಾಣ ಪಟ್ಟಣವೂ ಉದಯಿಸಿದವು" ಎಂದು ಸ್ವತಃ ವಿರೂಪಾಕ್ಷ ಪಂಡಿತನೇ ಹೇಳಿರುವದರಿಂದ ಮೇಲಿನ ಮಾತಿಗೆ ಬೇಕಾದಷ್ಟು ಪುಷ್ಟಿ ಸಿಗುತ್ತದೆ.

ಇದರ ಮೇಲಿಂದ ಸಿದ್ಧವಾಗುವುದೇನು? ವಿಜಯನಗರ ಸಾಮ್ರಾಜ್ಯದ ಅಸ್ತಮಾನದ ಅನಂತರ ಅನೇಕ ಮಹಾಪುರುಷರು ಹಿಂದೂ ಮುಸಲ್ಮಾನರಲ್ಲಿ ಐಕ್ಯವನ್ನು ಸ್ಥಾಪಿಸಲಿಕ್ಕೆ ಬಹುದೊಡ್ಡ ಪ್ರಮಾಣದಿಂದ ಪ್ರಯತ್ನಿಸಿದರೆಂಬುದು ಇದರ ಮೇಲಿಂದ ಸಹಜವಾಗಿ ಗೊತ್ತಾಗುವದು.

ಈ ಮೊದಲು ಶಿವಾನುಭವ ಪತ್ರಿಕೆಯಲ್ಲಿ ಸಾಲೋಟಗಿ (ತಾ. ಇಂಡಿ, ಜಿಲ್ಲಾ: ವಿಜಾಪುರ) ಶ್ರೀ ಶಿವಯೋಗೀಶ್ವರರೆಂಬ ಶಿವಯೋಗಿವರ್ಯರು ವಿಜಾಪುರದ ಇಬ್ರಾಹಿಮ್ ಬಾದಶಹನ ಕಾಲದಲ್ಲಿ ಇಂಥದೊಂದು ಪ್ರಯತ್ನ ಮಾಡಿದ ವಿಷಯವನ್ನೂ ಅವರ ಯೋಗ ಮಹಿಮೆಯನ್ನೂ ನಾನು "ಶಿವಯೋಗೀಶ್ವರರ ಶಿವಪೂಜೆ" ಎಂಬ ಲೇಖನದಲ್ಲಿ ವರ್ಣಿಸಿದ್ದೇನೆ. ಅಂದಿನಿಂದ ನನಗೆ ಕೊಡೇಕಲ್ಲಿನ ಶ್ರೀ ಬಸವೇಶ್ವರರ ಬಗೆಗೂ ಇದೇ ಪ್ರಕಾರವಾಗಿ ಅನಿಸತೊಡಗಿದ್ದರಿಂದ ಆ ಬಗೆಗೆ ಗೊತ್ತಿದ್ದವರಿಗೆ ಆ ವಿಷಯವಾಗಿ ಕೇಳತೊಡಗಿದೆನು. ಇದೀಗ ಆ ಬಗ್ಗೆ ನನಗೆ ಕೆಲವೊಂದು ಉಚಿತ ಸಂಗತಿಗಳು ಗೊತ್ತಾದ್ದರಿಂದ ಆ ಬಗೆಗೆ ಎರಡು ಮಾತುಗಳನ್ನು ನಾನು ಇಲ್ಲಿ ಬರೆಯುತ್ತೇನೆ.

ಕೊಡೇಕಲ್ಲು (ಮೊಗಲಾಯಿ ಜಿಲ್ಲಾ ಗುಲಬುರ್ಗಾ, ತಾ. ಸುರಪುರ) ಡೋಣಿ ನದಿ ಹಾಗೂ ಕೃಷ್ಣಾ ನದಿಗಳು ಕೂಡುವ ಸ್ಥಾನದಿಂದ ಉತ್ತರಕ್ಕೆ ೯–೧೦ ಮೈಲುಗಳ ಅಂತರದ ಮೇಲೆ ಇದೆಯಂತೆ. ಕಪ್ಪಡೀ ಸಂಗಮದಿಂದ ಈ ಡೋಣೀ ಕೃಷ್ಣಾ

ಸಂಗಮದವರೆಗೆ ಅನೇಕ ಕ್ಷೇತ್ರಗಳು ಇಂದಿಗೂ ಇವೆಯಂತೆ. ಅವುಗಳಲ್ಲಿ ಛಾಯಾ-ಭಗವತಿ ಎಂಬ ಪ್ರಸಿದ್ಧ ಕ್ಷೇತ್ರದ ಹೆಸರನ್ನಂತೂ ಅನೇಕರು ಕೇಳಿದ್ದಾರೆ. ಆದರೆ ಅದರ ಸಮೀಪದಲ್ಲಿಯೇ ಅನಿಮಿಷ ಕ್ಷೇತ್ರವೂ ಶ್ರೀ ಅಲ್ಲಮಪ್ರಭುಗಳ ಗುಡಿಯೂ (ನಡುಗಡ್ಡೆಯಲ್ಲಿ) ಬೇರೆ ಬೇರೆ ಎರಡು ಕ್ಷೇತ್ರಗಳಾಗಿ ಇವೆಯಂತೆ. ಇವೆಲ್ಲವುಗಳ ಸಮೀಪದಲ್ಲಿಯೇ ಕೊಡೇಕಲ್ಲು ಇದೆಯಂತೆ.

ಹಿಂದಿನ ಕಾಲದಲ್ಲಿ ಹುಬ್ಬಳ್ಳಿಯ ನಾಡಿನಲ್ಲಿ ವಡನೂರೆಂಬ ಊರಲ್ಲಿ ಮಲ್ಲಸೆಟ್ಟಿ, ಲಿಂಗಮ್ಮ ಎಂಬ ದಂಪತಿಗಳ ಉದರದಲ್ಲಿ ಬಸವಸೆಟ್ಟಿ ಎಂಬ ವ್ಯಾಪಾರಿಗಳು ಜನಿಸಿ, ಬೀಡಿಕೆಯ ಎತ್ತುಗಳ ಮೇಲೆ ಮಲೆನಾಡಿನ ಕೂಡ ವ್ಯಾಪಾರ ಮಾಡುತಿದ್ದರಂತೆ. ಇವರೇ ನಮ್ಮ ಚರಿತ್ರನಾಯಕರಾದ ಕೊಡೇಕಲ್ಲಿನ ಶ್ರೀ ಬಸವೇಶ್ವರರು. ಆ ಕಾಲದಲ್ಲಿ ಕೊಡೇಕಲ್ಲಿನಲ್ಲಿ ಹನುಮಪ್ಪನೆಂಬ ನಾಯಕನು ಇರುತ್ತಿದ್ದು ಶ್ರೀ ಬಸವೇಶ್ವರರು ತಮ್ಮ ಸಂಚಾರ ಕ್ರಮದಲ್ಲಿ ಅಲ್ಲಿಗೆ ಬಂದಾಗ ಆ ನಾಯಕನ ಭಕ್ತಿಗೆ ಮೆಚ್ಚಿ ಅಲ್ಲಿಯೇ ನೆಲೆಸಿದರಂತೆ.

ಇವರು ಅನೇಕ ವಚನಗಳನ್ನು ಬರೆದಿದ್ದಾರಂತೆ. ಇವರ ಚರಿತ್ರದ ಬಗೆಗೆ ಪುರಾಣಗಳೂ ಹುಟ್ಟಿದಂತೆ ಕಾಣುತ್ತದೆ. "ನಂದಿ ಆಗಮ" (ಶ್ರೀ ಬಸವೇಶ್ವರರ ಬರುವಿಕೆ) ಎಂಬ ಗ್ರಂಥವು ಇತ್ತೀಚೆಗೆ ಪ್ರಕಟವಾಗಿದ್ದು ಅದು ಇವರ ಚರಿತ್ರವಾಗಿರ ಬಹುದಾಗಿ ತೋರುತ್ತದೆ. "ಗುರುಶಿಷ್ಯ ಬೋಧೆ" ಎಂಬ ಇನ್ನೊಂದು ಚಿಕ್ಕ ಗ್ರಂಥವು ಪ್ರಕಟವಾಗಿದೆಯೆಂದೂ ಬಹುಶಃ ಇದು ಇವರ ಉಪದೇಶಗಳಿಂದ ಕೂಡಿದೆಯೆಂದೂ ಕೇಳಿದ್ದೇನೆ. ಇವಾವನ್ನೂ ನಾನು ಇನ್ನೂ ಕಣ್ಣಾರೆ ಕಂಡಿಲ್ಲ.

ಕೊಡೇಕಲ್ಲಿನಲ್ಲಿ ಇವರ ಪರಂಪರೆಯ ವಿಶಿಷ್ಟ ಜಂಗಮರಿದ್ದಾರೆಂತಲೂ ಅವರಿಗೆ ಲಿಂಗಧಾರಣವಿರುವದಿಲ್ಲವೆಂತಲೂ ಇವರೇ ಅಲ್ಲಿಯ ದೇವಾಲಯದ ಅರ್ಚಕರಾಗಿದ್ದಾರೆಂತಲೂ ಇವರಿಗೆ "ಬೋಳಕ ಜಂಗಮ"ರೆಂದು ಕರೆಯುವರೆಂತಲೂ ಹೇಳುತ್ತಾರೆ.

ಕೊಡೇಕಲ್ಲಿನ ಬಸವೇಶ್ವರರ ಗುಡಿಯು ಗುಮಟದ ಆಕಾರದ್ದಾಗಿದೆಯೆಂತಲೂ ಅದರೊಳಗಿರುವ ಶ್ರೀ ಬಸವೇಶ್ವರರ ಸಮಾಧಿಯು ಮುಸಲ್ಮಾನರ ಮದಾರದ ಆಕಾರದ್ದಾಗಿದೆಯೆಂದೂ ಹೇಳುತ್ತಾರೆ. ಸುತ್ತುಮುತ್ತಲಿನ ಪ್ರದೇಶದಲ್ಲಿರುವ ಊರುಗಳ ಜನರು ಹಿಂದೂ ಮುಸಲ್ಮಾನ ಎಂಬ ಭೇದವಿಲ್ಲದೆ ಈ ದೇವರಿಗೆ ನಡೆದುಕೊಳ್ಳುತ್ತಾರೆಂದು ಹೇಳುತ್ತಾರೆ. ಇಷ್ಟೇ ಅಲ್ಲ, ಈ ದೇವರಿಗೆ ಹಿಂದುಗಳು ಶ್ರೀ ಬಸವೇಶ್ವರ ಮಹಾರಾಜ ಜಯಜಯಕಾರ ಎಂದೂ, ಮುಸಲ್ಮಾನರು "ಮಹಮ್ಮದ ಸರವರ"ರಿಗೆ ಜಯುಜಯುಕಾರವೆಂದೂ ಉಗ್ಗಡಿಸುವರಂತೆ. ಶಿವನಿಗೆ ಬಸವಣ್ಣನು ಹೇಗೋ ಹಾಗೆ ಅಲ್ಲಾನಿಗೆ ಮಹಮ್ಮದ ಪೈಗಂಬರರು, ಆದ್ದರಿಂದ ಶ್ರೀ ಬಸವೇಶ್ವರರು ಎಂಬ ಅರ್ಥದಲ್ಲಿಯೇ ಈ ಹಜರತ ಮಹಮ್ಮದ ಪೀರರು ಎಂಬ ಹೆಸರು ಕೊಡಲಾಗಿರಬಹುದು ಅಥವಾ ಸ್ವಯಂ ಆ ಮಹಾತ್ಮರು ತಾವೇ ಈ

ನಾಮವನ್ನು ಧರಿಸಿರಬಹುದು. ಸರವರ ಎಂಬುದು ಸೌದಾಗರ (=ವ್ಯಾಪಾರಿ, ಸೆಟ್ಟಿ) ಎಂಬುದರ ರೂಪಾಂತರವಾಗಿರಬಹುದೋ ಏನೋ ತಿಳಿಯದು.

ದೀಪಾವಳಿ ಹಾಗೂ ಶಿವರಾತ್ರಿಯ ದಿವಸ ದೊಡ್ಡ ಉತ್ಸವದೊಂದಿಗೆ ಕೊಡೇಕಲ್ಲ ಶ್ರೀ ಬಸವೇಶ್ವರರ ವಚನಗಳ ಪುಸ್ತಕವನ್ನು ಅಲ್ಲಿಯ ಮುಖ್ಯ ಸ್ವಾಮಿಗಳು ಸರ್ವಜನಸಂದಣಿಯಲ್ಲಿ ಬೆಳ್ಳಿಯ ಬೆತ್ತದಿಂದ ತೆರೆಯುವರಂತೆ. ಆ ಪುಟದಲ್ಲಿ ಯಾವ ವಚನವಿರುವದೋ ಅದು ಆ ವರ್ಷದ ಭವಿಷ್ಯ (ಕಾಲಜ್ಞಾನ)ವನ್ನು ಸೂಚಿಸುವದೆಂದು ತಿಳಿದುಕೊಳ್ಳುತ್ತಾರಂತೆ.

ಯುಗಾದಿಯ ಅಮಾವಾಸ್ಯೆಯ ದಿವಸ ಊರೊಳಗಿನ ಸರ್ವಜಾತಿಯ ಸಣ್ಣ ದೊಡ್ಡವರೂ, ಹೆಣ್ಣುಮಕ್ಕಳೂ ಗಂಡುಮಕ್ಕಳೂ, ಜಾತಿಭೇದವಿಲ್ಲದೆ ಸಾವಿರಾರು ಜನರು ಮೂರು ಹರದಾರಿಯ ಮೇಲಿರುವ ಕೃಷ್ಣಾ ಡೋಣಿ ಸಂಗಮಕ್ಕೆ ಹೋಗಿ ಕಾವಡಿಯ ಮೇಲೆ ಎರಡೆರಡು ಬಿಂದಿಗೆ ನೀರನ್ನು (ಸರ್ವರೂ) ಹೆಗಲಮೇಲೆ ಹೊತ್ತುಕೊಂಡು ತಂದು ಕೊಡೇಕಲ್ಲಿನ ಗುಡಿಯಲ್ಲಿ ಹಲವು ಬಿಂದಿಗೆ ಹೂಗಿಡಗಳಿಗೆ ನೀರೆರೆದು, ಕೆಲವು ಬಿಂದಿಗೆ ರಂಜಣಿಗೆಗಳಲ್ಲಿ ಸಂಗ್ರಹಿಸಿ ಇಡುವರಂತೆ, ಆ ನೀರಿನಿಂದ ಬಹಳಷ್ಟು ಗಂಧವನ್ನು ತೆಯ್ದು ಅದೇ ನೀರಿನಿಂದ ಆ ಸ್ವಾಮಿಗಳಿಗೆ ಸ್ನಾನಮಾಡಿಸಿ ಗುಡಿಯೊಳಗಿರುವ ಮುಖ್ಯ ಗದ್ದಿಗೆಗೂ, ಸ್ವಾಮಿಗಳ ದೇಹಕ್ಕೂ ಆ ಗಂಧವನ್ನು ಯುಗಾದಿಯ ದಿವಸ ಲೇಪಿಸುವರಂತೆ, ಗದ್ದಿಗೆಗೆ ಮುಖ್ಯವಾಗಿ ಆ ಸ್ವಾಮಿಗಳೇ ಲೇಪಿಸುವರಂತೆ. ಇದಕ್ಕೆ "ಗಂಧ ಏರಿಸುವದು" ಎಂದು ಅನ್ನುತ್ತಾರಂತೆ.

ಇನ್ನು ವರುಷದಲ್ಲಿ ಎರಡು ಸಲ ಅಂದರೆ ದವನದ ಹುಣ್ಣಿವೆ ಹಾಗೂ ಗೌರೀ ಹುಣ್ಣಿವೆಗೆ ಊರೊಳಗಿನ ಗುಡಿಯಿಂದ ಊರಹೊರಗಿರುವ ಗುಡಿಗೆ ವೈಭವದೊಂದಿಗೆ ಪಲ್ಲಕ್ಕಿಯನ್ನು ತೆಗೆದುಕೊಂಡು ಹೋಗಿ ಅಲ್ಲಿಯ ಪಲ್ಲಕ್ಕಿಯೊಂದಿಗೆ ಊರೊಳಗಿನ ಗುಡಿಗೆ ಬರುವರಂತೆ. ಈ ಉತ್ಸವ ಎರಡು ಮೂರು ದಿವಸ ನಡೆದು ಕೊನೆಯ ದಿವಸ ಹೊರಗಿನ ಗುಡಿಯ ಪಲ್ಲಕ್ಕಿಯನ್ನು ಹೊರಗಿನ ಗುಡಿಗೆ ಅದೇ ವೈಭವದಿಂದ ಕಳಿಸಿ ಬರುತ್ತಾರಂತೆ. ಪಲ್ಲಕ್ಕಿಯ ಮುಂದೆ ಜಂಗಮರು ಮಹಾತ್ಮರ ವಚನಗಳನ್ನು ಒಂದೇ ಸವನೆ ಹೇಳುತ್ತಾರಂತೆ.

ಪ್ರತಿ ದಿವಸ ಹಗಲಿರುಳು ಕೂಡಿ ಊರೊಳಗಿನ ಗುಡಿಯಲ್ಲಿ ಏಳು ಸಾರೆ, ಹಾಗೂ ಹೊರಗಿನ ಗುಡಿಯಲ್ಲಿ ಮೂರು ಸಾರೆ ಮಹಾ ವೈಭವದ ವಾದ್ಯಗಳೊಂದಿಗೆ ಪೂಜೆಯಾಗುವದಂತೆ. ಈ ಪೂಜಾಕಾಲದ ವಾದ್ಯಘೋಷವು ಸುತ್ತುಮುತ್ತು ಹರದಾರಿ ಎರಡು ಹರದಾರಿ ತನಕ ಕೇಳಿಸುವದಂತೆ.

ಇನ್ನು ಸಾಲೋಟಗಿಯ ಶ್ರೀ ಶಿವಯೋಗೀಶ್ವರರ ದೇವಾಲಯದ ಉತ್ಸವಾದಿಗಳಿಗೂ, ಕೊಡೇಕಲ್ಲಿನ ಶ್ರೀ ಬಸವೇಶ್ವರರ ಉತ್ಸವಾದಿಗಳಿಗೂ ಹೋಲಿಕೆಯಿದೆ. ಅದೇನೆಂದರೆ :

(೧) ಸಾಲೋಟಗಿಯ ಯುಗಾದಿಯ ಅನಂತರ ಪದ್ಯಪಂಚಮಿಯ ದಿವಸ ರಾತ್ರಿ ಊರೊಳಗಿನ ಹೆಣ್ಣುಗಂಡು ಸಣ್ಣದೊಡ್ಡವರೆಲ್ಲ ಶ್ರೀ ಶಿವಯೋಗೀಶ್ವರರ ಬಿಂದಿಗೆಗೆ ಕೊಡ ಕೊಡಗಳಿಂದ ಒಂದೇ ಸವನೆ ಅನೇಕ ತಾಸು (ರಾತ್ರಿ) ನೀರೆರೆಯುವರು. ಇದಕ್ಕೆ "ನೀರಾಟ"ವೆಂಬ ಹೆಸರು. ಬಿಂದಿಗೆಯ ಬಾಯಿಗೆ ಬಿಗಿಯಾಗಿ ಬೇವಿನೆಲೆಗಳನ್ನು ಕೂಡಿಸಿದ್ದರೂ ಅದರೊಳಗೆ ನೀರು ಹೊಕ್ಕು ಬಿಂದಿಗೆ ಎಷ್ಟು ತುಂಬಿದೆಯೆಂಬುದರ ಮೇಲಿಂದ ಆ ವರ್ಷದ ಭವಿಷ್ಯವನ್ನು ನಿರ್ಧರಿಸುವರು. ಆಗ ಗುಡಿಯಲ್ಲಿ ಒಂಬತ್ತು ದಿವಸ ಯೋಗಪೂಜೆ (ಶಿವಪೂಜೆ)ಯಾಗುವದು.

(೨) ಕೊಡೇಕಲ್ಲಿನಲ್ಲಿ ವರ್ಷದೊಳಗೆ ಅನೇಕ ಸಲ ಉತ್ಸವಗಳು ನಡೆಯುವಂತೆ ಸಾಲೋಟಗಿಯಲ್ಲಿ ವರ್ಷದಲ್ಲಿ ನಾಲ್ಕು ಸಲ (ಮೂರು ಮೂರು ತಿಂಗಳಿಗೊಮ್ಮೆ) ಪರ್ವಗಳಾಗುತ್ತವೆ. ಆ ಪರ್ವಕಾಲದಲ್ಲಿ ಊರೊಳಗಿನ ಜನರೆಲ್ಲ ಜೋಳದ ಬೋನವನ್ನು ಅಟ್ಟು ಗುಡಿಗೆ ಒಯ್ದು ಕೊಡುವರು. ಅಲ್ಲಿಯ ಸ್ವಾಮಿಗಳು ಇದನ್ನೆಲ್ಲ ಒಂದೆಡೆಗೆ ಒಟ್ಟುಗೂಡಿಸಿ ರಾತ್ರಿಯಲ್ಲಿ ಸರ್ವಜನರಿಗೆ ಪ್ರಸಾದ ರೂಪದಿಂದ ಹಂಚುವರು. ಜಾತಿಭೇದವಿಲ್ಲದೆ ಸರ್ವರೂ ಆ ಪ್ರಸಾದವನ್ನು ಭಕ್ತಿಭಾವದಿಂದ ಸ್ವೀಕರಿಸುವರು.

(೩) ಕೊಡೇಕಲ್ಲಿನ ಶರಣರು ವಚನಗಳನ್ನು ಬರೆದಿರುವಂತೆ ಸಾಲೋಟಗಿಯ ಶರಣರು "ಡಂಗುರ ಪದ"ಗಳನ್ನು ಬರೆದಿದ್ದಾರೆ. ಎರಡೂ ಊರುಗಳಲ್ಲಿ ಆಯಾ ವಚನ ಹಾಗೂ ಪದಗಳನ್ನು ಬಹು ಪವಿತ್ರವಾಗಿ ಎಣಿಸುತ್ತಾರೆ. ಸಾಲೋಟಗಿಯ ಡಂಗುರದ ಪದಗಳಲ್ಲಿಯೂ ೧. ಕಾಲಜ್ಞಾನ, ೨. ಖಂಡಜ್ಞಾನ, ೩. ನೀತಿಜ್ಞಾನ, ೪. ಬೋಧಜ್ಞಾನ ಎಂದು ಸ್ಥಲಕಟ್ಟಿನ ಪದಗಳಿವೆಯಂತೆ.

(೪) ಸಾಲೋಟಗಿಯಲ್ಲಿಯೂ ಒಂದು ಪ್ರಕಾರದ ವಿಶಿಷ್ಟ ಜಂಗಮರಿದ್ದಾರೆ. ಇವರಿಗೆ "ಬುಡಪಟ್ಟ"ದವರೆಂಬ ಹೆಸರುಂಟು. ಪಟ್ಟದ ಸ್ವಾಮಿಗಳು ವಿವಾಹಿತರಾಗಿರುತ್ತಾರೆ. ಅವರ ಹಿರೇಮಗನು ಮುಂದೆ ಪಟ್ಟಕ್ಕೆ ಬರುತ್ತಾನೆ. ಆತನಿಗೂ ಲಗ್ನವಾಗುತ್ತದೆ. ಈ ಹಿರೇಸ್ವಾಮಿಗಳೇ ಮುಖ್ಯ ಅರ್ಚಕರು.

(೫) ಸಾಲೋಟಗಿಯ ಗುಡಿಯೂ ಕೊಡೇಕಲ್ಲಿನ ಗುಡಿಯಂತೆ ಗುಮಟದ ಆಕಾರದ್ದಿದ್ದು, ಅಲ್ಲಿಯಂತೆ ಇಲ್ಲಿಯೂ ಗುಡಿಯೊಳಗಿನ ಗದ್ದುಗೆಯು ಮುಸಲ್ಮಾನರ ಮದಾರದಂತೆ ಇರುತ್ತದೆ.

(೬) ಕೊಡೇಕಲ್ಲಿನ ಶರಣರನ್ನು ಶ್ರೀ ಬಸವೇಶ್ವರರ ಅವತಾರವೆಂದು ತಿಳಿದುಕೊಳ್ಳುವಂತೆ ಸಾಲೋಟಗಿಯ ಶರಣರನ್ನು ಶ್ರೀ ಚೆನ್ನಬಸವೇಶ್ವರರೆಂದು ತಿಳಿದುಕೊಳ್ಳುವಂತೆ ತೋರುತ್ತದೆ. ಏಕೆಂದರೆ ಸಾಲೋಟಗಿಯಲ್ಲಿ ಡಂಗುರ ಪದಗಳನ್ನು ಹೇಳುವಾಗ ಮೇಲಿಂದ ಮೇಲೆ "ಚೆನ್ನಬಸವಾ, ಚೆನ್ನಬಸವಾ" ಎಂದು ಹಾಡಿನಲ್ಲಿ ಬರುತ್ತದೆ.

(೭) ಸಾಲೋಟಗಿಯಲ್ಲಿಯೂ ಕೊಡೇಕಲ್ಲಿನಂತೆ ಗಂಧ ಏರಿಸುವುದು ಹಾಗೂ ಮುಸಲ್ಮಾನೀ ಜಯಜಯಕಾರಗಳುಂಟು. ಇನ್ನೊಂದು ವಿಷಯವೆಂದರೆ, ಕೊಡೇಕಲ್ಲಿನಲ್ಲಿ ಇಂಥ ಸಮಾಧಿಗಳು (ಮಜಾರದಂತೆ) ಅನೇಕವಾಗಿದ್ದು ಒಮ್ಮೆ ಅಂಥ ಒಂದು ಸಮಾಧಿಯನ್ನು ನೋಡುವ ಪ್ರಸಂಗ ಬಂದಾಗ, ಅದರೊಳಗೆ ಯೋಗದಂಡ, ವಿಭೂತಿ, ರುದ್ರಾಕ್ಷಿ ಮೊದಲಾದ ಯೋಗಿಗಳಿಗುಪ್ಯುಕ್ತವಾದ ದಿವ್ಯ ವಸ್ತುಗಳು ಕಂಡುಬಂದವಂತೆ.

ಇನ್ನೇನು ? ಇದರಂತೆಯೇ ಅತ್ಯಂತ ಮಹತ್ವದ ಇನ್ನೊಂದು ವಿಷಯವನ್ನು ಸೂಚಿಸಿ ಈ ಲೇಖವನ್ನು ಮುಗಿಸುವೆನು. ಅದೇನೆಂದರೆ— ತೇರದಾಳದಲ್ಲಿರುವ ಶ್ರೀ ಅಲ್ಲಮಪ್ರಭುದೇವರ ಗುಡಿಯೂ ಈ ವರ್ಗದೊಳಗಿನದೇ ಹೇಗೆ ? ಎಂಬ ಊಹೆ ಬರುತ್ತದೆ. ಅಲ್ಲಿಯೂ ಮೇಲೆ ಹೇಳಿದ ಎರಡು ಸ್ಥಳಗಳಂತೆ ಪದಗಳ ಸಂಗ್ರಹವಿದೆ. ಅಂಥ ೬–೮ ಪುಸ್ತಕಗಳನ್ನು ಶ್ರೀ ಬುದ್ಧಯ್ಯಾ ಪುರಾಣಿಕ ಮಹಾಶಯರು ಪ್ರಕಟಗೊಳಿಸಿದ್ದಾರೆ. ಅಲ್ಲಿಯ ದೇವರ ಚಿಹ್ನವು ಮಗಿಯಂತೆ ತೋರುತ್ತದೆ. ಆ ದೇವರ ಭಕ್ತರ ಮನೆಗಳಲ್ಲೆಲ್ಲ ಮಗಿಯ ಪೂಜೆ ನಡೆಯುವಂತೆ ಕಾಣುತ್ತದೆ. ತೇರದಾಳದ ಶ್ರೀ ಅಲ್ಲಮಪ್ರಭುದೇವರು ಕೊಡೇಕಲ್ಲಿನ ಶ್ರೀ ಬಸವೇಶ್ವರರಂತೆಯೂ ಸಾಲೋಟಗಿಯ ಶ್ರೀ ಶಿವಯೋಗೀಶ್ವರ( ಶ್ರೀ ಚೆನ್ನಬಸವೇಶ್ವರ ) ರಂತೆಯೂ ಇತ್ತೀಚಿನ ಕಾಲದಲ್ಲಿ ಆಗಿಹೋದ ಪುನರವತಾರೀ (ಪುನಃ ಅವತಾರಿಗಳೆಂದು ಪ್ರಸಿದ್ಧರಾದ) ಮಹಾಯೋಗಿಗಳಾಗಿರಬಹುದೇ ? ಅಲ್ಲಿಂದ ಪ್ರಸಿದ್ಧವಾದ ಹಾಡುಗಳಲ್ಲಿ "ಮಗಿಯಪ್ರಭು" ಎಂಬವರು ರಚಿಸಿದ ಎಷ್ಟೋ ಹಾಡುಗಳುಂಟು. ಈ ಹಾಡುಗಳನ್ನು ಬರೆದವರು ಮೂಲಸ್ವಾಮಿಗಳ ಶಿಷ್ಯಪರಂಪರೆಯೊಳಗಿನ ಯಾರೋ ಒಬ್ಬ ಪ್ರಭು(ನಾಡೊಡೆಯರು)ಗಳಾಗಿದ್ದರೂ ಇವರಿಗೆ ಮೂಲಸ್ವಾಮಿಗಳದೇ ಹೆಸರು (ಭಕ್ತಿಯಿಂದ ತಾಯಿ-ತಂದೆಗಳಿಂದ) ಇಡಲ್ಪಟ್ಟಿರಬಹುದೇ ?

ಇಷ್ಟೆಲ್ಲ ಹೇಳುವುದಕ್ಕೆ ಕಾರಣವೇನೆಂದರೆ ಶ್ರೀಮಾನ್ ಬುದ್ಧಯ್ಯ ಪುರಾಣಿಕ ಮಹಾಶಯರು ಬರೆದ "ಶ್ರೀ ಅಲ್ಲಮಪ್ರಭುಗಳ ಚರಿತ್ರ"ಕ್ಕೆ ಸಂಬಂಧಿಸಿದ ಗ್ರಂಥದಲ್ಲಿ ಮೂಲ ಪ್ರಭುದೇವರೇ ತಮ್ಮ ಸಂಚಾರ ಕಾಲದಲ್ಲಿ ತೇರದಾಳಕ್ಕೂ ಒಮ್ಮೆ ಬಂದಿರಬಹುದೆಂದು ಸಾಧಿಸಿದ್ದಾರೆ. ಹಾಗೆ ಇದ್ದರೂ ಇರಬಹುದು. ಆದರೆ ಮೇಲೆ ಹೇಳಿದ ಎರಡು ಊರುಗಳಲ್ಲಿ ಪುರಾತನ ಶರಣರ ಹೆಸರಿನಿಂದಲೇ ಪುನಃ ಮಹಾಪುರುಷರು ಬಂದಂತೆ ತೇರದಾಳದಲ್ಲಿಯೂ ಆಗಿರಬಹುದೇ ? ಎಂಬ ಶಂಕೆಗೆ ಅವಕಾಶವಿದೆ. ಅಲ್ಲಿಯವರು ಈ ಬಗ್ಗೆ ಹೆಚ್ಚು ಸಂಶೋಧನೆ ನಡಿಸಿ ಜನತೆಯ ಮುಂದಿಟ್ಟರೆ ಹೆಚ್ಚು ಉಪಯೋಗವಾಗುವದೆಂದು ನನ್ನ ನಂಬಿಗೆ.

ಶ್ರೀ ಬಸವೇಶ್ವರ ಹಾಗೂ ಶ್ರೀ ಚೆನ್ನಬಸವೇಶ್ವರರ ಪುನರವತಾರಗಳ ಪುರಾಣಗಳೂ ಲೀಲೆಗಳೂ ಪ್ರಕಟವಾಗಿರುವಾಗ ಶ್ರೀ ಅಲ್ಲಮಪ್ರಭುದೇವರ ಪುನರವತಾರದ ಪುರಾಣವೂ ಲೀಲೆಯೂ ಆ ಕಾಲಕ್ಕೆ ಆಗಿರಲಾರದೇ ? ಹಾಗಿದ್ದುದಾದರೆ ತೇರದಾಳದ ಶ್ರೀ ಪ್ರಭುದೇವರ ವಿಷಯವು ಈ ಮೂರನೆಯ (ನಿಜವಾಗಿ ನೋಡಿದರೆ ಮೊದಲನೆಯ) ಕಥೆಯಾಗಿರಬಹುದೇ ? ಎಂದು ನನಗೆ ಅನಿಸುತ್ತದೆ. ಅಹುದೋ ಅಲ್ಲವೋ ಎಂಬುದರ ಬಗೆಗೆ ಬಲ್ಲವರು ಹೆಚ್ಚಿಗೆ ವಿಚಾರ ಮಾಡಬಹುದು.

ಅಥವಾ ನಾಡಿನಲ್ಲಿ ಇನ್ನೂ ಅನೇಕ ಕಡೆಗೆ ಇಂಥ ಲೀಲೆಗಳು ನಡೆದಿರಬಹುದು. ಪುರಾತನ ಕಾಲದ ಶರಣರ ಹೆಸರಿನಿಂದ ಅನೇಕ ಕಡೆಗೆ ನೂತನ ಶರಣರು ಉದಯಿಸಿರಬಹುದು. ಈ ದೃಷ್ಟಿಯಿಂದ ವಿಚಾರ ಮಾಡಿದರೆ ಪುರಾತನ ಶಿವಶರಣರ ಕಾಲದ ಇತಿಹಾಸವನ್ನು ಮಧ್ಯಕಾಲದ ಸತ್ಪುರುಷರ ಇತಿಹಾಸವನ್ನು ವಿಂಗಡಿಸಲಿಕ್ಕೆ ಸುಲಭವಾಗುತ್ತದೆ.

**ಶಿವಾನುಭವ ೨೨-೧೦ ಜುಲೈ ೧೯೪೮**

# ತೇರದಾಳದ "ಪ್ರಭುದೇವರು"

ಮಧ್ಯಕಾಲದ ಮಹಾಪುರುಷರು

---

## "ವೀರವಸಂತರಾಯನು" ಇವರ ಶಿಷ್ಯನಾಗಿರಬಹುದೆ ?

ಕೊಡೇಕಲ್ಲಿನ ಶ್ರೀ ಬಸವೇಶ್ವರರು ಹಾಗೂ ಸಾಲೋಟಗಿಯ ಶ್ರೀ ಶಿವ ಯೋಗೀಶ್ವರರು ಮಧ್ಯಕಾಲದ (ವಿಜಯನಗರ ಅರಸರ ಕಾಲದ ಹಿಂದು ಮುಂದಿನ) ಮಹಾಪುರುಷರೆಂದೂ, ಅವರನ್ನು ಕಲ್ಯಾಣದ ಶ್ರೀ ಬಸವೇಶ್ವರ ಹಾಗೂ ಶ್ರೀ ಚೆನ್ನ ಬಸವೇಶ್ವರರ ಪುನರವತಾರವೆಂದೂ ಆ ಕಾಲದ ಜನರ ಭಾವನೆಯಿದ್ದಿತೆಂಬ ವಿಷಯ ವನ್ನು ನಾನೇ ಇದೇ ಜುಲೈ ತಿಂಗಳ "ಶಿವಾನುಭವ" ಪತ್ರಿಕೆಯಲ್ಲಿ ಒಂದು ಲೇಖನ ವನ್ನು ಬರೆದಿದ್ದು ಶ್ರೀ ಅಲ್ಲಮಪ್ರಭುದೇವರ ಪುನರವತಾರವೆಂದು ನಂಬಲಾದ ಒಬ್ಬ ಮಹಾಪುರುಷರು ಆ ಮಧ್ಯಕಾಲದಲ್ಲಿ ಕನ್ನಡ ನಾಡಿನಲ್ಲಿ ಎಲ್ಲಿಯಾದರೂ ಬಂದಿರ ಲಾರರೇ ? ಹಾಗಿದ್ದರೆ ತೇರದಾಳದ ಪ್ರಭುದೇವರು ಅವರೇ ಆಗಿರಬಹುದೇ ? ಎಂಬ ಊಹೆಯನ್ನು ನನ್ನ ಅದೇ ಲೇಖನದ ಕೊನೆಯಲ್ಲಿ ಉಲ್ಲೇಖಿಸಿರುವೆನು.

ಇದೀಗ ನನಗೆ ಈ ವಿಷಯದಲ್ಲಿ ಹೆಚ್ಚಿನ ಸಂಗತಿಗಳು ತಿಳಿದುಬಂದದ್ದರಿಂದ ಆ ಬಗೆಗೆ ಒಂದೆರಡು ಮಾತುಗಳನ್ನು ಇದರಡಿಯಲ್ಲಿ ಬರೆಯುವೆನು.

ವಿರಕ್ತಮಠಗಳ ಇತಿಹಾಸ ಗ್ರಂಥವಾಗಿರುವ "ನಿರಂಜನವಂಶ ರತ್ನಾಕರ"ದಲ್ಲಿ ಹೀಗೆ ಹೇಳಲಾಗಿದೆಯಂತೆ :

"ಆದಿ ಅಲ್ಲಮಪ್ರಭುಗಳ ತರುವಾಯ ಹನ್ನೆರಡನೆಯ ಪಟ್ಟದಸ್ವಾಮಿಗಳು ಶ್ರೀ ಬಸವಪ್ರಭು ದೇವರು. ಇವರು ಪಟ್ಟವೇರಿದ ಅನಂತರ ಕೆಳದೀ ದೇಶಕ್ಕೆ ಬಂದು ಅಲ್ಲಿ ಕೆಲಕಾಲವಿದ್ದು ಅಲ್ಲಿಯ ಜನರಿಗೆ ಜ್ಞಾನೋಪದೇಶವನ್ನು ಮಾಡುತ್ತ ಅನೇಕ ಮಹಿಮೆಗಳನ್ನು ತೋರಿಸಿದರು. ಅಲ್ಲಿಂದ ಹಿರೇಸೂರು ಕಿರೇಸೂರು (ಹುಬ್ಬಳ್ಳಿಯ ಪತ್ತರ) ಗ್ರಾಮಗಳಿಗೆ ಬಂದು ಅಲ್ಲಿ ತಮ್ಮ ಕುರುಹುಗಳನ್ನಿಟ್ಟು, ಹುಕ್ಕೇರಿ ಸೀಮೆಗೆ ಬಂದು ಅಲ್ಲಿ ಜೈನ ಮತಸ್ಥರಿಗೆ ಶಿವಮತವನ್ನು ಬೋಧಿಸಿ ತಮ್ಮ ಭಕ್ತರನ್ನು ಮಾಡಿಕೊಂಡರು. ಅಲ್ಲಿಂದ ಹನಗುಂಡಿ (ತೇರದಾಳ ಸಮೀಪ) ಎಂಬ

ಗ್ರಾಮಕ್ಕೆ ಬಂದು ಅಲ್ಲಿಯೇ ನಿರ್ಬಯಲಾದರು. ಆ ಸಮಯದಲ್ಲಿ ಅಲ್ಲಿಯ ಭಕ್ತರ ಇಚ್ಛೆಯ ಮೇರೆಗೆ ತಮ್ಮ ಕಮಂಡಲುವಾದ ಮಗಿಯನ್ನೂ ಹಾವುಗೆಯನ್ನೂ ಬೆತ್ತ ವನ್ನೂ ತಮ್ಮ ಕುರುಹಾಗಿ ಇಟ್ಟರು. ಆ ಸ್ಥಳದಲ್ಲಿ ಭಕ್ತರು ಒಂದು ಮಠವನ್ನು ಕಟ್ಟಿಸಿ, ಅಲ್ಲಿ ಆ ಮಗಿಯನ್ನೂ ಬೆತ್ತ ಹಾವುಗೆಗಳನ್ನೂ ಇಟ್ಟು ಈಗಲೂ ಪೂಜಿಸು ತ್ತಿರುವರು.'

ಅಲ್ಲದೆ ಈ ಸ್ವಾಮಿಗಳು ತೇರದಾಳಕ್ಕೆ ಬರುವಾಗ ಅವರ ಸಂಗಡ ಅವರ ಮುಖ್ಯ ಶಿಷ್ಯರಾದ ಆದಿಲಿಂಗೇಶ ಎಂಬವರೂ, ಕರಿಬಸವ ದೇಶಿಕೇಂದ್ರ ಹಾಗೂ ಚೆನ್ನಪ್ಪದೇವರೆಂಬ ಭಕ್ತರೀರ್ವರೂ ಬಂದಿದ್ದರಂತೆ.

ಬಸವಪ್ರಭುದೇವರು ತಾವು ನಿರ್ಬಯಲಾಗುವ ಸಮಯದಲ್ಲಿ ಕರಿಬಸವದೇಶಿ ಕೇಂದ್ರ ಹಾಗೂ ಚೆನ್ನಪ್ಪದೇವರೆಂಬ ಉಭಯ ಭಕ್ತರನ್ನು ತಮ್ಮ ಹತ್ತರ ಕರೆದು ಅವರಲ್ಲಿ ಕರಿಬಸವದೇಶಿಕೇಂದ್ರನಿಗೆ ಚೆನ್ನಪ್ಪನ ಮಗಳ ಪಾಣಿಗ್ರಹಣ ಮಾಡಿಸಿ ನೀನು ಗೃಹಸ್ಥಾಶ್ರಮಿಯಾಗಿ ಇಲ್ಲಿಯೇ ಇರು, ಎಂದು ಬೋಧಿಸಿದರು. ಆಮೇಲೆ ಚೆನ್ನಪ್ಪನನ್ನು ಕರೆದು ನಿನಗೇನು ಬೇಕೆಂದು ಕೇಳಲು, ಅದಕ್ಕಾತನು 'ಸ್ವಾಮಿ, ನನಗೇನೂ ಬೇಡ, ನನಗೂ ನನ್ನ ಮುಂದಿನ ಸಂತತಿಯವರಿಗೂ ಜನ್ಮಜನ್ಮಾಂತರದಲ್ಲಿ ನಿನ್ನ ಪಾದಸೇವೆಯೇ ಲಭಿಸಲಿ.' ಎಂದು ಪ್ರಾರ್ಥಿಸಿದನು. ಅದಕ್ಕೆ ಸ್ವಾಮಿಗಳು ಚೆನ್ನಪ್ಪನ ಇಬ್ಬರು ಗಂಡುಮಕ್ಕಳನ್ನು ಹತ್ತಿರ ಕರೆದು ಅವರ ಮಸ್ತಕದ ಮೇಲೆ ಹಸ್ತ ವನ್ನಿಟ್ಟು 'ನಿಮ್ಮ ಹಾಗೂ ನಿಮ್ಮ ಸಂತತಿಯವರ ಕಡೆಯಿಂದಲೇ ಸದಾ ನನ್ನ ಪಾದ ಸೇವೆ ನಡೆಯಲಿ' ಎಂದು ಆಶೀರ್ವದಿಸಿದರಂತೆ.

ಒಂಟಮುರಿಯ ದೇಸಾಯರೂ ಹನಗಂಡಿಯ ದೇಸಾಯರೂ ಈ ದೇವಸ್ಥಾನದ ಪರಮಭಕ್ತರು. ಒಂಟಮುರಿ ದೇಸಾಯರ ಮೂಲಪುರುಷ "ಬಸವಂತರಾಯ"ನು ಈ ಸ್ವಾಮಿಗಳ ಕೃಪೆಯಿಂದ ಜನ್ಮಿಸಿದವನು. ಈತನ ಬಗೆಗೆ ಲೇಖನದ ಕೊನೆಯಲ್ಲಿ ಒಂದು ಮಹತ್ವದ ವಿಚಾರವನ್ನು ಮಂಡಿಸಲಿದ್ದೇನೆ. ಸಂಶೋಧಕರು ಅತ್ತ ಗಮನ ಕೊಡಬೇಕಾಗಿ ಬಿನ್ನವಿಸುವೆ.

ಆದಿ ಅಲ್ಲಮಪ್ರಭುದೇವರಿಂದ ಹನ್ನೆರಡನೆಯ ಪಟ್ಟದವರಾದ ಮೇಲ್ಕಾಣಿಸಿದ ಶ್ರೀ ಬಸಪಪ್ರಭು ಸ್ವಾಮಿಗಳ ಮಹಿಮೆಯನ್ನು ಮಗಿಯ ಪ್ರಭು, ಗುರುಬಸವ ಕವಿ, ಚೆನ್ನಶ್ರೀಪ್ರಭು ಎಂಬ ಮೂವರು ಕವಿಗಳು ಅನೇಕ ಹಾಡುಗಳಿಂದ ಬಣ್ಣಿಸಿರುವರು. ಅವುಗಳಲ್ಲಿ ಶ್ರೀ ಆದಿ ಅಲ್ಲಮಪ್ರಭುವಿಗೂ ಚರಿತ್ರನಾಯಕರಾದ ಶ್ರೀ ಬಸವಪ್ರಭು ಸ್ವಾಮಿಗಳಿಗೂ ಅಭೇದ ಸಂಬಂಧವನ್ನು ಭಾವಿಸಿ ಸ್ತುತಿಸಲಾಗಿದೆಯಂತೆ. ಉದಾಹರಣಾರ್ಥವಾಗಿ- "ಜೋ ಜೋ ಎನ್ನಿ ಅಸಮ ಅಲ್ಲಮಗೆ। ಜೋ ಜೋ ಎನ್ನಿ ಬಸವ ಪ್ರಭುವಿಗೆ॥"

ಇದರ ಮೇಲಿಂದ ಮೇಲ್ಕಾಣಿಸಿದ ತೇರದಾಳದ ಶ್ರೀ ಬಸವಪ್ರಭುದೇವ ಸ್ವಾಮಿಗಳನ್ನು ಕಲ್ಯಾಣಪುರದ ಶ್ರೀ ಆದಿ ಅಲ್ಲಮಪ್ರಭುದೇವರ ಪುನರವತಾರವೆಂದು ಆ ಕಾಲದ ಅವರ ಭಕ್ತರು ತಿಳಿದುಕೊಂಡಿದ್ದರೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಈ ಸ್ವಾಮಿವರ್ಯರು ವಿಜಯನಗರದವರ ಕಾಲದಲ್ಲಿ ಅತ್ಯಂತ ಪ್ರಖ್ಯಾತರಾಗಿದ್ದ ಶ್ರೀ ತೋಂಟದ ಸಿದ್ಧಲಿಂಗ ಯತಿವರರ ಪೂರ್ವಪರಂಪರೆಯೊಳಗಿನವ-ರೊಬ್ಬರಂತೆ. ತೋಂಟದ ಸಿದ್ಧಲಿಂಗ ಯತಿವರರೆಂದರೆ ಕಲ್ಯಾಣದ ಶರಣರ ಮಹಾಸಂಭ್ರಮದ ಅನಂತರ ವಿಜಯನಗರದವರ ಕಾಲದಲ್ಲಿ ೧೦೧ ಜನ ವಿರಕ್ತರ ಮಹಾ ಅಂದೋಲನದ ಮೂಲ ಪುರುಷರಾಗಿ ಪುನಃ ಶರಣಸಾಮ್ರಾಜ್ಯವನ್ನು ನಾಡಿನಲ್ಲಿ ಮೆರೆಯಿಸಿದರೆಂಬ ಮಾತು ಸರ್ವ ಜನರಿಗೆ ತಿಳಿದ ವಿಷಯವು. ಅವರಿಗಿಂತ ಸ್ವಲ್ಪ ಪೂರ್ವದಲ್ಲಿಯೇ ಆ ಕಾರ್ಯವನ್ನು ಪ್ರಸ್ತುತ ಚರಿತ್ರನಾಯಕರಾದ ಶ್ರೀ ಬಸವ ಪ್ರಭುದೇವ ಸ್ವಾಮಿಗಳು ಗದ್ದಿಗೆಗೊಳಿಸಿದರೆಂದು ಹೇಳಿದರೆ ತಪ್ಪಾಗದು. ೧೨ನೆಯ ಶತಮಾನದ ಕೊನೆಯಲ್ಲಿ ಕೆಲಕಾಲದ ಮಟ್ಟಿಗೆ ಅಡಗಿಹೋದ ಶಿವಶರಣ ಸಾಮ್ರಾಜ್ಯವು ವಿಜಯನಗರದ ಕಾಲದಲ್ಲಿ ಪುನಃ ತಲೆಯೆತ್ತುವ ಸುಮಾರಿಗೆ ಅನೇಕಾನೇಕ ಮಹಾಪುರುಷರು ಉದಯಿಸಿರಬೇಕೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಪ್ರಸ್ತುತ ಚರಿತ್ರನಾಯಕರಾದ ಶ್ರೀ ಬಸವಪ್ರಭು ಸ್ವಾಮಿಗಳು ಅಂಥ ಮಹಾಪುರುಷರಲ್ಲೊಬ್ಬರು.

ಕೊಡೇಕಲ್ಲು ಹಾಗೂ ಸಾಲೋಟಗಿಯ ಮಹಾಪುರುಷರು ಹಿಂದೂ ಮುಸ್ಲೀಂ ಐಕ್ಯವನ್ನು ಸಾಧಿಸಿದರೆ ಈ ಬಸವಪ್ರಭುದೇವರು ಶಿವಮತವನ್ನು ಪುನರುಜ್ಜೀವಿಸಲಿಕ್ಕೆ ಯತ್ನಿಸಿದವರು. ಒಬ್ಬೊಬ್ಬ ಮಹಾಪುರುಷರ ಕಾರ್ಯ ಒಂದೊಂದು ಪ್ರಕಾರ.

ತೇರದಾಳದ ಮಹಾಪುರುಷರ ಚರಿತ್ರೆಯಲ್ಲಿಯೂ ಸಾಲೋಟಗಿಯ ಮಹಾ ಪುರುಷರ ಚರಿತ್ರೆಯಲ್ಲಿಯೂ ಕೆಲವು ಸಾಮ್ಯಗಳಿವೆ. ಅವು ಯಾವವೆಂದರೆ :

(೧) ಸಾಲೋಟಗಿಯ ಮಹಾಪುರುಷರೂ ತಾವು ನಿರ್ಬಯಲಾಗುವ ಸಮಯದಲ್ಲಿ ತಮ್ಮ ಶಿಷ್ಯಳೊಬ್ಬಳ ಮಕ್ಕಳಿಬ್ಬರಿಗೆ "ಹಿರಿಯಯ್ಯ" "ಚಿಕ್ಕಯ್ಯ" ಎಂಬ ಹೆಸರನ್ನಿಟ್ಟು ಅವರ ಸಂತತಿಯವರಿಂದಲೇ ಸದಾಕಾಲ ತಮ್ಮ ಪಾದಸೇವೆ ನಡೆಯಬೇಕೆಂದು ಆಶೀರ್ವದಿಸಿರುವರು. ಅದು ಇಂದಿಗೂ ನಡೆದು ಬಂದಿದೆ.

(೨) ತೇರದಾಳದ ಮಹಾಪುರುಷರ ಮಹಿಮೆಯನ್ನು ಅವರ ಶಿಷ್ಯರಾದ ಮಗಿಯನರೇಂದ್ರಾದಿಗಳು ಹಾಡುಗಳಿಂದ ಬಣ್ಣಿಸಿರುವಂತೆ ಸಾಲೋಟಗಿಯ ಮಹಾ ಪುರುಷರ ಶಿಷ್ಯನಾದ ಗಂಗಾಧರ ಕವಿಯೂ ಅನೇಕ ಹಾಡುಗಳಿಂದ ಬಣ್ಣಿಸಿದ್ದಾನೆ. ಆ ಹಾಡುಗಳಲ್ಲಿ ಆ ಮಹಾಪುರುಷರಿಗೆ "ಚೆನ್ನಬಸವಾ, ಚೆನ್ನಬಸವಾ" ಎಂದು ಅನೇಕ ಕಡೆಗೆ ಸಂಬೋಧಿಸಲಾಗಿದೆ.

(೩) ತೇರದಾಳದ ಮಹಾಪುರುಷರು ತಮ್ಮ ಶಿಷ್ಯನಾದ ಕರಿಬಸವದೇಶಿಕೇಂದ್ರನಿಗೆ ಲಗ್ನಮಾಡಿ ಗೃಹಸ್ಥಾಶ್ರಮದಲ್ಲಿಟ್ಟಂತೆ ಸಾಲೋಟಗಿಯ ಮಹಾಪುರುಷರೂ

ತಮ್ಮ ಭಕ್ತರಾದ "ಹಿರಿಯಯ್ಯ" "ಚಿಕ್ಕಯ್ಯ" ಎಂಬವರಿಗೆ ಗೃಹಸ್ಥಾಶ್ರಮಿಗಳಾಗಿದ್ದುಕೊಂಡು ಪಟ್ಟವನ್ನು ನಡಿಸಲು ಆಜ್ಞೆಮಾಡಿ, ಆ ಬಗೆಯ ಪದ್ಧತಿಯು ಇದೇ ಮೊದಲಿನದೆಂದೂ ಆದ್ದರಿಂದಲೇ ಇದಕ್ಕೆ "ಬುಡಪಟ್ಟ" (ಆದಿಪಟ್ಟ)ವೆಂದೂ ಅವರು ಹೆಸರನ್ನಿಟ್ಟಿರುವರು.

ಹೀಗೆ ಎಲ್ಲ ಮಹಾಪುರುಷರೂ ಕಾಲೋಚಿತವಾಗಿ ಒಂದಿಲ್ಲೊಂದು ಹೊಸ ಪದ್ಧತಿಯನ್ನು ಬಳಕೆಯಲ್ಲಿ ತಂದಿರುವರು. ಹಾಗೂ ಪುರಾತನದ ಪುನರುದ್ಧಾರ ಮಾಡಿರುವರೆಂಬುದಂತೂ ಸರಿಯೇ.

ಈ ರೀತಿಯಿಂದ ಕರ್ನಾಟಕ ಮಧ್ಯಕಾಲದ ಇತಿಹಾಸವು ಅತ್ಯಂತ ಮಹತ್ವದ್ದಾಗಿದೆ. ಅದು ನಿರ್ಜೀವ ಕಳೇಬರದಲ್ಲಿ ಜೀವ ತುಂಬಿದ ಕಾಲ. ಅಳಿದು ಹೋಗಲಿದ್ದುದನ್ನು ಉಳಿಸಿಕೊಂಡ ಕಾಲ.

ಬಲ್ಲವರು ಇದಕ್ಕಿಂತ ಹೆಚ್ಚಿಗೆ ಶೋಧ ಮಾಡಲೆಂದು ಬಿನ್ನವಿಸಿಕೊಂಡು ನನ್ನೀ ಲೇಖವನ್ನು ಮುಗಿಸುವೆ.

ಆದರೆ ತೇರದಾಳ ಈ ವಿಷಯದಲ್ಲಿ ರಾ. ಬ. ಶ್ರೀಮಾನ್ ಹಳಕಟ್ಟಿಯವರೂ, ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಯವರೂ ಹಿಂದೆ ಈ ಮೊದಲೇ ಅನೇಕ ಲೇಖನಗಳನ್ನು ಬರೆದು ತೇರದಾಳದ ಮಹಾಪುರುಷರು "ಮಧ್ಯಕಾಲದ ಮಹಾಪುರುಷರೇ" ಎಂಬ ಸಿದ್ಧಾಂತಕ್ಕೆ ಬಂದಿದ್ದಾರಂತೆ. ನಾನೂ ಅದನ್ನೇ ಅನುಮೋದಿಸುವೆ. ಶ್ರೀ ಬುದ್ದಯ್ಯಸ್ವಾಮಿ ಪುರಾಣಿಕ ಮಹಾಶಯರು "ಶ್ರೀ ಬಸವಪ್ರಭು ಹಾಗೂ ಆದಿ ಶ್ರೀ ಅಲ್ಲಮಪ್ರಭು" ಇವರ ಅಭೇದ ಸಂಬಂಧದ ಭಕ್ತಿಭಾವದಲ್ಲಡಗಿರುವ ಸತ್ಯವನ್ನು ತಮ್ಮ ಭಕ್ತಿಪರವಶತೆಯ ಮೂಲಕ ವಿಂಗಡಿಸಿಕೊಳ್ಳಲಾರದ್ದರಿಂದ "ಇವರೇ ಆದಿ ಅಲ್ಲಮಪ್ರಭುಗಳು" ಎಂದು ತಮ್ಮ "ಅನಾದಿ ಅಲ್ಲಮಪ್ರಭು" ಎಂಬ ಗ್ರಂಥದಲ್ಲಿ ಸಿದ್ಧಮಾಡಲು ಪ್ರಯತ್ನಿಸಿದ್ದಾರೆ. ಆದರೆ ಇವರು 'ಮಧ್ಯಕಾಲದ ಮಹಾಪುರುಷರೆಂ"ಬುದೇ ಸರಿ.

"ನಿರಂಜನವಂಶರತ್ನಾಕರ"ದಲ್ಲಿ ಹೇಳಲಾಗಿದೆಯೆಂದು ಶ್ರೀ ಬುದ್ದಯ್ಯ ಪುರಾಣಿಕ ಮಹಾಶಯರು ಉಲ್ಲೇಖಿಸಿರುವ ಒಂದು ಮಹತ್ವದ ವಿಷಯವೇನೆಂದರೆ, ತೇರದಾಳದ ಸ್ವಾಮಿಗಳ ಕೃಪೆಯಿಂದ ಅವರ ಭಕ್ತದಂಪತಿಗಳಿಗೆ ಒಬ್ಬ ಮಹತ್ಪುತ್ರನು ಜನಿಸಿದನೆಂದೂ, ಆತನಿಗೆ ಬಸವಂತರಾಯನೆಂದು ಹೆಸರಿಡಲಾಯಿತೆಂದೂ, ಆತನು ಮುಂದೆ ಘನತೆಗೇರಿ ಚಿಕ್ಕೋಡಿ ನಾಡಿಗೆ ದೊಡ್ಡ ಜಹಾಗೀರದಾರನಾದನೆಂದೂ ಆತನ ವಂಶದವರೇ ಮುಂದೆ ವಂಟಮುರಿಯನ್ನು ಕಟ್ಟಿಸಿದರೆಂದೂ ಹೇಳಲಾಗಿದೆ. "ವೀರವಸಂತ"ರಾಯನು ಕ್ರಿ. ಶ. ೧೫೮೪ ರಲ್ಲಿ ಬರುವನೆಂದು ಶ್ರೀ ಚೆನ್ನಬಸವೇಶ್ವರ ಪುರಾಣದಲ್ಲಿ ಹೇಳಲ್ಪಟ್ಟವನು ಈ "ಬಸವಂತರಾಯ"ನೇ ಆಗಿರಬಹುದೇ? ಈ ವಿಷಯವನ್ನು ಶೋಧಕರು ವಿಚಾರಮಾಡಬೇಕು.

(ಶಿವಾನುಭವ ೨೨-೧೨ ಸಪ್ಟೆಂಬರ ೧೯೪೯)

# ಶಿವಶರಣರ ಚಳವಳಿಯು ಮುಂದಿನ ಪರಂಪರೆಯು ಇತಿಹಾಸ

---

ಶಿವಶರಣರು ಕಲ್ಯಾಣವನ್ನು ಬಿಟ್ಟು ಉಳಿವೆಗೆ ಹೋದ ಬಳಿಕ ಮುಂದೆ ಶರಣರ ಚಳವಳಿಯು ಯಾವ ಸ್ವರೂಪದಲ್ಲಿ ಹೇಗೆ ಉಳಿಯಿತು ? ಆಮೇಲೆ ಅದು ಮತ್ತೆ ಯಾವಾಗ ತಲೆಯೆತ್ತಿತು ? ಅದರ ಪರಿಣಾಮವೇನಾಯಿತು ? ಇವೇ ಮುಂತಾದ ಪ್ರಶ್ನೆಗಳನ್ನು ತಿಳಿದುಕೊಳ್ಳುವ ಇಚ್ಛೆ ನಮ್ಮೆಲ್ಲರಲ್ಲಿ ತಲೆದೋರುವುದು ಸಹಜ. ಆದರೆ ಈ ವಿಷಯವನ್ನು ತಿಳಿಸಿಕೊಡುವ ಪ್ರಾಮಾಣಿಕ ಗ್ರಂಥಗಳಾವವು ?

ಈಗ ನಮಗೆ ತಿಳಿದಮಟ್ಟಿಗೆ ವಿರೂಪಾಕ್ಷ ಪಂಡಿತನ "ಚೆನ್ನಬಸವ ಪುರಾಣ", ಹೆಸರು ಹೇಳಿಕೊಳ್ಳದ ಗ್ರಂಥಕಾರರೊಬ್ಬರು ಹಿಂದಿನ ಕಾಲದಲ್ಲಿಯೇ ಬರೆದಿಟ್ಟ ವಿರಕ್ತಸ್ವಾಮಿಗಳ ಪಟ್ಟಪರಂಪರೆಯನ್ನು ಹೇಳುವ "ನಿರಂಜನವಂಶರತ್ನಾಕರ"ವೆಂಬ ಅಪೂರ್ಣಗ್ರಂಥ ಹಾಗೂ ಆಧುನಿಕ ಪ್ರಖ್ಯಾತ ಗ್ರಂಥವಾದ 'ಕರ್ನಾಟಕ ಕವಿಚರಿತೆ' ಈ ಮೂರು ಗ್ರಂಥಗಳ ಸಹಾಯದಿಂದ ನಾವು ಮೇಲ್ಕಾಣಿಸಿದ ಪ್ರಶ್ನೆಗಳ ಸಮಾಧಾನವನ್ನು ತಕ್ಕಷ್ಟು ಮಾಡಿಕೊಳ್ಳಬಹುದು.

ವಿಜಯನಗರದಲ್ಲಿ ಪ್ರೌಢದೇವರಾಯನ ಕಾಲದಲ್ಲಿ (ಕ್ರಿಸ್ತಶಕ ೧೪೪೯ ರಿಂದ ೧೪೪೬) ಮಹಾಪ್ರಧಾನ ಲಕ್ಕಣ್ಣದಂಡೇಶನೂ, ದಂಡನಾಯಕನಾದ ಜಕ್ಕಣಾರ್ಯನೂ ಆ ಕಾಲದಲ್ಲಿ ಐಕ್ಯಸ್ಥಲದ ಮಹಾ ಅನುಭವವನ್ನು ಪಡೆದ ನೂರೊಂದು ವಿರಕ್ತ ಯತಿಗಳಿಗೆ ಶಿಷ್ಯರಾಗಿ ಪುರಾತನ ಶಿವಶರಣರ ತತ್ತ್ವವನ್ನು ಪುನಃ ಪ್ರಚಾರ ಮಾಡತೊಡಗಿದರೆಂಬುದನ್ನು ಸರ್ವರೂ ಬಲ್ಲರು.

ಆದರೆ ಶ್ರೀ ಬಸವೇಶ್ವರಾದಿ ಶಿವಶರಣರ ಕಾಲವಾದ ಕ್ರಿಸ್ತೀಯ ೧೨ ನೆಯ ಶತಮಾನದಿಂದ ಈ ನೂರೊಂದು ವಿರಕ್ತರ ಕಾಲವಾದ ೧೫ ನೆಯ ಶತಮಾನದ ವರೆಗಿನ ಸುಮಾರು ೩೦೦ ವರ್ಷಗಳ ಕಾಲ ಈ ಚಳವಳಿಯು ಯಾರಿಂದ ಹೇಗೆ ನಡಿದಿದ್ದಿತೆಂಬುದೊಂದು ವಿಚಾರಣೀಯ ಪ್ರಶ್ನವಷ್ಟೇ ?

ಮಹಾತಪೋನಿಧಿಗಳೂ ಪರಮಕಾರಣಿಕರೂ ಆಗಿದ್ದ ಶ್ರೀ ರೇವಣಸಿದ್ಧೇಶ್ವರರ ಪುತ್ರರಾದ ರುದ್ರಮುನಿದೇವರು ಶ್ರೀಬಸವಾದಿ ಶಿವಶರಣರ ಅನಂತರ ಈ ಚಳವಳಿ

ಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಶ್ರೀಶೈಲ ಪ್ರಾಂತದಲ್ಲಿ ನೆಲಿಸಿ ತಮ್ಮ ಶಿಷ್ಯರಾದ ಮುಕ್ತಿಮುನಿಗಳಿಂದ ಪ್ರಚಾರ ಕಾರ್ಯವನ್ನು ಮುಂದುವರಿಸಿದರೆಂದು "ಚೆನ್ನಬಸವ ಪುರಾಣ" ಹಾಗೂ "ನಿರಂಜನವಂಶರತ್ನಾಕರ"ಗಳಲ್ಲಿ ಹೇಳಿದೆ.

ರುದ್ರಮುನಿ, ಆತನ ಶಿಷ್ಯ ಮುಕ್ತಿಮುನಿ, ಆತನ ಶಿಷ್ಯ ದಿಗಂಬರ ಮುಕ್ತಿಮುನಿ, ಆತನ ಶಿಷ್ಯ ಕುಮಾರ ಚೆನ್ನಬಸವೇಶ್ವರ, ಇವರಲ್ಲದೆ ಮುಕ್ತಿಮುನಿಯ ಇನ್ನೊಬ್ಬ ಶಿಷ್ಯ ಅಜಾತ ಭಿಕ್ಷಾವರ್ತಿಸ್ವಾಮಿಗಳು ಇಷ್ಟು ಜನ ಸತ್ಪುರುಷರ ಹೆಸರುಗಳು ಮೇಲ್ಕಾಣಿಸಿದ ಎರಡೂ ಗ್ರಂಥಗಳಲ್ಲಿ ಹೇಳಲ್ಪಟ್ಟಿವೆ.

ಇವರಲ್ಲಿ ಕುಮಾರ ಚೆನ್ನಬಸವೇಶ್ವರನು ಬರೆದ ಒಂದು ಗ್ರಂಥವು ಉಪಲಬ್ಧವಿದ್ದು ಅದರಲ್ಲಿ ಆತನು ತನ್ನ ಬಗೆಗೆ ಹೀಗೆ ಹೇಳಿಕೊಂಡಿದ್ದಾನೆ :–

"ಇದು ಮುಕ್ತಿಮುನಿ ವಂಶಾಂಬರಾದಿತ್ಯ ।
ನಧಿಕ ಕೀರ್ತಿಪ್ರತಾಪಂ, ಶಿವನಿಂದಕಸ ।
ಮುದಯ ಸಮೆದಗ್ನಿ ಶಿವಕಲ್ಪದ್ರುಮ ಕುಮಾರ ಚೆನ್ನಬಸವೇಶ್ವರಂ ॥

ಶಶಿಧರಾರ್ಚಕ ಜನಕೆ ಬಸವೇಶನಂದದೆ, ಗಿ ।
ರಿಶ ನಿಂದಕರ್ಗೆ ವೀರೇಶನಂದದಿಂ, ।
ವಸುಧೆಯೊಳಗಿರ್ಪ ಶಿವಭಕ್ತನಿಚಯಕ್ಕದ್ವಿತೀಯ ಶಂಕರನಂದದಿಂ ॥

ರಸವದ್ವಚೋಯುಕ್ತ ಕೋವಿದ ಸಮೂಹಕ್ಕೆ ।
ಜಸವೆತ್ತ ದಕ್ಷಿಣಾಮೂರ್ತಿಯಂದದೆ ವಿರಾ- ।
ಜಿಸುತಂ ಕುಮಾರ ಚೆನ್ನಬಸವೇಶ್ವರಂ ದಿಗಂತದೊಳು ಕೀರ್ತಿವೆತ್ತಂ ॥

ಮುಕ್ತಿಮುನಿವಂಶಕ್ಕೆ ಸೂರ್ಯನಂತಿದ್ದವನು, ಶಿವಭಕ್ತರಿಗೆ ಬಸವೇಶನಂತಿದ್ದವನು, ಅದ್ವಿತೀಯ ಶಂಭುವಿನಂತಿದ್ದವನು ಮುಂತಾದ ಘನತರ ವಿಷಯಗಳನ್ನು ತನ್ನ ಬಗೆಗೆ ತಾನೇ ಹೇಳಿಕೊಳ್ಳುವಷ್ಟು ಆತ್ಮವಿಶ್ವಾಸವುಳ್ಳ ಈ ಮಹಾಮಹಿಮನು ಸಾಮಾನ್ಯನಾಗಿರಲಾರನೆಂಬುದು ಸುಸ್ಪಷ್ಟವಾಗಿದೆ.

ಈತನ ಗ್ರಂಥ "ಬಸವಪುರಾಣದ ಪುರಾತನರ ಚರಿತೆ"ಯೆಂದೂ ಇದರಲ್ಲಿ ೯ ಸಂಧಿಗಳೂ ೩೫೦ ಪದ್ಯಗಳೂ ಇವೆಯೆಂದೂ ಬಸವ ಪುರಾಣದಲ್ಲಿ ಸಂಗ್ರಹವಾಗಿ ಸೂಚಿಸಿರುವ ಪುರಾತನರ (ಶಿವಶರಣರ) ಚರಿತ್ರವು ಉಪಕಥೆಗಳೊಡನೆ ವಿಸ್ತರಿಸಿ ಹೇಳಿದೆಯೆಂದು "ಕರ್ನಾಟಕ ಕವಿಚರಿತೆ"ಯು ದ್ವಿತೀಯ ಸಂಪುಟದ ೨೫೭ ನೆಯ ಪಂಟದಲ್ಲಿ ಹೇಳಲಾಗಿದೆ.

ಇನ್ನೊಂದು ವಿಷಯವೆಂದರೆ "ಸಾಸಲ ಭೈರವೇಂದ್ರ"ನೆಂಬ ರಾಜನು ಆ ಕಾಲದಲ್ಲಿ ಈ ಚಳವಳಿಗೆ ಬಹಳೇ ಸಹಾಯಕಾರಿಯಾಗಿದ್ದಂತೆ ತೋರುತ್ತದೆ. ಈತನ

ವಿಷಯದಲ್ಲಿ "ಸಾಸಲ ಭೈರವೇಂದ್ರ ಚರಿತೆ" "ಬೈರವೇಶ್ವರ ಕಾವ್ಯ" "ಭೈರವೇಶ್ವರ ಪುರಾಣ" "ಶ್ರೀ ಭೈರವೇಶ್ವರ ಕಾವ್ಯದ ಕಥಾಸಾಗರ" "ಭೈರವೇಶ್ವರ ಕಾವ್ಯದ ಕಥಾ ಸೂತ್ರ ರತ್ನಾಕರ" ಮೊದಲಾದ ಅತಿ ಮಹತ್ವದ ಗ್ರಂಥಗಳು ಹುಟ್ಟಿವೆ. ಕೊನೆಯ ಗ್ರಂಥವಂತೂ ಅನೇಕ ಐತಿಹಾಸಿಕ ಚರಿತ್ರಗಳಿಂದ ಕೂಡಿದೆಯೆಂಬುದು ಸರ್ವರಿಗೆ ಗೊತ್ತಿದ್ದ ವಿಷಯ. ಆದರೆ ಮೊದಲನೆಯದಾದ "ಸಾಸಲ ಭೈರವೇಂದ್ರ ಚರಿತೆ"ಯೆಂಬ ಗ್ರಂಥವು ಇನ್ನೂ ಉಪಲಬ್ಧವಾಗಿಲ್ಲವಾದರೂ ಅದು ಮೇಲೆ ಹೇಳಿದ "ಮುಕ್ತಿ ಮುನಿ ವಂಶ ಸಂಭೂತರಾದ ಕುಮಾರ ಚೆನ್ನಬಸವೇಶ್ವರ"ರೇ ಬರೆದಿದ್ದಾರೆಂದು ಅವರ ಗ್ರಂಥದಲ್ಲಿಯೇ ಹೇಳಲ್ಪಟ್ಟಿರುವದರಿಂದ ಇದೂ ಕೂಡ ಅತ್ಯಂತ ಮಹತ್ವದ ಗ್ರಂಥ ವೆಂಬುದರಲ್ಲಿ ಸಂಶಯವಿಲ್ಲ.

ಈ ಕುಮಾರ ಚೆನ್ನಬಸವೇಶ್ವರರು ಇನ್ನೂ ಕೆಲವು ಗ್ರಂಥಗಳನ್ನು ಬರೆದಿರುವು ದಾಗಿ ತಾವೇ ಹೀಗೆ ಹೇಳಿಕೊಂಡಿದ್ದಾರೆ :-

ಇಂತು ಬಸವೇಶ್ವರ ಪುರಾಣದೊಳು ಸೂಚಿಸಿದ ।
ಕಂತುಹರ ಶರಣ ಚರಿತೆಯ ಪದಂಗೊಳಿಸಿಯ ।
ತ್ಯಂತ ಕಾವ್ಯ ವಿಲಾಸದಿಂದೆ ಸಾಸಲ ಭೈರವೇಂದ್ರ ಚಾರಿತ್ರವುಸುರಿ ॥
ಸಂತಸದಿ ವೀರಮಾಹೇಶ ಸಂಗ್ರಹದಲ್ಲಿ ।
ಗ್ರಂಥ ರೂಪಾಗಿರ್ದ ಶಂಭುಪೂಜಾವಿಧಿಯ ।
ನಿಂತಲ್ಲಿ ಭೂತಿಯಧ್ಯಾಯಾದಿಯುಂ ಕುಮಾರೇಶ್ವರಂ ಕನ್ನಡಿಸಿದಂ ॥

"ಬಸವಪುರಾಣದ ಪುರಾತನರ ಚರಿತೆ" ಯೊಂದಲ್ಲದೆ "ಸಾಸಲ ಭೈರವೇಂದ್ರ ಚರಿತ್ರ" "ಶಿವಪೂಜಾವಿಧಿ" "ವಿಭೂತಿ ಮಹಿಮೆ" ಮೊದಲಾದ ಗ್ರಂಥಗಳನ್ನೂ ಈತನು ಬರೆದು ಶಿವಾಚಾರಕ್ಕೆ ಸಹಾಯ ಮಾಡಿದ್ದಾನೆಂಬುದು ಸುಸ್ಪಷ್ಟವಾಗಿದೆ.

ಆದರೆ ಇಲ್ಲಿ ಮಹತ್ವದ ಇನ್ನೊಂದು ವಿಷಯವಾವುದೆಂದರೆ ಸಾಸಲ ಭೈರವ ರಾಜನ ವೃತ್ತಾಂತ, ಅದು ಹೀಗೆ ಇದೆ :-

"ಬಸವಾದಿ ೭೭೭ ಪುರಾತನರಾಗಿ ಮರ್ತ್ಯಕ್ಕವತರಿಸಿ ವೀರಶೈವಾಚಾರದಿಂದ ಅಷ್ಟಾವರಣ ಮೊದಲಾದ ಶಿವಾಚಾರವನುದ್ಧರಿಸಿ ಮರ್ತ್ಯದಲ್ಲಿ ನಿತ್ಯಾನಂದ ನಿಜ ಲಿಂಗೈಕ್ಯರಾಗಿರುತ್ತುಂ ಮರ್ತ್ಯಲೋಕದ ಮಹಿಮೆಯಂ ಪೂರೈಸಿ ಕೈಲಾಸಕ್ಕೈದಿದರ್" ಬಳಿಕ ಖಿಲವಾದ ವೀರಶೈವಾಚಾರವನುದ್ಧರಿಸಲು ಶಿವನು ಕಾಲಸಂಹಾರನೆಂಬ ಗಣೇ-ಶ್ವರನನು ಆಂಧ್ರಪ್ರದೇಶದಲ್ಲಿ ಮೋಪೂರೆಂಬ ಪಟ್ಟಣದ ಅರಸು ಸಂಗಮರಾಜ, ಹೆಂಡತಿ ಹೈಮಾವತಿ ಇವರಿಗೆ ಭೈರವ ರಾಜನೆಂಬ ಮಗನಾಗಿ ಹುಟ್ಟುವಂತೆ ನೇಮಿಸಿ ದನು. ಭೈರವರಾಜನು ಪ್ರಭುಡಾಚಾರ್ಯನೆಂಬ ಪೌರಾಣಿಕನಲ್ಲಿ ಪೂರ್ವಕಥೆಗಳನ್ನು ಕೇಳುತ್ತ... ಗಂಡ ಹೆಂಡಿರು ಭಕ್ತಿಯುಕ್ತರಾಗಿರಲು ಶಿವನು ಸ್ವಪ್ನದಲ್ಲಿ ಬಂದು 'ನೀನು

ಹೆಂಡತಿಯೊಡನೆ ಮಲ್ಲಿಪಟ್ಟಣಕ್ಕೆ ಹೋಗಿ ಅಲ್ಲಿ ಗುರುಕರುಣಮಂ ಪಡೆದು, ಸಾಸಲಿಗೆ ಪೋಗಿ ಜಂಗಮಾರ್ಚನೆಯ ಮಾಡು, ನನ್ನ ಹೆಸರು ಸಾಸಲ ಸೋಮೇಶ್ವರ' ಎಂದನು. ಅದೇ ಮೇರೆಗೆ ಭೈರವ ರಾಜನು ಮಲ್ಲಿಪಟ್ಟಣಕ್ಕೆ ಪೋಗಿ ಅಲ್ಲಿಯ ದೊರೆಯಾದ ರಾಮರಾಜನಿಂ ಮನ್ನಣೆ ಪಡೆದು ಹಾಲ ಸೋಮೇಶ ಗುರುವಿನ ರೂಪದಲ್ಲಿ ಬಂದು ಸಾಸಲ ಸೋಮೇಶನಿಂದ ದೀಕ್ಷೆಪಡೆದು ಅನೇಕ ಪವಾಡಗಳನ್ನು ಮಾಡಿ ಕೊನೆಗೆ ಶಿವ ನಿಂದ ಕೈಲಾಸಕ್ಕೆ ಒಯ್ಯಲ್ಪಟ್ಟನು."

— ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ
(ಕರ್ನಾಟಕ ಕವಿಚರಿತೆ, ಸಂ. ೨, ಪುಟ ೨೬೩)

ಮೇಲ್ಕಾಣಿಸಿದ ಕುಮಾರ ಚೆನ್ನಬಸವೇಶ್ವರ ಹಾಗೂ ಸಾಸಲ ಭೈರವರಾಜ ಇವರ ಕಾಲನಿರ್ಣಯವು ವಂದ್ಯ ಕವಿಚರಿತ್ರಕಾರರಿಂದಾಗಲಿ, ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ ಕರ್ತೃವಾದ ಕವಿ ಶಾಂತಲಿಂಗ ದೇಶಿಕನಿಂದಾಗಲಿ ಸರಿಯಾಗಿ ಆಗಿಲ್ಲವೆಂದು ನನ್ನ ಮತ. ಏಕೆಂದರೆ—

ಮೇಲ್ಕಾಣಿಸಿದ ಇಬ್ಬರೂ ಪವಾಡಪುರುಷರು. ವಿಜಯನಗರದ ಪ್ರೌಢದೇವ ರಾಯನ ಕಾಲದಲ್ಲಾದ (ಕ್ರಿ. ಶ. ೧೪೪೯–೧೪೪೬) ನೂರೆಂಟು ವಿರಕ್ತ ಯತಿಗಳ ಕಾಲಕ್ಕಿಂತ ಇತ್ತೀಚಿನವರೆಂದು ಕವಿಚರಿತ್ರಕಾರರೂ ಪುರಾತನ ಕವಿಯಾದ ಶಾಂತಲಿಂಗ ದೇಶಿಕರೂ ಭಾವಿಸಿದಂತಿದೆ; ಕುಮಾರ ಚೆನ್ನಬಸವೇಶ್ವರನು "ಬಸವಪುರಾಣ"ದ ಶರಣರ ಕಥೆಗಳನ್ನು ವಿಸ್ತರಿಸಿ ಬರೆದದ್ದರಿಂದ ಬಸವಪುರಾಣವನ್ನು ಬರೆದ ಭೀಮ ಕವಿಗಿಂತ (ಕ್ರಿ. ಶ. ೧೩೬೯ ಕ್ಕಿಂತ) ಈತನು ಈಚೆಯವನೆಂದು ಕವಿಚರಿತ್ರಕಾರರು ಬರೆದಿರುತ್ತಾರೆ. ಆದರೆ ಈ ಬಸವಪುರಾಣವು ತೆಲುಗಿನಲ್ಲಿ ಪಾಲ್ಕುರಿಕೆ ಸೋಮ ನಾಥನಿಂದ (ಸುಮಾರು ಹರಿಹರ ಕವಿಯ ಕಾಲದ ಸುಮಾರಕ್ಕಿದ್ದ) ಬರೆಯಲ್ಪಟ್ಟು ದ್ದಾಗಿರುವ ಸಂಭವವು ಬಹಳಮಟ್ಟಿಗಿದೆ. ಏಕೆಂದರೆ ಈತನು ಪೂರ್ವಕವಿಗಳನ್ನು ಸ್ತುತಿಸುವಾಗ ಭೀಮಕವಿಯ ಹೆಸರನ್ನು ಹೇಳದೆ "ಬಾಣೋದ್ಭಟ, ಮಳೆಯರಾಜ, ಶೃಂಗಾರಕವಿ ಹರೀಶ್ವರ, ಪದ್ಮರಾಜ, ಸೋಮೇಶಾದಿಗಳಿಗಾನೆರಗುವೆಂ" ಎಂದು ಹರಿಹರ, ಕೆರೆಯ ಪದ್ಮರಸ, ಪಾಲ್ಕುರಿಕೆಯ ಸೋಮನಾಥರನ್ನು ಬಾಣ, ಉದ್ಭಟ, ಮಳೆಯರಾಜರೊಂದಿಗೆ ಸೇರಿಸಿ ಕೊಂಡಾಡಿದ್ದಾನೆ.

ಚೆನ್ನಬಸವ ಪುರಾಣದ ಕೊನೆಯ ಎರಡು ಸಂಧಿಗಳು ಕಾಲಜ್ಞಾನ ಸಂಧಿಗಳಾ ಗಿದ್ದು, ಅವುಗಳಲ್ಲಿ ಮೊದಲನೆಯದರಲ್ಲಿ ಶ್ರೀ ಬಸವೇಶ್ವರರ ಕಾಲದಿಂದ ವಿಜಯನಗರ ರಾಜ್ಯಸ್ಥಾಪನೆಗಿಂತ ಮುಂಚಿನ ಸಂಗತಿಗಳನ್ನು, ಎರಡನೆಯದರಲ್ಲಿ ವಿಜಯನಗರ ರಾಜ್ಯಸ್ಥಾಪನೆಯಿಂದ ಚೆನ್ನಬಸವ ಪುರಾಣದ ಕಾಲದವರೆಗಿನ ಸಂಗತಿಗಳನ್ನೂ ಹೇಳಲಾಗಿದೆಯಷ್ಟೇ? ಸಾಸಲ ಭೈರವರಾಜನ ವಿಷಯವನ್ನು ಈ ಪುರಾಣದ ಕಾಲಜ್ಞಾನ ಸಂಧಿಯ ಮೊದಲನೆಯ ಅಧ್ಯಾಯದಲ್ಲಿ ಅಂದರೆ, ವಿಜಯನಗರ ರಾಜ್ಯ

ಸ್ಥಾಪನೆಗಿಂತ ಮುಂಚಿನ ವಿಷಯಗಳಲ್ಲಿ ಹೇಳಲಾಗಿದೆ. ಇದೇ ಸರಿಯೆಂದು ನನಗೆ ಅನಿಸುತ್ತದೆ. ಏಕೆಂದರೆ ವಿಜಯನಗರ ರಾಜ್ಯಸ್ಥಾಪನೆಗಿಂತ ಬಹಳ ಮುಂಚೆ ಇರಬಹುದಾದ ಮೇಲ್ಕಾಣಿಸಿದ ಕುಮಾರ ಚೆನ್ನಬಸವೇಶ್ವರನು ಈ ಭೈರವರಾಯನ ಚರಿತ್ರೆಯನ್ನು ಬರೆದಿರುವ ವಿಷಯವು ಈ ಮೊದಲೇ ಆತನ ಸ್ವತಃದ ಪದ್ಯಗಳಿಂದಲೇ ತಿಳಿದ ವಿಷಯವಾಗಿದೆ. ಶ್ರೀ ಬಸವಾದಿ ಶಿವಶರಣರ ಕಾಲದಲ್ಲಿದ್ದ ರುದ್ರಮುನಿಯಿಂದ ನಾಲ್ಕನೆಯ ತಲೆಯವನಾಗಿ ಈ ಕುಮಾರ ಚೆನ್ನಬಸವೇಶ್ವರನಿರುವದರಿಂದ ಆ ಕಾಲ ದಿಂದ ತೀರ ದೂರದಲ್ಲಿರುವ ವಿಜಯನಗರ ರಾಜ್ಯ ಸ್ಥಾಪನೆಯ ಕಾಲಕ್ಕಿಂತ ಈಚೆಗೆ ಅದರಲ್ಲಿಯೂ ಇನ್ನೂ ಹೆಚ್ಚು ದೂರದಲ್ಲಿರುವ ನೂರೊಂದು ವಿರಕ್ತಯತಿಗಳ ಹಾಗೂ ಪ್ರೌಢದೇವರಾಯನ ಕಾಲಕ್ಕಿಂತ ಈಚೆಗೆ ಈತನಾಗಲಿ, ಈತನಿಂದ ಪುರಾಣ ರೂಪದಲ್ಲಿ ಸ್ತುತಿಸಿಕೊಂಡ ಭೈರವರಾಜನಾಗಲಿ ಇರುವ ಸಂಭವವು ಇಲ್ಲವೇ ಇಲ್ಲ. ಚೆನ್ನಬಸವ ಪುರಾಣದ ಕಾಲಜ್ಞಾನದ ಪ್ರಥಮ ಸಂಧಿಯಲ್ಲಿ (ಅಂದರೆ ವಿಜಯನಗರ ರಾಜ್ಯ ಸ್ಥಾಪನೆಗಿಂತ ಮುಂಚೆ) ಭೈರವರಾಜನ ವಿಷಯವನ್ನು ಸೇರಿಸಿದ್ದೇ ಸರಿಯೆಂದು ನನಗೆ ಅನಿಸುತ್ತದೆ. ಕುಮಾರ ಚೆನ್ನಬಸವನ ಕಾಲವಾದರೂ ಸುಮಾರು ಆದೇ ಎಂದು ಮೇಲ್ಕಾಣಿಸಿದ ಕಾರಣಗಳಿಂದ ಊಹಿಸಲಿಕ್ಕೆ ಶಕ್ಯವಿದೆಯೆಂಬುದನ್ನು ಮೊದಲೇ ತೋರಿಸಿಕೊಟ್ಟಿದ್ದೇನೆ.

ಈ ಮಾತಿಗೆ ಸಾಕ್ಷಿ ಕೊಡುವಂತೆ "ನಿರಂಜನವಂಶರತ್ನಾಕರ"ದಲ್ಲಿ ಹೀಗೆ ಹೇಳಿದೆ :—

"ಬಲ್ಲಾಳನಿಗೆ ಆ ದೇಶದ ರಾಜಪಟ್ಟವಾಗಲು ಈ ತ ನಾ ಳಿ ಕೆ ಯ ಲ್ಲಿ ಹರಿಹರಾಚಾರ್ಯರು, ರಾಘವಾಂಕಯ್ಯ, ಕೆರೆಯ ಪದ್ಮರಸರು, ಸೋಸಲೆಯ ಭೈರವರಾಜ, ಒಕ್ಕಲೂರ ನೂಲಿಯ ಕಲ್ಲಪ್ಪ ಮೊದಲಾದ ......ದೇ ವ ಭಕ್ತರುಗಳಾದ(ರು.)" — ನಿರಂಜನವಂಶರತ್ನಾಕರ, ಪುಟ ೧೮.

ನಿಜವಾಗಿಯೂ ಕಲ್ಯಾಣದ ಕಲುಚುರಿಯರ ರಾಜ್ಯ ಹಾಳಾದ ಮೇಲೆ ದಕ್ಷಿಣ ಕರ್ನಾಟಕದಲ್ಲಿ, ಆಗ ಪ್ರಬಲರಾಗಿದ್ದ ಹೊಯ್ಸಳ ಬಲ್ಲಾಳರ ರಾಜ್ಯದಲ್ಲಿ ಹಾಗೂ ಆಂಧ್ರದೇಶದಲ್ಲಿ ಶಿವಶರಣರ ಚಳವಳಿಗೆ ಮೊದಲಾಯಿತೆಂಬುದು ಸುಸ್ಪಷ್ಟ. ಈ ರೀತಿಯಿಂದ ಆಗ ಹರಿಹರದೇವ, ಕೆರೆಯ ಪದ್ಮರಸ, ಪಾಲ್ಕುರಿಕೆಯ ಸೋಮನಾಥ, ಸೋಸಲೆಯ ಭೈರವರಾಜ, ಕುಮಾರ ಚನ್ನಬಸವೇಶ್ವರ ಮೊದಲಾದ ಹರಗಣರೆಲ್ಲ ಸುಮಸುಮಾರಾಗಿ ಒಂದೇ ಕಾಲದಲ್ಲಿ ಕಾರ್ಯ ಮಾಡುತ್ತಿದ್ದರೆಂದು ಊಹಿಸ ಬಹುದಾಗಿದೆ.

ಚೆನ್ನಬಸವ ಪುರಾಣದಲ್ಲಿ ಸಹ ಹರಿಹರ, ರಾಘವಾಂಕ, ಕೆರೆಯ ಪದ್ಮರಸರ ಜೊತೆಗೇ ಈ ಭೈರವರಾಜ ಹಾಗೂ ಒಕ್ಕಲೂರ ಕಲ್ಲಪ್ಪನ ವಿಷಯವೂ ಹೇಳಿದೆ.

ಇವರಲ್ಲದೆ ಆ ಕಾಲದಲ್ಲಿ ಹಾಗೂ ಅದರ ಮುಂದಿನ ಸ್ವಲ್ಪಕಾಲದಲ್ಲಿ (ಅಂದರೆ ವಿಜಯನಗರ ರಾಜ್ಯಸ್ಥಾಪನೆಯ ಕಾಲದವರೆಗೆ) ಕರಿಯೆಡೆಯಲ್ಲಿ ಮುಮ್ಮಡಿ ಭಕ್ತ, ಪೆರಮೊಗ್ಗೆಯಲ್ಲಿ ದೇವಮ್ಮ, ಕಂಚಿಯಲ್ಲಿ ಬಯಲಲಿಂಗಣ್ಣ, ಗುಜ್ಜರಾತಿಯಲ್ಲಿ ದೇಶರಾವುತ, ಪಟ್ಟೇಶ್ವರದಲ್ಲಿ ಬಸವಪ್ಪ, ಉದಯಗಿರಿಯಲ್ಲಿ ರಾಮಯ್ಯ, ರಾಜ ಮಹೇಂದ್ರುದಲ್ಲಿ ಸೋಮಣ್ಣ, ದಕ್ಷಿಣಾಪುರದಲ್ಲಿ ಬೇಳಿಯೊಡೆಯವರು, ಕುರುವದಲ್ಲಿ ಸೊಪ್ಪೆಯ ಬಸವಪ್ಪ, ಬಿದಿರೆಯಲ್ಲಿ ಏಕೋಭಾಯಿ, ಮೇಲುಕೊಂಕಣದಲ್ಲಿ ಧೋಪೇಶ್ವರದ ವೀರಪ್ಪ, ಉಪ್ಪಲಿಕರ ಅಪ್ಪಣ್ಣ, ಸುಗ್ಗಲೂರಿನಲ್ಲಿ ಕಾಚನಾಯಕ, ಅಸುಗೊಡದಲ್ಲಿ ಮಲ್ಲಪಯ್ಯ ಇಂತಿವರು ಮೊದಲಾದ ಶಿವಶರಣರು ಅಲ್ಲಲ್ಲಿ ನಾನಾ ಪವಾಡಗಳನ್ನು ಮೆರೆದು ನಿಜಪದವಿಯನ್ನು ಪಡೆದರು. ಮುಂದೆ ಹೊಸಮಲೆಯ ಕಂಪಲಭೂಪನ ಕುಮಾರನಾದ ರಾಮನಾಥನು ಕಮ್ಮಟವೆಂಬ ದುರ್ಗವನ್ನು ಕಟ್ಟಿಸಿ ಸುತ್ತಣ ಭೂಪಾಲರನ್ನು ಗೆದ್ದು ಹೊಗಳಿಸಿಕೊಳ್ಳುವನು.

— ಚೆನ್ನಬಸವ ಪುರಾಣ, ಸಂಧಿ ೬೨ (ಕಾಲಜ್ಞಾನ ಸಂಧಿ ೧.)

ಈ ಕೊನೆಯವನಾದ ಕುಮಾರ ರಾಮನಾಥನ ವಿಷಯದಲ್ಲಿ ಹಿಂದೆ "ಕುಮಾರ ರಾಮನ ಕಥೆ" "ಕುಮ್ಮಟ ರಾಮನ ಕಥೆ" ಮೊದಲಾದ ಅನೇಕ ಗ್ರಂಥಗಳು ಹುಟ್ಟಿವೆ. ಸಾಸಲ ಭೈರವರಾಜನಂತೆ ಈತನೂ ಶಿವಶರಣರ ಚಳವಳಿಗೆ ಸಹಾಯಕನಾಗಿದ್ದನೋ ಹೇಗೆ? ಅಥವಾ ಎಷ್ಟರ ಮಟ್ಟಿಗೆ ಸಹಾಯಕನಾಗಿದ್ದನು? ಎಂಬ ವಿಷಯವು ಇನ್ನೂ ಸಂಪೂರ್ಣವಾಗಿ ತಿಳಿದಿಲ್ಲ. ಈತನ ಕಥೆ ಹೀಗಿದೆ :

"ಚಂಡಾಟವಾಡುತ್ತಿದ್ದಾಗ ಚೆಂಡು ಅರಮನೆಗೆ ಹೋಗಿ ಬೀಳಲು ಕುಮಾರ ರಾಮನು ಅದನ್ನು ತೆಗೆದುಕೊಳ್ಳುವುದಕ್ಕೆ ಹೋದಾಗ ಅವನ ಮಲತಾಯಿಯಾದ ರತ್ನಾಜಿ... ಗಂಡನೊಡನೆ ಇಲ್ಲದ ಚಾಡಿಯನ್ನು ಹೇಳಿ ಅವನನ್ನು ಕೊಲ್ಲಿಸಬೇಕೆಂದಾಗ ದೊರೆ ಮಂತ್ರಿಗೆ ಆಜ್ಞಾಪಿಸಲು ಅವನು ರಾಜಕುಮಾರನನ್ನು ನೆಲಮಾಳಿಗೆಯಲ್ಲಿರಿಸಿ ಕೊಂದೆನೆಂದು ಹೇಳಿಬಿಟ್ಟನು. ಈ ಸುದ್ದಿಯನ್ನು ಕೇಳಿ ತುರುಕರು ರಾಜ್ಯವನ್ನು ಮುತ್ತಲು ಕುಮಾರ ರಾಮನು ಬಹಳ ಪರಾಕ್ರಮದಿಂದ ಅವರೊಡನೆ ಏಕಾಕಿಯಾಗಿ ಕಾದಿ ಮಡಿದನು." — ಕರ್ನಾಟಕ ಕವಿಚರಿತೆ, ಸಂ. ೨, ಪುಟ ೨೦೪.

ಅಂತೂ ಇಲ್ಲಿಗೆ ವಿಜಯನಗರ ಸ್ಥಾಪನೆಯ ಕಾಲವು ಆರಂಭವಾಯಿತು. ವಿಜಯನಗರಕ್ಕೂ ಕುಮಾರ ರಾಮನಿಗೂ ವಿಶೇಷ ಸಂಬಂಧವಿದ್ದ ಹಾಗೆ ಅನೇಕ ಐತಿಹ್ಯಗಳಿವೆ. ವಿಜಯನಗರದಲ್ಲಿ ಇಂದಿಗೂ ಕುಮಾರ ರಾಮನ ಗರಡೀ ಮನೆ ಮೊದಲಾದ ಅವಶೇಷಗಳನ್ನು ತೋರಿಸುತ್ತಿರುವುದೇ ಇದಕ್ಕೆ ಸಾಕ್ಷಿ.

ಇನ್ನು ಮುಂದಿನ ಘಟ್ಟದ ವಿಷಯವನ್ನು ವಿವರಿಸುವ ಮೊದಲು ದಕ್ಷಿಣ ಕರ್ನಾಟಕದಲ್ಲಿ (ಈಗಿನ ಮೈಸೂರು ಸೀಮೆಯಲ್ಲಿ) ಆಗ ಹರಗಣಗಳಿಂದ ಸ್ಥಾಪಿತವಾದ

ಕೆಲವು ಊರುಗಳ ಇತಿಹಾಸವನ್ನು ಸ್ವಲ್ಪ ಮಟ್ಟಿಗೆ ನಿರೀಕ್ಷಿಸುವುದು ಅವಶ್ಯವೆಂದು ನನಗೆ ಅನಿಸುತ್ತದೆ. ಅವು ಯಾವವೆಂದರೆ :

**ಗುಮ್ಮಳಾಪುರ** : ಕಲ್ಯಾಣಪುರ(ವು) ತುರುಕಜನರಾಳಿಕೆಯಾಗಿ ಶಿವಾಚಾರದ ನಡತೆಗೆ ವಿರೋಧವಾಗಲು ಅಲ್ಲಿರ್ದ ಗುಮ್ಮಣ್ಣಯ್ಯ ಪೆಮ್ಮಣ್ಣಯ್ಯಗಳೆಂಬ ಶಿವ ಶರಣರು ಕಲ್ಯಾಣವಂ ಬಿಟ್ಟು ದಕ್ಷಿಣಕಾಶಿ ಎನಿಸುವ ಶಿವಗಂಗೆ ಬೆಟ್ಟಕ್ಕೆ ಸಮೀಪವಾದ ಆ ದೇಶದಲ್ಲಿ ಆ ಗುಮ್ಮಳಾಪುರವಂ ವಿರಚಿಸಿ...... ಆ ಪುರದಿ ಲಿಂಗಾಂಗಿಗಳಾದ ವೀರಶೈವ ಮತಸ್ಥರಲ್ಲದೆ ಭವಿಗಳು ಇದ್ದಲ್ಲಿ ಅವರು ನಾಶವಾಗಲಿ ಎಂದು ಕುರುಹಂ ಇಟ್ಟು ಆ ಶರಣರು ಮುಕ್ತರಾದ ಮಹಿಮಾಸ್ಥಳ ಈ ಗುಮ್ಮಳಾಪುರ" ಎಂದು 'ನಿರಂಜನವಂಶರತ್ನಾಕರ'ದಲ್ಲಿ (ಪುಟ ೫೬) ಹೇಳಿದೆ.

**ಹರದನಹಳ್ಳಿ** : "ಅಯ್ಯವಳ್ಳಿಪುರದ (ಐಹೊಳ್ಳಿ).... ೧. ಕೋರಿಸೆಟ್ಟಿ, ೨. ಮಹಾನಾಡಸೆಟ್ಟಿ, ೩. ವಾಲಿಸೆಟ್ಟಿ, ೪. ಪಟ್ಟಣಸೆಟ್ಟಿ, ೫. ಮೆಂಡಗುದ್ದಲಿಸೆಟ್ಟಿ ಇವರಲ್ಲದೆ ೬. ಗುಡಾರಸೆಟ್ಟಿ, ೭. ಬಣಕಾರಸೆಟ್ಟಿ, ೮. ಗುಣಹಾರಿಸೆಟ್ಟಿ...... ಈ ಅಷ್ಟವಣಿಜರು ಅವರವರ ಕಸಬುಗಳನ್ನು ಮಾಡುತ್ತ ಇದ್ದಾರೆ... ಈ ಹರದರಾದ ವಾಣಿಜರ ವಂಶಸ್ಥರಾದ ಬಣಜಿಗ ಸೆಟ್ಟರು ಬಣಕ್ಕೆ ಸಾವಿರ ಎತ್ತುಗಳ ಬೀಡಿಕೆಗಳನ್ನು ಮಾಡಿ ಗಟ್ಟಿ ಬೆಟ್ಟದ ವ್ಯಾಪಾರವಂ ಮಾಡಿಸುತ್ತಿರುವಲ್ಲಿ ದಕ್ಷಿಣದೇಶದಲ್ಲಿರುವ ಇವರ ದಲ್ಲಾಲನಾದ ಸೆಟ್ಟಿಯು ಆ ಸಾವುಕಾರರಾದ ಸೆಟ್ಟರಿಗೆ ಅಡಿಕೆ, ಯಾಲಕ್ಕಿ, ಮೆಣಸು ಮುಂತಾದ ಸರಕುಗಳನ್ನು...... ಕಳಿಸಿದರೆ ಬಹಳ ಲಾಭವಾದೀತು. ಎಂದು ಪತ್ರವಂ ಬರೆದ ಕಾರಣ...... ಕರ್ನಾಟಕ ದೇಶದ ಮೈಸೂರು ಸೀಮೆಯಲ್ಲಿರುವ ಕಾವೇರಿ ನದಿಗೆ ಸಮೀಪಸ್ಥರಾದ ... ಒಂದು ಸ್ಥಳದ ಬೈಲಿನಲ್ಲಿ...ಬೀಡಿಕೆಯ ಎತ್ತು ಗಳ ಒಜ್ಜೆಯನಿಳುಹಿ ಗುಡಾರವಂ ನಿಲಿಸಿ ಒಲೆಗಳಂ ಮಾಡಿ ಅಕ್ಕಿಗಳಂ ಪಾತ್ರೆಗಳಲ್ಲಿ ಹಾಕಿ...... ಹೋಗಲು ಇತ್ತ ಒಲೆಗುಂಡುಗಳಲ್ಲಿ ಒಂದು... .. ಲಿಂಗವಿದ್ದು ದೇವಾ ಲಯವು ಹಾಳಾಗಿ ಈ ಲಿಂಗಕ್ಕೆ ಪೀಠವಿಲ್ಲದೆ ಗೋಳಕವಾದ ಈ ಗುಂಡು ಕಾಡು ಗಲ್ಲೊಳಗೆ ಇದ್ದು ಒಂದು ಕಲ್ಲಾಗಿ ಇದ್ದ ಕಾರಣ ಇದು ತಿಳಿಯದೆ ಈ ಗುಂಡನ್ನು ಒಲೆಗಿಟ್ಟು ಉರಿಯಂ ( ಮಾಡಿದೆವು )...... ಇದು ಅಮೃತೇಶ್ವರಲಿಂಗವೆಂದು ಹೆಸರನ್ನಿಟ್ಟು ಆ ಹರದರು ಆ ಲಿಂಗವಂ ಒಂದು ವೃಕ್ಷದ ಕೆಳಗೆ ಇಟ್ಟು ಪೂಜಿಸಿ ಜಂಗಮಾರ್ಜನೆಯಂ ಮಾಡಿ(ದರು)...... ಆ ಸೀಮೆಗಳಲ್ಲಿ ಮಾರಲು ಒಂದಕ್ಕೆ ಮೂರು ಇಮ್ಮಡಿಯಾಗಿ ಲಾಭವು ಬಂದ ಕಾರಣ ಆ ದೇಶದ ರಾಜನಿಂ ಪಟ್ಟವಂ ಕಟ್ಟಬಿಕ್ಕೆ ಆ ಲಿಂಗವಿರುವ ಬೈಲು ಸ್ಥಳವಂ ಕೌಲು ಹಿಡಿದು ತಮ್ಮಯ ಬಂಧುಬಾಂಧ ವರ ಕರೆಯಿಸಿ ಅನೇಕ ದ್ರವ್ಯಗಳ ತರಿಸಿ ಆ ಸ್ಥಳದಿ...... ಪಟ್ಟಣವಂ ಕಟ್ಟಿ ಆ ಪುರಕ್ಕೆ ವಾಣಿಜ್ಯಪುರವೆಂಬ(ಹರದನಹಳ್ಳಿ)ನಾಮವನ್ನಿಟ್ಟು...... ಆ ದೇಶ ಮಧ್ಯದಲ್ಲಿರುವ ಗೋಸಲಿಯ ಯತೀಶ್ವರರಾದ ಸಿದ್ಧೇಶ್ವರ ಸ್ವಾಮಿಗಳಿಗೆ ೭೨ ಬಿರುದುಗಳೊಡನೆ

ಉತ್ಸಹಂಗೊಳಿಸಿ, ತಾವು ಕಟ್ಟಿಸಿದ ಮಠವಂ ಒಪ್ಪಿಸಿ ಆ ಮಠಕ್ಕೆ ಭೂಮಿಗಾಣಿಕೆಯಂ ಮಾಡಿಕೊಟ್ಟು ಸ್ವಾಮಿಗಳ ಮಠ ಪೂಜೋತ್ಸಾಹಂಗಳಂ ಮಾಡುತ್ತ ತಮ್ಮ ಭಕ್ತಿಯಂ ಯಿಂಬಿಟ್ಟುಕೊಂಡರು" ಎಂದು ನಿರಂಜನವಂಶರತ್ನಾಕರದಲ್ಲಿ (ಪುಟ ೨೬ ರಿಂದ ೩೦) ಹೇಳಿದೆ.

**ಸಿದ್ಧಗಂಗೆ :** "ಅನಂತರ ಗೋಸಲಿಯ ಸಿದ್ಧೇಶ್ವರ ಸ್ವಾಮಿಗಳವರು ತಮ್ಮ ಕರಂಜಾತರಾದ ನೂರಾಒಂದು ಷಟ್‌ಸ್ಥಲ ಬ್ರಹ್ಮಿಗಳಾದ ವಿರಕ್ತ ಮೂರ್ತಿಗಳೊಡನೆ ಅಲ್ಲಿಂದ (ಹರದನಹಳ್ಳಿ) ದೇಶಾಟನವಂ ಮಾಡುತ್ತ . ... ತುಮಕೂರು ಬೆಂಗಳೂರು ಸೀಮೆಯ ಪ್ರಾಂತದಲ್ಲಿರುವ ಒಂದು ಬೆಟ್ಟಕ್ಕೆ ತಮ್ಮ ಗಣಂಗಳ ಸಮೇತವಾಗಿ ಅಲ್ಲಿಗೆ ದಯಮಾಡಿಸಿ...... ಆ ಬೆಟ್ಟದಿ ತಮಗೆ ಒಂದು ಮಠವಂ ಕಟ್ಟಿಸಿಕೊಂಡು, ತಮ್ಮ ನೂರೊಂದು ಗಣಂಗಳಿಗಂ ನೂರೊಂದುಂ ಗವಿಗಳಂ ತೆಗೆಯಿಂಸಿ ಆ ಗವಿಗಳಲ್ಲಿ ಒಬ್ಬೊಬ್ಬ ಗಣವರರು ತಮ್ಮ ಇಷ್ಟಲಿಂಗಪೂಜಾನೈಷ್ಠೆ ಎಂಬ ಶಿವಯೋಗದಲ್ಲಿ......... ಶಿವಾರ್ಚನೆಯಂ......... ಮಾಡಿ ಕೊಂಡಿರ್ಪುದೆಂದು ಅಪ್ಪಣೆಯಂ ಕೊಟ್ಟು ಕಳುಹಿಸಿ(ದರು.) (ಅಲ್ಲಿ) ಉದಕವಿಲ್ಲದೆ (ಇರಲು) ಪರಮೇಶ್ವರನ ಜಟಾ ಗಂಗೆಯಂ ನೆನೆದು ತಮ್ಮಯ ಮಣಪಾದದಿ ಗುಡ್ಡದಿ ಇರುವ ಗವಿ ಒಳಗಿನ ಪಡೆಗೆ ಹೊಡೆಯಲು ಆ ಪಡೆಯಲ್ಲಿ ಒಂದು ಚೆಂಬು ಹಿಡಿವಷ್ಟು ಪಡುವು ಬಿದ್ದು ಭಾಗೀರಥಿಗೆ ಸಮವಾದ ಉದಕವು ಹೊರ(ಟಿತು). ಆ ಬೆಟ್ಟಕ್ಕೆ ಸಿದ್ಧೇಶ್ವರ ಸ್ವಾಮಿಗಳಿಂದ ಗಂಗೆಯು ಉದ್ಭವಿಸಿದ ಕಾರಣದಿಂದ ಸಿದ್ಧಗಂಗೆ ಬೆಟ್ಟವೆನ್ನುತ್ತಾರೆ." ಎಂದು ನಿರಂಜನವಂಶ ರತ್ನಾಕರದಲ್ಲಿ (ಪುಟ ೩೧–೩೨) ಹೇಳಿದೆ.

**ಗೋಸಲಿ :** ಘಟ್ಟದಲ್ಲಿ ಉಳಿವೆಯ ಅನಂತರ ಬಹಳ ಜಾಗ್ರತಿ ಉಳಿದಿತ್ತೆಂದು ತೋರುತ್ತದೆ. ನಿರಂಜನವಂಶರತ್ನಾಕರದಲ್ಲಿ ಗೋಸಲಿಯ ಸ್ವಾಮಿಗಳ ವಿಷಯವು ಬಹಳ ಕಡೆಗೆ ಕಂಡುಬರುತ್ತದೆ.

ಒಟ್ಟಾರೆ ಕಲ್ಯಾಣದ ಕಡೆಯ ಆಚಾರಶೀಲರೂ ಶರಣಮಾರ್ಗಿಗಳೂ ಒಂದು ಸುರಕ್ಷಿತ ಸ್ಥಳವನ್ನು ದಕ್ಷಿಣ ಕರ್ನಾಟಕದಲ್ಲಿ ಹುಡುಕಿಕೊಂಡಂತೆ, ಐಹೊಳ್ಳಿಯಲ್ಲಿ ಬಹು ಶತಮಾನಗಳಿಂದಲೂ ಸುಪ್ರಸಿದ್ಧರಾಗಿದ್ದ "ವೀರ ಬಣಂಜುಗಳೂ" ಬಿಜಾಪುರದ ಅರಸರ ಕಾಲದಲ್ಲಾಗಲಿ ಅಥವಾ ಈ ಮೊದಲೇ ಕಲಬುರ್ಗಿಯ ಬಾಮನಿ ಅರಸರ ಕಾಲದಲ್ಲಾಗಲಿ ದಕ್ಷಿಣ ಕರ್ನಾಟಕ ಸೇರಿದರೆಂದು ತೋರುತ್ತದೆ. ಹಿಂದಿನ ಶರಣರ ವಂಶದವರೆಂದು ಹೇಳಿಸಿಕೊಳ್ಳುವ ಸತ್ಪುರುಷರೂ ಅನೇಕರು ಅಲ್ಲಲ್ಲಿ ಹರಡಿಕೊಂಡಿದ್ದರು.

ಉದಾಹರಣಾರ್ಥವಾಗಿ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿದ್ದ ವಾರಣಾಸೀಂದ್ರನೆಂಬ ಬಿರುದುಳ್ಳ ಮಹಾಲಿಂಗದೇವನೆಂಬ ಮಹಾತ್ಮನು ತಾನು

ಶ್ರೀ ಬಸವೇಶ್ವರರ ಕಾಲದಲ್ಲಿ ಶಿವಶರಣರಾಗಿದ್ದ ಶಿವಲೆಂಕ ಮಂಚಣ್ಣನಿಂದ ೧೮ನೆಯ ತಲೆಯವನೆಂದು ತನ್ನ "ಅನಾದಿಗುರುಕುಲದನ್ವಯ"ವನ್ನು (ವಂಶಾವಳಿ) ಹೇಳಿಕೊಂಡಿದ್ದಾನೆ. (ಕವಿಚರಿತೆ ಸಂ. ೨, ಪುಟ ೫೦) ಸೌಂದರ ಪುರಾಣವನ್ನು ಬರೆದ ಬೊಮ್ಮರಸನೆಂಬ ಕವಿಯು ಶಿವಲೆಂಕ ಮಂಚಣ್ಣನಿಂದ ೧೨ನೆಯ ತಲೆಯವನಾದ ವಿಶ್ವನಾಥಾಚಾರ್ಯನ ಶಿಷ್ಯನೆಂದು ವಂಶಾವಳಿ ಸಹಿತವಾಗಿ ಹೇಳಿಕೊಂಡಿದ್ದಾನೆ. (ಕವಿಚರಿತೆ ಸಂ. ೨, ಪುಟ ೮೮) ಆರಾಧ್ಯಚಾರಿತ್ರವನ್ನು ಬರೆದ ಕವಿ ನೀಲಕಂಠಾಚಾರ್ಯನು ಅದೇ ಶಿವಲೆಂಕ ಮಂಚಣ್ಣನಿಂದ ೧೪ ನೆಯ ತಲೆಯವನೆಂದು ವಂಶಾವಳಿ ಸಹಿತವಾಗಿ ಹೇಳಿಕೊಂಡಿದ್ದಾನೆ. (ಕವಿಚರಿತೆ ಸಂ. ೨, ಪುಟ ೧೩೩) ರೇವಣಸಿದ್ಧೇಶ್ವರ ಪುರಾಣವನ್ನು ಬರೆದ ಚತುರ್ಮುಖ ಬೊಮ್ಮರಸನು ರೇವಣಸಿದ್ಧೇಶ್ವರನ ವಂಶೋದ್ಭವನಾದ ಬಾಲಸಿದ್ಧೇಶ್ವರನನ್ನು ವಿಶೇಷವಾಗಿ ಸ್ತುತಿಸಿದ್ದಾನೆ. "ಈತನು ಕವಿಯ ಗುರುವಾಗಿದ್ದಂತೆ ತೋರುತ್ತದೆ" ಎಂದು ಪಂದ್ಯ ಕವಿಚರಿತ್ರಕಾರರು ಬರೆದಿದ್ದಾರೆ. (ಕವಿಚರಿತೆ ಸಂ. ೨, ಪುಟ ೧೩೮) ಸಂಸ್ಕೃತದಲ್ಲಿರುವ ಸುಪ್ರಸಿದ್ಧವಾದ ವೀರಶೈವ ಸಿದ್ಧಾಂತ ಶಿಖಾಮಣಿಗೆ ಕನ್ನಡ ಟೀಕೆಯನ್ನು ಬರೆದ ಹಾಗೂ ಇನ್ನೂ ಅನೇಕ ಗ್ರಂಥಗಳನ್ನು ರಚಿಸಿದ ಸೋಸಲೆ ರೇವಣಾಚಾರ್ಯನು ರೇಣುಕಾಚಾರ್ಯ ವಂಶೋದ್ಭವನಾದ ವಿಶ್ವನಾಥನಿಂದ ೬ನೆಯ ತಲೆಯವನೆಂದು ವಂಶಾವಳಿ ಸಹಿತವಾಗಿ ಹೇಳಿಕೊಂಡಿದ್ದಾನೆ. (ಕವಿಚರಿತೆ ಸಂ. ೨, ಪುಟ ೪೩೩) ಕೊನೆಗೆ ಪ್ರಖ್ಯಾತ ಕವಿಯಾದ ಷಡಕ್ಷರಿದೇವನು, ತನ್ನ ಕಾವ್ಯದ ಪೀಠಿಕಾ ಸಂಧಿಯಲ್ಲಿ ಶ್ರೀ ಬಸವಾದಿ ಪ್ರಮಥರೊಂದಿಗೆ ಶ್ರೀ ರೇಣುಕಾದಿ ಚತುರಾಚಾರ್ಯರನ್ನು ಸ್ತುತಿಸಿ ರೇಣುಕ ಹಾಗೂ ರುದ್ರಮುನಿಗಳಿಂದ ಮೊದಲು ಮಾಡಿ ತನ್ನ ಗುರುಪರಂಪರೆಯ ಹೆಸರುಗಳನ್ನು ಹೇಳಿದ್ದಾನೆ. (ಕವಿಚರಿತೆ, ಸಂ. ೨, ಪುಟ ೪೨೪)

ಇಂಥ ಸಂದರ್ಭದಲ್ಲಿ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ (ಕ್ರಿ. ಶ. ೧೪೧೯ ರಿಂದ ೧೪೪೬) ಆತನ ಸುಪ್ರಖ್ಯಾತ ಮಂತ್ರಿಯಾದ ಲಕ್ಕಣ್ಣ ದಂಡೇಶನೂ, ದಂಡನಾಯಕನಾದ ವಿಖ್ಯಾತ ಜಕ್ಕಣಾರ್ಯನೂ ಶಿವಶರಣರ ತತ್ತ್ವ ಪ್ರಚಾರಕರಾದದ್ದರಿಂದ ಅನೇಕ ಕಡೆಯಿಂದ ಮಹಾ ಅನುಭಾವಿಗಳೂ ವಿದ್ವಾಂಸರೂ ಆದ ಹರಗಣಗಳು ಆಗ ವಿಜಯನಗರದಲ್ಲಿ ಕೂಡಿ ರಾಜನನ್ನು ಸಹ ತಮ್ಮ ಕಡೆಗೆ ಒಲಿಸಿಕೊಂಡು ಹಿಂದಿನ ಶಿವಶರಣರ ವಚನಗಳನ್ನೆಲ್ಲ ಸಂಗ್ರಹಿಸುವ, ಸಂಪಾದಿಸುವ, ಸಂಕಲಿಸುವ ಹಾಗೂ ಹಿಂದಿನ ಶಿವಶರಣರ ಪುರಾಣಗಳನ್ನು ಸವಿಸ್ತಾರವಾಗಿ ರಚಿಸುವ ಮಹಾಕಾರ್ಯವನ್ನು ಮಾಡಲಿಕ್ಕೆ ಪರ್ವಕಾಲವೇ ಬಂದಂತಾಯಿತು.

ವಿಜಯನಗರದ ಈ ಮಂತ್ರಿ ಲಕ್ಕಣ್ಣ ಹಾಗೂ ಆತನ ತಮ್ಮ ಮಾದಣ್ಣ ಇವರ ವಿಷಯವು ಶಿಲಾಶಾಸನಗಳಿಂದಲೂ ಸಹ ಸಿದ್ಧವಾಗಿದೆ. (ಕವಿಚರಿತೆ, ಸಂ. ೨, ಪುಟ ೫೪) ಅದು ಹೇಗೆಂದರೆ :

"ಮುಳಬಾಗಿಲ ೨ ನೆಯ ಮತ್ತು ೯೬ ನೆಯ ಶಾಸನಗಳಲ್ಲಿ (೧೪೩೧) ಈತನು (ಲಕ್ಕಣ್ಣದಂಡೇಶನು) ವಿಷ್ಣುವರ್ಧನ ಗೋತ್ರದವನೆಂದೂ, ಹೆಗ್ಗಡೆದೇವ ಒವಮ್ಮಾಯಮ್ಮ ಇವರುಗಳ ಮಗನೆಂದೂ, ಈತನಿಗೆ ಮಾದಣ್ಣ ದಣ್ಣಾಯಕನೆಂಬ ಒಬ್ಬ ಸಹೋದರನಿದ್ದನೆಂದೂ, (ಪ್ರೌಢ) ದೇವರಾಯನ ಧರ್ಮದಿಂದ ವಿರೂಪಾಕ್ಷ ಪುರದ ವಿರೂಪಾಕ್ಷದೇವರಿಗೆ ಸೇವೆ ಮಾಡಿದನೆಂದೂ ಹೇಳಿದೆ... ಮಾಲೂರು ೧ನೆಯ ಶಾಸನದಿಂದ (೧೪೩೪) ಈತನೂ ಈತನ ಸೋದರನಾದ ಮಾದಣ್ಣ ಒಡೆಯನೂ ದೇವರಾಯನ ನಿರೂಪದಿಂದ ಸಾಳುವ ಗೋಪರಾಜನಿಗೆ ತೇಕಲನ್ನು ಬಿಟ್ಟು ಕೊಟ್ಟಂತೆಯೂ ತಿಳಿಯುತ್ತದೆ."

— ಕರ್ನಾಟಕ ಕವಿಚರಿತೆ, ಸಂ. ೨, ಪುಟ ೫೪.

ಅಲ್ಲದೆ ಲಕ್ಕಣ್ಣದಂಡೇಶನು, "ದೇವರಾಯನಲ್ಲಿ ತಾನು ಮಹಾಪ್ರಧಾನ ನಾಗಿಯೂ, ಅವನಿಗೆ ಆಪ್ತ-ಮಿತ್ರನಾಗಿಯೂ ಅವನ ರಾಜ್ಯಾಭ್ಯುದಯಕ್ಕೆ ಕಾರಣಭೂತನಾಗಿಯೂ ಇದ್ದಂತೆ" ಈ ಪದ್ಯಭಾಗಗಳಲ್ಲಿ ತಾನೇ ಹೇಳಿಕೊಂಡಿದ್ದಾನೆ :

"ಧರೆಗಧಿಕ ಮೂಱುರಾಯರ ಗಂಡನಪ್ರತಿಮ ।
ಬಿರುದಾಂಕ ಗಜವೇಂಟೆಕಾಱ ದೇವೇಂದ್ರ ಭೂ ।
ವರನ ಮಹದೈಶ್ವರ್ಯಶರಧಿ ಚಂದ್ರೋದಯನುದಾರ
ಕರುಣಾಧಾರನು ॥

ನಿರುಪಮಿತ ಸಪ್ತಾಂಗ ರಾಜ್ಯ ವರ್ಧನ ಕಳಾ ।
ಧರನಮಲ ಕೀರ್ತಿಯುತ ಲಕ್ಕಣ್ಣದಂಡೇಶ ।
ಈ ಕಲಿಯುಗದೊಳತಿಪ್ರೌಢಮತಿ ದೇವರಾಜೇಂದ್ರನ
ಮಹಾಪ್ರಧಾನಂ ।
'ಇಭವೇಂಟೆಕಾಱ ದೇವೇಂದ್ರನುನ್ನತ ಕೆಳೆಯನು ॥'

ರಾಜನಿಗೆ ಗೆಳೆಯನೂ, ಆತನ ರಾಜ್ಯಾಭ್ಯುದಯಕ್ಕೆ ಕಾರಣೀಭೂತನೂ, ಮಹಾಪಂಡಿತನೂ ಆದ ಮಹಾಮಂತ್ರಿಯೇ ಧರ್ಮಕಾರ್ಯಕ್ಕೆ ನಿಂತಮೇಲೆ ಕೇಳುವದೇನು ? ಬಿಜ್ಜಳರಾಜನಲ್ಲಿ ಶ್ರೀ ಬಸವೇಶ್ವರರು ಮಂತ್ರಿಗಳಾಗಿ ನಿಂತು ಶಿವಶರಣರ ಕಾರ್ಯಕ್ಕೆ ಆಧಾರಸ್ತಂಭರಾಗಿದ್ದುದರ ಪುನರಾವರ್ತಿಯೇ ಇದು ಎಂದೆನಿಸುವದರಲ್ಲಿ ಸಂಶಯವೇ ಇಲ್ಲ.

ಈ ಲಕ್ಕಣ್ಣದಂಡೇಶನು ಬರೆದ "ಶಿವತತ್ತ್ವ ಚಿಂತಾಮಣಿ" ಎಂಬ ಮಹಾಗ್ರಂಥವು ಕೇವಲ ವಿರೂಪಾಕ್ಷಪಂಡಿತನ ಪ್ರಖ್ಯಾತ "ಚೆನ್ನಬಸವಪುರಾಣ"ವನ್ನು ಹೋಲು ತ್ತದೆ. ಎರಡರಲ್ಲಿಯು ವಿಷಯುಗಳ ಮಾದರಿಯು ಒಂದೇ ಪ್ರಕಾರವಾಗಿದೆ. "ನಿತ್ಯಾ ನಿತ್ಯ ವಸ್ತುವಿವರಣ, ಸಕಲ ನಿಷ್ಕಲ ವಿಚಾರ, ಶಿವನ ೨೫ ಲೀಲೆಗಳು, ಭುವನಕೋಶ,

ಶಿವಲೋಕ ವರ್ಣನ, ಶಿವನಂದಿ ಸಂವಾದ, ಬಸವಚರಿತ, ಗಣಪ್ರಶಂಸೆ, ಧರ್ಮಾಧರ್ಮ ವಿವರಣ, ಪಂಚಾಕ್ಷರಿ ಭಸಿತರುದ್ರಾಕ್ಷಗಳ ಮಾಹಾತ್ಮ್ಯ, ಲಿಂಗಧಾರಣ, ಶಿವಪೂಜಾ ವಿಧಿ, ಪಾದೋದಕ ಪ್ರಸಾದ ಮಹಿಮೆ, ಶಿವಾಧಿಕ್ಯ, ಮಾಹೇಶ್ವರಾಚರಣೆ, ಷಟ್‌ಸ್ಥಳ" ಮೊದಲಾದ ವಿಷಯಗಳಿಂದ ಕೂಡಿದ ಈ "ಶಿವತತ್ತ್ವ ಚಿಂತಾಮಣಿ"ಯಲ್ಲಿ ೫೪ ಸಂಧಿಗಳೂ, ೨೨೨೧ ವಾರ್ಧಕಷಟ್ಪದಿಗಳೂ ಇವೆ.

ಶ್ರೀ ಬಸವಣ್ಣನವರಿಗೆ ಶ್ರೀ ಚೆನ್ನಬಸವಣ್ಣನವರ ಜೊತೆಯಿದ್ದಂತೆ ಈ ಲಕ್ಕಣ ದಂಡೇಶನಿಗೆ ಮಹಾಜ್ಞಾನನಿಧಿ ಜಕ್ಕಣ್ಣದಂಡನಾಯಕನ ಜೊತೆಯಿದ್ದಿತು. ಲಕ್ಕಣ್ಣ ದಂಡೇಶನು ಪುರಾಣಕಾರನಾದರೆ ಜಕ್ಕಣ್ಣದಂಡನಾಯಕನು ಪ್ರಖ್ಯಾತ ಶಾಸ್ತ್ರಕಾರನು. "ಕಾಮಿಕಾಗಮದಲ್ಲಿ ನಿರೂಪಿತನಾಗಿ, ರೇವಣಸಿದ್ಧೇಶ್ವರರಿಂ ಬೋಧಿಸಲ್ಪಟ್ಟು, ವೀರಶೈವರಿಗೆ ಸ್ಥಲಭೇದದಿಂ ಆರು ಪ್ರಕಾರವನ್ನುಳ್ಳ" ನೂರೊಂದು ಸ್ಥಲದ ಮಹಾಗ್ರಂಥವನ್ನು ಈತನು ಪುರಾತನರ ಮಹಾವಚನವನ್ನೇ ಸರಗೊಳಿಸಿ(ಸೂತ್ರವಿಟ್ಟು), ಸಂಗ್ರಹಿಸಿರುವನು. "ಈತನಿಗೆ ಭಕ್ತಿಭಂಡಾರಿ ಎಂಬ ಬಿರುದಿದ್ದಂತೆ ತಿಳಿಯುತ್ತದೆ." ಎಂದು ವಂದ್ಯ ಕವಿಚರಿತ್ರಕಾರರು ಬರೆದಿದ್ದಾರೆ. (ಕವಿಚರಿತೆ, ಸಂ. ೨, ಪುಟ ೫೭)

ಈ ಜಕ್ಕಣಾರ್ಯನಿಗೆ, ಶಿವಲೆಂಕ ಮಂಚಣ್ಣನ ಅಜ್ಜನಿಂದ ಮೊದಲುಮಾಡಿ ಮಹಾಲಿಂಗದೇವನ ವರೆಗೆ "೨೧ ಗುರುಸಂಪ್ರದಾಯಕ್ಕೆ ಶ್ರೇಷ್ಠರಾದ" ಕುಮಾರ ಬಂಕನಾಥದೇವರು ಗುರುವಾಗಿದ್ದರು. ಈ ಕುಮಾರಬಂಕನಾಥದೇವರು "ಷಟ್‌ಸ್ಥಲೋಪದೇಶ" "ಪ್ರಭುದೇವರ ಟೀಕಿನವಚನ" ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಈ ಕುಮಾರಬಂಕನಾಥರ ಗುರುಗಳೂ, ಶಿವಲೆಂಕಮಂಚಣ್ಣನ ಅಜ್ಜನಿಂದ ೨೦ನೆಯ ತಲೆಯುವರೂ (ಶಿವಲೆಂಕ ಮಂಚಣ್ಣನಿಂದ ೧೮ನೆಯ ತಲೆಯುವರೂ) ಆದ "ಮಹಾಲಿಂಗದೇವರೆಂ"ಬ ಘನಜ್ಞಾನಿಗಳು "ಏಕೋತ್ತರ ಶತಸ್ಥಳ" "ಪ್ರಭುದೇವರ ಷಟ್‌ಸ್ಥಲಜ್ಞಾನಚಾರಿತ್ರವಚನ ಟೀಕೆ" ಎಂಬ ಗ್ರಂಥಗಳನ್ನು "ಜಕ್ಕಣಾರ್ಯಂಗೆ ಸತ್ಪ್ರೇಮ ಮಹಾನುಭಾವ ಸಂಬೋಧೆಯ ಸಂಬಂಧ ನಿರೂಪಣಕಾರಣಾರ್ಥಂ ನಿರೂಪಿಸಿದರು." ಎಂದು ಆ ಗ್ರಂಥಗಳ ಆರಂಭದಲ್ಲಿ ಇಲ್ಲವೆ ಅಂತ್ಯದಲ್ಲಿ ಹೇಳಲಾಗಿದೆ. ಇವನಿಗೆ "ಪುಲಿಗೆರೆಯ(ಲಕ್ಷ್ಮೇಶ್ವರ) ಪುರವರಾಧೀಶ್ವರ ಅಪೂರ್ವ ಸ್ವಯಂಭುಪ್ರಸನ್ನ. ಚೆನ್ನದಕ್ಷಿಣ ಶ್ರೀ ಸೋಮನಾಥದೇವರ ದಿವ್ಯಶ್ರೀಪಾದ ಪದ್ಮಾರಾಧಕ, ತ್ರಿಕಂಡಾನಿಷ್ಠ, ಪರಮವೀರ ಶೈವಾಗಮಾಚಾರ್ಯ" ಎಂಬ ವಿಶೇಷಣಗಳು ಹೇಳಿವೆ. ಇವನ ಗ್ರಂಥಗಳು ಶ್ರೀ ಬಸವ, ಚೆನ್ನಬಸವ, ಪ್ರಭುದೇವ ಮುಖ್ಯರಾದ ಅಸಂಖ್ಯಾತ ಮಹಾಗಣಂಗಳ ವಚನವಾಕ್ಯಾಮೃತದ ಖಣಿಯಾಗಿವೆ. ಈತನ ಶಿಷ್ಯನಾದ ಕುಮಾರಬಂಕನಾಥನ ಗ್ರಂಥಗಳೂ ಸಹ ಈ "ಮಹಾಲಿಂಗದೇವನ ಗ್ರಂಥಗಳನ್ನೇ ಬಹಳ ಮಟ್ಟಿಗೆ ಹೋಲತ್ತದೆ" ಎಂದು ವಂದ್ಯ ಕವಿಚರಿತ್ರಕಾರರು ಬರೆದಿದ್ದಾರೆ. (ಕವಿಚರಿತೆ, ಸಂ. ೨, ಪುಟ ೫೬)

ಹಿಂದಿನ ಕಾಲದಲ್ಲಿಯೇ ತೆಲಗು, ತಮಿಳು, ಸಂಸ್ಕೃತ ಭಾಷೆಗಳಲ್ಲೆಲ್ಲ ಅನುವಾದಿಸಲ್ಪಟ್ಟು ಆಯಾ ಪ್ರಾಂತಗಳಲ್ಲೆಲ್ಲ ಇಂದಿಗೂ ಪ್ರಖ್ಯಾತ ಗ್ರಂಥವೆಂದೆನ್ನಿಸಿಕೊಳ್ಳುತ್ತಿರುವ ಪರಮರಮ್ಯವಾದ "ಪ್ರಭುಲಿಂಗಲೀಲೆ"ಯೆಂಬ ಶ್ರೀಮದಲ್ಲಮಪ್ರಭುಗಳ ಚರಿತ್ರರೂಪವಾದ ಭಾಮಿನೀಷಟ್ಪದಿಯ ಕಾವ್ಯವನ್ನು ಕನ್ನಡದಲ್ಲಿ ಬರೆದು ಕೀರ್ತಿಶಾಲಿಯಾದ "ಚಾಮರಸ"ನೂ ಸಹ ಪ್ರೌಢರಾಯನ ಆಸ್ಥಾನದಲ್ಲಿಯೇ ಜಕ್ಕಣಾರ್ಯ ಹಾಗೂ ಲಕ್ಕಣ್ಣ ದಂಡೇಶರಿಗೆ ಸಂಗಡಿಗನಾಗಿಯೇ ಇದ್ದನು. ಇಂದಿಗೂ ದೇಶದಾದ್ಯಂತ ಲಿಂಗವಂತರೆಲ್ಲಾ ಮಂಗಳಾರತಿಯ ಕಾಲದಲ್ಲಿ ಕೊನೆಗೆ ಹೇಳತಕ್ಕ "ಮರುಳಶಂಕರದೇವ, ನಿಜಕಿನ್ನರಿಯ ಬ್ರಹ್ಮಯ್ಯನಿಗೆ" ಎಂಬ ಹಾಡು ಈ ಚಾಮರಸನ ಪ್ರಭುಲಿಂಗಲೀಲೆಯ ಪೀಠಿಕಾ ಸಂಧಿಯೊಳಗಿನ ಮಂಗಲ ಪದ್ಯಗಳೇ ಆಗಿವೆಯೆಂಬುದನ್ನು ನೆನಿಸಿಕೊಂಡರೆ ಹಿಂದೆ ಗಂಗರಾಜನಾದ ಶಿವಮಾರನು (ಕ್ರಿ. ಶ. ೭೮೧ ರಿಂದ ೮೧೪) ಬರೆದ "ಗಜಾಷ್ಟಕ'ವು ಹೆಣ್ಣುಮಕ್ಕಳ "ಒನಕೆವಾಡು" ಆಗಿದ್ದಿತೆಂದು ಶಿಲಾಶಾಸನಗಳಲ್ಲಿ ಹೇಳಿದ ಮಾತು ನೆನಪಿಗೆ ಬರುವದಿಲ್ಲವೆ ? ಇವನ ಈ ಗ್ರಂಥವು ರಸದಲ್ಲಿಯೂ ಅಮೃತ ಸಮಾನವೇ ಆಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅಥವಾ ಈ ಗ್ರಂಥಕ್ಕೆ "ಪದ್ಯರೂಪ ಶೂನ್ಯಸಂಪಾದನೆ" ಎಂದರೂ ತುಂಬಾ ಒಪ್ಪುವದು.

ಅಲ್ಲದೆ "ಕಲ್ಲುಮಠದ ಪ್ರಭುದೇವ, ಕರಸ್ಥಲದ ನಾಗಿದೇವ, ವೀರಣ್ಣೊಡೆಯ ಮೊದಲಾದ ವಿರಕ್ತರು ಈತನ (ಜಕ್ಕಣಾರ್ಯನ) ಸಮಕಾಲದವರಾಗಿದ್ದಂತೆ ತಿಳಿಯುತ್ತದೆ. ಇವನು (ಜಕ್ಕಣಾರ್ಯನು) ವೀರಶೈವ ಗ್ರಂಥಗಳ ರಚನೆಗಾಗಿ ಅಪರಿಮಿತ ದ್ರವ್ಯವನ್ನು ವೆಚ್ಚಮಾಡಿದಂತೆ (ಎರಡನೆಯ) ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣದಲ್ಲಿ (೧೫೩೦) ಹೇಳಿದೆ" ಎಂದು ಪಂದ್ಯ ಕವಿಚರಿತ್ರಕಾರರು ಹೇಳಿದ್ದಾರೆ. (ಕವಿಚರಿತೆ ಸಂ. ೨, ಪುಟ ೫೭).

ಚೆನ್ನಬಸವಪುರಾಣದಲ್ಲಿಯೂ (ಸಂಧಿ ೬೩) ನಿರಂಜನವಂಶರತ್ನಾಕರದಲ್ಲಿಯೂ (ಪುಟ-೩೩) ನೂರೊಂದು ವಿರಕ್ತಯೋಗಿಗಳು ಪ್ರೌಢದೇವರಾಯನ ಕಾಲದಲ್ಲಿಯೇ ಇದ್ದರೆಂದು ಹೇಳಿವೆ. ಆದರೆ ಇವರು ದಕ್ಷಿಣ ಕರ್ನಾಟಕದ ಸಿದ್ಧಗಂಗೆಯ ಕಡೆಯಿಂದ ವಿಜಯನಗರಕ್ಕೆ ಬಂದರೆಂದು ನಿರಂಜನವಂಶರತ್ನಾಕರವು ಹೇಳುತ್ತಿದೆ. ಆದರೆ ಚೆನ್ನಬಸವಪುರಾಣದ ಅಭಿಪ್ರಾಯದಲ್ಲಿ ಬಹುಶಃ ಇವರೆಲ್ಲರು ವಿಜಯನಗರದಲ್ಲಿಯೇ ಮೂಲತಃ ಇದ್ದರೆಂಬ ಊಹೆಗೆ ಅವಕಾಶವಿರುತ್ತದೆ. "ಇತ್ತ ಪ್ರೌಢದೇವರಾಯನು ಬಂದಿರಲು ಅತ್ತ ನೂರೊಂದು ಗಣೇಶ್ವರರು ಬಂದಿದ್ದರು". ಎಂಬಲ್ಲಿ "ಅತ್ತ" ಎಂಬ ಶಬ್ದದಿಂದ ಬೇರೆ ಕಡೆಯಲ್ಲಿ ಜನ್ಮತಾಳಿದ್ದರೆಂದು ಊಹಿಸುವುದಕ್ಕೂ ಅವಕಾಶವುಂಟು. (ಚೆನ್ನಬಸವಪುರಾಣ, ಸಂಧಿ ೬೩, ಪದ್ಯ ೫).

ನೂರೊಂದು ವಿರಕ್ತರಲ್ಲಿ ಮುಖ್ಯ ಯೋಗಿಯಾದ ಕರಸ್ಥಲದ ನಾಗಿದೇವನ ಗುರುವು ಕರಸ್ಥಲದ ವೀರಣ್ಣೊಡೆಯನು ಗುರುವಿರುವಲ್ಲಿಗೆ ಶಿಷ್ಯನು ಬಂದನೆಂದು ಹೇಳುವಾಗ 'ವಿದ್ಯಾನಗರ'ವೆಂದು ಸ್ಪಷ್ಟವಾಗಿ ಹೇಳದೆ "ಗುರುವಿದ್ದ ಪುರಕೈದಿ ಬರಲು" ಎಂದು ಮಾತ್ರ ಹೇಳಿರುವದರಿಂದಲೂ (ಸಂಧಿ ೬೩. ಪದ್ಯ ೮) ಗುರು ಶಿಷ್ಯರಿಬ್ಬರೂ ಕೂಡಿ ವಿದ್ಯಾನಗರಿಗೈತಂದರೆಂದು ಇನ್ನೊಂದೆಡೆಯಲ್ಲಿ (ಸಂಧಿ ೬೩, ಪದ್ಯ ೧೨) ಹೇಳಿರುವದರಿಂದಲೂ ಆಗ ಪ್ರೌಢದೇವರಾಯನು ಇವರನ್ನು ಕರೆಯಿಸಿ ಮನ್ನಿಸಿದನೆಂದು ಹೇಳಿದ್ದರಿಂದಲೂ (ಪದ್ಯ ೧೫) ಇವರು ದಕ್ಷಿಣ ಕರ್ನಾಟಕದ ಸೀಮೆಯಿಂದಲೇ ಬಂದರೋ ಏನೋ ಎಂಬ ಊಹೆಗೆ ಕೆಲಮಟ್ಟಿಗೆ ಅವಕಾಶವಿದೆ. ಆದರೆ ಈ ವಿಷಯವು ಸ್ಪಷ್ಟವಾಗಿಲ್ಲ.

ಕರಸ್ಥಲದ ನಾಗಿದೇವನು ಪತ್ತಾರ ಜಾತಿಯವನು. ಇವನ ಜಡೆಯಂ ಬಿದಿರುವಂಳೆಗೆ ತೊಡಕಿದರೂ ಅದರ ಪರಿವೆ ಇಲ್ಲದೆ ಅಲ್ಲಿಯೇ ಯೋಗ ಸಮಾಧಿಯಲ್ಲಿ ನಿಂತಿದ್ದನಂತೆ. ಇವನ ಗುರು ಹೋಗಿ ಇವನ ಜಡೆಯನ್ನು ಬಿಡಿಸುವನು. ಶಿಷ್ಯನ ಯೋಗ್ಯತೆಗೆ ಗುರುವು ಬೆರಗಾಗಿ ತಾನೇ ಆತನಲ್ಲಿ ಶಿಷ್ಯತ್ವವನ್ನು ವಹಿಸುವನು. ಇಬ್ಬರೂ ಜ್ಞಾನಿಗಳಾಗಿ ವಿಜಯನಗರಕ್ಕೆ ಬರುವರು.

ಈ ಕರಸ್ಥಲದ ನಾಗಿದೇವನು ಗೂಢಾರ್ಥವುಳ್ಳ ಒಂದು ತ್ರಿಪದಿ ಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ಬೇರೆ ಕೆಲವರು ವ್ಯಾಖ್ಯಾನ ಬರೆದಿದ್ದಾರೆ. ಇದರಲ್ಲಿ ೩೧ ಪದ್ಯಗಳು ಮಾತ್ರವೇ ಇವೆ. ಇದರ ಹೆಸರು 'ಕರಸ್ಥಲದನಾಗಿದೇವನ ತ್ರಿವಿಧಿ' ಎಂದು ಇದೆ. ಈತನ ವಿಷಯದಲ್ಲಿ ಒಂದು ಸಾಂಗತ್ಯರೂಪ ಪುರಾಣವೂ ಹುಟ್ಟಿದೆ.

ಈತನಲ್ಲದೆ, ಕರಸ್ಥಲದ ವೀರಣ್ಣೊಡೆಯ, ಹೊನ್ನಯ್ಯ, ಮಿಡಿಬಿಲ್ಲ ಶಾಂತಿ ದೇವ, ಹೇಟೆಯ ಮರುಳ, ತಗರಕಾಳಗದ ಪ್ರಭು, ಬಾಲಲಿಂಗಣ್ಣ, ಬತ್ತಲೇಶ್ವರ, ಗುರುಬಸವೇಶ, ನಿರ್ವಾಣಿ ಬೋಳೇಶ ಮೊದಲಾಗಿ ನೂರಾ ಒಂದು ಜನ ಶಿವಯೋಗ ಸಮಾಧಿ ಸಂಪನ್ನರು ವಿವಿಧ ಲೀಲೆಗಳಿಂದ "ಮರುಳರಂದದೊಳು" ಕಾಣಸಿಕೊಳ್ಳುತ್ತ ಇದ್ದರೆಂದು ಚೆನ್ನಬಸವಪುರಾಣದಲ್ಲಿ ಹೇಳಿದೆ.

ನೂರೊಂದು ವಿರಕ್ತರಲ್ಲಿಯೇ ಒಬ್ಬನಾದ ಕಲ್ಲಮಠದ ಪ್ರಭುದೇವನು ಸರ್ವ ಪುರಾತನರ ವಚನಗಳಿಂದ ಆರಿಸಿ ೧೬ ಸ್ಥಲಗಳಲ್ಲಿ "ಲಿಂಗಲೀಲಾವಿಲಾಸ ಚಾರಿತ್ರ" ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

ಹೀಗೆ ವಿಜಯನಗರದಲ್ಲಿ ಪ್ರೌಢದೇವರಾಯನ ಕಾಲದಲ್ಲಿ, ಅಶೋಕ ಮಹಾ ರಾಜನ ಸಭೆಯೊಳಗೆ ಬೌದ್ಧ ಭಿಕ್ಷುಗಳ ಮಹಾಸಂಘ ಕೂಡಿ ಶ್ರೀ ಬುದ್ಧದೇವರ ವಚನಗಳನ್ನು ಸಂಕಲಿಸಿ ತ್ರಿಪೀಟಕಗಳನ್ನು ರಚಿಸಿದಂತೆ ನೂರೊಂದು ವಿರಕ್ತರೂ

ಜಕ್ಕಣ್ಣ ಲಕ್ಕಣ್ಣಾದಿ ಮಹಾಕವಿಗಳೂ ಕೂಡಿ ಪುರಾತನ ಶಿವಶರಣರ ವಚನಗಳ ಸಂಗ್ರಹ ಹಾಗೂ ಚರಿತ್ರ ವಿವರಣ ಕಾರ್ಯವನ್ನು ತೃಪ್ತಿಕರವಾಗಿ ನೆರವೇರಿಸಿದ ರೆಂಬುದು ಅಭಿಮಾನಾಸ್ಪದವಾದ ಸಂಗತಿಯಾಗಿದೆ.

ಇನ್ನು ನಿರಂಜನವಂಶರತ್ನಾಕರದಿಂದ ತಿಳಿಯುವ ಇನ್ನುಳಿದ ಕೆಲವು ಸಂಗತಿ ಗಳನ್ನು ಹೇಳಿ ಈ ಲೇಖನವನ್ನು ಮುಗಿಸುತ್ತೇನೆ.

ತಿಪ್ಪೇರುದ್ರಸ್ವಾಮಿ, ಬಸವಪ್ರಭುಸ್ವಾಮಿ, ಗೋಸಲ ಸಿದ್ಧೇಶ್ವರಸ್ವಾಮಿ ಈ ಮೂವರು ಮಹಾತ್ಮರು ಮೂರು ಕಡೆಯಲ್ಲಿ ಧರ್ಮಪ್ರಚಾರ ಮಾಡಿದಂತೆ ತಿಳಿಯು ತ್ತದೆ. ಅದು ಹೇಗೆಂದರೆ—

**ತಿಪ್ಪೇರುದ್ರಸ್ವಾಮಿ :** (ಇವರು) ಗಣಸಮೂಹದಲ್ಲಿ ಗುರುನಮಶ್ಶಿವಾಯ ರೆಂಬ ಗುರುಬಸವದೇವರನ್ನು ಚಿದಂಬರದಲ್ಲಿರುವ ಮಠದಲ್ಲಿರುವದೆಂದಾಜ್ಞಾಪಿಸಿ, ಮತ್ತೊಬ್ಬ ಶಿವಜ್ಞಾನಿಯೆಂಬವರಿಗೆ ಸಂಜಿರುಜನ (ತಂಜಾವರ ?) ಭಕ್ತಮಂಠ ದಲ್ಲಿರುವದೆಂದು ನಿರೂಪಿಸಿ, ತಿರುವಣಾಮಲೆಯಲ್ಲಿರುವ ತಮ್ಮ ಮಠದಲ್ಲಿ ಶಂಕರೇಶ ನೆಂಬವರಿಗೆ ಇರುವದೆಂದಾಜ್ಞಾಪಿಸಿ, ಆ ಮೇಲೆ ಬಮ್ಮಯ್ಯಪಾಳ್ಯದ ಪಾಲಯ್ಯ ದೇವರು, ಪುದಚೇರಿಯ(ಪಾಂಡಿಚೇರಿ) ಪಾದಪೂಜರೆಂಬ ಅಂಬಲರೆಂಬ ಶಿವಪ್ರಕಾಶರು ಮುಂತಾದ ಗಣಂಗಳಿಗೆ ಷಟ್‌ಸ್ಥಲ ಜ್ಞಾನೋಪದೇಶವಂ ಮಾಡಿ(ದರು)."

—ನಿರಂಜನವಂಶರತ್ನಾಕರ, ಪುಟ ೨೦.

**ಬಸವಪ್ರಭುಸ್ವಾಮಿಂಗಳು :** "ಬಸವಪ್ರಭುಸ್ವಾಮಿಗಳು...... ಕೆಳದಿ ದೇಶ ಮುಂತಾದ ಸಕಲದೇಶಂಗಳಂ ಸಂಚರಿಸುತ್ತ ಅಲ್ಲಿಂದ ಹುಕ್ಕೇರಿನಾಡಿಗೆ ದಯಮಾಡಿಸಿ ಅಲ್ಲಿಂದ ಹನಗಂಡಿ ಎಂಬ ಗ್ರಾಮಕ್ಕೆ ಚಿತ್ತೈಸಿ ಅಲ್ಲಿರುವ ಜೈನ ಅರಸನಿಗೆ ಲಿಂಗ ಧಾರಣವಂ ಮಾಡಿಸಿ, ಆಮೇಲೆ ತೇರದಾಳವೆಂಬ ಊರಿಗೆ ದಯಮಾಡಿಸಿ, ಅಲ್ಲಿಯ ಭಕ್ತಗಣಂಗಳನ್ನು ಕರೆಯಿಸಿ ತಮ್ಮಯ ಶಿವಾನುಭವ ಚರಂತಿಗೆಯನ್ನು ಆದಿಲಿಂಗೇಶ ನೆಂಬ ಗಣವರರಿಗೆ ಮಾಡಿ ತಮ್ಮಯ ಕಮಂಡಲುವಾದ ಮಗಿಯನ್ನು ಪಾವುಗೆ, ಬೆತ್ತದ ಸಹಿತವಾಗಿ ಕೊಟ್ಟು ಸಮಸ್ತರಿಗೆ ಆಶೀರ್ವಾದವಂ ಮಾಡಿ ನಿರ್ವಯಲಾದರು. ಇವರ ತೋರಗದ್ದಿಗೆ ತೇರದಾಳದಲ್ಲಿರುವದು"

—ನಿರಂಜನವಂಶರತ್ನಾಕರ. ಪುಟ ೨೧ ೨೨

**ಗೋಸಲ ಸಿದ್ಧೇಶ್ವರಸ್ವಾಮಿಂಗಳು :** ಇವರು ಐಹೊಳ್ಳಿಯ ಹರದರಿಂದ (ವರ್ತಕರಿಂದ) ಕಟ್ಟಿಸಲ್ಪಟ್ಟ ಹರದನಹಳ್ಳಿಯ ಮಠಕ್ಕೆ ಸ್ವಾಮಿಗಳಾಗಿ ತಮ್ಮ ನೂರೊಂದು ಗಣಗಳೊಂದಿಗೆ ತುಮಕೂರ ಬಳಿಯಲ್ಲಿರುವ ಸಿದ್ಧಗಂಗೆಯ ಬೆಟ್ಟಕ್ಕೆ

ದಯಮಾಡಿಸಿ ಅಲ್ಲಿ ಎಲ್ಲರಿಗೆ ಒಂದೊಂದು ಗವಿಯನ್ನು ಕಟ್ಟಿಸಿಕೊಟ್ಟು ತಾವು ಆ ಬೆಟ್ಟದಲ್ಲಿಯೇ ನಿರ್ವಯಲಾದರು.

—ನಿರಂಜನವಂಶರತ್ನಾಕರ, ಪುಟ ೨೬–೩೨

ಇದೆಲ್ಲ ವಿವರಣೆಯ ಮೇಲಿಂದ ತಿಪ್ಪೇರುದ್ರಸ್ವಾಮಿಗಳು ತವಿಳುನಾಡಿನಲ್ಲಿಯೂ ಬಸವಪ್ರಭುಸ್ವಾಮಿಗಳು ಉತ್ತರ ಕರ್ನಾಟಕದಲ್ಲಿಯೂ ಗೋಸಲ ಚೆನ್ನಬಸವೇಶ್ವರರು ದಕ್ಷಿಣ ಕರ್ನಾಟಕದಲ್ಲಿಯೂ ನೂರೊಂದು ವಿರಕ್ತರಿಗಿಂತ ಮುಂಚೆ ಧರ್ಮಪ್ರಚಾರ ಕಾರ್ಯಮಾಡಿ ಮಹಾಮಹಿಮರೆಂದು ಅನಿಸಿಕೊಂಡಿದ್ದರೆಂಬುದು ಸ್ಪಷ್ಟವಿದೆ. ಈ ಮೂವರಲ್ಲಿ ಕೊನೆಯವರಾದ ಗೋಸಲ ಚೆನ್ನಬಸವೇಶ್ವರಸ್ವಾಮಿಗಳ ಶಿಷ್ಯರಾದ ಶಂಕರಾಚಾರ್ಯ ಸ್ವಾಮಿಗಳೇ ನೂರೊಂದು ಪುರಾತನರೊಂದಿಗೆ ವಿಜಯನಗರಕ್ಕೆ ಬಂದು, ಅಲ್ಲಿ ಕೆಲದಿನ ನೆಲಸಿದರೆಂದು ನಿರಂಜನವಂಶರತ್ನಾಕರವು ಹೇಳುತ್ತದೆ (೩೨–೩೩) ಅದು ಹೇಗೆಂದರೆ—

"ಶಂಕರಾಚಾರ್ಯ ಸ್ವಾಮಿಗಳು ವಾಣಿಜ್ಯಪುರದ (ಹರದನಹಳ್ಳಿ) ಭಕ್ತರಭಕ್ತಿಯೊಡನೆ ಪೂಜೋತ್ಸವಂಗಳನ್ನು ಕೈಕೊಳ್ಳುತ್ತ ತಮ್ಮ ಗಣಸಮೂಹದೊಡನೆ ಪಂಪಾಕ್ಷೇತ್ರಕ್ಕೆ ದಯಮಾಡಿಸಿ ಅಲ್ಲಿಯ ಪ್ರೌಢದೇವೇಂದ್ರನು ಪಂಪಾ ವಿರೂಪಾಕ್ಷನಾಲಯಕ್ಕೆ ಸಮೀಪದ ವಿದ್ಯಾನಗರವಂ ಕಟ್ಟಿ ಆ ಪುರದ ಆ ನೃಪಾಲನು ಆಳುವ ಕಾಲದಲ್ಲಿ ಶ್ರೀ ಪರಮೇಶ್ವರನ ಆಜ್ಞೆಯಿಂದ ಕೈಲಾಸದಿಂ ಮರ್ತ್ಯಲೋಕಕ್ಕೆ ದಯಮಾಡಿಸಿ ಲೀಲೆಯಂ ಮಾಡಿ ಶಿವಭಕ್ತಿಯಂ ನೆಲೆಗೊಳಿಸಿದ ನೂರೊಂದು ವಿರಕ್ತರಾದ ಗುರುಗಳು ಕರಸ್ಥಲದ ವೀರಣ್ಣ ಒಡೆಯರು, ಕರಸ್ಥಲದ ನಾಗಿದೇವರು, ಗುರುಬಸವದೇವರು, ಬತ್ತಲೇಶ್ವರ, ನಿರ್ವಾಣಿ ಬೋಳೇಶ ಮುಂತಾದ ಗಣವರರಿಗೆ ಶಂಕರೇಶ್ವರ ಸ್ವಾಮಿಗಳು ಷಟ್‌ಸ್ಥಲಜ್ಞಾನೋಪದೇಶವಂ ಮಾಡಿ ಅಲ್ಲಿಂದ ತಮ್ಮಯ ಗುರುಗಳು ಶಿವಯೋಗದೊಡನೆ ತಪವಂಗೈದ ಕಾರಣದಿಂ ಗೋಸಲ ಸಿದ್ಧೇಶ್ವರನ ಹೆಸರಾದ ಬೆಟ್ಟಕ್ಕೆ ದಯಮಾಡಿಸಿ ಅದೇ ಬೆಟ್ಟದಲ್ಲಿ ನಿರ್ವಯಲಾದರು. ಇವರ ತೋರಗದ್ದುಗೆಯು ಪೆನುಗೊಂಡೆ ಸೀಮೆ ಕೊರಟಗೆರೆ ಸಮೀಪದ ಸಿದ್ಧರ ಬೆಟ್ಟದಲ್ಲಿ ಇರುತ್ತದೆ.

— ನಿರಂಜನವಂಶರತ್ನಾಕರ, ಪುಟ ೩೨–೩೩

ನೂರೊಂದು ವಿರಕ್ತರ ಇತಿಹಾಸವನ್ನು ಐತಿಹಾಸಿಕವಾಗಿ ಇನ್ನೂ ಹೆಚ್ಚಾಗಿ ಶೋಧಿಸಬೇಕೆಂಬುದು ಸುಸ್ಪಷ್ಟ. ಇದೀಗ ತಿಳಿದ ಮಟ್ಟಿಗೆ ನಾನಿಲ್ಲಿ ಪ್ರಸ್ತಾಪಿಸಿದ್ದೇನೆ. ಇದಿರಲಿ, ಆದರೆ ಇದೇ ಕಾಲದಲ್ಲಿ ಅಂದರೆ ಪ್ರೌಢದೇವರಾಯನ ಕಾಲದಲ್ಲಿದ್ದ ಇನ್ನೊಬ್ಬ ಪ್ರಸಿದ್ಧ ತಾತ್ತ್ವಿಕ ಕವಿಯ ವಿಷಯವನ್ನು ಹೇಳಿ, ಈ ಎರಡನೆಯ ಘಟ್ಟದ ವಿಷಯವನ್ನು ಮುಗಿಸುವೆನು. ಆ ಕವಿ ಯಾರೆಂದರೆ "ಮಗ್ಗೆಯ ಮಾಯಿದೇವ". ಈತನ "ಶತಕತ್ರಯ"ವು ವೀರಶೈವ ತತ್ತ್ವವನ್ನು ಬಹಳ

ಸುಂದರವಾಗಿ ಪ್ರತಿಪಾದಿಸುತ್ತಿದೆಯೆಂಬುದನ್ನು ಎಲ್ಲರೂ ಬಲ್ಲರು. ಇದರ ಮೇಲಿ ಮುಂದೆ ಕೆಲವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಈತನು ಐಹೊಳ್ಳಿಯ ಸೋಮನಾಥ ದೇವರ ಭಕ್ತನು. ಆದರೆ "ಮಗ್ಗೆಯಪುರ"ದಲ್ಲಿ ಜನ್ಮತಾಳಿದ್ದನೆಂದು 'ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ"ದಲ್ಲಿ ಹೇಳಿದೆ. ಚೆನ್ನಬಸವಪುರಾಣದಲ್ಲಿ ಈತನು ವಿಜಯನಗರದ ಪ್ರೌಢದೇವರಾಯನಿಂದ ಪೂಜೆ ಹೊಂದಿದ್ದನೆಂದು ಹೇಳಲಾಗಿದೆ. (ಸಂಧಿ ೬೩, ಪದ್ಯ ೩೮) ಹೇಗೆಂದರೆ : ಪ್ರೌಢನಿಂ ಪೂಜೆಯುಂ ಕೊಂಡು ಷಟ್‌ಸ್ಥಲ ಮಾರ್ಗವಂ ಸಕಲ ಶಿವಭಕ್ತ ಸಂತತಿಗೆ ತಿಳಿವವೊಲನುಭಾವ ಸೂತ್ರವಾದಿ ಶಾಸ್ತ್ರಂಗಳಂ ಗೆಲವಿನಿಂ ಪೇಳ್ದು ಮಗ್ಗೆಯ ಮಾಯಿದೇವ ಪ್ರಭುವರನಿರದೆ ಮುಕ್ತನಹನು."

ಈತನಲ್ಲದೆ ಪ್ರೌಢದೇವರಾಯನ ಕಾಲದಲ್ಲಿ, ವಿಜಯನಗರದಲ್ಲಿ ರಾಜಮನ್ನಣೆಗೆ ಪಾತ್ರನಾಗಿ, ನಿಜಗುಣ ಶಿವಯೋಗಿಗಳಂತೆ ಅನೇಕ ಅನುಭವ ಗ್ರಂಥಗಳನ್ನು ಬರೆದು, ಬಹುಶಃ ಕೊನೆಗೆ ನೂರೊಂದು ವಿರಕ್ತರಲ್ಲಿ ಎಣಿಸಲ್ಪಟ್ಟ "ಗುರುಬಸವಾರ್ಯ" ನೆಂಬೊಬ್ಬ ಪ್ರಖ್ಯಾತ ಸ್ವಾಮಿಯು ಇದ್ದನು. ಇವನ ವಿಷಯವನ್ನು ಹೇಳದೆ ಬಿಟ್ಟರೆ ಪ್ರಸ್ತುತ ಇತಿಹಾಸವು ಅಪೂರ್ಣವೆಂದೆನಿಸುವಂತಿದೆ. ಆದುದರಿಂದ ಆತನ ವಿಷಯವನ್ನೂ ಒಂದಿಷ್ಟು ಹೇಳುವೆ.

ಈತನು "ಶಿವಯೋಗಾಂಗ ಭೂಷಣ", "ಸದ್ಗುರು ರಹಸ್ಯ", "ಕಲ್ಯಾಣೇಶ್ವರ", "ಸ್ವರೂಪಾಮೃತ", "ವೃಷಭಗೀತೆ", "ಅವಧೂತಗೀತೆ", "ಮನೋವಿಜಯ ಕಾವ್ಯ" ಈ ಗ್ರಂಥಗಳನ್ನು ಬರೆದಿದ್ದಾನೆ. ಈತನ ಮನೋವಿಜಯ ಕಾವ್ಯದ ಕೊನೆಯ ಗದ್ಯದಲ್ಲಿ "ಶಿವಯೋಗಿಜನವಿನುತ ಚರಣಾರವಿಂದ, ಷಟ್‌ಸ್ಥಲಜ್ಞಾನ ಪ್ರಭಾಪುಂಜರಂಜಿತಾಂತರಂಗ, ವೀರಶೈವ ಮತಸ್ಥಾಪನಾಚಾರ್ಯನಪ್ಪ ಶ್ರೀಮದ್ಗುರು ಬಸವೇಶ್ವರಂ" ಎಂದು ಹೇಳಿಕೊಂಡಿರುವದರಿಂದ ಈತನು ಬಹಳ ಪ್ರಸಿದ್ಧನಾದ ವೀರಶೈವ ಗುರುವಾಗಿದ್ದಂತೆ ತಿಳಿಯುತ್ತದೆ.

ನೂರೊಂದು ವಿರಕ್ತರಲ್ಲಿ ಪ್ರಖ್ಯಾತರಾದ ಕರಸ್ಥಲದ ನಾಗಿದೇವ ಹಾಗೂ ಕರಸ್ಥಲದ ವೀರಣ್ಣೊಡೆಯರು ಶಿವಯೋಗ ಸಿದ್ಧಿಯನ್ನು ಪಡೆದುಕೊಂಡು ವಿಜಯ ನಗರಕ್ಕೆ ಬಂದಾಗ ಪ್ರೌಢದೇವರಾಯನು ಅವರಿಬ್ಬರನ್ನು ಪರೀಕ್ಷಿಸುವದಕ್ಕೆಂದು ಈ ಗುರುಬಸವಾರ್ಯನೆಡೆಗೆ ಕಳುಹಿಸಿಕೊಡುವನು. ಆಗ ಗುರುಬಸವಾರ್ಯನು ನಾಗಿದೇವನ ನಿಜಜ್ಞಾನಕ್ಕೆ ಮೆಚ್ಚಿ ಅನುಮಾನವಿಲ್ಲದೆ ಆತನಿಗೆ ನಮಿಸಿ ವಿರಕ್ತರನ್ನು ಕೂಡಿ ಸಿಂಗಾರ ತೋಟಕ್ಕೆ ಹೋಗುವನು ಎಂದು ಚೆನ್ನಬಸವಪುರಾಣದಲ್ಲಿ ಹೇಳಿದೆ. (ಸಂಧಿ ೬೩, ಪದ್ಯ ೧೫-೧೭)

ಇಂತಿವರೆಲ್ಲ ಮಹಾನುಭಾವರು ನೂರೊಂದು ವಿರಕ್ತರ ಕಾಲದಲ್ಲಿ ಶಿವಶರಣರ ತತ್ತ್ವಪ್ರಚಾರದ ಕಾರ್ಯವನ್ನು ಮಾಡಿದರು. ಮುಂದೆ ಸುಮಾರು ಐವತ್ತೇ ವರುಷಗಳಲ್ಲಿ "ತೋಂಟದ ಸಿದ್ಧಲಿಂಗಯತಿ"ಗಳೆಂಬ ಮಹಾಮಹಿಮರು ಏಳುನೂರು ಜನ ಶಿಷ್ಯರೊಂದಿಗೆ ಪ್ರಕಟವಾಗಿ ದೇಶದಾದ್ಯಂತ ತಮ್ಮ ಶಿಷ್ಯ ಪ್ರಶಿಷ್ಯರಿಂದ ಜನ ಸಾಮಾನ್ಯರಲ್ಲೆಲ್ಲ ಧರ್ಮಪ್ರಚಾರ ಹಾಗೂ ತತ್ತ್ವಪ್ರಚಾರ ಮಾಡಿಸಿದ್ದೇ ಈ ಶಿವ ಶರಣರ ಚಳವಳಿಯ ಮೂರನೆಯ ಘಟ್ಟವು.

"ಪ್ರೌಢದೇವರಾಯನು ಸಾಂಬಲೋಕಕ್ಕೆ ಹೋದನಂತರ ಕೆಲವು ದಿವಸ ಆ ರಾಜ್ಯದಲ್ಲಿ ಅನಾಚಾರವು ಹೆಚ್ಚಾಗಿ ಶಿವಾಚಾರವಡಗಿ ಮೇಲಾಧರಣಿಯೊಳು ವೀರ ಶೈವಾಚಾರವಿಲ್ಲದೆ ಪರವಾದಿಗಳು ಘನವಾಗಲು ಕೈಲಾಸಕ್ಕೆ ನಾರದನು ಪೋಗಿ ಪರಮೇಶ್ವರನು ಓಲಗಂಗೊಟ್ಟಿಪ್ಪ ಸಮಯದೊಳು ಕಂಡು ಸಲ್ಲೀಲೆಯಿಂದೆರಗಿ ಮುಗುಳ್ದಿದ್ದು ಬಿನ್ನೈಸಿದಂ ಭಯಭಕ್ತಿಯಿಂದ ಧರೆಯೊಳಗೆ ವೀರಶೈವಾಚಾರ ವಡಗಿತ್ತು. ಕರುಣದಿಂ ನೀವೇ ಚಿತ್ತೈಸಿ ಷಟ್‌ಸ್ಥಲವನುದ್ಧರಿಸೆಂದು ನಾರದಂ ಬಿನ್ನೈಸಲೀಶಂ ನಿರಂಜನ ಗಣೇಶ್ವರನೊಡನೆ ಪರ ಗಣೇಶ್ವರರೇಳ್ನೂರ್ವರಂ ಕೂಡಿ ಕೊಂಡಿರದೆ ಭೂಮಿಯೊಳುದಯಿಸಿ ಜಂಗಮಜಾಂತು ಪರಷಟ್‌ಸ್ಥಲವನ್ನುದ್ಧರಿಸೆಂದು ಕಳುಹಲವರೊಡಗೂಡಿ (ತೋಂಟದ ಸಿದ್ಧಲಿಂಗ ಯತಿಯಾಗಿ) ಭೂಮಿಗಿಳಿದನಂ." ನಿರಂಜನವಂಶರತ್ನಾಕರ, ಪುಟ ೩೬.

ಇದೇ ನಿರಂಜನವಂಶ ರತ್ನಾಕರದಲ್ಲಿ "ನರಸಣ್ಣರಾಯನಾಳಿಕೆಯಲ್ಲಿ ಈ ಸಂಗತಿ ನಡೆಯಿತೆಂದು ಹೇಳಲಾಗಿದೆ (ಪುಟ–೩೯). ಆದರೆ ಪ್ರೌಢದೇವರಾಯನ ಅನಂತರ ಇಬ್ಬರು ಅರಸರು ಆಳಿದ ಮೇಲೆ ಆ ಮನೆತನದ ಅಂತವಾಗಿ ಬೇರೆ ಬೇರೆ ಎರಡು ಮನೆತನದ ನಾಲ್ಕು ಜನ ನರಸಿಂಹರಾಜರು ರಾಜ್ಯವನ್ನಾಳಿದರು. (೧. ಸಾಳ್ವ ನರಸಿಂಹ, ೨. ಇಮ್ಮಡಿ ನರಸಿಂಹರಾಯ. ೩. ತುಳುವ ನರಸರಾಯ. ೪. ವೀರ ನರಸಿಂಹ (ಕ್ರಿ.ಶ. ೧೪೭೮–೧೫೦೯).

ಈ ನಾಲ್ವರಲ್ಲಿ ಯಾವ ನರಸಿಂಹರಾಜನ ಕಾಲದಲ್ಲಿ "ತೋಂಟದ ಸಿದ್ಧಲಿಂಗ ಯತಿ"ಯು ಬಂದಿದ್ದಿರಬೇಕೆಂಬುದೇ ನಮ್ಮ ಇದಿರಿಗಿರುವ ಪ್ರಶ್ನೆ. "ನರಸ" ಎಂಬ ಹೆಸರು ಈ ನಾಲ್ವರಲ್ಲಿ ತುಳುವ ನರಸಿಂಹರಾಯನಿಗೇ ಇದ್ದಿತೆಂದು ಐತಿಹಾಸಿಕ ಗ್ರಂಥ ಗಳಲ್ಲಿ ಕಂಡುಬರುತ್ತದೆ. ಏಕೆಂದರೆ, ಆತನು ಮೊದಲಿಗೆ ದಂಡನಾಯಕನು ಮಾತ್ರ ನಾಗಿದ್ದು "ನರಸದಂಡನಾಯಕ"ನೆಂದು ಇತಿಹಾಸ ಪುಸ್ತಕಗಳಲ್ಲಿ ಈತನನ್ನು ಸಂಬೋಧಿಸಲಾಗಿದೆ. ಈ "ನರಸದಂಡನಾಯಕ" ಎಂಬ ಶಬ್ದವೂ ನಿರಂಜನವಂಶ ರತ್ನಾಕರದ "ನರಸಣ್ಣರಾಯ"ನೆಂಬ ಶಬ್ದವೂ ಸ್ವಲ್ಪ ಮಟ್ಟಿಗೆ ಹೋಲುವದರಿಂದ ಕ್ರಿ. ಶ. ೧೪೯೬ ರಿಂದ ೧೫೦೩ ರ ವರೆಗೆ ಆಳಿದ ತುಳುವ ವಂಶದ ಮೊದಲನೆಯ

ದೊರೆಯಾದ ನರಸಿಂಹ ರಾಜನ ಕಾಲದಲ್ಲಿ ಮೋಲ್ಮಾಣಿಸಿದ ಮಹಾಪುರುಷರು ಉದಯಿಸಿರಬೇಕೆಂದು ಊಹಿಸಲಿಕ್ಕೆ ಅವಕಾಶವಿದೆ. ಚೆನ್ನಬಸವ ಪುರಾಣದಲ್ಲಿ ಸಹ "ಪ್ರೌಢರಾಯನ ವಂಶದ ವಿರೂಪಾಕ್ಷರಾಯನನ್ನು ಪಟ್ಟದಿಂದ ತಳ್ಳಿ 'ನರಸಣ್ಣ ನಾಯ್ಕ'ನು ವಿಜಯನಗರವನ್ನು ಹಿಡಿದುಕೊಳ್ಳುವನು. ಆತನ ವಂಶದವರು ೫೧ ವರುಷ ಆಳುವರು" ಎಂದು ಹೇಳಿ, ಆಮೇಲೆ "ತೋಂಟದ ಸಿದ್ಧಲಿಂಗಯತಿ"ಯ ಆಗಮನದ ಕಥೆಯನ್ನು ಮೇಲೆ ನಿರಂಜನವಂಶರತ್ನಾಕರದಲ್ಲಿ ಹೇಳಿದಂತೆಯೇ (ನಾರದ ಪರಮೇಶ್ವರ ಸಂವಾದ ಇತ್ಯಾದಿ) ಹೇಳಲಾಗಿದೆ.

ವಂದ್ಯ ಕವಿಚರಿತ್ರಕಾರರು ಪ್ರೌಢದೇವರಾಯನ ಮಗನ ಅನಂತರ ಆಳಿದ ವಿರೂಪಾಕ್ಷರಾಯನ ಕಾಲದಲ್ಲಿಯೇ ತೋಂಟದ ಸಿದ್ಧಲಿಂಗಯತಿಯು ಬಂದ ಹಾಗೆ ಭಾವಿಸಿ ಆತನ ಕಾಲವು ಸುಮಾರು ಕ್ರಿ.ಶ. ೧೪೭೦ ಆಗಬಹುದೆಂದು ಊಹಿಸಿದ್ದಾರೆ. ಆದರೆ ವಿರೂಪಾಕ್ಷರಾಯನ ಬದಲಾಗಿ ತುಳುವ ನರಸಿಂಹರಾಯನ ಆಳಿಕೆಯೆಂದು (ಕ್ರಿ. ಶ. ೧೪೯೭-೧೫೦೩) ಇಟ್ಟುಕೊಂಡರೆ ಇನ್ನೊಂದು ಮೂವತ್ತು ವರುಷ ಮುಂದಕ್ಕೆ ಬರಬೇಕಾಗುತ್ತದೆ, ಇಷ್ಟೇ, ಹೀಗಾದರೆ, ಸಮಾರು ಕ್ರಿ. ಶ. ೧೫೦೦ ರ ಸುಮಾರು ಆತನ ಕಾಲವೆಂದು ಹೇಳಬೇಕಾಗುತ್ತದೆ. ಬಲ್ಲವರು ಹೆಚ್ಚಿಗೆ ಸಂಶೋಧಿಸಲಿ. ನನ್ನ ಊಹೆಯನ್ನು ನಾನಿಲ್ಲಿ ನಿರ್ದಿಷ್ಟಪಡಿಸಿರುವೆನು. ಯಾವದಿದ್ದರೂ ಬಹಳವೇನೂ ಅಂತರವಿಲ್ಲ.

ಈ ತೋಂಟದ ಸಿದ್ಧಲಿಂಗಯತಿಗಳು ಮಹಾಶಿವಯೋಗ ಸಂಪನ್ನರು. ಇವರೊಂದು ತೋಟದಲ್ಲಿ ಅನೇಕ ವರುಷ ಶಿವಯೋಗ ಸಮಾಧಿ ಸ್ಥಿತಿಯಲ್ಲಿದ್ದದ್ದರಿಂದ ಇವರ ಹೆಸರಿನ ಹಿಂದೆ "ತೋಂಟದ" ಎಂಬ ಶಬ್ದವು ಬಂದಿದ್ದಿತೆಂದು ಚೆನ್ನಬಸವಪುರಾಣ ಹಾಗೂ ನಿರಂಜನವಂಶರತ್ನಾಕರ ಇವೆರಡರಲ್ಲಿಯೂ ಹೇಳಿದೆ. ಶ್ರೀ ಬಸವಾದಿ ಶಿವಶರಣರ ಅನಂತರ ಇವರ ಕಾಲದವರೆಗೆ ಇನ್ನಾರೂ ಪುನಃ ವಚನಗಳನ್ನು ಬರೆದಿದ್ದಿಲ್ಲ. ೩೫೦ ವರುಷಗಳ ಅನಂತರ ಪುನಃ ಇವರೇ ತಮ್ಮ ಸ್ವತಃದ ವಚನಗಳನ್ನು ಬರೆದವರು. "ಷಟ್‌ಸ್ಥಲ ಜ್ಞಾನಸಾರಾಮೃತ"ವೆಂದು ಇವರ ವಚನ ಗ್ರಂಥಕ್ಕೆ ಹೆಸರಿದೆ. ಅದರಲ್ಲಿ ೭೦೧ ವಚನಗಳಿವೆ. "ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ" ಎಂಬುದು ಅವರ ವಚನಗಳ ಮುದ್ರಿಕೆಯಾಗಿದೆ.

ಇವರ ವಳನೂರು ಶಿಷ್ಯರಲ್ಲಿದ್ದ ಬೇರೆ ಇನ್ನಿಬ್ಬರಾದ ಸಿದ್ಧಲಿಂಗೇಶ್ವರ ಹಾಗೂ ದೊಡ್ಡ ಸಿದ್ಧಲಿಂಗೇಶ್ವರರಲ್ಲಿ ಬಹುಶಃ ಯಾರೋ ಒಬ್ಬರು "ಸ್ವತಂತ್ರ ಸಿದ್ಧಲಿಂಗೇಶ್ವರ ವಚನ" ಎಂಬ ಸ್ವತಂತ್ರವಚನಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ೪೩೦ ವಚನಗಳಿವೆ. "ನಿಜಗುರುಸ್ವತಂತ್ರಸಿದ್ಧಲಿಂಗೇಶ್ವರಾ" ಎಂಬುದು ಈತನ ವಚನಗಳ ಮುದ್ರಿಕೆಯಾಗಿದೆ. ತೋಂಟದ ಸಿದ್ಧಲಿಂಗ ಯತಿಯಿಂದ ಭಿನ್ನನಾದ ಇನ್ನೊಬ್ಬ

ಸಿದ್ಧಲಿಂಗೇಶ್ವರನೆಂದು ನಿರ್ದಿಷ್ಟ ಪಡಿಸಿಕೊಳ್ಳುವದಕ್ಕಾಗಿ ಈ ವಚನಕಾರನು ತನ್ನ ಹೆಸರಿನ ಹಿಂದೆ "ಸ್ವತಂತ್ರ" (=ಬೇರೆ) ಎಂಬ ಶಬ್ದವನ್ನು ಇಟ್ಟಂತೆ ಕಾಣುತ್ತದೆ. "ಮುಕ್ತ್ಯಂಗನೆಯ ಕಂಠಮಾಲೆ" ಎಂಬುದೂ ಈತನ ವಚನಗಳಿಂದಲೇ ಸಂಗ್ರಹೀತ ವಾದ ಇನ್ನೊಂದು ವಚನಗ್ರಂಥವಿರುತ್ತದೆ. ಇದರ ಮುದ್ರಿಕೆಯಾದರೂ ಅದೇ.

ತೋಂಟದ ಸಿದ್ಧಲಿಂಗಯತಿಯ ಶಿಷ್ಯನ (ಬೋಳಬಸವೇಶನ) ಶಿಷ್ಯನಾದ ಗುಮ್ಮಳಾಪುರದ ಸಿದ್ಧಲಿಂಗೇಶ್ವರನು "ಷಟ್‌ಸ್ಥಲದ ಲಿಂಗಾಂಗ ಸಂಬಂಧದ ನಿರ್ವಚನ" ಎಂಬ ವಚನ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿಯ ವಚನಗಳು ಕೇವಲ ೧೫ ಮಾತ್ರ. ಸಾಕ್ರೆಟಿಸನ ಸಂವಾದದಂತಿರುವ "ಶೂನ್ಯ ಸಂಪಾದನೆ" ಎಂಬ ಪ್ರಖ್ಯಾತ ಗ್ರಂಥವನ್ನು ರೂಪಿಸಿದ ಗುಳೂರ ಸಿದ್ಧವೀರಣಾರ್ಯನು ಈ ತೋಂಟದ ಸಿದ್ಧಲಿಂಗಯತಿಯ ಶಿಷ್ಯನೇ ಆಗಿದ್ದನೆಂಬ ಮಾತು ಆ ಗ್ರಂಥದ ಪೀಠಿಕಾ ಸಂಧಿ ಯಲ್ಲಿಯೇ ಹೇಳಲಾಗಿದೆ. ಅಲ್ಲದೆ ಹಡಪದ ಅಪ್ಪಣ್ಣಗಳ ಪತ್ನಿ ಲಿಂಗಮ್ಮನ ವಚನ ಗಳಂತೆಯೇ ತೀರ ಚಿಕ್ಕದೂ ತೀರ ಚೊಕ್ಕದೂ ಆದ "ಘನಲಿಂಗ ವಚನಗಳು" ಎಂಬ ಗ್ರಂಥವನ್ನು ಬರೆದ ಘನಲಿಂಗದೇವನೂ ಸಹ ಮಹಾಯೋಗೀಶ್ವರನಾದ ತೋಂಟದ ಸಿದ್ಧಲಿಂಗಯತಿಯ ಶಿಷ್ಯನೇ ಎಂಬ ಮಾತು ಆತನ ವಚನಗಳಲ್ಲಿಯೇ ಹೇಳಲಾಗಿದೆ.

ತೋಂಟದ ಸಿದ್ಧಲಿಂಗಯತಿಯ ಪುರಾಣದಲ್ಲಿ ಅವರ ಶಿಷ್ಯನೆಂದು ಉಲ್ಲೇಖಿ ಸಲ್ಪಟ್ಟ ಮೊದಲನೆಯ ಗುಬ್ಬಿಯ ಮಲ್ಲಣನು ಪುರಾತನ ಶಿವಶರಣರ ವಚನಗಳನ್ನು (ಇಂದಿನ ವಚನ ಪಿತಾಮಹರಾದ ರಾವಬಹಾದ್ದೂರ ಶ್ರೀ ಫ. ಗು. ಹಳಕಟ್ಟಿಯವರು ಶ್ರೀ ಬಸವೇಶ್ವರರ ವಚನಗಳ ಆಧುನಿಕ ಪದ್ಧತಿಯ ವರ್ಗೀಕರಣ ಮಾಡಿದಂತೆ) ಸಾಮಾನ್ಯ ಜನರಿಗೆ ಉಪಯೋಗವಾಗುವ ರೀತಿಯಲ್ಲಿ ವರ್ಗೀಕರಣ ಮಾಡಿ "ಗಣ ಭಾಷ್ಯರತ್ನಮಾಲೆ" ಎಂಬ ಪ್ರಖ್ಯಾತವಾದ ಸಂಗ್ರಹ ಗ್ರಂಥವನ್ನು ಸಿದ್ಧಪಡಿಸಿರು. ವನು. ಮೊದಲಿನ ನೂರೊಂದು ಸ್ಥಲಗಳು ತಾತ್ತ್ವಿಕವಾಗಿದ್ದರಿಂದ ಅವುಗಳನ್ನು ಕ್ರಮಾನುಸಾರವಾಗಿ ತಿಳಿದುಕೊಳ್ಳುವುದು ಸಾಮಾನ್ಯರಿಗೆ ಬಿಗಿಯಾದ ಕೆಲಸ ವಾಗಿದ್ದಿತು. ಆದ್ದರಿಂದ ಬೇರೆ ಬೇರೆ ವಿಷಯಂಗಳ ಸುಲಭವಾದ ವರ್ಗೀಕರಣವನ್ನು ಮಾಡಿ ೧೦೧ ವಿಭಾಗಗಳನ್ನು ಮಾಡಿ ನೂರೊಂದು ಸ್ಥಲವೆಂದೇ ಹೆಸರಿಟ್ಟು ಗಣ ಭಾಷ್ಯರತ್ನಮಾಲೆಯನ್ನು ಈತನು ಬಹು ಸುಲಭವಾಗುವಂತೆ ಹೆಣೆದಿದ್ದಾನೆ.

ಈ 'ಗಣಭಾಷ್ಯರತ್ನಮಾಲೆ"ಯ ಗುಬ್ಬಿಯ ಮಲ್ಲಣನ ಮೊಮ್ಮಗನಾದ ಎರಡನೆಯ ಗುಬ್ಬಿಯ ಮಲ್ಲಣಾರ್ಯನು "ವೀರಶೈವಾಮೃತ ಪುರಾಣ"ವೆಂಬ ಬಹು ದೊಡ್ಡ ಗ್ರಂಥವನ್ನು ಬರೆದಿದ್ದಾನೆ. ಇದು ವೀರಶೈವ ಧರ್ಮದ ಎನ್‌ಸಾಯ್ಕ್ಲೋ ಪಿಡಿಯೊ (ಜ್ಞಾನಕೋಶ)ವಾಗಿದೆಯೆಂದು ಒಬ್ಬ ಮೇಧಾವಿಗಳು ಒಮ್ಮೆ ನುಡಿದರು. ಕುಮಾರವ್ಯಾಸನ ಕನ್ನಡ ಭಾರತ ಹಾಗೂ ಚಾಟುವಿಠ್ಠಲನಾಥನ ಕನ್ನಡ ಭಾಗವತ ಗಳಂತೆ ಏಳೆಂಟು ಸಾವಿರ ಷಟ್ಪದಿ(ವಾರ್ಧಕ)ಗಳುಳ್ಳ ೧೩೬ ಅಧ್ಯಾಯಗಳಿಂದ

ಕೂಡಿದ ಅಷ್ಟಕಾಂಡ ಗ್ರಂಥವಾಗಿದೆ. "ಇದರಲ್ಲಿ ವೀರಶೈವ ಸಿದ್ಧಾಂತವು ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ವೇದಾಗಮ ಪುರಾಣ ಇತಿಹಾಸ ಸ್ಮೃತಿಗಳಿಂದ ವಾಕ್ಯಗಳು ಸಾಕ್ಷಿಯೆಂದು ಅನುವಾದವಾಡಲ್ಪಟ್ಟಿವೆ. ಅಲ್ಲದೆ ಶಿವನ ೨೫ ಲೀಲೆಗಳು, ಪುರಾತನನೂತನಶರಣರ ಕಥೆಗಳು ಮುಂತಾದ ಅನೇಕ ವಿಷಯಗಳು ಈ ಗ್ರಂಥದಲ್ಲಿ ಉಕ್ತವಾಗಿವೆ." ಎಂದು ವಂದ್ಯ ಕವಿಚರಿತ್ರಕಾರರು ಹೇಳಿದ್ದಾರೆ.

(ಕವಿಚರಿತೆ, ಸಂ. ೨, ಪುಟ ೧೯೫)

"ಪೂರ್ವದಲ್ಲಿ ಲಕ್ಕಣ್ಣದಣ್ಣಾಯಕರು, ಭಂಡಾರಿ ಜಕ್ಕಪ್ಪ, ಕಲ್ಲೆಹದ ಕೇತಿಸೆಟ್ಟಿ ಇವರು ಲಕ್ಷ ಸಂಖ್ಯೆಯ ವಿತ್ತವಂ ವೆಚ್ಚಿಸುತ್ತ ಮಾಡಿದರೆಂಬುದು ಹೆಚ್ಚಲ್ಲ; ನಿಸ್ಪೃಹನಾಗಿ ಈ ಕಾವ್ಯವಂ ಮಾಡಿ ಸಕಲ ಮಾಹೇಶ್ವರರ ಕೃಪೆಗೆ ಪಾತ್ರನಾದ ಮಲ್ಲಣಾರ್ಯನ ಭಾಗ್ಯಕ್ಕೆ ಎಣೆಯುಂಟೇ ? ಎಂದೂ ಶರಣರು ಕವಿಯನ್ನು ಹೊಗಳಿದಂತೆ ಹೇಳಿದೆ." (ಕವಿಚರಿತೆ, ಸಂ. ೨, ಪು. ೧೯೬)

ಇದರ ಮೇಲಿಂದ ಈ ಗ್ರಂಥದ ಮಹತ್ವವು ತಿಳಿಯುವಂತಿದೆ.

ಈ ಎರಡನೆಯ ಮಲ್ಲಣಾರ್ಯನ ಮಗನಾದ ಶಾಂತೇಶ ಅಥವಾ ಶಾಂತದೇಶಿಕನೇ ತೋಂಟದ ಸಿದ್ಧಲಿಂಗಯತಿಯ ಪುರಾಣವನ್ನು ಬರೆದಿದ್ದಾನೆ. ಈ ಪುರಾಣದಲ್ಲಿ ಪುರಾಣ ಪುರುಷರಾದ ಯತಿವರರ ಚರಿತ್ರವು ಹೀಗೆ ಹೇಳಲ್ಪಟ್ಟಿದೆ— "ಈ ಯತಿ ಹರದನಹಳ್ಳಿಯ ಗೋಸಲ ಚೆನ್ನಬಸವೇಶ್ವರನ ಶಿಷ್ಯನು. ಶಿವಗಂಗೆಗೆ ಬಂದು ಕಗ್ಗೆರೆಯ ಸಮೀಪದಲ್ಲಿರುವ ನಾಗಿಣೀ ನದಿಯ ತೀರದಲ್ಲಿ ತೋಂಟದೊಳಗೆ ಶಿವಯೋಗದಲ್ಲಿದ್ದನು. ಶಿಷ್ಯನಾದ ಚಂದ್ರಶೇಖರನಿಗೆ ಭುವನಕೋಶ, ಧರ್ಮಾಧರ್ಮ ವಿಚಾರ, ಶಿವನ ಪಂಚವಿಂಶತಿಲೀಲೆಗಳು, ಷಟ್‌ಸ್ಥಲ ಕ್ರಮ ಮುಂತಾದ ವಿಷಯಗಳನ್ನು ಭೋಧಿಸಿದನು. ಚಂದ್ರಶೇಖರನು ತಾನು ಕೇಳಿದ ಬೋಧೆಯನ್ನು ಸಾಂಗವಾಗಿ ಕಾವ್ಯದಲ್ಲಿ ಹೇಳಬೇಕೆಂದು ಬೆಸಸಲು ಕವಿ ಅದೇ ಮೇರೆಗೆ ಬರೆದಂತೆ ಹೇಳುತ್ತಾನೆ." (ಕವಿಚರಿತೆ, ಸಂ. ೨, ಪುಟ ೨೯೭)

ಈತನು "ತನ್ನ ಗ್ರಂಥವನ್ನು 'ಪಚ್ಚೆಯಕಂತೆಯಾರ್ಯನ ಕರಕಮಲದೊಳ್ ಜನಿಸಿ, ತೋಂಟದ ಸಿದ್ಧನಂಘ್ರಿಯನರ್ಚಿಸುತ್ತಂ' ಉಪದೇಶವನ್ನು ಪಡೆದ ಚಂದ್ರಶೇಖರ ಗುರುವಿನ ಇಷ್ಟಾನುಸಾರವಾಗಿ... ಬರೆದಂತೆ ಹೇಳುತ್ತಾನೆ" ಎಂದು ವಂದ್ಯ ಕವಿಚರಿತ್ರಕಾರರು ಹೇಳಿದ್ದಾರೆ. (ಕವಿಚರಿತೆ, ಸಂ. ೨, ಪುಟ ೨೯೬)

ಇದೊಂದು ಗ್ರಂಥವಲ್ಲದೆ ಈ ತೋಂಟದ ಸಿದ್ಧಲಿಂಗಯತಿಯ ವಿಷಯಕ್ಕೆ ಅನೇಕ ಗ್ರಂಥಗಳು ಹುಟ್ಟಿವೆಯೆಂದು ವಂದ್ಯ ಕವಿಚರಿತ್ರಕಾರರು ಹೇಳಿದ್ದಾರೆ. ಅಲ್ಲದೆ ಮೈಸೂರು ನಾಡಿನ ಎಡೆಯೂರಲ್ಲಿರುವ ಈತನ ಸಮಾಧಿಯಿರುವ ಮಠದಲ್ಲಿ

ಸುಮಾರು ಕ್ರಿ.ಶ. ೧೫೦೦ ರ ಸುಮಾರಿಗೆ ಈತನ ವಿಷಯದಲ್ಲಿ ಬರೆದ ಒಂದು ಶಿಲಾ ಶಾಸನವು ಸಹ ಇದೆಯಂತೆ. ಅದರಲ್ಲಿ ಈತನ ಬಗೆಗೆ ಹೀಗೆ ಹೇಳಿದೆಯಂತೆ—

"ಇಂತಪ್ಪ ಅನಾದಿ ಜಂಗಮಮೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮ ವೆಂತೆಂದಡೆ. ಜ್ಞಾನಕ್ರಿಯಾ ಸ್ವರೂಪನುಂ, ಸರ್ವಾಂಗಲಿಂಗಿ, ಷಟ್‌ಸ್ಥಲಜ್ಞಾನಿ, ಸರ್ವಾಚಾರಸಂಪನ್ನ, ಪಾದೋದಕ ಪ್ರಸಾದ ಪ್ರತಿಷ್ಠಾಚಾರ್ಯನುಂ, ಅಷ್ಟಾವರಣಾ ಲಂಕರಣ ದ್ವೈತಾದ್ವೈತ ತಿಮಿರಮಾರ್ತಂಡನುಂ, ಇಂತಪ್ಪ ದಿವ್ಯಶಿವಯೋಗಿ ಸಿದ್ಧಲಿಂಗೇಶ್ವರಂಗೆ ಸಮ್ಯಗ್‌ಜ್ಞಾನೋದಯವಾಗಿ ಸಂಸಾರಹೇಯಮಂ ಮಾಡೆ, ಶರಣುಹೊಕ್ಕ ಶಿಷ್ಯಜನಗಳ ನಾಮಪರಿಕ್ರಮಂಗಳೆಂತೆಂದಡೆ- ಸಪ್ಪೆದೇವರು, ಉಪ್ಪಿನ ಪಳ್ಳಿಯಸ್ವಾಮಿ ಸಿದ್ಧದೇವರು, ಸಂಜೆದೇವರು, ಬೋಳಬಸವರಾಜದೇವರು, ಗುಮ್ಮಳಾಪುರದ ಸಿದ್ಧಲಿಂಗದೇವರು, ಪಟ್ಟಣದೇವರು, ರೇವಣಸಿದ್ಧದೇವರು, ಶೀಲವಂತದೇವರು, ಚಿಟ್ಟಿಗದೇವರು, ಇಂತೆ ಇರುವ ಮುಖ್ಯವಾದ ಭಕ್ತಮಹೇಶ್ವ ರರ್ಗೆ ಷಟ್‌ಸ್ಥಲಜ್ಞಾನ ಲಿಂಗಾಂಗಸಂಬಂಧ ಸಮರಸೈಕಾರ್ಥಮಂ ಬೋಧಿಸಿ ಮುಕ್ತರಂ ಮಾಡಿ, ಷಟ್‌ಸ್ಥಲೈಕಾರ್ಥವಾಗಿ ಮಾಡುವ ಕ್ರಿಯೆಗಳೆಲ್ಲ ನಿಷ್ಪತ್ತಿಯಾಗಿ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವಯೋಗಸಮಾಧಿ ಸನ್ನದ್ಧರಾದರು".

—ಕವಿಚರಿತೆ, ಸಂ. ೨, ಪುಟ ೯೮

ಚೆನ್ನಬಸವಪುರಾಣದಲ್ಲಿ ಈ ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಲ್ಲಿ ಇನ್ನೂ ೨೮ ಹೆಸರುಗಳನ್ನು ಹೆಚ್ಚಿಗೆ ಹೇಳಲಾಗಿದೆ. ಸಿದ್ಧೇಶ್ವರಪುರಾಣದಲ್ಲಿ ೮ ಹೆಸರುಗಳನ್ನು ಹೆಚ್ಚಿಗೆ ಹೇಳಿದೆ. ಒಟ್ಟಾರೆ ಈ ಮಹಾಯತಿಗಳಿಗೆ ಏಳುನೂರು ಜನ ಶಿಷ್ಯರಿದ್ದರೆಂದು ಚೆನ್ನಬಸವಪುರಾಣದಲ್ಲಿಯೂ ನಿರಂಜನವಂಶರತ್ನಾಕರದಲ್ಲಿಯೂ ಸಂಖ್ಯಾನಿರ್ದೇಶ ಮಾಡಲಾಗಿದೆ.

ಇವರು ಮಾಡಿದ ಧರ್ಮಪ್ರಚಾರದ ಸ್ವರೂಪವು ಹೀಗಿದೆ :

"ತೋಂಟದಾರ್ಯ ಸ್ವಾಮಿಗಳವರು ಗಣಸಮೂಹದಿಂದ ವಾಣಿಜ್ಯಪುರವಂ (ಹರದನಹಳ್ಳಿ) ಬಿಟ್ಟು ದೇಶದೇಶಗಳಲ್ಲಿ ಉತ್ಸಹಂಗೊಳ್ಳುತ್ತ ಅಲ್ಲಿರುವ ಜೋಗಿ ನಾಥರು, ಸಿದ್ಧರು, ವೈಷ್ಣವ, ಬೌದ್ಧ, ಜೈನ, ಚಾರ್ವಾಕ, ಕಾಳಾಮುಖ ಮುಂತಾದವರಂ ಶಾಸ್ತ್ರಮುಖದಿಂ ಮಹತ್ವದಿಂ ಗೆಲಿದು. ಅವರಿಗೆ ಶಿವಭಕ್ತಿಯನುಂಟು ಮಾಡುತ್ತ ಕೆಲವು ಜನರಿಗೆ ಲಿಂಗಧಾರಣವಂ ಮಾಡಿಸಿ ವೀರಶೈವವಂ ಉದ್ಧರಿಸುತ್ತ (ಲಿರ್ದರು)" —ನಿರಂಜನವಂಶರತ್ನಾಕರ, ಪುಟ ೪೪

ಮತ್ತು ಈ ಯತಿವರರು ಮಾಡಿದ ಮಠಮಾನ್ಯಗಳ ರಚನೆಯ ವಿಶಾಲ ಕಾರ್ಯದ ವಿವರವನ್ನು ನಿರಂಜನವಂಶರತ್ನಾಕರದಲ್ಲಿ ಹೀಗೆ ಹೇಳಿದೆ :

ಸ್ವಾಮಿಗಳವರು ಆ ಬಳಿಕ ಈ ಏಳನೂರು ಚರವರರಿಗೆ ಏಳ್ನೂರು ಬುಡಕಟ್ಟುಗಳಂ ಅವರವರ ಸ್ವಾಭಾವಿಕ ಗುಣಗಳ ಮೇಲಿಂದ ನಿಯಮಿಸಿದರು. ಎಂದರೆ ಆ ಚರಪತಿಗಳೊಳಗೆ ಒಬ್ಬರು ಪಂಚಶಿಖೆಯಂ ಬಿಟ್ಟ ಕಾರಣದಿಂ ಲೋಚನ ಬುಡಕಟ್ಟೆಂತಲು, ಮತ್ತೊಬ್ಬರು ಲಿಂಗನೈಷ್ಠಾ ಶಿವಪೂಜಾನಿಷ್ಠರಾದ್ದರಿಂದ ಶಿವಪೂಜಾ ಬುಡಕಟ್ಟೆಂತಲು, ಮತ್ತೊಬ್ಬರು ಪಸರು ಕಂಥೆಯಂ ಧರಿಸಿದ ಕಾರಣದಿಂ ಪಚ್ಚೆಕಂಥೆ ಬುಡಕಟ್ಟೆಂತಲು. ಒಪ್ಪತ್ತೆ(ಪ್ರಸಾದ)ಮುಗಿವ ಕಾರಣದಿಂ ಒಪ್ಪತ್ತಿನ ಬುಡಕಟ್ಟೆಂತಲು, ಮತ್ತೊಬ್ಬನು ಸ್ನಾನಕ್ಕೆ ಬಿಸಿ ಅಗ್ಗಣಿಯಲ್ಲದೆ ಉಳಿದ ತಣ್ಣೀರು ಒಲ್ಲದ ಕಾರಣದಿಂ ಬಿಸಿ ಅಗ್ಗಣಿ ಬುಡಕಟ್ಟೆಂತಲು, ಈ ಪ್ರಕಾರದಿಂ ನಿಯಮಿಸಿ ಹೆಸರಿಟ್ಟು :

"ಬುಡಕಟ್ಟಿನ ಮತಸ್ಥರಾದ ಆ ಮೂರ್ತಿಗಳಲ್ಲಿ ಸ್ಥಲ ಕೂಡಿ ಶಾಸ್ತ್ರ ಸಂಪಾದನೆಯ ಮಾಡಿಕೊಂಡ ಗಣಪರರು (ಶಿಷ್ಯರು) ಈ ಬುಡಕಟ್ಟಿನ ಚರಮೂರ್ತಿಗಳಿಂದ ಚರಂತಿಗೆ ಪುಸ್ತಕವೆಂದರೆ ಚೆನ್ನಬಸವಪುರಾಣ, ಬಸವಪುರಾಣ ಮುಂತಾದ ಶಿವಪುರಾಣಗಳನ್ನು, ತಮ್ಮಿಂದ ಷಟ್‌ಸ್ಥಲ ಜ್ಞಾನೋಪದೇಶವಂ ಪಡೆದು ಷಟ್‌ಸ್ಥಲಾಶ್ರಮವಂ ಹೊಂದಿದ ತಮ್ಮಯ ಶಿಷ್ಯೋತ್ತಮನಿಗೆ ಭಕ್ತಗಣವರರ ಮಧ್ಯದಿ ಆ ಪುಸ್ತಕಗಳಂ ಕೊಟ್ಟು ತಮ್ಮ ಸ್ವಯಾಸನವಂ ಕೊಟ್ಟರೆ ಪುರಾಣಚರಂತಿಗೆ ಎಂತಲು, ಪಳ್ಳಿಚರಂತಿಗೆ ಎಂತಲು ಈ ಎರಡು ನಾಮಗಳು ಇವರಿಗೆ ಬರುತ್ತವೆ.

"ಪ್ರಭುಚೆನ್ನಬಸವರಾಜೇಂದ್ರರು, ಶಿವಮೂರ್ತಿಯಾದ ಸೊನ್ನಲಿಗೆಯ ಸಿದ್ಧರಾಮೇಶಂಗೆ ನಿರೂಪಿಸಿದ ಗೋಪೇಶ್ವರನ ವಚನ, ಕರಣಹಸಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರ ಮಂತ್ರಗೋಪ್ಯ, ಅಕ್ಕಗಳ ಸೃಷ್ಟಿಯವಚನ, ಪ್ರಭುದೇವರ ಸೃಷ್ಟಿಯ ವಚನ, ಸಿದ್ಧೇಶ್ವರನ ವಚನ, ಹಿರಿಯಮಂತ್ರಗೋಪ್ಯ, ಶೂನ್ಯಸಂಪಾದನೆ ಮುಂತಾದವುಗಳ ಸಂಗ್ರಹಿಸಿದ ಪುಸ್ತಕದ ಸಭಾಮಧ್ಯದಲ್ಲಿ ಗುರುವರನಕಡೆಯಿಂದ ಅಂಗತತ್ವ ೨೫, ಲಿಂಗತತ್ವ ೧೧, ಅಂತುಕೂಡಿ ೩೬ ತತ್ವವಂ ತಿಳಿದಾತನು ಶಾಸ್ತ್ರದ ಕಟ್ಟು ಹಿಡಿಯಬೇಕು. ಈ ಪ್ರಕಾರ ಪಡೆದಾತನೆ ವಿರಕ್ತನಿಹನು, ಈತನಿಗೆ ಶಿವಾನುಭವ ಪುಸ್ತಕವೇ ಆಗಲಿ, ಪುರಾಣ ಪುಸ್ತಕವೆ ಆಗಲಿ ಇವುಗಳನ್ನು ಗುರುಗಳಾದ ಚರಮೂರ್ತಿಗಳು ಸಭೆಯಲ್ಲಿ ಕೊಟ್ಟು ತಮ್ಮಾಸನದಲ್ಲಿ ಕುಳ್ಳಿರಿಸಲು ಆ ಗಣವರನೆ ಚರಮೂರ್ತಿ ಎನಿಸುವನು. ಈ ಶಿವಾನುಭವ ಚರಮೂರ್ತಿಯು ತಮ್ಮ ಶಿಷ್ಯರಾದ ಬ್ರಹ್ಮಚಾರಿಗಳಾದ ಮರಿಗಳು ಗುರು ಉಪದೇಶವಂ ಪಡೆದರೂ, ಆ ಮರಿಗಳು ಕರಣಹಸಿಗೆ ಮುಂತಾದ ಶಿವಾನುಭವ ಶಾಸ್ತ್ರದ ನುಡಿಕಟ್ಟುಗಳಂ, ನೂರೊಂದು ಸ್ಥಲದ ವಿಚಾರಗಳು ಗುರುಗಳಿಂದ ಆ ಶಾಸ್ತ್ರವಂ ಸಂಪಾದನ ಮಾಡಿಕೊಳ್ಳದವರಿಗೆ ಆ ಶಾಸ್ತ್ರದ ನುಡಿಗಳಂ ಹೇಳಕೂಡದು. ಈ ಐದು ಶಾಸ್ತ್ರಬಾರದ ನಿರಕ್ಷರಿಗಳಿಗೆ ಶಿವಾನುಭವ ಚರಂತಿಗೆಯಂ ಕೊಡಕೂಡದು, ಎಂದು ಆ ಗಣವರರಿಗೆ ನಿರೂಪಿಸಿ ಆಶೀರ್ವಾದವಂ ಕೊಟ್ಟು ದೇಶಾಟಣಕ್ಕೆ ಕಳುಹಿಸಿದರು.

"ಅನಂತರ ಆ ಚರವರರು ದೇಶಾಂತರವಂ ಮಾಡುತ್ತ ಗ್ರಾಮ. ಪೇಟೆ, ಮನೆಗೆ ದಯಮಾಡಿಸಿ ಅಲ್ಲಿಯ ಭಕ್ತಗಣಂಗಳಿಗೆ ಷಟ್‌ಸ್ಥಲಜ್ಞಾನೋಪದೇಶವಂ ಮಾಡುತ್ತ ಅನ್ಯಮತಸ್ಥರಾದ ಪರವಾದಿಗಳಂ ಮಹತ್ವದಿಂ ಶಾಸ್ತ್ರಮುಖದಿಂ ಗೆಲಿವುತ ಶಿವಭಕ್ತಿಯನ್ನುಂಟುಮಾಡುತ್ತ ಆ ಭಕ್ತರ ಭಕ್ತಿಯಿಂ ದೇಶಮಧ್ಯದಿ ತಮ್ಮ ಮಠಮಾನ್ಯ ಕಾಣಿಕೆ ವರ್ಷಾಶನಗಳಂ ಪಡೆದು ಆ ಮಠಗಳಲ್ಲಿ ತಮ್ಮ ಸೂತ್ರಿಕರಾದ ಮರಿಗಳಂ ಇಡುತ್ತ ದೇಶಂಗಳಲ್ಲಿ ಭಕ್ತರಿಂ ಕಾಣಿಕೆಯುಂ ಎತ್ತಿ ತಮ್ಮಯ ಗುರುಸನ್ನಿಧಿಗೆ ವಾಣಿಜ್ಯಪುರದ (ಹರದನಹಳ್ಳಿ) ಶೂನ್ಯಸಿಂಹಾಸನಕ್ಕೆ ಕಾರಣಕರ್ತರಾದ ತೋಂಟದಾರ್ಯಸ್ವಾಮಿಗಳ ದಾಸೋಹಕ್ಕೆ ಕಳುಹಿಸುತ್ತಲಿದ್ದರು.

"ಆ ಏಳನೂರು ಬುಡಕಟ್ಟಿನ ಚರಮೂರ್ತಿಗಳ ಹಸ್ತಾಬ್ಜದಿಂದ, ಸಂಜನಿತರಾದ ವಿರಕ್ತರು ಮೂರುಸಾವಿರವಾದರು. ಅಂತು ಕೂಡಿ ಏಳ್ನೂರು ಚರಮೂರ್ತಿಗಳಿಗೆ, ಮೂರುಸಾವಿರ ವಿರಕ್ತಮಾಹೇಶ್ವರರಿಗೆ ತೋಂಟದಾರ್ಯಸ್ವಾಮಿಗಳವರೇ ಜಗದ್ಗುರುಗಳೆಂದೆನಿಸಿದರು." —ನಿರಂಜನವಂಶರತ್ನಾಕರ, ಪುಟ ೪೦–೪೩.

ಈ ರೀತಿಯಿಂದ ಈ ತೋಂಟದ ಸಿದ್ಧಲಿಂಗಯತಿಗಳೆಂಬ ಮಹಾಮಹಿಮರಿಂದ ಘನಪ್ರಮಾಣದಲ್ಲಿ ದೇಶದಾದ್ಯಂತ ಶಿವಶರಣರ ತತ್ತ್ವದ ಪ್ರಚಾರವಾಗಿ, ಆ ಮೊದಲು ದೇಶದಲ್ಲಿದ್ದ ಜೋಗಿಗಳಾದ ನಾಥರು, ಸಿದ್ಧರು, ಪಾಶುಪತರು, ಲಕುಳೀಶ ಕಾಳಾಮುಖರು ಇವರೇ ಮೊದಲಾದ ನಾನಾಪ್ರಕಾರದ ಶೈವ ಹಾಗೂ ಸಿದ್ಧಸಂಪ್ರದಾಯಗಳೆಲ್ಲ ವೀರಶೈವವೊಂದರಲ್ಲಿಯೇ ಅಡಕವಾಗಿ ಹೋದವೆಂದು ಸ್ಪಷ್ಟವಾಗಿ ಅನಿಸುವದಿಲ್ಲವೆ ?

ಈ ಮಹಾಮಹಿಮರಾದ ಶ್ರೀ ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಾದ ವಿರತರಲ್ಲಿ ಸಿದ್ಧಲಿಂಗೇಶ್ವರ, ಕಂಬಳಾದೇವರು, ಸಿದ್ಧನಂಜೇಶ್ವರ, ಚೆನ್ನದೇವರು, ದೊಡ್ಡಸಿದ್ಧಲಿಂಗೇಶ್ವರ, ಮರುಳಸಿದ್ಧೇಶ್ವರ, ಜಕುನಿಯ ಮರುಳದೇವರು, ಮಳೆಯದೇವರು, ಬತ್ತಲೇದೇವರು, ರಾಜವಟ್ಟಿದೇವರು, ಬೋಳಬಸವೇಶ ಮೊದಲಾದ ಏಳ್ನೂರು ವಿರತರು ಷಟ್‌ಸ್ಥಲ ಮಾರ್ಗವನ್ನು ನೆಲೆಗೊಳಿಸಿ ಪೂಜೆಗೊಂಡು ನಿಜಮುಕ್ತರಾದರು. —ಶ್ರಿ ಚೆನ್ನಬಸವಪುರಾಣ ಅಧ್ಯಾಯ ೬೩.

ಅವರ ತರುವಾಯ ಹುಚ್ಚನಂಜೇಶ್ವರ, ಹುಚ್ಚವಿರೂಪಾಕ್ಷ, ಮಾದಾಪುರದ ಮರುಳದೇವರು, ಹೊನ್ನಳ್ಳಿಯ ಸಿದ್ಧವೀರೇಶ, ನಿಡುಮಾಗಡಿಯ ಕರಿಯಬಸವೇಶ, ಕರದಿಯ ಹಾಲದೇವರು, ಸರವೆಯ ಸಿದ್ಧರಾಮೇಶ, ಷಟ್‌ಸ್ಥಲ ಬ್ರಹ್ಮಿಯಾದ ಕೋರಾನ್ನದಾರ್ಯ, ಬುಕ್ಕಸಾಗರದ ಕರಿಯ ಸಿದ್ಧವೀರೇಶ, ನಾರಕಂಥೆಯ ದೇವರು, ಚೆಂಗಡಹಳ್ಳಿ ವೀರಪ್ಪ, ಮಾವಿನಹಳ್ಳಿ ಮಲ್ಲಪ್ಪ, ಆ ಗ್ರಾಮದ ಸಂಗಮೇಶ, ಗುಮ್ಮಳಾಪುರದ ವೀರಪ್ಪ, ಪ್ರಸಾದಿ ದೇವರು, ನಂಜರಾಯ. ಕೆಂಜ ಸೋಮಣ್ಣ

ನಾಯಕ, ಎಳಂದೂರ ಚೆನ್ನೊಡೆಯರು, ಬರಗಿರಿಯ ದೇವನಾಯಕ, ಬುಕ್ಕಣ್ಣೊಡೆಯ, ಸಿದ್ಧಮಲಿನಾಯಕ, ಜಂಬೂರ ದೊರೆಗಳು, ಕೇತಸಾಗರದ ಚಿಕ್ಕಣ್ಣಸೆಟ್ಟಿ, ಬಿಜ್ಜಾವರದ ಪ್ರಭುವು, ಚಿಕ್ಕಣಗೌಡ, ಸುಕುಮಾರ ತಮ್ಮಣಗೌಡ, ತಗಡೂರ ಪ್ರಭುವು, ತಳಕಾಡ ಚಂದ್ರಶೇಖರ, ಭೋಗವಾಡಿಯ ಲಿಂಗರಾಯ, ಉಡವಂಕ ನಾಡಪ್ರಭು, ಸೋಲೂರ ಬಸವಪ್ಪ, ಸಂಗಯ್ಯ, ಮಹಾಂತಯ್ಯ, ಸಂಡಿಗೆಯ ಸಿದ್ದಪ್ಪ, ಮುದ್ದಸಂಗಪ್ಪ, ದಾಸೋಹದ ಲಿಂಗಪ್ಪ, ಮಲ್ಲಪ್ಪ, ಕಾ ಬ ಣ ದ ಬಿ ಗಿ ಗಂಗಾಧರ, ಕಳಲೆಯ ವೀರಪ್ಪ, ಪೂಸನಹಳ್ಳಿಯ ನಾಗಪ್ಪ, ದಾತೃ ಬಸಪ್ಪ, ಮೋಳಿಗಯ್ಯ, ಬಾಣಾವರದ ಸಿದ್ದಪ್ಪ, ಶೀಲವಂತ ಸಿರಿಯಾಳಯ್ಯ, ಹೋಳಿನ ಸಿದ್ದಪ್ಪ, ಹೊಸದುರ್ಗದ ಕಲ್ಲಪ್ಪ, ವಿರತ ಬಸವಪ್ಪ, ತೈಲದ ಮರುಳಪ್ಪ, ಮಾನಂಗಿ ಶಿಖರಪ್ಪ, ಬಟ್ಟಮಂಡೆಯ ಪ್ರಭು, ಬಯಲಪ್ರಭು, ಕಳಲಿಯ ಕಂಚಿದೇವರು, ಕಾನಾಪುರದ ಮರುಳಸಿದ್ಧೇಶ, ಉಪ್ಪಲಗುಡಿಯ ಸಂಗಮೇಶ, ಕೊಟ್ಟೂರ ಬಸವ ಲಿಂಗೇಶ, ಆನೆಯಗೊಂದಿ ಬೆಟ್ಟದಲ್ಲಿರುವ ಹುಚ್ಚದೇವರು, ಬೆಳಗಾವಿ ಹುಚ್ಚಸಿದ್ಧ ರಾಮೇಶ, ಇವರೇ ಮೊದಲಾದ ನಿರವಧಿಕ ಮಹಿಮೆಯ ಪುರುಷರು ಜಂಗಮ ದಾಸೋಹವನ್ನು ಮಾಡಿ ನಿಜಲಿಂಗೈಕ್ಯರಾದರು." —ಶ್ರೀ ಚೆನ್ನಬಸವಪುರಾಣ ಅಧ್ಯಾಯ ೬೩, ಇಲ್ಲಿಗೆ ವಿಜಯನಗರದ ಸಾಮ್ರಾಜ್ಯದ ಸಮಾಪ್ತಿಯಾಯಿತು. ಇದರ ಮುಂದಿನ ಇತಿಹಾಸವು ಇಕ್ಕೇರಿ, ಕೆಳದಿ, ಸ್ವಾದಿ, ಮೈಸೂರು ಮೊದಲಾದ ಪ್ರಭುಗಳ ಕಾಲಕ್ಕೆ ಸಂಬಂಧಿಸಿದ್ದು. ಈ ವಿಷಯವನ್ನು ಬಲ್ಲವರು ಹೆಚ್ಚಿಗೆ ಸಂಶೋಧಿಸುವರೆಂದು ನಂಬುವೆನು.

**ಶಿವಾನುಭವ, ೨೫- ೪, ೫ ಏಪ್ರಿಲ್, ಮೇ ೧೯೫೧**

# ಕವಿಕಾಳಿದಾಸನ ಕಾಲನಿರ್ಣಯ

---

ಕವಿಕಾಳಿದಾಸನು ವಿಕ್ರಮರಾಜನ ಸಭೆಯಲ್ಲಿದ್ದನೆಂದು ಉತ್ತರ ಹಿಂದುಸ್ಥಾನದವರೂ, ಭೋಜರಾಜನ ಸಭೆಯಲ್ಲಿದ್ದನೆಂದು ದಕ್ಷಿಣ ಹಿಂದುಸ್ಥಾನದವರೂ ತಿಳಿದುಕೊಂಡಿದ್ದಾರೆ. ಅವನ ನಾಟಕಗಳ ಉತ್ತರ ಹಿಂದುಸ್ಥಾನದ ಹಾಗೂ ದಕ್ಷಿಣ ಹಿಂದುಸ್ಥಾನದ ಪ್ರತಿಗಳಲ್ಲಿ ನಾಟಕಾರಂಭದ ಪೀಠಿಕಾ ವಿಭಾಗಗಳಿಂದ ಈ ಮಾತು ತಿಳಿದುಬರುತ್ತದೆ.

ಕಾಳಿದಾಸನ ಕಾಲನಿರ್ಣಯದ ಬಗೆಗೆ ಅತಿ ಮಹತ್ವದ ಐತಿಹಾಸಿಕ ಆಧಾರವೆಂದರೆ ಬಿಜಾಪುರ ಜಿಲ್ಲೆಯ ಐಹೊಳ್ಳಿಯ ಮೇಗುಡಿಯ ಗೋಡೆಯಲ್ಲಿರುವ ಚಾಲುಕ್ಯರ ೨ನೆಯ ಪುಲಿಕೇಶಿಯ ಶಕ ೫೫೬ ರ ಅಂದರೆ ಕ್ರಿಸ್ತಶಕದ ೬೩೪ ರ ಪ್ರಖ್ಯಾತವಾದ ಶಿಲಾಶಾಸನವು. ಅದನ್ನು ಬರೆದ ಕವಿಯು ತಾನು "ಕಾಳಿದಾಸ ಹಾಗೂ ಭಾರವಿ ಇವರ ಸಮಾನ ಕೀರ್ತಿಯಾದ ರವಿಕೀರ್ತಿಯೆಂಬವನು" ಎಂದು ತನ್ನ ಅಂಕಿತವನ್ನು ಹಾಕಿದ್ದಾನೆ (ಕಾಳಿದಾಸನ-ಭಾರವಿ-ಕೀರ್ತಿಃ, ರವಿಕೀರ್ತಿಃ).

ಇದರ ಮೇಲಿಂದ ಕಾಳಿದಾಸನು ಕ್ರಿಸ್ತಶಕದ ೬೩೪ ಕ್ಕಿಂತ ಮುಂಚೆ ಇದ್ದನೆಂಬುದು ಸ್ಪಷ್ಟವಿದೆ. ಆದರೆ ಎಷ್ಟು ಮುಂಚೆ ? ಎಂಬುದು ಇದೀಗ ನಾವು ತಿಳಿದುಕೊಳ್ಳಬೇಕಾದ ವಿಷಯ.

ಆದರೆ ಇದೇನೇ ಇದ್ದರೂ, ಐಹೊಳ್ಳಿಯ ಶಿಲಾಶಾಸನದ ಕಾಲಕ್ಕಿಂತ ಈ ಇಬ್ಬರೂ ಭೋಜರಾಜರು ಇನ್ನೂರು ಮುನ್ನೂರು ವರುಷ ಈಚಿನವರೇ. ಆದ್ದರಿಂದ ಕಾಳಿದಾಸನು ಇವರ ಆಸ್ಥಾನದಲ್ಲಿ ಇರಲಿಲ್ಲವೆಂಬುದು ಸ್ಪಷ್ಟ.

ಹಾಗಾದರೆ ಭೋಜರಾಜನಲ್ಲಿ ಕಾಳಿದಾಸನಿದ್ದನೆಂಬ ದೃಢಪರಂಪರೆಗೆ ಕಾರಣವೇನು ? ಎಂಬ ಪ್ರಶ್ನವು ಸಹಜವಾಗಿಯೇ ನಮ್ಮ ಮನಸ್ಸಿನಲ್ಲಿ ಬರುತ್ತದೆ. ಈ ಪ್ರಶ್ನದ ವಿಚಾರ ಮಾಡುವ ಬದಲು ಕಲಕತ್ತೆಯ "ನಂದಿತಾ" ಎಂಬ ಬಂಗಾಲೀ ಮಾಸಪತ್ರಿಕೆಯ ೨ನೆಯ ಸಂಪುಟದ ೧೨ನೆಯ ಸಂಚಿಕೆಯಲ್ಲಿ (೧೯೪೭) ಕಾಳಿದಾಸನ ಬಗೆಗೆ ಬಂದ ಕೆಲವು ಮಹತ್ವದ ವಿಷಯಗಳ ಕಡೆಗೆ ನಮ್ಮ ಲಕ್ಷ್ಯವನ್ನು ಹೊರಳಿಸುವಾ.

"ಕಾಳಿದಾಸನೇನು ಬಂಗಾಲಿಯೇ ?" ಎಂಬ ಲೇಖನದ ಲೇಖಕರು 'ಸಂದಿತಾ' ದಲ್ಲಿ ಹೀಗೆ ಹೇಳಿದ್ದಾರೆ, ಅದೇನೆಂದರೆ—

'ಒಂದು ಉದ್ಭಟ ಶ್ಲೋಕದಿಂದ ಗೊತ್ತಾಗುವದೇನೆಂದರೆ, ಮೂರು ಬೇರೆ ಬೇರೆ ರಸಗಳಲ್ಲಿ ಗ್ರಂಥಗಳನ್ನು ಬರೆದ ಮೂವರು ಬೇರೆ ಬೇರೆ ಕಾಳಿದಾಸರಿದ್ದರು. ಪ್ರಬಂಧಕೋಶವೆಂಬ ಗ್ರಂಥದಲ್ಲಿ ಮೂವರು ಕಾಳಿದಾಸರ ಉಲ್ಲೇಖವಿದ್ದು ಜನರು ಅವರಿಗೆ ಗುರುತಿಸುವ ಸಲುವಾಗಿ ಕವಿಕಾಳಿದಾಸ, ನವಕಾಳಿದಾಸ, ಅಭಿನವ ಕಾಳಿದಾಸ ಎಂದು ಬೇರೆ ಬೇರೆ ಉಪನಾಮಗಳನ್ನಿಟ್ಟಿದ್ದರು. ಅಭಿನವಗುಪ್ತನ "ಕ್ರಮೋಸ್ತುತಿ" ಎಂಬ ಗ್ರಂಥದಲ್ಲಿ ತನ್ನ ಕಾಲದಲ್ಲೊಬ್ಬ ಕಾಳಿದಾಸನಿದ್ದ ಬಗೆಗೆ ಹೇಳಿದ್ದಾನೆ. ಆ ಕಾಳಿದಾಸನು "ಚಿದ್ಗಗನ ಚಂದ್ರಿಕೆ" ಎಂಬ ತಾಂತ್ರಿಕ ಗ್ರಂಥವನ್ನು ಬರೆದಿದ್ದಾನೆ. ಕಾಶ್ಮೀರದ ಮಾತೃಗುಪ್ತನೇ ಕಾಳಿದಾಸನೆಂದೂ ಕೆಲವರು ಹೇಳುತ್ತಾರೆ; ಇವನು "ರಾಜತರಿಂಗಿಣಿ"ಯನ್ನು ಬರೆದಿದ್ದಾನೆ" ಇತ್ಯಾದಿ, ಇತ್ಯಾದಿ.

ಇದರ ಮೇಲಿಂದ ನೋಡಿದರೆ ಕಾಳಿದಾಸರೂ ಬಹಳ ಜನರಾಗಿರುವರೆಂದು ಕಂಡುಬರುತ್ತದೆ. ಇಷ್ಟೇ ಏಕೆ ? ಶ್ರೀ ಬಸವಣ್ಣನವರ ವಚನಗಳಲ್ಲಿಯೂ ಒಬ್ಬ ಕಾಳಿದಾಸನ ವಿಷಯು ಬರುತ್ತದೆ. ಅದು ಹೇಗೆಂದರೆ— "ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯಂಗೆ ಕೈಲಾಸಕೊಯ್ದೆ" ಎಂದು ಬಸವಣ್ಣನವರು ಪರಮಾತ್ಮನನ್ನು ಸ್ತುತಿಸಿದ್ದಾರೆ. ಕಣ್ಣು ಹೋದ ಕಾಳಿದಾಸನು ಶಿವನನ್ನು ಸ್ತುತಿಸಿ ಕಣ್ಣು ಪಡೆದನೆಂದು ಈತನ ಕಥೆಯನ್ನು ಹೇಳುತ್ತಾರೆ.

ಇಷ್ಟೇ ಅಲ್ಲ, "ಜ್ಯೋತಿರ್ವಿದಾಭರಣ" ಎಂಬ ಜ್ಯೋತಿಷ್ಯವಿಷಯಕ ಗ್ರಂಥವೂ ಒಂದು ಕಾಳಿದಾಸನಿಂದಲೇ ಬರೆಯಲ್ಪಟ್ಟಿದೆಯೆಂದು ದಿವಂಗತ ತಾರಾನಾಥ ತರ್ಕವಾಚಸ್ಪತಿಗಳು ಕಾಳಿದಾಸನ "ಮಾಲವಿಕಾಗ್ನಿಮಿತ್ರ" ನಾಟಕದ ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಈತನೊಬ್ಬ ಬೇರೆ ಕಾಳಿದಾಸನೋ ಏನೋ ತಿಳಿಯದು.

ಭೋಜರಾಜ ಕಾಳಿದಾಸರ ಕಥೆಗಳೆಂದು ಪ್ರಚಾರದಲ್ಲಿರುವ ಚಮತ್ಕಾರಯುಕ್ತವಾದ ಸಂಸ್ಕೃತ ಶ್ಲೋಕಗಳ ಕರ್ತನಾದ ಕಾಳಿದಾಸನೇ ಒಬ್ಬ ಕಾಳಿದಾಸನಿರಬಹುದು. "ದ್ವಾತ್ರಿಂಶತ್ ಪುತ್ಥಳಿಕಾ" ಅಥವಾ (ಬತ್ತೀಸ ಪುತ್ಥಳೀ ಕಥೆ) ಎಂಬುದರ ಕರ್ತನಾದ ಕಾಳಿದಾಸನೂ ಈ ಚಮತ್ಕಾರಯುಕ್ತ ಶ್ಲೋಕಗಳ ಕರ್ತನಾದ ಕಾಳಿದಾಸನೂ ಬಹುಶಃ ಒಬ್ಬನೇ ಆಗಿದ್ದರೂ ಆಗಿರಬಹುದು. ಏಕೆಂದರೆ ಈ "ಬತ್ತೀಸ ಪುತ್ಥಳೀ ಕಥೆ"ಯಲ್ಲಿ ಧಾರಾನಗರದ ಭೋಜರಾಜನಿಗೆ ಅಕಸ್ಮಾತ್ತಾಗಿ ನೆಲದಲ್ಲಿ ವಿಕ್ರಮರಾಜನ ಸಿಂಹಾಸನವು ಲಭಿಸಿ, ಅದನ್ನೀವನು ಏರಹೋದಾಗ ಅದರ ಮೆಟ್ಟಿಲುಗಳ ಎರಡೂ ಮಗ್ಗಲಿಗಿರುವ ಗೊಂಬೆಗಳು ಭೋಜರಾಜನಿಗೆ ವಿಕ್ರಮರಾಜನಲ್ಲಿದ್ದಂಥ ಸದ್ಗುಣಗಳು ನಿನ್ನಲ್ಲಿದ್ದರೆ ಮಾತ್ರ ನೀನು ಈ ಸಿಂಹಾಸನವನ್ನೇರೆಂದು ಒಂದೊಂದು ಗೊಂಬೆಯೂ

ವಿಕ್ರಮರಾಜನ ಶೌರ್ಯ, ಔದಾರ್ಯ ಮುಂತಾದವುಗಳನ್ನು ವರ್ಣಿಸುವ ಒಂದೊಂದು ಕಥೆಯನ್ನು ಹೇಳುತ್ತವೆ. ಅಲ್ಲದೆ "ಪಂಚತಂತ್ರ" "ಹಿತೋಪದೇಶ"ಗಳಲ್ಲಿರುವಂತೆ ಇದರಲ್ಲಿಯೂ ಕಥೆಗಳ ನಡುವೆ ನೀತಿಶಾಸ್ತ್ರ, ಧರ್ಮಶಾಸ್ತ್ರ ಮೊದಲಾದವುಗಳಿಗೆ ಸಂಬಂಧಿಸಿದ ಶ್ಲೋಕಗಳು ಹೇರಳವಾಗಿ ಬರುತ್ತವೆ.

ಈಗ ಭೋಜರಾಜನ ಕಾಲವಾವುದೆಂಬುದರ ಬಗೆಗೆ ಆಲೋಚಿಸುವಾ, "ಭೋಜರಾಜ" ಎಂಬ ಹೆಸರಿನ ಪ್ರಖ್ಯಾತರಾಜರು ಇಬ್ಬರಾಗಿ ಹೋಗಿದ್ದಾರೆ. ಒಬ್ಬನು ಕನೋಜದ ಪ್ರತಿಹಾರವಂಶದ ಭೋಜರಾಜನು. ಇನ್ನೊಬ್ಬನು ಮಾಳವದ ಪರಮಾರವಂಶದ ಭೋಜರಾಜನು. ಮೊದಲನೆಯವನು ಕ್ರಿಸ್ತಶಕ ೮೪೦ ರಿಂದ ೮೯೦ ರ ವರೆಗೆ ಕನೋಜದಲ್ಲಿಯೂ, ಎರಡನೆಯವನು ಕ್ರಿಸ್ತಶಕ ೧೦೧೮ ರಿಂದ ೧೦೬೦ ರ ವರೆಗೆ ಮಾಳವದ ಆಗಿನ ರಾಜಧಾನಿಯಾದ ಧಾರಾನಗರದಲ್ಲಿಯೂ ಆಳುತ್ತಿದ್ದರು. ಇಬ್ಬರೂ ಅಪಾರ ವಿದ್ಯಾಪಕ್ಷಪಾತಿಗಳು.

ಇರಲಿ, ಇವರಲ್ಲಿ ಧಾರಾನಗರದ ಭೋಜರಾಜನೇ ನಿಜವಾಗಿಯೂ ನಮ್ಮೆಲ್ಲರಿಗೆ ಬಹುದಿನಗಳಿಂದ ಪರಿಚಿತನಾಗಿರುವ ಭೋಜರಾಜನೆಂಬುದರಲ್ಲಿ ಸಂದೇಹವಿಲ್ಲ. ಈತನಿಗೆ ಮುಂಜನೆಂಬ ಕಕ್ಕನಿದ್ದನೆಂದು ನಮಗೆಲ್ಲ ಪರಂಪರಾಗತವಾಗಿ ಗೊತ್ತಿದ್ದ ವಿಷಯವು ಇತಿಹಾಸಕ್ಕೆ ಮಾನ್ಯವಿದೆ. ಈ ಮುಂಜನಿಗೂ ಚಾಳುಕ್ಯರ ಮೊದನೆಯ ರಾಜನಾದ ೨ ನೆಯ ತೈಲಪನಿಗೂ ಆರು ಸಾರೆ ಯುದ್ಧವಾಗಿದೆಯೆಂದು ಇತಿಹಾಸವು ಹೇಳುತ್ತಿದೆ.

ಈ ವಿಷಯವನ್ನು ಬೇಕಾದವರು ವಿನ್‌ಸೆಂಟ ಸ್ಮಿಥ್ ಅವರ "ಅರ್ಲಿ ಹಿಸ್ಟರಿ ಆಫ್ ಇಂಡಿಯಾ" ಎಂಬ ಪುಸ್ತಕದಲ್ಲಿ ನೋಡಬಹುದು.

ಇದೇನೇ ಇರಲಿ, ಶಾಕುಂತಲ, ವಿಕ್ರಮೋರ್ವಶೀಯ, ಮಾಲವಿಕಾಗ್ನಿಮಿತ್ರ ಮೊದಲಾದ ಸುವಿಖ್ಯಾತ ನಾಟಕಗಳನ್ನೂ, ಕುಮಾರಸಂಭವ, ರಘುವಂಶ, ಮೇಘದೂತ, ಋತುಸಂಹಾರ ಮೊದಲಾದ ಅಮರ ಕೀರ್ತಿಯ ಕಾವ್ಯಗಳನ್ನು ಬರೆದ ಕಾಳಿದಾಸನೇ ಬೇರೆ, ಭೋಜರಾಜನ ಆಸ್ಥಾನದಲ್ಲಿರಬಹುದಾದ ಇನ್ನಾವನೋ ಒಬ್ಬ ಕಾಳಿದಾಸನೇ ಬೇರೆ ಎಂಬುದರಲ್ಲಿ ಸಂದೇಹವಿಲ್ಲ.

ಶಾಕುಂತಲ, ವಿಕ್ರಮೋರ್ವಶೀಯ ಮೊದಲಾದ ನಾಟಕಾದಿಗಳನ್ನು ಬರೆದ ಕವಿಕಾಳಿದಾಸನು ವಿಕ್ರಮರಾಜನ ಆಸ್ಥಾನದಲ್ಲಿರಬಹುದೇ ? ಹಾಗಾದರೆ ಆ ವಿಕ್ರಮ ರಾಜನು ಯಾರು ?

ಪಾಟಲೀಪುತ್ರದಲ್ಲಿ ವಿಕ್ರಮರಾಜನಾಳುತ್ತಿದ್ದನೆಂದು ಕೆಲವು ಕಥೆಗಳೂ, ಉಜ್ಜಯಿನಿಯಲ್ಲಿ ಆತನು ಆಳುತ್ತಿದ್ದನೆಂದು ಕೆಲವು ಕಥೆಗಳೂ "ಕಥಾಸರಿತ್ಸಾಗರ"

"ಬೃಹತ್ಕಥೆ" ಮೊದಲಾದವುಗಳಲ್ಲಿ ಇವೆಯೆಂದು ಅವುಗಳನ್ನೋದಿದವರು ಹೇಳುತ್ತಾರೆ. ಈ ವಿಕ್ರಮನು ಕ್ರಿಸ್ತಶಕಕ್ಕಿಂತ ೫೭ ವರ್ಷ ಮೊದಲಿದ್ದನೆಂದೂ ತನ್ನ ಹೆಸರಿನ ಶಕವನ್ನು ಸ್ಥಾಪಿಸಿದನೆಂದೂ ಸರ್ವಜನರಲ್ಲಿ ದೃಢವಾದ ನಂಬಿಗೆಯುಂಟು. ಆದರೆ ಆತನು ವಾಸಿಸಿದ್ದನೆಂದು ಹೇಳುವ ನಗರಗಳಿಗೆ ಇತಿಹಾಸದ ಹೊಂದಿಕೆಯು ಸಿಗುವದಾದರೂ ಆತನ ಕಾಲದ ಬಗೆಗೆ ಮಾತ್ರ ಇತಿಹಾಸವು ಬೇರೆ ಪ್ರಕಾರವಾಗಿ ಹೇಳುತ್ತದೆ. ಅದು ಹೇಗೆಂದರೆ—

ಪಾಟಲೀಪುತ್ರ(ಪಾಟಣಾ)ದ ರಾಜವಂಶದಲ್ಲಿಯೇ ವಿಕ್ರಮಾದಿತ್ಯ(ಅಥವಾ ಗುಪ್ತವಂಶದ ೨ನೆಯ ಚಂದ್ರಗುಪ್ತ)ನು ಜನ್ಮವೆತ್ತಿ ತನ್ನ ತಂದೆ ಸ್ಥಾಪಿಸಿದ ಘನವಾದ ಸಾಮ್ರಾಜ್ಯಕ್ಕೆ ಒಡೆಯನಾಗಿ ಮಾಳವಾ, ಸೌರಾಷ್ಟ್ರ, ಗುಜರಾಥ ಮೊದಲಾದ ಪಶ್ಚಿಮ ಹಿಂದುಸ್ತಾನದ ಪ್ರಾಂತಗಳನ್ನು ಗೆದ್ದು ತನ್ನ ರಾಜಧಾನಿಯನ್ನು ಉಜ್ಜಯಿನಿಗೆ ತಂದನು. ಈತನು ಸುಮಾರು ಕ್ರಿಸ್ತಶಕದ ೩೭೫ ರಿಂದ ೪೧೩ ರ ವರೆಗೆ ಒಳ್ಳೆಯ ವೈಭವದಿಂದ ಸಾಮ್ರಾಟನಾಗಿ ಆಳಿದನು. ಚೀನಾದೇಶದ ಮೊಟ್ಟ ಮೊದಲನೆಯ ಯಾತ್ರಿಕನಾದ ಫಾಹಿಯನ್ನನು ಈತನ ಆಳಿಕೆಯ ಬಗೆಗೆ- "ದೊಡ್ಡ ಜನಸಂಖ್ಯೆಯು ನ್ಯಾಯವಾದ ಆಡಳಿತದ ಕೆಳಗೆ ಯಾವ ಚಿಂತೆಯೂ ಇಲ್ಲದೆ ಸುಖವಾಗಿ ಬಾಳುತ್ತಿದ್ದಿತು" ಎಂದು ಕೊಂಡಾಡಿರುವನು.

ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು ? ಕ್ರಿಸ್ತಶಕಕ್ಕಿಂತ ಮುನ್ನೂರು ವರ್ಷ ಮುಂಚೆ ಹಿಂದುಸ್ತಾನದಲ್ಲಿ ಮಹಾಸಾಮ್ರಾಜ್ಯವನ್ನು ಕಟ್ಟಿದ ಮೌರ್ಯ ಚಂದ್ರ-ಗುಪ್ತನ ಮೊಮ್ಮಗನಾದ ಅಶೋಕನು ಆ ಘನಸಾಮ್ರಾಜ್ಯಕ್ಕೆ ಒಡೆಯನಾಗಿ ಮಹಾ ವೈಭವದಿಂದಲೂ ಧರ್ಮಪರಾಯಣತೆಯಿಂದಲೂ ಕೀರ್ತಿಶಾಲಿಯಾಗಿ ಸಾಮ್ರಾಟ ಪದವನ್ನು ಅನುಭವಿಸಿದಂತೆ ಈ ವಿಕ್ರಮಾದಿತ್ಯನೆಂಬ ಬಿರುದುಳ್ಳ ಗುಪ್ತ ವಂಶದ ೨ನೆಯ ಚಂದ್ರಗುಪ್ತನೂ ತನ್ನ ತಂದೆಯಾದ ಸಮುದ್ರಗುಪ್ತನು ಸ್ಥಾಪಿಸಿದ ಮಹಾ ಸಾಮ್ರಾಜ್ಯಕ್ಕೆ ಒಡೆಯನಾಗಿ ವಿದ್ಯಾಪಕ್ಷಪಾತಿಯೂ, ವೈಭವಶಾಲಿಯೂ, ಪ್ರಜಾ ಪಾಲನ ಧರ್ಮಿಯೂ ಆಗಿ ಸಾಮ್ರಾಟಪದವನ್ನು ಅನುಭವಿಸಿದನೆಂಬುದರಲ್ಲಿ ಏನೂ ಸಂಶಯವಿಲ್ಲ.

ಇದೆಲ್ಲ ಸರಿ, ಆದರೆ ಕ್ರಿಸ್ತಶಕಕ್ಕಿಂತ ೫೭ ವರುಷ ಮುಂಚೆ ವಿಕ್ರಮ ಶಕವನ್ನು ಸ್ಥಾಪಿಸಿದನೆಂಬ ಮಾತಿಗೆ ಅರ್ಥವೇನು ?

ಪಾಟಲೀಪುತ್ರದ ಗುಪ್ತವಂಶದ ಮೊದಲನೆಯ ಚಂದ್ರಗುಪ್ತನು ತಾನು ಪಟ್ಟಕ್ಕೆ ಬಂದ ವರ್ಷವೇ ಗುಪ್ತಶಕವೆಂಬ ಒಂದು ಶಕವನ್ನು ಸುಮಾರು ಕ್ರಿಸ್ತಶಕ ೩೨೦ ರಲ್ಲಿ ಸ್ಥಾಪಿಸಿದನು. ಮುಂದೆ ೧೧೭ ವರುಷಗಳವರೆಗೆ ಈ ವಂಶದವರು ತಮ್ಮ ತಾಮ್ರಶಾಸನ ಶಿಲಾಶಾಸನಗಳಲ್ಲೆಲ್ಲ ಈ ಗುಪ್ತಶಕವನ್ನೇ ಬಳಸುತ್ತಿದ್ದರು.

ಆದರೆ ೧೧೭ ವರುಷಗಳ ಬಳಿಕ ವಿಕ್ರಮಾದಿತ್ಯನ ಮಗನಾದ ಮೊದಲನೆಯ ಕುಮಾರ ಗುಪ್ತನು ತನ್ನದೊಂದು (ಮಂದಸೋರದ) ಶಾಸನದಲ್ಲಿ ಒಮ್ಮೆಲೆ "ವಿಕ್ರಮಸಂವತ್ ೪೯೩" ಎಂದು ಪ್ರಯೋಗಿಸಿದನು. ಅನಂತರ ಮತ್ತೆ ೩೭ ವರುಷ ಗುಪ್ತಶಕವೇ ನಡಿಯುತ್ತಿದ್ದು, ಈ ಕುಮಾರಗುಪ್ತನ ಮಗ (ವಿಕ್ರಮಾದಿತ್ಯನ ಮೊಮ್ಮಗ)ನಾದ ಸ್ಕಂದಗುಪ್ತನು ತನ್ನದೊಂದು (ಮಂದಸೋರದ್ದೇ) ಶಾಸನದಲ್ಲಿ "ಮಾಳವಶಕ ೫೩೦" ಎಂದು ಪ್ರಯೋಗಿಸಿದನು. ಅದರ ಮುಂದೆಯೂ ಸ್ವಲ್ಪಕಾಲ (೫ ವರ್ಷ) ಮತ್ತೆ ಗುಪ್ತಶಕವೇ ನಡೆಯುತ್ತಿತ್ತು. ಹೀಗೆ ಕೆಲಕಾಲ ಎರಡೂ ಶಕಗಳು ಕೂಡಿ ನಡೆದು ಕೊನೆಗೆ ಗುಪ್ತಶಕಕ್ಕೆ ಬದಲು ವಿಕ್ರಮಶಕವೇ ರೂಢಿಯಾಯಿತೆಂದು ತೋರುತ್ತದೆ.

ಮೇಲೆ ಹೇಳಿದ ಎರಡು ಸಂದರ್ಭಗಳಲ್ಲಲ್ಲದೆ ಅದಕ್ಕಿಂತ ಮೊದಲು ಎಲ್ಲಿಯೂ ವಿಕ್ರಮಶಕದ ಪ್ರಯೋಗವು ಕಂಡುಬಂದಿಲ್ಲ. ಆದ್ದರಿಂದ ವಿಕ್ರಮಾದಿತ್ಯನ ಮಗನೇ ಇದರ ಪ್ರವರ್ತಕನೆಂದೂ ತನ್ನ ತಂದೆಯ ಹೆಸರು ಚಂದ್ರಗುಪ್ತ(೨ನೆಯ)ನೆಂದಿದ್ದುದ ರಿಂದ ಕ್ರಿಸ್ತಶಕಕ್ಕಿಂತ ಮುಂಚೆ ಸಾಮ್ರಾಜ್ಯ ಕಟ್ಟಿದ ಮೌರ್ಯಚಂದ್ರಗುಪ್ತನಿಗೆ ಈತ ನನ್ನು ಹೋಲಿಸುವ ಉದ್ದೇಶದಿಂದ ತಮ್ಮ ಗುಪ್ತಶಕದಲ್ಲಿ ಹಿಂದಿನ ಕೆಲವು ನೂರು ವರುಷಗಳನ್ನು ಕೂಡಿಸಿ ಈ ಮೊದಲನೆಯ ಚಂದ್ರಗುಪ್ತನ ಕಾಲಕ್ಕೆ ಸರಿಹೊಂದು ವಂತೆ (ಆದರೆ ಆಗಿನ ಕಾಲದಲ್ಲಿ ಐತಿಹಾಸಿಕ ಸಂಶೋಧನಾತ್ಮಕ ಜ್ಞಾನವು ಇಲ್ಲದ್ದರಿಂದ ಕಾಲದ ಸರಿಯಾದ ಹೊಂದಿಕೆ ಬಂದಿಲ್ಲ) ಒಂದು ಹೊಸ ಶಕವನ್ನೇ ನಿರ್ಮಿಸಿದಂತೆ ತೋರುತ್ತದೆ.

ಗುಪ್ತಶಕಕ್ಕೂ ಮೌರ್ಯಚಂದ್ರಗುಪ್ತನು ಪಟ್ಟವೇರಿದ್ದಕ್ಕೂ ೬೪೫ ವರುಷಗಳ ಅಂತರವಿದ್ದುದನ್ನು ಐತಿಹಾಸಿಕ ಕಾಲಗಣನೆಯ ಸರಿಯಾದ ಜ್ಞಾನವಿಲ್ಲದ್ದರಿಂದ ಈ ಅಂತರವು ೩೭೫ ವರುಷ ಎಂದು ಗ್ರಹಿಸಿದ ಹಾಗೆ ಕಾಣುತ್ತದೆ. ಇಂಥ ಸಂದರ್ಭ ಗಳು ಕರ್ನಾಟಕದ ಇತಿಹಾಸದಲ್ಲಿಯೂ ಸಿಗುವವು. ಉದಾಹರಣಾರ್ಥವಾಗಿ ವಿಜಯನಗರದ ರಾಜ್ಯ ಹಾಳಾದ ಕೆಲವೇ ದಿವಸಗಳಲ್ಲಿದ್ದ (ಕ್ರಿ. ಶ. ೧೫೮೪) ವಿರೂ ಪಾಕ್ಷ ಪಂಡಿತನು ಅಂದರೆ ಚೆನ್ನಬಸವಪುರಾಣದ ಕರ್ತನು ಶ್ರೀ ಬಸವೇಶ್ವರರ ಕಾಲವು ಕ್ರಿಸ್ತಶಕದ ೮ನೇ ಶತಮಾನವೆಂದು ಹೇಳಿರುವನು. ತನಗಿಂತ ನಾಲ್ಕೇ ನೂರು ವರುಷ ಗಳ ಹಿಂದೆ (ಕ್ರಿ. ಶ. ೧೧೬೧) ಇದ್ದ ಬಸವೇಶ್ವರರನ್ನು ಎಂಟುನೂರು ವರುಷಗಳ ಹಿಂದೆ ಇದ್ದಂತೆ ಭಾವಿಸಿದ್ದನು. ಐತಿಹಾಸಿಕ ಸಂಶೋಧನೆಯ ಅಭಾವವಿದ್ದ ಕಾಲದಲ್ಲಿ ಇಂಥ ದೋಷಗಳು ಎಷ್ಟೋ ಆಗುತ್ತವೆ.

ಇರಲಿ, ಇದೀಗ ನಮಗೆ ಬೇಕಾದದ್ದೇನು ? ಕವಿಕಾಳಿದಾಸನು ಸ್ವತಃ ಬರೆದ ಗ್ರಂಥಗಳಲ್ಲಿ ಆತನು ವಿಕ್ರಮನ ಕಾಲದಲ್ಲಿದ್ದನೆಂಬುದಕ್ಕೆ ಏನಾದರೂ ಪ್ರಮಾಣಗಳು ಸಿಗುತ್ತವೆಯೋ ಹೇಗೆ ? ಆತನು ಬರೆದ "ವಿಕ್ರಮೋರ್ವಶೀಯ" ನಾಟಕದ ಹೆಸರೇ

ಇದಕ್ಕೆ ಮುಖ್ಯ ಸಾಕ್ಷಿಯಾಗಿದೆ. "ಪುರೂರವ ಊರ್ವಶಿ"ಯರ ಕಥೆಗೆ "ವಿಕ್ರ ಮೋರ್ವಶೀಯ"ವೆಂದು ಹೆಸರಿಟ್ಟ ಕಾರಣವೇನು ?

ಕನ್ನಡ ನಾಡಿನ ಪಂಪ, ರನ್ನ ಮೊದಲಾದ ಮಹಾಕವಿಗಳು ತಮ್ಮ ಕಾವ್ಯಗಳ ನಾಯಕರನ್ನು ತಮ್ಮ ಆಶ್ರಯದಾತ ರಾಜರಿಗೆ ಹೋಲಿಸಿ ಬರೆದಿರುವಂತೆಯೇ ಇದೂ ಆಗಿದೆಯೆಂದು ಭಾವಿಸಲಿಕ್ಕೆ ಅಡ್ಡಿಯಿಲ್ಲ. ಪಂಪಭಾರತಕ್ಕೆ ಪಂಪನು ತನ್ನ ಆಶ್ರಯ ದಾತನಾದ ಅರಿಕೇಸರಿಯ ಒಂದು ಬಿರುದಾದ (?) "ವಿಕ್ರಮ" ಎಂಬ ಹೆಸರನ್ನವ ಲಂಬಿಸಿ "ವಿಕ್ರಮಾರ್ಜುನ ವಿಜಯ" ಎಂಬ ಹೆಸರನ್ನು, ರನ್ನನು ತನ್ನ ಗದಾಯುದ್ಧ ಕಾವ್ಯಕ್ಕೆ ತನ್ನ ಆಶ್ರಯದಾತನಾದ ತೈಲಪನ ಒಂದು ಬಿರುದಾದ (?) "ಸಾಹಸ ಭೀಮ" ಎಂಬ ಬಿರುದನ್ನವಲಂಬಿಸಿ "ಸಾಹಸಭೀಮ ವಿಜಯ"ವೆಂಬ ಹೆಸರನ್ನು ಇಟ್ಟಂತೆ ಕವಿಕಾಳಿದಾಸನಾದರೂ ತನ್ನ ಈ ನಾಟಕಕ್ಕೆ "ವಿಕ್ರಮೋರ್ವಶೀಯ"ವೆಂಬ ಹೆಸರನ್ನಿಟ್ಟಿರುವನೆಂದು ತಿಳಿದುಕೊಳ್ಳಲಿಕ್ಕೆ ಏನು ತಪ್ಪಿದೆ ?

ಇರಲಿ, ಮೂಲ ನಾಟಕದಲ್ಲಿಯೇ ಈ ಮಾತಿಗೆ ಇನ್ನೇನಾದರೂ ಆಧಾರಗಳು ಸಿಗುವವೇ ಹೇಗೆ ನೋಡುವಾ. ಕೇಶಿ ಎಂಬ ಅರಸನ ಕೈಯೊಳಗಿಂದ ಊರ್ವಶಿಯನ್ನು ಬಿಡಿಸಿಕೊಂಡು ಪುರೂರವನು ತಿರುಗಿ ಹೊರಟಿರುವಾಗ, ಮಾರ್ಗದಲ್ಲಿ ಅದೇ ಕೆಲಸಕ್ಕಾಗಿ ಇಂದ್ರನಿಂದ ಆಜ್ಞೆಹೊಂದಿ ಹೊರಟ ಚಿತ್ರರಥ ಗಂಧರ್ವನ ಭೆಟ್ಟಿಯಾದಾಗ ಆ ಗಂಧರ್ವರಾಜನು ಪುರೂರವನನ್ನು ನೋಡಿ—

"ದಿಷ್ಟ್ಯಾ ಮಹೇಂದ್ರೋಪಕಾರ ಪರ್ಯಾಪ್ತೇನ ವಿಕ್ರಮ ಮಹಿಮ್ನಾ ವರ್ಧತೇ ಭವಾನ್" (ಒಳ್ಳೆಯದಾಯಿತು. ಮಹೇಂದ್ರನಿಗೆ ಉಪಕಾರ ಮಾಡಲು ಸಾಕಾಗುವ ವಿಕ್ರಮ ಮಹಿಮೆಯಿಂದ ವರ್ಧಿಸುವವನು ನೀನಲ್ಲವೆ !!!) ಎಂದು ಗುರುತು ಹಿಡಿಯುವನು.

ಇಲ್ಲಿ "ವಿಕ್ರಮ ಮಹಿಮ್ನಾ" ಎಂಬ ಶಬ್ದವು ಎರಡರ್ಥವುಳ್ಳದ್ದೂ ಬೇಕೆಂತಲೇ ಉಪಯೋಗಿಸಲ್ಪಟ್ಟದ್ದೂ ಆಗಿದೆಯೆಂಬುದರಲ್ಲಿ ಸಂಶಯವೇ ಇಲ್ಲ. "ವಿಕ್ರಮ ಮಹಿಮ್ನಾ" ಎಂಬುದಕ್ಕೆ "ಮಹಾನ್ ಶೌರ್ಯದಿಂದ" ಎಂತಲೂ ಒಂದು ಅರ್ಥವನ್ನು ಮಾಡಬಹುದು. ಹಾಗೂ "ವಿಕ್ರಮನಂಥ ಮಹಿಮೆಯಿಂದ" ಎಂದು ಇನ್ನೊಂದು ಅರ್ಥವನ್ನೂ ಮಾಡಬಹುದು.

ಅದರಂತೆಯೇ, ಊರ್ವಶಿಯನ್ನು ಪುರೂರವನು ಬಿಡಿಸಿಕೊಂಡು ಬಂದ ವಿಷಯವನ್ನು ಚಿತ್ರರಥ ಗಂಧರ್ವನು ಬಹಳವಾಗಿ ಕೊಂಡಾಡಿದಾಗ ಪುರೂರವನು "ಇದೇನೋ ನನ್ನ ಶೌರ್ಯವಲ್ಲ, ಆ ದೇವೇಂದ್ರನಿಂದಲೇ ನನಗೆ ಬಂದದ್ದು. ಸಿಂಹ ಗರ್ಜನೆಯು ಗಿರಿಕಂದರದಲ್ಲಿ ಪ್ರತಿಧ್ವನಿಯಾಗಿ ಮೊಳಗಿದರೆ ಆ ಪ್ರತಿಧ್ವನಿಯೇ

ಮದ್ದಾನೆಗಳನ್ನು ಕೊಲ್ಲುವಂತೆ ಇದಾಗಿದೆ." ಎಂದು ಪರಮ ಸೌಜನ್ಯವನ್ನು ತೋರಿಸುವನು. ಅದಕ್ಕೆ ಗಂಧರ್ವರಾಜನು "ಯುಕ್ತಮೇತತ್ ಅನುತ್ಸೇಕಂ ಖಲು ವಿಕ್ರಮಾಲಂಕಾರಃ।" (ಇದು ಸರಿಯೇ ಅಹುದು, ನಿರಹಂಕಾರವು ವಿಕ್ರಮಾಲಂಕಾರ ವಾಗಿದೆ) ಎಂದು ಹೇಳುವನು. ಇಲ್ಲಿಯೂ ವಿಕ್ರಮಾಲಂಕಾರ ಎಂಬ ಶಬ್ದವನ್ನು ಎರಡರ್ಥದಲ್ಲಿ ಪ್ರಯೋಗಿಸಲಾಗಿದೆ. "ಶೂರರಿಗೆ ಇಂಥ ನಿರಹಂಕಾರವೇ ಭೂಷಣವು" ಎಂಬುದು ಒಂದು ಅರ್ಥವಾದರೆ "ವಿಕ್ರಮಸಂಥವನಿಗೆ ನಿರಹಂಕಾರವು ಭೂಷಣ ಪ್ರಾಯವಾಗಿರುವುದು ಸಹಜವೇ ಸರಿ." ಎಂಬುದೂ ಒಂದು ಅರ್ಥವು. ಇಷ್ಟೇ ಏಕೆ? ಶ್ರೀ ಅರವಿಂದರು "ವಿಕ್ರಮೋರ್ವಶೀಯ"ದ ತಮ್ಮ ಇಂಗ್ಲಿಷ್ ಅನುವಾದವಾದ "The Hero and the Nymph" ದಲ್ಲಿ ನಾಟಕದ ಪೀಠಿಕಾ ವಿಭಾಗದಲ್ಲಿ ಸೂತ್ರಧಾರನು ಹೇಳುವ "ನಮ್ಮ ಪ್ರೇಕ್ಷಕರಿಗೆ ವಿಕ್ರಮೋರ್ವಶೀಯವನ್ನು ಆಡಿ ತೋರಿಸುವೆನು" ಎನ್ನುವ ಮಾತನ್ನು ಹೀಗೆ ಅನುವಾದಿಸಿರುವರು— "I will present them Vikrama and the Nymph" ( ನಾನವರಿಗೆ " ವಿಕ್ರಮ ಮತ್ತು ಅಪ್ಸರೆ" ಎಂಬ ನಾಟಕವನ್ನಾಡಿ ತೋರಿಸುವೆನು ) ಇಲ್ಲಿ ನೋಡಿರಿ, "ವಿಕ್ರಮ" ಎಂಬ ಹೆಸರು ಸ್ಪಷ್ಟವಾಗಿ ಬರಲಿಲ್ಲವೆ ?

ಇನ್ನೊಂದು ಆಂತರಿಕ ಪ್ರಮಾಣವಾವುದೆಂದರೆ, ವಿಕ್ರಮಾದಿತ್ಯನ ನಿಜನಾಮ ವಾದ "ಚಂದ್ರಗುಪ್ತ" ಎಂಬುದನ್ನು ಸೂಚಿಸುವಂತೆ ಪುರೂರವನನ್ನು ಅನೇಕ ಸಲ ಚಂದ್ರನ ಉಪಮೆಯಿಂದ ವರ್ಣಿಸಿದ್ದು. ಒಂದೆಡೆಯಲ್ಲಂತೂ ಬುದ್ಧಿಪೂರ್ವಕ ವಾಗಿಯೇ ಪ್ರಯೋಗಿಸಿದಂತೆ ಸ್ಪಷ್ಟವಾಗಿ ಅನಿಸುವುದು. ಅದಾವ ಸಂದರ್ಭವೆಂದರೆ–

ಊರ್ವಶಿಯನ್ನು ಅಸುರನಾದ ಕೇಶಿಯ ಕೈಯಿಂದ ಬಿಡಿಸಿ ತರಲಿಕ್ಕೆ ಪುರೂ ರವನು ರಥಾರೂಢನಾಗಿ ಹೋದ ಮೇಲೆ ಅವಳ ಸಖಿಯರು ಇನ್ನೂ ಗಾಬರಿಗೊಂಡು ನಿಂತಿರುವಾಗ ಅವರೊಳಗೊಬ್ಬಳಾದ ಸಹಜನ್ಯೆಯು ದೂರದಲ್ಲಿ ಪುರೂರವನ ರಥವು ಹೋಗುತ್ತಿರುವುದನ್ನು ಕಂಡು– "ಸಖ್ಯಃ ಸಮಾಶ್ವಸಿತ; ಏಷ ಉಚ್ಚಲಿತ ಹರಣ ಕೇತನಸ್ತಸ್ಯ ರಾಜರ್ಷೇಃ ಸೋಮದತ್ತೋ ರಥೋದರ್ಶತೇ; ನ ಖಲು ಸೋ ಅಕೃತಾರ್ಥೋಽನಿವರ್ತಿಷ್ಯತೇ ।" (ಸಖಿಯರೆ, ಧೈರ್ಯ ತಾಳಿರಿ, ಧೈರ್ಯ ತಾಳಿರಿ; ಹಾರಾಡುವ ಹರಣಧ್ವಜವುಳ್ಳ ಆ ರಾಜರ್ಷಿಯ ಸೋಮದತ್ತವೆಂಬ (ಚಂದ್ರನಿಂದ ಕೊಡಲ್ಪಟ್ಟ) ರಥವು ಕಾಣಿಸುತ್ತಿರುವುದು. ಆತನು ಎಂದಿಗೂ ಕಾರ್ಯ ಸಾಧಿಸದೆ ಹಿಂದಿರುಗಲಾರನು) ಎಂಬಲ್ಲಿ "ಹರಿಣವು ಧ್ವಜವಾಗಿ ಉಳ್ಳ" ಚಂದ್ರನನ್ನು ರಾಜರ್ಷಿಗೆ ಹೋಲಿಸುವ ಸಲುವಾಗಿಯೇ ಇಲ್ಲಿ ಬೇಕೆಂತಲೇ "ಹರಿಣಕೇತನ" ಎಂಬ ಶಬ್ದವನ್ನು ಪ್ರಯೋಗಿಸಿದಂತೆ ಇಲ್ಲವೇ ? "ಸೋಮದತ್ತ" ಎಂದು ರಥದ ಹೆಸರನ್ನು ಹೇಳಿರು ವದರಲ್ಲಿಯೂ "ಸೋಮ"(ಚಂದ್ರ) ಎಂಬ ಶಬ್ದವನ್ನು ನೆನಪಿಗೆ ತಂದುಕೊಡುವುದೇ ಕವಿಯ ಉದ್ದೇಶವಾಗಿರುವಂತೆ ಕಾಣುವುದಿಲ್ಲವೇ ?

ಇನ್ನು ಚಂದ್ರ, ಚಂದ್ರಿಕೆ ಮೊದಲಾದ ಶಬ್ದಗಳನ್ನು ಬಹಳ ಸಾಂಕೇತಿಕ ವೆಂದೆನಿಸುವಂತೆ ಎಲ್ಲೆಲ್ಲಿ ಪ್ರಯೋಗಿಸಲಾಗಿದೆಯೆಂದರೆ—

ಪುರೂರವನು ಊರ್ವಶಿಯನ್ನು ಬಿಡಿಸಿಕೊಂಡು ರಥದಲ್ಲಿ ಕರೆದುಕೊಂಡು ಬಂದಾಗ ಮೂರ್ಛಿತಳಾಗಿದ್ದ ಅವಳನ್ನು ಕಂಡು ಅವಳ ಸಖಿಯರಲ್ಲೊಬ್ಬಳಾದ ಚಂದ್ರಲೇಖೆಯು, ಉರ್ವಶಿಯು ಎಚ್ಚರಾದಳೋ ಇಲ್ಲವೋ ಎಂದು ಬೆಸಗೊಳ್ಳು ತ್ತಿರುವಾಗ ಪುರೂರವನು—

"ನಿನ್ನ ಪ್ರಿಯ ಸಖಿಯು ಎಚ್ಚರವಾಗುತ್ತಿದ್ದಾಳೆ ನೋಡು, ಹೇಗೆಂದರೆ– ಚಂದ್ರನು ಬರಲು ಕತ್ತಲೆಯು ಓಡಿಹೋಗಿ ರಾತ್ರಿಯು ಮುಕ್ತಳಾದಂತೆ, ಇವಳು ಮೂರ್ಛೆ ತಿಳಿಯುತ್ತಿರುವಳು."

(ಆವಿರ್ಭೂತೇ ಶಶಿನಿ ತಮಸಾಮುಚ್ಯಮಾನೇವ ರಾತ್ರಿಃ ।......)

ಮುಂದೆ ಎರಡನೆಯ ಅಂಕದಲ್ಲಿ ಊರ್ವಶಿಯೂ ಚಿತ್ರಲೇಖೆಯೂ ಕೂಡಿ ಸೂಕ್ಷ್ಮದೇಹದಿಂದ ಯಾರಿಗೂ ಕಾಣದಂತೆ ಪುರೂರವನ ಮನಸ್ಸನ್ನು ತಿಳಿದುಕೊಳ್ಳು ವುದಕ್ಕೆಂದು ಅವನ ಉಪವನಕ್ಕೆ ಬಂದು ಅಲ್ಲಿ ಆತನನ್ನು ಗುಪ್ತರೂಪದಿಂದಲೇ ನೋಡುತ್ತಾರೆ. ಆತನನ್ನು ಕಂಡ ಕೂಡಲೆ ಚಿತ್ರಲೇಖೆಯು ಊರ್ವಶಿಗೆ ಹೀಗೆ ಹೇಳುತ್ತಾಳೆ—

"ಏಷಖಲು ಪ್ರಥಮೋದಿತ ಇವ ಚಂದ್ರಃ । ಕೌಮುದೀಮಿವ ತ್ವಾಂ
ಪ್ರತೀಚ್ಛತಿ ।"

(ನಿಜವಾಗಿಯೂ ಈತನು ಪ್ರಥಮೋದಿತ ಚಂದ್ರನಂತಿರುವನು. ಬೆಳದಿಂಗಳಂತಿರುವ ನಿನ್ನನ್ನು ಬಯಸುತ್ತಿದ್ದಾನೆ.)

ಮೂರನೆಯ ಅಂಕದಲ್ಲಿ ಮಹಾರಾಣಿಯಾದ ಕಾಶೀರಾಜಪುತ್ರಿಯು, ತನ್ನೊಡೆ ಯನು ಊರ್ವಶಿಯಲ್ಲಿ ಮನಸೋತುದಕ್ಕೆ ಕುಪಿತಳಾದ ತಪ್ಪಿಗಾಗಿ ಚಂದ್ರಪೂಜಾ ವ್ರತವನ್ನು ಮಾಡುತ್ತಾಳೆ. ಆಗ ನಿಜವಾಗಿ ಬೆಳದಿಂಗಳಲ್ಲಿ ರಾಜನ ಪಾದಪೂಜೆ ಯನ್ನು ಮಾಡುವವಳಿರುತ್ತಾಳೆ. ಆ ಸಂದರ್ಭದಲ್ಲಿ ಅವಳು ತನ್ನ ಸೇವಕಳಿಗೆ ಹೀಗೆ ಹೇಳುತ್ತಾಳೆ :

"ದಾರಿಕಾ, ಆನಯ ತೌಪಹಾರಿಕಂ ಯಾವನ್ಮಣಿಹರ್ಮ್ಯ ಪೃಷ್ಠಗತಾಂಶ್ಚಂದ್ರ
ಪಾದಾನರ್ಚಯಾಮಿ"

(ದಾರಿಕೆ, ಔಪಹಾರಿಕಾದಿಗಳನ್ನು ತೆಗೆದುಕೊಂಡು ಬಾ, ಮಣಿಖಚಿತವಾದ ಮೇಲ ಟ್ಟದ ಮೇಲೆ ಬರುವ ಚಂದ್ರಪಾದಗಳನ್ನು ಪೂಜಿಸುವೆನು.)

ಇಲ್ಲಿ "ಚಂದ್ರಪಾದಗಳು" ಎಂದರೆ "ಚಂದ್ರಕಿರಣಗಳು" ಎಂಬ ಅರ್ಥವಾಗುತ್ತದೆ. "ಚಂದ್ರ ಎಂಬ ಮಹಾನುಭಾವನ ಪಾಗಗಳು" ಎಂತಲೂ ಅರ್ಗವಾಡಲಿಕ್ಕೆ ಬರುವಧೆಂಬುದು ಸ್ಪಷ್ಟ.

ಆ ಪೂಜಾಕಾಲದಲ್ಲಿ ಧೂಪ ದೀಪಾದಿಗಳ ಸಂಭ್ರಮವನ್ನು ನೋಡಿ ರಾಜನು ಹೇಳುವ ಮಾತು ಬಹಳ ಮಾರ್ಮಿಕವಾಗಿದೆಯೆಂದೆನಿಸುತ್ತದೆ. ಅದಾವುದೆಂದರೆ— "ಅಭಿವ್ಯಕ್ತಯಾಂ ಚಂದ್ರಿಕಾಯಾಂ ಕಿಂ ದೀಪಿಕಾ ಪೌನರುಕ್ತ್ಯೇನ ?" (ಬೆಳದಿಂಗಳು ಪ್ರಕಟವಾಗಿರುವಾಗ ದೀಪಗಳ ಪುನರುಕ್ತಿಯಿಂದ ಏನು ಪ್ರಯೋಜನ ?) ಇಲ್ಲಿ ಚಂದ್ರನಿಗೆ (ಪುರೂರವನಿಗೆ) ಚಂದ್ರಿಕೆಯು (ಊರ್ವಶಿಯು) ಲಭಿಸಿರುವಾಗ ಮಿಣುಗು ದೀಪಗಳ (ಉಳಿದ ರಾಣಿಯರ) ಪ್ರಯೋಜನವೇನು ? ಎಂಬ ಭಾವವು ಹೊರಡುವದಿಲ್ಲವೇ ?

ಐದನೆಯ ಅಂಕದಲ್ಲಿ ಊರ್ವಶಿಯ ಹೊಟ್ಟೆಯಿಂದ ಹುಟ್ಟಿದ ಆಯುಃಕುಮಾರನು ೧೬ ವರುಷ ಋಷ್ಯಾಶ್ರಮದಲ್ಲಿ ತಂದೆಗೆ ಗೊತ್ತಿಲ್ಲದೆ ಬೆಳೆದು ಧನುರ್ವಿದ್ಯಾ ಪಾರಂಗತನಾಗಿ ಕಾರಣಾಂತರದಿಂದ ಒಮ್ಮೆಲೆ ತಂದೆಯ ಇದಿರಿಗೆ ಪ್ರಕಟನಾದಾಗ, ಈತನು ತನ್ನ ಮಗನೇ ಎಂದು ಊರ್ವಶಿಯ ಮುಖದಿಂದ ತಿಳಿದು ಬರಲು ರಾಜನು ಅತ್ಯಾನಂದದಿಂದ ತನ್ನ ಮಗನಿಗೆ ಹೀಗೆ ಹೇಳುತ್ತಾನೆ—

"ಸರ್ವಾಂಗೀಣ ಸ್ಪರ್ಶಃ ಸುತಸ್ಯ ಕಿಲ ತೇ ಮಾಮುಪಗತೇನು ।
ಅಹ್ಲಾದಯಸ್ವ ತಾವತ್ ಚಂದ್ರಕರಃ ಚಂದ್ರಕಾಂತಮಿವ ।"

(ಮಕ್ಕಳ ಸರ್ವಾಂಗೀಣ ಸ್ಪರ್ಶವು ತಂದೆಗೆ ಆನಂದಕರವಷ್ಟೆ ? ನನ್ನೆಡೆಗೆ ಬಂದ ಹೇ ಮಗುವೇ, ಚಂದ್ರಕಿರಣಗಳು ಚಂದ್ರಕಾಂತಮಣಿಯನ್ನು ದ್ರವಗೊಳಿಸುವಂತೆ ನನ್ನನ್ನು ಸಂಪೂರ್ಣವಾಗಿ ಬಿಗಿದಪ್ಪಿ ಆನಂದಗೊಳಿಸು.)

ಇಲ್ಲಿ ಕುಮಾರನಿಗೆ "ಚಂದ್ರನ ಕಿರಣ" ಎಂಬ ಉಪಮೆಯು ಅರ್ಥವತ್ತಾಗಿಲ್ಲವೆ ?

ಹೀಗೆ ಎಲ್ಲೆಲ್ಲಿ ನೋಡಿದರೂ ನಾಯಕನಿಗೆ ಚಂದ್ರನ ಉಪಮೆಯೂ ಇಡೀ ನಾಟಕದ ತುಂಬೆಲ್ಲ ಮೇಲಿಂದ ಮೇಲೆ ಬರುತ್ತದೆ. ಅಲ್ಲದೆ ಅವನ ರಥವು ಕೂಡ "ಸೋಮದತ್ತ", ಧ್ವಜವು "ಹರಿಣಧ್ವಜ."

ಇವೆಲ್ಲ ಮಾತುಗಳ ಮೇಲಿಂದ ಚಂದ್ರಗುಪ್ತ ವಿಕ್ರಮಾದಿತ್ಯನಿಗೂ ಪುರೂರವನಿಗೂ ಪರ್ಯಾಯದಿಂದ ಹೋಲಿಸಿ ಈ ನಾಟಕವನ್ನು ಬರೆದಂತಾಗಿಲ್ಲವೇ ?

ಇನ್ನೊಂದು ಮಾತೇನೆಂದರೆ, ಪುರೂರವನ ಮಗನಾದ ಆಯುವಿನ ಪಾತ್ರಕ್ಕೆ ನಾಟಕದಲ್ಲಿ ಬರಿಯ "ಕುಮಾರ" ಎಂಬ ಹೆಸರನ್ನು ಕೊಟ್ಟದ್ದು. ಇದು ಚಂದ್ರಗುಪ್ತ

ವಿಕ್ರಮಾದಿತ್ಯನ ಮಗನಾದ "ಕುಮಾರಗುಪ್ತ"ನನ್ನು ಸೂಚಿಸುವುದಕ್ಕಾಗಿದೆಯೆಂದು ಸೂಕ್ಷ್ಮವಾಗಿ ವಿಚಾರ ಮಾಡಿದರೆ ಅನಿಸುತ್ತದೆ. ಅಲ್ಲದೆ "ಕುಮಾರವನ"ಕ್ಕೆ ಹೋಗಿ ಬಂದ ಮೇಲೆ ಆತನು ಹುಟ್ಟುತ್ತಾನೆ. ಇಷ್ಟೇ ಅಲ್ಲ, ಋಷ್ಯಾಶ್ರಮದಿಂದ ತಂದೆಯ ಬಳಿಗೆ ಆತನನ್ನು ವೃದ್ಧತಪಸ್ವಿನಿಯೊಬ್ಬಳು ಕರೆದುಕೊಂಡು ಬಂದು ಕುಮಾರನನ್ನು ಆತನ ತಂದೆಯ ಬಳಿಯಲ್ಲಿ ಬಿಟ್ಟುಹೊರಟಾಗ ಅವಳಿಗೆ ಆತನು ಅನ್ನುವುದೇನೆಂದರೆ– "ನನ್ನ ತೊಡೆಯ ಮೇಲೆ ಮಲಗಿ, ನಾನು ಕೈಯಾಡಿಸಲು ಆನಂದಪಡುತ್ತಿದ್ದ ನನ್ನ ಮಣಿಕಂಠವೆಂಬ ಗಂಡು ನವಿಲಿಗೆ ಗರಿಬಂದ ಕೂಡಲೇ ಅದನ್ನು ನನಗೆ ಕಳಿಸಿಕೊಡು."

ಇದರ ಮೇಲಿಂದ ಶಾಕುಂತಲ ನಾಟಕದ ಕೊನೆಯ ಅಂಕದಲ್ಲಿ ಮಾರೀಚಮುನಿಗಳ ಆಶ್ರಮದ ಮುಂದುಗಡೆಯಲ್ಲಿ ಆಡುತ್ತಿದ್ದ ಶಿಶು ಸರ್ವದಮನನು ಶಕುಂತಲೆಯ ಮಗನೇ ಹೌದೆಂದು ಅಲ್ಲಿಗೆ ಅದೇ ಬಂದಿದ್ದ ದುಷ್ಯಂತನಿಗೆ ಮನವರಿಕೆ ಮಾಡಿಕೊಡುವ ಸಲುವಾಗಿ ಕವಿಯು ಆ ಹುಡುಗನ ಆಟಿಗೆಯಾಗಿ ಶಕುಂತ ಪಕ್ಷಿಯಾಕಾರದ ಗೊಂಬೆಯೊಂದನ್ನು ಕಲ್ಪಿಸಿ ಅದರ ಲಾವಣ್ಯವನ್ನು ನೋಡಿ ಆ ಮಗುವು "ಶಕುಂತಲಾವಣ್ಯ" ಎಂಬ ಶಬ್ದವನ್ನುಚ್ಚರಿಸುವಂತೆ ಮಾಡಿದ್ದೂ ಈ ವಿಕ್ರಮೋರ್ವಶೀಯದಲ್ಲಿ "ಕುಮಾರನ" ಅಥವಾ "ಕಾರ್ತಿಕೇಯನ" ನೆನಪು ಬರುವಂತೆ ಮಾಡಿದ್ದೂ ಒಂದೇ ಆಗಿದೆಯೆಂದು ಅನಿಸುವದಿಲ್ಲವೆ ?

ಈ "ಕುಮಾರಗುಪ್ತ"ನ ಯುವರಾಜ ಪಟ್ಟಾಭಿಷೇಕದವರೆಗೆ ಈ ಕತೆಯು ಬಂದಿದೆ. ಆ ಪಟ್ಟಾಭಿಷೇಕದ ಕಾಲದಲ್ಲಿ ಪುರೋಹಿತರಾಗಿ ನಾರದರು ಹೇಳುವ ಆಶೀರ್ವಾದ ವಾಕ್ಯವಿದು :

ಆಯುಷ್ಮೋ ಯೌವರಾಜ್ಯಶ್ರೀಃ
ಸ್ಮಾರಯತ್ಯಾತ್ಮಜಸ್ಯ ತೇ ।
ಅಭಿಷಕ್ತಂ ಮಹಾಸೇನಂ
ಸೇನಾಪತ್ಯೇ ಮರುತ್ವತಾ

ಇದರ ಇಂಗ್ಲಿಷ್ ಅನುವಾದವನ್ನು ಶ್ರೀ ಅರವಿಂದರು ಹೀಗೆ ಮಾಡಿರುವರು :

Thy son's great coronation mindeth me
Of yet another proud investiture
Kartikeya crowned by Maghavan, to lead
Heaven's armies

(ಹೇ ರಾಜಾ, ನಿನ್ನ ಮಗನ ಯುವರಾಜ ಪಟ್ಟಾಭಿಷೇಕವು, ಇಂದ್ರನಿಂದ ಸೇನಾಪತಿ ಪಟ್ಟವನ್ನು ಕಟ್ಟಿಸಿಕೊಂಡ ಕಾರ್ತಿಕೇಯನ ಪಟ್ಟಾಭಿಷೇಕವನ್ನು ನೆನಪಿಗೆ ತರುತ್ತದೆ.)

ಇದರ ಮೇಲಿಂದ ಆಯುಃಕುಮಾರನನ್ನು "ಕುಮಾರಗುಪ್ತ"ನಿಗೆ ಹೋಲಿಸಿದ್ದು ನಿಜವೆಂದು ಸ್ಪಷ್ಟವಾಗಿ ಅನಿಸುವದಿಲ್ಲವೆ ?

ಕಾಳಿದಾಸನ "ಮಾಲವಿಕಾಗ್ನಿಮಿತ್ರ" ನಾಟಕದಿಂದ ಇನ್ನೂ ಕೆಲವು ಅಂಶಗಳು ತಿಳಿಯುತ್ತವೆ. ಅವು ಯಾವುವೆಂಬುದನ್ನು ತಿಳಿದುಕೊಳ್ಳುವದಕ್ಕಿಂತ ಮೊದಲು ಆ ನಾಟಕದ ಮುಖ್ಯ ಐತಿಹಾಸಿಕ ಭಾಗವನ್ನು ಮೊದಲಿಗೆ ನೋಡುವಾ.

ಕ್ರಿಸ್ತಶಕಕ್ಕಿಂತ ಮುಂಚೆ ಮೂರುನೂರು ವರ್ಷಗಳ ಹಿಂದ ಸಾಮ್ರಾಜ್ಯ ಕಟ್ಟಿ ಆಳಿದ ಚಂದ್ರಗುಪ್ತ, ಅಶೋಕಾದಿ ಸಾಮ್ರಾಟರು ಮೌರ್ಯವಂಶದವರೆಂಬುದನ್ನು ನಾವು ಬಲ್ಲೆವಷ್ಟೆ ? ಆ ವಂಶದ ಕೊನೆಯ ರಾಜನಾದ ಬೃಹದ್ರಥನನ್ನು ಆತನ ಮಹಾ ಸೇನಾಪತಿಯಾದ ಸಂಗಮವಂಶದ ಪುಷ್ಯಮಿತ್ರನು ಪಟ್ಟದಿಂದ ತಳ್ಳಿ ಆ ಮಹಾಸಾಮ್ರಾಜ್ಯಕ್ಕೆ ಒಡೆಯನಾದನೆಂಬುದು ಇತಿಹಾಸಕ್ಕೆ ಗೊತ್ತಿದ್ದ ಮಾತು.

ಅಲ್ಲದೆ ೧೮ ಪುರಾಣಗಳಲ್ಲಿ ಎಣಿಸಲ್ಪಡುವ ಮತ್ಸ್ಯ, ವಾಯು, ಬ್ರಹ್ಮಾಂಡ ಹಾಗೂ ಭವಿಷ್ಯ ಪುರಾಣಗಳಲ್ಲಿ ಜೇಷ್ಠಪಾಂಡವನಾದ ಯುಧಿಷ್ಠಿರ (ಧರ್ಮರಾಜ) ಮಹಾರಾಜನಿಂದ ಪಾಟಲೀಪುತ್ರದ ಗುಪ್ತ ಸಾಮ್ರಾಜ್ಯದ ಆರಂಭದವರೆಗಿನ ರಾಜವಂಶಗಳೆಲ್ಲವುಗಳ ವಂಶಾವಳಿಗಳು ಅವರವರಾಳಿದ ವರ್ಷ ತಿಂಗಳು ದಿವಸ ಮೊದಲು ಮಾಡಿ ಕೊಡಲ್ಪಟ್ಟಿದ್ದು ಆ ಪುರಾಣಗಳಲ್ಲಿ ಈ ಸಂಗಮವಂಶದ ಅರಸರ ಬಗೆಗೆ ಹೀಗೆ ಹೇಳಿದೆಯಂತೆ :

"ಮಹಾಸೇನಾಪತಿಯಾದ ಪುಷ್ಯಮಿತ್ರನು ಬೃಹದ್ರಥನನ್ನು ಪಟ್ಟದಿಂದ ತಳ್ಳಿ ೩೬ ವರುಷ ರಾಜಭಾರ ಮಾಡುವನು. ಅವನ ಮಗ ಅಗ್ನಿಮಿತ್ರನು ೮ ವರುಷ ರಾಜ್ಯವನ್ನಾಳುವನು. ಆಮೇಲೆ ( ಅವನ ತಮ್ಮ ? ) ವಸುಜೇಷ್ಠನು ೭ ವರುಷ ರಾಜ್ಯಭಾರ ಮಾಡುವನು. ಆ ಬಳಿಕ ಅವನ (ಅಗ್ನಿಮಿತ್ರನ ?) ಮಗ ವಸುಮಿತ್ರನು ೧೦ ವರುಷ ಅರಸೊತ್ತಿಗೆ ಮಾಡುವನು. ಬಳಿಕ ಆಂಧ್ರಕನು ೨ ವರುಷ, ಪುಳಿಂದನು ೩ ವರುಷ, ಘೋಷನು ೩ ವರುಷ, ವಜ್ರಮಿತ್ರನು ೯ ವರುಷ, ಈತನ ಮಗ ಭಾಗವತನು ೩೨ ವರುಷ, ಅವನ ಮಗ ದೇವಭೂಮಿ ೧೦ ವರುಷ ಹೀಗೆ ಒಟ್ಟಿಗೆ ಸಂಗಮ ವಂಶದ ಹತ್ತುಜನ ರಾಜರು ೧೧೨ ವರುಷ ರಾಜ್ಯಭಾರ ಮಾಡುವರು. ಆಮೇಲೆ ಅವರ ಕೈಯೊಳಗಿಂದ ಪೃಥ್ವಿಯು ಕಣ್ವವಂಶದವರ ವಶಕ್ಕೆ ಹೋಗುವುದು ಇತ್ಯಾದಿ ಇತ್ಯಾದಿ.

ಮತ್ಸ್ಯ, ವಾಯು, ಬ್ರಹ್ಮಾಂಡ ಈ ಮೂರು ಪುರಾಣಗಳಲ್ಲಿ ಈ ಬಗೆಗೆ ಏಕ ವಾಕ್ಯತೆಯಿದ್ದು, ಪುರಾಣಗಳ ಪದ್ಧತಿಯಂತೆ ಭವಿಷ್ಯ ಕಥನದ ಸ್ವರೂಪದಲ್ಲಿ ಈ ವಿಷಯವು ಪ್ರತಿಪಾದಿಸಲ್ಪಟ್ಟಿದೆಯಂತೆ.

ಕಾಳಿದಾಸನು ತನ್ನ 'ಮಾಲವಿಕಾಗ್ನಿಮಿತ್ರ" ನಾಟಕಕ್ಕಾಗಿ ಈ ವಂಶದ ೨ ನೆಯ ರಾಜನಾದ ಅಗ್ನಿಮಿತ್ರನ ಕಥೆಯನ್ನು ಆರಿಸಿಕೊಂಡಿದ್ದು, ಆತನ ತಂದೆ ಪುಷ್ಯಮಿತ್ರನು

ಅಶ್ವಮೇಧ ಯಜ್ಞ ಮಾಡಿದ ವಿಷಯವನ್ನೂ, ಆ ಯಜ್ಞದ ಕುದುರೆಯ ಬೆಂಗಾವಲಿಗೆ ಪುಷ್ಯಮಿತ್ರನ ಮೊಮ್ಮಗನೂ ಅಗ್ನಿಮಿತ್ರನ ಮಗನೂ ಆದ ಕುಮಾರ ವಸುಮಿತ್ರನು ನೂರು ಜನ ರಾಜಕುಮಾರರೊಂದಿಗೆ ಹೋಗಿ, ಸಿಂಧೂ ನದಿಯ ಬಲಪಕ್ಕದಲ್ಲಿ ಅಶ್ವಾರೋಹಿಗಳಾದ ಯವನರು ಆ ಯಜ್ಞದ ಕುದುರೆಯನ್ನು ಕಟ್ಟಿಹಾಕಲು, ಆ ಕುಮಾರನು ಯವನರನ್ನು ಯುದ್ಧದಲ್ಲಿ ಸೋಲಿಸಿ ಕುದುರೆಯನ್ನು ಬಿಡಿಸಿಕೊಂಡು ಬಂದದ್ದನ್ನೂ, ವೃದ್ಧನಾದ ಪುಷ್ಯಮಿತ್ರನು ಮೊಮ್ಮಗನ ಈ ವಿಜಯವನ್ನು ನೋಡಿ "ಸಾಗರ ರಾಜನ ಮೊಮ್ಮಗನಾದ ಅಂಶುಮಂತನು ತನ್ನ ಮುತ್ತಯ್ಯನ ಯಜ್ಞ ತುರಗ ವನ್ನು ಬಿಡಿಸಿಕೊಂಡು ಬಂದಂತೆ ನನ್ನ ಈ ಮೊಮ್ಮಗನೂ ಮಾಡಿದನಲ್ಲಾ !" ಎಂದು ಹರ್ಷೋದ್ಗಾರ ತೆಗೆದ ವಿಷಯವೂ ಈ ನಾಟಕದಲ್ಲಿ ಆನುಷಂಗಿಕವಾಗಿ ಬರುತ್ತದೆ.

ಇದೇ ನಮಗೀಗ ಬೇಕಾದದ್ದು. ವಿಕ್ರಮಾದಿತ್ಯನ ತಂದೆಯಾದ ಮಹಾ ಸಾಮ್ರಾಟ ಸಮುದ್ರಗುಪ್ತನು ಅಶ್ವಮೇಧಯಜ್ಞ ಮಾಡಿದ ವಿಷಯವು ಇತಿಹಾಸಕ್ಕೆ ಸರ್ವಸಮ್ಮತವಾದದ್ದು. ಮುಂದೆ ಆರುನೂರು ವರುಷಗಳಲ್ಲಿ ಉತ್ತರ ಹಿಂದುಸ್ಥಾನ ದಲ್ಲಿ ಯಾರೂ ಅಶ್ವಮೇಧಯಜ್ಞವನ್ನೇ ಮಾಡಲಿಲ್ಲ. ಆದರೆ ಮುಂದೆ ಗುಪ್ತ ಸಾಮ್ರಾಟನಾದ ಸಮುದ್ರಗುಪ್ತನು ಅನೇಕ ರಾಜರನ್ನು ಜಯಿಸಿ ಪುನಃ ಸಾಮ್ರಾಜ್ಯ ವನ್ನು ಕಟ್ಟಿ ತಾನು ಸಾಮ್ರಾಟನೆಂಬುದಕ್ಕೆ ಅಶ್ವಮೇಧಯಜ್ಞವನ್ನು ಮಾಡಿದನು. (ಸುಮಾರು ಕ್ರಿ.ಶ. ೩೫೧).

ಇನ್ನೊಂದು ಮಾತೇನೆಂದರೆ ಸಮುದ್ರಗುಪ್ತನು ಉತ್ತರ ಹಿಂದುಸ್ಥಾನದಲ್ಲಿ ದೊಡ್ಡ ಸಾಮ್ರಾಜ್ಯ ಕಟ್ಟಿದ್ದರೂ ಪಶ್ಚಿಮ ಹಿಂದುಸ್ಥಾನ ಮಧ್ಯ ಹಿಂದುಸ್ಥಾನವನ್ನೆಲ್ಲ ಆಕ್ರಮಿಸಿಕೊಂಡು ಉಜ್ಜಯನಿಯಲ್ಲಿ ಆಳುತ್ತಿದ್ದ ಪರಕೀಯರಾದ ಶಕಜಾತೀಯ ಸತ್ರಪರಾಜರು ಇನ್ನೂ ಉಳಿದುಕೊಂಡೇ ಇದ್ದರು. ಅವರು ಮಾಳವಾ, ಗುಜರಾಥ, ಸೌರಾಷ್ಟ್ರ, ಸಿಂಧ, ನಾಸಿಕ, ಕೊಂಕಣ ಮೊದಲಾದ ದೊಡ್ಡ ಭಾಗವನ್ನು ಆಳುತ್ತಿದ್ದರು. ಅವರನ್ನು ಗೆದ್ದವನು ಸಮುದ್ರಗುಪ್ತನ ಮಗ ಚಂದ್ರಗುಪ್ತ ವಿಕ್ರಮಾದಿತ್ಯನೇ, ಗುಪ್ತಸಾಮ್ರಾಜ್ಯಕ್ಕೆ ಉಜ್ಜಯಿನಿಯನ್ನು ರಾಜಧಾನಿಯನ್ನಾಗಿ ಮಾಡಿದವನು ಈತನೇ, ಆದರೆ ಮಾಳವ ಪ್ರಾಂತವನ್ನು ಗೆದಿಯುವ ಮೊದಲು ವಿಕ್ರಮಾದಿತ್ಯನು ಅದರ ಸಮೀಪದ ಪ್ರದೇಶವಾದ ವಿದಿಶಾ (ಈಗಿನ ಭಿಲಸಾ)ದಲ್ಲಿ ತನ್ನ ತಂದೆಯ ಪರವಾಗಿ ಯುವರಾಜನಾಗಿ ಆಳುತ್ತಿದ್ದಂತೆ ತೋರುತ್ತದೆ. "ಮಾಲವಿಕಾಗ್ನಿಮಿತ್ರ" ನಾಟಕದಲ್ಲಿ ಸುಂಗಮ ವಂಶದ ಪುಷ್ಯಮಿತ್ರನ ಮಗನಾದ ಅಗ್ನಿಮಿತ್ರನು ತನ್ನ ತಂದೆಯ ಪರವಾಗಿ ವಿದಿಶಾ ಪಟ್ಟಣದಲ್ಲಿ ಯುವರಾಜನಾಗಿ ಆಳುತ್ತಿದ್ದದ್ದರ ಮೇಲಿಂದ ಇದನ್ನು ಊಹಿಸಬೇಕಾಗುತ್ತದೆ. ಏಕೆಂದರೆ, ಅಶ್ವಮೇಧಯಜ್ಞ ಮಾಡಿದ ಪುಷ್ಯಮಿತ್ರನು ಸಮುದ್ರಗುಪ್ತನ ಪ್ರತೀಕವಾದ ಬಳಿಕ ಅವನ ಮಗ ಅಗ್ನಿಮಿತ್ರನು ವಿಕ್ರಮಾದಿತ್ಯನ ಪ್ರತೀಕವೆಂಬುದು ಸಹಜವೇ ಆಗಿದೆ. ಅದರಂತೆ ಯವನರನ್ನು ಸೋಲಿಸಿ ಯಜ್ಞಾಶ್ವ

ವನ್ನು ಬಿಡಿಸಿಕೊಂಡು ಬಂದ ಕುಮಾರ ವಸುಮಿತ್ರನು ವಿಕ್ರಮಾದಿತ್ಯನ ಮಗ "ಕುಮಾರಗುಪ್ತ"ನಿಗೆ ಪ್ರತೀಕನೆಂಬುದೂ ಸುಸ್ಪಷ್ಟವೇ ಆಗಿದೆ. ಒಟ್ಟಿನ ಮೇಲೆ ಹೇಳುವದೇನೆಂದರೆ– ಸಮುದ್ರಗುಪ್ತನು ಉತ್ತರ ಹಿಂದುಸ್ತಾನದಲ್ಲಿ ಯುವರಾಜ ನಾಗಿದ್ದುಕೊಂಡು ಸುತ್ತುಮುತ್ತಲಿನ ಪ್ರದೇಶಗಳನ್ನು ಗೆದೆಯುತ್ತಲಿದ್ದನು. ಆವಾಗಲೇ ಅವನ ಮಗ ಕುಮಾರಗುಪ್ತನು ಇನ್ನೂ ಪೂರ್ವಯೌವನದಲ್ಲಿಯೇ ವಾಯವ್ಯ ಹಿಂದುಸ್ತಾನದಲ್ಲಿ ಶಕ, ಹೂಣ ಮೊದಲಾದ ಯುವನರನ್ನು ಸದೆ ಬಡೆಯುತ್ತಿದ್ದು ಮುತ್ತಯ್ಯನ ಯಜ್ಞಾಶ್ವದ ಬೆಂಗಾವಲನ್ನು ಸಹ ಮಾಡಿದನು ಎಂಬ ವಿಷಯವನ್ನೇ ಕಾಳಿದಾಸನು ತನ್ನ "ಮಾಲವಿಕಾಗ್ನಿಮಿತ್ರ" ನಾಟಕದಲ್ಲಿ ಮುಂಚಿನ ಇತಿಹಾಸ ದೊಳಗಿನ ಸಂಗಮ ವಂಶೀಯರ ಕಥೆಯ ಮುಖಾಂತರವಾಗಿ ಚಿತ್ರಿಸಿರುವನು.

ಇದನ್ನು ನೋಡಿದರೆ ಕಾಳಿದಾಸನು ಸಮುದ್ರಗುಪ್ತನ ಕೊನೆಯ ಕಾಲದಿಂದ ಮೊದಲು ಮಾಡಿ ವಿಕ್ರಮಾದಿತ್ಯನ ಇಡೀ ಆಳಿಕೆಯಲ್ಲಿ ಹಾಗೂ ಕುಮಾರಗುಪ್ತನ ಪ್ರಥಮ ವಿಜಯಗಳ ಕಾಲದವರೆಗೂ ಇದ್ದನೆಂದು ಸಹಜವಾಗಿ ಸಿದ್ಧವಾಗುವುದಿಲ್ಲವೆ ?

"ಮಾಲವಿಕಾಗ್ನಿಮಿತ್ರ" ನಾಟಕದಲ್ಲಿ ಮೇಲಿಂದ ಮೇಲೆ ಬರುವ 'ಸಮುದ್ರ'ದ ಉಪಮೆಗಳು "ಸಮುದ್ರಗುಪ್ತ"ನ ಮಹಿಮೆಯನ್ನು ಕೊಂಡಾಡುವುದಕ್ಕೆ ಉಪಯೋಗಿಸಲ್ಪಟ್ಟಿರಬಹುದೋ ಏನೋ ಎಂದು ಸಹ ಅನೇಕ ಸಲ ಮನಸ್ಸಿಗೆ ಅನಿಸುತ್ತದೆ.

ನಾಟಕದ ಕಥೆಯು "ಸ್ವಪ್ನವಾಸವದತ್ತ"ದ ಸರ್ವಾಂಗ ಸುಂದರ ಪುನರಾವ ತಾರವೆಂದು ಸ್ಪಷ್ಟವಾಗಿ ಅನಿಸುತ್ತದೆ.* ಆದರೂ "ಮಾಲವಿಕಾ" ಎಂಬ ಹೆಸರಿನಲ್ಲಿ ಆಶ್ರಯದಾತನ ಮಾಳವ ವಿಜಯದ ಪೂರ್ವಾಭಾಸವು ಸೂಚಿತವಾಗುವಂತಿದೆ. ಇದರೊಳಗಿನ ವಿದರ್ಭ(ವರ್ಹಾಡ)ವಿಜಯವು ವಿಕ್ರಮಾದಿತ್ಯನ ಯುವರಾಜ ಕಾಲದ ಮಧ್ಯಹಿಂದುಸ್ತಾನದ ವಿಜಯಗಳಲ್ಲೊಂದನ್ನು ಸೂಚಿಸುತ್ತದೆ.

ಇರಲಿ, ಶಾಕುಂತಲ ನಾಟಕದಿಂದಲೂ ಒಂದು ವಿಷಯವು ಹೊರಪಡುತ್ತದೆ. ಅದು ಏನೆಂದರೆ ಗುಪ್ತಸಾಮ್ರಾಜ್ಯದ ಆದಿ ಮಾತಾಪಿತೃಗಳ ಅನ್ಯೋನ್ಯ ಪ್ರೇಮ ಹಾಗೂ ಆ ಸಾಮ್ರಾಜ್ಯದ ಪ್ರತಿಷ್ಠಾಪನಾಚಾರ್ಯನ ಬಾಲ್ಯಶೌರ್ಯ.

---

* ಉದಯನ-ವಾಸವದತ್ತೆಯರ ಕಥೆಯ ಮೇಲೆ ಕಾಳಿದಾಸನ ಮೋಹವು ಬಹಳವಾಗಿತ್ತೆಂದು ಮೇಘದೂತದಲ್ಲಿ ಉಜ್ಜಯಿನಿ ಹಾಗೂ ಅವಂತಿಯ ವರ್ಣನೆಯಲ್ಲಿ ಸ್ಪಷ್ಟವಾಗಿ ಕಂಡು ಬರುವುದು. ಇಷ್ಟೇ ಏಕೆ ? ಆಗಿನ ಕಾಲದ ಗ್ರಾಮವೃದ್ಧರೆಲ್ಲರೂ ಆ ಕಥೆಯನ್ನು ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತು ಹೇಳುತ್ತಿದ್ದರೆಂದು ಕಾಳಿದಾಸನೇ ವರ್ಣಿ ಸಿದ್ದಾನೆ.

ಸಾಮ್ರಾಟ ಸಮುದ್ರಗುಪ್ತನ ತಂದೆಯಾದ ಮೊದಲನೆಯ ಚಂದ್ರಗುಪ್ತನು ಮೊದಲಿಗೆ ಮಗಧ(ಬಿಹಾರ)ದಲ್ಲಿ ಒಬ್ಬ ಸಂಸ್ಥಾನಿಕನಾಗಿದ್ದನು. ಆದರೆ ನೇಪಾಳದ ಲಿಚ್ಛವಿ ಜನಾಂಗದ ರಾಜಕುಮಾರಿಯಾದ ಕುಮಾರದೇವಿಯನ್ನು ಲಗ್ನವಾದ ಬಳಿಕ ಆತನಿಗೆ ಬಹಳ ಕೀರ್ತಿ ಬಂದು ಇಡೀ ಮಗಧಕ್ಕೆ ವಿಖ್ಯಾತರಾಜನಾದನು. ಈತನು ತನ್ನ ಹೆಂಡತಿಯ ಮೇಲೆ ಎಷ್ಟು ಪ್ರೇಮವುಳ್ಳವನಾಗಿದ್ದನೆಂದರೆ ತನ್ನ ನಾಣ್ಯಗಳ ಮೇಲೆ ತನ್ನ ಹಾಗೂ ತನ್ನ ಹೆಂಡತಿಯ ಮತ್ತು ಲಚ್ಛವೀಯರ ಹೆಸರುಗಳನ್ನು ಮುದ್ರಿಸಿದ್ದನು. ಇಷ್ಟೇ ಅಲ್ಲ, ಅವಳ ಬಗೆಗೆ ಅವಳ ಮಗನಾದ ಸಾಮ್ರಾಟ ಸಮುದ್ರಗುಪ್ತನೂ ಕೂಡ ಅತ್ಯಂತ ಹೆಮ್ಮೆಯಿಂದ ತಾನು ಲಿಚ್ಛವೀ ರಾಜಕುಮಾರಿಯ ಪುತ್ರನೆಂದು ಹೇಳಿಕೊಳ್ಳುತ್ತಿದ್ದನು.

ಈ ವಿಷಯಕ್ಕೆ ವಿನ್‌ಸೆಂಟ ಸ್ಮಿತ್ ಹೇಳುವ ಸುಂದರವಾದ ಮಾತನ್ನು ಮೂಲ ಇಂಗ್ಲಿಷಿನಲ್ಲಿಯೇ ನೋಡಿರಿ. ಅದು ಹೀಗಿದೆ :

"He (Chandragupta I) struck coins in joint names of himself, his queen and the Lichavis; and his son and successor (Samudragupta) habitually described himself with pride as the son of the daughter of Lichavis."

— Early History of India, Page 280

ಈ ಮೊದಲನೆಯ ಚಂದ್ರಗುಪ್ತ ಹಾಗೂ ಆತನ ಪ್ರಿಯಪತ್ನಿ ಕುಮಾರದೇವಿ ಇವರೇ ಶಾಕುಂತಲ ನಾಟಕದ ದುಷ್ಯಂತ ಶಕುಂತಲೆಯರು. ಹಾಗೂ ಯಾವನಿಂದ ಭರತ ಖಂಡಕ್ಕೆ 'ಭರತಖಂಡ' ಎಂದು ಹೆಸರು ಬಂತೋ ಆ ಭರತ ಅಥವಾ "ಸರ್ವದಮನ"ನೆಂದರೆ ಸಾಮ್ರಾಜ್ಯಸ್ಥಾಪಕನಾದ ಸಮುದ್ರಗುಪ್ತನೇ.

ಈ ಮಾತಿಗೆ ಏನಾದರೂ ಸಾಕ್ಷಿಯಿದೆಯೇ ? ಎಂದರೆ, ಕೇಳಿರಿ. ಸಮುದ್ರಗುಪ್ತನಿಗೆ "ಅಪ್ರತಿರಥ" ಎಂಬ ಬಿರುದು ಇದ್ದದ್ದು ಸರ್ವರಿಗೆ ಗೊತ್ತು, ಆತನು ತನ್ನ ನಾಣ್ಯಗಳ ಮೇಲೆ ಮುಂಬದಿಗೆ "ರಾಜಾಧಿರಾಜ ಸಮುದ್ರಗುಪ್ತ" ಎಂದೂ, ಹಿಂಬದಿಗೆ "ಅಪ್ರತಿರಥ" ಎಂದೂ ಮುದ್ರಿಸುತ್ತಿದ್ದನೆಂಬುದು ಹಿಂದುಸ್ಥಾನದ ಪುರಾತನ ನಾಣ್ಯಗಳ ಇತಿಹಾಸವನ್ನು ಬಲ್ಲವರಿಗೆಲ್ಲ ಗೊತ್ತು. ಈತನ ಈ ಬಿರುದೇ ಶಾಕುಂತಲ ನಾಟಕದ ನಾಲ್ಕನೆಯ ಅಂಕದ ಕೊನೆಯ ಭಾಗದಲ್ಲಿ ಶಕುಂತಲೆಯ ಮಗನಿಗಾಗಿ ಹೇಳಲಾಗಿದೆ. ಅದು ಹೀಗೆ ಇದೆ : ಶಕುಂತಲೆಯು ಪತಿಯ ಮನೆಗೆ ಹೊರಟಾಗ ಸಾಕು ತಂದೆಗಳಾದ ಕಾಶ್ಯಪ ಕಣ್ವರಿಗೆ ಹೀಗೆ ಕೇಳುತ್ತಾಳೆ : "ತಾತಾ, ನಾನು ತಿರುಗಿ ಈ ಆಶ್ರಮಕ್ಕೆ ಬರುವುದು ಇನ್ನೆಂದಿಗೆ ?" ಆಗ ಕಣ್ವಮುನಿಗಳು ಹೀಗೆ ಹೇಳುತ್ತಾರೆ :

"ಭೂತ್ವಾಚಿರಾಯ ಚತುರಂಗ ಮಹೀ ಸಪತ್ನೀ ।
ದುಷ್ಯಂತಪ್ ಅಪ್ರತಿರಥಂ ತನಯಂ ನಿವೇಶ್ಯ ॥
ಭರ್ತ್ರಾ ತದರ್ಪಿತ ಕುಟುಂಬ ಭರೇಣ ಸಾರ್ದ್ಧಂ ।
ಕಾಂತೇ. ಕರಿಷ್ಯಸಿ ಪದಂ ಪುನರಾಶ್ರಮೇಽಸ್ಮಿನ್ ॥

(ಮಗಳೇ, ಚತುಸ್ಸಮುದ್ರಾಂಕಿತ ಪೃಥ್ವಿಗೆ ಸವತಿಯಾಗಿ, ಅಪ್ರತಿರಥನಾದ ದುಷ್ಯಂತ ತನಯನನ್ನು ಹೆತ್ತು, ಆತನ ಮೇಲೆ ಕುಟುಂಬ ಭಾರವನ್ನೆಲ್ಲ ಹೊರಿಸಿ, ಪತಿ ಸಮೇತಳಾಗಿ ಪುನಃ ಈ ಆಶ್ರಮದಲ್ಲಿ ವಾಸಮಾಡುವಿ.)

ಇಲ್ಲಿ "ಚತುರಂಗ" (ಚತುಸ್ಸಮುದ್ರಾಂಕಿತ) ಎಂಬ ಶಬ್ದವೂ ಬುದ್ಧಿಪೂರ್ವಕ ವಾಗಿ ಕೌಶಲ್ಯದಿಂದ ಪ್ರಯೋಗಿಸಲಾಗಿದೆಯೆಂದು ಅನಿಸುತ್ತದೆ. ಅದು "ಸಮುದ್ರಗುಪ್ತ"ನನ್ನು ಸೂಚಿಸುವದಕ್ಕೆ "ಅಪ್ರತಿರಥ"ದೊಂದಿಗೆ ಇನ್ನೊಂದು ಸಹಾಯಕ ಶಬ್ದವಾಗಿರುವುದು.

ಇರಲಿ, ಇದನ್ನೆಲ್ಲಾ ನೋಡಿದರೆ, ಕಾಳಿದಾಸನಿಗೆ ಗುಪ್ತರಾಜರ ಇಡೀ ವಂಶದ ಮೇಲೆಯೇ ಅಗಾಧವಾದ ಪ್ರೇಮವೂ ಗೌರವವೂ ಇದ್ದಿತೆಂದು ಸ್ಪಷ್ಟವಾಗಿ ಕಂಡುಬರುತ್ತದೆ.

ಈ ಮಾತನ್ನು ವಿಕ್ರಮೋರ್ವಶೀಯ ನಾಟಕದ ೫ನೆಯ ಅಂಕದಲ್ಲಿ "ಆಯುಃ ಕುಮಾರ"ನ ಯುವರಾಜ ಪಟ್ಟಾಭಿಷೇಕದ ಕಾಲಕ್ಕೆ ಒಬ್ಬ ವೈತಾಳಿಕನು (ಭಟ್ಟಂಗಿಯು) ಹೇಳುವ ಪದ್ಯದ ಮೇಲಿಂದ ಹೆಚ್ಚು ಸತ್ಯವೆಂದು ಭಾವಿಸಬೇಕಾಗಿದೆ. ಆ ಪದ್ಯವು ಹೀಗಿದೆ :

"ಅಮರ ಮುನಿರಿವಾತ್ರಿ ಬ್ರಹ್ಮಣೋಽ ತ್ರೇರಿವೇಂದುಃ ।
ಬುಧ ಇವ ಶಶಿರಾಂಶೋ, ಬೋಧನಸ್ಯೇವ ದೇವಃ ॥
ಭವ ಪಿತುರನುರೂಪಸ್ತ್ವಂ ಗುಣೈರ್ಲೌಕಿಕಾಂತ್ಯೈಃ ।
ಅತಿಶಯನಿ ಸಮಸ್ತಾವಂಶ ಏವಾಶಿಷಸ್ತೇ ॥"

(ದೇವಮುನಿಯಾದ ಅತ್ರಿಯು ತನ್ನ ತಂದೆಯಾದ ಬ್ರಹ್ಮನಿಗೂ, ಚಂದ್ರನು ತನ್ನ ತಂದೆಯಾದ ಅತ್ರಿಗೂ, ಬುಧನು ತನ್ನ ತಂದೆಯಾದ ಚಂದ್ರನಿಗೂ, ಒಡೆಯನಾದ ಪುರೂರವನು ತನ್ನ ಜನಕನಾದ ಬುಧನಿಗೂ, ಹೇಗೋ ಹಾಗೆ ನೀನು [ಹೇ ಆಯುಃ ಕುಮಾರನೇ] ನಿನ್ನ ತಂದೆಗೆ ಅನುರೂಪವಾದ ಗುಣಗಳುಳ್ಳವನಾಗಿ ಸಮಸ್ತ ಲೌಕಿಕ ರಿಂದ "ಸಮಸ್ತ ವಂಶವೇ ಅತಿ ಶ್ರೇಷ್ಠವಾದದ್ದು" ಎಂದು ಹರಸಿಕೊಳ್ಳುವಂಥವ ನಾಗು.)

ಇದನ್ನೇ ಗುಪ್ತವಂಶದ ಪರವಾಗಿ ಹೀಗೆ ಹೊರಳಿಸಬಹುದು :

"ಘಟೋತ್ಕಚಗುಪ್ತನು ತನ್ನ ತಂದೆಯೂ ವಂಶದ ಮೂಲಪುರುಷನೂ ಆದ "ಗುಪ್ತ"ನಿಗೂ, ಮೊದಲನೆಯ ಚಂದ್ರಗುಪ್ತನು ತನ್ನ ತಂದೆಯಾದ ಘಟೋತ್ಕಚ ಗುಪ್ತನಿಗೂ, ಸಾಮ್ರಾಜ್ಯ ಸ್ಥಾಪಕನಾದ ಸಮುದ್ರಗುಪ್ತನು ತನ್ನ ತಂದೆಯಾದ ಮೊದಲನೆಯ ಚಂದ್ರಗುಪ್ತನಿಗೂ, ಹೇಗೋ ಹಾಗೆ ನೀನು (ಹೇ ಕುಮಾರಗುಪ್ತನೇ) ನಿನ್ನ ತಂದೆಯಾದ ವಿಕ್ರಮಾದಿತ್ಯನಿಗೆ ಅನುರೂಪ ಗುಣಗಳುಳ್ಳವನಾಗಿ, ಸಮಸ್ತ ಲೌಕಿಕರಿಂದ "ಸಮಸ್ತ ವಂಶವೇ ಅತಿ ಶ್ರೇಷ್ಠವಾದದ್ದು" ಎಂದು ಹೊಗಳಿಸಿಕೊಳ್ಳ ವಂಥವನಾಗು."

ಇದರ ಮೇಲಿಂದ ನೋಡಿದರೆ ರಘುವಂಶದ ಮೊದಲನೆಯ ಸರ್ಗದಲ್ಲಿ "ಅಹಾ! ರಘುಕುಲದವರ ವಂಶವು ಎಂಥಾದ್ದು !! ಬಾಲ್ಯದಲ್ಲಿ ವಿದ್ಯಾವ್ಯಾಸಂಗಿಗಳಾಗಿಯೂ, ಯೌವನದಲ್ಲಿ ದಾಂಪತ್ಯ ಜೀವನ ನಿರತರಾಗಿಯೂ, ವೃದ್ಧಾಪ್ಯದಲ್ಲಿ ಮುನಿವೃತ್ತಿ ಯನ್ನವಲಂಬಿಸಿದವರಾಗಿಯೂ, ಕೊನೆಯಲ್ಲಿ ಪರಮಾತ್ಮನೊಡನೆ ಯೋಗವನ್ನು ಸಾಧಿಸಿದವರಾಗಿಯೂ ಇರುವ ಈ ವಂಶದವರ ಚರಿತ್ರೆಯನ್ನು ಬರೆಯುವದಕ್ಕೆ ನನ್ನಲ್ಲಿ ಚಾಪಲ್ಯ ಹುಟ್ಟಿದೆ." ಎಂದು ಕಾಳಿದಾಸನು ಹೇಳಿದ ಮಾತಿನ ಮೇಲಿಂದ ಇಡೀ ಗುಪ್ತವಂಶವನ್ನು ಪುರಾಣ ಕಾಲದ ಮಹಾನ್ ಆದರ್ಶಪೂರ್ಣವಾದ ರಘು ವಂಶಕ್ಕೆ ಹೋಲಿಸಿ "ರಘುವಂಶ ಮಹಾಕಾವ್ಯ"ವನ್ನು ಬರೆಯಲಾಗಿರಬಹುದೆಂದು ಊಹಿಸಲಿಕ್ಕೆ ಅವಕಾಶವಿಲ್ಲವೆ ?

ಇದೇ ರೀತಿಯಾಗಿ, ಕುಮಾರಗುಪ್ತನು ಯುವರಾಜ ಪಟ್ಟಕ್ಕೆ ಬರುವ ಮೊದಲೇ ಶಕ, ಹೂಣ ಮೊದಲಾದ ಯವನರನ್ನು (ಕಾಳಿದಾಸನ ಅಭಿಪ್ರಾಯದಂತೆ ಆಗಿನ ಕಾಲದ ಅರಸರನ್ನು) ಸದೆಬಡಿದಿದ್ದರಿಂದಲೇ ತಾರಕಾಸುರನ ಸಂಹಾರಕ್ಕಾಗಿ ಹುಟ್ಟಿದ ಕಾರ್ತಿಕೇಯನನ್ನು ಈತನಿಗೆ ಹೋಲಿಸಿ "ಕುಮಾರ ಸಂಭವ" ಮಹಾಕಾವ್ಯವನ್ನು ಕಾಳಿದಾಸನು ಬರೆದಿರಬೇಕೆಂದು ಅನಿಸುವದಿಲ್ಲವೆ ?

ವಿಕ್ರಮೋರ್ವಶೀಯ ನಾಟಕದ ಕೆಲವು ಪ್ರತಿಗಳಲ್ಲಿ ಐದನೆಯ ಅಂಕದಲ್ಲಿ ಆಯುಃ ಕುಮಾರನ ಪ್ರವೇಶದೊಡನೆಯೇ ಬರುವ ಒಂದು ಸೇವಾಧಾರಿ ಪಾತ್ರಕ್ಕೆ "ಯಾವನೀ" ಎಂದು ಹೆಸರು ಕೊಡಲಾಗಿದೆ. ಇದರ ಮೇಲಿಂದಲೂ ಆಯುಃಕುಮಾರ ನಿಂದ ಸೂಚಿತನಾಗುವ ಕುಮಾರಗುಪ್ತನು ಶಕ, ಹೂಣ ಮೊಲಾದ ಯವನರನ್ನು ಸೋಲಿಸಿ ತನ್ನ ದಾಸರನ್ನಾಗಿ ಮಾಡಿಕೊಂಡಿದ್ದನೆಂದು ಸ್ಪಷ್ಟವಾಗಿ ಅನಿಸುತ್ತದೆ.

ಇದರಂತೆ ಕಾಳಿದಾಸನು ತನ್ನ "ಋತು ಸಂಹಾರ"ವನ್ನು "ಮಾಲವಿಕಾಗ್ನಿ ಮಿತ್ರ"ಕ್ಕಿಂತ ಮುಂಚೆಯೂ "ಮೇಘದೂತ"ವನ್ನು "ವಿಕ್ರಮೋರ್ವಶೀಯ"ಕ್ಕಿಂತ ಮುಂಚೆಯೂ ಬರೆದಿರಬೇಕೆಂದೂ ಅನಿಸುವ ವಿಷಯವನ್ನಿಲ್ಲ ಆನುಷಂಗಿಕವಾಗಿ ಹೇಳುವೆನು.

"ಮಾಲವಿಕಾಗ್ನಿಮಿತ್ರ"ದ ಎರಡನೆಯ ಅಂಕದ ಕೊನೆಯ ಭಾಗದಲ್ಲಿ ಮಧ್ಯಾಹ್ನ ವಾಗಿರಲು ಒಡ್ಡೋಲಗವನ್ನು ಮುಗಿಸಿ ರಾಜನು ಊಟಕ್ಕೆ ಏಳಬೇಕೆಂದು ಸೂಚಿಸು ವುದಕ್ಕಾಗಿ ತೆರೆಯ ಹಿಮ್ಮಗ್ಗಲಲ್ಲಿ ಹೇಳುವ "ಪತ್ರಛಾಯಾಸು ಹಂಸಾಃ ಮುಕಲಿತ ನಯನಾ" ಎಂಬ ಪದ್ಯವನ್ನು ನೋಡಿದರೆ ಋತುಸಂಹಾರ ನಿದಾಘ ವರ್ಣನೆಯನ್ನು ನೆನಪಿಗೆ ತರುವದಿಲ್ಲವೆ ?

"ವಿಕ್ರಮೋರ್ವಶಿಯ"ದ ಬಹುಶಃ ಇಡಿ ನಾಲ್ಕನೆಯ ಅಂಕವೇ ಪುರೂರವನ ಆತ್ಮಗತ ಆಲಾಪವಾಗಿರುವುದು— "ಮೇಘದೂತ"ದಲ್ಲಿಯ ಅಭಿಶಪ್ತ ಯಕ್ಷನ ಆಲಾಪವನ್ನು ಲಕ್ಷಕ್ಕೆ ತರುವುದಿಲ್ಲವೆ ?

ಇದಲ್ಲದೆ ಮೇಘದೂತದಲ್ಲಿ "ವಿದಿಶಾ ರಾಜಧಾನಿಂ" ಎಂದು ವಿಶೇಷಿಸಿ ಹೇಳಿರುವುದು, ಮಾಲಕಾಗ್ನಿಮಿತ್ರದ ಪ್ರಕಾರ ಆ ನಾಟಕದ ನಾಯಕನಾದ ಅಗ್ನಿಮಿತ್ರ ನಿಂದ ಸೂಚಿತನಾಗುವ ವಿಕ್ರಮಾದಿತ್ಯನು ತನ್ನ ಯುವರಾಜೋದ್ಯೋಗದ ಕಾಲದಲ್ಲಿ ವಿದಿಶಾದಲ್ಲಿ ಆಳುತ್ತಿದ್ದನೆಂಬ ಮಾತಿಗೆ ಸಾಕ್ಷಿಯಾಗುವದೋ ಏನೋ ಎಂದು ಅನಿಸು ತ್ತದೆ. ಆದರೆ ಮೇಘದೂತದಲ್ಲಿ ಉಜ್ಜಯಿನಿಯನ್ನು ಬಹು ವೈಭವದಿಂದಲೂ ಗೌರವದಿಂದಲೂ ವರ್ಣಿಸುವುದರಿಂದ ಅಷ್ಟುಹೊತ್ತಿಗೆ ರಾಜಧಾನಿಯು ಉಜ್ಜಯಿನಿಗೆ ಬಂದಿದ್ದಿತೆಂಬುದು ಸ್ಪಷ್ಟವಿದೆ, ಆದರೂ ಮೊದಲಿನ ರಾಜಧಾನಿಯಾದ ವಿದಿಶಾ ಪಟ್ಟಣದ ನೆನಪು ಕಾಳಿದಾಸನಿಗೆ ಇನ್ನೂ ಇದ್ದಿತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. "ವಿಕ್ರಮೋರ್ವಶೀಯ"ವನ್ನು ಬರೆಯುವ ಹೊತ್ತಿಗೆ ಉಜ್ಜಯಿನಿಯು ಪರಕೀಯ ಶಕರಾಜರ ಉಚ್ಚಾಟನೆಯಾಗಿತ್ತೆಂಬುದು ಸ್ಪಷ್ಟವೇ ಇದೆ. ಊರ್ವಶಿಯನ್ನು (ಉರ್ವಿ ಯನ್ನು ?) ಅಸುರರ (ಶಕ, ಹೂಣ, ಯವನ ಮೊದಲಾದವರ) ಕೈಯೊಳಗಿಂದ ಬಿಡಿಸಿಕೊಂಡು ಬರುವ ಸನ್ನಿವೇಶದಿಂದಲೇ ಆ ನಾಟಕವು ಆರಂಭವಾಗುವುದೇ ಈ ಮಾತಿಗೆ ಸಾಕ್ಷಿಯಾಗಿದೆ. ನಾಟಕದ ಕೊನೆಯ ಅಂಕದಲ್ಲಿಯಂತೂ "ಆಯುಃಕುಮಾರ" (ಕುಮಾರಗುಪ್ತ)ನಿಗೆ ಯುವರಾಜ ಪಟ್ಟಾಭಿಷೇಕ ಮಾಡಿ ಸೇನಾಪತಿ ಪಟ್ಟವನ್ನೇ ಕಟ್ಟಲಾಗುವುದಲ್ಲದೆ ಶಕ, ಹೂಣ ಮೊದಲಾದ ಯವನರನ್ನು ದಾಸ ಕೆಲಸಕ್ಕೆ ನೇಮಿಸಿಕೊಳ್ಳಲಾಗುತ್ತದೆಂಬ ಮಾತನ್ನು "ಯಾವನಿ"ಯ ಪಾತ್ರವನ್ನು ಕುರಿತು ಚರ್ಚಿಸುವಾಗ ಈ ಮೊದಲೇ ಹೇಳಿದ್ದೇನೆ.

ಇರಲಿ, ಇದೆಲ್ಲದರ ಮೇಲಿಂದ ಏನು ಸಿದ್ಧವಾದಂತಾಯಿತು ?

ಸಮುದ್ರಗುಪ್ತನ ಅಶ್ವಮೇಧಯಜ್ಞದ ಕಾಲ ಮೊದಲುಗೊಂಡು ವಿಕ್ರಮಾದಿ ತ್ಯನ ಇಡೀ ಆಳಿಕೆಯ ಆರಂಭದವರೆಗೆ ಸಹ ಕಾಳಿದಾಸನು ಇರಬಹುದೆಂದು ಸಿದ್ಧ ವಾಗುವುದಿಲ್ಲವೇ ?

ಈ ಗುಪ್ತರಾಜರ ವಂಶಾವಳಿಯೂ ಅವರ ಕಾಲವೂ ಈ ಕೆಳಗಿನಂತೆ ಇವೆ—




ಇರಲಿ, ಗುಪ್ತರಾಜರ ಈ ಕಾಲನಿರ್ಣಯವು ವಿನ್‌ಸೆಂಟ ಸ್ಮಿತ್ ಅವರ "ಅರ್ಲಿ ಹಿಸ್ಟರಿ ಆಫ್ ಇಂಡಿಯಾ" ಎಂಬ ಪುಸ್ತಕದಿಂದ ತೆಗೆದುಕೊಳ್ಳಲ್ಪಟ್ಟಿದೆ. ಆದರೆ ಶ್ರೀಯುಕ್ತ ರಾಖಲದಾಸ ವಂದ್ಯೋಪಾಧ್ಯಾಯರೆಂಬ ಮಹಾಶಯರು ತಮ್ಮ "ಭಾರತೀಯ ಪ್ರಾಚೀನ ಮುದ್ರಾ" ಎಂಬ ಗ್ರಂಥದಲ್ಲಿ ಗುಪ್ತರಾಜರ ಕಾಲನಿರ್ಣಯದಲ್ಲಿ ಮಹತ್ವದ ಬದಲಾವಣೆಯನ್ನು ಮಾಡಿದ್ದಾರೆ. ಆ ವಿಷಯವನ್ನು, ಅವರ

ಪುಸ್ತಕದ ಕೆಲವು ಮುಖ್ಯಾಂಶಗಳನ್ನು— ಇದಕ್ಕೆ ಪರಿಶಿಷ್ಟವಾಗಿ ಕೊಡುವೆನು. ಹಾಗೂ ಉಚಿತವೆಂದು ಅನಿಸಿದರೆ ಈಗಿನ ಕಾಲನಿರ್ಣಯದಲ್ಲಿ ಬದಲಾವಣೆ ಮಾಡಿ ಕೊಳ್ಳುವೆನು.

ಆದರೆ ಇದೀಗ ವಿನ್‌ಸೆಂಟ ಸ್ಮಿತ್ ಅವರ ಕಾಲನಿರ್ಣಯವನ್ನೇ ಪ್ರಾಮಾಣಿಕ ವೆಂದು ಹಿಡಿದುಕೊಂಡರೆ ವಿಕ್ರಮಾದಿತ್ಯ ಅಥವಾ ಎರಡನೆಯ ಚಂದ್ರಗುಪ್ತನ ಕಾಲವು ಕ್ರಿ.ಶ. ೩೭೫ ರಿಂದ ೪೧೩ ರ ವರೆಗೆ ಇದೆ. ಆದರೆ ಇವನ ತಂದೆ ಬದುಕಿದ್ದು, ಅಶ್ವಮೇಧಯಜ್ಞ ಮಾಡಿದ್ದು ಇದಕ್ಕಿಂತ ೫ ವರುಷವಾದರೂ ಮುಂಚೆ ಇರ ಲಿಕ್ಕಿಲ್ಲವೆ ? ಹೀಗೆಂದರೆ ೩೭೦ ರಲ್ಲಿ ಆ ಮಾತಾಯಿತೆಂದು ಇಟ್ಟುಕೊಳ್ಳೋಣ. (ಸ್ಮಿತ್ ಅಶ್ವಮೇಧ ಕಾಲ ೩೫೧ ಎಂದು ಹೇಳುತ್ತಾರೆ. ಈ ಮಾತನ್ನು ಅನಕಾ ಬಿಟ್ಟರೂ ಕೂಡ) ಇನ್ನು ಕುಮಾರಗುಪ್ತನು ಪಟ್ಟಕ್ಕೆ ಬಂದ ಮೇಲೆ ಆರೇಳು ವರುಷ ವೆಂದರೆ ಕ್ರಿ.ಶ. ೪೨೦. ಆದ್ದರಿಂದ ಕಾಳಿದಾಸನ ಕಾಲವು ಕ್ರಿ.ಶ. ೩೭೦ ರಿಂದ ೪೨೦ ಎಂದು ಸಿದ್ಧವಾಯಿತು.

ವಿನ್‌ಸೆಂಟ ಸ್ಮಿತ್ ಅವರ ಒಂದು ವಾಕ್ಯವನ್ನು, "ವಿಕ್ರಮೋರ್ವಶೀಯ" ನಾಟಕದ ಭರತ ವಾಕ್ಯವನ್ನೂ ಕೊಟ್ಟು ಈ ಲೇಖನವನ್ನು ಮುಗಿಸುವಾ.

"ಮಹಾಕವಿಯ (ಕಾಳಿದಾಸನ) ಜೀವನ ಚರಿತೆಯ ಕಾರ್ಯಕ್ರಮಗಳನ್ನೆಲ್ಲ ನಿಶ್ಚಯಪೂರ್ವಕವಾಗಿ ನಿರ್ಣಯಿಸುವುದು ಕಷ್ಟಕರವಾಗಿದೆಯಾದರೂ ಆತನು (ಕಾಳಿದಾಸನು) ೨ನೆಯ ಚಂದ್ರಗುಪ್ತನ ಆಳಿಕೆಯ ಕೊನೆಯ ಕಾಲದಲ್ಲಿ ಅಥವಾ ೧ನೆಯ ಕುಮಾರಗುಪ್ತನ ಆಳಿಕೆಯ ಮೊದಲಿನ ಕಾಲದಲ್ಲಿ ಬರೆಯಲಿಕ್ಕೆ ಆರಂಭಿಸಿರು ವುದು ಸಂಭವವಾಗಿ ತೋರುತ್ತದೆ. ವಿಕ್ರಮರಾಜನ ಕೂಡ ಜೋಡಿಸಿದ ಆತನ ಪರಂಪರಾಗತ ಸಂಬಂಧವು ಹೀಗೆ ಶಾಂತ ಸಮಾಲೋಚನೆಯಿಂದ ಸ್ಥಿರಗೊಳಿಸ ಲ್ಪಟ್ಟಿತು."

— ಪ್ರಾಚೀನ ಹಿಂದುಸ್ಥಾನ, ಪುಟ ೩೦೪

ಇನ್ನು ವಿಕ್ರಮರಾಜನ (೨ ನೆಯ ಚಂದ್ರಗುಪ್ತನ) ಪ್ರಖ್ಯಾತವಾದ ಆಳಿಕೆಯ ರಹಸ್ಯವು ಏನಿದ್ದಿತೆಂಬುದು "ವಿಕ್ರಮೋರ್ವಶೀಯ" ನಾಟಕದ ಕೊನೆಯ ಈ ಭರತ ವಾಕ್ಯದಿಂದ ತಾನೇ ಸ್ಪಷ್ಟವಾಗುವುದು. ಆ ಭರತವಾಕ್ಯವು ಹೀಗಿದೆ :

"ಪರಸ್ಪರ ವಿರೋಧಿನ್ಯೋ
ರೇಕ ಸಂಶ್ರಯ ದುರ್ಲಭಮ್ ।
ಸಂಗತಂ ಶ್ರೀ–ಸರಸ್ವತ್ಯೋ–
ರ್ಭೂತಯೇಽಸ್ತು ಸದಾ ಸತಾಂ ॥ ೧ ॥

ಸರ್ವಸ್ತರತು ದುರ್ಗಾಣಿ
ಸರ್ವೋ ಭದ್ರಾಣಿ ಪಶ್ಯತು ।

ಸರ್ವಃ ಕಾಮಾನವಾಪ್ನೋತು
ಸರ್ವಃ ಸರ್ವತ್ರ ನಂದತು" ॥ ೨ ॥

"ಶ್ರೀ ಹಾಗೂ ಸರಸ್ವತಿ ದೇವಿಯರ ಸಂಗಮವು ಒಂದೇ ಕಡೆಗೆ ಇರುವುದು ದುರ್ಲಭವು. ಇಷ್ಟೇ ಅಲ್ಲ, ಇವರಿಬ್ಬರೂ ಪರಸ್ಪರ ವಿರೋಧಿನಿಯರು. ಆದರೆ ಇಂಥ ಇವರು ಪ್ರಾಣ ಮಾತ್ರರೆಲ್ಲರಲ್ಲಿಯೂ ಸದಾ ಏಕತ್ರಿತರಾಗಿರಲಿ.

ಎಲ್ಲರೂ ಕಷ್ಟಗಳನ್ನು ನೀಗಲಿ, ಎಲ್ಲರೂ ಎಲ್ಲ ಪ್ರಕಾರದ ರಕ್ಷಣೆಯನ್ನು ಹೊಂದಲಿ. ಸರ್ವರೂ ಸರ್ವಪ್ರಕಾರದ ಅಭೀಷ್ಟಗಳನ್ನು ಪಡೆಯಲಿ, ಸರ್ವರೂ ಸರ್ವಸ್ಥಳಗಳಲ್ಲಿ ಆನಂದದಿಂದ ಇರಲಿ".

— ವಿಕ್ರಮೋರ್ವಶೀಯ ನಾಟಕ, ಅಂಕ. ೫

ಓಂ ಜಗತಃ ಪಿತರೌ ವಂದೇ
ಪಾರ್ವತೀ ಪರಮೇಶ್ವರೌ ॥

ಜಗತ್ತಿನ ತಾಯಿ-ತಂದೆಗಳಾದ ಶ್ರೀಪಾರ್ವತಿ ಪರಮೇಶ್ವರರ ದಿವ್ಯ ಶ್ರೀ ಚರಣಗಳಿಗೆ ವಂದಿಸುವೆನು.

## ಪರಿಶಿಷ್ಟ

ಶ್ರೀಯುಕ್ತ ಲಾಖನದಾಸ ವಂದ್ಯೋಪಾಧ್ಯಾಯರ "ಭಾರತೀಯ ಪ್ರಾಚೀನ ಮುದ್ರಾ" ಎಂಬ ಪುಸ್ತಕದಲ್ಲಿಯೂ ವಿನ್ಸೆಂಟ ಸ್ಮಿತ್ ಅವರ ಸಿದ್ಧಾಂತವನ್ನೇ ಅನುಸರಿಸಲಾಗಿದೆ. ಇಷ್ಟೇ ಅಲ್ಲ, ತೀರ ಹೊಸದಾಗಿ ಅಂದರೆ ೧೯೪೭ ರಲ್ಲಿ ಈ ವರೆಗಿನ ಎಲ್ಲ ಸಂಶೋಧನೆಗಳನ್ನೊಳಗೊಂಡ "ದಿ ಗುಪ್ತ ಎಂಪಾಯರ್" (ಗುಪ್ತಸಾಮ್ರಾಜ್ಯ) ಎಂಬ ವಿಸ್ತಾರಪೂರ್ಣ ಗ್ರಂಥವು ಶ್ರೀಯುಕ್ತ ರಾಧಾಕುಮುದ ಮುಖರ್ಜಿಯವರಿಂದ ಬರೆಯಲ್ಪಟ್ಟು ಪ್ರಕಟವಾಗಿದ್ದು, ಅದರಲ್ಲಿಯೂ ಗುಪ್ತರಾಜರ ಕಾಲನಿರ್ಣಯವು ವಿನ್ಸೆಂಟ ಸ್ಮಿತ್ ಅವರ ಪುಸ್ತಕದಲ್ಲಿದ್ದ ಪ್ರಕಾರವೇ ಇದೆ. ಆದ್ದರಿಂದ ಇದೀಗ ನಾವು ನಿರ್ಣಯಿಸಿದ ಕಾಲನಿರ್ಣಯವೇ (ಕ್ರಿ.ಶ. ೩೭೦ ರಿಂದ ೪೫೦) ಕವಿಕಾಳಿದಾಸನ ಕಾಲನಿರ್ಣಯವು.

ಮೇಲೆ ಕಾಣಿಸಿದ ಎರಡು ಮಹತ್ವದ ಸಂಶೋಧನ ಪೂರ್ಣ ಗ್ರಂಥಗಳಿಂದ ಕಾಳಿದಾಸನ ಕಾಲನಿರ್ಣಯಕ್ಕೆ ಸಂಬಂಧಿಸಿದ ಕೆಲವು ಮಹತ್ವದ ಅಂಶಗಳನ್ನು ಇಲ್ಲಿ ಕಾಣಿಸುವುದು ಉಚಿತವೆಂದು ನನಗನಿಸುತ್ತದೆ. ಆ ಮಹತ್ವದ ಅಂಶಗಳು ಯಾವುವೆಂದರೆ :

೧) ಗುಪ್ತವಂಶದ ಮೊಟ್ಟಮೊದಲನೆಯ ರಾಜನ ಹೆಸರು ಬರಿಯ "ಗುಪ್ತ" ಎಂದಾಗಿದೆ. ಅದು "ಶ್ರೀಗುಪ್ತ" ಎಂದು ಇದೆ.

೨) ವಿಕ್ರಮ ಸಂವತ್ ಎಂಬ ಹೆಸರು ಕ್ರಿಸ್ತೀಯ ಎಂಟನೆಯ ಶತಮಾನದ ವರೆಗೂ ಇರಲಿಲ್ಲ. ಮೊದಲು ಅದಕ್ಕೆ "ಮಾಳವ ಸಂವತ್" ಎಂದೇ ಹೆಸರಿದ್ದಿತು. ಇನ್ನೂ ಪರಿಶುದ್ಧವಾಗಿ ಹೇಳಬೇಕೆಂದರೆ 'ಮಾಳವ-ಗಣ-ಸ್ಥಿತಿ" ವರ್ಷ ಎಂಬುದಾಗಿ ಇದೆ. ಇದರ ಮೇಲಿಂದ ಉಜ್ಜಯಿನಿಯಲ್ಲಿ ಚಷ್ಟಣನೆಂಬ ಶಕ (ಸಿಥಿಯನ್) ರಾಜ ನಿಂದ ಶಾಲಿವಾಹನ ಶಕಾರಂಭ ಕಾಲದಲ್ಲಿ (ಕ್ರಿ.ಶ. ೭೮) ಸತ್ರಪ ರಾಜ್ಯವು ಸ್ಥಾಪಿತ ವಾಗುವುದಕ್ಕೆ ಮುಂಚೆ ೧೩೫ ವರ್ಷಗಳ ಹಿಂದೆ ಮಾಳವ ಜಾತಿಯ ಗಣರಾಜ್ಯವೊಂದ ರಿಂದ ಮಾಳವಶಕವು ಆರಂಭವಾಗಿದ್ದಿತೆಂದು ಹೇಳಬಹುದು. ಮಧುರೆಯ ಪಾರದ (ಪಾರ್ಥಿಯನ್) ರಾಜನಾದ ಗುದಫರನು ತನ್ನ ೨೬ ನೆಯ ವರ್ಷದ ಒಂದು ಶಿಲಾ-ಶಾಸನದಲ್ಲಿ ಯಾವುದೋ ಒಂದು ಶಕದ ೧೦೩ ನೆಯ ವರ್ಷವನ್ನು ಉಲ್ಲೇಖಿಸಿದ್ದಾ ನಂತೆ. ಈತನಿದ್ದುದು ಕನಿಷ್ಕನಿಗಿಂತ (ಕ್ರಿ.ಶ. ೭೮ ಕ್ಕಿಂತ) ಮೂರು ತಲೆಮಾರು ಮುಂಚೆ. ಅಂದರೆ ಕ್ರಿಸ್ತಶಕದ ಮೊದಲನೆಯ ಶತಮಾನದ ಆದಿಭಾಗದಲ್ಲಿ; ೨೬ ವರ್ಷ ಮುಂಚೆ ಅಂದರೆ ೭೭ ನೆಯ ಸಂವತ್, ಈ ಸಂವತ್ ಎಂಬುದು ಕ್ರಿ.ಶ. ಕ್ಕಿಂತ ಮುಂಚೆ ೫೭ ವರ್ಷಗಳ ಹಿಂದೆ ಸ್ಥಾಪಿತವಾದ್ದರಿಂದ ೭೭ ನೆಯ ಸಂವತ್ ಎಂಬುದು ಕ್ರಿ.ಶ. ೨೦ ನೆಯ ವರ್ಷವಾಗುತ್ತದೆ. ಇದೇ ಗುದಫರನ ಕಾರ್ಯಾರಂಭದ ವರ್ಷ. ಗುದಫರನ ಅನಂತರ ಅವನ ವಂಶದವರು ಒಬ್ಬಿಬ್ಬರು ಆಳುವಷ್ಟರೊಳಗಾಗಿ ಕನಿಷ್ಕನ ಪೂರ್ವಜರಾದ ಕುಷಣವಂಶೀಯ ಶಕರಾಜರು ಉತ್ತರಹಿಂದುಸ್ತಾನವನ್ನು ಆಕ್ರ ಮಿಸಿದರಷ್ಟೇ ಅಲ್ಲ, ಆ ವಂಶದ ಕನಿಷ್ಕನು ಶಾಲಿವಾಹನ ಶಕವನ್ನು ಸ್ಥಾಪಿಸಿದನು. ಅದೇ ಕಾಲಕ್ಕೆ ನಾಶಿಕದಲ್ಲಿಯೂ ಉಜ್ಜಯಿನಿಯಲ್ಲಿಯೂ ಶಕರಾಜ್ಯಗಳು (ಸತ್ರಪ ವಂಶಗಳು) ಸ್ಥಾಪಿತವಾಗಿ ಕನಿಷ್ಕನಿಂದ ಸ್ಥಾಪಿತವಾದ ಶಾಲಿವಾಹನಶಕವನ್ನೇ ಬಳಕೆ ಯಲ್ಲಿ ತಂದರು. ಮುಂದೆ ಮುನ್ನೂರು ವರ್ಷ ಉಜ್ಜಯಿನಿಯ ಸತ್ರಪರು ಪ್ರಬಲ ರಾಗಿದ್ದುಕೊಂಡು ಶಾಲಿವಾಹನ ಶಕವನ್ನೇ ನಡೆಸಿದ್ದರಿಂದ ಮಾಳವ ಶಕಕ್ಕೆ ಆಗ ಯಾರೂ ಕೇಳುವವರೇ ಇಲ್ಲದಂತಾದರು. ಆದರೆ ಅದು ಹೇಗೋ ಗೊತ್ತಿಲ್ಲದೆ ಬದುಕಿಕೊಂಡು ಗುಪ್ತರಾಜರ ಕಾಲದಲ್ಲಿ ಪುನಃ ತಲೆ ಎತ್ತಿತು. ಆದರೂ ಇಡೀ ಗುಪ್ತರಾಜ್ಯದಲ್ಲಿ ಅದರ ಬಳಕೆಯಿಲ್ಲದೆ ಮಾಳವದ ಯಾವುದೋ ಮೂಲೆಯಲ್ಲಿ (ಈಗಿನ ಜಯಪುರದ ಪ್ರದೇಶದಲ್ಲಿ) ಮಾತ್ರ ಪ್ರಚಾರದಲ್ಲಿದ್ದು, ಮುಂದೆ ಕ್ರಿಸ್ತೀಯ ೮ ನೆಯ ಶತಮಾನದಲ್ಲಿ "ವಿಕ್ರಮ ಸಂವತ್" ಎಂಬ ನಾಮಾಭಿದಾನವನ್ನು ತಾಳಿ ತೆಂದು ತೋರುತ್ತದೆ. ಶ್ರೀಯುಕ್ತ ರಾಧಾಕುಮುದ ಮುಖರ್ಜಿಯವರು ಹೀಗೆ ಹೇಳುತ್ತಾರೆ :

"ಮಾಳವ ಸಂವತ್ತಿಗೆ ಕೃತಸಂವತ್ ಎಂಬ ಹೆಸರು ಸಹ ಇದ್ದಿತು. ಆದರೆ ಕ್ರಿಸ್ತೀಯ ೮ನೆಯ ಶತಮಾನದಲ್ಲಿ ಅದಕ್ಕೆ ವಿಕ್ರಮಸಂವತ್ತೆಂಬ ಅದರ ಸಂಬಂಧವನ್ನೂ ಜೋಡಿಸಲಾಯಿತು."

—ಗುಪ್ತಸಾಮ್ರಾಟ, ಪುಟ ೭೧.

(೩) ಗುಪ್ತರಾಜರ ನಾಣ್ಯಗಳ ಮೇಲಿನ ಮುದ್ರಿಕೆಗಳು ಈ ಕೆಳಗಿನಂತೆ ಇವೆ–

(ಅ) ಮೊದಲನೆಯ ಚಂದ್ರಗುಪ್ತನ ಒಂದು ಪ್ರಕಾರದ ಸುವರ್ಣ ನಾಣ್ಯಗಳಲ್ಲಿ ಇದುರಿನ ಮಗ್ಗುಲಲ್ಲಿ ಚಂದ್ರಗುಪ್ತ ಹಾಗೂ ಆತನ ಪತ್ನಿ ಕುಮಾರದೇವಿಯ ಮೂರ್ತಿಗಳಿದ್ದು ಬ್ರಾಹ್ಮೀ ಅಕ್ಷರಗಳಲ್ಲಿ "ಚಂದ್ರಗುಪ್ತ" "ಶ್ರೀಕುಮಾರದೇವಿ" ಎಂದು ಬರೆದಿದೆ. ಹಿಮ್ಮಗ್ಗುಲಲ್ಲಿ ಸಿಂಹದ ಮೇಲೆ ಕುಳಿತ ಲಕ್ಷ್ಮೀದೇವಿಯ (ದುರ್ಗಾದೇವಿಯ) ಮೂರ್ತಿಯಿದ್ದು ಕುಮಾರದೇವಿಯ ತವರುಮನೆಯ ರಾಜವಂಶದವರ ಹೆಸರಾದ "ಲಿಚ್ಛವಯಃ" (ಲಿಚ್ಛವೀಯರು) ಎಂದು ಬರೆದಿದೆ.

(ಬ) ಸಮುದ್ರಗುಪ್ತನ ಅನೇಕ ಪ್ರಕಾರದ ಅನೇಕ ಧಾತುಗಳ ನಾಣ್ಯಗಳ ಮೇಲೆ ಇದಿರಿನ ಮಗ್ಗಲಿಗೆ ಅನೇಕ ಪ್ರಕಾರದ ಮೂರ್ತಿಗಳಿದ್ದು ಬಲಗೈ ಅಥವಾ ಎಡಗೈಯ ಕೆಳಗೆ ಒಂದರ ಕೆಳಗೊಂದು ಅಕ್ಷರ
ಸ ಇಲ್ಲವೆ ಸ ಗು ಹೀಗೆ ಆತನ ಹೆಸರಿದ್ದು, ಮೂರ್ತಿಗಳ ಸುತ್ತ
ಮು ಮು ಪ್ತ
ದ್ರ ದ್ರ
ಮುತ್ತುಲೆಲ್ಲ ಒಂದೊಂದು ಶ್ಲೋಕವಿರುತ್ತದೆ. ಈ ಶ್ಲೋಕಗಳು ಹೀಗೆ ಇವೆ—

"ಅಪ್ರತಿರಥೋ ವಿಜಿತ್ಯ ಕ್ಷಿತಿಂ
ಸುಚರಿತೈರ್ದಿವಂ ಜಯತಿ ।"

"ಅಪ್ರತಿರಥೋ ವಿಜಿತ್ಯ ಕ್ಷಿತಿಂ
ಅವನಿಪರ್ದಿವಂ ಜಯತಿ ।"

"ಸಮರಶತ ವಿತತ ವಿಜಯೀ
ಜಿತಾರಿ ಪುರಜಿತೋ ದಿವಂ ಜಯತಿ ।"

ರಾಜಾಧಿರಾಜ ಪೃಥಿವೀಂ ವಿಜಿತ್ಯ
ದಿವಂ ಜಯತ್ಯಾಹೃತ ವಾಜಿಮೇಧಃ ।"

"ಕೃತಾಂತ ಪರಶುರ್ಜಯತ್ಯ
ಜಿತರಾಜ ಜೇತಾಜಿತಃ ।"

ಇತ್ಯಾದಿ, ಇತ್ಯಾದಿ. ಹೀಗೆ ಇದ್ದು ನಾಣ್ಯಗಳ ಹಿಮ್ಮಗ್ಗುಲಲ್ಲಿ ಶ್ರೀ ಲಕ್ಷ್ಮೀದೇವಿಯ ಮೂರ್ತಿಯಿದ್ದು ಆ ದೇವಿಯ ಬಲಗಡೆಗ "ಅಪ್ರತಿರಥಃ" "ಕೃತಾಂತ ಪರಶು" "ಸರ್ವ ರಾಜೋಚ್ಛೇತಾ" "ವ್ಯಾಘ್ರಪರಾಕ್ರಮಃ" "ಪರಾಕ್ರಮಃ" ಮೊದಲಾದ ಬಿರುದುಗಳಲ್ಲೊಂದು ಬರೆದಿರುತ್ತದೆ.

(ತ) ಎರಡನೆಯ ಚಂದ್ರಗುಪ್ತ ಅಥವಾ ವಿಕ್ರಮಾದಿತ್ಯನ ಅನೇಕ ಧಾತುಗಳ ಅನೇಕ ಪ್ರಕಾರದ ನಾಣ್ಯಗಳ ಮೇಲೆ ಇದಿರಿನ ಮಗ್ಗುಲಲ್ಲಿ ರಾಜನ ಅನೇಕ ಪ್ರಕಾರದ ಮೂರ್ತಿಗಳಲ್ಲೊಂದಿದ್ದು ಅದರ ಸುತ್ತುಮುತ್ತಲೆಲ್ಲ ಈ ಕೆಳಗಿನ ವಾಕ್ಯಗಳಲ್ಲೊಂದು ಇರುತ್ತದೆ.

"ಕ್ಷಿತಿಮವಜಿತ್ಯ ಸುಚರಿತೈ
ರ್ದಿವಂ ಜಯತಿ ವಿಕ್ರಮಾದಿತ್ಯಃ ।"
"ದೇವ ಶ್ರೀಮಹಾರಾಜ ಶ್ರೀಚಂದ್ರಗುಪ್ತಸ್ಯ
ವಿಕ್ರಮಾದಿತ್ಯಸ್ಯ ।"
"ನರೇಂದ್ರ ಚಂದ್ರ ಪ್ರಥಿತ(ಗುಣಃ)ದಿವಂ
ಜಯತ್ಯಜೇಯೋ ಭುವಿಸಿಂಹ ವಿಕ್ರಮಃ ।"

ಆದರೆ ಈ ವಿಕ್ರಮಾದಿತ್ಯನ ಮಾಳವ ದೇಶೋಪಯೋಗಿ ನಾಣ್ಯಗಳಲ್ಲಿ ಮುಮ್ಮಗ್ಗುಲಲ್ಲಿ ಅಲ್ಲಿಯ ಮೊದಲಿನ ಶಕರಾಜರ ನಾಣ್ಯಗಳಂತೆ ರಾಜನ ಮುಖವೂ, ಗ್ರೀಕ ಲಿಪಿಯ ಚಿಹ್ನವೂ, ವರ್ಷ ಸೂಚಕ ಅಂಕೆಯೂ ಮಾತ್ರ ಇದ್ದು, ಹಿಮ್ಮಗ್ಗುಲಲ್ಲಿ ಗರುಡನ ಮೂರ್ತಿಯಿದ್ದು, ಆ ಮೂರ್ತಿಯ ಸುತ್ತುಮುತ್ತಲೆಲ್ಲ ಈ ಕೆಳಗಿನ ವಾಕ್ಯಗಳಲ್ಲೊಂದು ಇರುತ್ತದೆ—

"ಪರಮ ಭಾಗವತ ಮಹಾರಾಜಾಧಿರಾಜ
ಶ್ರೀಚಂದ್ರಗುಪ್ತ ವಿಕ್ರಮಾದಿತ್ಯಃ ।"
"ಶ್ರೀಗುಪ್ತಕುಲಸ್ಯ ಮಹಾರಾಜಾಧಿರಾಜ
ಶ್ರೀಚಂದ್ರಗುಪ್ತ ವಿಕ್ರಮಾಂಕಸ್ಯ ।"

ಆದರೆ ಮೊದಲನೆಯ ಪ್ರಕಾರದ ನಾಣ್ಯಗಳ ಹಿಮ್ಮಗ್ಗುಲಲ್ಲಿ ಶ್ರೀಲಕ್ಷ್ಮೀದೇವಿಯ ಇಲ್ಲವೆ ಶ್ರೀ ಸಿಂಹಾಸನೀ ದುರ್ಗಾಮಾತೆಯ ಮೂರ್ತಿಯಿದ್ದು ಆ ಮೂರ್ತಿಯ ಬಲಗಡೆಗೆ "ಶ್ರೀವಿಕ್ರಮಃ" "ವಿಕ್ರಮಾದಿತ್ಯಃ" "ಸಿಂಹವಿಕ್ರಮಃ" "ಸಿಂಹಚಂದ್ರಃ" ಮೊದಲಾದ ಬಿರುದುಗಳಲ್ಲೊಂದಿರುತ್ತದೆ. ಅಲ್ಲದೆ ಕೆಲವು ನಾಣ್ಯಗಳಲ್ಲಿ ರಾಜ್ಯ ಹಸ್ತದ ಬಳಿಯಲ್ಲಿ ಒಂದರ ಕೆಳಗೊಂದು ಅಕ್ಷರವಾಗಿ ಚಂ ಇಲ್ಲವೆ ಚಂ ಗು
ದ್ರ ದ್ರ ಪ್ತ
ಎಂದು ಹೆಸರಿರುತ್ತದೆ.

(ಢ) ವಿಕ್ರಮಾದಿತ್ಯನ ಮಗ ಮೊದಲನೆಯ ಕುಮಾರಗುಪ್ತನ ನಾಣ್ಯಗಳಲ್ಲಿಯೂ ಹಿಂದಿನವರಂತೆ ಒಂದು ಮಗ್ಗುಲಿಗೆ ರಾಜಮೂರ್ತಿಯೂ ಇನ್ನೊಂದು ಮಗ್ಗುಲಿಗೆ ಶ್ರೀಲಕ್ಷ್ಮೀದೇವಿಯ ಇಲ್ಲವೆ ಮಯೂರ ವಾಹನನಾದ ಕಾರ್ತಿಕೇಯನ ಮೂರ್ತಿಯಿರುತ್ತದೆ. ಈತನ ನಾಣ್ಯಗಳಲ್ಲಿ ಮುಮ್ಮಗ್ಗುಲಲ್ಲಿ ರಾಜಮೂರ್ತಿಯ ಸುತ್ತುಮುತ್ತಲು ಈ ಕೆಳಗಿನ ವಾಕ್ಯಗಳಲ್ಲೊಂದಿರುತ್ತದೆ :

"ಗುಪ್ತಕುಲಾಮಲ ಚಂದ್ರೋ
ಮಹೇಂದ್ರ ಕರ್ಮ ಚಿತೋ ಜಯತಿ।"
"ಸಾಕ್ಷಾದಿವ ನರಸಿಂಹೋ ಸಿಂಹ
ಮಹೇಂದ್ರೋ ಜಯತ್ಯನಿಶಂ।"
"ಕ್ಷಿತಿಪತಿರಚಿತ ಮಹೇಂದ್ರಃ
ಕುಮಾರಗುಪ್ತೋ ದಿವಂ ಜಯಂತಿ।"
"ಕುಮಾರಗುಪ್ತೋ ವಿಜಯೀ
ಸಿಂಹ ಮಹೇಂದ್ರೋ ದಿವಂ ಜಯತಿ"

ಆದರೆ ಈತನ ಮಾಳವದೇಶೀಯ ನಾಣ್ಯಗಳ ಹಿಮ್ಮಗ್ಗುಲಲ್ಲಿ :

"ಪರಮ ಭಾಗವತ ಮಹಾರಾಜಾಧಿರಾಜ
ಶ್ರೀ ಕುಮಾರಗುಪ್ತ ಮಹೇಂದ್ರಾದಿತ್ಯಃ।"

ಎಂದು ವಾಕ್ಯವಿರುತ್ತದೆ. ಆದರೆ ಮೊದಲನೆಯ ಪ್ರಕಾರದ ನಾಣ್ಯಗಳ ಹಿಮ್ಮಗ್ಗುಲಲ್ಲಿ ದೇವತಾಮೂರ್ತಿಯ ಬಲಗಡೆಗೆ "ಶ್ರೀಮಹೇಂದ್ರ" "ಶ್ರೀ ಕುಮಾರಗುಪ್ತಃ", "ಶ್ರೀ ಮದಶ್ವಮೇಧ ಮಹೇಂದ್ರಃ" "ಅಜಿತ ಮಹೇಂದ್ರಃ", "ಕುಮಾರ ಮಹೇಂದ್ರಃ", "ಸಿಂಹ ಮಹೇಂದ್ರಃ" ಮೊದಲಾದ ಬಿರುದುಗಳಲ್ಲೊಂದಿರುತ್ತದೆ.

ಇನ್ನೊಂದು ವಿಶೇಷವೇನೆಂದರೆ ಮೊದಲನೆಯ ಕುಮಾರಗುಪ್ತನ ಕಾರ್ತಿಕೇಯ ದೇವತಾಮೂರ್ತಿಯುಕ್ತ ನಾಣ್ಯಗಳ ಇದುರಿನ ಮಗ್ಗುಲಲ್ಲಿ ರಾಜನು ಒಂದು ನವಿಲಿಗೆ ಹಣ್ಣಿನ ಗೊಂಚಲನ್ನು ತಿನ್ನಿಸುತ್ತ ನಿಂತಹಾಗೆ ಚಿತ್ರವಿರುತ್ತದೆ. ಹಿಮ್ಮಗ್ಗುಲಲ್ಲಿ ನವಿಲಿನ ಮೇಲೆ ಕುಳಿತ ಶ್ರೀಕಾರ್ತಿಕೇಯ ಸ್ವಾಮಿಯ ಮೂರ್ತಿಯಿರುತ್ತದೆ. ಇದುರಿನ ಮಗ್ಗುಲಿಗೆ ರಾಜನ ಸುತ್ತ ಮುತ್ತಲೂ "ಜಯತಿ ಸ್ವಭೂಮೌ ಗುಣರಾಶಿ ಮಹೇಂದ್ರ ಕುಮಾರಃ" ಎಂಬ ವಾಕ್ಯವಿದ್ದು ಹಿಮ್ಮಗ್ಗುಲಿನ ಕಾರ್ತಿಕೇಯನ ಬದಿಗೆ "ಮಹೇಂದ್ರ ಕುಮಾರಃ" ಎಂದು ಬಿರುದೂ ಹೆಸರೂ ಕೂಡಿಯೇ ಬರೆದಿರುತ್ತದೆ.

(೪) ಈ ನಾಣ್ಯಗಳ ಎರಡೂ ಮಗ್ಗುಲಿರುವ ಚಿತ್ರಗಳನ್ನು ದೊಡ್ಡ ಆಕಾರದಲ್ಲಿ ರೇಖಾಚಿತ್ರಗಳನ್ನಾಗಿ ಶ್ರೀ ರಾಧಾಕುಮುದ ಮುಖರ್ಜಿಯವರ ''The Gupta Empire'' ಎಂಬ ಪುಸ್ತಕದಲ್ಲಿ ಬಹು ಸುಂದರವಾಗಿ ಮುದ್ರಿಸಲಾಗಿದೆ. ಹೀಗೆ ಆ ಪುಸ್ತಕದಲ್ಲಿ ಮೊದಲನೆಯ ಚಂದ್ರಗುಪ್ತ, ಆತನ ರಾಣಿ ಕುಮಾರದೇವಿ, ಸಮುದ್ರಗುಪ್ತ, ವಿಕ್ರಮಾದಿತ್ಯ ಅಥವಾ ಎರಡನೆಯ ಚಂದ್ರಗುಪ್ತ ಹಾಗೂ ಮೊದಲ

ನೆಯ ಕುಮಾರಗುಪ್ತ ಇವರೆಲ್ಲರ ಸುಂದರವಾದ ಚಿತ್ರಗಳು ನೋಡಲಿಕ್ಕೆ ಸಿಗುತ್ತವೆ. ಆದರೆ ಒಂದು ನೆನಪಿನಲ್ಲಿಡತಕ್ಕ ಸಂಗತಿ ಯಾವುದೆಂದರೆ ೧ ನೆಯ ಚಂದ್ರಗುಪ್ತ ಹಾಗೂ ಆತನ ರಾಣಿ ಕುಮಾರದೇವಿಯರಿಂದ ಕೂಡಿದ ನಾಣ್ಯದ ಚಿತ್ರವನ್ನು ಅವರಿಗೆ ಸಂಬಂಧಿಸಿದ ಅಧ್ಯಾಯದಲ್ಲಿ ಮುದ್ರಿಸಿದೆ. ಸಮುದ್ರಗುಪ್ತನ ನಾಣ್ಯಗಳ ಪಟದಲ್ಲಿ ಹಿಮ್ಮಗ್ಗುಲಿಗೆ ಎಲ್ಲಕ್ಕೂ ಮೊದಲಿಗೆ "ಚಂದ್ರಗುಪ್ತನ ವರ್ಗ" ಎಂಬ ಹೆಸರಿನಿಂದ ಮುದ್ರಿಸಿದ್ದಾರೆ.

(೫) ಶ್ರೀಯುಕ್ತ ರಾಧಾಕುಮುದ ಮುಖರ್ಜಿಯವರ ಪುಸ್ತಕದಲ್ಲಿ ಕಾಳಿದಾಸನ ಬಗೆಗೆ ಬಹಳೇ ಮಹತ್ವದ ಮಾತುಗಳು ಬಂದಿವೆ. ಅವು ಯಾವುವೆಂದರೆ :

"ಎರಡನೆಯ ಚಂದ್ರಗುಪ್ತನ (ವಿಕ್ರಮಾದಿತ್ಯನ) ಅಳಿಯನಾದ (ವಾಕಾಟಕ ವಂಶದ) ಎರಡನೆಯ ರುದ್ರಸೇನನು ಸ್ವಲ್ಪ ದಿವಸವೇ ಆಳಿ ಮಡಿದದ್ದರಿಂದ (ಆ ವಂಶದವರ) ರಾಜ್ಯದ ಬಾಧ್ಯತೆಯು (ವಿಕ್ರಮಾದಿತ್ಯನ)ಮಗಳಾದ (ಪ್ರಭಾವತಿ ಗುಪ್ತ ಎಂಬವಳ) ಕಡೆಗೆ ಬಂದು, ಅದರ ಆಡಳಿತವೆಲ್ಲ ವಿಕ್ರಮಾದಿತ್ಯನಿಂದ ನಡೆಸಲ್ಪಡ ಹತ್ತಿತು. "ಸೇತುಬಂಧ"ವೆಂಬ ಪ್ರಾಕೃತ ಕಾವ್ಯದ ವ್ಯಾಖ್ಯಾಕಾರನು ತನ್ನ ವ್ಯಾಖ್ಯೆ ಯಲ್ಲಿ ಹೇಳಿದ್ದೇನೆಂದರೆ, ಚಂದ್ರಗುಪ್ತನ ಮೊಮ್ಮಗನಾದ (ಮಗಳ ಮಗನಾದ) ಎರಡ ನೆಯ ಪ್ರವರಸೇನನು ಆತನ (ಅಂದರೆ ವಿಕ್ರಮಾದಿತ್ಯನ) ಆಸ್ಥಾನದಲ್ಲಿದ್ದುಕೊಂಡು ಒಂದು ಕಾವ್ಯವನ್ನು ರಚಿಸಿದನು. ಹಾಗೂ ಅದನ್ನು ವಿಕ್ರಮಾದಿತ್ಯನ ಅಪ್ಪಣೆಯಂತೆ ಕಾಳಿದಾಸನ ಕೈಗೆ ತಿದ್ದಲಿಕ್ಕೆ ಕೊಡಲಾಯಿತು. ಈ ಆಖ್ಯಾಯಿಕೆಯ ಪ್ರಕಾರವಾಗಿ ಎರಡನೆಯ ಚಂದ್ರಗುಪ್ತ ವಿಕ್ರಮಾದಿತ್ಯನೂ, ಕಾಳಿದಾಸನೂ (ವಾಕಾಟಕ ವಂಶದ) ಎರಡನೆಯ ಪ್ರವರಸೇನನೂ ಸಮಕಾಲೀನರಾಗಿರುವರು. ಇನ್ನೊಂದು ಸಂಗತಿ ಯೆಂದರೆ, ಭೋಜನು ತನ್ನ "ಶೃಂಗಾರ ಪ್ರಕಾಶ"ದಲ್ಲಿ ಕಾಳಿದಾಸನದೆಂದು ಒಂದು ಶ್ಲೋಕವಿದ್ದು, ಅದರಲ್ಲಿ ಕಾಳಿದಾಸನು ಕುಂತಳಾಧಿಪತಿಯ ಆಸ್ಥಾನದಲ್ಲಿ ನಡೆಯು ತ್ತಿದ್ದ ವಿಲಾಸೀಜೀವನದ ಬಗೆಗೆ ಗುಪ್ತಸಾಮ್ರಾಟನಿಗೆ ವರದಿಯನ್ನು ಒಪ್ಪಿಸಿದ ಹಾಗೆ ಹೇಳಲಾಗಿದೆ. ಆ ಕುಂತಳೇಂದ್ರನೆಂದರೆ ಆತನ (ಗುಪ್ತಸಾಮ್ರಾಟನ) ಮೊಮ್ಮಗನಾದ (ವಾಕಾಟಕ ವಂಶದ) ಎರಡನೆಯ ಪ್ರವರಸೇನನೇ ಆಗಿರಲಿಕ್ಕೇಬೇಕು. ಕ್ಷೇಮೇಂದ್ರನ "ಔಚಿತ್ಯವಿಚಾರ"ದಲ್ಲಿಯೂ ಸಹ ಕಾಳಿದಾಸನು ಕುಂತಳದೇಶಕ್ಕೆ ರಾಯಭಾರಿಯಾಗಿ ಹೋದ ವಿಷಯವನ್ನು "ಕುಂತಳದೌತ್ಯ"ವೆಂಬ ಶಬ್ದಗಳಿಂದ ಉಲ್ಲೇಖಿಸಲಾಗಿದೆ. ಇದಲ್ಲದೆ ಎರಡನೆಯ ಪ್ರವರಸೇನನ ಪಟ್ಟನ್ ಎಂಬಲ್ಲಿಯ ತಾಮ್ರಶಾಸನದಲ್ಲಿ ಅದನ್ನು ಒಬ್ಬ ಕಾಳಿದಾಸನು ಬರೆದುದಾಗಿ ನಿರ್ದಿಷ್ಟಪಡಿಸಲಾಗಿದೆ."

—ಗುಪ್ತಸಾಮ್ರಾಜ್ಯ, ಪು. ೪೭

ಈ ಕುಂತಳವೆಂಬುದು ಕರ್ನಾಟಕವೇ ಎಂಬುದನ್ನು ಲಕ್ಷದಲ್ಲಿಡಬೇಕು. ಆಗಿನ ಕರ್ನಾಟಕವು ನರ್ಮದಾ ನದಿಯವರೆಗೆ ಹಬ್ಬಿತ್ತು. ಇದನ್ನು ಸಾಮ್ರಾಟ ಹರ್ಷ ಹಾಗೂ ರಾಜಾಧಿರಾಜ ಎರಡನೆಯ ಪುಲಿಕೇಶಿ ಇವರ ಚರಿತ್ರದಿಂದ ತಿಳಿದುಕೊಳ್ಳ ಬಹುದು. ಹರ್ಷನಿಗೂ ಪುಲಿಕೇಶಿಗೂ ಯುದ್ಧವಾಗಿ ಪುಲಿಕೇಶಿಯು ಹರ್ಷನಿಗೆ ಸೋಲದೆ ಹೋಗಿದ್ದರಿಂದ ಹರ್ಷನು ಪುಲಿಕೇಶಿಯೊಡನೆ ಒಪ್ಪಂದ ಮಾಡಿಕೊಂಡು ನರ್ಮದಾ ನದಿಯೇ ಎರಡೂ ಸಾಮ್ರಾಜ್ಯಗಳಿಗೆ ಸೀಮೆಯಾಗಿರಬೇಕಂದು ನಿರ್ಣಯಿ ಸಿದ ವಿಷಯವು ಇತಿಹಾಸ ಪ್ರಸಿದ್ಧವಾಗಿದೆ. ಬಾದಾಮಿಯ ಚಾಲುಕ್ಯರ ರಾಜ್ಯವು ಸ್ಥಾಪಿತವಾಗುವ ಮುಂಚೆ ಬನವಾಸಿಯಲ್ಲಿ ಕದಂಬರು ಆಳುತ್ತಿದ್ದು ಉತ್ತರ ಕರ್ನಾ ಟಕ ಹಾಗೂ ಈಗಿನ ಮಹಾರಾಷ್ಟ್ರವೆನಿಸಿಕೊಳ್ಳುತ್ತಿರುವ ಭಾಗವು ಗುಪ್ತರಾಜರ ಆಪ್ತ ರಾದ ವಾಕಾಟಕ ರಾಜರ ಆಳಿಕೆಗೆ ಒಳಗಾಗಿತ್ತೆಂದು ತೋರುತ್ತದೆ. ಈ ವಂಶದವರ ತಾಮ್ರಶಾಸನ ಹಾಗೂ ಶಿಲಾಸನಗಳು ಐದಾರು ಮಾತ್ರವೇ ಸಿಕ್ಕಿದ್ದು, ಅವುಗಳಲ್ಲಿ ಒಂದು ಅಜಂತಾದ ೧೬ನೆಯ ನಂಬರಿನ ಗುಹೆಯಲ್ಲಿಯೂ, ಇನ್ನೊಂದು ಅಜಂತಾದ ನೆರೆಯಲ್ಲಿಯೇ ಇರುವ ಘಟೋತ್ಕಚ ಗುಹೆಯಲ್ಲಿಯೂ ಇದ್ದು, ಪ್ರಭಾವತಿ ಗುಪ್ತಾ ಇವಳ ಒಂದು ತಾಮ್ರಶಾಸನವು ಪುಣೆಯಲ್ಲಿ ಸಿಕ್ಕಿದೆ.

ಈ ವಂಶದವರು ವಾರ್ಹಡ ಮಧ್ಯಪ್ರಾಂತ ಮೊದಲು ಮಾಡಿ ಕರ್ನಾಟಕದ ವರೆಗಿನ ಭಾಗವನ್ನೆಲ್ಲ ಆಳುತ್ತಿದ್ದರೆಂದು ಅಜಂತಾ ಗುಹೆಯ ಶಿಲಾಶಾಸನಗಳಲ್ಲಿ ಹೇಳಿದೆಯಂತೆ. ಇನ್ನೊಂದು ವಿಶೇಷವೇನೆಂದರೆ, ಕನ್ನಡ ನಾಡಿನ ತಾಳಗುಂದ ಎಂಬಲ್ಲಿಯ ಕದಂಬರ ಶಿಲಾಶಾಸನದಲ್ಲಿ ಕದಂಬರಾಜನಾದ ಕಾಕುತ್ಸ್ಥವರ್ಮನು (ಕ್ರಿ.ಶ. ೪೩೫ ರಿಂದ ೪೭೫ ರ ವರೆಗೆ ಆಳಿದವನು) ತನ್ನ ಮಗಳನ್ನು ಗುಪ್ತರಾಜರಿಗೆ ಮದುವೆ ಮಾಡಿಕೊಟ್ಟಿದ್ದನೆಂದು ಹೇಳಲಾಗಿದೆಯಂತೆ. ಹಾಗೂ ಮೊದಲನೆಯ ಕುಮಾರಗುಪ್ತನ ಹೆಂಡತಿಯಾದ ಅನಂತಾದೇವಿಯೇ ಕದಂಬ ವಂಶದ ರಾಜಕನ್ಯೆ ಯೆಂದು ಕೆಲವು ಜನ ಇತಿಹಾಸ ಸಂಶೋಧಕರು ಅಭಿಪ್ರಾಯ ಪಡುವರಂತೆ.

ಏನೇ ಇರಲಿ, ಕಾಳಿದಾಸನು ಕೆಲಕಾಲ ಕುಂತಳ ನಾಡಿನಲ್ಲಿ ಅಜಂತಾದ ಸಮೀಪ ದಲ್ಲಿ ಎಲ್ಲಿಯೋ, ಕೆಲಕಾಲ ವಾಕಾಟಕ ರಾಜನಾದ ಎರಡನೆಯ ಪ್ರವರಸೇನನ ಆಸ್ಥಾನ ದಲ್ಲಿ ಗುಪ್ತರಾಜರ ರಾಯಭಾರಿಯಾಗಿ ಇದ್ದನೆಂದೂ ಇಷ್ಟೆಲ್ಲ ಮಾತಿನಿಂದ ಸಿದ್ಧ ವಾಗುತ್ತದೆ.

ಕಾಳಿದಾಸನ ಈ ಕುಂತಳ ರಾಯಭಾರದಿಂದ ಆತನ "ಮೇಘದೂತ" ಕಾವ್ಯದ ಮೇಲೆ ಬಹಳ ಬೆಳಕು ಬೀಳುತ್ತದೆ. ಅದೇನೆಂದರೆ ಮೇಘದೂತನ ಯಕ್ಷನು ತನ್ನ ಒಡೆಯನಾದ ಕುಬೇರನ ಶಾಪದಿಂದ ನರ್ಮದಾ, ಗೋದಾವರಿಗಳ ನಡುವೆ ಎಲ್ಲಿಯೋ ಇರುವ ರಾಮಗಿರಿಯೆಂಬ ವನಗಿರಿಗಳಿಂದ ಕೂಡಿದ ಪುಣ್ಯಗ್ರಾಮದಲ್ಲಿ ವಾಸವಾಗಿದ್ದು ಕೊಂಡು, ಅಲಕಾವತಿ (ಕಾಶ್ಮೀರ ?)ಯಲ್ಲಿರುವ ತನ್ನ ಪತ್ನಿಗಾಗಿ ಪರಿತಪಿಸುತ್ತಾನೆ.

ರಾಮಗಿರಿ ಹಾಗೂ ಅಲಕಾವತಿಗಳ ನಡುವೆ ಇರುವ ವಿದಿಶಾ-ಉಜ್ಜಯಿನಿಗಳ ಸೊಬಗನ್ನು ನೆನೆನೆನೆದು ಹೊತ್ತು ಕಳೆಯುತ್ತಾನೆ. ಇದು ಸ್ವಯಂ ಕಾಳಿದಾಸನ ಚರಿತ್ರೆಯೇ ಸರಿ. ಕಾಶ್ಮೀರದ "ಮಾತೃಗುಪ್ತ"ನೇ ಕಾಳಿದಾಸನೆಂದು ಕೆಲವು ಜನ ಇತಿಹಾಸ ಸಂಶೋಧಕರು ತಿಳಿಯುತ್ತಿರುವ ಮಾತಿಗೂ ಈ ಕಾವ್ಯದಿಂದ ಪುಷ್ಟಿ ದೊರೆಯುತ್ತದೆ. ಹೇಗೆಂದರೆ - "ಯತ್ರೋನ್ಮತ್ತ ಭ್ರಮರ ಮುಖರಾಃ ಪಾದಪಾಃ ನಿತ್ಯಪುಷ್ಪಾಃ" (ಎಲ್ಲ ಗಿಡಗಳಿಗೆ ಹನ್ನೆರಡೂ ತಿಂಗಳು ಹೂಗಳಿರುವುದರಿಂದ ಯಾವಾಗಲೂ ಅಲ್ಲಿ ಭ್ರಮರಗಳ ಗುಂಜಾರವವು ಕೇಳಿಸುವುದೋ.. ) ಎಂಬ ಪದ್ಯವನ್ನೋದಿದರೆ ಅದು ಕಾಶ್ಮೀರವಲ್ಲದೆ ಮತ್ತಾವುದಾದೀತು? ಇರಲಿ, ಕಾಳಿದಾಸನು ಅನಿಚ್ಛೆಯಿಂದ ಕುಂತಳ ದೇಶಕ್ಕೆ ಸ್ವಲ್ಪ ಕಾಲದ ಮಟ್ಟಿಗೆ ರಾಯಭಾರಿಯಾಗಿ ಬಂದಾಗ ತನ್ನ ಹೆಂಡತಿಯನ್ನು ಅವಳ ತವರೂರಾದ ಕಾಶ್ಮೀರದ ಯಾವುದೋ ಒಂದು ಪಟ್ಟಣಕ್ಕೆ ಕಳಿಸಿ ಬಂದಿದ್ದನೆಂದು ತೋರುತ್ತದೆ. ಅತ್ತ ಕಾಶ್ಮೀರವೂ ದೂರವಾಯಿತು. ಇತ್ತ ವೈಭವದಿಂದೊಪ್ಪುವ ಉಜ್ಜಯಿನಿ ವಿದಿಶಾಗಳೂ ಪರವಾದವು. ಇದೆಲ್ಲದರ ಕಥೆಯೇ "ಮೇಘದೂತ" ಎಂಬುದು ಸ್ಪಷ್ಟವೇ ಇದೆ.

ಕಾಳಿದಾಸನ ಹೆಸರು ಮಾತೃಗುಪ್ತನೆಂದೇ ಇರಲಿ ಅಥವಾ ಇನ್ನಾವುದೇ ಇರಲಿ, ಆದರೆ ಅವನು ಹೂ-ಗಿಡ-ಬಳ್ಳಿಗಳ ದೇಶದವನೆಂಬುದು ಸ್ಪಷ್ಟ. ಅದು ಕಾಶ್ಮೀರವೇ ಆಗಿರಬಹುದೆಂಬುದರಿಂದಲೂ ಬಾಧಕವೇನೂ ಇಲ್ಲ.

ಇನ್ನು "ನಂದಿತಾ" ಎಂಬ ಬಂಗಾಲೀ ಮಾಸಪತ್ರಿಕೆಯಲ್ಲಿ "ಕಾಶ್ಮೀರದ ಮಾತೃಗುಪ್ತನೇ ಕಾಳಿದಾಸನೆಂದು ಕೆಲವರ ಅಭಿಪ್ರಾಯವಿರುತ್ತದೆ. ಅವನು "ರಾಜತರಂಗಿಣಿ"ಯನ್ನು ಬರೆದಿದ್ದಾನೆ." ಎಂದು ಹೇಳಲಾಗಿದೆಯೆಂದು ನನ್ನ ಲೇಖನದ ಪ್ರಾರಂಭದಲ್ಲಿಯೇ ಹೇಳಿರುವೆನಷ್ಟೆ. ಆದರೆ ಕಾಶ್ಮೀರ ರಾಜವಂಶದ ಚರಿತ್ರವಾದ "ರಾಜತರಂಗಿಣಿ"ಯನ್ನು ಬರೆದವನು ಕ್ರಿಸ್ತೀಯ ೧೨ ನೆಯ ಶತಮಾನದ "ಕಲ್ಹಣ"ನೆಂಬವನೆಂಬುದು ಸರ್ವಶ್ರುತ. ಹೀಗಿದ್ದ ಬಳಿಕ "ಮಾತೃಗುಪ್ತ"ನು ಅದರ ಕರ್ತನೆಂಬುದು ಹೇಗೆ? ರಾಜತರಂಗಿಣಿ ಕ್ರಿಸ್ತಶಕದ ಆರಂಭದ ಶತಮಾನಗಳಿಂದ ಮೊದಲು ಮಾಡಿ ೧೨ನೆಯ ಶತಮಾನದವರೆಗಿನ ಕಾಶ್ಮೀರ ದೇಶದ ರಾಜರ ಚರಿತ್ರೆಯು ಬಂದಂತೆ ಕಾಣುತ್ತದೆ. ಆದ್ದರಿಂದ ಆ ಗ್ರಂಥದ ಮೊದಮೊದಲಿನ ಭಾಗವನ್ನು "ಮಾತೃಗುಪ್ತ"ನು ಬರೆದಿರಬಹುದೇ ? ಇವೆಲ್ಲ ವಿಷಯಗಳನ್ನು ನಾನು 'ರಾಜತರಂಗಣಿ' ಮುಂತಾದ ಗ್ರಂಥಗಳನ್ನೋದಿ ನೋಡಿದ ಮೇಲೆ ಮತ್ತೊಂದು ಲೇಖನವನ್ನು ಬರೆದು ಈ ವಿಷಯವನ್ನು ವಿಮರ್ಶಿಸುತ್ತೇನೆ.

ಇನ್ನೊಂದು ವಿಷಯವನ್ನು ಉಲ್ಲೇಖಿಸಿ ಈ ಪರಿಶಿಷ್ಟವನ್ನು ಮುಗಿಸುವೆ.

(೬) "ರಘುವಂಶ" "ಕುಮಾರಸಂಭವ"ಗಳೂ ಪರ್ಯಾಯವಾಗಿ ಗುಪ್ತ ವಂಶದ ರಾಜರ ಕೀರ್ತಿಯನ್ನೇ ಸೂಚಿಸುತ್ತವೆಯೆಂದು ಮೂಲ

ಎರಡರಲ್ಲಿಯೂ ಸಾಧಾರಣವಾಗಿದ್ದು 'ಚ'ಕಾರ 'ಟ'ಕಾರಗಳಿಂದ ಅರ್ಥಭೇದವಾಯಿತು. ಚಕಾರವು ಆರ್ದ್ರತೆ ಮತ್ತು ಮೃದುತ್ವ ಗುಣವನ್ನು ಟಕಾರವು ಶುಷ್ಕತೆ ಮತ್ತು ಕಠಿಣತೆಯನ್ನು ಹೊರಪಡಿಸುವದು. ಈಗ ಈ 'ಕಚ್' ಮತ್ತು 'ಕಟ್' ಎಂಬ ಎರಡು ಅನುಕರಣವಾಚಕಗಳ ಮೂಲದಿಂದ ಹುಟ್ಟಿದ 'ಕಚ್ಚು' ಮತ್ತು 'ಕಡಿ' ಎಂಬ ಎರಡು ಕ್ರಿಯಾರೂಪಗಳ ಸೂಕ್ಷ್ಮ ಭೇದವನ್ನು ತಿಳಿದುಕೊಳ್ಳಬಹುದಲ್ಲವೇ ? ಮೆತ್ತಗಿನ ಪದಾರ್ಥಗಳ ಸಂಬಂಧ ಬಂದಾಗ 'ಕಚ್ಚು' ಎಂಬ ಶಬ್ದವನ್ನು, ಬಿರುಸು ಪದಾರ್ಥಗಳ ಸಂಬಂಧ ಬಂದಾಗ 'ಕಡಿ' ಎಂಬ ಶಬ್ದವನ್ನು ಬಳಸುವದು ಸಶಾಸ್ತ್ರವಲ್ಲವೆ ? ಕಸಕು, कचरा, ಗಚ್ಚು, ಗಚ್ಚಿಯಾಗಿ, ಕಸುವು, ಗಚಿಕೆ ಮುಂತಾದ ಶಬ್ದಗಳಲ್ಲಿ 'ಕಚ್' ಎಂಬ ಮೂಲ ಬೀಜದ ಭಾವವನ್ನು ನಾವೀಗ ಸ್ಪಷ್ಟವಾಗಿ ಕಂಡುಕೊಳ್ಳಬಹುದಲ್ಲವೆ ? ಇದರಂತೆಯೇ ಕಡಲೆ, ಕಟ್ಟಿಗೆ, कठिण, ಕಟ್ಟು (ಬಿಗಿ) ಕಟುಕ, ಕಟಿ (ಖಟಿ), ಕಟೆ, काष्ठ, ಗಟ್ಟಿ, ಕಡಿ, ಕಡುತರ, खडतर ಮುಂತಾದ ಶಬ್ದಗಳಲ್ಲಿ 'ಕಟ್' ಎಂಬ ಮೂಲ ಬೀಜದಿಂದ ಕಾಠಿಣ್ಯವು ಒಡೆದು ತೋರುವದಿಲ್ಲವೆ ?

ಕೆಸರಿನಲ್ಲಿ ಅಡ್ಡಾಡುವಾಗ ಪಚಲ್‌ಪುಚಲ್ ಎಂದು ಸಪ್ಪಳಾಗುವದಷ್ಟೆ ? ಪಿಚಕಾರಿಯ ನೀರು ಪಿಚಿಪಿಚಿ ಎಂದು ಸಿಡಿಯುವದಿಲ್ಲವೆ ? 'ಪಿಚ್' 'ಪುಚ್' ಇವೆಲ್ಲಾ ಒಂದೇ ಬಗೆಯ ಶಬ್ದಗಳು. ಇಲ್ಲಿ ಆರ್ದ್ರತೆಯು ಪರಮಾವಧಿಗೆ ಮುಟ್ಟಿರುತ್ತದೆ. 'ಪಚ್' ಎಂಬ ಮೂಲ ಬೀಜದಿಂದಲೇ ಪಸಿ (ಹಸಿ) ಪಸುರ್, ಪಿಚ್ಚು, ಬಚ್ಚಲು, ಪಯಿರು(=ಪಸಿರು) ಬೆಳೆ, ಪಚ್ಚ (ಮಣಿ) ಮುಂತಾದ ಶಬ್ದಗಳು ಹುಟ್ಟಿರುವವೆಂಬುದರಲ್ಲಿ ಏನು ಸಂದೇಹವಿದೆ ?

'ಕಚ್' ಎಂಬುದರೊಳಗಿನ ಚಕಾರಕ್ಕೆ ಇಲ್ಲಿ ಪಕಾರವು ಸೇರಿ 'ಪಚ್' ಅತ್ಯಾರ್ದ್ರತೆಯ ಶಬ್ದ ಹುಟ್ಟಿದೆ. ಹಾಗಾದರೆ ಪೂರ್ವಾಕ್ಷರಗಳಾದ ಕ ಪಗಳಲ್ಲಿ ಪಕಾರವು ಆರ್ದ್ರತೆಗೆ ಹೆಚ್ಚಿನ ಸಹಾಯವನ್ನು ನೀಡಿದಂತಾಯಿತು. ಹೀಗೆಂದ ಬಳಿಕ ಚಕಾರದಲ್ಲಿ ಆರ್ದ್ರತೆಯಿರುವಂತೆ ಪಕಾರದಲ್ಲಿ ಅದೇ ಜಾತಿಯದೊಂದು ಇನ್ನಾವುದೋ ಗುಣವಿರಬೇಕು. ಟಪ್, ಧಪ್, ರಪ್, ಚಪ್, ಸುಪ್ ಮುಂತಾದ ಶಬ್ದಗಳಲ್ಲಿ ಪಕಾರದ ಗುಣವನ್ನು ಪರೀಕ್ಷಿಸಬಹುದಾಗಿದೆ. ಇಲ್ಲಿ ಪತನ ಮತ್ತು ತಾಡನವು ಮೃದುತ್ವ ವಸ್ತುವಿನ ಮೇಲೆ ನಡೆದಂತೆ ಭಾಸವಾಗುವದಿಲ್ಲವೆ ? 'ಟ'ಕಾರದಲ್ಲಿ ಕಠಿಣತೆಯನ್ನು ಮೊದಲೇ ಕಂಡಿರುವೆವಷ್ಟೇ? ಈಗ ಆ 'ಕಟ್' ಎಂಬ ಶಬ್ದದೊಳಗಿನ ಮೊದಲಿನ ಅಕ್ಷರವಾದ 'ಕ'ಕಾರವನ್ನು ತೆಗೆದು 'ಪ'ಕಾರವನ್ನು ಜೋಡಿಸುವಾ. ಈಗೇನಾಯಿತು? 'ಪಟ್' ಎಂಬ ಶಬ್ದದಿಂದ ಬಿರುಸು ಹಲಗೆಯ ಮೇಲೆ ಕಸುಗಾಯಿ ಕಸುವಿನಿಂದ ಬಿದ್ದಂತೆ ಭಾಸವಾಗುವದು. ಆದರೆ ಅದೇ ಕಾಯಿಯು ಸಾಧಾರಣವಾದ ನೆಲದ ಮೇಲೆ ಬಿದ್ದಿದ್ದರೆ 'ಟಪ್' ಎಂದು ಸಪ್ಪಳಾಗುತ್ತಿತ್ತು. ಎರಡೂ ಮಿದುವಾಗಿದ್ದರೆ 'ದಪ್' ಎಂದು ಸದ್ದಾಗುವದು. ಈಗ ಕೈಕೈ ಬಾರಿಸಿದರೆ 'ಚಪ್'

ಎಂದು ಚಪ್ಪಾಳೆಯಾಗುವದರ ಕಾರಣವನ್ನು ಸುಲಭವಾಗಿ ಕಂಡುಹಿಡಿಯಬಹುದಲ್ಲವೇ ?

ಇದೇ ಪದ್ಧತಿಯಿಂದ ನಾವು ಪ್ರತಿಯೊಂದು ಅಕ್ಷರದ ಬಗ್ಗೆ ಆಲೋಚಿಸಬೇಕು. ಒಟ್ಟಿಗೆ ಒಂದು ಮೂಲಸೂತ್ರವನ್ನು ಮಾತ್ರ ನಾವೀಗ ಸ್ಪಷ್ಟವಾಗಿ ಕಂಡಂತಾಯಿತು. ಅನುಕರಣವಾಚಕಗಳಲ್ಲಿ ಎರಡನೆಯ ಅಕ್ಷರವು ಮುಖ್ಯವಾಗಿದ್ದು ಮೊದಲಕ್ಕರವು ಅದಕ್ಕೆ ಪೋಷಕವಾಗಿ ಇರುತ್ತದೆ.

ಈಗ 'ಟ್' ಎಂಬ ಕಾಠಿಣ್ಯದರ್ಶಕ ಅಕ್ಷರವನ್ನೇ ನಾವು ಮುಖ್ಯವಾಗಿಟ್ಟು ಕೊಂಡು, ಅದರ ಹಿಂದೆ ಪ್ರತಿಯೊಂದು ವರ್ಗದ ಅಕ್ಷರಗಳನ್ನು ಜೋಡಿಸಿ ಪರೀಕ್ಷಿಸೋಣ :

ಕಟ್– ಈ ಸಪ್ಪಳವು ಕಲ್ಲು ಕಟ್ಟಿಗೆಗಳಲ್ಲಿ ಕೇಳಿಸುತ್ತದೆ.

ಚಟ್– ಬೇಗನೇ ಮುರಿಯುವ ಕಡ್ಡಿಗಳನ್ನು ಮತ್ತು ಉರಿಯಲ್ಲಿ ಇದು ಕೇಳಿಸುವದು.

ಟಟ್– (ಇದು ಸಂದಿಗ್ಧ ಅಥವಾ ಅಶಕ್ಯ ?)

ತಟ್– ದಾರವನ್ನು ಹರಿಯುವಾಗ ಈ ಸಪ್ಪಳ ಹುಟ್ಟುತ್ತದೆ.

ಪಟ್- ನೆಲದ ಮೇಲೆ ಮಡಕೆ ಬಿದ್ದು ಒಡೆಯುವಾಗ ಇದು ಕೇಳಿಸುತ್ತದೆ.

ಇನ್ನು 'ಪ'ಕಾರವನ್ನು ಮೊದಲಿಗಿಟ್ಟುಕೊಂಡು ಅದರ ಮುಂದೆ ಪ್ರತಿಯೊಂದು ವರ್ಗದ ಪ್ರಥಮಾಕ್ಷರವನ್ನು ಜೋಡಿಸಿ ನೋಡುವಾ :

ಪಕ್– ದೀಪ ಆರುವಾಗ,

ಪಚ್– ಕೆಸರನ್ನು ಗೋಡೆಗೆ ಒಡಿಯುವಾಗ,

ಪಟ್– ನೆಲದ ಮೇಲೆ ಪರಿವಾಣ ಬಿದ್ದು ಒಡೆಯುವಾಗ,

ಪತ್– ಎಮ್ಮೆಯ ಸಗಣೆ ನೆಲದ ಮೇಲೆ ಬೀಳುವಾಗ,

ಪಪ್– (ಸಂದಿಗ್ಧ ?)

ಈ ಪದ್ಧತಿಯಿಂದ ಅಕ್ಷರ ಶಕ್ತಿಗಳನ್ನು ಕಂಡುಹಿಡಿಯುವದು ಸುಲಭ ಸಾಧ್ಯವಿದೆಯೆಂದು ನನಗನಿಸುತ್ತದೆ. ಆದರೆ ನಾನಿನ್ನೂ ಸಂಪೂರ್ಣವಾಗಿ ಸಿದ್ಧಾಂತಕ್ಕೆ ಬಂದು ಮುಟ್ಟಿಲ್ಲವಾದ್ದರಿಂದ ಇಷ್ಟು ಮಾತ್ರ ಸೂಚಿಸುವೆ.

ಮೇಲ್ಕಂಡ ಪದ್ಧತಿಯಿಂದ ಮೊದಲಿಗೆ ವರ್ಗೀಯ ವ್ಯಂಜನಗಳಲ್ಲಿ ಪ್ರತಿಯೊಂದು ವರ್ಗದ ಪ್ರಥಮಾಕ್ಷರದ ಶಕ್ತಿ ವಿಶೇಷವನ್ನು ಕಂಡುಹಿಡಿದರೆ ವರ್ಗದ ಇನ್ನುಳಿದ ಅಕ್ಷರಗಳ ಶಕ್ತಿಯು ಬಹುತರ ಬಹಳ ಸುಲಭವಾಗಿ ಹೊಳೆಯುವಂತಿದೆ. ಈಗ ಒಂದು ಬಗೆಯ ಪ್ರಯೋಗ ಪದ್ಧತಿಯನ್ನು ಅನುಸರಿಸುವಾ :

ಚಣ್– ಚಿಕ್ಕ ನಾಣ್ಯದ ಸಪ್ಪುಳು
ಛಣ್– ದೊಡ್ಡ ನಾಣ್ಯದ ಸಪ್ಪುಳು
ಜಣ್– ಚಿಕ್ಕ ಜಾಂಗಟಿಯ ಸಪ್ಪುಳು
ಝಣ್– ದೊಡ್ಡ ಜಾಗಟಿಯ ಸಪ್ಪುಳು
ಞಣ್– (ಸಂದಿಗ್ಧ ?)
ಟಣ್ ಚಿಕ್ಕ ಬಟ್ಟಲಿನ ಸಪ್ಪುಳು
ಠಣ್– ದೊಡ್ಡ ಬಟ್ಟಲಿನ ಸಪ್ಪುಳು
ಡಣ್– ಚಿಕ್ಕ ಹಂಡೆಯ ಸಪ್ಪುಳು
ಢಣ್– ದೊಡ್ಡ ಹಂಡೆಯ ಸಪ್ಪುಳು
ಣಣ್– (ಸಂದಿಗ್ಧ ?)

ಮೇಲ್ಕಾಣಿಸಿದ ಪ್ರಯೋಗದಿಂದ ಏನು ತಿಳಿಯಿತು ? ವರ್ಗದ ಪಂಚಮಾಕ್ಷರದ ವಿಷಯವು ಸಂದಿಗ್ಧವಾಗಿದೆಯಾದರೂ ಉಳಿದ ನಾಲ್ಕು ಅಕ್ಷರಗಳ ವಿಷಯದಲ್ಲಿ ಸ್ಪಷ್ಟವಾದ ಅಭಿಪ್ರಾಯವುಂಟಾಗದಿರದು. ವರ್ಗದ ಮೊದಲಿನೆರಡಕ್ಷರಗಳ ನಾದವು ಸಣ್ಣಾಗಿದ್ದು ಮೇಲಿನ ಸಪ್ತಕದ ಸ್ವರಗಳಿಗೆ ಸರಿಹೋಗುತ್ತದೆ. ಮತ್ತು ಕೊನೆಯ ಎರಡಕ್ಷರಗಳ ನಾದವು ದೊಡ್ಡದಾಗಿ ಕೆಳಗಿನ ಸಪ್ತಕದ ಸ್ವರಗಳಿಗೆ ಸರಿಯಾಗಿದೆ. ಇದರ ಮೇಲಿಂದ ಮೊದಲಿನೆರಡಕ್ಷರಗಳಿಗೆ ಕರ್ಕಶವರ್ಣಗಳೆಂದೂ ಕೊನೆಯವೆರಡಕ್ಕೆ ಮೃದುವರ್ಣಗಳೆಂದೂ ಪ್ರಾಚೀನರು ಹೆಸರಿಟ್ಟಿರುವದು ಸಮಂಜಸವಾಗಿದೆ. ಅಲ್ಲದೆ ಒಂದೊಂದು ವರ್ಗದೊಳಗಿನ ಅಕ್ಷರಗಳಲ್ಲಿ ಹೆಚ್ಚು ಕಡಿಮೆ ಪ್ರಮಾಣದಿಂದ ಒಂದೇ ಜಾತಿಯ ಸಪ್ಪುಳವನ್ನು ಹುಟ್ಟಿಸುತ್ತಿವೆ.

ಇಲ್ಲಿ ಸ್ಪಷ್ಟವಾಗಿ ಕಾಣಿಸುವ ಇನ್ನೊಂದು ವಿಷಯವೇನೆಂದರೆ ವರ್ಗ ಪಂಚಮಾಕ್ಷರಗಳು 'ನಾದ'ಗಳನ್ನು, ಉಳಿದ ವರ್ಗೀಯಾಕ್ಷರಗಳೆಲ್ಲ 'ಸದ್ದು'ಗಳನ್ನು ಹುಟ್ಟಿಸುತ್ತವೆ.

ಇದರಂತೆಯೇ ಇನ್ನಾವುದೊಂದು ಉಪಪತ್ತಿಯನ್ನು ಹುಡುಕಿಕೊಂಡು ಅವರ್ಗೀಯ ವ್ಯಂಜನಗಳ ಬಗೆಗೂ ಆಲೋಚಿಸಬಹುದು. ಹೀಗೆ ಒಟ್ಟಿಗೆ ವ್ಯಂಜನ ವರ್ಗಗಳ ವಿಷಯವೇನೋ ತೀರಿದಂತಾಯಿತು. ಇನ್ನು ಸ್ವರ ವರ್ಣಗಳ ವಿಷಯವನ್ನು ಕುರಿತು ಆಲೋಚಿಸುವಾ.

ಹಿಂದೆ ತೋರಿಸಿದ ಅನುಕರಣವಾಚಕ ಶಬ್ದಗಳ ಸಮಗ್ರ ಸಂಗ್ರಹದಲ್ಲಿ ಬೀಜ ರೂಪಗಳ ನಾಲ್ಕು ವಿಧದ ಸ್ವರೂಪವು ಕಂಡುಬರುತ್ತದೆ. ಹೇಗೆಂದರೆ– ೧) ಕರ್ ೨) ಕಿರ್ ೩) ಕುರ್ ೪) ಕೊರ್ ಇವುಗಳಲ್ಲಿ ಮೊದಲನೆಯ ರೂಪವು ನಿಸರ್ಗದ ಸಹಜ ಶಬ್ದವಾಗಿದೆ. ಆದರೆ ಎರಡನೆಯ ರೂಪವು ಅದೇ ಭಾವದ ಅತ್ಯಂತ

ತೀಕ್ಷ್ಣತೆಯನ್ನು ತೋರಿಸುತ್ತದೆ. ಹೇಗೆಂದರೆ 'ಚಟ್ ಎಂದು ಮುರಿ', ಮತ್ತು 'ಚಿಟ್ ಎಂದು ಚೀರು', 'ಧಗ್ ಎಂದು ಹಾಯಿ' ಮತ್ತು 'ಧಿಗ್ ಎಂದು ನಿಲ್ಲು' ಇಲ್ಲಿ ಚಟ್-ಚಿಟ್ ಮತ್ತು ಧಗ್ ಧಿಗ್ ಎಂಬವುಗಳನ್ನು ಪರೀಕ್ಷಿಸಿದರೆ ಎರಡನೆಯ ರೂಪದ ತೀಕ್ಷ್ಣತೆಯು ನಿಚ್ಚಳವಾಗಿ ಕಾಣುವದು. ಮೂಲಶಬ್ದ ಸಂಗ್ರಹದಲ್ಲಿ ಕಿಚಿಕಿಚಿ, ಕಿಟಿಕಿಟಿ, ಕಿರಿಕಿರಿ, ಜಿರಿಜಿರಿ, ತಿಟಿತಿಟಿ, ಟಿಳಿಟಿಳಿ ಮುಂತಾದ ಶಬ್ದಗಳಿಂದ ತುಂಬಿದ ಸಾಲನ್ನು ಓದಿ ನೋಡಿದರೆ ಈ ಮಾತಿನ ಮನವರಿಕೆಯಾಗದಿರದು. ಇನ್ನೇನು ? ಮೂರನೆಯ ನಾಲ್ಕನೆಯ ರೂಪಗಳ ವಿಷಯ. ಮೂರನೆಯದರಲ್ಲಿ ಮೂಲಬೀಜದ ಭಾವವು ಮಂದತ್ವವನ್ನು ತಾಳಿ, ನಾಲ್ಕನೆಯದರಲ್ಲಿ ತುಂಬಾ ವಿಕಾರಹೊಂದುತ್ತದೆ. ಮೂಲ ಸಂಗ್ರಹದ ಆಯಾ ಸಾಲುಗಳನ್ನು ಚೆನ್ನಾಗಿ ಓದಿ ನೋಡಿದರೆ ಇದು ಗೊತ್ತಾಗುವದು.

ಇದರ ಮೇಲಿಂದ ಏನು ತಿಳಿಯುವದು ? ಮೂಲಬೀಜವು ಅಕಾರಯುಕ್ತ ವಾಗಿದ್ದರೆ ಯಥಾರ್ಥತೆಯೂ ಇಕಾರಯುಕ್ತವಾಗಿದ್ದರೆ ತೀಕ್ಷ್ಣತೆಯು ಉಕಾರಯುಕ್ತ ವಾದರೆ ಮಂದತೆಯೂ ಮತ್ತು ಒಕಾರಯುಕ್ತವಾದರೆ ವಿಕೃತಿಯು ಹೊರಪಡುವದು ಸುಸ್ಪಷ್ಟವಾಗಿದೆ. ಇದರಿಂದ ಕನ್ನಡದ ಐದು ಹ್ರಸ್ವಸ್ವರಗಳಲ್ಲಿ ನಾಲ್ಕರ ತೊಡಕು ಬಿಟ್ಟಂತಾಯಿತು. ಇನ್ನುಳಿದ ಎಕಾರದ ವಿಷಯವು ನನಗೆ ಸಂದಿಗ್ಧವಾಗಿದೆ. ಇನ್ನೇನು ? ಮಿಶ್ರಸ್ವರಗಳಾದ ಐ ಮತ್ತು ಔಕಾರಗಳು ಕನ್ನಡದಲ್ಲಿಲ್ಲ. ಆಯ್ ಮತ್ತು ಅವ್ ಎಂಬವುಗಳಿಂದಲೇ ಅವೆರಡರ ಕೆಲಸವು ಸಾಗುತ್ತದೆ. ಇನ್ನುಳಿದವು ಗಳೆಂದರೆ ಐದು ದೀರ್ಘಸ್ವರಗಳು. ಅವು ತಮ್ಮ ತಮ್ಮ ಜಾತಿಯ ಹ್ರಸ್ವಸ್ವರದ ಭಾಗಗಳನ್ನೇ ವಿಸ್ತರಿಸುತ್ತಿರಬಹುದೋ ಏನೋ ನನಗೆ ಇನ್ನೂ ಗೊತ್ತಾಗಿಲ್ಲ. ಅನುಸ್ವಾರದ ಕೆಲಸವು ಅನುನಾಸಿಕಗಳಲ್ಲಿಯೇ ತೀರುತ್ತದೆ.

ಇನ್ನೇನು ? ಈ ಬೀಜಶಬ್ದ ಪದ್ಧತಿಯಿಂದ ಶಬ್ದವ್ಯುತ್ಪತ್ತಿಯನ್ನು ಹುಡುಕು ವದು. ಅದು ಹೇಗೆಂದರೆ 'ಪುಸಿ' ಎಂಬ ಶಬ್ದವನ್ನು ಮಾದರಿಗಾಗಿ ತೆಗೆದುಕೊಳ್ಳುವಾ. ಇದರ ಮೂಲಬೀಜವೇನಿದ್ದಿರಬೇಕು ? 'ಪುಸ್'! ಆಹಾ ! ಈಗ ಅರ್ಥವು ಇಷ್ಟು ಸ್ಪಷ್ಟವಾಗುವದಲ್ಲಾ ! 'ಪುಸ್' ಎಂದೊಡನೆ 'ಎಲ್ಲಾ ಗಾಳಿಗೆ ಗಾಳಿಯಾಗಿ ಹೋಯಿತು.' ಎಂಬ ಭಾವವು ತಟ್ಟನೆ ಹೊಳೆಯುವದಿಲ್ಲವೇ ? ಇನ್ನೊಂದು ಶಬ್ದವನ್ನು ತೆಗೆದುಕೊಳ್ಳುವಾ. 'ಸಟೆ' ಇದರ ಮೂಲ ಬೀಜ 'ಚಟ್,' ಹೀಗೆಂದರೇನು ? "ಏನಾದರೊಂದು ಕೇಳಿದರೆ ಹಿಂದು ಮುಂದು ಆಲೋಚಿಸದೆ ಚಟ್ಟನೆ ಬಾಯಿಗೆ ಬಂದಂತೆ ಏನಾದರೊಂದು ಹೇಳಿಬಿಡುವದು.' ಇದೇ ಸಟೆ.

ಇನ್ನೊಂದು ಬಗೆಯ ಶಬ್ದಗಳನ್ನು ಕುರಿತು ಆಲೋಚಿಸೋಣ. ಕಣ್ಣು ಮತ್ತು ಹಣ್ಣು ಇವುಗಳ ವ್ಯುತ್ಪತ್ತಿ ಹೇಗೆ ? ಹಿಂದೆ 'ಪಚ್' ಎಂಬ ಬೀಜಶಬ್ದದ

ಬಗ್ಗೆ ಹೇಳುವಾಗ ನಾನು 'ಪಸಿರು' ಮತ್ತು 'ಪಚ್ಚಮಣಿ' ಎಂಬೆರಡು ಶಬ್ದಗಳನ್ನು ಆ ಬೀಜಜನ್ಯಗಳಿಂದು ಬರೆದಿದ್ದೆನಷ್ಟೆ ? ಆದರೆ ಅಲ್ಲಿ ವಿವರಣೆಯಿಲ್ಲ. ಈಗ ಅದರ ಅಗತ್ಯವಿರುವದರಿಂದ ಹೇಳುವೆ. 'ಪಚ್' ಎಂಬುದರಿಂದ 'ಹಸಿ' ಎಂಬ ಭಾವವು ಪ್ರದರ್ಶಿತವಾಗುತ್ತದಷ್ಟೆ ? ಆದರೆ ಹಸುರು ಬಣ್ಣಕ್ಕೇನು ಸಂಬಂಧ ? ಜಗತ್ತಿನಲ್ಲಿ ಹಸಿಯಾಗಿ ಇರುವ ವಸ್ತುಗಳಲ್ಲಿ ವನಸ್ಪತಿಯು ಅತ್ಯಂತ ಮುಖ್ಯವಾಗಿರುವದರಿಂದ ಯಾವಾಗಲೂ ಹಚ್ಚಗಿರುವ ಅದರ ಗುಣದ ಮೂಲಕ ಹಸುರು ಬಣ್ಣಕ್ಕೆ ಆ ಶಬ್ದವು ಬಂತು. ಹೀಗೆ ಭಾವನಾಕ್ರಮದಿಂದಲೇ ಬಹಳ ಶಬ್ದಗಳು ಹುಟ್ಟುತ್ತವೆ. "ಕಣ್ಣು" ಎಂಬುದರ ಮೂಲಬೀಜ "ಕಣ್" ಮತ್ತು 'ಹಣ್ಣು' ಇದರ ಮೂಲ 'ಪಣ್'; ಈಗ ಈ ಅನುಕರಣಗಳಿಂದ ಹೇಗೆ ಶಬ್ದ ಸಿದ್ಧಿಯನ್ನು ಸಾಧಿಸಬೇಕು ? ಕಣ್ ಎಂಬ ನಾದವು "ಕಂಚಿ"ನದು. 'ಪಣ್' ಎಂಬ ನಾದವು 'ಪಂಚಿ'ನದು. ಕಣ್ಣು–ಕಂಚು, ಪಣ್ಣು–ಪಂಚು–ಹಂಚು, ಕಂಚಿನ ಬಟ್ಟಲಿನಂತೆ ಗುಡ್ಡಿಗಳು ಹೊಳೆಯುವದರಿಂದ ಕಣ್ಣಿಗೆ ಆ ಹೆಸರು ಬಂತು, ಹಸಿ ಗಡಿಗೆ ಸುಟ್ಟು ಹಂಚಿನ ಸ್ವರೂಪಕ್ಕೆ ಬರುವಂತೆ ಕಸುಕಾಯಿ ಬಿಸಿಲು ತಿಂದು ಪಕ್ವವಾಗುವದರಿಂದ ಹಣ್ಣಿಗೆ ಹಣ್ಣೆಂಬ ಹೆಸರು ಬಂತು.

ಈಗ 'ಕಲ್ಲು' ಮತ್ತು 'ಹುಣಸೇಮರ' ಇವೆರಡರ ವ್ಯುತ್ಪತ್ತಿಯನ್ನು ಸಾಧಿಸುವಾ. 'ಕಲಕಲ' ನಾದಕ್ಕೂ ಕಲ್ಲಿಗೂ ಸಂಬಂಧವನ್ನು ಕಲ್ಪಿಸುವುದು ಅಶಕ್ಯವಾಗಿದೆ. ಹಾಗೆಯೇ 'ಪುಞ್' ಅಥವಾ 'ಪುಣ್' ಎಂಬ ಬೀಜದಿಂದ ಹುಣಸೇಮರದ ವ್ಯುತ್ಪತ್ತಿ ಹೇಳುವುದೂ ದುಸ್ತರವಾಗಿದೆ. ಹಾಗಾದರೇನು ? ಮೊದಲು ಹುಣಸೆಯ ಬಗ್ಗೆ ವಿಚಾರಿಸುವಾ. ಹುಣಸೆಯ ಮುಖ್ಯ ಗುಣವು ಹುಳಿ. ಆದ್ದರಿಂದ ಹುಣಸೆಯೊಳಗಿನ 'ಣ'ಕಾರಕ್ಕೆ ಬದಲಾಗಿ 'ಳ'ಕಾರವನ್ನೇ ಇಟ್ಟುಕೊಂಡು ಹುಳುಸೇಮರ ಹುಳಚೀಮರ ಮುಂತಾದುದಾಗಿ ರೂಪಗಳನ್ನು ಮಾಡಿಕೊಂಡರೆ ನಮ್ಮ ಪ್ರಶ್ನೆ ಬಿಡದು. ಈಗ 'ಪುಳುಪುಳು' ಎಂಬ ಬೀಜದಿಂದ ವ್ಯುತ್ಪತ್ತಿಯನ್ನು ಸಾಧಿಸಲಿಕ್ಕೆ ಶಕ್ಯವಾಗುವದು. "ಪುಳುಪುಳು" ಎಂಬುದು ಆಕಳ ಮೂತ್ರ ವಿಸರ್ಜನದ ಧ್ವನಿಯ ಅನುಕರಣವಾಗಿದೆ. ಈಗ ಯಾವ ಸ್ವಾದದಿಂದ ನಾಲಗೆಯಲ್ಲಿ ಪುಳುಪುಳು ನೀರು ಬಿಡುವುದೋ ಅದು ಪುಳಿಯೆಂಬುದಂತೂ ಸ್ಪಷ್ಟ. ಆದ್ದರಿಂದ ಪುಳಿಯ ಮೂಲಕ 'ಪುಳಿಚಿ' ಅಥವಾ ಹುಳುಚಿಯೆಂಬ ರೂಪವು ಸಹಜವಾಗಿ ಸಿದ್ಧಿಸುವದು. ಹೀಗೆಯೇ ಇನ್ನು 'ಕಲ್ಲು' ಎಂಬ ಶಬ್ದದ ಬಗ್ಗೆ ಆಲೋಚಿಸುವಾ. ಇಲ್ಲಿ ಲ ಕಾರಕ್ಕೆ ಬದಲಾಗಿ ರ ಕಾರವಿದ್ದಿರಬೇಕು. ಯಾಕೆಂದರೆ ಮಲತಾಯಿ ಮುಂತಾದ ಶಬ್ದಗಳಲ್ಲಿ ಲ ಕಾರವನ್ನು ರ ಕಾರವಾಗಿ ಮಾಡದೆ ಅರ್ಥವಾಗುವದಿಲ್ಲ. ಮರುತಾಯಿ ಎರಡನೆಯ ತಾಯಿ, ಮರುಮಕ್ಕಳು ಎರಡನೆಯ ಮಕ್ಕಳು, ಮರುಸಲ–ಮರುಚಲ ಇದರಂತೆ ಕಲ್ ಎಂಬುದಕ್ಕೆ ಬದಲಾಗಿ ಕರ್ ಎಂದು ಮಾಡಿಕೊಂಡರೆ ವ್ಯುತ್ಪತ್ತಿಯು ಸುಲಭವಾಗುವದು. ಕರ್ ಕರ್ ಒಂದರ ಮೇಲೊಂದು ಕಲ್ಲನ್ನು ತಿಕ್ಕ ನು ಣು ಪು

ಮಾಡುವ ಸಪ್ಪುಳು. ಆದಿಕಾಲದಲ್ಲಿ ಮಾನವರು ಕಲ್ಲುಗಳಿಂದಲೇ ತಮ್ಮ ಸರ್ವ ಆಯುಧಾದಿಗಳನ್ನು ಮಾಡಿಕೊಳ್ಳುತ್ತಲಿದ್ದುದರಿಂದಲೇ ಆ ಯುಗಕ್ಕೆ ಶಿಲಾಯುಗ ಅಥವಾ ಸ್ಟೋನ್ ಏಜ್ ಎಂದು ವಿದ್ವಾಂಸರು ಹೆಸರಿಟ್ಟಿರುವರು.

ಈ ಕಲ್ ಕರ್ ಎಂಬುದರಿಂದ ಹೊರಡುವ ಇನ್ನೊಂದು ಮಾತೇನೆಂದರೆ, ಈಗ ಕೈ-ಕಯ್ ಎಂದು ಹೇಳುತ್ತಿರುವ ಶಬ್ದದೊಳಗಿನ ಯ ಕಾರವೂ ಕೂಡ ಮೂಲ ದಲ್ಲಿ ರ ಕಾರವಾಗಿದ್ದು ನಡುವೆಯೆಂದೋ ಈಗಿನ ರೂಪಕ್ಕೆ ಬಂದಿರಬೇಕು. ಯಾಕೆಂದರೆ ಆದಿಯುಗದ ಮಾನವರಿಗೆ ಕೆಲಸವೆಂಬುದೇನಾದರೂ ಇರುತ್ತಿದ್ದರೆ ಅದು ಶಿಲಾಯುಧಗಳನ್ನು ಸಿದ್ಧಪಡಿಸಿಕೊಳ್ಳುವದು. ಅದೊಂದು ಅವರ ದುಡಿಮೆ. ಆದ್ದರಿಂದ ಆಗ ಆವರು 'ಮಾಡು' ಎಂಬರ್ಥದಲ್ಲಿ ಏನಾದರೂ ಶಬ್ದವನ್ನುಪಯೋಗಿ ಸುತ್ತಿದ್ದರೆ ಅದು ಕರ್ ಎಂಬುದೇ ಆಗಿರಬೇಕು. 'ಕರ್‌ಕರ್' ಅಂದರೆ ಕರಾಕರಾ ಮಸೆದು ನುಣುಪು ಮಾಡುತ್ತಲಿರು ಎಂಬರ್ಥ. ಯಾಕೆಂದರೆ ಅವರಿಗೆ ಮಾಡುವ ದೆಂದರೆ ಅದೊಂದೆ ಕೆಲಸ. ಆರ್ಯ ಪ್ರಾಕೃತ ಭಾಷೆಗಳಲ್ಲಂತೂ ಇದೇ ಶಬ್ದವಿದೆ. कृ– ಕೃ, कर– ಕರ್, कर्म – कम्म– ಕರ್ಮ, काम– ಕಾಮ್, कर– ಕರ–ಕೈ ಇತ್ಯಾದಿ. ಈಗ ಏನಾಯಿತು ? ಕರ್ ಅಂದರೆ ಕಲ್ಲು, ಕರ್ ಅಂದರೆ ಕೆಲಸ. ಕರ್ ಅಂದರೆ ಕೆಲಸ ಮಾಡುವ ಸಾಧನವಾದ ಕೈ. ಕರ್ ಅಂದರೆ ಕಲ್ಲಿನ ಬಣ್ಣವಾದ ಕಪ್ಪು (ಕರ್‌ಪು) ವರ್ಣ. ಹೀಗೆಯೇ ಎಷ್ಟೋ ಶಬ್ದಗಳು ಅದರಿಂದ ಸಿದ್ಧಿಸಬಹುದು. ಕರ್ ಎಂಬುದು ಕಯ್ ಆದಿ ಕಾಲದ ಜನಾಂಗದಲ್ಲಿ ಒಕ್ಕಲುತನದ ಸುಧಾರಣೆಯಾಗಿರ ಲಿಕ್ಕೇಬೇಕು. ಯಾಕೆಂದರೆ ಕಯ್ (ಕೆಯ್) ಎಂದರೆ ಹಳಗನ್ನಡದಲ್ಲಿ ಹೊಲ. ಕೆಯ್ಮೆ–ಗೆಯ್ಮೆಯೆಂದರೆ ಕೆಲಸ– ಮತ್ತು ಕಯ್ ಎಂದರೆ ಕೈ ಎಂಬುದಂತೂ ಸರಿಯೇ ಸರಿ.

ಸಾಕು. ಇಷ್ಟು ಸಾಕು. ನನ್ನ ಮನೋಭಿಪ್ರಾಯಗಳನ್ನೆಲ್ಲ ಸಾಧಾರಣವಾಗಿ ತಿಳಿಸಿದಂತಾಯಿತು. ಈ ವಿಷಯದಲ್ಲಿ ನನ್ನ ಗೆಳೆಯರಾದ ಶ್ರೀ ಬೇಂದ್ರೆಯವರೂ ಶ್ರೀ ಶಂ. ಬಾ. ಜೋಶಿಯವರೂ ಇದೇ ವಿಷಯದಲ್ಲಿ ಬೇರೆ ಬೇರೆ ಸ್ವತಂತ್ರ ಪದ್ಧತಿ ಗಳಿಂದ ಸಂಶೋಧನವನ್ನು ಈ ಮೊದಲೇ ನಡಿಸಿರುವರು. ಅವರ ಮೇಲೆಯೂ ಇನ್ನುಳಿದ ಕನ್ನಡಿಗರ ಮೇಲೆಯೂ ಮುಂದಿನ ಹೊಣೆಯನ್ನು ಹೊರಿಸಿ ನಾನಿಲ್ಲಿಗೆ ವಿಶ್ರಮಿಸುವೆನು.

ಜಯ ಕರ್ನಾಟಕ ೧೧-೪, ಮಾರ್ಚ ೧೯೩೩

# ಆರ್ಯ ದ್ರಾವಿಡ ಭಾಷಾ ಸಮನ್ವಯ

---

ನನಗೆ ಇಂಗ್ಲೀಷ ಭಾಷೆಯನ್ನು ಕಲಿಯುವುದಕ್ಕೆ ಅನುಕೂಲ ಪರಿಸ್ಥಿತಿಯಿಲ್ಲದ್ದರಿಂದ ಹೆಚ್ಚಿನ ತಿಳುವಳಿಕೆ ಮಾಡಿಕೊಳ್ಳುವ ಸಲುವಾಗಿ ೨೮–೨೯ ವರುಷಗಳ ಹಿಂದೆ ಹಿಂದೀ ಬಂಗಾಲೀ ಭಾಷೆಗಳನ್ನು ಪುಸ್ತಕಗಳ ಸಹಾಯದಿಂದ ಕಲಿತೆನು. ಮರಾಠಿ ಭಾಷೆಯು ನನಗೆ ಗಡಿ ಪ್ರದೇಶದ ಭಾಷೆಯಾದುದರಿಂದ ಅದರ ಅಭ್ಯಾಸವು ಇದಕ್ಕಿಂತ ಮೊದಲೇ ಆಗಿದ್ದಿತು. ಭಗವಾನ್ ಶ್ರೀ ಅರವಿಂದರ "ಸಿಂಥಿಸಿಸ್ ಆಫ್ ಯೋಗ" ("ಪೂರ್ಣಯೋಗ ಅಥವಾ ಯೋಗಸಮನ್ವಯ") ಎಂಬ ಮಹಾಗ್ರಂಥವು ಇಂಗ್ಲೀಷಿನಲ್ಲಿ ಪ್ರಕಟವಾಗಿರದಿದ್ದರೂ, ಅದರ ಗುಜರಾತೀ ಅನುವಾದವು ಪ್ರಕಟವಾದ ಸಮಾಚಾರ ತಿಳಿದದ್ದರಿಂದ ಆ ಮಹಾಗ್ರಂಥವನ್ನೋದುವ ಸಲುವಾಗಿ ಗುಜರಾತಿ ಭಾಷೆಯನ್ನು ಕಲಿತೆನು. ಹೀಗಾಗಿ ಮಹತ್ವದ ಗ್ರಂಥಗಳನ್ನು ಓದಿ ತಿಳಿದುಕೊಳ್ಳುವ ಇಚ್ಛೆಯಿಂದ ಭರತ ಖಂಡದ ಸಂಸ್ಕೃತ ಜನ್ಯವಾದ ನಾಲ್ಕು ಮುಖ್ಯ ಭಾಷೆಗಳನ್ನು ಕಲಿತೆನು.

ನನಗೆ ಕರ್ನಾಟಕದ ಇತಿಹಾಸ ಹಾಗೂ ವಾಙ್ಮಯಗಳ ಮೇಲೆ ಬಹಳ ಪ್ರೇಮವಿದ್ದದ್ದರಿಂದ ಕನ್ನಡ ಭಾಷೆಯ ಮೂಲಸ್ವರೂಪವನ್ನು ತಿಳಿದುಕೊಳ್ಳಲಿಕ್ಕೆ ಸಹಾಯವಾಗಬಹುದೆಂದು ೨೫ ವರುಷಗಳ ಹಿಂದೆ ತಮಿಳು, ತೆಲುಗು, ಮಲೆಯಾಳಂ, ತುಳು ಮೊದಲಾದ ಭಾಷೆಗಳ ಅಭ್ಯಾಸವನ್ನು ಆರಂಭಿಸಿದೆನು. ಕೆಲಮಟ್ಟಿಗೆ ಇವುಗಳ ಪರಿಚಯವಾಯಿತು. ಅದರಲ್ಲಿಯೂ ತೆಲುಗು ಮೊನ್ನೆ ಮೊನ್ನೆ ಪಾಂಡಿಚೇರಿಯಲ್ಲಿ ಶ್ರೀ ಅರವಿಂದಾಶ್ರಮದ ಹಿರಿಯ ಶಿಷ್ಯರಲ್ಲೊಬ್ಬರಾದ ಪೂಜ್ಯ ಶ್ರೀ ಕಪಾಲಿಶಾಸ್ತ್ರಿಗಳವರ ಪರಮ ಸಹಾಯದಿಂದ ರೂಢಿಯಾಯಿತು. ಪಾಂಡಿಚೇರಿಯ ದೇಶಭಾಷೆಯು ತಮಿಳಾದ್ದರಿಂದ ಅದರ ಪರಿಚಯವೂ ತಕ್ಕಮಟ್ಟಿಗೆ ಆಗುವದಕ್ಕೆ ಕಾರಣವಾಯಿತು. ತಮಿಳಿಗೂ ಮಲೆಯಾಳಿಗೂ ಹೆಚ್ಚು ಭೇದವಿಲ್ಲದ್ದರಿಂದ ಅದರ ಅಕ್ಷರ ಪರಿಚಯ ಮಾಡಿಕೊಂಡು ಭಾಷೆಯ ಮಾದರಿಯನ್ನು ತಕ್ಕಮಟ್ಟಿಗೆ ನೋಡಿದ ಹಾಗಾಯಿತು. ತುಳು ಪುಸ್ತಕಗಳನ್ನು ಬಾಸೆಲ್ ಮಿಶನ್ ಪ್ರೆಸ್ಸಿನವರು ಕನ್ನಡ ಅಕ್ಷರದಲ್ಲಿ ಮುದ್ರಿಸಿರುವರಿಂದ ಅದರದೂ ತಕ್ಕಮಟ್ಟಿಗೆ ಭಾಷೆಯ ಮಾದರಿಯನ್ನು ಮಾತ್ರ

ನೋಡಿದ ಹಾಗಾಯಿತು. ಹೀಗಾಗಿ ದ್ರಾವಿಡ ವರ್ಗದ ಮುಖ್ಯ ಐದು ಭಾಷೆಗಳ ಪರಿಚಯಮಾಡಿಕೊಂಡಂತಾಯಿತು.

ಆಮೇಲೆ ಕಾಡುಜನರ ಭಾಷೆಗಳ ಅಭ್ಯಾಸದಿಂದ ದ್ರಾವಿಡ ಭಾಷೆಯ ಮೂಲ ಸ್ವರೂಪವನ್ನೂ ವಿಸ್ತಾರವನ್ನೂ ಕುರಿತು ಕಲ್ಪನೆ ಮಾಡಿಕೊಳ್ಳಲಿಕ್ಕೆ ಸಾಧ್ಯವಿದೆ ಯೆಂದು ಭಾವಿಸಿ ಅತ್ತ ಕಡೆಗೆ ಮನಸ್ಸನ್ನು ಹೊರಳಿಸಿದೆನು. ಇಷ್ಟರಲ್ಲಿ ೧೯೩೧ರಲ್ಲಿ ನನ್ನ ಗೆಳೆಯರಾದ ಶ್ರೀ ರಂ. ಶ್ರೀ. ಮುಗಳಿಯವರು ೬೩೦ ಭಾಷೆಗಳ ಮಾದರಿ ಯುಳ್ಳ ಒಂದು ಪುಸ್ತಕವನ್ನು ನನಗೆ ಕಳಿಸಿ ಬಹಳ ಉಪಕಾರ ಮಾಡಿದರು. ಅದರಿಂದ ಬಲುಚಿಸ್ತಾನದ ಒಂದು ಕಾಡು ಜನರ ತಂಡದವರಾಡುವ ರಾ ಜ ಮ ಹಾ ಲೀ ಭಾಷೆಯೂ ದ್ರಾವಿಡ ವರ್ಗದವುಗಳಾಗಿವೆಯೆಂಬುದು ಗೊತ್ತಾಗಲು* ಮಿಶನರಿಗಳು ಆ ಭಾಷೆಯಲ್ಲಿ ಪ್ರಸಿದ್ಧಿಸಿದ ಪುಸ್ತಕಗಳನ್ನು ತರಿಸಿ ಓದಿದೆನು. ಆ ಎರಡೂ ಭಾಷೆ ಗಳಲ್ಲಿ ದ್ರಾವಿಡ ಭಾಷೆಯ ಕುರುಹುಗಳು ಬೇಕಾದಷ್ಟು ಸಿಕ್ಕವು. ಇದರಿಂದ ದ್ರಾವಿಡ ಭಾಷಾ ವಿಸ್ತಾರವು ಬಹುದೂರದವರೆಗೆ ಇದ್ದದ್ದು ತಿಳಿದು ಮನಸ್ಸಿಗೆ ಬಹಳ ಆನಂದ ವಾಯಿತು. ಬ್ರಾಹುಯೀ ಭಾಷೆಯಲ್ಲಿರುವ "ನೀ ದೇರ್ ಅಸ್" (ನೀನು ಅದಾರ್ ಇರುವಿ ? –ನೀನು ಯಾರು ಇರುವಿ ?) ಎಂಬ ವಾಕ್ಯವೂ ರಾಜಮಹಾಲೀ ಭಾಷೆ ಯಲ್ಲಿರುವ (ಕುಟ್ರ ಕಿ ಕಣ್ ಬರೆನ್ = ಕುರುಡರಿಗೆ ಕಣ್ಣು ಬರುವಂತೆ ಮಾಡಿದನು) ಎಂಬ ವಾಕ್ಯವೂ ಈಗಲೂ ನನ್ನ ತಲೆಯಲ್ಲಿ ತಾಂಡವವನ್ನಾಡುತ್ತಿರುವವು.

ಆದರೆ ಇದರೊಳಗಿನ ಒಂದು ಚಮತ್ಕಾರವೆಂದರೆ, ಉತ್ತರ ಹಾಗೂ ಮಧ್ಯ ಹಿಂದುಸ್ತಾನದ ಕಾಡುಗಳಲ್ಲಿರುವ ಭಿಲ್ಲ, ಸಂತಾಳ ಮೊದಲಾದ ಕಾಡುಜನರ ಭಾಷೆ ಗಳು ಎಳ್ಳಷ್ಟೂ ದ್ರಾವಿಡವಾಗಿರದೆ ನೆರೆಪ್ರಾಂತದ ಔತ್ತರೇಯ ಭಾಷಾವರ್ಗಕ್ಕೆ ಸೇರಿ ದವುಗಳಾಗಿವೆ. ನೆರೆಪ್ರಾಂತದ ನಾಗರಿಕ ಜನರ ಸಂಪರ್ಕದಿಂದ ಅವರು ತಮ್ಮ ಮೂಲ ಭಾಷೆಯನ್ನು ಮರೆತು ನೆರೆಪ್ರಾಂತದ ಭಾಷೆಗಳನ್ನಾಡುವವರಾಗಿದ್ದಾರೆಂದು ಅನೇಕ ಜನ ಭಾಷಾಶಾಸ್ತ್ರಜ್ಞರು ತರ್ಕಿಸುತ್ತಾರೆ. ಆದರೆ ಇದರ ನಿಜವು ಏನಿದಿಯೋ ತಿಳಿಯುವುದು ಕಷ್ಟವಾಗಿದೆ.‡ ದಕ್ಷಿಣದ ಕೊಂಡ, ಗೋಂಡ ಮೊದಲಾದ ಕಾಡು ಜನರ ಭಾಷೆಗಳು ತುಂಬಾ ದ್ರಾವಿಡ ವರ್ಗದವುಗಳಾಗಿವೆ.

---

* ಛೋಟಾನಾಗಪುರ ಪ್ರಾಂತದಲ್ಲಿರುವ "ಆರಾವೊನ್" ಎಂಬ ಕಾಡು ಜನರ ಭಾಷೆಯೂ ದ್ರಾವಿಡವಾಗಿರುತ್ತದೆ.

‡ ಆರ್ಯರ ತಂಡಗಳು ಭಾರತಕ್ಕೆ ಸಾವಿರಾರು ವರುಷಗಳ ಅಂತದಿಂದ ಒಂದರ ಹಿಂದೊಂದು ಬಂದವಷ್ಟೆ ? ಮೊದಲಿನವರ ಭಾಷೆ ಎರಡನೆಯವರ ಭಾಷೆಯಿಂದ ಈ ಕಾರಣದಿಂದ (ಕಾಲಾಂತರದ ಕಾರಣದಿಂದ) ಭಿನ್ನತೆ ಪಡೆದವಷ್ಟೇ ? ಆದ್ದರಿಂದ ಮೊದಲಿನ ತಂಡಕ್ಕೆ ಸಂಬಂಧಿಸಿದ ಕಾಡುಜನರ ಭಾಷೆಯು ಮೊದಲನೆಯ ಪ್ರಕಾರದ್ದಾಗಿಯೂ ಇರುವುದು ಸ್ವಾಭಾವಿಕವಾಗಿದೆಯೆಂದು ನಂಬಬಹುದಷ್ಟೇ ?

ಈ ರೀತಿಯಿಂದ ನನ್ನ ಗೆಳೆಯರಾದ ಪ್ರಿಯ ಶ್ರೀ ರಂ. ಶ್ರೀ. ಮುಗಳಿಯವರು ಕಳಿಸಿದ ಮೇಲ್ಕಾಣಿಸಿದ ಪುಸ್ತಕದ ಸಹಾಯದಿಂದ ಹಿಂದುಸ್ತಾನದ ಸಕಲ ಸಣ್ಣ ದೊಡ್ಡ ಭಾಷೆಗಳ ರೂಪರೇಷೆಯು ಕೆಲಮಟ್ಟಿಗೆ ತಿಳಿದಂತಾಯಿತು. (ಮುಖ್ಯವಾಗಿ ಎರಡೇ ವರ್ಗವಿದ್ದದ್ದರ ಮೂಲಕ ಸುಲಭವಾಯಿತು.)

ಇನ್ನು ಯುರೋಪದ ಭಾಷೆಗಳ ಕಡೆಗೆ ನನ್ನ ಮನಸ್ಸು ಹೊರಳಿದ್ದು ಹೇಗೆಂದರೆ, ಮೂವತ್ತು ವರುಷಗಳ ಹಿಂದೆ ನನ್ನ ಕನ್ನಡ ಮುಲಕೀ ಪರೀಕ್ಷೆಯಾದ ಮೇಲೆ ಪಂಡಿತ ಪರೀಕ್ಷೆಗೆ ಹೋಗಬೇಕೆಂಬ ಇಚ್ಛೆಯಿಂದ ಕೆಲವು ತಿಂಗಳು "ಖಾಸಗಿ"ಯಾಗಿ ಇಂಗ್ಲೀಷನ್ನು ಹೇಳಿಸಿಕೊಳ್ಳುತ್ತಿದ್ದೆನು. ನನಗೆ ಇಂಗ್ಲೀಷು ಕಲಿಯುವುದಕ್ಕೆ ಒಂದೆರಡು ವರುಷಗಳಿಗಿಂತ ಹೆಚ್ಚಿಗೆ ಅವಕಾಶವಿರಲಿಲ್ಲ. ಅಷ್ಟರೊಳಗಾಗಿಯೇ ಚೆನ್ನಾಗಿ ಇಂಗ್ಲೀಷನ್ನು ಕಲಿತುಕೊಳ್ಳಬೇಕಾಗಿದ್ದಿತು. ಆದರೆ ನನ್ನ ವಿದ್ಯಾಗುರುಗಳಾದ ಪ್ರಿಯ ಶ್ರೀ ಕೊಣ್ಣೂರು ಹಣಮಂತರಾಯರು "ಇಷ್ಟು ಸ್ವಲ್ಪ ಅವಧಿಯಲ್ಲಿ ಇಂಗ್ಲೀಷನಂಥ ಗಡುಚಾದ ಭಾಷೆಯನ್ನು ಕಲಿತುಕೊಳ್ಳಲಿಕ್ಕೆ ಶಕ್ಯವಿಲ್ಲ." ಎಂದು ಹೇಳಿದ್ದರಿಂದ ಇಂಗ್ಲೀಷನ್ನು ಅಷ್ಟಕ್ಕೆ ಬಿಟ್ಟುಗೊಟ್ಟಿದ್ದೆನು. ಆದರೆ ಭಗವಾನ್ ಶ್ರೀ ಅರವಿಂದರ ಗ್ರಂಥಗಳ ಬಂಗಾಲೀ, ಹಿಂದೀ ಅನುವಾದಗಳನ್ನು ಓದುತ್ತಿದ್ದ ನನಗೆ, ಅನುವಾದಗಳಲ್ಲಿ ಅರ್ಥವು ನಿಸ್ಸಂದಿಗ್ಧವಾಗದ್ದರಿಂದ ಅವರ ಗ್ರಂಥಗಳನ್ನು ಮೂಲ ಇಂಗ್ಲಿಷಿನಲ್ಲಿಯೇ ಓದಬೇಕೆಂಬ ಇಚ್ಛೆ ಹುಟ್ಟಿ, ಏಳೆಂಟು ವರುಷಗಳ ಅನಂತರ, ಪುನಃ ನನ್ನ ಇದ್ದಬಿದ್ದ ಇಂಗ್ಲೀಷನ್ನೇ ಬೆಳೆಸಿಕೊಳ್ಳಲಿಕ್ಕೆ ಆರಂಭಿಸಿದೆನು. ಪರಮಾತ್ಮನ ಕೃಪೆಯಿಂದ ಒಂದೆರಡು ವರುಷಗಳಲ್ಲಿಯೇ ಅದು ಸಾಧಿಸಿತು. ಆಮೇಲೆ ೧೯೩೭ ರಲ್ಲಿ ಶ್ರೀ ಅರವಿಂದ ಆಶ್ರಮದ ಅಧಿಷ್ಠಾತ್ರಿಯರಾದ ಭಗವತಿ ಶ್ರೀ ಮಾತಾಜಿಯವರ ಗ್ರಂಥಗಳನ್ನು ತಿಳಿದುಕೊಳ್ಳುವ ಸಲುವಾಗಿ ಫ್ರೆಂಚಭಾಷೆಯ ಅಭ್ಯಾಸವನ್ನು ಆರಂಭಿಸಿದೆನು. ಶ್ರೀ ಅರವಿಂದಾಶ್ರಮದ ಸಾಧಕ ಬಂಧುಗಳೊಬ್ಬರ ಪರಮ ಸಹಾಯದಿಂದ ಈ ಭಾಷೆಯ ಜ್ಞಾನವೂ ಕೆಲಮಟ್ಟಿಗೆ ಆಯಿತು.*

ಮೊನ್ನೆ ಮೊನ್ನೆ ಶಿವೈಕ್ಯರಾದ ಕಾಶೀಪೀಠದ ( ಜಂಗಮವಾಡಿ ಮಠದ ) ಶ್ರೀ ಶ್ರೀ ಜಗದ್ಗುರು ಶಿವಾಚಾರ್ಯರು (ಪೂರ್ವಾಶ್ರಮದ ಶಿವೈಕ್ಯರಾದ ಶ್ರೀ ಶ್ರೀ ಚಿದಿರೇಮಠದ ವೀರಭದ್ರ ಶಿವಾಚಾರ್ಯರು) ಹಿಂದೀ ಭಾಷೆಯಲ್ಲಿ ಮ್ಯಾಕ್ಸಮುಲ್ಲರರ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಚಿಕ್ಕ ಪುಸ್ತಕವೊಂದನ್ನು ( ಸಂಸಾರಕೀ ಭಾಷಾ )

---

* ಸ್ಪ್ಯಾನಿಷ್, ಪೋರ್ತಗೀಜ್. ಇಟಾಲಿಯನ್ ಭಾಷೆಗಳು ಫ್ರೆಂಚ್ ಭಾಷಾವರ್ಗದವುಗಳಾಗಿರುವುದರಿಂದ ಅವೆಲ್ಲವುಗಳ ಮಾದರಿಯನ್ನು ನೋಡಿ ತಿಳಿದುಕೊಳ್ಳುವುದು ಫ್ರೆಂಚದಿಂದ ಸುಲಭವಾಯಿತು. ನಾರ್ವೇಜಿಯನ್, ಸ್ವೀಡಿಷ್, ಡಚ್, ಸ್ವಿಸ್, ಜರ್ಮನ್ ಮೊದಲಾದವುಗಳು ಇಂಗ್ಲೀಷ್ ಭಾಷಾಜಾತಿಗೆ ಸೇರಿರುವದರಿಂದ ಅವುಗಳ ಮಾದರಿಗಳನ್ನು ಕೆಲಮಟ್ಟಿಗೆ ನೋಡುವುದು ಸುಲಭವಾಯಿತು.

ಆಶೀರ್ವಾದ ರೂಪದಿಂದ ಬಹಳ ವರುಷಗಳ ಹಿಂದೆ ಕಳುಹಿಸಿದ್ದರು. ಅದರಿಂದ ಜಗತ್ತಿನ ಸಕಲಭಾಷೆಗಳ ವರ್ಗೀಕರಣವನ್ನು ಭಾಷಾಶಾಸ್ತ್ರಜ್ಞರು ಹೇಗೆ ಹೇಗೆ ಮಾಡಿ ದ್ದಾರೆಂಬುದು ಗೊತ್ತಾಗಿ ಮನಸ್ಸಿಗೆ ಬಹಳ ಆನಂದವಾಗಿದ್ದಿತು. ಈ ವರ್ಗೀಕರಣ ಗಳಿಗೆ ಅನುಸರಿಸಿ ಗೆಳೆಯ ಶ್ರೀ ಮುಗಳಿಯವರು ಕಳಿಸಿದ ಪುಸ್ತಕದಲ್ಲಿರುವ (Gospel in many tongues.) ಏಶಿಯಾ ಯುರೋಪದ ನಾನಾ ಭಾಷೆಗಳ ಮಾದರಿಗಳನ್ನೆಲ್ಲ ನೋಡತೊಡಗಿದನು.

ಈ ಮೊದಲು ಪವಿತ್ರ ಕುರಾಣದ ದೈವೀ ಭಾಷೆಯನ್ನು ಅರಿತುಕೊಳ್ಳುವ ಸಲುವಾಗಿ ಅರಬ್ಬೀ ಭಾಷೆಯ ಅಲ್ಪಪರಿಚಯ ಮಾಡಿಕೊಳ್ಳುವುದಕ್ಕೆ ಬಹಳ ಸಾಹಸ ಪಟ್ಟಿದ್ದೆನು. ಅದು ತೀರ ಸ್ವಲ್ಪ ಮಾತ್ರ ಸಾಧಿಸಿದ್ದಿತು. ಆದರೆ ಅಷ್ಟರಲ್ಲಿ ಪಾರ್ಶೀ ಭಾಷೆಯಲ್ಲಿ ಜ್ಞಾನವುಳ್ಳ ನಮ್ಮೂರಿನ ವಯೋವೃದ್ಧರಾದ ಶ್ರೀ ವೆಂಕಟೇಶ ಬಳವಂತ ಕುಲಕರ್ಣಿ ಎಂಬ ಹಿರಿಯರೊಬ್ಬರು ತಾವಾಗಿ ಮನೆಗೆ ಬಂದು ನನಗೆ ಆರು ತಿಂಗಳುಗಟ್ಟಲೆ ಪಾರ್ಶೀ ಭಾಷೆಯನ್ನು ಕಲಿಸಿದರು. ಇದರಿಂದ ನನಗೆ ಬಹಳ ಲಾಭವಾಯಿತು.

ಪಾರ್ಶೀ ಭಾಷೆಯು ಸಂಸ್ಕೃತ ಜನ್ಯವೆಂದು ನನಗೆ ಕಂಡುಬಂದಿತು. ಈ ಭಾಷೆಯಲ್ಲಿ ಇಂದಿಗೂ ಅನೇಕ ಶಬ್ದಗಳು* ಸಂಸ್ಕೃತಜನ್ಯವಿದ್ದು ಅಂಕೆಗಳು ಸಂಪೂರ್ಣ ವಾಗಿ ಸಂಸ್ಕೃತಜನ್ಯವಾಗಿವೆ.‡

ನನ್ನ ಮುಲಕೀ ಪರೀಕ್ಷೆಯ ಕಾಲದಲ್ಲಿ ಕೊನೆಯ ೧೫ ದಿವಸಗಳಲ್ಲಿ ನನಗೆ "ಖಾಸಗಿ"ಯಾಗಿ ಅಭ್ಯಾಸ ಹೇಳಿದ ಮೂರನೆಯ ವರ್ಷದ ಟ್ರೇನಿಂಗ ಕಾಲೇಜಿನ ಶಿಕ್ಷಣ ಹೊಂದಿದ ತಜ್ಞ ಶಿಕ್ಷಕರೊಬ್ಬರು (ಅವರು ಈಗ ದಿವಂಗತರು) ಭಾಷಾಶಾಸ್ತ್ರಕ್ಕೆ ಸಂಬಂಧಪಟ್ಟ ಒಂದು ವಿಷಯವನ್ನು ಹೇಳಿದ್ದು ಈಗ ನೆನಪಿಗೆ ಬರುತ್ತದೆ. ಅದು ಏನೆಂದರೆ ಸಂಸ್ಕೃತ, ಪಾರ್ಶೀ ಹಾಗೂ ಇಂಗ್ಲೀಷು ಈ ಮೂರು ಭಾಷೆಗಳಲ್ಲಿರುವ ಪರಸ್ಪರ ನಿಕಟ ಸಂಬಂಧ. ಅದು ಹೇಗೆಂದರೆ—

| ಸಂಸ್ಕೃತ | ಪಾರ್ಶೀ | ಇಂಗ್ಲೀಷು |
|---|---|---|
| ಮಾತರ್ | ಮಾದರ್ | ಮದರ್ |
| ಪಿತರ್ | ಪಿದರ | ಫಾದರ್ |
| ಬ್ರಾತರ್ | ಬಿರಾದರ್ | ಬ್ರದರ್ |

* ಅಬ್ರ್ = ಮೋಡ (ಸಂ – ಅಭ್ರ), ಅಬ್ = ನೀರು (ಸಂ – ಅಪ), ಅಸ್ಬ್ = ಕುದುರೆ (ಸಂ – ಅಶ್ವ), ಸರ್ = ತಲೆ (ಸಂ – ಶಿರ), ಕ್ಷೀರ್ = ಹಾಲು (ಸಂ – ಕ್ಷೀರ), ಇತ್ಯಾದಿ ಇತ್ಯಾದಿ.

‡ ಪಾರ್ಶೀ ಅಂಕೆಗಳು : ೧ ಯೇಕ್, ೨ ದೂ, ೩ ಸೇ, ೪ ಚಹಾರ್, ೫ ಪಂಜ್, ೬ ಷಷ್, ೭ ಹಫ್ತ್, ೮ ಹಸ್ತ್, ೯ ನುಹ್, ೧೦ ದಹ್, ೧೦೦ ಸದ್ (ಹಫ್ತ್=ಸಪ್ತ, ದಹ್=ದಸ್= ದಶ, ಸದ್ = ಶತ). (ಹ = ಸ).

ಆಮೇಲೆ ನನಗೆ ಪಾರ್ಸೀ ಜನದ ಧರ್ಮಗ್ರಂಥವಾದ "ಝೆಂದಾವೆಸ್ತ"ದ ಭಾಷೆಯನ್ನು ಅಭ್ಯಾಸ ಮಾಡಬೇಕೆಂದು ಅನಿಸಿತು. ಏಕೆಂದರೆ ಅದು ಕೇವಲ ಸಂಸ್ಕೃತದ ಹಾಗೆಯೇ ಇದೆಯೆಂದು ಬಹು ವರುಷಗಳ ಹಿಂದೆ ಆ ಬಗೆಗೆ ಒಂದು ಲೇಖನವನ್ನು ನೋಡಿದ್ದೆನು.

ಲಾಹೋರಿನ ಡಿ. ಎ. ವಿ. ಕಾಲೇಜಿನಲ್ಲಿ ಪ್ರೊಫೆಸರರಾಗಿದ್ದ ಶ್ರೀಮಾನ್ ಪಂಡಿತ ರಾಜಾರಾಮ ಎಂಬವರು ಝೆಂದಾವೆಸ್ತದ ಒಂದು ಅಧ್ಯಾಯವನ್ನು ಮೂಲ ಹಾಗೂ ಸಂಸ್ಕೃತ ಶ್ಲೋಕಾನುವಾದ ಹಾಗೂ ಹಿಂದೀ ಅನುವಾದ ಸಹಿತವಾಗಿ ಪ್ರಕಟಿಸಿರುವರು. ಅದಕ್ಕೆ ಸುಮಾರು ನಾಲ್ವತ್ತು ಪುಟದ ಮುನ್ನುಡಿಯನ್ನು ಜೋಡಿಸಿ ಅದರಲ್ಲಿ ಸಂಸ್ಕೃತದ ಯಾವ ಯಾವ ಅಕ್ಷರಗಳು "ಅವೆಸ್ತಾ" ಭಾಷೆಯಲ್ಲಿ ಯಾವ ಯಾವ ಅಕ್ಷರಗಳಾಗಿ ರೂಪಾಂತರ ಹೊಂದಿವೆವೆಂಬುದನ್ನು ಸೋದಾಹರಣ ವಾಗಿ ತೋರಿಸಿರುವರು. ಮುಖ್ಯವಾಗಿ ಸಂಸ್ಕೃತದ ಸಕಾರವು ಅವೆಸ್ತಾದಲ್ಲಿ ಹಕಾರವಾಗುತ್ತದೆ. ಇದನ್ನು ಇಂದಿನ ಆಧುನಿಕ ಪಾರ್ಸಿಯಲ್ಲಿಯೂ ಕಾಣುವೆವು. (ಉದಾ : ಸಪ್ತ=ಹಫ್ತ, ಸಪ್ತಾಹ=ಹಫ್ತಾ)

ತೀರ ಸಾಮ್ಯವುಳ್ಳ ಒಂದು ಶ್ಲೋಕವನ್ನು (ಮಂತ್ರವನ್ನು) ಎರಡೂ ಭಾಷೆ ಗಳಲ್ಲಿ ಕೆಳಗೆ ಕೊಡುವೆನು :

"ಅವೆಸ್ತಾ"

ತಮ್ ಅಮವಂತಮ್ ಯಜತಮ್
ಸೂರಯ್ ದಾಮೋಹು ಸವಿಶ್ತಮ್
ಮಿಥ್ರೆಮ್ ಯಜಾಇ ಜಓಥ್ರಾಭ್ಯೋ ॥

"ಸಂಸ್ಕೃತ"

ತಮ್ ಅಮವಂತಮ್ ಯಜತಮ್
ಶೂರಮ್ ಧಾಮಸು ಶವಿಷ್ಠಮ್
ಮಿತ್ರಮ್ ಯಜೈ ಹೋತ್ರಾಭ್ಯಃ ॥

ಇವೆರಡು ಶ್ಲೋಕಗಳಲ್ಲಿ ವ್ಯತ್ಯಾಸವು ತೀರ ಅತ್ಯಲ್ಪವಾದದ್ದು, ಎರಡೂ ಒಂದೇ ಇವೆಯೋ ಏನೋ ಎಂದು ಅನಿಸುತ್ತದೆ.

ಆಮೇಲೆ ಗ್ರೀಕ ಭಾಷೆಯು ಅಭ್ಯಾಸ ಮಾಡಬೇಕೆಂದು ಅನಿಸಿತು. ಏಕೆಂದರೆ, ಗ್ರೀಕ್ ಲ್ಯಾಟಿನ್‌ಗಳೇ ಯುರೋಪದ ಪುರಾತನ ಮೂಲ ಭಾಷೆಗಳು,

ಗ್ರೀಕ ಅಭ್ಯಾಸವನ್ನು ಶಿಲಾಲೇಖಗಳ ಅಭ್ಯಾಸದಂತೆ ಅಕ್ಷರ ಅಕ್ಷರಕ್ಕೂ ಕಣ್ಣಿಟ್ಟು ಮಾಡಬೇಕಾಯಿತು. ಅಕ್ಷರಗಳ ಪಟವನ್ನು ಇದಿರಿಗೆ ಇಟ್ಟುಕೊಂಡು ಪವಿತ್ರ

ಬಾಯ್ಬಲ್ಲಿನೊಳಗಿನ ಸುವಿಖ್ಯಾತವಾದ "ಪರ್ವತ ಪ್ರಸಂಗ" (ಸರ್ಮನ್ ಆನ್ ದಿ ಮೌಂಟ)ವನ್ನು ಗ್ರೀಕ ಭಾಷೆಯಲ್ಲಿ ಅಭ್ಯಾಸಮಾಡತೊಡಗಿದೆನು. ಇದಲ್ಲದೆ ಮಹಾ ಅನುಭಾವಿಗಳಾದ ಶ್ರೀ ಆರ್. ಡಿ. ರಾನಡೆ ಮಹಾನುಭಾವರು ಬರೆದ "ಗ್ರೀಕ್ ಸಂಸ್ಕೃತ ತುಲನಾತ್ಮಕ ವ್ಯಾಕರಣ" ಎಂಬ ಪುಸ್ತಕವನ್ನು ಓದಿದೆನು. ಸಂಸ್ಕೃತಕ್ಕೂ ಗ್ರೀಕಿಗೂ ಪರಮಾವಧಿ ಸಂಬಂಧವಿದ್ದದ್ದು ಈ ಅಭ್ಯಾಸದಿಂದ ಗೊತ್ತಾಯಿತು.* ಆದರೆ ಗ್ರೀಕ್ ಭಾಷೆಯಲ್ಲಿ ಅರ್ಧಕ್ಕರ್ಧ ಶಬ್ದಗಳು ನನಗೆ ದ್ರಾವಿಡದ ಹಾಗೆ ಅನಿಸಿದವು. ಕೊಲಂಬೋದಲ್ಲಿರುವ ಫಾದರ್ ಕ್ಲೋಸೆಟ್ ಎಂಬ ಭಾಷಾಶಾಸ್ತ್ರಜ್ಞರ "ದ್ರವಿಡಿಯನ್ ಆರಿಜನ್ ಆಫ್ ದಿ ಹ್ಯೂಮನ್ ಸ್ಪೀಚ್" ("ದ್ರಾವಿಡ ಮಾನವ ಭಾಷೆಯ ಮೂಲ") ಎಂಬ ಪುಸ್ತಕದಲ್ಲಿ ಬರೆದ ಈ ಮುಂದಿನ ವಾಕ್ಯವು ನನ್ನ ಈ ಅನಿಸಿಕೆಗೆ ಪ್ರಮಾಣ ರೂಪವಾಯಿತು. ಆ ವಾಕ್ಯವು ಯಾವುದೆಂದರೆ : "Most of the Greek vocabulary can be derived from Dravidian" (ಗ್ರೀಕ ಭಾಷೆಯ ಶಬ್ದಸಂಗ್ರಹದ ಬಹುಭಾಗವು ದ್ರಾವಿಡದಿಂದ ಬಂದುದಾಗಿರುವಂತಿದೆ.")

— ಕ್ಲೋಸೆಟ್‌ರ ಪುಸ್ತಕದ ಪುಟ ೩

ಯುರೋಪದ ಭಾಷೆಗಳು ಸಂಸ್ಕೃತ ಮೂಲದಿಂದ ಬಂದವುಗಳಾಗಿವೆಯೆಂಬುದಕ್ಕೆ ಅತ್ಯಂತ ಸ್ಪಷ್ಟವಾದ ಒಂದು ವ್ಯವಹಾರಿಕ ಉದಾಹರಣೆಯನ್ನು ಕೊಡುವೆನು. ಇಂಗ್ಲೀಷಿನ ತಿಂಗಳುಗಳ ಹೆಸರುಗಳಾದ ಸಪ್ಟಂಬರ್, ಅಕ್ಟೋಬರ್, ನವೆಂಬರ್, ಡಿಶಂಬರ್ ಇವು ಸಪ್ತ, ಅಷ್ಟ, ನವ, ದಶ ಎಂಬ ಅಂಕಿಗಳ ಮೇಲಿಂದ ಆಗಿವೆಯೆಂಬುದು ಗೊತ್ತಾದರೆ ಈ ಮಾತು ಸಹಜವಾಗಿಯೇ ಸಿದ್ಧಾಂತವಾದಂತಾಗುವದಿಲ್ಲವೆ ? ಇಂಗ್ಲೀಷಿನಲ್ಲಿ ಮೊದಲಿಗೆ ತಿಂಗಳುಗಳು ಹತ್ತೇ ಇದ್ದವೆಂದೂ, ಜುಲಿಯಸ್ ಸೀಝರ್, ಅಗಸ್ಟಸ್ ಸೀಝರ್ ಇವರ ಸ್ಮರಣಾರ್ಥವಾಗಿ ಇವರ ಹೆಸರಿನ ಎರಡು ತಿಂಗಳುಗಳು (ಜುಲೈ, ಅಗಸ್ಟ) ಹಿಂದಿನಿಂದ ಸೇರಿಸಲ್ಪಟ್ಟವೆಂದೂ ಹೇಳುತ್ತಾರೆ. ಇದರ ಮೇಲಿಂದ ಹತ್ತು ತಿಂಗಳುಗಳಲ್ಲಿ ಕೊನೆಯ ನಾಲ್ಕೆಂದರೆ ಸಪ್ತ, ಅಷ್ಟ, ನವ, ದಶ (ಸಪ್ಟಂಬರ್, ಅಕ್ಟೋಬರ್, ನವೆಂಬರ್, ಡಿಶಂಬರ್) ಇವೇ ಆಗಬೇಕಲ್ಲವೇ ?

ಗ್ರೀಕ್ ಪುರಾಣಗಳೊಳಗಿನ ಕಥೆಗಳು ಹಿಂದೂ ಪೌರಾಣಿಕ ಕಥೆಗಳಿಗೆ ಹೊಂದುವಂತೆ, ಹಾಗೂ ಗ್ರೀಕರ ಅತಿಪುರಾತನ ತತ್ತ್ವಜ್ಞಾನಿಯಾದ ಹಿರಾಕ್ಲಿಟಸ್ಸಿನ

* ಆಮೇಲೆ ೬೩೦ ಭಾಷೆಗಳ ಪುಸ್ತಕದಲ್ಲಿರುವ ಲ್ಯಾಟಿನ್ ಭಾಷೆಯ ಮಾದರಿಯನ್ನು ನೋಡಿದೆನು. ಮೊನೊಜನೀತಮ್, ಇತರ್ನಮ್ ಮೊದಲಾದ ಉಚ್ಚಾರವನ್ನು ನೋಡಿದರೆ ಇಡೀ ವಾಕ್ಯವೇ ಸಂಸ್ಕೃತ ವಾಕ್ಯವನ್ನೋದಿದಂತೆ (ಉಚ್ಚಾರವು) ಅನಿಸಿತು, ಜನಿತಮ್ ಎಂಬುದು ಹುಟ್ಟಿದ ಎಂಬ ಅರ್ಥದಲ್ಲಿಯೇ ಇದೆಯೆಂಬುದನ್ನು ನೆನೆಸಿದರೆ ಲ್ಯಾಟಿನ್ನೂ ಸಂಸ್ಕೃತವೂ ಎಷ್ಟು ಸಮೀಪವಾದವುಗಳಾಗಿ ತೋರುವವಲ್ಲ ಎಂದೆನಿಸಿತು.

ತತ್ತ್ವಜ್ಞಾನವೂ ವೈದಿಕ ರೂಪದ ಪರಿಭಾಷೆಗೆ ಸರಿಹೊಂದುವಂತೆ. ಗ್ರೀಕ್ ಭಾಷೆಯೂ ಕೂಡ ಸಂಸ್ಕೃತ ಭಾಷಾವರ್ಗಕ್ಕೆ ಸೇರಿದ್ದೆಂದು ತಿಳಿದದ್ದರಿಂದ ಹೃದಯಕ್ಕೆ ಬಹಳ ಹಿಗ್ಗಾಯಿತು. ಭಾಷೆಗಳಷ್ಟೇ ಒಂದಕ್ಕೊಂದು ಹೋಲದೆ ಅತಿಪುರಾತನ ಸಂಸ್ಕೃತಿಯೂ ಜ್ಞಾನವೂ ಕೂಡ ಎರಡೂ ಜನಾಂಗಗಳಲ್ಲಿ ಒಂದೇ ಪ್ರಕಾರದವಾಗಿದ್ದವೆಂಬುದು ಅತಿ ಮಹತ್ವದ ವಿಷಯವಾಗಿದೆ.

ಇಲ್ಲಿ ಇನ್ನೊಂದು ಚಮತ್ಕಾರದ ವಿಷಯವನ್ನು ಹೇಳುತ್ತೇನೆ. ಸುಮಾರು ೨೦ ವರುಷಗಳ ಹಿಂದೆ ನನ್ನೊಬ್ಬ ಗೆಳೆಯರು ಹೆಚ್ಚಿನ ಜ್ಞಾನ ಗಳಿಸುವುದಕ್ಕೆ ಜಪಾನಕ್ಕೆ ಹೋಗಬೇಕೆಂದು ಇಚ್ಛಿಸಿ ಜಪಾನೀ ಭಾಷೆಯನ್ನು ಕಲಿಯುವ ಪುಸ್ತಕವೊಂದನ್ನು ತರಿಸಿದ್ದರು. ಅದು ಎಷ್ಟೋ ದಿವಸ ನನ್ನ ಕಡೆಗೆ ಇದ್ದಿತು. ಆಗ ಅದನ್ನು ಸ್ವಲ್ಪ ಮಟ್ಟಿಗೆ ನೋಡಿದ್ದರಲ್ಲಿ. ಆ ಭಾಷೆಯ ಧಾತುಗಳೆಲ್ಲ ಕನ್ನಡದ "ಮಾಡು, ಬೇಡು, ಸಾರು, ಬೀರು" ಮೊದಲಾದವುಗಳಂತೆ "ಡು" ಹಾಗೂ "ರು" ಎಂಬ ಅಕ್ಷರಗಳಿಂದ ಮುಗಿದಿದ್ದುದು ಕಂಡುಬಂದಿತು. ಇದರಿಂದ ಆ ಭಾಷೆಯು ದ್ರಾವಿಡ ವರ್ಗಕ್ಕೆ ಸೇರಿದುದಾಗಿರಬಹುದೇ ಎಂಬ ಊಹೆ ನನ್ನ ತಲೆಯಲ್ಲಿ ಬಂದಿತು. ಮುಂದೆ ಕೆಲವು ದಿವಸಗಳಲ್ಲಿ ಮ್ಯಾಕ್‌ಮಾರ್ಡಿಯವರ "ಈಡಿಯಮ್ಸ್" ಎಂಬ ಪುಸ್ತಕದ ಸುದೀರ್ಘವಾದ ಭಾಷಾಶಾಸ್ತ್ರ ವಿಷಯಕ ಪ್ರಸ್ತಾವನೆಯಲ್ಲಿ ಅವರು– "ಜಪಾನೀ ಭಾಷೆಯು ದ್ರಾವಿಡ ವರ್ಗಕ್ಕೆ ಸೇರಿದ್ದು" ಎಂದು ಸ್ಪಷ್ಟವಾಗಿ ಬರೆದದ್ದನ್ನು ನೋಡಿ ಅತ್ಯಂತ ಆನಂದಭರಿತನಾದೆನು.

ಆಮೇಲೆ ನನಗೆ ಇನ್ನೊಂದು ಮಾತು ಅನಿಸಹತ್ತಿತು. ಅದಾವುದೆಂದರೆ— "ಜಪಾನ್, ಟಿಬೇಟ, ಮಂಗೋಲಿಯಾ, ಬ್ರಹ್ಮದೇಶ ಮೊದಲಾದ ದೇಶಗಳ ಭಾಷಾವರ್ಗದಲ್ಲಿ ಚೀನದ ಭಾಷೆಯು ಎಲ್ಲಕ್ಕಿಂತ ಶ್ರೇಷ್ಠವಾದುದಾಗಿರುವದರಿಂದ, ಚೀನೀ ಭಾಷೆಯಲ್ಲಿ ದ್ರಾವಿಡದ ಅಂಶವು ಸಿಗಲೇಬೇಕು." ಆದರೆ ಈ ಹತ್ತು ವರುಷಗಳಲ್ಲಿ ೨ನೆಯ ಮಹಾಯುದ್ಧದ ಕಾಲದಲ್ಲಿ ಪರದೇಶದಿಂದ ಪುಸ್ತಕಗಳು ಬಾರದೆ ಇದ್ದುದರಿಂದ ಚೀನೀ ಭಾಷೆಯ ಅಭ್ಯಾಸ ಮಾಡುವುದಕ್ಕೆ ಪುಸ್ತಕಗಳು ಸಿಗಲಿಲ್ಲ.* ಆದರೆ ಮೊನ್ನೆ ಮೊನ್ನೆ ಕೆಲವೇ ತಿಂಗಳುಗಳ ಹಿಂದೆ, ಶಾಂತಿನಿಕೇತನದಲ್ಲಿ ನೃತ್ಯ ವಿದ್ಯಾಭ್ಯಾಸ ಮಾಡುತ್ತಿರುವ ನನ್ನ ನೆರೆಯೂರಿನ ಗೆಳೆಯರಾದ ಪ್ರಿಯ

---

* ಈ ಕಾಲದಲ್ಲಿ ತಿಬೇಟಿ ಭಾಷೆಯನ್ನು ಕಲಿಯುವ ಪುಸ್ತಕವೊಂದು ಲಭಿಸಿತು. ಆದರೆ ಅದರಲ್ಲಿ ನನಗೆ ಗೊತ್ತಿದ್ದ ಯಾವ ಭಾಷೆಗಳಿಗೂ ಸ್ಪಷ್ಟ ಹೋಲಿಕೆಗಳು ಆಗ ಸಿಗಲಾರದ್ದರಿಂದ ಅದನ್ನು ಅಭ್ಯಾಸ ಮಾಡುವುದು ಕಷ್ಟಕರವೆಂದು ಅನಿಸಿತು. ಬ್ರಹ್ಮೀ ಮತ್ತು ಸಿಂಹಳೀ ಭಾಷೆಗಳ ಅಭ್ಯಾಸ ಮಾಡಬೇಕೆಂದರೂ ಆಗ ಪುಸ್ತಕಗಳು ಸಿಗಲಿಲ್ಲ. ಇವೆರಡರ ಅಕ್ಷರ ಪರಿಚಯವು ಕೆಲವಟ್ಟಿಗೆ ಮಾತ್ರ ಆಯಿತು. ಭಾಷಾಜ್ಞಾನವಾಗಲಿಲ್ಲ. ಮುಂದೆ ಸಿಂಹಳಿಯು ಪಾಲೀಭಾಷೆಯಿಂದ ಹುಟ್ಟಿದ್ದೆಂದು ಗೊತ್ತಾಯಿತು. ಸಿಂಹಳದ ರೋಡಿಯಾ ಮತ್ತು ವೆಡಾ ಭಾಷೆಗಳು (ಕಾಡು) ದ್ರಾವಿಡವಾಗಿವೆಯೆಂದು ತೋರುತ್ತದೆ.

ಶ್ರೀಮಾನ್ ಚೆನ್ನಗೌಡರು ಪಾಟೀಲ ಎಂಬವರ ಭೆಟ್ಟಿಯಾಯಿತು. ಅವರು ಶಾಂತಿನಿಕೇತನದಲ್ಲಿ ಚೀನಾ ಭವನದ ಅಧ್ಯಕ್ಷರಾದ ಶ್ರೀ ತಾನ್‌ಯುನ್ ಶಾನ್ ಎಂಬ ಮಹಾನುಭಾವರ ಆಶ್ರಯದಲ್ಲಿದ್ದು ಚೀನೀ ಭಾಷೆಯನ್ನು ಚೆನ್ನಾಗಿ ಕಲಿತಿರುವರು. ಅವರು ನನಗೆ ಚೀನೀ ಭಾಷೆಯನ್ನು ಕಲಿಯುವದಕ್ಕೆ ಬೇಕಾಗುವ ೮-೧೦ ಅಮೌಲ್ಯ ಪುಸ್ತಕಗಳನ್ನು ಕಳಿಸಿರುವರಲ್ಲದೆ ತಮ್ಮ ಸ್ವಂತದ ಮೂರು ಅತ್ಯಂತ ಅಮೌಲ್ಯವಾದ ಟಿಪ್ಪಣಿಯ ಪುಸ್ತಕಗಳನ್ನು ಕಳುಹಿಸಿಕೊಟ್ಟಿರುವರು. ಅವರ ಈ ಅಮೌಲ್ಯ ಸಹಾಯದಿಂದ ನನಗೆ ಚೀನೀ ಭಾಷೆಯ ಅಲ್ಪ ಪರಿಚಯವಾಯಿತು. ನನ್ನ ಉದ್ದೇಶವು ಆ ಭಾಷೆಯಲ್ಲಿ ದ್ರಾವಿಡದ ಅಂಶಗಳನ್ನು ಹುಡುಕುವದಾಗಿದ್ದಿತಷ್ಟೆ? ಮೊದಲಿಗೇ ನನಗೆ ಈ ವಿಷಯದಲ್ಲಿ ಬೇಕಾದಷ್ಟು ಪ್ರಮಾಣಗಳು ಸಿಕ್ಕವು. ಯಾವುದೇ ಭಾಷೆಯಲ್ಲಿ ಇನ್ನಾವುದೇ ಸಜಾತೀಯ ಭಾಷೆಯ ಲಕ್ಷಣವನ್ನು ಹುಡುಕುವದಕ್ಕೆ ಎಲ್ಲಕ್ಕಿಂತ ಮೊದಲಿಗೆ ಆ ಭಾಷೆಯ ಸರ್ವನಾಮಗಳು, ಸಂಬಂಧವಾಚಕ ಶಬ್ದಗಳು ಹಾಗೂ ಅಂಕೆಗಳು ಇವುಗಳನ್ನು ನೋಡಿದರಾಯಿತು. ಸಜಾತೀಯ ಭಾಷೆಯ ಹೋಲಿಕೆಯು ಈ ಮೂರರೊಳಗೆ ಎಲ್ಲಿಯಾದರೂ ಕಂಡುಬಂದೇ ಬರುತ್ತದೆ. ಇದೊಂದು ಸಾಮಾನ್ಯ ವ್ಯವಹಾರಿಕ ನಿಯಮ.

ನಾನು, ನೀನು, ಆತನು ಮೊದಲಾದ ಸರ್ವನಾಮಗಳು ಚೀನೀ ಭಾಷೆಯಲ್ಲಿ ಹೀಗೆ ಇವೆ— ವೋ, ನೀ, ಥಾ. ಇವುಗಳಲ್ಲಿ ಮಧ್ಯಮಪುರುಷವು ಕನ್ನಡದಲ್ಲಿರುವಂತೆ "ನೀ" ಎಂದೇ ಇದೆ. ತೃತೀಯ ಪುರುಷದ "ಥಾ" ಎಂಬುದೂ ಕೂಡ ಕನ್ನಡದ "ತಾನು, ಆತನು, ತಾ, ಆತ" ಎಂಬ ರೂಪಗಳಿಗೆ ಸರಿಹೋಗಬಹುದೋ ಏನೋ ಎಂದು ಅನಿಸುತ್ತದೆ. ಅಂಕೆಗಳಲ್ಲಿ ಎರಡು ಎಂಬುದಕ್ಕೆ ಚೀನಿಯಲ್ಲಿ "ಎರ್" ಎಂದು ಇದೆ. ಧಾತುಗಳಲ್ಲಿ "ಕಾಣು" ಎಂಬುದಕ್ಕೆ ಚೀನಿಯಲ್ಲಿ "ಖಣ್" ಎಂದು ಇದೆ. ಬ್ರಾಹುಯಿ ಭಾಷೆಯಲ್ಲಿ "ಕಣ್ಣು" ಎಂಬುದಕ್ಕೆ "ಖಣ್" ಎಂಬ ಶಬ್ದವಿರುವದನ್ನು ನೆನಿಸಿದರೆ, ಕಾಣ್ ಎಂಬುದು ಚೀನಿಯಲ್ಲಿ ಖಣ್ ಎಂದು ಆದದ್ದು ಸಹಜವೆಂದು ಅನಿಸುವದು. ಅಲ್ಲದೆ ತೆಲುಗಿನ ಚೇಯು (ಮಾಡು) ಎಂಬ ಧಾತುವಿಗೆ ಚೀನೀ ಭಾಷೆಯ ತ್ಸೋ ಅಥವಾ ಚೋ (=ಮಾಡು) ಎಂಬುದೂ, ತಮಿಳಿನ ಶೊಲ್ಲು (ಹೇಳು) ಎಂಬುದಕ್ಕೆ ಚೀನೀಯ ಶೋ (=ಹೇಳು) ಎಂಬುದೂ ತುಂಬಾ ಹೊಂದುತ್ತವೆ. ಹೂವು ಎಂಬುದಕ್ಕೆ ಚೀನಿಯಲ್ಲಿ "ಹುಆ" ಎಂದೂ, ಹೊಳೆ ಎಂಬುದಕ್ಕೆ "ಹೊ" ಶಬ್ದಗಳಿವೆ. ಅನ್ನ ಎಂಬುದಕ್ಕೆ ಕನ್ನಡದ ಬೋನ ಎಂಬ ಶಬ್ದಕ್ಕೆ ಹೋಲುವ ಫಾನ್ ಎಂಬ ಶಬ್ದವು ಚೀನೀಯಲ್ಲಿದೆ. ಕಾಲ್ಡ್‌ವೆಲ್ಲರ "ದ್ರಾವಿಡ ಭಾಷೆಗಳ ತುಲನಾತ್ಮಕ ವ್ಯಾಕರಣ" ಎಂಬ ಪುಸ್ತಕದ ಕೊನೆಯ ಅಧ್ಯಾಯದ ಕೊನೆಯ ಒಂದೆರಡು ಪುಟಗಳಲ್ಲಿ ದ್ರಾವಿಡಕ್ಕೆ ಹೋಲುವ ಇನ್ನೂ ಕೆಲವು ಚೀನೀ, ಜಪಾನೀ, ಮಂಗೋಲಿಯನ್ ಶಬ್ದಗಳನ್ನು ಕೊಟ್ಟಿದ್ದಾರೆ (ಪುಟ ೬೨೩-೬೨೪).

ಇನ್ನು ಒಂದು ಅತಿ ಮಹತ್ವದ ವಿಷಯವು ಯಾವುದೆಂದರೆ, ಭಗವಾನ್ ಶ್ರೀ ಅರವಿಂದರ ವೇದರಹಸ್ಯ (ಸೀಕ್ರೆಟ್ ಆಫ್ ದಿ ವೇದ) ಎಂಬ ಗ್ರಂಥದ ಹಿಂದೀ ಅನುವಾದವನ್ನು ಓದುತ್ತಿರುವಾಗ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಒಂದು ಅತಿ ಮಹತ್ವದ ಮಾತು ಕಂಡಿತು. ಅದಾವುದೆಂದರೆ— "ಆರ್ಯ ಹಾಗೂ ದ್ರಾವಿಡ ಎಂಬವುಗಳು ಎರಡು ಬೇರೆ ಬೇರೆ ಜನಾಂಗಗಳೇ ಅಲ್ಲ. ಅವೆರಡೂ ಒಂದೇ ಜನಾಂಗ. ಅವರ ಭಾಷೆಗಳು ಬೇರೆ ಬೇರೆ ಎರಡು ವರ್ಗದವಲ್ಲ. ಎರಡೂ ಒಂದೇ ವರ್ಗದವು ಗಳು. ಈ ಎರಡೂ ಭಾಷೆಗಳು ಒಂದಕ್ಕೊಂದು ಕೂಡುವವು, ಭಾಷಾಶಾಸ್ತ್ರದ ರೀತಿಯಿಂದ ನಾವು ಸ್ವತಃ ಎರಡೂ ಭಾಷೆಗಳನ್ನು ಕೂಡಿಸಿ ನೋಡಿರುವೆವು" ಎಂಬುದೇ ಆ ಮಹತ್ವದ ಮಾತು. ಇಷ್ಟೇ ಅಲ್ಲ, ಶ್ರೀ ಅರವಿಂದಾಶ್ರಮದ ಮಹತ್ವದ ಹಿರಿಯಸಾಧಕರಲ್ಲೊಬ್ಬರಾದ ಶ್ರೀ ಶ್ರದ್ಧಾನಂದ ಭಾರತಿಯವರು ಬಹಳ ವರ್ಷಗಳ ಹಿಂದೆ ಮದ್ರಾಸಿನ 'ಸಂಡೇ ಟಾಯಿಮ್ಸ್' ಪತ್ರಿಕೆಯಲ್ಲಿ ಮೇಲ್ಕಾಣಿಸಿದ "ವೇದರಹಸ್ಯ"ದ ಆಧಾರದಿಂದ ಬರೆದ ಒಂದು ಲೇಖನದಲ್ಲಿ "ಸಂಸ್ಕೃತ ಹಾಗೂ ದ್ರಾವಿಡ ಭಾಷೆಗಳಿಗೆ ಗ್ರೀಕ್ ಲ್ಯಾಟಿನ್‌ಗಳನ್ನು ಇಟ್ಟುಕೊಂಡು ನೋಡಿದರೆ ಆಗ ಸಂಸ್ಕೃತ ದ್ರಾವಿಡಗಳು ಒಂದಕ್ಕೊಂದು ಹೊಂದುವವೆಂಬುದು ಗೊತ್ತಾಗುವದು. ಹೀಗೆ ನಾವು ಅನೇಕ ತಮಿಳು ಶಬ್ದಗಳನ್ನು ಪರೀಕ್ಷಿಸಿ ಮನಗಂಡಿರುವೆವು." ಎಂದು ಬರೆದಿರುವರು. ಭಗವಾನ್ ಶ್ರೀ ಅರವಿಂದರ ಹಾಗೂ ಅವರ ಹಿರಿಯಶಿಷ್ಯರೊಬ್ಬರ ಈ ಮಹತ್ವಪೂರ್ಣವಾದ ವಾಕ್ಯಗಳನ್ನು ನೋಡಿದ ಮೇಲೆ ನನ್ನ ಆರ್ಯದ್ರಾವಿಡ ಭಾಷೆಗಳ ಅಭ್ಯಾಸವು ಸಾರ್ಥಕವೆಂದು ಅನಿಸಿತು.

ಹಿಂದುಸ್ತಾನದ ಇತಿಹಾಸವನ್ನು ಬರೆದವರಲ್ಲಿ ಮೊದಮೊದಲಿನವರು ಆರ್ಯ, ದ್ರಾವಿಡ ಎಂಬ ಎರಡು ಭೇದಗಳನ್ನು ಕಲ್ಪಿಸದೆ, ಮೊದಲು ಬಂದ ಆರ್ಯರು, ಹಿಂದಿನಿಂದ ಬಂದ ಆರ್ಯರು ಎಂದು ಆರ್ಯರ ಅನೇಕ ತಂಡಗಳ ಆಗಮನವನ್ನು (ಮಧ್ಯ ಏಶಿಯಾದಿಂದ ಹಿಂದುಸ್ತಾನಕ್ಕೆ) ವರ್ಣಿಸಿ, ಬಹುಕಾಲದ ಅಗಲುವಿಕೆಯಿಂದ ಮೊದಲಿನ ತಂಡದವರ ಭಾಷೆಯು ಎರಡನೆಯ ತಂಡದವರ ಭಾಷೆಯಿಂದ ಭಿನ್ನ ವಾಯಿತೆಂದೂ ಅದೇ ಈಗಿನ ದ್ರಾವಿಡವೆಂದೂ ಹೇಳಿರುವರು. ಆದರೆ ಮುಂದು ಮುಂದಿನ ಗ್ರಂಥಕಾರರು ಆರ್ಯರು ಬರುವದಕ್ಕಿಂತ ಮುಂಚೆ ಭರತಖಂಡದಲ್ಲಿ ಮೂಲತಃ ವಾಸಮಾಡಿಕೊಂಡಿದ್ದ ಜನರೇ ದ್ರಾವಿಡರೆಂತಲೂ, ಆರ್ಯರಿಗೂ ಇವರಿಗೂ ಪರಸ್ಪರ ಕದನಗಳೂ ನಡೆಯುತ್ತಿದ್ದವೆಂತಲೂ, ಈ ವರ್ಣನೆಯನ್ನೇ ವೇದದಲ್ಲಿ ಆರ್ಯರಿಗೂ ದಸ್ಯುಗಳಿಗೂ ಆದ ಯುದ್ಧರೂಪದಲ್ಲಿ ಮಾಡಲಾಗಿದೆ ಯೆಂತಲೂ ಹೇಳಿದರು. ಆದರೆ ವೇದದಲ್ಲಿರುವ ದಸ್ಯು ಮೊದಲಾದ ಹತ್ತು ತಂಡ ಗಳು ಆರ್ಯರೊಳಗಿನವೇ ಆದ ಉಪತಂಡಗಳೆಂತಲೂ ಆ ತಂಡಗಳೊಳಗೆ ಪರಸ್ಪರ ಯುದ್ಧವಾದ ವರ್ಣನೆ ವೇದದಲ್ಲಿದೆಯೆಂತಲೂ ಶ್ರೀಮಾನ್ ದಾಸ್ ಎಂಬ ಮಹನೀಯರು ತಮ್ಮ "ಋಗ್ವೇದಿಕ್ ಕಲ್ಚರ್" ಎಂಬ ಗ್ರಂಥದಲ್ಲಿ ಸವಿಸ್ತಾರವಾಗಿ

ವಿವರಿಸಿರುವರು. ಋಗ್ವೇದದ ದಸ್ಯುಗಳು ಆರ್ಯರೊಳಗಿನವರೇ ಇದ್ದರೆಂದ ಬಳಿಕ ಮೊದಲನೆಯ ಪ್ರಕಾರದ ಗ್ರಂಥಕಾರರ ಸಿದ್ಧಾಂತವೇ ಸಮಂಜಸವೆಂಬುದರಲ್ಲಿ ಸಂಶಯವಿಲ್ಲ. ಆರ್ಯರ ಅನೇಕ ತಂಡಗಳು ಸಾವಿರಾರು ವರುಷಗಳ ಪರಸ್ಪರಾಂತರ ದಿಂದ ಬಂದಿರಬಹುದು. ಮೊದಲಿನವರಿಗೂ ಹಿಂದಿನವರಿಗೂ ಬಹುಕಾಲ ಸಂಪರ್ಕ ತಪ್ಪಿದ್ದರಿಂದ ಮೊದಲಿನವರ ಭಾಷೆಯು ಹಿಂದಿನವರ ಭಾಷೆಗಿಂತ ಭಿನ್ನರೂಪ ತಳೆದಿರಬಹುದು. ಇದು ಸ್ವಾಭಾವಿಕವಾಗಿದೆ.

ಈಗ ದ್ರಾವಿಡ ಭಾಷೆಯ ಮೂಲವನ್ನೇ ನೋಡುವಾ. ಬಲೂಚಿಸ್ತಾನ ದಲ್ಲಿರುವ ಕಾಡು ಜನರ ಒಂದು ತಂಡದವರ ಭಾಷೆಯಾದ ಬ್ರಾಹುಯೀ ಎಂಬುದೂ, ಬಿಹಾರದಲ್ಲಿರುವ ಕಾಡುಜನರ ಒಂದು ತಂಡದ ಭಾಷೆಯಾದ ರಾಜಮಹಾಲಿಯೂ, ಛೋಟಾನಾಗಪುರದ ಒಂದು ಕಾಡುತಂಡದ ಭಾಷೆಯಾದ ಆರಾವೋನ್ ಎಂಬುದೂ ದ್ರಾವಿಡ ಭಾಷೆಗಳಾಗಿವೆಯೆಂಬ ಮಾತು ನಮಗೆ ಈ ಮೊದಲೇ ಗೊತ್ತಾಗಿದೆಯಷ್ಟೇ ! ಆದರೆ ಇವಕ್ಕಿಂತ ಆಶ್ಚರ್ಯಕರವಾದ ವಿಷಯವು ಇನ್ನೊಂದಿದೆ. ಅದಾವುದೆಂದರೆ, ಇರಾಣದಲ್ಲಿ ಬೆಹಿಸ್ತನ್ ಎಂಬಲ್ಲಿ ದೊರೆತ ಕ್ರಿಸ್ತಪೂರ್ವ ೫೦೦ ನೆಯ ವರುಷದ ಸುಮಾರಿಗೆ ಬರೆದ ಡರಿಯಾರಸನ ಶಾಸನಗಳಲ್ಲಿ ಉಪಯೋಗಿಸಿದ ಮೂರು ಭಾಷೆಗಳಲ್ಲಿ (ಪುರಾತನ ಪಾರ್ಸೀ, ಬಾಬಿಲೋನಿಯನ್ ಮತ್ತು ಮಿಡೋಪರ್ಶಿಯನ್ ಸಾಮ್ರಾ ಜ್ಯದ ಭಾಷೆಯಾದ ಸಿಥಿಯನ್) ಸಿಥಿಯನ್ ಎಂಬುದು ತುಂಬಾ ದ್ರಾವಿಡ ವರ್ಗ ದ್ದಾಗಿದೆ. ಕಾಲ್ಡ್‌ವೆಲ್ಲರು ತಮ್ಮ ಪ್ರಖ್ಯಾತ ಗ್ರಂಥದಲ್ಲಿ (ಪು. ೬೬) ಈ ಸಿಥಿಯನ್ ಭಾಷೆಯು ದ್ರಾವಿಡಕ್ಕೆ ಒಂಬತ್ತು ವಿಷಯಗಳಲ್ಲಿ ಕೂಡುವದೆಂದು ಸಪ್ರಮಾಣವಾಗಿ ತೋರಿಸಿರುವರು. ಉದಾಹರಣಾರ್ಥವಾಗಿ ಈ ಭಾಷೆಯಲ್ಲಿ ದ್ವಿತೀಯ ಪುರುಷದ ಸರ್ವನಾಮವು "ನೀ" ಎಂದು ಇದೆ. ಚತುರ್ಥೀವಿಭಕ್ತಿ ಪ್ರತ್ಯಯವು ತಮಿಳು ಮಲಯಾಳಂಗಳಂತೆ "ಇಕ್ಕಿ" "ಇಕ್ಕ" ಎಂದು ಇದೆ. "ನಿನಗೆ" ಎಂಬುದರ ರೂಪವು ಈ ಶಾಸನದಲ್ಲಿ "ನಿನಿಕ್ಕ" ಎಂದು ಇದೆ. ಮಲಯಾಳಂದಲ್ಲಿ ಇದು "ನಿನಕ್ಕು" ಎಂದೂ ಕನ್ನಡದಲ್ಲಿ "ನಿನಗೆ" ಎಂದೂ ಆಗುವದು. ಇರಲಿ, ಇದರ ಮೇಲಿಂದ ಕಾಲ್ಡ್‌ವೆಲ್ಲರು ಇನ್ನೊಂದು ದೃಢ ಸಿದ್ಧಾಂತಕ್ಕೆ ಬಂದಿದ್ದಾರೆ. ಅದಾವುದೆಂದರೆ—

"From the discovery of these analogies, we are led to conclude that the Dravidian race, though resident in India from a period long prior to the commencement of history, originated in central tracts of Asia." —Page 67

"ಈ ಸಾದೃಶ್ಯಗಳ ಸಂಶೋಧನೆಯ ಮೂಲಕ ನಾವು ಯಾವ ಸಿದ್ಧಾಂತಕ್ಕೆ ಬಂದಿರುವೆವೆಂದರೆ, ದ್ರಾವಿಡ ಜನಾಂಗವು ಇತಿಹಾಸವು ಹೇಳುವುದಕ್ಕಿಂತ ಬಹು ಪೂರ್ವದಿಂದಲೂ ಭಾರತದ ರಹವಾಸಿಯಾಗಿದ್ದರೂ ಅದರ ಮೂಲಸ್ಥಾನವು ಮಧ್ಯ ಏಶಿಯಾದ ಭೂಪ್ರದೇಶವೇ ಆಗಿದೆ." —ಪುಟ ೬೭

ಇದರ ಮೇಲಿಂದ ನೋಡಿದರೆ ಆರ್ಯರ ಮೂಲಸ್ಥಾನವೂ ದ್ರಾವಿಡರ ಮೂಲಸ್ಥಾನವೂ ಒಂದೇ ಎಂದು ಸಿದ್ಧವಾದಂತಾಯಿತು.

ಉತ್ತರ ಯುರೋಪದಲ್ಲಿರುವ ಫಿನ್ಲಾಂಡಿನ ಭಾಷೆಯೂ ಸೈಬೀರಿಯಾದ ಓಸ್ತಿಯಾಕ್ ಹಾಗೂ ಉಗಿಯನ್ ಜನರಾಡುವ ಭಾಷೆಗಳೂ, ಹಂಗೇರಿಯನ್ ಹಾಗೂ ತುರ್ಕೀ ಭಾಷೆಗಳೂ, ಮಂಗೋಲಿಯನ್ ಭಾಷೆಯೂ ಅಲ್ಲದೆ ಈ ವರ್ಗದ ಮೂವತ್ತರಷ್ಟು ಚಿಕ್ಕಪುಟ್ಟ ಭಾಷೆಗಳೂ ಸಿಥಿಯನ್ ಅಥವಾ ತುರೇನಿಯನ್ ವರ್ಗಕ್ಕೆ ಸೇರಿದವುಗಳಾಗಿದ್ದು ಇವೆಲ್ಲ ಭಾಷೆಗಳಿಗೂ ದ್ರಾವಿಡ ಭಾಷೆಗಳಿಗೂ ಲಕ್ಷಣ ಸಾದೃಶ್ಯವು ವಿಶೇಷವಾಗಿದೆಯೆಂದು ಕಾಲ್ಡ್‌ವೆಲ್ಲರು ತಮ್ಮ ಗ್ರಂಥದಲ್ಲಿ ಸವಿಸ್ತಾರ ವಾಗಿ ತೋರಿಸಿಕೊಟ್ಟಿದ್ದಾರಷ್ಟೇ ಅಲ್ಲ, "ದ್ರಾವಿಡ ಭಾಷೆಗಳ ವಿಶೇಷ ವಾಕ್‌ಪದ್ಧತಿಯು ಯಾವ ವರ್ಗದ ಭಾಷೆಗಳಿಗೆ ಸಂಬಂಧಿಸಿದ್ದು ?" ಎಂಬ ಶೀರ್ಷಕದಲ್ಲಿ ಸವಿಸ್ತಾರವಾಗಿ ಪರ್ಯಾಲೋಚಿಸಿ, ಸಿಥಿಯನ್ ವರ್ಗಕ್ಕೆ ಸೇರಿದ್ದೆಂದು ನಿರ್ಧರಿಸಿದ್ದಾರೆ.

—ಪುಟ ೬೧-೭೭

ಮಧ್ಯ ಏಶಿಯಾ ಹಾಗೂ ಉತ್ತರ ಯುರೋಪದ ಅನೇಕ ಭಾಷೆಗಳಲ್ಲಿ ದ್ರಾವಿಡದ ಲಕ್ಷಣವು ಬೇಕಾದಷ್ಟು ಇದೆಯೆಂದು ಭಾಷಾಶಾಸ್ತ್ರಜ್ಞರಿಗೆ ಈಗ ಮನಗಂಡ ಮಾತಾಗಿದೆ. ಏಶಿಯಾದಲ್ಲಿ ತುರ್ಕೀ, ಮಂಗೋಲಿಯನ್ ಮೊದಲಾದ ಭಾಷೆಗಳಲ್ಲಿಯೂ, ಯುರೋಪದಲ್ಲಿ ಫಿನ್ನಿಕ್ ಮತ್ತು ಹಂಗೇರಿಯನ್ ಮೊದಲಾದ ಭಾಷೆಗಳಲ್ಲಿಯೂ ದ್ರಾವಿಡದ ಸಾದೃಶ್ಯವು ವಿಪುಲವಾಗಿದೆಯೆಂಬುದಂತೂ ಸರಿಯೇ ಸರಿ; ಆದರೆ ಇಡೀ ಯುರೋಪಿನ (ಇಂಡೋ ಯುರೋಪಿಯನ್) ಸರ್ವಭಾಷೆಗಳಲ್ಲಿ ದ್ರಾವಿಡದ ಹೊಂದಿಕೆಯು ಎಂಟು ವಿಷಯಗಳಲ್ಲಿ ಕಂಡುಬರುವದೆಂದು ಕಾಲ್ಡ್‌ವೆಲ್ಲರು ತಮ್ಮ ಪ್ರಖ್ಯಾತ ಗ್ರಂಥದ ೭೩ನೆಯ ಪುಟದಲ್ಲಿ ತೋರಿಸಿಕೊಟ್ಟಿದ್ದಾರೆ. ಇದೆಲ್ಲ ವಿವರಣೆಯ ಮೇಲಿಂದ ಮಧ್ಯ ಏಶಿಯಾದ ತುರೇನಿಯನ್ ಅಥವಾ ಸಿಥಿಯನ್ ವರ್ಗದ ಭಾಷೆಗಳ ಹಾಗೂ ಯುರೋಪಿನ ಸಕಲ ಸಣ್ಣ ದೊಡ್ಡ (ಇಂಡೋ ಯುರೋಪಿಯನ್) ಭಾಷೆಗಳ ಇತ್ಯರ್ಥ ಮಾಡುವುದು ಸಾಧ್ಯವಿದೆಯೆಂದು ಇದೆಲ್ಲ ಮಾತಿನಿಂದ ಸೂಚಿತವಾಗುವದಿಲ್ಲವೆ ?

ಯುರೋಪಿಯನ್ ಆರ್ಯರಿಗೂ ಸಂಸ್ಕೃತ ಆರ್ಯರಿಗೂ ಮಧ್ಯವರ್ತಿಯಾದ ಇನ್ನೊಂದು ಆರ್ಯರ ಗುಂಪು ಇದ್ದು ಅದರ ನೇರವಾದ ಅವಶೇಷಗಳೇ ಇಂದಿನ ಮಧ್ಯ ಏಶಿಯಾದ ತುರೇನಿಯನ್ ಅಥವಾ ಸಿಥಿಯನ್ ಜನಾಂಗಗಳೆಂದು ಭಾವಿಸಿಕೊಂಡರೆ ಸರಿಯಾಗಬಹುದೋ ಏನೋ ಎಂದು ನನಗೆ ಅನಿಸುತ್ತದೆ;

ಇಂತಹದೇ ಒಂದು ಸಿದ್ಧಾಂತಕ್ಕೆ ಕಾಲ್ಡ್‌ವೆಲ್ಲರು ಸಹ ತಮ್ಮ ಪುಸ್ತಕದಲ್ಲಿ ಬಂದು ಮುಟ್ಟಿದ್ದಾರೆ. ಅದು ಏನೆಂದರೆ— "If this view be correct

(as I think it will be shown to be) the Indo-Europeanisms discoverable in the Dravidian languages carry us back to a period beyond all history, beyond all mythology, not only prior to the separation of the western branches of the Indo-European race from the eastern, but prior also to the separation of the yet undivided Indo-European race from that portion of the common stock which was afterwards styled sythian." —page 74

"ಈ ದೃಷ್ಟಿಕೋನವು ಸರಿಯಾಗಿದ್ದುದಾದರೆ (ಹಾಗೆ ಇದೆಯೆಂದು ತೋರಿಸಿ ಕೊಡಬಹುದೆಂದು ನನಗೆ ಅನಿಸುತ್ತದೆ), ದ್ರಾವಿಡ ಭಾಷೆಗಳಲ್ಲಿ ಇಂಡೋ-ಯುರೋಪಿಯನ್* ಭಾಷಾತತ್ತ್ವಗಳನ್ನು ಕಂಡುಕೊಳ್ಳಲಿಕ್ಕೆ ಶಕ್ಯವಿದೆಯೆಂಬ ಸಂಶೋಧನವು ನಮ್ಮನ್ನು ಇತಿಹಾಸ ಹಾಗೂ ಪುರಾಣಗಳೆರಡಕ್ಕೂ ಗೊತ್ತಿಲ್ಲದ ಒಂದು ಕಾಲಮಾನದ ಕಡೆಗೆ ಹಿಂದಕ್ಕೆ ಕರೆದುಕೊಂಡು ಹೋಗುತ್ತದೆ. ಇದು ನಮ್ಮನ್ನು ಎಷ್ಟು ಹಿಂದಕ್ಕೆ ಕರೆದುಕೊಂಡು ಹೋಗುವದೆಂದರೆ, ಪಶ್ಚಿಮ ಇಂಡೋ-ಯುರೋಪಿಯನ್ ಜನಾಂಗಗಳು ಭಿನ್ನತೆ ಪಡೆದ ಕಾಲಕ್ಕಿಂತ ಮೊದಲಿಗಷ್ಟೇ ಅಲ್ಲ, ಆದರೆ ಅಖಂಡ ಇಂಡೊ-ಯುರೋಪಿಯನ್ ಜನಾಂಗವು ತನ್ನ ಮೂಲ ಶಾಖೆಯಿಂದ, ಯಾವುದಕ್ಕೆ ಹಿಂದಿನಿಂದ ಸಿಥಿಯನ್† ಶಾಖೆಯೆಂದು ಹೆಸರಿಡಲಾಯಿತೋ ಆ ಶಾಖೆಯಿಂದ, ಭಿನ್ನವಾಗುವದಕ್ಕಿಂತ ಮುಂಚಿನ ಕಾಲಮಾನಕ್ಕೆ ಕರೆದುಕೊಂಡು ಹೋಗುತ್ತದೆ."
—ಪುಟ ೭೪

ಕಾಲ್ಡ್‌ವೆಲ್ಲರು ಭಾರತೀಯ, ಇರಾಣಿಯನ್ ಹಾಗೂ ಯುರೋಪಿಯನ್ ಆರ್ಯರಿಗೆಲ್ಲ ಈ ಸಿಥಿಯನ್ನರು ಮೂಲ ಜನಾಂಗದವರಾಗಿರುವರೆಂದು ಹೇಳುವದರ

* ಇಡಿ ಮಾನವ ಜನಾಂಗದ ಭಾಷೆಗಳಲ್ಲಿ ಸೆಮಿಟಿಕ್, ಹೆಮಿಟಿಕ್ ಮೊದಲಾದ ೧೨ ಮುಖ್ಯ ಭಾಷಾವರ್ಗಗಳನ್ನು ಮಾಡಿದ್ದು ಇಂಡೋ-ಯುರೋಪಿಯನ್ ಎಂಬುದು ಇವುಗಳಲ್ಲಿ ಮೊದಲನೆಯದಾಗಿದೆ. ಈ ಇಂಡೋ-ಯುರೋಪಿಯನ್ ಮುಖ್ಯ ವರ್ಗದಲ್ಲಿ ಇಂಡೋ-ಇರಾಣಿಯನ್, ಗ್ರೀಕ್, ಇಟಾಲಿಕ್, ಕೆಲ್ಟಿಕ್ ಮೊದಲಾದ ೮ ಉಪವರ್ಗಗಳಿವೆ. ಇಂಡೋ-ಯುರೋಪಿಯನ್ ಎಂದು ಅಂದಾಗ, ಯುರೋಪಿಯನ್, ಇರಾಣಿಯನ್ ಹಾಗೂ ಭಾರತೀಯ, ಆರ್ಯರೆಲ್ಲರ ಭಾಷೆಗಳೆಂದು ಅರ್ಥವಾಗುತ್ತದೆ. ಸಿಥಿಯನ್ ಎಂಬುದೂ ಈ ೧೨ ಮುಖ್ಯ ವರ್ಗಗಳಲ್ಲೊಂದಾಗಿದೆ.

† ಸಿಥಿಯನ್ ಎಂಬುದು, ಇಡಿ ಮಾನವ ಭಾಷೆಗಳಲ್ಲಿ ಮಾಡಿದ ೧೨ ಮುಖ್ಯ ವರ್ಗಗಳಲ್ಲಿ ಒಂದಾಗಿದೆ. (ಯೂರಲ್ ಅಲ್ಟಾಯಿಕ್ ಎಂಬುದು ಇದರದೇ ಬೇರೊಂದು ಹೆಸರಾಗಿದೆ.) ತುರೇನಿಯನ್ ಎಂದರೂ ಇದೇ. ಮಂಗೋಲಿಯಾ, ಮಂಚೂರಿಯಾ, ಸೈಬೇರಿಯಾದ ಭಾಷೆಗಳೆಲ್ಲ ಈ ವರ್ಗಕ್ಕೆ ಸೇರಿದವುಗಳಾಗಿವೆ. ಇದಕ್ಕೂ ದ್ರಾವಿಡಕ್ಕೂ ಅತಿಶಯವಾದ ಹೋಲಿಕೆಯಿದೆ ಎಂದು ಕಾಲ್ಡ್‌ವೆಲ್ಲರು ತೋರಿಸಿದ್ದಾರೆ.

ಮೇಲಿಂದ, ಸಿಥಿಯನ್ ಭಾಷಾವರ್ಗಕ್ಕೆ ಸೇರುವ ದ್ರಾವಿಡ ಭಾಷೆಗಳನ್ನಾಡುವ ಇಂದಿನ ದ್ರಾವಿಡರಿಗಾದರೂ ಈ ಸಿಥಿಯನ್ನರೇ ಮೂಲ ಜನಾಂಗವಾಗಿರಬಹುದೆಂದು ಗ್ರಹಿಸಲಿಕ್ಕೆ ಶಕ್ಯವಿದೆಯಲ್ಲವೆ ?

ಹಾಗಾದರೆ, ಯುರೋಪಿಯನ್ ಆರ್ಯರು, ಸಂಸ್ಕೃತ ಆರ್ಯರು, ಇರಾಣಿಯನ್ ಆರ್ಯರು ಎಂದು ಹೇಳುವಂತೆ ಈ ದ್ರಾವಿಡ ಭಾಷಾವರ್ಗದವರ ಮೂಲ ಜನಾಂಗಕ್ಕೆ ಸಿಥಿಯನ್ ಆರ್ಯರೆಂದು ಹೆಸರಿಡಬಹುದಲ್ಲವೆ ? ತಜ್ಞರು ಈ ವಿಷಯವನ್ನು ಪರ್ಯಾಲೋಚಿಸಿ ನಿರ್ಧರಿಸಬಹುದು. ನನ್ನ ಅಲ್ಪ ಮತಿಗೆ ತಿಳಿದಂತೆ ನಾನಿಲ್ಲಿ ವಿವರಿಸಿದ್ದೇನೆ.

ಇನ್ನು ಒಂದೆರಡು ವಿಷಯಗಳನ್ನು ಸೂಚಿಸಿ ನನ್ನೀ ಲೇಖನವನ್ನು ಮುಗಿಸುತ್ತೇನೆ. ರೆವ್ಹರೆಂಡ್ ಕಿಟ್ಟೆಲ್ ಅವರು ತಮ್ಮ ಬಹುದೊಡ್ಡದಾದ ಕನ್ನಡ ಇಂಗ್ಲೀಷು ಕೋಶದ ಆರಂಭದಲ್ಲಿ ಸುಮಾರು ಎಳೆಂಟು ನೂರು ಶುದ್ಧ ಕನ್ನಡ ಶಬ್ದಗಳು ಸಂಸ್ಕೃತದಿಂದ ಬಂದವುಗಳಾಗಿವೆಯೆಂದು ತೋರಿಸಿದಾಗ ಎಲ್ಲರೂ "ಯುರೋಪಿಯನ್ನರು ಏನಾದರೊಂದು ಊಹೆಯನ್ನು ಎಬ್ಬಿಸುತ್ತಾರೆ" ಎಂದು ಅಂದುಕೊಳ್ಳುವಂತಾಗಿದ್ದಿತು. ಆದರೆ ಕಾಲ್ಡ್‌ವೆಲ್ಲರು ತಮ್ಮ ಪ್ರಖ್ಯಾತವಾದ "ದ್ರಾವಿಡ ಭಾಷೆಗಳ ತುಲನಾತ್ಮಕ ವ್ಯಾಕರಣ" ಎಂಬ ಗ್ರಂಥದಲ್ಲಿ ದ್ರಾವಿಡ ಶಬ್ದಗಳು ಸಂಸ್ಕೃತಕ್ಕೆ ಹೋಲುತ್ತವೆಂಬುದಿಷ್ಟೇ ಅಲ್ಲ, ಆದರೆ ಯುರೋಪಿಯನ್ ಭಾಷೆಗಳಿಗೂ, ಸಿಥಿಯನ್ ಭಾಷೆಗಳಿಗೂ, ತಿರುಗಿ ಕೇಳಿದರೆ ಹಿಬ್ರೂ ಮೊದಲಾದ ಸೆಮಿಟಿಕ್ ಭಾಷೆಗಳಿಗೂ ಸಹ (ದ್ರಾವಿಡ ಶಬ್ದಗಳು) ಹೋಲುವವೆಂಬ ಮಾತನ್ನು ತೋರಿಸಿಕೊಟ್ಟು ಹೋಲಿಕೆಯ ಶಬ್ದಗಳ ಸವಿಸ್ತಾರ ಯಾದಿಗಳೊಂದಿಗೆ ಕೊನೆಯ ಒಂದು ಅಧ್ಯಾಯವನ್ನೇ ಬರೆದಿರುವರು. ಅರುವತ್ತು ಪುಟದ ಈ ಯಾದಿಗಳನ್ನು ನೋಡಿದರೆ ಅಭ್ಯಾಸಿಯು ಸ್ತಂಭಿತನಾಗುತ್ತಾನೆ. ಉದಾಹರಣಾರ್ಥವಾಗಿ :

೧) ನೆಯ್ = ನೇಯುವುದು, ಸಂಸ್ಕೃತ ನಹ್ = ನೂಲುವುದು, ಗ್ರೀಕ್ ನೇಥೋ, ಜರ್ಮನ್ ನಾಹೆನ್ = ಹೊಲಿ, ಲ್ಯಾಟಿನ್ ನೆಕ್ತೊ (ಇದು ಸಂಸ್ಕೃತ ವರ್ಗಕ್ಕೆ ಉದಾಹರಣೆ).

೨) ಅಕ್ಕ = ಸಹೋದರಿ, ತುಂಗ್ಸಿಯನ್ ಒಕಿ ಅಥವಾ ಅಕಿನ್, ಮಂಗೋಲಿಯನ್ ಆಚೆನ್, ತಿಬೇಟ ಅಚ್ಛೆ, ಒಂದು ತುರ್ಕಿ ಉಪಭಾಷೆಯಲ್ಲಿ ಎಗೆ, ಮಾರ್ಡ್ವಿನ್ ಅಕೀ, (ಇದು ಸಿಥಿಯನ್ ವರ್ಗಕ್ಕೆ ಉದಾಹರಣೆ).

೩) ಮಗನ್= ಪುತ್ರ, ಗಾಥಿಕ್ ಮಗುಸ್, ಗಾಯೆಲಿಕ್ ಮಕ್, ಲ್ಯಾಟಿನ್ ಮಸ್ = ಗಂಡು (ಇದು ಪಶ್ಚಿಮ ಯುರೋಪಿಯನ್ ವರ್ಗಕ್ಕೆ ಉದಾಹರಣೆ).

೪) ಬಾ=ಆಗಮಿಸು, ಹಿಬ್ರೂ ಬೋ, ಬಾಬಿಲೋನಿಯನ್ ಬ (ಇದು ಸೆಮಿಟಿಕ್ ವರ್ಗಕ್ಕೆ ಉದಾಹರಣೆ).

ಮಾದರಿಗಾಗಿ ಒಂದೊಂದು ಉದಾಹರಣೆಯನ್ನು ದಾತ್ರ ತೋರಿಸಲಾಯಿತು. ವಿಶೇಷ ವಿವರಗಳನ್ನು ತಿಳಿಯಲಪೇಕ್ಷಿಸುವವರು ಕಾಲ್ಡ್‌ವೆಲ್ಲರ ಗ್ರಂಥದ ಕೊನೆಯ ೭ ನೆಯ ಅಧ್ಯಾಯವನ್ನೂ, ಕೊಟ್ಟಕೊನೆಯ ಪರಿಶಿಷ್ಟವನ್ನೂ ಅವಶ್ಯವಾಗಿ ನೋಡಬೇಕು.

ಇನ್ನೊಂದು ವಿಷಯವೆಂದರೆ, ಹಾಗೆ ಹಿಂದಕ್ಕೆ ಹಿಂದಕ್ಕೆ ಹೋದರೆ ಸಮಸ್ತ ಮಾನವ ಕೋಟಿಯ ಮೂಲಭಾಷೆಯು ಒಂದೇ ಇರಬಹುದೆಂಬ ಸಿದ್ಧಾಂತಕ್ಕೆ ಮುಟ್ಟಬಹುದಾದ್ದರಿಂದ, ಈ ಭಾಷೆ ಆ ಭಾಷೆಗೆ ಹೊಂದುತ್ತದೆ, ಎಂಬ ಮಾತಿನಲ್ಲಿ ಅರ್ಥವಾದರೂ ಏನಿದೆ, ಎಂಬ ಅನಿಸಿಕೆಗೆ ಸಂಶೋಧಕರು ಬಂದು ಮುಟ್ಟುವ ಸಂಭವವಿದೆ. ಸ್ವತಃ ಕಾಲ್ಡ್‌ವೆಲ್ಲರಿಗೇ ಒಮ್ಮೊಮ್ಮೆ ಹೀಗೆ ಅನಿಸಿರುವ ಮಾತು ಅವರ ಗ್ರಂಥದಲ್ಲಿಯೇ ಕಂಡುಬರುವದು. ಉದಾ :

"What a confirmation of the statement that 'God hath made of one blood all nations of men, to dwell upon the face of the whole earth !" — Page 68.

" 'ಪರಮಾತ್ಮನು ಸಕಲಮಾನವ ಜನಾಂಗಗಳನ್ನು ಒಂದೇ ರಕ್ತದಿಂದ ನಿರ್ಮಿಸಿ ಸಮಸ್ತ ಪೃಥ್ವಿಯ ಮೇಲೆ ವಾಸಿಸುವಂತೆ ಮಾಡಿದನು', ಎಂಬ ಹೇಳಿಕೆಯು ದೃಢ ಸಿದ್ಧಾಂತವಿದು ತಾನೆ !" — ಪುಟ ೬೮.

ಕಾಲ್ಡ್‌ವೆಲ್ಲರೇ ಹೀಗೆ ವಿಸ್ಮಿತರಾಗಿರುವಾಗ ನಮಗೆ ಹಾಗೆ ಅನಿಸುವದರಲ್ಲಿ ಆಶ್ಚರ್ಯವೇನು ? ಆದರೆ, ಪೃಥ್ವಿಯ ಮೇಲಿನ ಅನೇಕ ಕಾಡುಜನರ ಭಾಷೆಗಳ ಅಭ್ಯಾಸದಿಂದ ಈ ಪ್ರಶ್ನೆಯು ತೊಡಕು ಬಿಡಬಹುದು. ಹೇಗೆಂದರೆ, ಓಸಿಯಾನಿಯಾ ಖಂಡದ ಅನೇಕಾನೇಕ ನಡುಗಡ್ಡೆಗಳ ಕಾಡುಜನರ ಭಾಷೆ, ಆಫ್ರಿಕಾ ಹಾಗೂ ಅಮೇರಿಕೆಯ ಕಾಡುಜನರ ಭಾಷೆ, ಇವು ಎರಡು ವಿಶೇಷ ವರ್ಗದ ಭಾಷೆಗಳಿರುವ ಸಂಭವವಿದೆ. ಏಕೆಂದರೆ, ಇಜಿಪ್ತದ ಅತಿಪುರಾತನ ಶಿಲಾಲಿಪಿಗಳ ಅಕ್ಷರಗಳೂ ಅಮೇರಿಕೆಯಲ್ಲಿರುವ ಮೆಕ್ಸಿಕೋದ ಅತಿಪುರಾತನ ಅವಶೇಷಗಳಲ್ಲಿರುವ ಶಿಲಾಲಿಪಿಗಳ ಅಕ್ಷರಗಳೂ ಕೇವಲ ಒಂದೇ ಇರುವುದರಿಂದ, ಆಫ್ರಿಕಾ ಅಮೇರಿಕಗಳ ನಡುವಿರುವ ಅಟ್ಲಾಂಟಿಕ್ ಮಹಾಸಾಗರದಲ್ಲಿ ಒಂದಾನೊಂದು ಅತ್ಯಂತ ಪುರಾತನಕಾಲದಲ್ಲಿ ದೊಡ್ಡ ಭೂಖಂಡವಿದ್ದಿತೆಂದೂ, ಅದು ಅಮೇರಿಕಾ ಆಫ್ರಿಕಾಗಳನ್ನು ಜೋಡಿಸಿದ್ದಿತೆಂದೂ ಇತ್ತೀಚೆಗೆ ಕೆಲವರಿಗೆ ಮನವರಿಕೆಯಾಗಹತ್ತಿದ ಮಾತಿನಲ್ಲಿ ತಥ್ಯಾಂಶವಿದ್ದಂತೆ ತೋರುತ್ತದೆ; ಅದರಂತೆ ಆಸ್ಟ್ರೇಲಿಯಾ ಅಮೇರಿಕಗಳ ನಡುವೆ ಅತಿದೂರದಲ್ಲಿರುವ ಈಸ್ಟರ್ನ ಆಯ್ಲಂಡ ಎಂಬ ದ್ವೀಪದಲ್ಲಿರುವ ಅತಿಪುರಾತನ ಲಿಪಿಯ ಅಕ್ಷರಗಳೂ ಹಿಂದುಸ್ತಾನದಲ್ಲಿರುವ ಹರಪ್ಪಾ–ಮೊಹೇಂಜೋದಾರೋದ ಅತಿಪುರಾತನ ಲಿಪಿಗಳ ಅಕ್ಷರಗಳೂ ಕೇವಲ ಒಂದೇ ಆಗಿರುವದರಿಂದ. ಏಶಿಯಾಖಂಡದ ಪೂರ್ವದಿಕ್ಕಿಗಿರುವ

ಪ್ಯಾಸಿಫಿಕ್ ಮಹಾಸಾಗರದಲ್ಲಿ ಒಂದಾನೊಂದು ಅತ್ಯಂತ ಪುರಾತನಕಾಲದಲ್ಲಿ ಒಂದು ಅತಿ ದೊಡ್ಡ ಭೂಖಂಡವಿದ್ದಿರಬೇಕೆಂದೂ, ಅದು ಭೂಕಂಪ ಜ್ವಾಲಾಮುಖಿ ಇತ್ಯಾದಿ ಕಾರಣಗಳಿಂದ ಮುಳುಗಿ ಹೋಗಿ, ಅದರ ಎತ್ತರ ಪ್ರದೇಶಗಳ ಉಳಿತಾಯವೇ ಇಂದಿನ ಓಶಿಯಾಖಂಡದ ಸಾವಿರಾರು ನಡುಗಡ್ಡೆಗಳ ಗುಂಪುಗಳಾಗಿರಬಹುದೆಂದೂ ಅನೇಕರು ಇತ್ತೀಚೆಗೆ ತರ್ಕಿಸುತ್ತಿರುವ ಮಾತಿನಲ್ಲಿ ನಿಜಾಂಶವಿರಬಹುದೆಂದೆನಿಸುತ್ತದೆ. ಹೀಗಾಗಿ ಏಶಿಯಾ-ಓಶಿಯಾನಿಯಾಗಳು ಒಂದಾನೊಂದು ಕಾಲದಲ್ಲಿ ಸಂಪರ್ಕವುಳ್ಳವುಗಳಾಗಿರಬಹುದೆಂದು ಊಹಿಸಲಿಕ್ಕೆ ಸಾಧ್ಯವಿದೆ. ಏಶಿಯಾ-ಯುರೋಪಗಳು ಕೂಡಿದ ಒಂದು ದೊಡ್ಡ ಭೂಖಂಡವಂತೂ ಸರಿಯೇ ಸರಿ. ಈ ರೀತಿಯಿಂದ ನೋಡಿದರೆ* ಓಶಿಯಾನಿಯಾಖಂಡ, ಅಂಟ್ಲಾಂಟಿಕ – ಆಫ್ರಿಕಾ – ಅಮೇರಿಕಾಖಂಡ, ಏಶಿಯಾ-ಯುರೋಪಖಂಡ ಎಂದು ಮೂರು ದೊಡ್ಡ ಭೂಖಂಡಗಳೂ, ಬಹುಶಃ ಮೂರು ದೊಡ್ಡ ಜನಾಂಗಗಳೂ, ತದನುಗುಣವಾಗಿ ಬಹುಶಃ ಮೂರು ಮುಖ್ಯ ಭಾಷಾವರ್ಗಗಳೂ ಇರುವ ಸಂಭವವಿದೆ. ಭಾಷಾಶಾಸ್ತ್ರಜ್ಞರು ಈ ದೃಷ್ಟಿಯಿಂದ ಪರ್ಯಾಲೋಚಿಸಿ ನಿಜವಾದ ಸತ್ಯವೇನಿದೆಯೆಂಬುದನ್ನು ನಿರ್ಣಯಿಸಿದಾಗ ಈ ಮಾತಿನ ಇತ್ಯರ್ಥವಾಗುವದು. ನನ್ನ ಅಲ್ಪಮತಿಗೆ ಅನಿಸಿದ ಮಾತುಗಳನ್ನು ನಾನಿಲ್ಲಿ ಇಟ್ಟಿದ್ದೇನೆ. ಬಲ್ಲವರು ಈ ಒಗ್ಗೆ ನಿಶ್ಚಿತ ನಿರ್ಣಯ ಮಾಡಿದಾಗ ಸತ್ಯಾಂಶ ಪ್ರಕಟವಾಗಬಹುದು.

ದ್ರಾವಿಡ ಭಾಷೆಗಳ ಮಟ್ಟಿಗೆ ಮಾತಾಡುವದೆಂದರೆ ಅಸ್ಟ್ರೇಲಿಯಾದ ಕಾಡುಜನರ ಭಾಷೆಗೂ ದ್ರಾವಿಡಕ್ಕೂ ಹೋಲಿಕೆಗಳಿರುವುದು ಭಾಷಾಶಾಸ್ತ್ರಜ್ಞರಿಗೆ ತಿಳಿದ ವಿಷಯ. ಅದರಂತೆ ಆಫ್ರಿಕದಲ್ಲಿರುವ ಬೋರ್ನು ಅಥವಾ ಕನೌರಿ ಎಂಬ ಕಾಡುಜನರ ಭಾಷೆಯಲ್ಲಿಯೂ ದ್ರಾವಿಡದ ಅಂಶಗಳಿವೆಯಂತೆ. ಈ ಮಾತನ್ನು ಕಾಲ್ಡ್‌ವೆಲ್ಲರ ಪುಸ್ತಕದಲ್ಲಿ ನೋಡಬಹುದು. ಆದರೆ ಓಶಿಯಾನಿಯಾದ ಉಳಿದ ಯಾವ ಕಾಡುಜನರ ಭಾಷೆಗಳಲ್ಲಿಯೂ ದ್ರಾವಿಡರ ಹೋಲಿಕೆಗಳು ಇಲ್ಲವಂತೆ. ಇದರ ಮೇಲಿಂದ ಆಸ್ಟ್ರೇಲಿಯನ್ ಹಾಗೂ ಆಫ್ರಿಕದ ಬೋರ್ನು ಭಾಷೆಯ ಜನರು ಮಧ್ಯ ಏಶಿಯಾದಿಂದ ಹೋಗಿ ಆ ಎರಡು ಪ್ರದೇಶಗಳಲ್ಲಿ ನೆಲಸಿದ ಸಿಥಿಯನ್ ವರ್ಗದ (ದ್ರಾವಿಡ ಭಾಷಾವರ್ಗದ) ಜನಾಂಗದವರೇ ಆಗಿರಬಹುದು. ಆದ್ದರಿಂದ ಆಫ್ರಿಕಾ ಹಾಗೂ ಓಶಿಯಾನಿಯಾ ಖಂಡಗಳ ಉಳಿದೆಲ್ಲ ಕಾಡುಜನರ ಭಾಷೆಗಳು ದ್ರಾವಿಡಲ್ಲದ ಬೇರೆ ಬೇರೆ ಎರಡು ಸ್ವತಂತ್ರ ವರ್ಗದ ಭಾಷೆಗಳಾಗಿರುವ ಸಂಭವವಿದೆ. ಬಲ್ಲವರು ಈ ಮಾತಿನ ಪರಿಶೋಧನೆ ಮಾಡಿ ನಿಶ್ಚಿತ ಸಿದ್ಧಾಂತಕ್ಕೆ ಬಂದಾಗ ಈ ಮಾತಿನ ನಿರ್ಣಯವಾಗುವದು.

---

* ಮೊದಲಿನ ಎರಡು ಗತ ಭೂಖಂಡಗಳಿಗೆ ಫಾದರ ಕ್ಲೋಸೆಟ್‌ರು ತಮ್ಮ "ದ್ರಾವಿಡ ಭಾಷೆಗಳೇ ಸಮಸ್ತ ಭಾಷೆಗಳ ಮೂಲ" ಎಂಬ ಗ್ರಂಥದಲ್ಲಿ ಸುಮೇರಿಯನ್ ಮಹಾದ್ವೀಪ ಹಾಗೂ ಅಟ್ಲಾಂಟಿಕ್ ಮಹಾದ್ವೀಪ ಎಂಬ ಹೆಸರುಗಳನ್ನಿಟ್ಟಿದ್ದಾರೆ. (ಕ್ಲೋಸೆಟ್‌ರ ಗ್ರಂಥದ ಪುಟ ೭)

ಈ ಮಾತಿನ ನಿರ್ಣಯವಾದಾಗ ಮಾನವ ಜನಾಂಗದ ಭಾಷೆಯೆಲ್ಲಾ ಒಂದೇ ಆಗಿರಬಹುದೇ ಎಂಬ ಮಾತಿನ ಆಚೆಗೆ ಮೂರು ಬೇರೆ ಬೇರೆ ಮುಖ್ಯ ಭಾಷಾವರ್ಗ ಗಳಿವೆಯೆಂದು ಸಿದ್ಧವಾಗಬಹುದು ಅಥವಾ ಭಾಷಾಶಾಸ್ತ್ರಜ್ಞರು ಈಗ ಮಾಡಿದ ಕೆಲವು ವರ್ಗಗಳು ಸೇರಿ ಇನ್ನೂ ಕೆಲವು ವರ್ಗಗಳು ಹೆಚ್ಚಿಗೆ ಆದರೂ ಆಗಬಹುದು. ಆದರೆ ಇದು ನಾಳಿನ ಕಾಲದ ತಜ್ಞಸಂಶೋಧಕರ ಸಂಶೋಧನೆಗಳ ಮೇಲೆ ಅವ ಲಂಬಿಸಿರುವದು.

ಕಾಲ್ಡ್ವೆಲ್ಲರ ಹೊರತಾಗಿ ಪೋಪ್, ಕಿಟೆಲ್ ಮೊದಲಾದ ವಿದ್ವಾಂಸರು ದ್ರಾವಿಡ ಭಾಷೆಗಳಿಗೂ ಆರ್ಯವರ್ಗದ ಭಾಷೆಗಳಿಗೂ ಸಂಬಂಧವನ್ನು ಕಂಡು ಹಿಡಿಯುವ ಕಾರ್ಯವನ್ನು ಮಾಡಿರುವರಷ್ಟೇ ? ಆದರೆ ಕೋಲಂಬೋದಲ್ಲಿರುವ ಫಾದರ್ ಕ್ಲೋಸೆಟ್ ಎಂಬ ವಿದ್ವಾಂಸರು "ದ್ರಾವಿಡವೇ ಸಮಸ್ತ ಮಾನವ ಜಾತಿಯ ಭಾಷೆಗಳೆಲ್ಲಕ್ಕೂ ಮೂಲ" ಎಂಬ ತತ್ವವನ್ನು ಸ್ಥಾಪಿಸುವ ಪುಸ್ತಕವೊಂದನ್ನು ಬರೆದು (Dravidian origin and philosophy of the human speech) ದ್ರಾವಿಡ ಶಬ್ದಗಳನ್ನೂ ಸ್ವರೋಚ್ಚಾರಗಳನ್ನೂ ಸಂಸ್ಕೃತ, ಗ್ರೀಕ್, ಲ್ಯಾಟನ್, ಹಿಬ್ರೂ, ಚೀನೀ ಮೊದಲಾದ ಸಮಸ್ತ ಜಗತ್ತಿನ ಭಾಷೆಗಳಿಗೆ ಇನ್ನೂ ಹೆಚ್ಚು ನಿಕಟ ವಾಗಿ ಸಂಬಂಧಗೊಳಿಸಿ ತೋರಿಸಲಿಕ್ಕೆ ಪ್ರಯತ್ನಿಸಿದ್ದಾರೆ. ದ್ರಾವಿಡವೇ ಜಗತ್ತಿನ ಸರ್ವಭಾಷೆಗಳಿಗೂ ಮೂಲವಾಗಿದೆಯೆಂಬ ಮಾತನ್ನು ಬಿಟ್ಟರೂ ಜಗತ್ತಿನ ಅನೇಕ ಭಾಷೆಗಳಿಗೆ ದ್ರಾವಿಡ ಭಾಷೆಯ ಸಂಬಂಧವನ್ನು ಜೋಡಿಸಲಿಕ್ಕೆ ಬರುವದೆಂಬ ಮಾತು ಇವರ ಪುಸ್ತಕದಿಂದ ಇನ್ನಿಷ್ಟು ದೃಢಪಡುತ್ತದೆ.

ಕ್ಲೋಸೆಟ್ಟರು ಸುಮೇರಿಯನ್ ಭಾಷೆಯಲ್ಲಿಯೂ ಗ್ರೀಕ್ ಭಾಷೆಯಲ್ಲಿಯೂ ದ್ರಾವಿಡದ ಅಂಶವು ವಿಪುಲವಾಗಿರುವದನ್ನು ಕಂಡು ಭಾರತದೊಳಗಿನ ದ್ರಾವಿಡರು ಭೂಮಾರ್ಗವಾಗಿ ಬಲುಚಿಸ್ತಾನ–ಇರಾಣಗಳ ಮಾರ್ಗದಿಂದ ಸುಮೇರಿಯಾವನ್ನು ಸೇರಿ ಅಲ್ಲಿಂದ ಮುಂದೆ ಗ್ರೀಸ್ ದೇಶದ ಕಡೆಗೆ ಸಾಗಿದರೆಂದೂ, ಅಥವಾ ಜಲಮಾರ್ಗ ದಿಂದ ಇರಾಣೀ ಆಖಾತದ ಮಾರ್ಗವಾಗಿ ಸುಮೇರಿಯಾವನ್ನು ಸೇರಿ ಅಲ್ಲಿಂದ ಗ್ರೀಸ್ ದೇಶದ ಕಡೆಗೆ ಹೋದರೆಂದೂ ನಿರ್ಣಯಮಾಡಿಕೊಂಡಿರುವರು. ಕ್ಲೋಸೆಟ್ಟರೂ, ಫ್ರಾನ್ಸ ದೇಶದ ಭಾಷಾಶಾಸ್ತ್ರಜ್ಞರಾದ ಕಾರ್ನೋಯಿಯವರೂ ದ್ರಾವಿಡರ ಮೂಲ ಸ್ಥಾನವು ಭಾರತವೇ ಎಂಬ ಸಿದ್ಧಾಂತಕ್ಕೆ ಅಂಟಿಕೊಂಡದ್ದರಿಂದ ಅಲ್ಲಿಂದ ದ್ರಾವಿಡರು ಸುಮೇರಿಯಾ ಮಾರ್ಗವಾಗಿ ಗ್ರೀಸಿಗೆ ಹೋದರೆಂಬ ಸಿದ್ಧಾಂತಕ್ಕೆ ಇವರಿಬ್ಬರೂ ಬಂದು ಮುಟ್ಟಿರುವರು. ಆದರೆ ಸುಮೇರಿಯಾ ಅಥವಾ ಅದೇ ಪ್ರದೇಶದ ಬಳಿಯಿದ್ದ ಮೀಡಿಯಾ (ಬೆಹಿಸ್ತನ್ ಶಿಲಾಲೇಖಗಳಲ್ಲಿ ಉಪಯೋಗಿಸಿದ ಪುರಾತನ ಸಿಥಿಯನ್ ಭಾಷೆ ನಡೆಯುತ್ತಿದ್ದ ಪ್ರದೇಶ) ಎಂಬುದೇ ದ್ರಾವಿಡ ವರ್ಗದ ಭಾಷೆಯನ್ನಾಡುವವರ ಪ್ರದೇಶವಾಗಿದ್ದು, ಅಲ್ಲಿಂದಲೇ ಅವರ ಒಂದು ತಂಡವು ಹಿಂದುಸ್ಥಾನಕ್ಕೂ ಇನ್ನೊಂದು

ತಂಡವು ಗ್ರಿಸೀನ ಕಡೆಗೂ ಹೋದವೆಂದು ಸಿದ್ಧಾಂತ ಮಾಡಿದರೆ ಎಲ್ಲ ಮಾತು ತಾನೇ ಸರಿಪಡುವದೆಂಬುದರಲ್ಲಿ ಸಂಶಯವಿಲ್ಲ.

ಈ ಮಾತಿನಿಂದಲೂ ನಾವು ದ್ರಾವಿಡಭಾಷಾ ವರ್ಗದವರ ಮೂಲಸ್ಥಾನವು ಆರ್ಯರ ಮೂಲಸ್ಥಾನವಾದ ಮಧ್ಯ ಏಶಿಯಾವೇ ಎಂಬ ಸಿದ್ಧಾಂತಕ್ಕೂ, ದ್ರಾವಿಡ ಭಾಷೆಗಳು ಸುಮೇರಿಯನ್ ಹಾಗೂ ಸಿಥಿಯನ್ ಭಾಷೆಗಳಿಗೆ ಹೊಂದುವಂತೆ ಯುರೋಪದ ಭಾಷೆಗಳಿಗೂ ಹೊಂದುವವೆಂಬ ಸಿದ್ಧಾಂತಕ್ಕೂ ಬಂದು ಮುಟ್ಟಿದ ಹಾಗಾಯಿತು.

ಅಲ್ಲದೆ ಕ್ಲೋಸೆಟ್ಟರೂ ಕೂಡ ಹಿಂದೆ ಹೇಳಿದ ತಮ್ಮ ನಿರ್ಣಯವನ್ನು ಸಿದ್ಧ ಪಡಿಸಿದ ಗ್ರಂಥದ ಮೊಟ್ಟಮೊದಲನೆಯ ಅಧ್ಯಾಯದ ಕೊಟ್ಟ ಕೊನೆಯಲ್ಲಿ ಕಾಲ್ಡ್ವೆಲ್ಲರ "ಅತಿದೂರ ಪುರಾತನ ಕಾಲದಲ್ಲಿ ಇಂಡೋ – ಯುರೋಪಿಯನ್ ಜನಾಂಗವೂ ಸಿಥಿಯನ್ ಜನಾಂಗವೂ ಒಂದೇ ಆಗಿದ್ದವು" ಎಂಬ (ಹಿಂದೆ ನಾನು ಉಲ್ಲೇಖಿಸಿದ) ಸಿದ್ಧಾಂತ ವಾಕ್ಯವನ್ನೇ ಪ್ರಮಾಣ ವಾಕ್ಯವಾಗಿ ಉದಾಹರಿಸಿರುವರು. ಅಲ್ಲದೆ ಅದಕ್ಕೆ ಪೋಪ್ ಅವರ ಸಿದ್ಧಾಂತವೂ ಕೂಡ ಹೀಗೆಯೇ ಇದೆಯೆಂದು ಸಾಕ್ಷಿಯನ್ನು ತೋರಿಸಿರುವರು. —ಕ್ಲೋಸೆಟ್ಟರ ಗ್ರಂಥದ ಅಧ್ಯಾಯ ೧, ಪುಟ ೮.

ಇದಲ್ಲದೆ ಕ್ಲೋಸೆಟ್ಟರ ಪುಸ್ತಕದಲ್ಲಿ ಆನುಷಂಗಿಕವಾಗಿ ಒಂದು ಮಾತು ಬಂದಿದೆ. ಅದು ಅತಿಪುರಾತನ ಕಾಲದಲ್ಲಿದ್ದ ಪ್ಯಾಸಿಫಿಕ್ ಭೂಖಂಡ ಹಾಗೂ ಅಟ್ಲಾಂಟಿಕ ಭೂಖಂಡಗಳಿಗೆ ಸಂಬಂಧಿಸಿದ್ದು. ಅಮೇರಿಕೆಯಲ್ಲಿ ಅತಿಪುರಾತನ ಕಾಲದಲ್ಲಿ ಜನರ ಪ್ರವೇಶವು ಎಲ್ಲಿಯಿಂದ ಆಗಿರಬೇಕೆಂಬ ವಿಷಯವನ್ನು ಕುರಿತು ಹೇಳುವಾಗ ಬಂದ ಮಾತು ಅದು. ಅದಾವುದೆಂದರೆ—

"ಏಶಿಯಾಖಂಡವೇ ಮಾನವ ಜಾತಿಯ ಜನ್ಮಸ್ಥಾನವಾಗಿರುವಾಗ ಅಮೇರಿಕಾ ಖಂಡದಲ್ಲಿ ಜನವಸತಿಯು ಹೇಗೆ ನೆಲೆಗೊಳಿಸಿತು, ಎಂಬುದನ್ನರಿತುಕೊಳ್ಳುವುದಕ್ಕೆ ಕೆಲವರಿಗೆ ಲವಲವಿಕೆಯುಂಟಾಗಬಹುದು.

ಇದು ನನ್ನ ವಿಷಯವಲ್ಲದಿದ್ದರೂ ಸಂಕ್ಷೇಪವಾಗಿ ನಾನು ಇದರ ಉತ್ತರವನ್ನು ಹೇಳುವೆನು. ವಿದ್ವಾಂಸರ ಸಂಶೋಧನೆಗಳಿಗನುಸಾರವಾಗಿ ಮೂರು ಮಾರ್ಗಗಳನ್ನು ಹಿಡಿದು ಅಲ್ಲಿಗೆ ಜನರು ಹೋದರು.

ಮೊದಲನೆಯದಾಗಿ, (ಅಮೇರಿಕಾದ ವಾಯವ್ಯ ತುದಿಯಾದ) ಅಲಾಸ್ಕಾದ ಮಾರ್ಗವಾಗಿ.

ಎರಡನೆಯದಾಗಿ, ಶಾಂತಿಸಾಗರ(ಪ್ಯಾಸಿಫಿಕ್)ದಲ್ಲಿದ್ದು ಈಗ ಸಮುದ್ರದಲ್ಲಿ ಬಹುಭಾಗ ಮುಳುಗಿ ಹೋಗಿರುವ ಸುಮೇರಿಯನ' ದ್ವೀಪಗಳ ಮಾರ್ಗವಾಗಿ. ಈ ದ್ವೀಪಗಳ ಅವಶೇಷಗಳು ಈಗಲೂ ಪ್ರಕಟವಾಗಿ ಕಾಣುತ್ತಿವೆ.

ಮೂರನೆಯದಾಗಿ, ಅಟ್ಲಾಂಟಿಕ ಮಹಾಸಾಗರದಲ್ಲಿ ಸಂಪೂರ್ಣವಾಗಿ ಮುಳುಗಿ ಹೋಗಿರುವ ಅಟ್ಲಾಂಟಿಕ್ ಮಹಾದ್ವೀಪಗಳ ಮಾರ್ಗವಾಗಿ.*

ಇವರ ಮೇಲಿಂದ, ಮೂರು ಮೂಲ ಜನಾಂಗಗಳು ಮೂರು ಮೂಲ ಭೂಖಂಡಗಳಲ್ಲಿರಬಹುದೆಂದೂ, ಆ ಮೂಲಕ ಮೂರು ಮೂಲ ಭಾಷಾವರ್ಗಗಳು (ಓಶಿಯಾನಿಯಾ ವರ್ಗ, ಆಫ್ರಿಕಾ-ಅಮೇರಿಕಾ ವರ್ಗ, ಏಶಿಯಾ-ಯುರೋಪವರ್ಗ) ಇರಬಹುದೆಂದೂ ಹಿಂದೆ ನಾನು ತೋರಿಸಿದ ಊಹೆಗೂ ಆಧಾರವು ಸಿಕ್ಕಂತಾಯಿತು.

ಆದರೆ ಈ ವಿಷಯವು ನನ್ನ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ್ದಾಗಿರದಿದ್ದರೂ, ಮಾನವಕೋಟಿಯ ಭಾಷೆಯೆಲ್ಲಾ ಒಂದೇ ಆಗಿರಬಹುದೆಂಬ ಊಹೆಯಿಂದ ಯಾವ ಭಾಷೆ ಯಾವ ಭಾಷೆಗೆ ಹೋಲುವದರಿಂದಲೂ ಯಾವ ವಿಶೇಷ ಸಿದ್ಧಾಂತವನ್ನು ಮಾಡಲಿಕ್ಕೆ ಬರಲಿಕ್ಕಿಲ್ಲವೆಂಬ ನಿರಾಶೆಗೆ ಸಿದ್ಧವಿಲ್ಲವೆಂದು ತೋರಿಸಲಿಕ್ಕೆ ನಾನೀ ಹೆಚ್ಚಿನ ವಿಷಯದ ಕಡೆಗೆ ಹೊರಳಿರುವೆನು. ಆರ್ಯ-ದ್ರಾವಿಡ ಸಮನ್ವಯ ಇದಿಷ್ಟೇ ನನ್ನ ಲೇಖನದ ಉದ್ದೇಶವಾಗಿದೆ. ಸಮಸ್ತ ಪೃಥ್ವಿಯ ಮಾನವ ಭಾಷಾ ವರ್ಗಗಳನ್ನೆಲ್ಲ ನಿರ್ಣಯಿಸುವುದು ನನ್ನ ಉದ್ದೇಶವಲ್ಲ. ಈ ಮಾತು ಎಷ್ಟು ಸಾಧಿಸಿದರೆ ಅಷ್ಟು ನನ್ನೀ ಲೇಖನವು ಸಾರ್ಥಕವು. ಇದೇ ಉದ್ದೇಶಕ್ಕೆ ಸಂಬಂಧಿಸಿದ ಇನ್ನೊಂದು ವಿಷಯವನ್ನು ಸೂಚಿಸುವೆನು.

ನನ್ನ ಸಂಸ್ಕೃತ ಭಾಷೆಯ ಅಭ್ಯಾಸದ ವಿಷಯವನ್ನು ಹೇಳುವುದಕ್ಕೆ ಈ ಲೇಖನದಲ್ಲಿ ಹಿಂದೆ ಎಲ್ಲಿಯೂ ಸಂದರ್ಭ ಸಿಕ್ಕಲಿಲ್ಲ. ಅದನ್ನಿಲ್ಲಿ ಹೇಳುವೆ.† ನನ್ನೊಬ್ಬ

---

* Since Asia is the cradle of mankind, some may be interested to know how America was peopled.
Though, this is not in my subject I will answer this question briefly.
According to the findings of the scholars, three routes were followed.
One through Alaska
A second, through the Sumerian islands, in the Pacific, which have been mostly swallowed up by the sea. Remnants still emerge.
The third, Atlantis island, entirely submerged in the Atlantic. —Page 7

† ಪ್ರಾಕೃತ ಭಾಷೆಗಳ ಅಭ್ಯಾಸದ ವಿಷಯವೂ ಹೀಗೆಯೇ ಇದೆ. ಕಾಳಿದಾಸನ ಸಂಸ್ಕೃತ ನಾಟಕಗಳೊಳಗಿನ ಶೌರಸೇನೀ, ಅಶೋಕನ ಶಿಲಾಶಾಸನಗಳಲ್ಲಿಯೂ ಭಗವಾನ ಶ್ರೀ ಬುದ್ಧ →

ಗೆಳೆಯನು ತೀರಾ ಬಾಲ್ಯದಲ್ಲಿ ಸಂಸ್ಕೃತವನ್ನು ಕಲಿಯುತ್ತಿದ್ದನು. ನಾನು ಅವನ ಹತ್ತಿರಹೋಗಿ ಕೂಡುತ್ತಿದ್ದೆನು. ಅವನು ಸಂಸ್ಕೃತ ಕಲಿಯುತ್ತಿರುವುದನ್ನು ನೋಡಿ ನನಗೂ ಆ ಅಭ್ಯಾಸವನ್ನು ಕಲಿಯಬೇಕೆಂಬ ಲವಲವಿಕೆ ಹುಟ್ಟಿ ನನ್ನ ಮುಲಕೀ ಪರೀಕ್ಷೆಗಿಂತ ಕೆಲಕಾಲ ಮುಂಚೆಯೇ ನಾನು ಈ ಭಾಷೆಯ ಅಭ್ಯಾಸವನ್ನು ಪುಸ್ತಕಗಳ ಸಹಾಯದಿಂದ ಮಾಡಲಾರಂಭಿಸಿದೆನು. ಆ ದೇಲೆ ಸಾಹಿತ್ಯ ಹಾಗೂ ತತ್ತ್ವಜ್ಞಾನ ಇವೆರಡರ ಅಭಿರುಚಿಯು ಮೂಲಕ ಈ ವಿಷಯಗಳಿಗೆ ಸಂಬಂಧಿಸಿದ ಅನುವಾದ ಸಹಿತವಾದ ಪುಸ್ತಕಗಳನ್ನು ಸಂಗ್ರಹಿಸಿ, ಮೊದಲು ಅನುವಾದದಲ್ಲಿ ಓದಿಕೊಂಡು, ಆ ಮೇಲೆ ಮೂಲ ಹಾಗೂ ಅನುವಾದ ಎರಡನ್ನೂ ಜೊತೆಜೊತೆಗೆ ಓದಿಕೊಂಡು, ಕೊನೆಗೆ ಕೇವಲ ಮೂಲವೊಂದನ್ನೇ ಓದಿಕೊಳ್ಳುವುದಕ್ಕೆ ಆರಂಭಿಸುವುದು. ಹೀಗೆ ಕಾಳಿದಾಸನ ಕಾವ್ಯ ನಾಟಕಗಳನ್ನು, ಶ್ರೀಮದ್ಭಗವದ್ಗೀತೆ ಹಾಗೂ ಪರಮಪವಿತ್ರ ಉಪನಿಷತ್ತುಗಳನ್ನು ಬಹುಕಾಲ ಅಭ್ಯಾಸ ಮಾಡುತ್ತ ಪರಮ ದಿವ್ಯ ಮಹಾವೇದ ಗಳನ್ನು ತಿಳಿದುಕೊಳ್ಳುವ ಇಚ್ಛೆಯುಂಟಾಯಿತು. ಶ್ರೀ ಅರವಿಂದಾಶ್ರಮದ ಸೆಕ್ರೆಟರಿಗಳಾದ ಮಹಾಮೇಧಾವಿಗಳಾದ ಶ್ರೀ ನಲಿನಿಕಾಂತ ಗುಪ್ತ ಮಹಾನುಭಾವರು ಋಗ್ವೇದದ ಮೊಟ್ಟಮೊದಲನೆಯ ಋಷಿಯಾದ ಮಧುಚ್ಛಂದಾನ ಮಂತ್ರ ಗಳನ್ನೆಲ್ಲ ಭಗವಾನ್ ಶ್ರೀ ಅರವಿಂದರ "ವೇದರಹಸ್ಯ" (ಸೀಕ್ರೆಟ್ ಆಫ್ ದಿ ವೇದ) ಎಂಬ ಗ್ರಂಥದಲ್ಲಿ ಹೇಳಿದ ರೀತಿಗನುಸರಿಸಿ ಬೆಂಗಾಲಿಯಲ್ಲಿ ಅನ್ವಯ, ಅನ್ವಯಾರ್ಥ, ಭಾವಾರ್ಥ, ವಿಶೇಷ ವಿವರಣೆಗಳೊಂದಿಗೆ ವ್ಯಾಖ್ಯಾನಿಸಿದ ಪುಸ್ತಕವೊಂದನ್ನು ೧೨ ವರುಷ ಅಭ್ಯಾಸ ಮಾಡಿದೆನು. ಹಾಗೆಯೇ ಋಗ್ವೇದದ ಮರಾಠಿ ಅನುವಾದ ಕ್ಕಾಗಿಯೇ ಹೊರಟ "ಶ್ರುತಿಬೋಧ" ಎಂಬ ಅಮೌಲ್ಯ ಮಾಸಿಕದ ಹತ್ತೆಂಟು ಸಂಚಿಕೆ ಗಳನ್ನು ಪರಮಭ್ರಾತೃವರ ಶ್ರೀ ನಲಿನಿಕಾಂತ ಗುಪ್ತ ಮಹಾನುಭಾವರ ಪುಸ್ತಕದ ಜೊತೆಜೊತೆಗೇ ಅಭ್ಯಾಸ ಮಾಡುತ್ತಿದ್ದೆನು. "ಶ್ರುತಿಬೋಧ"ದ ಈ ಸಂಚಿಕೆಗಳನ್ನು ಬೆಂಗಾಲೀ ಅನುವಾದದಿಂದ ಕೂಡಿದ ಕಾಳಿದಾಸನ ಇಡೀ ಗ್ರಂಥಗಳ ಸಂಪುಟ ವೊಂದನ್ನು ಇಪ್ಪತ್ತೇಳು ವರುಷಗಳ ಹಿಂದೆ ನನಗೆ ಕೆಲತಿಂಗಳು ಇಂಗ್ಲೀಷು ಕಲಿಸಿದ ವಿದ್ಯಾಗುರುಗಳೂ ಪರಮಪ್ರೀತಿಯವರೂ ಆದ ಶ್ರೀ ಕೊಣ್ಣೂರು ಹಣಮಂತ ರಾಯರು ಅಕ್ಕರತೆಯಿಂದ ಕೊಟ್ಟಿದ್ದರೆಂಬ ವಿಷಯವನ್ನು ನಾನಿಲ್ಲಿ ಸೂಚಿಸದೆ ಇರಲಾರೆ. ಮುಂದೆ ಭಗವಾನ್ ಶ್ರೀ ಅರವಿಂದರ "ವೇದರಹಸ್ಯ" ಹಾಗೂ ಅವರ

→

ದೇವರ ತ್ರಿಪೀಟಿಕಾಂತರ್ಗತವಾದ ದೀರ್ಘನಿಕಾಯ, ಮಜ್ಝಿಮನಿಕಾಯ, ಧಮ್ಮಪದ ಮುಂತಾದ ಮಹಾಪವಿತ್ರವಾದ ದಿವ್ಯಗ್ರಂಥಗಳಲ್ಲಿಯೂ ಉಪಯೋಗಿಸಿದ ಪಾಲೀ, ಹಾಗೂ ಜೈನ ಧರ್ಮದ ಪವಿತ್ರ ಧರ್ಮ ಸಂಗ್ರಹ ವೊದಲಾದ ದಿವ್ಯಗ್ರಂಥಗಳಲ್ಲಿ ಉಪಯೋಗಿಸಿದ ಮಾಗಧೀ ಇವೆಲ್ಲ ಪ್ರಾಕೃತ ಭಾಷೆಗಳ ಅಭ್ಯಾಸವನ್ನು ಪ್ರಭುಕೃಪೆಯಿಂದ ಮಾಡಿ ಆಯಾ ಗ್ರಂಥಗಳನ್ನು ಓದಿ ಆನಂದಪಟ್ಟೆನು.

"ಆರ್ಯ" ಮಾಸಿಕದಲ್ಲಿ ಬಂದ ವೇದವಿಷಯಕ ಲೇಖನಗಳನ್ನು (ಮೊನ್ನೆ ಮೊನ್ನೆ ಪ್ರಕಟವಾದ ಶ್ರೀ ಅರವಿಂದರ "ಮಿಸ್ಟಿಕ್ ಫಾಯರ್" (ರಹಸ್ಯಾಗ್ನಿ) ಎಂಬ ಅಗ್ನಿ ಮಂತ್ರಗಳ ಅನುವಾದದಿಂದ ಕೂಡಿದ ಪವಿತ್ರ ಗ್ರಂಥದ ಆರಂಭದಲ್ಲಿ ಈ ಲೇಖನ ಗಳಲ್ಲೊಂದನ್ನು ಮತ್ತು ತೀರ ಹೊಸ ಲೇಖವೊಂದನ್ನು ಜೋಡಿಸಲಾಗಿದೆ) ಓದಿದ್ದ ರಿಂದ ಮೂಲವೇದಗಳನ್ನು ಕೆಲಮಟ್ಟಿಗೆ ಓದಿ ಆನಂದ ಮಾಡಿಕೊಳ್ಳುವ ಭಾಗ್ಯವು ಪ್ರಭುವರ ಶ್ರೀ ಅರವಿಂದ ಭಗವಾನರ ಹಾಗೂ ಮಹಾತಾಯಿ ಭಗವತಿ ಶ್ರೀ ಮಾತಾಜಿಯವರ ಪರಮಕೃಪೆಯಿಂದ ಈ ಅಲ್ಪಮತಿಯಾದ ನನಗೆ ಲಭಿಸಿತೆಂಬ ಮಹಾಧನ್ಯೋದ್ಗಾರವನ್ನು ನಾನಿಲ್ಲಿ ಎಷ್ಟು ಸಲ ಪ್ರಕಟಿಸಿದರೂ ಸಾಲದು. "ಧನ್ಯೋ ಧನ್ಯಃ, ಪುನಃ ಪುನರ್ಧನ್ಯಃ" !!! "ಮೂಕಂ ಕರೋತಿ ವಾಚಾಲಂ, ಪಗುಂ ಲಂಘಯತೇ ಗಿರಿಂ" (ಪರಮಾತ್ಮನ ಕೃಪೆಯು ಮೂಕನನ್ನು ಮಾತಾಳಿ ಯನ್ನಾಗಿಯೂ ಕುಂಟನನ್ನು ಗಿರಿಶಿಖರ ದಾಟುವವನನ್ನಾಗಿಯೂ ಮಾಡಬಲ್ಲದು) ಎಂಬ ಪುರಾತನ ಮಹಾಕಾವ್ಯವು ಸತ್ಯವೆಂಬುದಕ್ಕೆ ನನ್ನಂಥ ಅಲ್ಪಮತಿಗೆ ಲಭಿಸಿದ ಈ ಮಹಾಭಾಗ್ಯವೇ ಸಾಕ್ಷಿ. "ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ" ಜಗತ್ತಿನ ತಾಯಿ-ತಂದೆಗಳಾದ ಶ್ರೀ ಪಾರ್ವತೀ ಪರಮೇಶ್ವರರಿಗೆ ಪ್ರಣಾಮ ಗಳನ್ನರ್ಪಿಸುವೆನು ! ಓಂ !!

ದ್ರಾವಿಡ ಭಾಷೆಗಳಲ್ಲೊಂದನ್ನಾಡುವ ನಮ್ಮ ಕನ್ನಡಿಗರ ತತ್ತ್ವಜ್ಞಾನಕ್ಕೂ ಪವಿತ್ರ ಮಹಾ ದಿವ್ಯ ವೇದಗಳ ಜ್ಞಾನಕ್ಕೂ ಎಲ್ಲಿಯಾದರೂ ಕೂಡುವದೋ ಹೇಗೆ ನೋಡುವಾ. ವೇದದಲ್ಲಿ ಬರುವ ಅಗ್ನಿ, ವಾಯು, ಇಂದ್ರ, ಸೂರ್ಯ (=ಸವಿತಾ), ಸೋಮ ಇವರು ಕ್ರಮವಾಗಿ ಆತ್ಮನ ಅಂಶಸ್ವರೂಪವಾದ ಅನ್ನಮಯ ಪುರುಷ, ಪ್ರಾಣಮಯ ಪುರುಷ, ಮನೋಮಯ ಪುರುಷ, ವಿಜ್ಞಾನಮಯ ಪುರುಷ ಹಾಗೂ ಆನಂದಮಯ ಪುರುಷ ಇವರೇ ಆಗಿರುವರೆಂಬುದನ್ನು ಶ್ರೀ ಅರವಿಂದಾಶ್ರಮದ ಸೆಕ್ರೆಟರಿಗಳಾದ ಶ್ರೀ ನಲಿನಿಕಾಂತ ಗುಪ್ತ ಮಹಾನುಭಾವರ ಪುಸ್ತಕದಲ್ಲಿ ಕಾಣುವೆವು. ಗೂಢ ವಿಶ್ವದ ಆಂತರ್ಯದಲ್ಲಿಯೂ, ಬಾಹ್ಯ ಜಗತ್ತಿನ ಪ್ರಾಕೃತಿಕ ಶಕ್ತಿಗಳಲ್ಲಿಯೂ, ಮಾನವನ ಸೂಕ್ಷ್ಮ ಶರೀರಗಳಲ್ಲಿಯೂ ಸಹ ಇವೇ ದೈವಿ ಶಕ್ತಿಗಳೂ ವ್ಯಕ್ತಿಗಳೂ ಬೇರೆ ಬೇರೆ ರೂಪದಿಂದ ಪ್ರಕಟಗೊಂಡಿರುವವೆಂದು ಸಹ ಅದೇ ಪುಸ್ತಕದ ಸುದೀರ್ಘ ವಾದ ಪ್ರಸ್ತಾವನೆಯಲ್ಲಿ ಹೇಳಲಾಗಿದೆ. ಅಲ್ಲದೆ ವೈದಿಕ ದೇವತೆಗಳ ಈ ತ್ರಿವಿಧ ಸ್ವರೂಪಗಳ ಸತ್ಯತೆಯ ಬಗೆಗೆ ಇಡೀ ಋಗ್ವೇದಕ್ಕೆ ಭಗವಾನ್ ಶ್ರೀ ಅರವಿಂದರ "ವೇದರಹಸ್ಯ"ವನ್ನನುಸರಿಸಿ ಸಂಸ್ಕೃತದಲ್ಲಿ ಮಹಾಭಾಷ್ಯವನ್ನು ಬರೆಯುತ್ತಲಿರುವ ಶ್ರೀ ಅರವಿಂದಾಶ್ರಮದ ಪಟ್ಟಶಿಷ್ಯರಲ್ಲೊಬ್ಬರಾದ, ಹಿರಿಯರಾದ ಪೂಜ್ಯ ಶ್ರೀ ಕಪಾಲಿ ಶಾಸ್ತ್ರಿಗಳವರ "ಲಾಯಿಟ್ಸ ಆನ್ ದಿ ವೇದ" ಎಂಬ (ಮಹಾಭಾಷ್ಯ ಪ್ರಸ್ತಾವನಾ ರೂಪವಾದ) ಮಹತ್ವಪೂರ್ಣ ಗ್ರಂಥದಲ್ಲಿಯೂ ಹೇಳಲಾಗಿದ.

ಋಗ್ವೇದದ ಈ ಅಗ್ನಿ, ವಾಯು (ಅನ್ನಮಯ ಪುರುಷ, ಪ್ರಾಣಮಯ ಪುರುಷ) ಮೊದಲಾದ ದೇವತೆಗಳೇ ಕರ್ನಾಟಕದ ಶಿವಶರಣರ ವಚನಗಳಲ್ಲಿ ಹೇಳಿದ* ಶ್ರೀ ಚೆನ್ನಬಸವೇಶ್ವರ ಪುರಾಣಾನುಸಾರವಾಗಿ– ಷಟ್ಚಕ್ರಾಶ್ರಿತರಾದ ಆಚಾರಲಿಂಗ, ಗುರುಲಿಂಗ, ಪ್ರಸಾದಲಿಂಗ, ಮಹಾಲಿಂಗ ಮೊದಲಾದ ಷಡ್ಲಿಂಗಗಳಾಗಿರುವರೆಂದು ಇವೆರಡೂ ಶಾಸ್ತ್ರಗಳನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಿದವರಿಗೆ ಸಹಜವಾಗಿ ಅನಿಸುವದು. ಕರ್ನಾಟಕದ ಶಿವಶರಣರ ತತ್ತ್ವಜ್ಞಾನಕ್ಕನುಸರಿಸಿ ಪಿಂಡಾಂಡಾಶ್ರಿತವಾದ ಇವೇ ದೈವೀಶಕ್ತಿ ಹಾಗೂ ವ್ಯಕ್ತಿಗಳು ವಿಶ್ವದಲ್ಲಿ ಪಂಚಮಹಾಸಾದಾಖ್ಯ(ಸತ್ ಸ್ವರೂಪ)ಗಳಾಗಿರುವವೆಂದು ಕಂಡುಬರುವದು. ಬಾಹ್ಯದಲ್ಲಿ ಪೂಜಾಕ್ರಿಯೆಗೆ ಉಪಯೋಗಿಸುವದಕ್ಕಾಗಿ ಇಷ್ಟಲಿಂಗ. ಆರ್ಯರ ಬಾಹ್ಯಯಜ್ಞ ಕ್ರಿಯೆಗೆ ಆಧಾರವಾಗಿ ಪವಿತ್ರ ಭೌತಿಕ ಅಗ್ನಿಯಿದ್ದಂತೆ ಶಿವಶರಣರ ಬಾಹ್ಯಕ ಪೂಜಾಕ್ರಿಯೆಗೆ ಆಧಾರವಾದದ್ದು ಈ ಪವಿತ್ರ ಬಾಹ್ಯಕ ಇಷ್ಟಲಿಂಗ. ಬರಿ ಬಾಹ್ಯದ ನಿಸರ್ಗ ಶಕ್ತಿಗಳನ್ನು ಪೂಜಿಸದೆ ಆಂತರಿಕವಾದ ಆತ್ಮಿಕ ಹಾಗೂ ದೈವೀ, ಶಕ್ತಿ ಮತ್ತು ವ್ಯಕ್ತಿಗಳನ್ನು ಪೂಜಿಸುವುದೇ ಹೇಗೆ ಆರ್ಯ ಋಷಿಗಳ ಉದ್ದೇಶವಾಗಿದ್ದಿತೋ, ಹಾಗೆಯೇ ಬರಿ ಬಾಹ್ಯಕ ಮೂರ್ತಿರೂಪ ಇಷ್ಟಲಿಂಗವನ್ನಷ್ಟೇ ಪೂಜಿಸದೆ ಆಂತರಿಕ ಪ್ರಾಣಲಿಂಗ ಹಾಗೂ ವಿಶ್ವವ್ಯಾಪಕ ಮಹಾಲಿಂಗಗಳನ್ನು ಪೂಜಿಸುವುದೇ ಕರ್ನಾಟಕದ ಶಿವಶರಣರ ಉದ್ದೇಶವೂ ಆಗಿದ್ದಿತು.

ಗ್ರೀಕ್ ಭಾಷೆಯು ಸಂಸ್ಕೃತಕ್ಕೆ ಹೊಂದುವದಿಷ್ಟೇ ಅಲ್ಲದೆ ಗ್ರೀಕ ತತ್ತ್ವಜ್ಞಾನವು ಕೂಡ (ಮುಖ್ಯವಾಗಿ ಅತಿಪುರಾತನನಾದ ಹಿರಾಕ್ಲಟಿಸ್ಸನರು) ಆರ್ಯರ ವೇದೋಕ್ತ ತತ್ತ್ವಜ್ಞಾನಕ್ಕೆ ಹೊಂದುವದೆಂಬ ವಿಷಯವನ್ನೂ, ಅದರಂತೆ ಪುರಾತನ ಪಾರ್ಸೀ (ಅವೆಸ್ತಾ ಅಥವಾ ಝೆಂದ್) ಭಾಷೆಯು ಸಂಸ್ಕೃತದ್ದೇ ಒಂದು ರೂಪವಾಗಿದೆಯೆಂಬುದಿಷ್ಟೇ ಅಲ್ಲದೆ ಝೆಂದಾವೆಸ್ತಾ ಎಂಬ ಪವಿತ್ರ ಗ್ರಂಥವು ವೇದವನ್ನೇ ಹೋಲುವ ಒಂದು ಮಹಾ ದಿವ್ಯಗ್ರಂಥವಾಗಿದೆಯೆಂಬುದನ್ನೂ ಹಾಗೂ ಪುರಾತನ ಆರ್ಯರಂತೆ ಪಾರ್ಸಿಗಳೂ ಅಗ್ನಿಪೂಜಕರಾಗಿರುವರೆಂಬುದನ್ನೂ ನಾವು ಅರಿತ ವಿಷಯವೇ ಆಗಿದೆಯಷ್ಟೇ ? ಅದರಂತೆಯೇ ದ್ರಾವಿಡ ಭಾಷೆಗಳು ಯುರೋಪಿಯನ್ ಆರ್ಯ ಭಾಷೆಗಳಿಗೂ ಆ ಮೂಲಕ ಮುಖ್ಯ ಆರ್ಯ ಭಾಷೆಯಾದ ಸಂಸ್ಕೃತಕ್ಕೂ ಹೊಂದಿಕೊಳ್ಳುವದೆಂಬ ಮಾತಷ್ಟೇ ಸತ್ಯವಾಗಿರದೆ ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲೆಲ್ಲ ಕೆಲ ಶತಮಾನಗಳ ಹಿಂದೆ ಅತಿಶಯ ಪ್ರಭಾವ ಬೀರಿದ ಕನ್ನಡನಾಡಿನ ಶಿವಶರಣರ

---

* **ಕರ್ನಾಟಕದ ಶಿವಶರಣರ ಷಟ್‌ಸ್ಥಲ ಜ್ಞಾನವು ಆಗಮಗಳಲ್ಲಿ ಬೀಜರೂಪದಿಂದ ಇದೆಯೆಂಬುದು ಸರ್ವ ಶ್ರುತವಾದ ಮಾತು. ಆದ್ದರಿಂದ ಈ ಜ್ಞಾನವು ಕ್ರಿ.ಶ. ೧೨ ನೆಯ ಶತಮಾನದಲ್ಲಿ ಎಷ್ಟೇ ವಿಸ್ತಾರ ಹೊಂದಿದರೂ ಅದರ ಮೂಲವು ಬಹು ಪುರಾತನದ್ದೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.**

ತತ್ತ್ವಜ್ಞಾನವೂ* ಕೂಡ ಆರ್ಯರ ವೇದೋಕ್ತ ತತ್ತ್ವಜ್ಞಾನಕ್ಕೆ ಸಂಪೂರ್ಣವಾಗಿ ಹೊಂದಿಕೊಳ್ಳುವದೆಂಬ ವಿಷಯವೂ ಕೂಡ ಅಷ್ಟೇ ಸತ್ಯವಾಗಿರುವದೆಂಬ ಮಾತನ್ನು ಇದುವರೆಗಿನ ವಿವರಣೆಯಿಂದ ನಾವು ಮನಗಂಡೆವು. ಇದು ಅತ್ಯಂತ ಮಹತ್ವದ್ದು. ಅವರೂ ಜ್ಯೋತಿಯ ಉಪಾಸಕರು, ಇವರೂ ಜ್ಯೋತಿಯ ಉಪಾಸಕರು. ಅವರು ಆಂತರಿಕ ಜ್ಯೋತಿಯ ಕುರುಹಾಗಿ ಬಾಹ್ಯದಲ್ಲಿ ಜ್ಯೋತಿರ್ಮಯವಾದ ಅಗ್ನಿಯನ್ನು ಪೂಜಿಸಿದರು. ಇವರು ಅದೇ ಆತ್ಮಜ್ಯೋತಿಯ ಬಾಹ್ಯಕ ಕುರುಹಾಗಿ ಥಳಥಳಿಸುವ ಇಷ್ಟಲಿಂಗವನ್ನು ಪೂಜಿಸುವರು. ಪರಮಾತ್ಮ ಜ್ಯೋತಿ, ಆತ್ಮಜ್ಯೋತಿ, ಬಾಹ್ಯ ಜ್ಯೋತಿ ಇವೆಲ್ಲಾ ಒಂದೇ ಜ್ಯೋತಿಯ ತ್ರಿವಿಧ ಸ್ವರೂಪಗಳೆಂದು ಇವರಿಬ್ಬರೂ ತಿಳಿದುಕೊಂಡಿದ್ದಾರೆ. ಆದ್ದರಿಂದ ಆರ್ಯ ದ್ರಾವಿಡ ಭಾಷಾಸಮನ್ವಯವಿಷ್ಟೇ ಅಲ್ಲ, ಆರ್ಯ ದ್ರಾವಿಡ ತತ್ತ್ವಜ್ಞಾನಸಮನ್ವಯವೂ ಕೂಡ ಸಂಪೂರ್ಣ ಸತ್ಯವಾಗಿದೆ ಯೆಂಬುದರಲ್ಲಿ ಸಂಶಯವಿಲ್ಲ. ಗ್ರೀಕರದೂ, ಪಾರ್ಸಿಗಳದೂ ಭಾಷೆಯ ಹೊರತಾಗಿ ಜ್ಞಾನದ್ದೂ ಸಹ ಆರ್ಯರ ಸಂಸ್ಕೃತಿಯ ಕೂಡ ಹೊಂದಿಕೆ ಕಂಡುಬರುವಂತೆ ದ್ರಾವಿಡ ಭಾಷಾವರ್ಗದವರದೂ ಕೂಡ ಇವೆರಡೂ (ಭಾಷೆ ಮತ್ತು ಜ್ಞಾನ) ಆರ್ಯರೊಂದಿಗೆ ಸಂಪೂರ್ಣ ಹೊಂದಿಕೆ ಕಂಡುಬರುವದೆಂಬ ಮಾತು ನನಗೆ ಅತ್ಯಂತ ಆನಂದವನ್ನುಂಟುಮಾಡಿತು.

ಯುರೋಪಿಯನ್, ಸಂಸ್ಕೃತ ಹಾಗೂ ದ್ರಾವಿಡ ಈ ಮೂರೂ ಭಾಷೆಗಳ ಸಾದೃಶ್ಯಗಳು ಒಂದೇ ಭಾಷೆಯಲ್ಲಿ ಅತಿ ಸಹಜವಾಗಿ ಕಂಡುಬರುವವೇ ಹೇಗೆಂಬು ದನ್ನು ನೋಡುವಾ. ಚೀನೀ ಭಾಷೆಯಲ್ಲಿ "ಮನುಷ್ಯ" ಎಂಬುದಕ್ಕೆ "ಜನ್" ಎಂಬ ಶಬ್ದವಿದೆ. ಇದು "ಜನ" ಎಂಬ ಸಂಸ್ಕೃತ ಶಬ್ದದಿಂದ ಬಂದದ್ದೆಂಬುದರಲ್ಲಿ ಸಂಶಯವಿಲ್ಲ. "ತಂದೆ"ಗೆ ಚೀನೀಯಲ್ಲಿ "ಫೂ" ಎಂದೂ "ತಾಯಿ"ಗೆ "ಮೂ" ಎಂದು ಶಬ್ದಗಳಿವೆ. ಇವು ಇಂಗ್ಲೀಷಿನೊಳಗಿರುವ "ಫಾದರ್" ಹಾಗೂ "ಮದರ್" ಎಂಬ ಶಬ್ದಗಳ ಸಂಕ್ಷಿಪ್ತ ರೂಪಗಳೆಂದು ಸ್ಪಷ್ಟವಾಗಿ ಅನಿಸುವುದು. ಇಂಗ್ಲೀಷಿನಲ್ಲಿ ತಂದೆ-ತಾಯಿಗಳ ಸಲುವಾಗಿ ಇರುವ ಅಕ್ಕರತೆಯ ಶಬ್ದಗಳಾದ "ಪಪಾ" "ಮಾಮಾ" ಎಂಬವುಗಳಂತೂ ಚೀನೀ ಭಾಷೆಯಲ್ಲಿ ನೇರವಾಗಿ ಬಂದಿವೆ. ಉದಾಹರಣಾರ್ಥವಾಗಿ

* ಆಗಮಗಳಲ್ಲಿ ಇದರ ಸಂಕ್ಷಿಪ್ತ ಮೂಲಬೀಜವಿದೆಯೆಂದು ಒಂದೆಯೇ ಹೇಳಿದ್ದೇನೆ. ಸ್ಕಂದ ಪುರಾಣದಲ್ಲಿ ಲಿಂಗಧಾರೀ ಮುನಿಗಳ ವರ್ಣನೆಯಿದೆಯೆಂದು ಕೈ. ವಾ. ವಾರದ ಅಪ್ಪಾಸಾಹೇಬರು ಪ್ರಕಟಿಸಿದ ಪುಸ್ತಕವೊಂದರಲ್ಲಿ ಆ ಪುರಾಣದ ಅನೇಕ ಆಧಾರಗಳಿವೆ. ಈ ಪುರಾಣದ ಅತಿ ಪುರಾತನ ಪ್ರತಿಗಳಲ್ಲಿ ಈ ವಿಷಯವಿದೆಯೇ ಹೇಗೆಂಬುದನ್ನು ನೋಡಿದರೆ ಬಹುದೊಡ್ಡ ಮಾತಿನ ನಿರ್ಣಯವಾದಂತಾಗುವದು. ಅಂಥ ಪುರಾತನ ಪ್ರತಿಗಳು (ಗುಪ್ತಲಿಪಿಯಲ್ಲಿ ಬರೆದಂಥವು) ಉಪಲಬ್ಧವಿರುವುದಾಗಿ ವಿನ್ಸೆಂಟ್ ಸ್ಮಿತ್ ಅವರು ತಮ್ಮ "ಪುರಾತನ ಭಾರತದ ಇತಿಹಾಸ"ದಲ್ಲಿ ಬರೆದಿರುವರು. ಕಲಕತ್ತೆಯ ಪುಸ್ತಕಾಲಯದಲ್ಲಿ ಇಂಥ ಪುರಾತನ ಪ್ರತಿ ಇದೆಯೆಂದು ಅವರು ಬರೆದಿದ್ದಾರೆ. — ದಾ. ವಿ. ಸೋ.

"ಬಾಭಾ" "ಮಾಮಾ" (ಚೀನೀಯಲ್ಲಿ ತಂದೆ ಮತ್ತು ತಾಯಿ ಎಂದಾಗುತ್ತದೆ.) "ನೀನು" ಎಂಬುದಕ್ಕಿಂತಲೂ ಚೀನಿಯಲ್ಲಿ "ನೀ" ಎಂಬ ಶಬ್ದವಿದ್ದದ್ದು ಸರ್ವಶ್ರುತ. ಈ "ನೀ" ಎಂಬ ದ್ವಿತೀಯ ಪುರುಷದ ಸರ್ವನಾಮವು ದ್ರಾವಿಡವರ್ಗದ ಭಾಷೆಗಳಲ್ಲೆಲ್ಲ ಬಳಕೆಯಿದ್ದಂತಹದು. ಆಸ್ಟ್ರೇಲಿಯನ್, ಬೋರ್ನ್ಯು, ಸಿಥಿಯನ್, ಬ್ರಾಹುಈ ಮುಂತಾದ ಅನೇಕ ಭಾಷೆಗಳಲ್ಲೆಲ್ಲ ಇದು ದ್ರಾವಿಡದ ಮುಖ್ಯ ಚಿಹ್ನವಾಗಿ ಇದ್ದೇ ಇದೆ.

ಇನ್ನು ಶುದ್ಧ ಸಂಸ್ಕೃತದಲ್ಲಿ ಸ್ಪಷ್ಟವಾದ ದ್ರಾವಿಡ ಶಬ್ದಗಳಿವೆಯೋ ಹೇಗೆ, ನೋಡುವಾ. ಉಪನಿಷತ್ತುಗಳ ಶಾಂತಿಮಂತ್ರಗಳಲ್ಲೊಂದಾದ "ಪೂರ್ಣಂ ಅದಃ, ಪೂರ್ಣಂ ಇದಂ, ಪೂರ್ಣಾತ್ ಪೂರ್ಣಂ ಉದಚ್ಯತೇ" (ಅದುವೂ ಪೂರ್ಣ, ಇದುವೂ ಪೂರ್ಣ, ಪೂರ್ಣದಿಂದ ಪೂರ್ಣವು ಉದಿಸುತ್ತದೆ) ಎಂಬ ಪ್ರಖ್ಯಾತ ಮಂತ್ರದಲ್ಲಿರುವ "ಅದಃ" "ಇದಂ" (= ಅದು, ಇದು) ಎಂಬವುಗಳು ಸ್ಪಷ್ಟವಾಗಿ ದ್ರಾವಿಡವಲ್ಲದೆ ಮತ್ತೇನು ?

ಇದರಂತೆ, ಇಂಗ್ಲೀಷಿನಲ್ಲಿ "ಒಂದು" ಎಂಬ ಅಂಕೆಗಿರುವ "ಒನ್" ಎಂಬ ಶಬ್ದವು ತಮಿಳಿನ "ಒನು" ಹಾಗೂ ಕನ್ನಡದ "ಒನ್ದು" ಎಂಬ ಶಬ್ದದಿಂದ ಭಿನ್ನವಾಗಿಲ್ಲವೆಂಬುದು ಸಹಜ.

"ನಾವು" "ನೀವು" ಎಂಬವುಗಳಿಗೆ ಸಂಸ್ಕೃತದಲ್ಲಿರುವ "ವಯಂ" "ಯೂಯಂ" ಎಂಬ ಶಬ್ದಗಳೂ, ಇಂಗ್ಲೀಷಿನಲ್ಲಿ ಇವೇ ಶಬ್ದಗಳ ಅರ್ಥವಾಗಿರುವ "ವುಯ್" "ಯೂ" ಎಂಬವುಗಳೂ ಒಂದೇ ಎಂಬುದರಲ್ಲಿ ಸಂಶಯವೇ ಇಲ್ಲ.

ಈ ರೀತಿಯಿಂದ ಯುರೋಪಿಯನ್ ಭಾಷೆಗಳೂ, ಸಂಸ್ಕೃತವೂ, ದ್ರಾವಿಡವೂ ಒಂದರೊಳಗೊಂದು ಹಾಸುಹೊಕ್ಕಾಗಿವೆಯೆಂದು ಸ್ವಾಭಾವಿಕವಾದ ವ್ಯವಹಾರಿಕ ಶಬ್ದಗಳಿಂದ ಸಹ ಅರಿತುಕೊಳ್ಳಬಹುದು. ಸೂಕ್ಷ್ಮರೀತಿಯಿಂದ ಪರಿಶೀಲನೆ ಮಾಡಿದರೆ ಇದಕ್ಕಿಂತ ಹೆಚ್ಚಿನ ಸಾದೃಶ್ಯಗಳು ಕಂಡುಬರುವವೆಂಬುದಕ್ಕೆ ಕಾಲ್ಡ್‌ವೆಲ್ ಹಾಗೂ ಕ್ಲೋಸೆಟ್ ಮೊದಲಾದವರ ಪುಸ್ತಕಗಳೇ ಸಾಕ್ಷಿ. ಇವೆಲ್ಲ ಪ್ರಮಾಣಗಳಿಂದ ಯುರೋಪಿಯನ್ ಭಾಷೆಗಳಿಗೂ, ಸಂಸ್ಕೃತಕ್ಕೂ, ದ್ರಾವಿಡಕ್ಕೂ ಪರಸ್ಪರ ಸಂಬಂಧ ಹತ್ತುವದೆಂಬ ಮಾತು ನಿರ್ವಿವಾದವಾಗಿದೆಯೆಂದು ವಾಚಕ ಮಹಾಶಯರಿಗೆ ಅನಿಸದಿರದೆಂದು ನನ್ನ ಭಾವನೆ.

ಡಾಕ್ಟರ ಗುಂಡರ್ಟ ಎಂಬವರು ಯುರೋಪದ ಹಂಗೇರಿಯನ್ ಭಾಷೆಯಲ್ಲಿ ಅನೇಕ ದ್ರಾವಿಡ ಶಬ್ದಗಳಿರುವುದನ್ನು ಆಶ್ಚರ್ಯಕರವಾಗಿ ತೋರಿಸಿರುವರು. ಕಾಲ್ಡ್‌ವೆಲ್ಲರ ಪುಸ್ತಕದಲ್ಲಿ ಕೊಟ್ಟ ಇವರ ಯಾದಿಯಿಂದ ಕೆಲವು ಶಬ್ದಗಳನ್ನಿಲ್ಲಿ ನೋಡಿರಿ— ಸೇರ್ = ಒಂದುಗೂಡು, ಹಂ, ಸ್ಫೇದ್; ಸುಡು. ಹಂ. ಸೂಟ್; ಪೋರ್–ಕಾದಾಡು; ಹಂ, ಪರ್; ಪೇಶು=ಪೇಳು, ಹಂ, ಬೇಶ್ಝ್; ಮಗು=ಕೂಸು,

ಹಂ, ಮಗ್ಹತ್; ಪೊಲೆ, ಹಂ, ಪೊಲ್ಲೀ; ಶೊಲ್=ಮಾತಾಡು; ಹಂ, ಸ್ಪೊಲ್; ಪಿತ್=ಬಿತ್ತು, ಹಂ, ಪತ್, ಇತ್ಯಾದಿ ಶಬ್ದಗಳನ್ನು ನೋಡಿದರೆ ಆಶ್ಚರ್ಯವೆನಿಸದಿರದು. ಇದರಂತೆ ಮರ ಮತ್ತು ತಲೆ ಎಂಬ ಎರಡು ಶಬ್ದಗಳು ಮಧ್ಯ ಏಶಿಯಾದ ಸಿಥಿಯನ್ ವರ್ಗದ ಅನೇಕ ಭಾಷೆಗಳಲ್ಲಿ ಒಂದೇ ಪ್ರಕಾರವಾಗಿರುವದನ್ನು ನೋಡಿದರೂ ಆಶ್ಚರ್ಯ ವಾಗುವದು.

ಉದಾ : ಮರಂ = ಗಿಡ. ಲ್ಯಾಪಲಂಡಿನ ಭಾಷೆಯಲ್ಲಿ ಮುಬರ್ ಅಥವಾ ಮುಬರ್ರ; ಕ್ವಾಸೀ ಕುಮುಕ್ ತುರ್ಕಿಯಲ್ಲಿ ಮುರಂ; ಮೊಂಗೋಲಿಯನ್‌ದಲ್ಲಿ ಮೊರೊ; ತೋಮಸ್ಕದಲ್ಲಿ ಮಧ್ಸೀ, ಫಿನ್ಲಾಂಡಿನ ಭಾಷೆಯಲ್ಲಿ ಮೆತ್ಸ; ಲೆಟ್ಟಿಶದಲ್ಲಿ ಮೆಸ್. — ಕಾಲ್ಡ್‌ವೆಲ್ಲರ ಗ್ರಂಥ, ಪುಟ ೬೨೨

ತಲ = ತಲೆ; ಮೊಂಗೋಲಿಯನ್ ತೊಲೊ = ಗೈ; ಕಾಲ್ಮುಕ್‌ದಲ್ಲಿ ತೊಲ್ = ಗೋ; ಬೂರಿಯಾತ್ ತುಲಗೈ; ಸಾಮುತಾನ್ (ತುಂಗ್‌ಸಿಯನ್ ಭಾಷೆಯ ಒಂದು ಉಪಭಾಷೆಯಲ್ಲಿ) ದೊಲ್ಲೊ; ತುಂಗಸಿಯನ್ ಬೇರೆ ಬೇರೆ ಉಪಭಾಷೆಗಳಲ್ಲಿ ದುಲ್ಲೊ ದೆಲ್, ದೆಲಿ; ತುರ್ಕಿ ತೊರ್. — ಪುಟ ೬೨೦

ಇವೆಲ್ಲ ಶಬ್ದಗಳ ನಿರೀಕ್ಷಣದಿಂದ ದ್ರಾವಿಡ ಹಾಗೂ ಬಹುದೂರ ಪ್ರದೇಶದ ಅನೇಕ ಅನ್ಯಭಾಷೆಗಳ ಸಂಪರ್ಕ ಹಾಗೂ ಸಾದೃಶ್ಯಗಳನ್ನು ಸಹಜವಾಗಿ ಕಂಡುಕೊಳ್ಳ ಬಹುದು. ಬಲ್ಲವರು ಇದಕ್ಕಿಂತ ಹೆಚ್ಚಿನ ಸಾದೃಶ್ಯಗಳನ್ನು ಕಂಡುಹಿಡಿಯಬಹುದು. ನನ್ನೀ ಸಂಕ್ಷಿಪ್ತ ಲೇಖನದಲ್ಲಿ ಇದಕ್ಕಿಂತ ಹೆಚ್ಚಿಗೆ ಉದಾಹರಣೆಗಳನ್ನು ಕೊಡುವ ಕಾರಣವಿಲ್ಲವೆಂದು ನನಗೆ ಅನಿಸುತ್ತದೆ. ಅಲ್ಲದೆ ಆ ಕೆಲಸವು ನನಗಿಂತ ಹೆಚ್ಚಿನ ಸಂಶೋಧಕರನ್ನು ಕೂಡಿದೆಯೆಂದು ನಾನು ಪ್ರಾಂಜಲಭಾವದಿಂದ ಒಪ್ಪಿಕೊಳ್ಳುತ್ತೇನೆ.

ಇನ್ನೇನು ? ಕಾಲ್ಡ್‌ವೆಲ್ಲರ ಎರಡು ಮಹತ್ವದ ವಾಕ್ಯಗಳನ್ನು ಉಲ್ಲೇಖಿಸು ವುದು ನನಗೆ ಆವಶ್ಯಕವೆಂದೆನಿಸುತ್ತದೆ. ಆ ಮಹತ್ವದ ವಾಕ್ಯಗಳು ಇವು :

೧. "ನನ್ನ ಸ್ವಂತದ ಸಿದ್ಧಾಂತವೇನೆಂದರೆ, ದ್ರಾವಿಡ ಭಾಷೆಗಳು, ಇಂಡೋ ಯುರೋಪಿಯನ್ ಹಾಗೂ ಸಿಥಿಯನ್ ಅಥವಾ ತುರೇನಿಯನ್ ಭಾಷಾವರ್ಗಗಳ ಮಧ್ಯಸ್ಥಾನದಲ್ಲಿರುವ ತಮ್ಮದೇ ಆದ ಒಂದು ಸ್ಥಾನವನ್ನು ಪಡೆಯುವವು. ಆದರೆ ಕೇವಲ ನಟ್ಟನಡುವಿನ ಸ್ಥಾನವನ್ನಲ್ಲ, ಆದರೆ ಮೊದಲಿನದಕ್ಕಿಂತ ಕೊನೆಯದಕ್ಕೆ ತೀರ ಸಮೀಪದ ಸ್ಥಾನವನ್ನು ಅವು ಪಡೆಯುತ್ತವೆ."

— ದ್ರಾವಿಡ ಭಾಷೆಗಳ ತುಲನಾತ್ಮಕ ವ್ಯಾಕರಣ. ಪ್ರಸ್ತಾವನೆ ಪುಟ ೯

೨. "ದ್ರಾವಿಡ ಭಾಷಾ ಕುಟುಂಬವು, ಇಂಡೋ–ಯುರೋಪಿಯನ್ ಹಾಗೂ ಸಿಥಿಯನ್ ಭಾಷಾವರ್ಗಗಳೆರಡನ್ನು ಜೋಡಿಸುವ ನಡುವಿನ ಕೊಂಡಿಯಾಗಿದೆ

ಯೆಂದಿಷ್ಟು ಮಾತ್ರವೇ ಅಲ್ಲದೆ, ಅದು ಮಾನವ ವಾಣಿಯ ಇತಿಹಾಸದೊಳಗಿನ ಒಂದಾನೊಂದು ಕಾಲಮಾನದ, ಅಂದರೆ ಇಂಡೋ–ಯುರೋಪಿಯನ್ ಭಾಷಾವಸ್ಥೆಗಿಂತ ಪುರಾತನವಾದ, ಸಿಥಿಯನ್ ಭಾಷಾವಸ್ಥೆಗಿಂತಲೂ ಪುರಾತನವಾದ, ಹಾಗೂ ಇವೆರಡರ ಒಂದರಿಂದೊಂದು ಭಿನ್ನತೆ ಪಡೆಯುವುದಕ್ಕಿಂತಲೂ ಪುರಾತನವಾದ ಒಂದಾನೊಂದು ಕಾಲಮಾನದ ಭಾಷೆಯ ಉಳಿಕೆಯಾದ ಪ್ರತಿನಿಧಿಯಾಗಿದೆಯೆಂದು ಭಾವಿಸುವುದು ಸಯುಕ್ತಿಕವೆಂದು ಕಂಡುಬರುವದಿಲ್ಲವೆ ?"*

—ದ್ರಾವಿಡ ಭಾಷೆಗಳ ತುಲನಾತ್ಮಕ ವ್ಯಾಕರಣ, ಪ್ರಸ್ತಾವನೆ, ಪುಟ ೧೦

ಈ ರೀತಿಯಾಗಿ ಇಂಡೋ-ಯುರೋಪಿಯನ್ ಭಾಷೆಗಳಿಗಿಂತ ಪುರಾತನವಾದ, ಸಿಥಿಯನ್ ಭಾಷೆಗಿಂತಲೂ ಪುರಾತನವಾದ, ಇವೆರಡೂ ಭಾಷೆಗಳು ಒಂದೇ ಆಗಿದ್ದಾಗಿನಕ್ಕಿಂತಲೂ ಪುರಾತನವಾದ ಹಾಗೂ ದ್ರಾವಿಡ ಭಾಷೆಗಳಿಗೂ ತಾಯಿ ಭಾಷೆಯಾದ ಈ ಮೂಲಭಾಷೆಯು ಯಾವದಾಗಿರಬಹುದು ? ಮತ್ತು ಮಧ್ಯ ಏಶಿಯಾದಲ್ಲಿದ್ದಂತಹದೆಂದ ಬಳಿಕ ಅದೇ ಆರ್ಯ ಭಾಷೆಯೆಂದು ಒಪ್ಪಿಕೊಂಡರೆ ಸಾಲದೇ ? ಅಥವಾ ಅದೂ ಆರ್ಯ ಭಾಷೆಯೂ ಮೊದಲಿಗೆ ಒಂದಾಗಿದ್ದು, ಹಿಂದಿನಿಂದ ಒಡೆದು ಎರಡಾದವೆಂದು ಭಾವಿಸಬಹುದಲ್ಲವೆ ? ಭರತಖಂಡಕ್ಕೆ ಮೊದಲಿಗೆ ಬಂದ ಆರ್ಯರು, ಹಿಂದಿನಿಂದ ಬಂದ ಆರ್ಯರು ಎಂಬ ಭೇದವೇ ಈ ಭಾಷಾಭೇದಕ್ಕೆ ಕಾರಣವಾಗಿದೆಯೆಂಬ, ಮೊದಮೊದಲಿನ ಇತಿಹಾಸ ಸಂಶೋಧಕರ ಸಿದ್ಧಾಂತವೇ ಸತ್ಯವಾಗಿರುವದೆಂದು ಇದುವರೆಗಿನ ವಿವರಣೆಗಳಿಂದ ಅನಿಸುವದಿಲ್ಲವೇ ?

---

* 1. My one theory is that the Dravidian languages occupy a position of their own between the languages of the Indo-European family and those of the Turanian orSythian group-not quite a midway position but one considerably nearer the latter than the former.

—A comparative Grammar of the Dravidian Languages Introduction, Page IX.

2. Does there not seem to be reason for regarding the Dravidian family of languages, not only as a link of connection between the Indo-European and Sythian groups, but as the best surviving representative of a period in the history of human speech older than the Indo-European stage, older than the Sythian, and older than the separation of the one from the other?

—A Comparative Grammar of the Dravidian Languages, Introduction, Page X.

ಭಗವಾನ್ ಶ್ರೀ ಅರವಿಂದರ ಸಿದ್ಧಾಂತವಂತೂ ಆರ್ಯ ದ್ರಾವಿಡಗಳು ಎರಡಲ್ಲವೇ ಅಲ್ಲ, ಎರಡೂ ಒಂದೇ, ಎಂದು ಇದೆ ಎಂಬುದನ್ನು ಈ ಮೊದಲೇ ಹೇಳಿದ್ದೇನೆ. ಆದ್ದರಿಂದ ಭಾಷಾಶಾಸ್ತ್ರ ಸಂಶೋಧಕರು ಈ ಮಾರ್ಗದಿಂದ ಸಂಶೋಧನೆ ನಡಸಿ ಮೇಲ್ಕಂಡ ಸಿದ್ಧಾಂತವನ್ನು ಮನವರಿಕೆ ಮಾಡಿಕೊಳ್ಳಬೇಕೆಂದು ನಾನವರಲ್ಲಿ ಬಿನ್ನಯಿಸಿಕೊಳ್ಳುತ್ತೇನೆ. ನನ್ನೀ ಚಿಕ್ಕ ಲೇಖನವು ಈ ಮಾರ್ಗದಲ್ಲಿ ವಿಚಾರ ಮಾಡು ವವರಿಗೆ ಕೆಲಮಟ್ಟಿಗೆ ಸೂಚಕವಾದರೆ ಸಾರ್ಥಕವೆಂದು ನಾನು ಭಾವಿಸುತ್ತೇನೆ. ಅನೇಕ ಆಧುನಿಕ ಭಾಷಾಶಾಸ್ತ್ರಜ್ಞರ ಚಿತ್ತವು ಈ ವಿಷಯದ ಕಡೆಗೆ ಹೊರಳಿದೆಯೆಂಬ ಮಾತು ಆನಂದಕರವಾಗಿದೆ. ಒಲ್ಲವರು ಈ ಬಗೆಗೆ ಹೆಚ್ಚಿನ ಸಂಶೋಧನ ನಡೆ ಯಿಸುವರೆಂದು ಆಶಿಸುತ್ತೇನೆ. ಮಹಾಸಾಗರದಂಥ ಈ ದೊಡ್ಡ ವಿಷಯವನ್ನು ಪ್ರತಿಪಾದಿಸುವುದಕ್ಕೆ ನನ್ನ ಬುದ್ಧಿಯು ಸಣ್ಣದೆಂದು ನಾನು ಪ್ರಾಂಜಲಭಾವದಿಂದ ಒಪ್ಪಿಕೊಳ್ಳುತ್ತೇನೆ.

ಇನ್ನೇನು ? ಕ್ಲೋಸೆಟ್ಟರ ಪುಸ್ತಕವನ್ನೂ ಇನ್ನು ಕೆಲವು ಮಹತ್ವದ ಗ್ರಂಥ ಗಳನ್ನೂ ನನಗೆ ಕಳುಹಿಸಿಕೊಟ್ಟದ್ದಕ್ಕಾಗಿ ಅಣ್ಣ ಶ್ರೀ ದ. ರಾ. ಬೇಂದ್ರೆಯವರಿಗೂ, ಕಾಲ್ಡವೆಲ್ಲರ ಪುಸ್ತಕವನ್ನೂ ಹಾಗೂ ಬೇರೆ ಕೆಲವು ಪುಸ್ತಕಗಳನ್ನು ನನಗೆ ಕಳುಹಿಸಿ ಕೊಟ್ಟದ್ದಕ್ಕಾಗಿ ಅಣ್ಣ ಶ್ರೀ ಸ. ಸ. ಮಾಳವಾಡರವರಿಗೂ ಅವರ ಸಹಧರ್ಮಿಣಿಯ ರಾದ ಸೌ. ಅಕ್ಕ ಶಾಂತಾದೇವಿ ಮಾಳವಾಡರವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆ ಯನ್ನು ಎಷ್ಟು ಸಲ್ಲಿಸಿದರೂ ಸ್ವಲ್ಪವೇ* ಸರಿ. ಇನ್ನೇನು ? ಶಾಖೆಗಳಿಂದ ಮೂಲದೆಡೆಗೆ ಹೋಗುವ ನನ್ನೀ ಪ್ರಯತ್ನದಂತೆ, ಮೂಲದಿಂದ ಶಾಖೋಪಶಾಖೆ ಗಳಿಗೆ ಬಂದು ತಲುಪುವ ಪ್ರಯತ್ನವನ್ನು ಅಣ್ಣ ಶ್ರೀ ಬೇಂದ್ರೆಯವರು ನಡಸಿದ್ದು, "ಒಂದೇ ಭಾಷೆಯಲ್ಲಿ ಒಂದೇ ಅರ್ಥದಲ್ಲಿರುವ ಅನೇಕ ಶಬ್ದಗಳು ಆ ಒಂದೇ ಜನಾಂಗ ಅನೇಕ ಉಪಜನಾಂಗಗಳನ್ನು ಸೂಚಿಸುತ್ತವೆ" ಎಂಬುದು ಅವರ ಸಿದ್ಧಾಂತ. ಅವರ ಈ ಸಿದ್ಧಾಂತವನ್ನನುಸರಿಸಿ ಒಂದು ಉದಾಹರಣೆಯನ್ನು ಕೊಡುವೆನು : ಕುಸುಮ, ಪುಷ್ಪ (ಪೂ ಎಂಬ ಹಳಗನ್ನಡ ಶಬ್ದವನ್ನು ಲಕ್ಷ್ಯದಲ್ಲಿಡಬೇಕು); ಜಲ, ನೀರ (ನೀರಜ, ನೀರಜಾಕ್ಷ ಎಂಬ ಶಬ್ದಗಳಲ್ಲಿರುವ ನೀರು ಎಂಬ ಶಬ್ದವನ್ನು ಲಕ್ಷ್ಯದಲ್ಲಿಡ ಬೇಕು.) ಇಲ್ಲಿ "ಕುಸುಮ, ಜಲ" ಎಂಬವರದೇ ಒಂದು ಶಾಖೆ, ಹಾಗೂ "ಪುಷ್ಪ, ನೀರ" ಎಂಬವರದೇ ಒಂದು ಶಾಖೆ, ಎಂದು ಊಹಿಸಲಿಕ್ಕೆ ಬರುವಂತಿದೆ.† ಇವರೇ ಸಂಸ್ಕೃತ ಹಾಗೂ ದ್ರಾವಿಡ ಭಾಷಾವರ್ಗದ ಉಭಯ ಶಾಖೆಯ ಆರ್ಯರಾಗಿರಬಹು

---

* ಇದರಂತೆ ಈ ವಿಷಯದಲ್ಲಿ ನನಗೆ ಅನೇಕ ಪ್ರಕಾರದಿಂದ ಸಹಾಯ ಮಾಡಿದ ಸರ್ವ ಮಿತ್ರ ರಿಗೂ ಹಿರಿಯರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುವೆನು.

† ಯದು, ತುರ್ವಶ, ಭರತ ಮೊದಲಾದ ಹತ್ತು ಉಪಜನಾಂಗಗಳು ಆರ್ಯರಲ್ಲಿದ್ದುವಾಗಿ "ಋಗ್ವೇದಿಕ್ ಕಲ್ಚರ್" ಎಂಬ ಗ್ರಂಥದಲ್ಲಿ ಶ್ರೀ ದಾಸ್ ಎಂಬ ಮಹನೀಯರು ಸವಿಸ್ತಾರ ವಾಗಿ ತೋರಿಸಿಕೊಟ್ಟಿದ್ದಾರೆ.

ದಲ್ಲವೆ ? ಇನ್ನೊಂದು ಉದಾಹರಣೆ : ಅಸ್ಮದ್ = ಅಹಂ, ಯುಸ್ಮದ್ = ತ್ವಂ, ಎಂಬ ಶಬ್ದಗಳಿಂದ ಸಿದ್ಧವಾಗುವ ಅಸ್ಮಾಕಂ (ನಮ್ಮ) ನಃ (ನಮ್ಮ), ಯುಷ್ಮಾಕಂ (ನಿಮ್ಮ) ವಃ (ನಿಮ್ಮ) ಎಂಬ ಎರಡೆರಡು ರೂಪಗಳಲ್ಲಿ ನಃ, ವಃ ಎಂಬ ರೂಪಗಳ ಮೂಲ ಶಬ್ದಗಳು ನಕಾರ ಪಕಾರಗಳಿಂದ ಆರಂಭವಾಗಲಿಕ್ಕೆ ಬೇಕಷ್ಟೆ ? ಆದರೆ ಈಗ ಸಂಸ್ಕೃತದಲ್ಲಿ ಅಂಥ ರೂಪಗಳಿಲ್ಲ. ಆದರ ಫ್ರೆಂಚ್‌ದಲ್ಲಿ ಇವೆ. ಉದಾ : ನೂ (Nous = ನಾವು), ವೂ (Vous = ನೀವು). ಆದ್ದರಿಂದ ಈ ನಃ ವಃ ಎಂಬವು ಗಳು ಲ್ಯಾಟಿನ್ (ಫ್ರೆಂಚಕ್ಕೆ ಮೂಲವಾದ) ವರ್ಗದ ಆರ್ಯರ ಮೂಲ ಸಂಸ್ಕೃತ ಶಾಖೆಯ ಶಬ್ದಗಳಾಗಿರಬಹುದೆಂದು ಸಿದ್ಧವಾಗುವದಿಲ್ಲವೆ ? ಅಣ್ಣ ಶ್ರೀ ದ. ರಾ. ಬೇಂದ್ರೆಯವರ ಇಂಥ ಸಂಶೋಧನಗಳಿಂದ ಕೂಡಿದ ಲೇಖನವೂ ಅವರಿಂದ ಬೇಗನೆ ಬರೆಯಲ್ಪಟ್ಟು ಪ್ರಕಟವಾಗಲಿರುವದೆಂಬ ಮಹತ್ವದ ಮಾತನ್ನು ಸೂಚಿಸಿ ನನ್ನೀ ಸಂಕ್ಷಿಪ್ತ ಲೇಖನವನ್ನು ಮುಗಿಸುವೆನು. ಬರಲಿರುವ ಅವರ ಲೇಖನದಿಂದ ನನ್ನ ಲೇಖನದ ಮೇಲೆಯೂ ಬಹಳ ಬೆಳಕು ಬೀಳಬಹುದೆಂದು ನಂಬಿದ್ದೇನೆ.

**ಜೀವನ ೧೧-೬,೭ ಅಕ್ಟೋಬರ, ನವಂಬರ ೧೯೫೦**

# ಬೇಂದ್ರೆಯವರ ಭಾಷಾಶಾಸ್ತ್ರ ವಿಷಯಕ ವಿಚಾರಗಳ ರೂಪರೇಷೆ

---

'ಜೀವನ' ಮಾಸಿಕದಲ್ಲಿ (ಅಕ್ಟೋಬರ ಮತ್ತು ನವಂಬರ್ ೧೯೫೦) ಪ್ರಕಟವಾದ "ಆರ್ಯ-ದ್ರಾವಿಡ ಭಾಷಾಸಮನ್ವಯ' ಎಂಬ ಲೇಖನದ ಕೊನೆಯ ಭಾಗದಲ್ಲಿ "ಶ್ರೀಮಾನ್ ಕವಿ ಬೇಂದ್ರೆಯವರು ಭಾಷಾಶಾಸ್ತ್ರ ವಿಷಯದಲ್ಲಿ ಹೊಸಪ್ರಯೋಗ ವೊಂದನ್ನು ನಡಿಸಿದ್ದಾರೆ; ಒಂದೇ ಭಾಷೆಯಲ್ಲಿ ಒಂದೇ ವಸ್ತುವಿಗೆ ಅನೇಕ ವ್ಯವಹಾರಿಕ ಶಬ್ದಗಳೇಕೆ ?...'ಒಂದೇ ಜನಾಂಗದ ಅನೇಕ ಉಪಜನಾಂಗಗಳ ಭಿನ್ನ ಭಿನ್ನ ಉಪಭಾಷೆಗಳ ದ್ಯೋತಕವಾಗಿ ಈ ಭಿನ್ನ ಭಿನ್ನ ಶಬ್ದಗಳಿರಬಹುದೇ ?... ಪ್ರತಿಯೊಂದು ವಸ್ತುವಿನ ಭಿನ್ನ ಭಿನ್ನ ಶಬ್ದಗಳನ್ನು ವರ್ಗೀಕರಿಸಿ, ಬೇರೆ ಬೇರೆ ವಸ್ತುಗಳ ಇಂಥ ಶಬ್ದಗಳನ್ನೆಲ್ಲ ವರ್ಗೀಕರಣ ಕ್ರಮದಿಂದ ಬೇರೆ ಬೇರೆ ಗುಂಪು ಮಾಡಿ ಪರಿಶೀಲಿಸಿದರೆ ಆಯಾ ಉಪಜನಾಂಗಗಳ ಜೀವನ ವೈಶಿಷ್ಟ್ಯವನ್ನು ಕಂಡು ಹಿಡಿಯಲಿಕ್ಕಾಗಬಹುದೇ ? ಎಂಬ ಪ್ರಶ್ನೆಗಳ ಮೇಲೆ ಅವರ ಶೋಧದಿಂದ ಬೆಳಕು ಬೀಳುವಂತಿದೆ." ಎಂಬರ್ಥದಲ್ಲಿ ಸೂಚಿಸಲಾಗಿದೆಯೆಂಬುದನ್ನು ಅದನ್ನೋದಿದವರೆಲ್ಲ ಬಲ್ಲರು.

ಇನ್ನೊಂದು ಮಾತೆಂದರೆ ಬೀಜಾಕ್ಷರಪದ್ಧತಿ. ಬಹಳ ವರ್ಷಗಳ ಹಿಂದೆಯೇ ಶ್ರೀ ಬೇಂದ್ರೆಯವರು ಈ ಬಗೆಗೆ ನಮಗೆಲ್ಲ ಹಲಕೆಲವು ಮಾತು ಹೇಳಿದ್ದರು. ಉದಾಹರಣಾರ್ಥವಾಗಿ- ಭಾಷಾಶಾಸ್ತ್ರದಲ್ಲಿ- ೧. ಅನುಕರಣವಾಚಕ ಶಬ್ದಗಳಿಂದಲೇ ಭಾಷೋತ್ಪತ್ತಿಯೆಂದೂ, ೨. ಉದ್ಗಾರವಾಚಕಗಳಿಂದಲೇ ಭಾಷೋತ್ಪತ್ತಿಯೆಂದೂ ಎರಡೂ ವಾದಗಳು ಪಾಶ್ಚಾತ್ಯವಿದ್ವಾಂಸರಲ್ಲಿರುವಂತೆ ನಮ್ಮ ಪುರಾತನ ಮಂತ್ರ ಶಾಸ್ತ್ರದಲ್ಲಿಯೂ ದಿವಂಗತ ವಿಶ್ವಕವಿ ಏ. ಇ. ಯವರ 'Candle of Vision' ದಲ್ಲಿಯೂ ಬರುವ "ಮಾತೃಕಾಶಕ್ತಿ" ಅಥವಾ "ಅಕ್ಷರಶಕ್ತಿ" ಎಂಬ ಧ್ಯಾನಗಮ್ಯ ಬಹುಸೂಕ್ಷ್ಮಪದ್ಧತಿಯೂ ಒಂದು ಇದೆಯೆಂಬುದನ್ನು ನೆನೆಸಿದರೆ ಶ್ರೀ ಬೇಂದ್ರೆಯವರ "ಬೀಜಾಕ್ಷರ" ಪದ್ಧತಿಯ ಕಲ್ಪನೆಯಾಗುವದು. ಸಿಲೋನಿನ ಭಾಷಾಶಾಸ್ತ್ರಜ್ಞರಾದ 'ಫಾದರ ಕ್ಲೋಸೆಟ್'ರವರ ಪದ್ಧತಿಯೂ ಈ ವರ್ಗದ್ದಾಗಿದೆ. "ಅಕ್ಷರಮಾಲಿ-ಕೋಪನಿಷತ್ತು" ಮತ್ತು 'ಜಾ:ನ್ ಎಡ್ರಾಫ್' ಅವರ 'Garland of letters'

ಎಂಬ ಗ್ರಂಥಗಳಲ್ಲಿ ಈ ವಿಷಯದಲ್ಲಿ ನಮ್ಮ ಪುರಾತನರು ಮಾಡಿದ ಶೋಧವನ್ನು ನೋಡಬಹುದು. ಶ್ರೀ ಬೇಂದ್ರೆಯವರ "ಬೀಜಾಕ್ಷರ" ಪದ್ಧತಿಯು ಪುರಾತನ ನೂತನರೀರ್ವರ ಸಂಶೋಧನೆಗಳೆರಡನ್ನೂ ಬಳಸಿಕೊಂಡು ಅವೆರಡಕ್ಕೂ ಮಧ್ಯವರ್ತಿಯಾಗಿ ನಿಂತಿದೆ.

ಇದಲ್ಲದೆ ಶಬ್ದವ್ಯುತ್ಪತ್ತಿಶಾಸ್ತ್ರಪದ್ಧತಿ ಅಥವಾ ನಮ್ಮ ಪುರಾತನ ವೈದಿಕ "ನಿರುಕ್ತ" ಪದ್ಧತಿಯೆಂಬುದೂ ಒಂದು ಉಂಟೆಂಬುದನ್ನು ಸರ್ವರೂ ಬಲ್ಲರು. ಶ್ರೀ ಬೇಂದ್ರೆಯವರು ತಮ್ಮ ಸಂಶೋಧನೆಯಲ್ಲಿ ಇವೆಲ್ಲ ಪದ್ಧತಿಗಳನ್ನು ಉಪಯೋಗಿಸಿಕೊಂಡಿರುವರು.

ಮಾನವನು ಯಾವ ಕೃತ್ರಿಮ ಸಾಧನ-ಸಲಕರಣೆಗಳನ್ನೂ ಹುಟ್ಟಿಸಿಕೊಳ್ಳದೆ ಕೇವಲ ಹಕ್ಕಿಪಕ್ಕಿಗಳಂತೆ ನಿಸರ್ಗದಲ್ಲಿ ಸಂಚರಿಸುತ್ತ ಬಾಳಿಬದುಕುತ್ತಿದ್ದ ಕಾಲದಲ್ಲಿ ಹೃದಯದ ಭಾವನೆಯಿಂದ ಉಕ್ಕಿಬರುವ ಉದ್ಗಾರವಾಚಿಗಳೇ ಅವನ ಭಾಷೆಯಾಗಿದ್ದಿರಬೇಕೆಂಬುದು ಸ್ವಾಭಾವಿಕವಾಗಿದೆ. ಇವು ಸಂಖ್ಯೆಯಲ್ಲಿ ತೀರ ಸ್ವಲ್ಪ ಮಾತ್ರವಾಗಿವೆಯೆಂಬುದೂ ಎಲ್ಲರಿಗೆ ತಿಳಿದ ಮಾತು.

ಆಮೇಲೆ ಅತ್ತಿಂದಿತ್ತ, ಇತ್ತಿಂದತ್ತ ಸಂಚರಿಸುತ್ತ ಬೇರೆ ಬೇರೆ ಪರಿಸ್ಥಿತಿಗಳನ್ನು ಎದುರಿಸುವದಕ್ಕೂ ಅನುಕೂಲತೆಗಳನ್ನು ಹುಟ್ಟಿಸುವದಕ್ಕೂ ಬೇರೆ ಬೇರೆ ಕೃತ್ರಿಮ ಸಲಕರಣಗಳನ್ನು ನಿರ್ಮಿಸಿಕೊಳ್ಳುತ್ತ ಬಂದ ಹಾಗೆಲ್ಲ ಆಯಾ ವಸ್ತು ಮತ್ತು ಪ್ರಾಣಿ ಮೊದಲಾದವುಗಳ ಸದ್ದುಗಳ ಮೇಲಿಂದ ಅವುಗಳಿಗೆ ಹೆಸರುಗಳನ್ನು ಕೊಡುತ್ತ ಅನುಕರಣವಾಚಿಗಳಿಂದ ಮಾನವ ಭಾಷೆಯನ್ನು ಬೆಳೆಸಿಕೊಂಡಿರಬಹುದೆಂಬುದೂ ಸಹಜವಾಗಿ ಒಪ್ಪಿತವಾಗುವದು. ಇಂಥ ಶಬ್ದಗಳು (ಅನುಕರಣವಾಚಿಗಳು) ಮೊದಲಿನವುಗಳಿಗಿಂತ ಸಂಖ್ಯೆಯಲ್ಲಿ ಕೆಲಮಟ್ಟಿಗೆ ಹೆಚ್ಚಿಗಿರುವವೆಂಬುದು ನಮಗೆಲ್ಲ ಗೊತ್ತಿರುವ ಮಾತಾಗಿದೆ.

ಆ ಬಳಿಕ ಜೀವನದ ಸುಖ–ಸೌಕರ್ಯಗಳು ಹೆಚ್ಚಾಗಿ ಜನರ ಬಾಹ್ಯಸಭ್ಯತೆಯು (ಸುಧಾರಣೆಗಳು) ಬೆಳೆದಂತೆ ಜೀವನ ಕ್ಷೇತ್ರವು ವಿಸ್ತಾರವಾಗಿ ಮಾತುಕತೆಯ ಸಂದರ್ಭವು ಬೆಳೆದುಬಿಟ್ಟಂತೆಲ್ಲ ಕ್ರಿಯೆಯೇ ಮುಖ್ಯವಾಗಿರುವ ಆಗಿನ ಕಾಲದಲ್ಲಿ ಕ್ರಿಯಾವಾಚಕ ಶಬ್ದಗಳಿಂದ (ಧಾತುಗಳಿಂದ) ಅನೇಕಾನೇಕ ಪ್ರಕಾರದ ಶಬ್ದಗಳನ್ನು ಹುಟ್ಟಿಸಿಕೊಂಡು, ಜನರು ಈಗಿನ ವ್ಯವಹಾರಿಕ ಭಾಷೆಗೆ ಸದೃಶವಾದ ಅಂದಿನ ಜನಾಂಗಿಕ ಭಾಷೆಯನ್ನು ಹುಟ್ಟಿಸಿಕೊಂಡಿರಬಹುದೆಂಬುದು ಸ್ವಾಭಾವಿಕವಾಗಿ ನಮಗೆ ತೋರದಿರದು. ಇದರ ಶಬ್ದಗಳ ಸಂಖ್ಯೆಯು ಬೆರಳೆಣಿಕೆ ಬಾಯಿಯೆಣಿಕೆಯ ಸೀಮೆಯನ್ನು ಮೀರದೆಂಬುದು ಸಹಜ.

ಇಷ್ಟೆಲ್ಲ ಆದ ಬಳಿಕ ಜನತೆಯ ಮಟ್ಟವು ತೀರ ಮೇಲಕ್ಕೇರಿ ಅನೇಕ ಧ್ಯೇಯಗಳು ಅವರ ಹೃದಯಕ್ಕೆ ಗೋಚರಿಸಲು ಅವರು ಅವುಗಳ ಬಗೆಗೆ ಪರಸ್ಪರ

ತಿಳಿಸುವ ಹಾಗೂ ಚರ್ಚಿಸುವ ಕಾರ್ಯವು ಆರಂಭವಾಗಲು, ಅದರಿಂದ ಅನೇಕಾನೇಕ ಅಲಂಕಾರಿಕ ಹಾಗೂ ಶಾಸ್ತ್ರೀಯ ಶಬ್ದಗಳು ಅನೇಕ ಪ್ರಕಾರದ ಪದಸಂಯೋಜನೆಯಿಂದ ಹುಟ್ಟಿ ಸಾಹಿತ್ಯಿಕ ಭಾಷಾ ವಿಸ್ತಾರವಾಯಿತೆಂಬುದೂ ನೈಸರ್ಗಿಕವಾದದ್ದೇ ಆಗಿದೆ. ಇದರ ಶಬ್ದ ವೈಭವವು ಸಾಮಾನ್ಯ ಮಾನವನ ಎಣಿಕೆ ಹಾಗೂ ನೆನಪುಗಳ ಸೀಮೆಯನ್ನು ದಾಟಿ. ಕೋಶ ನಿಘಂಟುಗಳ ಭಾಂಡಾರಗೃಹಗಳ ನಿರ್ಮಾಣದ ಆವಶ್ಯಕತೆಗೆ ಬಂದು ಮುಟ್ಟಿತೆಂಬುದು ಇಂದು ನಾವೆಲ್ಲರೂ ಕಾಣುತ್ತಿರುವ ಮಾತು.

ಆದರೆ ಜ್ಞಾನಿಗಳು ಅಂದರೆ ಧ್ಯಾನಿಗಳು ಪದದಿಂದ ಶಬ್ದಕ್ಕೆ, ಶಬ್ದದಿಂದ ಅಕ್ಷರಕ್ಕೆ, ಅಕ್ಷರದಿಂದ ಭಾವಕ್ಕೆ ಹೀಗೆ ಹಿಂದೆ ಹಿಂದೆ ಹೋಗಿ ವರ್ಣಶಕ್ತಿ (ಅಕ್ಷರಶಕ್ತಿ), ಶಬ್ದಶಕ್ತಿ, ಪದಶಕ್ತಿ, ವಾಕ್ಯಶಕ್ತಿ, ಮಂತ್ರಶಕ್ತಿಗಳನ್ನು ಕಂಡುಹಿಡಿದು ಪರಾ, ಪಶ್ಯಂತಿ, ಮಧ್ಯಮಾ, ವೈಖರೀ ವಾಣಿಗಳ ಛಂದಾಸಂಪದಿಂದ ತಮ್ಮ ಆಂತರಿಕ ಅನುಭವಗಳನ್ನು ದೈವೀವಾಣಿಯಾಗಿ ಪ್ರಕಟಿಸುವ ಮಂತ್ರಭಾಷೆಯನ್ನು ಸೃಷ್ಟಿಸಿದರು. ಇವರ ಪದ್ಧತಿಯಿಂದ ಪ್ರತಿಯೊಂದು ಶಬ್ದವೂ ಒಂದು ದೈವೀ ಕಾವ್ಯವಾಗಿ ತೋರುವದು. ಆ ಶಬ್ದದ ಅಂಗಾಂಗಗಳೊಳಗೆ ಪರಿಪರಿಯಿಂದ ಒಳಹೊಕ್ಕಂತೆಲ್ಲ ಅದರ ಪರಿಚಯ ಗೂಢರಹಸ್ಯವೂ, ರಚನೆಯೂ, ಕುಸುರಿಯೂ, ಕೆಚ್ಚೂ,' ಕಲ್ಪನೆಯೂ, ಕಾಣ್ಕೆಯೂ ಕಂಡುಬರುವದರಿಂದ ಬಹಳೇ ಆಶ್ಚರ್ಯವೂ ಆನಂದವೂ ಆಗುವದೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ದಿವಂಗತ ಅನುಭಾವೀ ವಿಶ್ವಕವಿ 'ಎ. ಈ.' ಯವರ "Candle of Vision" (ದರ್ಶನ ದೀಪ) ಎಂಬ ಗ್ರಂಥದಲ್ಲಿ "Language of the Gods" (ದೇವತೆಗಳ ಭಾಷೆ) ಎಂಬ ಅಧ್ಯಾಯವನ್ನೋದಿದರೆ ಸೋದಾಹರಣವಾಗಿ ನಮಗೀ ಮಾತಿನ ಮನವರಿಕೆಯಾಗುವದು.

ಇವೆಲ್ಲವುಗಳ ಮಧ್ಯಮ ಪದ್ಧತಿಯೊಂದುಂಟು. ಸಿಲೋನಿನ ಭಾಷಾಶಾಸ್ತ್ರಜ್ಞರಾದ 'ಫಾದರ್ ಕ್ಲೋಸೆಟ್' ರವರು ತಮ್ಮ "Dravidian origin of the human speech" (ದ್ರಾವಿಡ ಭಾಷೆಯೇ ಮಾನವ ಭಾಷೆಯ ಮೂಲ) ಎಂಬ ಗ್ರಂಥದಲ್ಲಿ ಇದನ್ನು ನಿಕ್ಷೇಪಿಸಿ ಇಟ್ಟಿದ್ದಾರೆ. ಅವರು ದ್ರಾವಿಡ ಭಾಷೆಗಳಿಗೆಲ್ಲಾ "ಆ, ಈ, ಊ, ಏ, ಓ, ಐ, ಉರ್, ಆಳ್, ಪಿಳ್, ಸು, ಸಿ, ಸಾ" ಇವಿಷ್ಟೇ ಮೂಲ ಬೀಜಾಕ್ಷರ (ಬೀಜಶಬ್ದ) ಗಳೆಂದು ನಿರ್ಧರಿಸಿ, ಇವಿಷ್ಟರಿಂದಲೇ ಆ ಭಾಷೆಯೊಳಗಿನ ಸರ್ವಶಬ್ದಗಳು ಹುಟ್ಟುತ್ತವೆಂದು ತೋರಿಸಿದ್ದಲ್ಲದೆ ಗ್ರೀಕ್, ಲ್ಯಾಟಿನ್, ಸಂಸ್ಕೃತ, ಸಿಂಹಳಿ, ಸುಮೇರಿಯನ್ ಮೊದಲಾದ ಅನೇಕ ಪುರಾತನ ನೂತನ ಭಾಷೆಗಳ ಶಬ್ದಗಳೆಲ್ಲ ಇವೇ ಬೀಜಾಕ್ಷರಗಳಿಂದ ಹುಟ್ಟುವವೆಂಬುದನ್ನು ತೋರಿಸಿಕೊಟ್ಟು, ಬೇರೆ ಬೇರೆ ಭಾಷೆಗಳ ಈ ಶಬ್ದಗಳೆಲ್ಲ ದ್ರಾವಿಡ ಭಾಷೆಯ ಆಯಾಯ ಬೀಜಾಕ್ಷರ ಜನಿತ ಶಬ್ದಗಳಿಗೆ ಸರಿಯಾಗಿ ಸಮಾನಾರ್ಥವನ್ನು ಕೊಡುವವೆಂದು ಸಿದ್ಧಮಾಡಿದ್ದಾರೆ.

ಈಗ ಅಕ್ಷರಗಳಿಗೆ ಒಂದೊಂದು ಅರ್ಥವಿದೆಯೆಂದು ಕಲ್ಪಿಸಿಕೊಂಡು ನಾವು ಸ್ವರ ಹಾಗೂ ವ್ಯಂಜನಗಳ ಸಂಯೋಗದಿಂದ ಬೀಜಾಕ್ಷರಗಳನ್ನು ಕಂಡುಹಿಡಿಯಲ್ಲಿಕ್ಕೆ ಒಂದು ಕಾಲ್ಪನಿಕ ಪ್ರಯತ್ನವನ್ನು ಪ್ರಯೋಗಕ್ಕಾಗಿ ನಾವಿಲ್ಲಿ ಮಾಡುವಾ. ದ್ರಾವಿಡದಲ್ಲಿ ಸ್ವರಗಳೆಂದರೆ ಋ, ೠ, ಌ ೡ ಗಳಿಂದ ರಹಿತವಾದ ಹಾಗೂ ವಿಸರ್ಗದಿಂದ ರಹಿತವಾದ ಹಾಗೂ ಅನುಸ್ವಾರ ರಹಿತವಾದ (ಏಕೆಂದರೆ ಪ್ರತಿ ವರ್ಗಾಕ್ಷರದ ಕೊನೆಯದೇ ಅದಾಗಿರುವದರಿಂದ) ಅ ಆ, ಇ ಈ, ಉ ಊ, ಎ ಏ ಐ, ಒ ಓ ಔ ಎಂಬ ೧೨ ಅಕ್ಷರಗಳು ಮಾತ್ರವೇ ಉಳಿಯುತ್ತವಷ್ಟೇ. ಇವುಗಳಲ್ಲಿ ಐ, ಔ ಎಂಬವುಗಳು (=ಅಇ, ಅಉ=ಅಯ್ ಅವ್) ಸಂಯುಕ್ತ ಸ್ವರಗಳಾದ್ದರಿಂದ ಅವು ಸ್ವತಂತ್ರ ಅಕ್ಷರ ಗಳಲ್ಲ. ಆ ಮೇಲೆ ದೀರ್ಘಾಕ್ಷರಗಳೆಲ್ಲಾ ಬಿಟ್ಟರೆ ಅ. ಇ, ಉ, ಎ, ಒ ಇವೈದೇ ಸ್ವರಗಳೇ ಉಳಿಯುತ್ತವೆ. ಇವುಗಳಲ್ಲಿಯೂ ಎ ಮತ್ತು ಒ ಎಂಬವುಗಳೂ ಸಹ ಇ ಉ ಗಳ ಗುಣಸಂಧಿ ರೂಪಗಳೆಂದು (ಗುಣರೂಪಗಳೆಂದು) ಸಿದ್ಧವಾಗಿರುವದರಿಂದ ಅ, ಇ, ಉ, ಎಂಬ ಮೂರೇ ಮೂಲ ಸ್ವರಗಳು ಉಳಿದಂತಾಗುತ್ತವೆ.

ಆ ಬಳಿಕ ವರ್ಗೀಯಾಕ್ಷರಗಳಲ್ಲಿ ಕ ಎಂಬುದರ ಮಹಾಪ್ರಾಣವೇ ಖ, ಕ ಎಂಬುದರ ಮೃದು ಸ್ವರೂಪವೇ ಗ; ಘ ಎಂಬುದು ಗ ಎಂಬುದರದೇ ಮಹಾಪ್ರಾಣ; ಕ ಎಂಬುದನ್ನೇ ಬಾಯಿ ಮುಚ್ಚಿ (ಮೂಗಿನಿಂದ) ಉಚ್ಚರಿಸಿದರೆ ಙ ಎಂಬ ಅನುನಾಸಿ ಕವು ಹೊರಡುತ್ತದೆ. ಆದ್ದರಿಂದ ಇಡಿ ಕ ವರ್ಗವೆಲ್ಲಾ ಕ ಎಂಬ ಒಂದೇ ಅಕ್ಷರದ್ದೇ ರೂಪಾಂತರ. ಇದರಂತೆ ಚವರ್ಗ, ಟವರ್ಗ. ತವರ್ಗ, ಪವರ್ಗಗಳಿಗೆಲ್ಲಾ ಕೂಡಿ ಕ, ಚ, ಟ, ತ, ಪ ಎಂಬ ಐದಕ್ಷರಗಳೇ ಮೂಲ ವ್ಯಂಜಕಗಳಾಗಿ ಉಳಿದಂತಾಯಿತು. (ನಿಜವಾಗಿ ತಮಿಳಿನಲ್ಲಿರುವವುಗಳು ಇಷ್ಟೆ.)

ಆಮೇಲೆ ಯ, ರ, ಲ, ವ ಮೊದಲಾದ ಊಷ್ಮಾಕ್ಷರಗಳು ನಿಜವಾಗಿಯೂ ಪೂರ್ಣ ವ್ಯಂಜನಗಳಾಗಿರದೆ ಅವು ಸ್ವರಗಳ ಪ್ರತಿನಿಧಿಗಳಾದ ಅರ್ಧಸ್ವರಗಳೇ ಆಗಿವೆ. ಅದು ಹೇಗೆಂದರೆ ಅ = ಹ, ಇ = ಹ, ಉ = ವ, ಋ = ರ, ಇ = ಲ, ಲ = ಳ, ವಿಸರ್ಗ ಃ = ಶ, ಷ, ಸ, (ಉದಾ : ಯಃ + ಚ = ಯಶ್ಚ, ಧನುಃ + ಟಂಕಾರ = ಧನುಷ್ಟಂಕಾರ, ನಮಃ + ಕಾರ = ನಮಸ್ಕಾರ) ಆದ್ದರಿಂದ ಇವೆಲ್ಲಾ ಮೂಲಸ್ವರಗಳ ಪ್ರತಿನಿಧಿಗಳೇ ಆದ್ದರಿಂದ ಇವುಗಳಿಗೆ ಸ್ವತಂತ್ರ ಅಸ್ತಿತ್ವವೇ ಇಲ್ಲ. (ನಿಜವಾಗಿ ನೋಡಿದರೆ "ಕ್ಲೋಸೆಟ್" ಅವರು ವರ್ಗೀಯಗಳನ್ನು ಬಿಟ್ಟು ಈ ಊಷ್ಮಗಳನ್ನೇ ರ್, ಲ್, ಸ್ ಸ್ವೀಕರಿಸಿದ್ದಾರೆ.)

ಹೀಗೆಂದ ಬಳಿಕ ಅ, ಇ, ಉ ಎಂಬ ಮೂರು ಸ್ವರಗಳು ಹಾಗೂ ಕ್, ಚ್, ಟ್, ತ್, ಪ್ ಎಂಬ ಐದು ವ್ಯಂಜನಗಳು ಸೇರಿ ಎಂಟೇ ಮೂಲಾಕ್ಷರಗಳಾದಂತಾ ಯಿತು. ಇವುಗಳಲ್ಲಿಯೂ, ಚ ಎಂಬುದು ಕ ಎಂಬುದರ ಪ್ರತಿನಿಧಿಯೂ

(Character = ಕ್ಯಾರೆಕ್ಟರ್, School = ಸ್ಕೂಲ್; ಕನ್ನಡದ 'ಕಿವಿ' = ತೆಲುಗಿನ ಚಿವಿ, ಕನ್ನಡದ 'ಕೈ' = ತೆಲುಗಿನ 'ಚೇತ್, ಸಂಸ್ಕೃತದಲ್ಲಿ ಕೇತುಃ = ಕೇತಃ, ಚೇತಃ (ವೇದದಲ್ಲಿ) ಇತ್ಯಾದಿ ಶಬ್ದಗಳನ್ನೆಲ್ಲ ಕ, ಚ ಗಳು ಒಂದರ ಪ್ರತಿಯಾಗಿ ಒಂದು ಬಂದಿವೆ.) ಟ ಎಂಬುದು ತ ಎಂಬುದರ ಪ್ರತಿನಿಧಿಯೂ (ಇದಂತೂ ಸುಸ್ಪಷ್ಟ) ಆಗಿವೆಯೆಂದು ಇಟ್ಟುಕೊಂಡರೆ ಐದು ವ್ಯಂಜನಗಳಿಗೆ ಬದಲಾಗಿ ಕ್, ತ್, ಪ್ ಎಂಬ ಮೂರೇ ಮೂಲವ್ಯಂಜನಗಳು ಉಳಿದುಬಿಡುತ್ತವೆ. ಹೀಗೆ ಮೂರು ಸ್ವರ ಹಾಗೂ ಮೂರು ವ್ಯಂಜನ ಸೇರಿ ಆರೇ ಮೂಲಾಕ್ಷರಗಳಾದಂತಾಗುತ್ತವೆ.

ಹೀಗಾದರೆ ಈ ಮೂರು ಸ್ವರ ಹಾಗೂ ಮೂರು ವ್ಯಂಜನಗಳನ್ನು ಒಂದೊಂದ ರಲ್ಲಿ ಒಂದೊಂದಾಗಿ ಸೇರಿಸಿ, ಅಕ್, ಇಕ್, ಉಕ್; ಅತ್, ಇತ್, ಉತ್; ಅಪ್, ಇಪ್, ಉಪ್; ಎಂಬ ಒಂಬತ್ತು ಸಂಯುಕ್ತ ಬೀಜಾಕ್ಷರಗಳನ್ನೂ, ಮೂರು ಮೂಲ ಸ್ವಂತ ಬೀಜಾಕ್ಷರಗಳನ್ನೂ ಒಟ್ಟಾರೆ ಎಲ್ಲ ಕೂಡಿ ಹನ್ನೆರಡು ಮುಖ್ಯ ಬೀಜಾಕ್ಷರಗಳನ್ನು ಹುಟ್ಟಿಸಿದಂತಾಗುತ್ತದೆ. ಅನುನಾಸಿಕವನ್ನೂ ಒಂದು ಕೂಡಿಸಿಕೊಂಡರೆ ಮ್, ನ್ ಎರಡೇ ಹೆಚ್ಚು ಮಾಡಿಕೊಂಡಂತಾಗುತ್ತದೆ. ಏಕೆಂದರೆ ಙ, ಞ ಎಂಬವುಗಳು ವ್ಯವಹಾರದಲ್ಲಿ ಬರುವದೇ ಇಲ್ಲ. ಹಾಗೂ ಣ್ ಎಂಬುದು ನ್ ಎಂಬುವರ ಪ್ರತಿ ನಿಧಿಯೇ ಆಗಿದೆ. ಹಾಗಾದರೆ ನ್, ಮ್ ಎಂಬೆರಡಕ್ಕೆ ಮೂರು ಮೂಲಸ್ವರ ಸೇರಿ. ಅನ್, ಇನ್, ಉನ್, ಅಮ್, ಇಮ್, ಉಮ್ ಎಂಬ ಆರು ಬೀಜಾಕ್ಷರಗಳು ಹೆಚ್ಚಿಗೆ ಬಂದು ಸೇರಿದಂತಾಯಿತು. ಮೊದಲಿನ ೧೨ ಹಾಗೂ ಇವು ೬, ಎಲ್ಲಾ ಸೇರಿ ೧೮ ಬೀಜಾಕ್ಷರಗಳಾದಂತಾಯಿತು. ಆದರೆ ಇವೆಲ್ಲವುಗಳಿಗೆ ಅರ್ಥವು ಇದ್ದೇ ಇರುವದೆಂತಲ್ಲ. ಇವುಗಳಲ್ಲಿ ಅರ್ಧದಷ್ಟು ಬೀಜಾಕ್ಷರಗಳಿಗೋ ಮುಕ್ಕಾಲಷ್ಟು ಬೀಜಾಕ್ಷರಗಳಿಗೋ ಮಾತ್ರ ಅರ್ಥ ನಿಷ್ಪತ್ತಿಯು ಹೊರಡುವದು ಸಾಧ್ಯವಿರುತ್ತದೆ. ಹೀಗೆಂದ ಬಳಿಕ ಒಟ್ಟಾರೆ ಮೇಲ್ಕಂಡ ೧೮ರಲ್ಲಿ ಅರ್ಥವತ್ತಾದ ಬೀಜಾಕ್ಷರಗಳು ಹತ್ತೋ ಎಂಟೋ ಮಾತ್ರ ನಿಲ್ಲುತ್ತವೆ.

ಇದೀಗ 'ಫಾದರ್ ಕ್ಲೋಸೆಟ್' ಅವರ ಬೀಜಶಬ್ದಗಳ ಅಲ್ಪಸಂಖ್ಯಾ ಪರಿ ಮಿತಿಗೆ ಶಕ್ಯತೆಯನ್ನು ತೋರಿಸಿಕೊಟ್ಟಂತಾಯಿತು. ಆದರೆ ಅದು ಕಾಲ್ಪನಿಕ ಅಕ್ಷರ ಗಣನೆಯು ಮೇಲಿಂದ ಸಿದ್ಧಗೊಳಿಸಿದ ಮಾತಾಗಿದೆ. ಈ ಮಾತನ್ನು ಅರ್ಥ ಗಣನೆ ಯಿಂದ ಸಿದ್ಧಮಾಡಿಕೊಟ್ಟರೆ ಆಗ ವಾಚಕರ ಮನಸ್ಸಿಗೆ ಸಯುಕ್ತಿಕವೆಂದು ಅನಿಸು ವುದು. ಅದನ್ನು ಈ ರೀತಿಯಿಂದ ಸಿದ್ಧಗೊಳಿಸಲಿಕ್ಕೆ ಶಕ್ಯವಿದೆ.

ಉದಾಹರಣಾರ್ಥವಾಗಿ, ಆಗು, ಆಡು, ಆರು ಎಂಬ ಧಾತುಗಳಲ್ಲಿ ಗು, ಡು, ರು ಎಂಬವುಗಳು ಒಂದು ಬಗೆಯ ಪ್ರತ್ಯಯುಗಳೆಂದು ಸಿದ್ಧವಾದರೆ ಇವುಗಳ ಹಿಂದಿನ 'ಆ' ಎಂಬುದೇ ಮೂಲಶಬ್ದವಾಗಿ ಬಿಡುವದೆಂಬುದರಲ್ಲಿ ಏನೂ ಸಂಶಯವಿಲ್ಲ. ಇದೀಗ ಒಟ್ಟು ಕನ್ನಡ ಧಾತುಗಳನ್ನೇ ಪರಿಶೀಲಿಸಿದರೆ ಆಗು, ಹೋಗು, ಸಾಗು,

ರೇಗು, ಕೂಗು; ಆಡು, ಮಾಡು, ನೀಡು, ಹಾಡು, ಕೂಡು; ಆರು, ಸೇರು, ಜಾರು, ತೋರು, ಸಾರು; ಮೊದಲಾದ ಕ್ರಿಯಾಧಾತುಗಳಲ್ಲೆಲ್ಲ ಕೊನೆಯ ಗು, ಡು, ರು ಎಂಬವುಗಳೆಲ್ಲಾ ಒಂದು ಬಗೆಯ ಪ್ರತ್ಯಯಗಳೇ ಆಗಿವೆಯೆಂದು ಸಿದ್ಧವಾಗುವ ದಿಲ್ಲವೆ ? ಇದರಂತೆ ಈಸು, ಊರು, ಏಳು, ಓಡು ಮೊದಲಾದವುಗಳ ಕೊನೆಯ ಪ್ರತ್ಯಯಾಕ್ಷರಗಳನ್ನೆಲ್ಲ (ಧಾತುಪ್ರತ್ಯಯ) ತೆಗೆದು ಹಾಕಿದರೆ ಈ, ಊ, ಏ, ಓ ಮೊದಲಾದವುಗಳೆಲ್ಲಾ ಮೂಲ ಪ್ರಕೃತಿ ಶಬ್ದಗಳೇ ಆದಂತಾಗುವವು. ಆದ್ದರಿಂದ ಅರ್ಥವೆಂಬುದೆಲ್ಲಾ ಈ ಮೂಲಗಳಲ್ಲಿಯೇ ಅಡಗಿಕೊಂಡಿದ್ದು ಪ್ರತ್ಯಯಗಳು ಅದಕ್ಕೆ ಸಹಾಯಕ ಉಪಾಂಗವಾಗಿ ಕಾರ್ಯಮಾಡುತ್ತಿರಬಹುದೆಂದು ಸಿದ್ಧವಾಗುವದಿಲ್ಲವೆ ? ಈ ಪ್ರತ್ಯಯಗಳೂ ಕೂಡ ಯಾವವೋ ಅರ್ಥವತ್ತಾದ ಬೇರೆ ಶಬ್ದಗಳ ಸಂಕ್ಷಿಪ್ತ ರೂಪಗಳೇ ಆಗಿವೆಯೆಂಬುದನ್ನಂತೂ ಇಂದಿನ ಭಾಷಾಶಾಸ್ತ್ರಜ್ಞರೆಲ್ಲರೂ ಒಪ್ಪಿಕೊಂಡಿರುವ ಮಾತಾಗಿದೆ. ಉದಾಹರಣಾರ್ಥವಾಗಿ, 'ಮಾಡಿದ್ದೇನೆ' ಇದರಲ್ಲಿ ಮಾಡಿ + ಇದ್ದೇನೆ ಎಂಬ ಎರಡೂ ಅಂಗಗಳಿಗೆ ಅರ್ಥವಿದೆಯೆಂಬುದು ಸ್ಪಷ್ಟ. ಮಾಡಂತ್ತೇನೆ, ಮಾಡುತ್ತೀ, ಮಾಡುತ್ತಾನೆ ಇವುಗಳಲ್ಲಿ ಮಾಡುತ್ತ + ಇಹೆನು, ಮಾಡುತ್ತ + ಇರ್ಪಿ (ಇಹಿ), ಮಾಡುತ್ತ + ಇಹನು ಎಂಬ ಅರ್ಥಪೂರ್ಣ ಉಭಯಾಂಗಗಳಿವೆ. ಆದ್ದರಿಂದ ಸೂಕ್ಷ್ಮರೀತಿಯಿಂದ ನೋಡಿದರೆ ಶಬ್ದಗಳ ಸರ್ವ ಅಂಗೋಪಾಂಗಗಳು ಅರ್ಥದಿಂದ ಕೂಡಿದವುಗಳಾಗಿರುತ್ತವೆ ಎಂಬುದು ಸ್ಪಷ್ಟವಾಗಿದೆ.

ಪ್ರಥಮಾಂಗವು (=ಮುಖ್ಯಾಂಗವು) ಸಂಗೀತದೊಳಗಿನ ಮುಖ್ಯಸ್ವರದಂತಿದ್ದು, ಉತ್ತರಾಂಗವು (=ಉಪಾಂಗವು) ವಿವಿಧ ತಾನಗಳಂತೆ (=ಆಲಾಪಗಳಂತೆ) ಮೂಲಾರ್ಥಕ್ಕೆ ವಿವಿಧ ಛಾಯೆ (=ವಿವಿಧ ಬಣ್ಣ) ಬರುವಂತೆ ಮಾಡುವದೆಂದು ತೋರುತ್ತದೆ. ಉದಾಹರಣಾರ್ಥವಾಗಿ, ಊಳು – ಊರು – ಊಡು (=ರಂಟೇ ಹೊಡೆ, ಸಸಿಯನ್ನು ನೆಡು, ಊಟ ಮಾಡು) ಈ ಮೂರರಲ್ಲಿಯೂ ಒಂದು ಕ್ರಮವು ಕಂಡುಬರುತ್ತದೆ. ಅದು ಹೇಗೆಂದರೆ ಉತ್ತಿದರೇನೇ ಬಿತ್ತಲಿಕ್ಕಾಗುತ್ತದೆ, ಬಿತ್ತಿದರೇನೇ ಹೊಟ್ಟೆತುಂಬಿ ಕೊಳ್ಳಲಿಕ್ಕಾಗುತ್ತದೆ. ಆದ್ದರಿಂದ 'ಊ' ಎಂಬುದರ ಮುಖ್ಯಾರ್ಥವು "ಊರು= ನೆಲೆಗೊಳ್ಳು = ಬಾಳು" ಎಂದೇ ಆಗುವಂತೆ ತೋರುತ್ತದೆ. ಬಾಳುವದಕ್ಕೆ ಊಳುವುದು ಹಾಗೂ ಉಣ್ಣುವುದು. ಇದಲ್ಲದೆ ದೀರ್ಘಸ್ವರದ ಅರ್ಥವನ್ನೇ ಹ್ರಸ್ವಸ್ವರವೂ (ಸ್ವಲ್ಪ ಹೆಚ್ಚು ಕಡಿಮೆಯಾಗಿ ಮೂಲಾರ್ಥಕ್ಕೆ ಪೋಷಕವಾಗುವಂತೆ) ಕೊಡುವದೆಂದು ತೋರುತ್ತದೆ. ಏಕೆಂದರೆ ಹ್ರಸ್ವದ ವೃದ್ಧಿಯೇ ದೀರ್ಘವು. ಉದಾಹರಣಾರ್ಥವಾಗಿ : ಉಳಿ – ಉರಿ (ಉರುವಣಿಸು), ಉಡು (ಮತ್ತು ಉಡಿ), [=ಬಾಳಿ ಬದುಕು, ವಿರೋಧಿ ಪರಿಸ್ಥಿತಿಯ ಮೇಲೆ ಉರಿದೇಳು, ಆ ಮೇಲೆ ಸುಖವಾಗಿ ಉಡು–ತೊಡು, ಇದಕ್ಕೂ ಮೀರಿಯೂ ಪರಿಸ್ಥಿತಿಯು ಮಿತಿಮೀರಿ ಪ್ರತಿಭಟಿಸಿದರೆ ಅದನ್ನು ಉಡಿ–ತಡಿ–ತುಳಿ–ನಿವಾರಿಸಿಕೋ]. ಇದೆಲ್ಲದರಲ್ಲಿ 'ಬಾಳಿ ಬದುಕು' ಎಂಬ ಭಾವವೇ ಮುಖ್ಯವಾಗಿದೆ. ಆದ್ದರಿಂದ 'ಉ' ಎಂಬುದಕ್ಕೆ 'ಉಳಿ – ಬಾಳು' ಎಂಬುದೇ

ಮುಖ್ಯಾರ್ಥವೆಂದು ತೋರುತ್ತದೆ. ಹೀಗೆಂದ ಬಳಿಕ 'ಉ' 'ಊ' ಇವೆರಡರ ಅರ್ಥವೂ ಒಂದೇ ಹೊಂದಿಕೆಗೆ ಬರುವದೆಂದು ಊಹಿಸಬಹುದು.

ಇದರಂತೆ ಅ, ಆಗು, ಅಕ್ಕು ಇವುಗಳಲ್ಲಿ ಅ, ಆ ಗಳ ಅರ್ಥವೂ ಒಂದೇ ಆಗುತ್ತದೆ. ಇದರಂತೆ ಇದು, ಈ ಎಂ. ವುಗಳಲ್ಲಿ ಇ, ಈ ಗಳ ಅರ್ಥಸಾಮ್ಯವು ಒಂದೇ ಪ್ರಕಾರದ್ದಾಗಿದೆಯೆಂದು ಬೇರೆ ಹೇಳಲಿಕ್ಕೇ ಬೇಡ. ಹೀಗೆಯೇ ಏಳು (=ಬೆಳೆ), ಎಳೆ (=ಜಗ್ಗು, ಪ್ರಯತ್ನಿಸು) ಎಂಬುದರಲ್ಲಿಯೂ ಸಾಹಚರ್ಯಾರ್ಥಾತ್ಮಕ ಅರ್ಥವು ಕಂಡು ಬರುತ್ತದೆ. ಇದರಂತೆ ಓಡು (=ಶೀಘ್ರಗಾಮಿಯಾಗು), ಒಡೆ (=ಬಿಚ್ಚಿನೋಡು) ಅರ್ಥಾತ್ ಅವಸರ ಮಾಡು, ರಹಸ್ಯವನ್ನರಿ (ಅಥವಾ ಭಗ್ನಗೊಳಿಸಿ ಕಂಟಕವನ್ನು ದೂರಮಾಡು) ಎಂದು ಮುಂತಾಗಿ ಅರ್ಥಮಾಡಿದರೂ ಎರಡರಲ್ಲಿಯೂ ಪರಸ್ಪರ ಅರ್ಥಸಾಹಚರ್ಯವು ಕಾಣುತ್ತದೆ.

ಇನ್ನೊಂದು ಬಗೆಯಿಂದ ನೋಡಿದರೂ ಈ ಮಾತಿನ ಮನವರಿಕೆಯಾಗುವಂತಿದೆ. ಅದು ಹೇಗೆಂದರೆ : ಅಡು (=ಮೊದಲು ಅಡಿಗೆ ಮಾಡಿಕೋ), ಆಡಂ, (=ಆಮೇಲೆ ಸುಖ ಸಂಕಥಾ ವಿನೋದದಿಂದ ಹೊತ್ತುಗಳೆ), ಇಡು (=ಗಳಿಸಿ ಇಡು), ಈಡು (=ಕೊನೆಯವರೆಗೆ ಸಾಲುವದು), ಉಳಿ (=ಎತ್ತುಗಡೆ ಮಾಡು), ಏಳಂ, ಏರು (=ಅಂದರೆ ಹೆಚ್ಚಳವನ್ನು ಪಡೆಯಬಲ್ಲೆ), ಒಲಿ (=ಪ್ರೀತಿಸು), ಓಗುಡು (=ಪ್ರತಿಧ್ವನಿ ಕೊಡು, ಸಮುಸ್ಫುರಣಗೊಡು, ಸಹಕರಿಸು) ಇವೆಲ್ಲ ಉದಾಹರಣೆಗಳಲ್ಲಿಯೂ ಹ್ರಸ್ವ ದೀರ್ಘಗಳಲ್ಲಿ ಅರ್ಥಸಾಮ್ಯವು ಕಂಡುಬರುತ್ತಿದೆಯೆಂಬುದು ಸುಸ್ಪಷ್ಟ.

ಇನ್ನೊಂದು ಮಾತೆಂದರೆ ಅಲ್, ಇಲ್, ಉಳ್ ಎಂಬುವುಗಳು ದ್ರಾವಿಡದಲ್ಲಿ ಬಹಳ ಮಹತ್ವದ ಬೀಜಾಕ್ಷರಗಳೆಂಬುದು ನಿಸ್ಸಂಧಿಗ್ಧವಾದ ಮಾತು. ಏಕೆಂದರೆ ಅನೇಕ ನಾಮಪದಗಳ ಕೊನೆಗೆ ಇವು ಉಪಾಂಗಗಳಾಗಿ ಬರುತ್ತವೆ. ಉದಾಹರಣಾರ್ಥವಾಗಿ, ಕಡಲ್, ಒಡಲ್, ಪಗಲ್, ಬಿಸಿಲ್, ಹೊಸತಿಲ್, ಮಡಿಲ್, ಪುರುಳ್, ಕುರಂಳ್, ಮುಂಗುಳ್ ಇತ್ಯಾದಿ ಶಬ್ದಗಳ ಕೊನೆಯ ಉಪಾಂಗ (ಪ್ರತ್ಯಯ)ಗಳಾಗಿರುವ ಅಲ್, ಇಲ್, ಉಳ್‌ಗಳನ್ನು ಅಲ್ಲಿ, ಇಲ್ಲಿ, ಒಳಗೆ (ಉಳ್ = ತಮಿಳಿನಲ್ಲಿ ಒಳಗೆ ಎಂಬ ಅರ್ಥವಿದೆ) ಎಂಬ ಶಬ್ದಗಳೊಂದಿಗೆ ಹೋಲಿಸಿ ಅವುಗಳ ಅರ್ಥ ನಿಶ್ಚಯ ಮಾಡಬೇಕಾದೀತೇ ಹೊರತು ಅಲ್ಲ, ಇಲ್ಲ, ಉಂಟು ಎಂಬ ಅವ್ಯಯಕ್ರಿಯಾಪದಗಳ ಮೂಲದಲ್ಲಿ ಅಕ್ಕು (=ಅಪ್ಪುದು. ಅಹುದಂ) ಇರು, ಉಳಿ ಎಂಬ ಧಾತುಗಳಿವೆ. ಮೊದಲಿನವೆರಡು ಅವ್ಯಯಕ್ರಿಯಾಪದಗಳು ಇವುಗಳ ಸಹಚಾರಿ ಧಾತುಗಳ ನಿಷೇಧ ರೂಪಗಳಾಗಿಯೂ, ಕೊನೆಯದು ತನ್ನ ಸಹಚಾರಿ ಧಾತುವಿನ ಸಂಭಾವಿನೀ ರೂಪವೂ ಆಗಿದೆ. ಹಾಗಾದರೆ ಅಲ್, ಇಲ್, ಉಳ್ ಇವುಗಳ ನಿಜವಾದ ಅರ್ಥವು ಏನಿದ್ದೀತು? ಅಲ್ಲಿ (=ಆಚೆಗೆ, ದೂರ, ಕಾಣಲಾರದ್ದು, ಇದ್ದೂ ಇಲ್ಲದಂತಿದ್ದುದು, ಅರ್ಥಾತ್ ಇಲ್ಲದ್ದು) ಇಲ್ಲಿ (=ಸಮೀಪ, ಕಾಣುವಂತಹದು ಆದ್ದರಿಂದ ಇದ್ದದ್ದು), ಒಳಗೆ

(=ನಮ್ಮ ಜೀವ ನಮ್ಮ ಒಳಗೆ ನಮಗೆ ತೀರ ಸಮೀಪವಾಗಿ ಇದ್ದಂತೆ, ಅತಿ ನಿಶ್ಚಿತಾರ್ಥ, ಹೊರಗೆ ಇದ್ದದ್ದು ಕಳೆದು ಹೋಗಬಹುದು, ಕದಾಚಿತ್ ಒಮ್ಮೊಮ್ಮೆ ಕಾಣಿಸದೆ ಇರಬಹುದು. ಆದರೆ ಒಳಗೆ ಇದ್ದದ್ದು ಸುರಕ್ಷಿತ, ಸುನಿಶ್ಚಿತ, ಸ್ವಯಂ ಪ್ರತೀತ, ಅರ್ಥಾತ್ 'ಉಂಟು' ಎಂಬ ಅವ್ಯಯಕ್ರಿಯಾಪದದ ನಿಶ್ಚಿತಾರ್ಥವು ಸಹ ಇದರಲ್ಲಿ ಉಂಟು. ಉಂಟು = ಉಳಿ = ಉಳ್) ಉದಾಹರಣಾರ್ಥವಾಗಿ, ಕಡೆ+ಅಲ್ (=ಇಲ್ಲದ್ದು) ಕಡೆ ಇಲ್ಲದ್ದು; ಒಡೆ + ಅಲ್ (=ಇಲ್ಲದ್ದು) ಒಡೆಯಲಾರದು (ನೂರು ವರುಷಗಟ್ಟಲೆ ತಾಳುವಂತಹದು); ಬಿಸಿ + ಇಲ್ (ಉಳ್ಳದ್ದು) ಕಾವು ಉಳ್ಳದ್ದು; ಮಡಿಲ' = ಮಡಿಕೆಯುಳ್ಳದ್ದು = ಉಡಿ; ಪುರಿ+ಉಳ್=ಕೆಚ್ಚು ಹೆಚ್ಚಾಗಿ ಉಳ್ಳದ್ದು; ಕುರುಳ್ = ಕುರು + ಉಳ್ = ಕುಡು (ಕೊಂಕು) ಹೆಚ್ಚಾಗಿ ಉಳ್ಳದ್ದು; ಇತ್ಯಾದಿ.

ಈ ರೀತಿಯಿಂದ ನೋಡಿದರೆ 'ಕ್ಲೋಸೆಟ್' ಅವರ ಆಳ್, ಉರ್ (= ಉಳ್) ಆಯ್, ಪಿಳ್, ಶಿರ್ (= ಶಿ, ಶು, ಸಾ) ಮೊದಲಾದ ಬೀಜಾಕ್ಷರಗಳೂ ಆ, ಈ, ಊ, ಏ, ಓ ಗಳಂತೆ ಅರ್ಥವತ್ತಾಗಿದ್ದಿರಬೇಕೆಂಬುದು ಸ್ವಾಭಾವಿಕವಲ್ಲವೆ ?

೨

ಇನ್ನು ಶ್ರೀ ಬೇಂದ್ರೆಯವರ ಶಬ್ದಶಾಸ್ತ್ರದ ಕಡೆಗೆ ಹೊರಳುವಾ, ಇವರು ಆರ್ಯಜನಾಂಗದಲ್ಲಿ ಋಷಿ, ಋತ (=ಸತ್ಯಂ-ಋತಂ-ಬೃಹತ್) ಎಂಬ ಶಬ್ದಗಳಿಗೆ ಅತಿ ಮಹತ್ವವಿದ್ದದ್ದನ್ನರಿತು ಇವೆರಡು ಶಬ್ದಗಳ ಮೂಲಾಕ್ಷರವಾದ 'ಋ' ಎಂಬ ಮೂಲ ಬೀಜಾಕ್ಷರಕ್ಕೆ ಮುಖ್ಯ ಸ್ಥಾನವನ್ನು ಕೊಟ್ಟಿದ್ದಾರೆ. ಋಭು, ಋಷಭ, ಋಜು, ಋತ್ವಿಜ, ಋತು ಮೊದಲಾದ ಶಬ್ದಗಳೂ ಕೂಡ ಈ ಜನಾಂಗದ ಮುಖ್ಯ ಶಬ್ದಗಳೇ ಸರಿ. ಆದ್ದರಿಂದ ಇವರಿಗೆ 'ಋ'ಗಳು ಅಥವಾ 'ಋ' ಜನಾಂಗದವರು ಎಂದು ಅಂದರೂ ಅನ್ನಬಹುದು. 'ಋ' ಎಂಬುದರ ಗುಣರೂಪವು (ಗುಣಸಂಧಿಯ ರೂಪವು) 'ಅರ್' ಎಂದೂ ವೃದ್ಧಿರೂಪವು 'ಆರ್' ಎಂದೂ ಆಗುವದಷ್ಟೇ ? 'ಅರ್' ಎಂಬುದು ಉಚ್ಚಾರ ಭೇದದಿಂದ 'ಇರ್' ಎಂಬ ರೂಪವನ್ನು ಹೊಂದುವದೂ ತತ್ಸಮ, ತದ್ಭವಗಳಲ್ಲಿ ಅನೇಕ ಸಲ ಕಂಡುಬರುತ್ತದೆ. ಈ 'ಅರ್' 'ಆರ್' ಎಂಬುದರಿಂದಲೇ 'ಆರ್ಯ' ಎಂಬ ಶಬ್ದವೂ 'ಇರ್' ಎಂಬುದರಿಂದಲೇ 'ಇರಿಯಾನಾ' ಅಥವಾ 'ಇರಾಣ' ಎಂಬ ಶಬ್ದವೂ ಸಿದ್ಧಿಸುವದೆಂಬುದು ಸ್ಪಷ್ಟವಾಗಿದೆ. ಆದ್ದರಿಂದಲೇ 'ಋ' ಗಳೆಂದರೂ 'ಆರ್ಯ' ರೆಂದರೂ 'ಇರಿಯಾನ' ಅಥವಾ 'ಇರಾಣೀ'ಯ(ಪಾರ್ಸಿ)ಯರೆಂದರೂ ಒಂದೇ ಜನಾಂಗವೆಂದು ಬೇರೆ ಹೇಳಬೇಕಾಗಿಲ್ಲ.

ಇನ್ನು ಈ 'ಋ' ಎಂಬ ಅಕ್ಷರವನ್ನು ಹಿಂದೆ ಹೇಳಿದಂತೆ ಪಂಚವರ್ಗೀಯ ಪ್ರಥಮಾಕ್ಷರಗಳಿಗೂ (ಕ-ಚ-ಟ-ತ-ಪ), ಎರಡೂ ಅನುನಾಸಿಕಾಕ್ಷರಗಳಿಗೂ (ನ-ಮ), ಎರಡೂ ಊಷ್ಮವರ್ಣಗಳಿಗೂ (ಪ - ಷ) ಸೇರಿಸಿ, ಕೃ, ತೃ, ಪೃ, ನೃ, ಮೃ,

ವೃ, ಹೃ ಎಂದು ಏಳು ಬೀಜಾಕ್ಷರಗಳನ್ನು ಹುಟ್ಟಿಸಿಕೊಂಡಿದ್ದಾರೆ. ಇಲ್ಲಿ ಉಪಯೋಗಿಸಿದ ಮೂಲವ್ಯಂಜನಗಳಲ್ಲಿ 'ಚ' ಎಂಬುದು 'ಕ' ಎಂಬುದರ ಪ್ರತಿನಿಧಿಯೂ ಆಗಿರುವದರಿಂದ ಚ, ಟ, ಸ, ಎಂಬ ಮೂರು ಅಕ್ಷರಗಳನ್ನು ಬಿಡಲಾಗಿದೆ. ಬೇಕಾದರೆ ಇವುಗಳಲ್ಲಿ ಟ ಮತ್ತು ಸ ಇವೆರಡನ್ನು ತೆಗೆದುಕೊಂಡು, ಟೃ ಮತ್ತು ಸೃ ಎಂದು ಇನ್ನೆರಡು ಬೀಜಾಕ್ಷರಗಳನ್ನು ಹುಟ್ಟಿಸಿಕೊಳ್ಳಬಹುದೆಂದು ಶ್ರೀ ಬೇಂದ್ರೆಯವರ ಅಭಿಪ್ರಾಯವಿದೆ. ಹಾಗಾದರೆ ಒಟ್ಟಾರೆ ಒಂಬತ್ತು ಬೀಜಾಕ್ಷರಗಳಾದಂತಾಗುವವು.

'ಋ' ಎಂಬ ಮೂಲ ಬೀಜಾಕ್ಷರವು 'ಋ'ಗಳು ಅಥವಾ 'ಆರ್ಯ'ರು ಎಂಬ ಮೂಲ ಜನಾಂಗ ವಾಚಕವಾಗಿರುವಂತೆ ಇನ್ನುಳಿದ ಈ ಒಂಬತ್ತು ಬೀಜಾಕ್ಷರಗಳೂ ಆರ್ಯರೊಳಗಿನವೇ ಆದ ಬೇರೆ ಬೇರೆ ಒಂಬತ್ತು ಉಪಜನಾಂಗಗಳ ವಾಚಕಗಳಾಗಿವೆಯೆಂಬುದು ಶ್ರೀ ಬೇಂದ್ರೆಯವರ ಮುಖ್ಯ ಸಿದ್ಧಾಂತ. ಈಗ 'ಕೃ' ಗಳಿಗೆ ಅಯರ್ಲಂಡಿನ ಮೂಲ 'ಕೆಲ್ಟ್' ಜನಾಂಗದವರೆಂದೂ 'ಟೃ' ಗಳಿಗೆ ಜರ್ಮನಿಯ ಮೂಲ 'ಟ್ಯೂಟಾನಿಕ್' ಜನಾಂಗದವರೆಂದೂ 'ತೃ' ಗಳಿಗೆ 'ತುರ್ವಕ'ರೆಂದೂ 'ಪೃ' ಗಳಿಗೆ 'ಪುರು'ಗಳೆಂದೂ 'ನೃ'ಗಳಿಗೆ 'ನರರು' ಅಥವಾ 'ನಳರು' ಎಂದೂ 'ಮೃ'ಗಳಿಗೆ 'ಮಿಟಾನೀ' ಆರ್ಯರೆಂದೂ (mitanni aryans) 'ವೃ'ಗಳಿಗೆ 'ವರ್ವರ' ಅಥವಾ 'ಬರ್ಬರ' ಜನಾಂಗದವರೆಂದೂ 'ಸೃ'ಗಳಿಗೆ ರಶಿಯಾದ 'ಸ್ಲ್ಯಾವ್ಹೋನಿಕ್' ಜನಾಂಗದವರೆಂದೂ, 'ಹೃ'ಗಳಿಗೆ ಗ್ರೀಸಿನ 'ಹೆಲೆನಿಕ್' ಜನಾಂಗದವರೆಂದೂ ಕೆಲವುಟ್ಟಿಗೆ ಕಲ್ಪಿಸಿಕೊಳ್ಳುವಾ.

ಇಲ್ಲಿ ವೈದಿಕ ಮತ್ತು ಪೌರಾಣಿಕ ಇತಿಹಾಸದ ಕಡೆಗೆ ಸ್ವಲ್ಪ ಹೊರಳುವಾ, ಪಾಂಡವರ ಪೂರ್ವಪಿತೃಗಳಾದ ಚಂದ್ರವಂಶದ ರಾಜರಲ್ಲಿ ೧. ಪುರೂರವ. ಆತನ ಮಗ; ೨. ಆಯು. ಆತನ ಮಗ; ೩ ನಹುಷ, ಆತನ ಮಗ; ೪ ಯಯಾತಿ, ಆತನ ಮಕ್ಕಳಾದ ಯದು, ತುರ್ವಶು, ದ್ರುಹ್ಯ, ಅನುಪುರು ಇಷ್ಟು ಜನರ ಹೆಸರುಗಳು ಋಗ್ವೇದದಲ್ಲಿ ಬರುತ್ತವೆ. ಇವರಲ್ಲಿ ಕೊನೆಯವರಾದ ಪುರು ಮೊದಲಾದವರು ಪಂಚಪಾಂಡವರಿಗಿಂತ ಮೂವತ್ತೊಂದು ತಲೆಮಾರು ಮುಂಚಿನವರು. ಆಗಿನ ಒಂದೊಂದು ತಲೆಮಾರು ಕನಿಷ್ಠ ಪಕ್ಷಕ್ಕೆ ಗುಪ್ತ ಹಾಗೂ ಮೊಗಲ ಚಕ್ರವರ್ತಿಗಳ ಕಾಲದಲ್ಲಿದ್ದಂತೆ ಐವತ್ತು ವರುಷಗಳಾದರೂ ಇದ್ದೀತೆಂಬುದಕ್ಕೆ ಪಾಂಡವರ ಅನಂತರದಲ್ಲಿ ಅವರ ವಂಶದವರು ಆಳಿದ ಆಳಿಕೆಯ ವರ್ಷಗಳ ಪೌರಾಣಿಕ ಯಾದಿಯಿಂದ ಗೊತ್ತಾಗುವದು. ವಿಕ್ಟೋರಿಯಾ ಮಹಾರಾಣಿಯಂತೆ ಇನ್ನೂ ಸ್ವಲ್ಪ ಹೆಚ್ಚಿಗೆ (೬೦ ವರ್ಷ) ಇದ್ದರೂ ಇರಬಹುದು. ಏಕೆಂದರೆ ಅದು ತತ್ತ್ವನಿಷ್ಠರಾದ ಬ್ರಹ್ಮರ್ಷಿಗಳ ಹಾಗೂ ರಾಜರ್ಷಿಗಳ ಕಾಲ;

ಆಗಿನ ಮೂವತ್ತು ಮೂವತ್ತೈದು ತಲೆಮಾರುಗಳೆಂದರೆ ಸುಮಾರು ಒಂದೂವರೆ ಅಥವಾ ಎರಡು ಸಾವಿರ ವರುಷಗಳ ಕಾಲ. ಹೀಗೆಂದರೆ ಪುರೂರವ, ನಹುಷ, ಯಯಾತಿ ಮೊದಲಾದ ರಾಜರ್ಷಿಗಳು ಪಾಂಡವರಿಗಿಂತ ಅಷ್ಟುಕಾಲ ಮುಂಚಿನವರೆಂಬುದು ಸುಸ್ಪಷ್ಟ. ಆ ಕಾಲದಲ್ಲಿ ನಡೆದ ಸಂಗತಿಯೊಂದಿದೆ. ಅದೇನೆಂದರೆ, ಯಯಾತಿ ರಾಜನಿಗೆ ದೈತ್ಯಗುರುವಾದ ಶುಕ್ರಾಚಾರ್ಯರ ಶಾಪದಿಂದ ನಡುವಯಸ್ಸಿನಲ್ಲಿಯೇ ವೃದ್ಧಾಪ್ಯ ಬರಲು (ಅಂಥದೊಂದು ರೋಗ?) ಅವನು ಅದಕ್ಕೆ ಉಶ್ಶಾಪವೇನೆಂದು ಕೇಳಿದಾಗ "ನಿನ್ನ ಮಕ್ಕಳಲ್ಲೊಬ್ಬನು ಇದನ್ನು ಸ್ವೀಕರಿಸಿದರೆ ನೀನು ಮೊದಲಿನಂತೆ ಆಗುವಿ" ಎಂದು ಶುಕ್ರಾಚಾರ್ಯರು ಹೇಳಿದರು. ಆಗ ಯಯಾತಿಯ ಐವರು ಮಕ್ಕಳಲ್ಲಿ ಪುರುವಿನ ಹೊರತು ಯಾರೂ ಒಪ್ಪದಿರಲು, ಯಯಾತಿಯು ತನ್ನ ಕೊನೆಯ ಕಾಲದಲ್ಲಿ ಪುರುವಿಗೆ ತನ್ನ ರಾಜ್ಯದ ಮುಖ್ಯಭಾಗವನ್ನು ಅಂದರೆ ಮಧ್ಯಪ್ರದೇಶವನ್ನು ಕೊಟ್ಟು ಉಳಿದ ನಾಲ್ವರು ಮಕ್ಕಳನ್ನು ತನ್ನ ರಾಜ್ಯದ ಸೀಮಾಪ್ರದೇಶಗಳಲ್ಲಿ ರಾಜರನ್ನಾಗಿ ನಿಲ್ಲಿಸಿ ತಪಸ್ಸಿಗೆ ಹೋದನು. ಈ ಐವರಲ್ಲಿ ಪುರವೇ ಪೌರವ ವಂಶಕ್ಕೆ ಮೂಲ ಪುರುಷನಾದನು. ಹೀಗೆಯೇ ಯದುವಿನಿಂದ ಯಾದವರೂ, ತುರ್ವಶುವಿನಿಂದ ಯವನರೂ, ದ್ರುಹ್ಯುವಿನಿಂದ ಭೋಜರೂ, ಅನುವಿನಿಂದ ಮ್ಲೇಚ್ಛರೂ ಹುಟ್ಟಿದರು*

ಋಗ್ವೇದದ ಪ್ರಥಮ ಮಂಡಲದ ೧೦೮ ನೆಯ ಸೂಕ್ತದಲ್ಲಿ ಎಂಟನೆಯ ಮಂತ್ರದೊಳಗೆ ಈ ಐವರ ಹೆಸರುಗಳೆಲ್ಲಾ ಒಂದೇ ಕಡೆಗೆ ಸಿಗುತ್ತವೆ. ಅಲ್ಲಿ ವರ್ಣಿಸಲ್ಪಟ್ಟಿದ್ದು ಹೇಗೆಂದರೆ:- "ಹೇ, ಇಂದ್ರಾದಿ ದೇವತೆಗಳೇ, ನೀವು ಯದುವಿನ ಅಥವಾ ತುರ್ವಶುವಿನ ಅಥವಾ ದ್ರುಹ್ಯುವಿನ ಇಲ್ಲವೆ ಅನುವಿನ ಅಥವಾ ಪುರುವಿನ ಮನೆಯಲ್ಲಿದ್ದರೂ, ಹೇ ವೀರ್ಯಶಾಲಿಗಳಾದ ದೇವತೆಗಳೇ, ನೀವು ಇಲ್ಲಿ ಬನ್ನಿರಿ ಹಾಗೂ ಸಿದ್ಧಗೊಳಿಸಲ್ಪಟ್ಟ ಈ ಸೋಮರಸವನ್ನು (ದೈವೀಸಚ್ಚಿದಾನಂದವನ್ನು) ಪಾನಮಾಡಿರಿ.†

ಇವೆಲ್ಲ ಆಧಾರಗಳ ಮೇಲಿಂದ ಮೇಲ್ಕಾಣಿಸಿದ ಐದು ಉಪಜನಾಂಗಗಳಿದ್ದದ್ದೂ ಅವುಗಳಲ್ಲಿ ಕೆಲವು ಪಶ್ಚಿಮೀ ಆರ್ಯಕ ಜನಾಂಗಗಳಾಗಿದ್ದವೆಂಬುದೂ (= ಯವನ, ಮ್ಲೇಚ್ಛ) ಸುಸ್ಪಷ್ಟವಿದೆ. ಈ ಯವನ ಹಾಗೂ ಮ್ಲೇಚ್ಛ ಶಬ್ದಗಳು ಮಹಮ್ಮದೀಯ

---

* ಇದು ಮಹಾಭಾರತದಲ್ಲಿ ಹೇಳಲ್ಪಟ್ಟ ಕಥೆ. ಭಾಂಡಾರಕರ ಪ್ರತಿ, ಸುಕ್ತಂಕರರು ಸಂಪಾದಿಸಿದ ಮಹಾಭಾರತ, ಆದಿಪರ್ವ ಅಧ್ಯಾಯ ೭೧-೮೮.

† ಯದಿಂದ್ರಾಗ್ನಿಯದುಷು ತುರ್ವಶೇಷು ಯದ್ದ್ರುಹ್ಯುಷನುಷು ಪೂರುಷಸ್ಥಃ ।
ಅತಃ ಪರಿವೃಷಣಾವಾಹಿಯಾತಮಥಾಸೋಮಸ್ಯ ಪಿಬತಂ ಸುತಸ್ಯ ॥

–ಋಗ್ವೇದ ಮಂ. ೧-೧೦೮-೮

ವಾಚಕವಾಗಿರದೆ ಯುರೋಪೀಯ ಹಾಗೂ ಪಶ್ಚಿಮ ಏಸಿಯಾದ ಆರ್ಯರ ದ್ಯೋತಕ ವಾಗಿವೆಯೆಂದು ವಿಚಾರಂತ್ಯದಲ್ಲಿ ಕಂಡುಬರುವದು. ಹೇಗೆಂದರೆ ಮುಹಮ್ಮದೀಯರ ಧರ್ಮವೇ ಕ್ರಿಸ್ತೀಯ ಆರನೆಯ ಶತಮಾನದಲ್ಲಿ ಸ್ಥಾಪಿತವಾಯಿತಂ. ಮೇಲ್ಕಾಣಿಸಿದ ಶಬ್ದಗಳಾದರೋ ಅದಕ್ಕಿಂತ ಒಹುಶತಮಾನ ಮುಂಚಿನ ಮಹಾಭಾರತ ಹಾಗೂ ಮನುಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವವು. ಸಾಮ್ರಾಟ ಅಶೋಕ ಚಕ್ರವರ್ತಿಯು ತನ್ನ ಶಾಸನಗಳಲ್ಲಿ ತನ್ನ ಮಿತ್ರರಾಷ್ಟ್ರವಾದ "ಟಾಲೆಮಿ", "ಅಂಟಿಯೋಕಸ್" ಮೊದಲಾದ ಗ್ರೀಕ್ ರಾಜರನ್ನು "ಯವನ್" (ಯೋನಸ್) ರೆಂದು ನಾಮನಿರ್ದೇಶ ಮಾಡಿದ್ದಾನೆ. ಇದರಂತೆ ಅತಿ ಪುರಾತನ ಕಾಲದಿಂದ ಪಶ್ಚಿಮ ಏಶಿಯಾದಲ್ಲಿದ್ದ "ಸುಮೇರಿಯನ್", "ಮಿಡಿಯನ್" ಮೊದಲಾದ ಆರ್ಯರಿಗೆ ಮ್ಲೇಚ್ಛರು (ಮರು + ಸ್ಥ = ಮರಳಂ ಗಾಡಿನ ವಾಸಿಗಳು = ಮ್ಲೇ + ಸ್ಥ = ಮ್ಲ ಅಥವಾ ಮ್ರ ಅಥವಾ ಮರುದೇಶದಲ್ಲಿ ವಾಸಿಸುವವರು? ಅಥವಾ ಶ್ರೀ ಬೇಂದ್ರೆಯವರ ತತ್ತ್ವದಂತೆ 'ಮೃ' ಗಳಾಗಿರ ಬಹುದೆ?) ಎಂದು ಅಂದಿರಬಹುದಾಗಿ ಊಹಿಸಲಿಕ್ಕೆ ಅವಕಾಶವಿರುತ್ತದೆ.

ಒಟ್ಟಾರೆ ಐರೋಪ್ಯ ಆರ್ಯರು, ಹಿಂದುಸ್ತಾನದ ಪಶ್ಚಿಮ ದಿಕ್ಕಿಗಿದ್ದ ಪಶ್ಚಿಮ ಏಶಿಯಾದ ಆರ್ಯರು, ಭಾರತೀಯ ಆರ್ಯರು ಹಾಗೂ ದ್ರಾವಿಡರಂ ಇವರೆಲ್ಲಾ ಒಂದೇ ಜನಾಂಗ (ಆರ್ಯಜನಾಂಗ) ಎಂಬುದು ಶ್ರೀ ಬೇಂದ್ರೆಯವರ ಸ್ಪಷ್ಟಸಿದ್ಧಾಂತ.

ಬಂಗಾಲದ ಶ್ರೀಮತಿ ಸೂರ್ಯಕುಮಾರೀದೇವಿಯೆಂಬವರು ಬರೆದ "ಪೌರಾಣಿಕ ವ್ಯಕ್ತಿನಾಮಗಳ ಡಿಕ್ಶನರಿ" ಎಂಬ ಪುಸ್ತಕದಲ್ಲಿ 'ಇಕ್ಷಾಕು'ಗಳಿಗೆ ಅಕಾಯಿಯನ್ ಆರ್ಯನ್ಸ್' ಎಂದೂ ಮಿಥಿಲಾದವರಿಗೆ 'ಮಿಕ್ಸ್ಡ್, ಅಲ್ಪಾಯಿನ್ಸ್' ಎಂದೂ ವೈಶಾಲಿಯವರಿಗೆ 'ಮೆಡಿಟೇರಿಯನ್ಸ' ಎಂದೂ, ಯಾದವರಿಗೆ ಹಾಗೂ ಹೈಹಯರಿಗೆ 'ಅಲ್ಪಾಯಿನ್ಸ್' ಎಂದೂ, ದಸ್ಯುಗಳಿಗೆ 'ಸೇಮಾಯಿಟ್ಸ್' ಎಂದೂ ಕಾನ್ಯಕುಬ್ಜರಿಗೆ 'ಮಿಟಾನೀ ಆರ್ಯನ್ಸ್' ಎಂದೂ ನಾಮಕರಣ ಮಾಡಿದ್ದಲ್ಲದೆ ಆಯಾ ಪ್ರದೇಶ ಗಳೊಳಗಿನ ಭೂಗರ್ಭ ಸಂಶೋಧನ ಮುಂತಾದವುಗಳಿಂದ ಈ ಮಾತುಗಳನ್ನು ಸಪ್ರಮಾಣವಾಗಿ ಸಿದ್ಧ ಮಾಡಲಾಗಿದೆ. ಇದರಂತೆ ಇನ್ನೂ ಅನೇಕ ಜನ ವಿದ್ವಾಂಸರು ಭಾರತೀಯ ವೈದಿಕ ಪುರಾಣಿಕ ರಾಜವಂಶಗಳ ಹಾಗೂ ಜನಾಂಗಗಳ ಬಗೆಗೆ ಅನೇಕ ಗ್ರಂಥಗಳನ್ನು ಬರೆದಿದ್ದಾರಲ್ಲದೆ ಅವರೆಲ್ಲರೂ ಸುಮಾರಾಗಿ ಇದೇ ಬಗೆಯ ಅಭಿಪ್ರಾಯ ಗಳನ್ನು ಪ್ರತಿಪಾದಿಸುವವರಾಗಿದ್ದಾರೆ.

ಋಗ್ವೇದದಲ್ಲಿ ಈ ಯದು, ತುರ್ವಶು ಮೊದಲಾದ ಐದು ಉಪಜನಾಂಗಗಳ ಉಲ್ಲೇಖವಲ್ಲದೆ ಇನ್ನೂ ಹತ್ತು-ಹನ್ನೆರಡು ಜನಾಂಗಗಳ ಪ್ರಸ್ತಾಪವು ಒಂದಿದೆ. ಋಗ್ವೇದದಲ್ಲಿ ವರ್ಣಿತನಾದ ಅತಿ ಪ್ರಖ್ಯಾತ ರಾಜನಾದ ದಿವೋದಾಸನ ಮಗನಾದ ಸುದಾಸನ ಕಾಲದಲ್ಲಿ ವೇದಕಾಲದ ಅತ್ಯಂತ ಪ್ರಖ್ಯಾತ ಯುದ್ಧವೆನಿಸಿದ "ದಾಶರಾಜ್ಞ

ಯುದ್ಧ"(ಅಥವಾ ದಶ-ರಾಜ-ಯುದ್ಧ)ವು ಘಟಿಸಿತು. ಈ ಕಾಲದಲ್ಲಿ ಮಹರ್ಷಿಗಳಾದ ವಿಶ್ವಾಮಿತ್ರ–ವಶಿಷ್ಠರು ಬ್ರಹ್ಮರ್ಷಿಗಳಲ್ಲಿ ಮುಖ್ಯರಾಗಿದ್ದರು. ಸೂರ್ಯವಂಶದ ಮಹಾಸತ್ಯಸಂಧನಾದ ಹರಿಶ್ಚಂದ್ರ ಚಕ್ರವರ್ತಿಯ ತಂದೆಯಾದ ತ್ರಿಶಂಕುವು ಈ ಕಾಲವಲ್ಲಿದ್ದನೆಂದು ಪುರಾಣಗಳಿಂದ ತಿಳಿಯುತ್ತದೆ. ಏಕೆಂದರೆ ವಶಿಷ್ಠ-ವಿಶ್ವಾಮಿತ್ರರು ಇದೇ ರಾಜನಲ್ಲಿದ್ದರೆಂದು ಪುರಾಣಗಳಲ್ಲಿ ಹೇಳಲಾಗಿದೆ. ಶ್ರೀರಾಮಚಂದ್ರದೇವರ ಪೂರ್ವಜರಲ್ಲಿಯೇ ಈ ತ್ರಿಶಂಕು–ಹರಿಶ್ಚಂದ್ರರು ಶ್ರೀರಾಮಚಂದ್ರದೇವರಿಂದ ಹನ್ನೊಂದು–ಹನ್ನೆರಡು ತಲಾಂತರ ಮುಂಚಿನವರು. ತ್ರಿಶಂಕುವಿಗೂ ಶ್ರೀರಾಮಚಂದ್ರದೇವರಿಗೂ ಹನ್ನೆರಡು ತಲೆಮಾರಿನ ಅಂತರ. ಅಂದರೆ ಶ್ರೀರಾಮಾವತಾರಕ್ಕಿಂತ ಸುಮಾರು ಆರೆಂಟುನೂರು ವರುಷ ಮುಂಚೆ. ಈ ಕಾಲದಲ್ಲಿ ನಡೆದ ಮಹಾಯುದ್ಧದ ಮುಖ್ಯ ಅಧ್ವರ್ಯುವಾದ ಸುದಾಸನೂ ಆತನ ತಂದೆಯಾದ ದಿವೋದಾಸನೂ ಕಾಶೀ ರಾಜ್ಯದಲ್ಲಿ ಆಳಿದ ದಿವೋದಾಸ ಸುದಾಸರೇ ಆಗಿದ್ದುದಾದರೆ ಅದು ಚಂದ್ರವಂಶದ (ಪಾಂಡವರ ಪೂರ್ವಜನಾದ) ಹಿಂದೆ ಹೇಳಿದ ಯಯಾತಿ ಮಹಾರಾಜನ ಕಾಲವೇ ಆಗುತ್ತದೆ. ಏಕೆಂದರೆ ಯಯಾತಿ ರಾಜನ ಮಗಳ ಮಗನೂ ಪ್ರಖ್ಯಾತ ಶಿಬಿಚಕ್ರವರ್ತಿಯ ತಮ್ಮನೂ ವೇದವರ್ಣಿತನೂ ಆದ ಪ್ರತರ್ದನನಿಗೂ ಕಾಶೀ ರಾಜನಾದ ದಿವೋದಾಸನಿಗೂ ಪರಸ್ಪರ ಸಂಬಂಧವಿತ್ತು. ಹೀಗೆಂದರೆ ಇದು ಮತ್ತೆ ಯದು, ತುರ್ವಶು ಮೊದಲಾದವರ ಕಾಲವೇ. ಅಂದರೆ ಪಾಂಡವರಿಗಿಂತ ಮುಂಚೆ ಸುಮಾರು ಒಂದೂವರೆ ಅಥವಾ ಎರಡು ಸಾವಿರ ವರುಷ; ಹಾಗೂ ಶ್ರೀರಾಮಚಂದ್ರದೇವರಿಗಿಂತ ಮುಂಚೆ ಆರೆಂಟುನೂರು ವರುಷ.

ಈ ಯುದ್ಧದಲ್ಲಿ ಸುದಾಸನಿಗೆ ವಿರುದ್ಧವಾಗಿ ನಿಂತ ರಾಜವಂಶಗಳು ಯಾವವೆಂದರೆ : ೧. ಶಿಮ್ಯು, ೨. ತುರ್ವಶು, ೩. ಭೃಗು, ೪. ದ್ರುಹ್ಯು, ೫. ಕವಿ, ೬. ಅನು, ೭. ಪುರು, ೮. ಭೇದ, ೯. ಯದು, ೧೦. ಯಜ, ೧೧. ಶಿಗ್ರು, ೧೨. ವಿಷಾಣಿನ್, ೧೩. ಯಕ್ಷೂ ಇತ್ಯಾದಿ.

ಸುದಾಸನಿಗೆ ಅನುಕೂಲವಾಗಿದ್ದ ಉಪಜನಾಂಗಗಳು : ೧. ತೃತ್ಸು, ೨. ಭರತ, ೩. ಪರ್ಶು, ೪. ಪೃಥು. ಇಲ್ಲಿ ಸುದಾಸನಿಗೆ ಅನುಕೂಲರಾಗಿದ್ದ ಭರತರಲ್ಲಿಯೇ ವಶಿಷ್ಠ, ವಿಶ್ವಾಮಿತ್ರರಿದ್ದರೆಂದು ಋಗ್ವೇದದಲ್ಲಿ ಹೇಳಿದೆ. ಸುದಾಸನಿಗೆ ತೃತ್ಸುಜನಾಂಗದವನೆಂದೂ. ಭರತರಿಗೂ ತೃತ್ಸುಗಳಿಗೂ ಭೇದವಿಲ್ಲವೆಂದೂ ಋಗ್ವೇದದಲ್ಲಿ ವಶಿಷ್ಠ ಋಷಿಗಳ ಒಂದು ಸೂಕ್ತದಲ್ಲಿ ಹೇಳಿರುವದರಿಂದ ತೃತ್ಸುಗಳಿಗೂ ಭರತರೂ ಯದು–ತುರ್ವಶರಂತೆ ಒಂದೇ ವಂಶದಿಂದ ಒಡೆದ ಎರಡು ಜನಾಂಗಗಳಾಗಿದ್ದರೂ ಆಗಿರಬಹುದು. ಕೊನೆಯ ಕಾಲದಲ್ಲಿ ವಿಶ್ವಾಮಿತ್ರ ಮಹರ್ಷಿಯು ಭರತರಲ್ಲಿಯೂ ವಶಿಷ್ಠ ಮಹರ್ಷಿಯು ತೃತ್ಸುಗಳಲ್ಲಿಯೂ (ಸುದಾಸನಲ್ಲಿ)ಕುಲಗುರುಗಳಾಗಿದ್ದರು. ಮೊದಲು ಇಬ್ಬರೂ ಒಬ್ಬರಲ್ಲಿಯೇ ಇದ್ದರು. ಇದೆಲ್ಲ ಋಗ್ವೇದದಲ್ಲಿ ಹೇಳಿದ ಮಾತು.

ಇದರೊಳಗಿನ ಇನ್ನೊಂದು ಮಾತೇನೆಂದರೆ, ಸುದಾಸನ ಪಕ್ಷಕ್ಕಿದ್ದ ಪರ್ಶು ಪೃಥು ಎಂಬೆರಡು ಜನಾಂಗಗಳು ಪರ್ಶಿಯನ್ (=ಪಾರ್ಶಿ) ಹಾಗೂ ಪಾರ್ಥಿಯನ್‌ರೇ ಆಗಿರಬಹುದೆಂದು ತೋರುತ್ತದೆ. ಪರ್ಶಿಯನ್ನರಿಗೆ 'ಪಾರಸೀಕ'ರೆಂಬ ಹೆಸರು ಮಹಾಕವಿ ಕಾಳಿದಾಸನ ರಘುವಂಶದಲ್ಲಿ ಹೇಳಲಾಗಿದೆ. ಈ ಪಾರಸೀಕವೆಂಬ ಶಬ್ದವೇ ವೇದಕಾಲದಲ್ಲಿ ಪರ್ಶು ಎಂಬುದಾಗಿ ಇದ್ದಿರಬಹುದೆಂದೂ ಊಹಿಸಲಿಕ್ಕೆ ಅವಕಾಶವಿದೆ.

ಇನ್ನೊಂದು ಮಹತ್ವದ ಊಹೆಯೇನಂದರೆ, ವಿಶ್ವಾಮಿತ್ರ–ವಸಿಷ್ಠರ ಕಾಲ ದಲ್ಲಿಯೇ ಜಮದಗ್ನಿ ಮಹರ್ಷಿಗಳಿದ್ದರೆಂಬುದು ಸರ್ವಶ್ರುತವಷ್ಟೆ? ಏಕೆಂದರೆ ವಿಶ್ವಾಮಿತ್ರ ಮಹರ್ಷಿಯ ತಂದೆಯಾದ ಗಾಧಿರಾಜನಿಗೂ ಜಮದಗ್ನಿ ಋಷಿಗಳಿಗೂ ಆಪ್ತವಿಷಯವಿದ್ದಿತು. ಈ ಜಮದಗ್ನಿ ಮಹರ್ಷಿಯೇ ಶ್ರೀ ಪರಶುರಾಮರ ತಂದೆ. ಆದ್ದರಿಂದ ಶ್ರೀ ಪರಶುರಾಮಾವತಾರದ ಕಾಲಕ್ಕೆ ಇಪ್ಪತ್ತೊಂದು ಸಾರೆ ಕ್ಷತ್ರಿಯರ ನಾಶವಾಯಿತೆಂದು ಹೇಳಿದ್ದೇ ವೇದಕಾಲದ ಈ 'ದಾಶರಾಜ್ಞ ಮಹಾಯುದ್ಧ' ವಾಗಿರಬಹುದೆ? ವಿಶ್ವಾಮಿತ್ರ, ವಸಿಷ್ಠರ ಕಾಲಕ್ಕೆ ಈ ಯುದ್ಧವಾಗಿರುವದರಿಂದ ಅದೇ ಕಾಲಕ್ಕಿದ್ದ ಪರಶುರಾಮಾವತಾರದ ಸಮಯಕ್ಕೆ ಇದಾಯಿತೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಆದರೆ ಮೇಲೆ ಹೇಳಿದ 'ಪರ್ಶು' ಎಂಬ ಜನಾಂಗಕ್ಕೂ ಶ್ರೀ ಪರಶುರಾಮರಿಗೂ ಏನಾದರೂ ಸಂಬಂಧವಿದೆಯೇ ಹೇಗೆ ಎಂಬುದನ್ನು ಬಲ್ಲವರು ಹೆಚ್ಚಾಗಿ ಪರಿಶೋಧಿಸುವರೆಂದು ನಂಬಿದ್ದೇನೆ.

ಇದೇನೇ ಇರಲಿ, ವೇದಪ್ರಮಾಣಗಳಲ್ಲಿ ಎಷ್ಟೋ ಆರ್ಯಕುಲಗಳ (=ಉಪಜನಾಂಗಗಳ) ಉಲ್ಲೇಖವಿದ್ದು, ಅವುಗಳಲ್ಲೆಷ್ಟೋ ಭಾರತ ವರ್ಷದ ಹೊರಗಡೆಗೆ ಇದ್ದರೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಇಷ್ಟೇ ಏಕೆ? ಮೂಲ ಆರ್ಯ ಜನಾಂಗವೇ ಮಧ್ಯಏಸಿಯಾದಿಂದ ( =ಉತ್ತರ ಕುರು ? ) ಭಾರತಕ್ಕೆ ಬಂದಿದ್ದಾಗಿದೆಯೆಂಬುದು ಎಲ್ಲರಿಗೆ ಗೊತ್ತಿದ್ದ ಮಾತಾಗಿದೆ.

ಈಗ ಆರ್ಯ, ತುರೇನಿಯನ್ (=ಸಿಥಿಯನ್ ಅಥವಾ ದ್ರಾವಿಡ), ಇರಾಣಿ ಯನ್ ಯುರೋಪಿಯನ್ ಮೊದಲಾದ ಏಶಿಯಾ, ಯುರೋಪ್ ಅಖಂಡ ಮಹಾ ಭೂಖಂಡದ ಅತಿ ಪುರಾತನ ಜನಾಂಗಗಳೆಲ್ಲಾ ಒಂದೇ ಮೂಲ ಆರ್ಯಜನಾಂಗದ ಶಾಖೋಪಶಾಖೆಗಳಾಗಿರುವದರಿಂದ ಅವೆಲ್ಲವುಗಳ ಉಪಕುಲ ಭಾಷೆ ಮೊದಲಾದವು ಗಳನ್ನು ಶ್ರೀ ಬೇಂದ್ರೆಯವರು ಹೀಗೆ ವರ್ಗೀಕರಿಸಿ ನಾಮಕರಣ ಮಾಡುತ್ತಾರೆ.

೧. "ಋ"ಗಳು = ಮೂಲ ಆರ್ಯರು

೨. "ಕೃ" ಗಳು = ಕೆಲ್ಟ್ಸ್, ಕೃತರು (ಕೇಟ್ಸ) ಕಳರು

"ಚೃ"ಗಳು = ,, ,, ,,

೩. "ಟೃ"ಗಳು = ಟ್ಯೂಟಾನಿಕ್ಸ
"ತೃ"ಗಳು = ತುರೇನಿಯನ್‌ರು, ತಳರು, ಅತಳರು, ವಿತಳರು, ಮೈತಾಳರು

೪. "ಪೃ"ಗಳು = ಪೃಥುಗಳು, ಪಾರ್ಥಿಯರು, ಪ್ರಾಕ್, ಪ್ರಸಿಯನ್ನರು

೫. "ನೃ"ಗಳು = ನರರು, ನರನಾರಾಯಣೀಯರು, ನಾರ್ವೇನ್ನರು, ಔತ್ತರೇಯರು

೬. "ಮೃ"ಗಳು = ಮರ್ತರು, ಮಂಗರು, ಮಹರು, ಮೀಡಿಯನ್ಸ್, ಮಾರವಾಡರು

೭. "ವೃ"ಗಳು = ವರ್ವರರು, ಬರ್ಬರರು (ಹಿಡಂಬನು ಬರ್ಬರನು)

೮. "ಸೃ"ಗಳು = ಸಾರಸ್ವತೀಯರು, ಶಾರದೀಯರು (ಕಾಶ್ಮೀರಿಯನ್ಸ್)
"ಹೃ"ಗಳು = ಹೈಂದವರು (ಅಂದರೆ ಸೈಂಧವರು, ಏಕೆಂದರೆ ಸ=ಹ)

ಇವರೆಲ್ಲರ ಭಾಷಾಭೇದವು ಮೂಲ ಸಂಸ್ಕೃತದಲ್ಲಿಯೇ ಹೇಗೆ ವಿಭಿನ್ನವಾಗಿದ್ದಿತೆಂಬುದನ್ನೂ ಈ ಮೂಲಕ ಅವರವರ ಆಚಾರ ವಿಚಾರಗಳಲ್ಲಿ ಹೇಗೆ ಭಿನ್ನಭಿನ್ನತೆಯಿತ್ತೆಂಬುದನ್ನೂ ಇನ್ನು ಮುಂದೆ ವಿವರಿಸಲಾಗುವದು.

೩

ಮೊದಲಿಗೆ ಒಂದು ಮಹತ್ವದ ಮಾತಿನ ಕಡೆಗೆ ವಾಚಕರ ಲಕ್ಷ್ಯವನ್ನು ಹೊರಳಿಸಬೇಕಾಗಿದೆ. ಅದಾವುದೆಂದರೆ, ಆರ್ಯ ಜನಾಂಗವು ಮಧ್ಯ ಏಶಿಯಾದಲ್ಲಿ ಮೊದಮೊದಲಿಗೆ ಬೆಳೆಯುತ್ತಿದ್ದಾಗ ಅವರ ಅನೇಕ ತಂಡಗಳು ಆ ಪ್ರದೇಶದ ಗಿರಿ, ವನ, ನದಿಗಳ ತಟಗಳಲ್ಲಿ ತಮ್ಮ ತಮ್ಮ ಮಟ್ಟಿಗೆ ತಾವು ರೂಪುಗೊಳ್ಳುತ್ತಿದ್ದರೆಂದು ಕಲ್ಪಿಸುವದು ಅಸ್ವಾಭಾವಿಕವಾಗಲಾರದು. ಮೂಲ ಜನಾಂಗಕ್ಕೆ ನಾವು 'ಋ'ಗಳು (ಆರ್ಯ ಎಂಬ ಶಬ್ದದ ಮೂಲ ಬೀಜಾಕ್ಷರವನ್ನವಲಂಬಿಸಿ) ಎಂದು ಕರೆದಂತೆ ಈ ಬೇರೆ ಬೇರೆ ಉಪತಂಡಗಳಿಗೆ "ಕೃ'ಗಳು, "ತೃ"ಗಳು, "ಪೃ"ಗಳು, "ನೃ"ಗಳು ಮೊದಲಾದ ಹೆಸರಿನಿಂದ ಕರೆಯಬಹುದೆಂದೂ ಹಿಂದೆಯೇ ಹೇಳಲಾಗಿದೆಯಷ್ಟೇ ?

"ಋ"ಗಳ ಮುಖ್ಯ ಶಬ್ದಗಳೆಲ್ಲಾ "ಋ" ಎಂಬ ಮೂಲ ಬೀಜದಿಂದ ಹುಟ್ಟಿದವುಗಳಾಗಿದ್ದವೆಂಬುದರ ಅಲ್ಪಪರಿಚಯವನ್ನು (ಋಷಿ, ಋತ, ಋತ್ವಿಜ, ಋಜೂ, ಋತು ಇತ್ಯಾದಿ) ಹಿಂದೆಯೇ ಮಾಡಿಕೊಡಲಾಗಿದೆಯೆಂಬುದನ್ನು ವಾಚಕರು ಬಲ್ಲರು. ಈಗ "ಕೃ" "ವೃ" ಮುಂತಾದವರ ಮುಖ್ಯ ಶಬ್ದಗಳು ಆಯಾ ಜನ ವಾಚಕಗಳಾದ "ಕೃ" "ವೃ" ಮೂಲ ಬೀಜಗಳಿಂದಲೇ ಹುಟ್ಟಿದವುಗಳಾಗಿರಬೇಕೆಂಬುದು ಸ್ವಾಭಾವಿಕವಾಗಿಲ್ಲವೆ ? ಜನ, ದೇಶ, ಭಾಷೆ ಈ ಮೂರಕ್ಕೂ ಒಂದೇ ಶಬ್ದವು ರೂಢವಾಗಿರುವುದು. ಯಾವ ಭಾಷೆಯಲ್ಲಾದರೂ ಇಂದಿಗೂ ಕಂಡು

ಬರುತ್ತಿದೆಯೆಂಬುದು ಸರ್ವರಿಗೂ ತಿಳಿದ ವಿಷಯ. ಉದಾಹರಣಾರ್ಥವಾಗಿ ಕನ್ನಡ ನಾಡು-ಕನ್ನಡ ಭಾಷೆ-ಕನ್ನಡಿಗರು; ಬಂಗಾಲ ದೇಶ-ಬಂಗಾಲೀ ಭಾಷೆ-ಬಂಗಾಲೀ ಜನರು ಇತ್ಯಾದಿ.

ಈಗ "ದೇಶ" ಎಂಬ ಅರ್ಥದಲ್ಲಿ ಯಾವ ಯಾವ ಉಪಜನಾಂಗಗಳಲ್ಲಿ ಯಾವ ಯಾವ ಹೆಸರುಗಳು ರೂಢವಾಗಿದ್ದಿರಬೇಕೆಂಬ ವಿಷಯದಲ್ಲಿ ಶ್ರೀ ಬೇಂದ್ರೆಯವರ ವಿಚಾರವು ಹೀಗೆ ಇದೆ-

"ಕೃ" ಅಥವಾ ಕಳರಲ್ಲಿ—ಖಂಡ (ಕಳ—ಕಣ—ಖಂಡ)
"ಟೃ-ತೃ" ಗಳಲ್ಲಿ—ರಾಟ್, ರಾಜ್ (ರಾಟ—ಲಾಟ—ರಾಷ್ಟ್ರ—ರಾಜ್ಯ)
"ಪೃ" ಪರರಲ್ಲಿ – ಪದ, ಪಾಡಿ
"ನೃ" ನರರು, ನಡರಲ್ಲಿ, ನಳರಲ್ಲಿ—ನಾಟ (ಉದಾ—ಪನ್ನಾಟ ಇತ್ಯಾದಿ)
"ಮೃ" ಅಥವಾ ಮರುಗಳಲ್ಲಿ—ಮಂಡಲ
"ವೃ" ಅಥವಾ ವರರಲ್ಲಿ-ವರ್ಷ, ವಿಷಯಂ, ವಾಡ, ವಾಡಿ
"ಸೃ" ಅಥವಾ ಸೂರರಲ್ಲಿ-ಸದ, ಸ್ಥಾನ, (ಸ್ಥ-ಸ್ಥಳ-ಸ್ಥಾನ-ಸ್ತಾನ-ಇಸ್ತಾನ)

ಇದರಂತೆ ನೀರಿಗೆ ಸಂಬಂಧಿಸಿದ ಶಬ್ದಗಳು ಈ ಉಪಜನಾಂಗಗಳಲ್ಲಿ ಯಾವ ಯಾವವಿರಬಹುದೆಂಬ ವಿಷಯದಲ್ಲಿ ಶ್ರೀ ಬೇಂದ್ರೆಯವರ ವಿಚಾರವು ಹೀಗಿದೆ :

"ಕೃ"ಗಳಲ್ಲಿ-
"ತೃ"ಗಳಲ್ಲಿ—ತೋಯ
"ಪೃ"ಗಳಲ್ಲಿ—ಪಯ (ಪೇಯ ?)
"ನೃ"ಗಳಲ್ಲಿ—ನೀರ್, ನೀರ (ನೀರ+ಜ=ನೀರಜ=ಕಮಲ)
"ಮೃ"ಗಳಲ್ಲಿ—
"ವೃ"ಗಳಲ್ಲಿ—ವಾರಿ
'ಸೃ"ಗಳಲ್ಲಿ— ಸರಸ್ (ಸರ ಇದರ ತಿರುವು ಮುರುವೇ 'ರಸ')

ಸಂಗೀತದೊಳಗಿನ ಸಪ್ತಸ್ವರಗಳು ಸಹ ಈ ಅತಿ ಪುರಾತನದ ಮೂಲ ಉಪ ಜನಾಂಗಗಳಲ್ಲಿಯೇ ಮೃದಾಳಿದವೆಂದು ಶ್ರೀ ಬೇಂದ್ರೆಯವರ ವಿಚಾರವಿದೆ. ಅದು ಹೇಗೆಂದರೆ—

"ಸೃ"ಗಳಲ್ಲಿ—ಸಾ
"ಋ"ಗಳಲ್ಲಿ ಅಥವಾ "ವೃ"ಗಳಲ್ಲಿ—ರೀ
"ಕೃ"ಗಳಲ್ಲಿ—ಗ
"ಮೃ"ಗಳಲ್ಲಿ—ಮ
"ಪೃ"ಗಳಲ್ಲಿ—ಪ
"ತೃ"ಗಳಲ್ಲಿ-ಧ
"ನೃ"ಗಳಲ್ಲಿ—ನಿ

ಇದರಂತೆ ಪರ್ವತ, ಪೃಥ್ವಿ, ರಥ, ರಾಗ, ರಾಗಿಣಿ ಮೊದಲಾದ ನೂರಾರು ಶಬ್ದಗಳನ್ನು ಈ ಪ್ರಕಾರವಾಗಿ ಕೂಡಿಸಲಿಕ್ಕೆ ಬರುವದೆಂದು ಶ್ರೀ ಬೇಂದ್ರೆಯವರು ಹೇಳುತ್ತಾರೆ.

ಆದರೆ ಇಲ್ಲಿ ಮುಖ್ಯವಾದ ವಿಚಾರವೆಂದರೆ, ಸಂಸ್ಕೃತದಲ್ಲಿ ಒಂದೊಂದೇ ವಸ್ತುವಿಗೆ ಅನೇಕ ವ್ಯವಹಾರ ಶಬ್ದಗಳಿರುವುದೇ ಈ ಪ್ರಕಾರದ ವಿಚಾರ ಸರಣಿಗೆ ಮೂಲ ಕಾರಣವಾಗಿರುವುದು. ಉದಾಹರಣಾರ್ಥವಾಗಿ– ಭೂಮಿಗೆ– ಪೃಥ್ವಿ, ಭೂಮಿ, ಮಹೀ, ಉರ್ವೀ, ಇಳಾ, ಅವನೀ, ಮೇದಿನಿ, ಕ್ಷೋಣೀ, ಕ್ಷಿತಿ, ಧರಿಣಿ ಇತ್ಯಾದಿ. ಇವುಗಳಲ್ಲಿ "ಪೃಥ್ವಿ"ಯು- "ಪೃ"ಗಳಿಂದಲೂ "ಭೂಮಿ"ಯು "ಭೃ' ಅಥವಾ "ಭೃಗು"ಗಳಿಂದಲೂ "ಮೇದಿನಿ"ಯು "ಮೃ"ಗಳಿಂದಲೂ "ಉರ್ವಿ"ಯು "ವೃ" ಗಳಿಂದಲೂ "ಇಳಾ" ಎಂಬುದು "ಇರ್, ಅರ್ ಅಥವಾ "ಋ"ಗಳಿಂದಲೂ "ಕ್ಷಿತಿ" ಎಂಬುದು "ಕೃ"ಗಳಿಂದಲೂ ಬಂದ ಶಬ್ದಗಳಾಗಿರಬಹುದೆಂದು ಊಹಿಸಬಹುದಲ್ಲವೆ ? "ಧೃ" ಧಾರಣಮಾಡು ಎಂಬುದರಿಂದ "ಧರಣಿ" ಎಂಬುದೂ" ಅವ" ಎಂದರೆ ಕೆಳಗೆ ಎಂಬ ಶಬ್ದದಿಂದ "ಅವನಿ"ಯೂ "ಮಹಾನ್" ಎಂಬುದರಿಂಡ "ಮಹಿ"ಯೂ ಸಾಹಿತ್ಯ ಕಾಲದಲ್ಲಿ ಹುಟ್ಟಿದ ಶಬ್ದಗಳಾಗಿರಬಹುದಲ್ಲವೆ ?

ಈ ರೀತಿಯಿಂದ ಒಂದೇ ವಸ್ತುವಿಗೆ ಸಂಸ್ಕೃತದ ಅನೇಕ ಪರ್ಯಾಯ ಶಬ್ದಗಳನ್ನು ಅತಿಪುರಾತನ ಕಾಲದಲ್ಲಿ ಯಾಸ್ಕಮುನಿಗಳು "ನಿರುಕ್ತ"ವೆಂಬ ತಮ್ಮ ವೈದಿಕ ನಿಘಂಟುವಿನಲ್ಲಿಯೂ ಅಮರಸಿಂಹನು ತನ್ನ ಪ್ರಖ್ಯಾತವಾದ "ಅಮರಕೋಶ"ರಲ್ಲಿಯೂ ಸಂಗ್ರಹಿಸಿ ಹೇಳಿದ್ದಾರೆ. ಇವರಿಬ್ಬರಲ್ಲಿ ಯಾಸ್ಕಮುನಿಗಳು ವೇದದೊಳಗಿನ ಶಬ್ದಗಳನ್ನೂ, ಅಮರಸಿಂಹನು ಲೌಕಿಕ ಹಾಗೂ ಸಾಹಿತ್ಯಾದಿ ಶಾಸ್ತ್ರಗಳೊಳಗಿನ ಶಬ್ದಗಳನ್ನೂ ಸಂಗ್ರಹಿಸಿರುವದರಿಂದ ಯಾಸ್ಕಮುನಿಗಳ "ನಿರುಕ್ತ"ದೊಳಗಿನ ಶಬ್ದಗಳೇ ಅತಿಪುರಾತನ ಕಾಲದವುಗಳು. ಆದ್ದರಿಂದ ಶ್ರೀ ಬೇಂದ್ರೆಯವರು "ನಿರುಕ್ತ"ದಿಂದಲೇ ತಮ್ಮ ಶಬ್ದಗಳ ಗುಂಪುಗಳನ್ನು ಆರಿಸಿಕೊಳ್ಳುತ್ತಾರೆ. "ನಿರುಕ್ತ"ದಿಂದ ಅಂಥ ಕೆಲವು ಗುಂಪುಗಳನ್ನು (ವ್ಯವಹಾರಿಕ ಶಬ್ದಗಳನ್ನು ಮಾತ್ರ) ಕೆಳಗೆ ಕೊಡಲಾಗಿದೆ—

ಆಕಾಶದ ಹೆಸರುಗಳು—

೧ ಅಂಬರ, ೨ ವಿಯತ್, ೩ ವ್ಯೋಮ, ೪ ಅಂತರಿಕ್ಷ, ೫ ಆಕಾಶ, ೬ ನಾಕ, ೭ ನಭ ಇತ್ಯಾದಿ

ಕಿರಣಗಳ ಹೆಸರುಗಳು—

೧ ಕಿರಣ, ೨ ದಿಧೀತಿ, ೩ ಗಭಸ್ತಿ, ೪ ಮರೀಚಿ, ೫ ಮಯೂಖ ಇತ್ಯಾದಿ

ವಾಣಿಯ ಹೆಸರುಗಳು—

೧ ವಾಣೀ, ೨ ನಾಳೀ, ೩ ಮೇಳೀ, ೪ ಘೋಷ, ೫ ಸ್ವರ, ೬ ಶಬ್ದ, ೭ ಸ್ವನ, ೮ ಋಕ್, ೯ ಗಾಥಾ, ೧೦ ವಾಕ್, ೧೧ ವಲ್ಗು ಇತ್ಯಾದಿ

ಕುದುರೆಯು ಹೆಸರುಗಳು—

೧ ಹಯ, ೨ ಅರ್ವಾ, ೩ ವಾಜೀ, ೪ ಏತಶ, ೫ ಪೈದ್ವ, ೬ ತಾರ್ಕ್ಷ್ಯ, ೭ ಬ್ರಧ್ನ, ೮ ಅರುಷ, ೯ ಅಶ್ವ ಇತ್ಯಾದಿ

ಮನುಷ್ಯನ ಹೆಸರುಗಳು—

೧ ಮನುಷ್ಯ, ೨ ನರ, ೩ ಮರ್ತ್ಯ ಇತ್ಯಾದಿ

ಮಕ್ಕಳ ಹೆಸರುಗಳು—

೧ ತೋಕ, ೨ ತನಯ, ೩ ಗಯ, ೪ ಜ, ೫ ಅಪತ್ಯ, ೬ ಸೂನು, ೭ ನಪಾತ್, ೮ ಪ್ರಜಾ ಇತ್ಯಾದಿ

ಯುದ್ಧದ ಹೆಸರುಗಳು—

೧ ರಣ, ೨ ವಿವಾಕ್, ೩ ಆಹವ, ೪ ಆಜಿ, ೫ ಪೃತನಾ ೬ ಸಂಕಾ, ೭ ಸ್ಪೃಧ, ೮ ಸಮತ್ಸು, ೯ ಸಮರ, ೧೦ ಸಮೋಹ, ೧೧ ಸಂಖ್ಯೇ, ೧೨ ಸಂಗೇ, ೧೩ ಶೂರಸಾತೌ, ೧೪ ಸಮನೀಕ, ೧೫ ಖಲ, ೧೬ ಖಜ, ೧೭ ಪೌಂಸ್ಯ, ೧೮ ಅಜ್ಮ, ೧೯ ಸಂಯತ್ ಇತ್ಯಾದಿ

ಬಲದ ಹೆಸರುಗಳು—

೧ ಓಜ, ೨ ಪಾಜ, ೩ ಶವ, ೪ ತರ, ೫ ತವ, ೬ ತ್ವಕ್ಷ, ೭ ಶರ್ಧ, ೮ ಬಾಧ, ೯ ನೃಮ್ಣ, ೧೦ ತವಿಷೀ, ೧೧ ದಕ್ಷ, ೧೨ ವೀಳು, ೧೩ ಸಹ, ೧೪ ಯಹ, ೧೫ ವರ್ಗ, ೧೬ ವೃಜನ, ೧೭ ಮಜ್ಮನಾ, ೧೮ ಪೌಂಸ್ಯ, ೧೯ ಧರ್ಣ, ೨೦ ಸ್ಯರದ್ರ ಇತ್ಯಾದಿ

ವಜ್ರಾಯುಧದ ಹೆಸರುಗಳು—

೧ ವಿದ್ಯುತ್, ೨ ನೇಮಿ, ೩ ಹೇತಿ, ೪ ಪವಿ, ೫ ಸೃಕ, ೬ ವಜ್ರ, ೭ ಕಂತ್ಸ, ೮ ಕುಲಿಶ, ೯ ತಿಗ್ಮ ಇತ್ಯಾದಿ

"ಬಹು" ಎಂಬುದಕ್ಕೆ ಪರ್ಯಾಯ ಶಬ್ದಗಳು—

೧ ಉರು, ೨ ತುವಿ, ೩ ಪುರು, ೪ ಭೂರಿ, ೫ ಶಶ್ವತ್ ೬ ವಿಶ್ವಮ್ ಇತ್ಯಾದಿ

"ಅಲ್ಪ" ಎಂಬುದಕ್ಕೆ ಪರ್ಯಾಯ ಶಬ್ದಗಳು—

೧ ಹ್ರಸ್ವ, ೨ ಬಭ್ರುಕ, ೩ ದಭ್ರ, ೪ ಕ್ಷುಲ್ಲಕ, ೫ ಅಲ್ಪ ಇತ್ಯಾದಿ

ಮನೆಯ ಹೆಸರುಗಳು —

೧ ಗಯ, ೨ ಕೃದರ, ೩ ಹರ್ಮ್ಯ, ೪ ದುರೋಣ, ೫ ನೀಳ, ೬ ದುರ್ಯ, ೭ ದಮ, ೮ ಕೃತ್ತಿ, ೯ ಸದ್ಮ, ೧೦ ಛದಿ, ೧೧ ಶರ್ಮ, ೧೨ ಅಜ್ಮ ಇತ್ಯಾದಿ

"ಹಳೆಯದು" ಎಂಬುದಕ್ಕೆ ಪರ್ಯಾಯ ಶಬ್ದಗಳು :—

೧ ಪ್ರತ್ನಮ್, ೨ ಪ್ರದಿವ, ೩ ಪ್ರವಯ, ೪ ಸನೇಮಿ, ೫ ಪೂರ್ವ್ಯಮ್ ಇತ್ಯಾದಿ

"ಹೊಸದು" ಎಂಬುದಕ್ಕೆ ಪರ್ಯಾಯ ಶಬ್ದಗಳು :—

೧ ನವ, ೨ ನೂತನ, ೩ ಇದಾ ಇತ್ಯಾದಿ

ನಿಜವಾಗಿ ನೋಡಿದರೆ "ನಿರುಕ್ತ"ದಲ್ಲಿ ಒಂದೊಂದು ಶಬ್ದಕ್ಕೂ ಅನೇಕಾನೇಕ ಪರ್ಯಾಯ ಶಬ್ದಗಳನ್ನು ಹೇಳಿದ್ದಾರೆ. ಆದರೆ ಅವುಗಳಲ್ಲಿಷ್ಟೋ ಆ ಕಾಲದ ಧಾರ್ಮಿಕ ಸಾಹಿತ್ಯಮಯ ಅಲಂಕಾರಿಕ ಶಬ್ದಗಳಾಗಿರುವವು. ಉದಾಹರಣಾರ್ಥವಾಗಿ, ಜನಾಂಗವಾಚಕ ಶಬ್ದಗಳೆಲ್ಲಾ ನಗರವಾಚಕ ಶಬ್ದಗಳಾಗಿವೆ. ಹೇಗೆಂದರೆ:– ನಹಶ, ವ್ರಾತ, ತುರ್ವಶ, ದ್ರುಹ್ಯು, ಆಯು, ಯದು, ಪುರು, ವಿವಸ್ವತ ಇತ್ಯಾದಿ, ಇನ್ನೂ ಕೆಲವು ಶಬ್ದಗಳು ಲೋಕವಾಚಕಗಳಾಗಿರುವವು. ಹೇಗೆಂದರೆ:– ಕೃಷ್ಟಿ, ಚರ್ಷಣಿ, ಕ್ಷಿತಿ, ಜಗತ್, ಪಂಚಜನ ಇತ್ಯಾದಿ. ಇವೆಲ್ಲಾ "ನಿರುಕ್ತ"ದಲ್ಲಿ "ಮನುಷ್ಯ"ನ ಪರ್ಯಾಯ ನಾಮಗಳಾಗಿಯೇ ಬಂದಿರುವವು.

ಇನ್ನು ಕೆಲವು ಶಬ್ದಗಳು ಇಂದು ಪರಿಚಯವೇ ಇಲ್ಲದ ಅಂದಿನ ವೈದಿಕ ರೂಪಗಳಾಗಿರುವವು. ಅವುಗಳನ್ನೆಲ್ಲಾ ವಿಶೇಷಾಭ್ಯಾಸಕರು ಮೂಲ "ನಿರುಕ್ತ" ದಲ್ಲಿಯೇ ನೋಡಿಕೊಳ್ಳಬಹುದು. (ಮೇಲಿನ ಯಾದಿಗಳಲ್ಲಿ ಅಂಥವುಗಳನ್ನೆಲ್ಲ ಬಿಟ್ಟಿದೆ.)

'ನಿರುಕ್ತ'ದಲ್ಲಿ ನೀರಿಗೆ ೧೦೧ ಹೆಸರುಗಳೂ, ನದಿಗೆ ೩೭ ಹೆಸರುಗಳೂ, ಚಲನ ವಲನಕ್ಕೆ ೧೨೦ ಹೆಸರುಗಳೂ, ಕಾರ್ಯಕ್ಕೆ ೨೬ ಹೆಸರುಗಳೂ, ಮೇಘಕ್ಕೆ ೩೦ ಶಬ್ದಗಳೂ ಹೇಳಲ್ಪಟ್ಟಿವೆ. ಆದ್ದರಿಂದ ಹೆಚ್ಚಿನ ಸಂಶೋಧಕರು ಮೂಲಗ್ರಂಥವನ್ನೇ ನೋಡಿಕೊಳ್ಳಬೇಕು.

ಶ್ರೀ ಬೇಂದ್ರೆಯವರು ಆಯಾ ಉಪಜನಾಂಗಗಳ ಶಬ್ದಗಳನ್ನೇ ಒತ್ತೊತ್ತಟ್ಟಾಗಿ ಕೂಡಿಸಲಿಕ್ಕೂ ಪ್ರಯತ್ನಿಸಿದ್ದಾರೆ. ಉದಾಹರಣಾರ್ಥವಾಗಿ :–

"ವೃ"ಗಳಿಗೆ ಸಂಬಂಧಿಸಿದ ಶಬ್ದಗಳು :–

ವರುಣ, ವಾರಿ, ವರೂಥ, ವರ್ಮ, ವ್ರಾತ, ವೃಂದ, ವೃಕ್ಷ, ವರ–ವರೇಣ್ಯ ವಾರಿಧಿ, ವೃತ–ವರ್ವರ–ಬರ್ಬರ ಇತ್ಯಾದಿ.

"ನೃ"ಗಳಿಗೆ ಸಂಬಂಧಿಸಿದ ಶಬ್ದಗಳು :–

ನರ, ನಳ, ನಡ, ನಾರಿ, ನದಿ, ನೌ, ನಕ್ರ ಇತ್ಯಾದಿ.

"ಮೃ"ಗಳಿಗೆ ಸಂಬಂಧಿಸಿದ ಶಬ್ದಗಳು :-

ಮರು, ಮೃತ್ತಿಕಾ, ಮೃದು, ಮರ್ತ್ಯ, ಮೃತ್ಯು, ಮೃಣ್, ಮೇರು, ಮೇದಿನಿ, ಮಲ್ಲ, ಮಾನ ಇತ್ಯಾದಿ.

"ಕೃ" (ಅಥವಾ ಕಳರ) ಗಳಿಗೆ ಸಂಬಂಧಿಸಿದ ಶಬ್ದಗಳು :-

ಕಾಲ, ಕಾಲಿಂದೀ, ಉತ್ + ಕಲ, ಕುಲಪರ್ವತ, ಖರ, ಉಲೂ + ಖಲ, ಕುಲ, ಕುಟುಂಬ, ಕೂಟ, ಕಲ್ (= ಕಲ್ + ಮಷ) ಕಾಳಾ + ಮುಖ ಇತ್ಯಾದಿ.

'ಪೃ" (ಅಥವಾ ಪರರ)ಗಳಿಗೆ ಸಂಬಂಧಿಸಿದ ಶಬ್ದಗಳು :-

ಪರ-ಪರಮ, ಪಾರಾವಾರ, ಪರಳು, ಪಾರ್ಶ್ವ, ಪಾರಸಿಕ, ಪಾರದ (ಪಾರಧೀ), ಪಾಲ, ಪಾರಕ (ಶೂರ + ಪಾರಕ) ಪಾರ್ಥ, ಪಾರ-ಪರಪಾರ-ಅಪರಂಪಾರ ಇತ್ಯಾದಿ.

"ತೃ"ಗಳಿಗೆ ಸಂಬಂಧಿಸಿದ ಶಬ್ದಗಳು :-

ತುರಗ, ತರು, ತೀರ, ತೀರ್ಥ ? ಇತ್ಯಾದಿ.

"ದೃ" (ಅಥವಾ ಡ್ರೂಯಿಡ್ಸ)ಗಳಿಗೆ ಸಂಬಧಿಸಿದ ಶಬ್ದಗಳು—

ದ್ರುಮ, ದ್ರುವ, ದ್ರುವ್ಯ ಇವರು ದ್ರುಮಪೂಜಕರಾಗಿದ್ದರೆಂದು ತೋರುತ್ತದೆ. Tree, ತರು, ದ್ರು-ದ್ರುಮ ? 'ಕಳರು' ಅಥವಾ 'ಕೆಲ್ಟ' ಜನಾಂಗದವರು ಇವರನ್ನು ಕುಲಗುರುಗಳೆಂದು ಪಾಲಿಸುತ್ತಿದ್ದರೆಂದು ತೋರುತ್ತದೆ; ಇತ್ಯಾದಿ ಇತ್ಯಾದಿ.

೪

ಆರ್ಯರಲ್ಲಿ ಸುಸಂಸ್ಕೃತ ಆರ್ಯರು, ಅರ್ಧಸಂಸ್ಕೃತ ಆರ್ಯರು, ಕಾಡು ಸ್ಥಿತಿಯ ಆರ್ಯರೆಂದು ಸಂಸ್ಕೃತಿಯ ಅನೇಕ ಮೇಲು ಕೆಳಗಿನ ಮೆಟ್ಟಿಲುಗಳಿದ್ದ ತಂಡಗಳಿದ್ದವು. ಈ ವಿಷಯವನ್ನು ಶ್ರೀ ಅಬಿನಾಶಚಂದ್ರ ದಾಸರವರ "ಋಗ್ವೇದಿಕ್ ಕಲ್ಚರ್" ಮತ್ತು "ವೇದಿಕ್ ಇಂಡಿಯಾ" ಎಂಬ ಗ್ರಂಥಗಳಲ್ಲಿ ಸವಿಸ್ತಾರವಾಗಿ ವಿವೇಚಿಸಲಾಗಿರುವದನ್ನು ಜಿಜ್ಞಾಸುಗಳು ಅವಲೋಕಿಸಬಹುದು:—

"The Savage Aryan tribes who were also, for similar reason, called Dashyus and Dasas by the Vedic Aryans, were mostly hunters and nomads who either roomed about or lived in mountain caves and in the deep forests from which they occasionally came out and descended upon the peaceful agricultural population who lived in the planes below and carried off their cattle and goods. The very

facts that these savage Aryan tribes existed in Sapta Sindhu, side by side with more advanced Aryan tribes''

—Rigvedic Culture, Page 47.

''It is a mistake to suppose that the worship of Lingam was a monopoly of Dravidians, and was introduced by them into northern India, and that a reference to this worship in the Rigveda (10-27-19; and 7-21-5; and 10-99-3) points to the existance of Dravidian tribes in Sapta Sindhu, when the Rigvedic hymns were composed. The phallus-worship was widely prevalent in the ancient world at one time. The Egyptians, Greeks and Romans worshipped Priapus, and the Canaanites idolatrous Jew worshipped Ball-Poer. These Gods represented the Ling Cult''.

—Rigvedic Culture, Page 164.

[ಕಾಡುಸ್ಥಿತಿಯಲ್ಲಿದ್ದದ್ದರ ಮೂಲಕ, ದಸ್ಯು, ದಾಸ ಎಂಬ ಹೆಸರಿನಿಂದ ವೈದಿಕ ಆರ್ಯರಿಂದ ಕರೆಯಲ್ಪಡುತ್ತಿದ್ದ ಕಾಡು ಆರ್ಯರ ತಂಡಗಳು ಮುಖ್ಯವಾಗಿ ಬೇಟೆಗಾರರಾಗಿದ್ದುಕೊಂಡು ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡುತ್ತ ಇಲ್ಲವೆ ದಟ್ಟವಾದ ಕಾಡುಗಳಲ್ಲಿ ಪರ್ವತ ಗುಹೆಗಳಲ್ಲಿದ್ದುಕೊಂಡು, ಒಮ್ಮೊಮ್ಮೆ ಶಾಂತ, ಕೃಷಿ ಪ್ರಧಾನ ಜನತೆ ವಾಸಮಾಡಿಕೊಂಡಿದ್ದ ಬೈಲುಪ್ರದೇಶಗಳಿಗೆ ಬಂದು ಅವರ ಮೇಲೆ ಬೀಳುತ್ತ, ಅವರ ದನ-ಕರುಗಳನ್ನೂ ಸಾಮಾನು-ಸಡಿಗಳನ್ನೂ ದೋಚಿಕೊಂಡು ಹೋಗುತ್ತಿದ್ದರು ಸಪ್ತಸಿಂಧು ಪ್ರದೇಶದಲ್ಲಿ ಹೆಚ್ಚು ಸುಧಾರಿಸಿದ ಆರ್ಯರ ತಂಡಗಳ ಜೊತೆಜೊತೆಯಲ್ಲಿಯೇ ಈ ಕಾಡು ಆರ್ಯರ ತಂಡಗಳೂ ವಾಸಿಸುತ್ತಿದ್ದವೆಂಬುದು ತೀರ ನಿಜವಾದ ಸಂಗತಿಯಾಗಿದೆ."

—ಋಗ್ವೇದ ಸಂಸ್ಕೃತಿ, ಪುಟ ೪೭

"ಲಿಂಗಪೂಜೆಯು ದ್ರಾವಿಡ ಸೊತ್ತಾಗಿದ್ದಿತೆಂದೂ ಮತ್ತು ಅವರಿಂದ ಅದು ಉತ್ತರ ಹಿಂದುಸ್ತಾನದಲ್ಲಿ ಚಾಚಲ್ಪಟ್ಟಿತೆಂದೂ, ಋಗ್ವೇದದಲ್ಲಿ ಒಂದೆಡೆ (ಮಂಡಲ ೧೦– ಸೂಕ್ತ ೨೭– ಮಂತ್ರ ೧೯; ೭–೨೧–೫; ಮಂ ೧೦–೯೯–೩) ಈ ಪೂಜೆಯ ಉಲ್ಲೇಖವಿರುವುದರಿಂದ ಸಪ್ತಸಿಂಧು ಪ್ರದೇಶದಲ್ಲಿ ಋಗ್ಮಂತ್ರಗಳ ರಚನಾಕಾಲದಲ್ಲಿ ದ್ರಾವಿಡ ತಂಡಗಳಿದ್ದದ್ದು ಸೂಚಿತವಾಗುವದೆಂದೂ ಊಹಿಸುವದು ತಪ್ಪಾಗಿದೆ. ಒಂದಾನೊಂದು ಕಾಲದಲ್ಲಿ ಲೈಂಗಿಕ ಪೂಜೆಯು ಪುರಾತನ ಜಗದಲ್ಲಿ ವಿಸ್ತಾರವಾಗಿ ಹಬ್ಬಿಕೊಂಡು ಪ್ರಮುಖವಾಗಿದ್ದುಕೊಂಡಿದ್ದಿತು. ಇಜಿಪ್ತ, ಗ್ರೀಸ್, ರೋಮ್ ಮೊದಲಾದ ದೇಶದವರು 'ಪ್ರಾಯೆಪಸ್' ಎಂಬ ಹೆಸರಿನಿಂದಲೂ

ಕಾನಾನ್ಯರೂ ಮೂರ್ತಿಪೂಜಕರಾದ ಯಹೂದಿಗಳೂ 'ಬಾಅಲ್' ಹಾಗೂ 'ಪ್ಯೋಯರ್' ಎಂಬ ಹೆಸರಿನಿಂದಲೂ ಲೈಂಗಿಕ ಪೂಜೆಯನ್ನು ಮಾಡುತ್ತಿದ್ದರು. ಈ ದೇವತೆಗಳೆಲ್ಲ ಲಿಂಗಪೂಜಾ ಸಂಪ್ರದಾಯದ ಪ್ರತೀಕಗಳು.]

—ಋಗ್ವೇದ ಸಂಸ್ಕೃತಿ, ಪುಟ-೧೬೪

ಇದರ ಮೇಲಿಂದ ಕಾಡುಸ್ಥಿತಿಯ ತಂಡಗಳೆಂದ ಕೂಡಲೆ ಅನಾರ್ಯರು ಅಥವಾ ದ್ರಾವಿಡರೆಂತಲೂ ತಾತ್ತ್ವಿಕರು ಸುಸಂಸ್ಕೃತರೂ ಆಗಿದ್ದವರಷ್ಟೇ ಆರ್ಯರಾಗಿದ್ದ ರೆಂತಲೂ ಇದುವರೆಗೆ ನಮ್ಮ ತಲೆಯಲ್ಲಿ ಮನೆಮಾಡಿಕೊಂಡಿರುವ ವಿಚಾರದಲ್ಲಿ ಅರ್ಥ ವಿಲ್ಲವೆಂದು ಸ್ಪಷ್ಟವಾಗಿ ಗೊತ್ತಾಗಿರುವದು. ಇಷ್ಟು ಅಲ್ಲದೆ ವೈದಿಕ ಆರ್ಯರಿಗೆ ವಿರೋಧಿಗಳಾಗಿದ್ದರೆಂಬ ಕಾರಣದಿಂದಲೇ ಕಾಲವೊಂದು ತಂಡದವರನ್ನು ದ್ರಾವಿಡ ರೆಂದು ಊಹಿಸುವುದೂ ಕೂಡ ಅಷ್ಟೇ ತಪ್ಪಾಗಿದೆಯೆಂದು ಶ್ರೀ ಅಬಿನಾಶಚಂದ್ರ ದಾಸರ ಗ್ರಂಥದಲ್ಲಿಯೇ ಉಕ್ತವಾಗಿರುವ ಇನ್ನು ಕೆಲವು ವಿಚಾರಗಳ ಮೇಲಿಂದ ಸ್ಪಷ್ಟವಾಗುತ್ತದೆ. ಉದಾಹರಣಾರ್ಥವಾಗಿ– 'ಇರಾಣದ ಆರ್ಯರು ಇಂದ್ರಪೂಜಕ ರಾಗಿರಲಿಲ್ಲ. ಅವರು ಕೇವಲ ಅಗ್ನಿಪೂಜಕರಾಗಿದ್ದರು. ವೇದದಲ್ಲಿ ಅತ್ಯಂತ ಪೂಜ್ಯ ಭಾವದಿಂದ ಕಾಣುತ್ತಿದ್ದ 'ದೇವ' ಮತ್ತು 'ಕವಿ' ಎಂಬ ಶಬ್ದಗಳನ್ನು ಇರಾಣೀ ಆರ್ಯರು ಅತ್ಯಂತವಾಗಿ ದ್ವೇಷಿಸುತ್ತಿದ್ದರಲ್ಲದೆ ಅವುಗಳನ್ನು 'ಅಸುರ' ಹಾಗೂ 'ಅಸುರಪೂಜಕ' ಎಂಬ ವಿಪರೀತಾರ್ಥದಲ್ಲಿ ಉಪಯೋಗಿಸುತ್ತಿದ್ದರು. ವೈದಿಕರ 'ಅಸುರ' ಎಂಬ ಶಬ್ದವನ್ನು ತಾವು 'ದೇವ' ಎಂಬರ್ಥದಲ್ಲಿ (ಅಹುರ್‌ಮಜ್ದಾ = ಅಸುರಮಹಾನ್ = ಪರಮೇಶ್ವರ) ಉಪಯೋಗಿಸುತ್ತಿದ್ದರು. (ಅಸು = ಪ್ರಾಣ = ಬಲ, ಅಸುರ = ಸಮರ್ಥ, ಅಹುರ್‌ಮಜ್ದಾ = ಮಹಾಸಮರ್ಥ=ಸರ್ವಸಮರ್ಥ = ಪರಮೇಶ್ವರ) ಆದರೂ ಅವರು ಆರ್ಯರೇ ಆಗಿದ್ದರು.

ವೇದದಲ್ಲಿ ಆರ್ಯರು ತಮ್ಮ ಶತ್ರುಗಳಿಗೆ ಹಲವೆಡೆಗಳಲ್ಲಿ 'ಅನಿಂದ್ರರು, ನಿರಿಂದ್ರರು' ಎಂದು, ಅಂದರೆ ಇಂದ್ರಪೂಜಕರಲ್ಲದವರು ಎಂದು ಹೇಳಿದ್ದುಂಟು. ಹೀಗೆಂದ ಕೂಡಲೆ ಅಂಥವರೆಲ್ಲ ಅನಾರ್ಯರು ಅಥವಾ ದ್ರಾವಿಡರೇ ಆಗಿದ್ದರೆಂದು ತಿಳಿದುಕೊಳ್ಳುವುದು ತಪ್ಪೆಂದು ಮೇಲೆ ಹೇಳಿದ ಇರಾಣೀ ಆರ್ಯರ (ಪಾರ್ಸಿಗಳ) ಉದಾಹರಣೆಯಿಂದ ಸಿದ್ಧವಾಗುವದಿಲ್ಲವೆ ?

ಯುರೋಪದಲ್ಲಿ ಅಯರ್ಲಂಡ್, ವೇಲ್ಸ್ ಮುಂತಾದ ಕಡೆಯಲ್ಲಿದ್ದ 'ಕೆಲ್ಟ' ಜನಾಂಗದವರನ್ನು ದಿವಂಗತ ಮಹಾಮಹೋಪಾಧ್ಯಾಯರಾದ ಶ್ರೀ ಆರ್. ನರಸಿಂಹಾಚಾರ್ಯರಂಥ ಮಹಾವಿದ್ವಾಂಸರು ತಮ್ಮ ಗ್ರಂಥದಲ್ಲಿ ಒಂದೆಡೆ "ಅನಾರ್ಯ ತಂಡ"ದವರೆಂದು (ನಾನ್ ಆರ್ಯನ್ - ಟ್ರಾಯಿಬ್) ಅಂದಿದ್ದಾರೆ. ಆದರೆ ಅವರು ಆರ್ಯರ ತಂಡದವರೇ ಹೌದೆಂದು ಸರ್ವಭಾಷಾಶಾಸ್ತ್ರಜ್ಞರು ಒಪ್ಪಿಕೊಂಡಿದ್ದಾರೆ.

ಕಾಲ್ಡ್‌ವೆಲ್, ಪೋಪ, ಕಿಟ್ಟೆಲ್ ಮೊದಲಾದ ಭಾಷಾಶಾಸ್ತ್ರಜ್ಞರು ದ್ರಾವಿಡ ಭಾಷೆಗಳಲ್ಲಿ ಆರ್ಯ ಹಾಗೂ ಸಿಥಿಯನ್ (ತುರೇನಿಯನ್) ಮತ್ತು ಇಂಡೋ–ಯುರೋಪಿಯನ್ ಭಾಷಾ ವೈಶಿಷ್ಟ್ಯಗಳ ಸಾದೃಶ್ಯವನ್ನು (ಶಬ್ದ ಸಾದೃಶ್ಯವನ್ನು) ತೋರಿಸಿಕೊಟ್ಟ ಮೇಲೆ ಅಮೇರಿಕೆಯ ಭಾಷಾಶಾಸ್ತ್ರ ಸಂಶೋಧನ ಮಂಡಲದವರು ಇದಕ್ಕೆ ನಿರ್ಣಯಕೊಟ್ಟು ತಮ್ಮ ಅಸಮ್ಮತಿಯನ್ನು ಸೂಚಿಸುವಾಗ "ಈ ಜನಾಂಗ ದವರು ಸಂಸ್ಕೃತಿಯಲ್ಲಿ ಅಷ್ಟೊಂದು ಮೇಲ್ಮಟ್ಟಕ್ಕೆ ಹೋಗಿರಲಿಲ್ಲ" ಎಂಬ ಪ್ರಮುಖ ಕಾರಣವನ್ನು ಮುಖ್ಯವಾಗಿ ಮುಂದೊಡ್ಡಿದ್ದಾರೆ. (ಶಬ್ದಸಾದೃಶ್ಯವಿದ್ದರೇನಾಯಿತು? ಭಾಷಾ ವೈಶಿಷ್ಟ್ಯದ ಸರ್ವಸಾದೃಶ್ಯಗಳಿರಬೇಕು ಎಂಬ ಪರಂಪರಾಗತ ಪಲ್ಲವಿಯನ್ನು ಅವರ ಜೊತೆಗೆ ಹಾಡಿದ್ದಾರೆ). ಆದರೆ ಸಂಸ್ಕೃತಿಯು ಯಾವಾಗಲೂ ಒಂದೇ ಮಟ್ಟ ದಲ್ಲಿ ಉಳಿದುಕೊಂಡಿರಲಾರದೆಂಬುದು ನೆನಪಿನಲ್ಲಿಡಬೇಕಾದ ಮಾತಾಗಿದೆ. ಇಂದಿನ ಅನೇಕ ಕಾಡು ಜನ ತಂಡಗಳು, ಹಿಂದೊಂದು ಕಾಲದಲ್ಲಿ ಸಂಸ್ಕೃತಿಯ ಅತ್ಯುಚ್ಚ ಶಿಖರಕ್ಕೆ ಮುಟ್ಟಿದ್ದ ಜನಾಂಗಗಳ ಅವಶೇಷಗಳಾಗಿವೆಯೆಂದು ಶ್ರೀ ಅರವಿಂದರು ತಮ್ಮ ಮಾನವಚಕ್ರ (Human Cycle) ಎಂಬ ಗ್ರಂಥದಲ್ಲಿ ನಿರೂಪಿಸಿದ್ದಾರೆ. (ಶಬ್ದಸಾದೃಶ್ಯವಾದರೂ ಅತಿ ದೂರದ ಭಾಷೆಗಳಲ್ಲಿ ಹೀಗೆ ಹೇರಳವಾಗಿ ಏಕೆ ಕೂಡ ಬೇಕೆಂಬ ಪ್ರಶ್ನವೂ ಇದರ ಜೊತೆಗೆ ಇದ್ದೇ ಇದೆ. ಇರಲಿ).

ಆದ್ದರಿಂದ ಕಾಡು ಸ್ಥಿತಿಯಲ್ಲಿದ್ದವರು 'ಸುಧಾರಣೆಯ ಮೇಲ್ಮಟ್ಟದಲ್ಲಿದ್ದವರು' ಎಂಬ ಕಾರಣದಿಂದ ಯಾವದೊಂದು ತಂಡದವರನ್ನು 'ಆರ್ಯರು' 'ಅನಾರ್ಯರು' ಎಂದು ಹೇಳಲಿಕ್ಕೆ ಬರುವದಿಲ್ಲವೆಂಬ ಮಾತು ಮೇಲ್ಕಾಣಿಸಿದ ಉದಾಹರಣೆಗಳಿಂದ ಸ್ಪಷ್ಟವಾದಂತಾಯಿತು. ಅಲ್ಲದೆ ಆರ್ಯರಲ್ಲಿಯೇ ಪೂರ್ಣ ಸುಸಂಸ್ಕೃತರು, ಅರ್ಧ ಸುಸಂಸ್ಕೃತರು, ಕಾಡುಸ್ಥಿತಿಯಲ್ಲಿದ್ದವರು ಎಂದು ಅನೇಕ ಪ್ರಕಾರದ ತಂಡಗಳಿದ್ದ ವೆಂದು ಶ್ರೀ ಅಬಿನಾಶಚಂದ್ರ ದಾಸರು ತಮ್ಮ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

ಇದರ ಮೇಲಿಂದ ದ್ರಾವಿಡರೆಂಬವರು ಆರ್ಯರಲ್ಲದ ಯಾವುದೋ ಒಂದು ಭಿನ್ನಜನಾಂಗದವರೆಂದು ಊಹಿಸದೆ ಆರ್ಯದೊಳಗಿನದೇ ಒಂದು ಉಪತಂಡದವ ರಾಗಿದ್ದರೆಂದು ಗ್ರಹಿಸುವದಕ್ಕೆ ಮೇಲ್ಕಾಣಿಸಿದ ಯಾವ ಅಡ್ಡಿ ಅಡಚಣೆಗಳೂ ಅಡ್ಡ ಬರಲಿಕ್ಕೆ ಕಾರಣವಿಲ್ಲೆಂದು ಇದುವರೆಗಿನ ವಿವರಣೆಯಿಂದ ಸಿದ್ಧವಾಗುವದಿಲ್ಲವೆ ? ಶ್ರೀ ಬೇಂದ್ರೆಯವರ ಗ್ರಹಿಕೆಯಾದರೂ ಹೀಗೆಯೇ ಇದೆ. ಇಷ್ಟೇ ಏಕೆ ? ಸ್ವಯಂ ಶ್ರೀ ಅರವಿಂದರ ಸಿದ್ಧಾಂತವೇ ಹೀಗಿದೆಯೆಂಬ ಮಾತನ್ನು ಅವರ 'ವೇದರಹಸ್ಯ' (Secret of the Veda) ಎಂಬ ಗ್ರಂಥವನ್ನೋದಿದವರೆಲ್ಲ ಬಲ್ಲರು. ಈ ವಿಷಯ ವನ್ನು ನಾನು ನನ್ನ "ಆರ್ಯದ್ರಾವಿಡ ಭಾಷಾಸಮನ್ವಯ" ಎಂಬ ಲೇಖನದಲ್ಲಿ ('ಜೀವನ' ಪತ್ರಿಕೆಯಲ್ಲಿ) ನಿರ್ದೇಶಿಸಿದ್ದೇನೆ.

ನಾವು ಈಗ ಯಾರಿಗೆ ದ್ರಾವಿಡರೆಂದು ಅನ್ನುವೆವೋ ಆ ಜನಾಂಗವು ಆರ್ಯರೊಳಗಿನ ಯಾವ ಮೂಲ ಉಪಜನಾಂಗಕ್ಕೆ ಸಂಬಂಧಿಸಿದ್ದಾಗಿರಬಹುದು ? ಎಂಬ ಪ್ರಶ್ನವು ಇದ್ದೇ ಇದೆ. "ಕೃ" ಅಥವಾ "ಕೆಲ್ಟ್" ಜನಾಂಗದವರಿಗೆ ಪುರಾತನ ಕಾಲದಲ್ಲಿ "ಡ್ರೂಯಿಡ್ಸ್" ಎಂಬ ಬೇರೊಂದು ಹೆಸರೂ ಇದ್ದಿತೆಂಬುದನ್ನು ಯುರೋಪದ ಇತಿಹಾಸವನ್ನರಿತವರೆಲ್ಲರೂ ಬಲ್ಲರು. ಅವರು ಊರ ಹೊರಗೆ ಪೊರಡಿಗಳ ಮೇಲೆ ಉದ್ದುದ್ದ ಕಲ್ಲುಗಳನ್ನು ಚಕ್ರಾಕಾರವಾಗಿ ನಿಲ್ಲಿಸಿ (ನಡಿಸಿ) ಅಲ್ಲಿ ಸೂರ್ಯೋಪಾಸನೆಯನ್ನು ಮಾಡುತ್ತಿದ್ದರೆಂಬುದರ ಅವಶೇಷಗಳು ಇಂದಿಗೂ ಸಿಕ್ಕುವವೆಂಬುದು ಸರ್ವರಿಗೂ ಗೊತ್ತಿದ್ದ ಮಾತು. ಇದು ಇತಿಹಾಸ ಕಾಲದ ಮಾತಾಯಿತು. ಆದರೆ ಇದಕ್ಕಿಂತ ಇತಿಹಾಸ ಪುರಾತನ ಕಾಲದಲ್ಲಿ ಇವರು ಗಿಡಮರಗಳನ್ನು ಪೂಜಿಸುವವರಾಗಿರಬಹುದೆಂದು (ದ್ರುಮಪೂಜಕರು) ಶ್ರೀ ಬೇಂದ್ರೆಯವರ ಊಹೆಯಿದೆ. ಇಂದಿಗೂ ಹಲಕೆಲವು ಜ್ಯೋತಿಷಿಗಳಲ್ಲಿ, ಪ್ರತಿಯೊಂದು ನಕ್ಷತ್ರಕ್ಕೆ ಒಂದೊಂದು ಪ್ರಕಾರದ ವೃಕ್ಷದ ಸಂಬಂಧವಿದ್ದಿತೆಂಬ ಜ್ಞಾನದ ಅವಶೇಷವು ಉಳಿದುಕೊಂಡು ಬಂದಿದೆ. ಸೊಲ್ಲಾಪುರದ ಶ್ರೀ ದಾತೆ ಎಂಬವರ ಸುಪ್ರಸಿದ್ಧವಾದ ಪಂಚಾಂಗದಲ್ಲಿ ಈ ೨೭ ನಕ್ಷತ್ರಗಳಿಗೆ ಸಂಬಂಧಿಸಿದ ಬೇರೆ ಬೇರೆ ೨೭ ವೃಕ್ಷಗಳ ಪಟ್ಟಿಯೊಂದು ಸಿಗುತ್ತದೆ. ತುಳಸೀ ಗಿಡ, ಬಿಲ್ವಪತ್ರದ ಮರ. ಅರಳೀಗಿಡ. ಬಸರೀಗಿಡ, ಬನ್ನೀಮರ, ಬೇವಿನಗಿಡ ಮೊದಲಾದ ವೃಕ್ಷಗಳನ್ನು ಬೇರೆ ಬೇರೆ ಧರ್ಮದವರು ಬೇರೆ ಬೇರೆ ದೇವತಾ ಸಂಪ್ರದಾಯದವರೂ ಪವಿತ್ರವಾಗಿ ಭಾವಿಸುತ್ತಾರೆಂಬುದು ಸರ್ವರಿಗೆ ತಿಳಿದ ಮಾತು. ಮುಂದೆ ಇವರು ನಾಗಪೂಜಕರೂ ಆದರು. ಅದರ ಕಾರಣವನ್ನು ಮುಂದಿನ ವಿಷಯದ ಕೊನೆಯಲ್ಲಿ ಹೇಳಲಾಗುವದು.

ಈ ರೀತಿಯಿಂದ ದಕ್ಷಿಣಹಿಂದುಸ್ಥಾನದ ಕೆಲವು ದೇಶವಾಚಕ, ಅಧಿಕಾರವಾಚಕ, ರಾಜವಂಶವಾಚಕ ಶಬ್ದಗಳ ಮೂಲಧ್ವನಿಯನ್ನು ಶ್ರೀ ಬೇಂದ್ರೆಯವರು ಹೀಗೆ ಹೊರಡಿಸಲಿಕ್ಕೆ ಪ್ರಯತ್ನಿಸಿದ್ದಾರೆ, ಅದು ಹೇಗೆಂದರೆ :

"ಕೃ"ಗಳು ಅಥವಾ "ಕಳ"ರು ಮತ್ತು + "ನೃ"ಗಳು ಅಥವಾ "ನರ"ರು ("ನಳ"ರು, "ನಡ"ರು, "ನಾಟ"ರು) ಸೇರಿ="ಕರನಾಟ"ರು ಅಥವಾ "ಕರ್ನಾಟಕ"ರು.

"ಕುಳ"ರು=ಕೌಳರು, ಗೌಡರು, ಕುಳುಂಬಿಗಳು, ಕುಟುಂಬಿಗಳು, ಕುರುಂಬರು, ಕೇರಳರು, ಚೇರರು

"ಚುಳಿಕ"ರು=ಚುಟುನಾಗರು, ಚೂಳಿಕಾ ಪೈಶಾಚಿ ಭಾಷೆಯನ್ನಾಡುವವರು ಚೋಳರು. ಚಾಳುಕ್ಯರು 'ಸೋಲಿಗ' ಎಂಬ ಕಾಡುಜಾತಿಯವರು.

"ಬಂಟ"ರು=ಬಂಟೂ ಜನರು "ಪಾಂಡ್ಯ"ರು ಪಾಂಚಾಲರು, ಪಂತುಲೀ ಭಾಷೆಯನ್ನಾಡುವವರು, ಪಂತುಪರಾಳೀ ರಾಗದ ಮೂಲಸ್ಥಾನದವರು.

'ಕೀರ"ರು=ಕೇರಳ ಪರ್ಯಾಯರಾದ ಆಂಧ್ರರು, 'ಆಂಧ್ರಾಃ ಕೇರಳ ಪರ್ಯಾಯಾಃ'. "ಸೇನ ಬೋವ"=ಸೇನರು+ಭೋಜರು ಇವರ ಅಧಿಕಾರಿ.

"ಗ್ರಾಮುಂಡ"=ಗ್ರಾಮ+ಮುಂಡ; ಮುಂಡ=ಮುಂಡ ಎಂಬ ಜನಾಂಗಕ್ಕೆ ಸಂಬಂಧಿಸಿದವರು ಗ್ರಾಮುಂಡರು, ಗಾವುಂಡರು, ಗೌಡರು.

"ನಾಡಿಗೇರ"=ನಾಟ+ ಮತ್ತು ಕೇರಳದ ಅಧಿಕಾರಿ.

"ದೇಶಪಾಂಡೆ"=ದೇಶ+ಪಾಂಡ್ಯ, ಪಾಂಡ್ಯರಿಗೆ ಸಂಬಂಧಿಸಿದ ಅಧಿಕಾರಿ.

"ದೇಸಾಯಿ"=ದೇಶ+ಶಾಹಿ, ಶಾಹಿ ಬಾದಶಹರಿಗೆ ಸಂಬಂಧಿಸಿದ ಅಧಿಕಾರಿ.

"ಪಟೇಲ"=ಪೃತನಿಕರು ಪದಿಗಳು=ಜಾನಪದಿಕರು, ಪೇಟನಿಕರು.

"ಕುಳಕರ್ಣಿ"=ಕುಳರು+ಮತ್ತು ಕರ್ಣರು ಇವರಿಗೆ ಸಂಬಂಧಿಸಿದ ಅಧಿಕಾರಿ (ಶಾತಕರ್ಣಿ, ಕರ್ಣಿ ?)

"ಸೇಣಿ"=ಸೇನಾವಾಹಿ, ಸೇನೆಯ ಮುಖ್ಯಸ್ಥ.

"ನಾರಳ+ಕೇರಳ" = ನಾರಿಕೇಳ, ನಾಳಿಕೇಶ, ತೆಂಗು, ತೆಂಗು ಬೆಳೆಯುವ ದೇಶ.

"ಶೂರ+ಪಾರಕ" ದೇಶ=ಸುಪಾರಕ, ಸುಪಾರಿ, ಅಡಕೆ, ಅಡಕೆ ಬೆಳೆಯುವ ದೇಶ.

"ನಾಗ ಪೂಜಕರು" = ದ್ರಾವಿಡರು, ನಾಗ=ಸೀಸ ಎಂಬ ಧಾತು (ನಾಗಭಸ್ಮ=ಸೀಸದ ಭಸ್ಮ) ಸೀಸಿನ ಕಣಿಗಳಿದ್ದ ಪ್ರದೇಶ, ಸೀಸಿಗೆ ಸಂಬಂಧಿಸಿದ 'ನಾಗ' ಶಬ್ದದ ಸಂಕೇತರೂಪವಾಗಿ ನಾಗರಹಾವಿಗೆ ಮಹತ್ವ ಬಂದ ದೇಶ. ನಾಗರಪಂಚಮಿಯು ಕಾಲಕ್ಕೆ ನಾಗನನ್ನು ಪೂಜಿಸುವ ರೂಢಿ ಮುಖ್ಯವಾಗಿ ದ್ರಾವಿಡ ಪ್ರದೇಶಗಳಲ್ಲಿದೆ.

೫

ಇದು ಶ್ರೀ ಬೇಂದ್ರೆಯವರ ಭಾಷಾಶಾಸ್ತ್ರ ವಿಚಾರದ ರೂಪರೇಷೆಯೇ ಆದಂತಾಯಿತು. ಸಂಪೂರ್ಣ ಸಿದ್ಧಾಂತವನ್ನು ಸರ್ವಾಂಗ-ಸಂಪೂರ್ಣವಾಗಿ ಮಂಡಿಸಿ ದಂತಾಗಲಿಲ್ಲ. ಆ ಕೆಲಸವನ್ನು ಅವರೇ ಸ್ವತಃ ಮಾಡುವವರಿದ್ದಾರೆ. ಅದಕ್ಕೆ ಇದು ಪೂರ್ವಸೂಚನೆಯಿದ್ದಂತೆ ಮಾತ್ರವೇ ಸರಿ. ಸಂಸ್ಕೃತದೊಳಗಿನ ಏಕಾರ್ಥವಾಚಕ ಭಿನ್ನ ಭಿನ್ನ ಶಬ್ದಗಳನ್ನು ಹೀಗೆ ವರ್ಗೀಕರಿಸಿ ಆಯಾ ಉಪತಂಡಗಳ ಇಂದಿನ ಭಾಷಾರೂಪಗಳಲ್ಲಿ ಆ ಶಬ್ದಗಳ ಅಸ್ತಿತ್ವವನ್ನು ತೋರಿಸಿಕೊಟ್ಟಾಗ ಈ ಕೆಲಸವು ಪೂರ್ಣವಾದಂತಾಗುವದು. ಅಲ್ಲದೆ ಇನ್ನೂ ಅನೇಕ ವ್ಯವಹಾರಿಕ ಶಬ್ದಗಳ ಏಕಾರ್ಥವಾಚಕ ಪರ್ಯಾಯಶಬ್ದಗಳನ್ನು ಆಯಾ ವರ್ಗಗಳಿಗೆ ಹೊಂದಿಸಿ ತೋರಿಸಿ ವಿಷಯವು ಸಂಪೂರ್ಣ ಮನದಟ್ಟಾಗುವಂತೆ ಮಾಡುವ ಕೆಲಸವೂ ಇನ್ನೂ ಉಳಿದಂತಾಗಿದೆ. ಇದರ ಭಾಂಡಾರವು ಬೇಂದ್ರೆಯವರಲ್ಲಿ ಬೇಕಾದಷ್ಟಿದೆ. ನೂರಾರು

ಶಬ್ದಗಳನ್ನು ಅವರು ಹೀಗೆ ಹೊಂದಿಸಿ ತೋರಿಸುತ್ತಾರೆ. ನಾನು ಕಿವಿಯಿಂದ ಕೇಳಿದ ಮಟ್ಟಿಗೆ ಸಾರಾಂಶರೂಪವಾಗಿ ಈ ಲೇಖನವನ್ನು ಬರೆದಿದ್ದೇನೆ. ಶ್ರೀ ಬೇಂದ್ರೆಯವರ ಈ ಸುಶೋಧನದಿಂದ ಯುರೋಪಿಯನ್ ಆರ್ಯರು, ಪಶ್ಚಿಮ ಏಶಿಯದ ಆರ್ಯರು, ಮಧ್ಯ ಏಶಿಯಾದ ಆರ್ಯರು, ಉತ್ತರ ಹಿಂದುಸ್ತಾನದ ಆರ್ಯರು, ದಕ್ಷಿಣ ಹಿಂದುಸ್ತಾನದ ಆರ್ಯರು ಮೊದಲಾದ ಉಪಖಂಡದವರ ಅರ್ಥಾತ್ 'ಲ್ಯಾಟಿನ್' ಆರ್ಯರು, ಗ್ರೀಕ ಆರ್ಯರು, ಟ್ಯುಟಾನಿಕ್ ಆರ್ಯರು, ಕೆಲ್ಟಿಕ್ ಆರ್ಯರು, ಸ್ಲ್ಯಾವ್ಹೊನಿಕ್ ಆರ್ಯರು, ಸುಮೇರಿಯನ್ ಆರ್ಯರು, ಇರಾಣಿಯನ್ ಆರ್ಯರು, ಸಿಥಿಯನ್ ಅಥವಾ ದ್ರಾವಿಡ ಆರ್ಯರು, ಸಂಸ್ಕೃತ ಆರ್ಯರು, ಇವರೇ ಮೊದಲಾದ ಬೇರೆ ಬೇರೆ ಉಪತಂಡದವರ ಮೂಲ ಸಂಸ್ಕೃತ ಸದೃಶ ಉಪಭಾಷೆಗಳ ಹಾಗೂ ಆಯಾ ಸಂಸ್ಕೃತಿ ವೈಶಿಷ್ಟ್ಯಗಳ ಸ್ವರೂಪವನ್ನು ಕಂಡು ಹಿಡಿಯಲಿಕ್ಕೆ ಸಾಧ್ಯವಾಗುವುದು. ಈ ವಿಷಯದಲ್ಲಿ ಒಂದು ಪುಸ್ತಕವನ್ನೇ ಬರೆಯೋಣವೆಂದು ಶ್ರೀ ಬೇಂದ್ರೆಯವರು ಅಂದಿದ್ದಾರೆ. ಅದ್ದರಿಂದ ಕನ್ನಡ ನಾಡಿಗೆ ಇದೊಂದು ಮಹಾ ಅಲಂಕಾರ ಸದೃಶ ಕಾರ್ಯವೇ ಆಗುವುದು. ಇಂಥ ಗಹನ ವಿಚಾರಗಳು ಜಾಗತಿಕ ವಾಙ್ಮಯಗಳಲ್ಲಿ ಬೇಕಾದಷ್ಟು ಪ್ರಕಟವಾಗುತ್ತಿರುತ್ತವೆ. ಇಂಥ ವಿಷಯಕ್ಕೇ ಮೀಸಲಾಗಿಟ್ಟ ನಿಯತಕಾಲಿಕೆಗಳು ಆ ಭಾಷೆಗಳಲ್ಲಿ ಎಷ್ಟೆಷ್ಟೋ ಇವೆ. ಆದರೆ ಪ್ರಾಂತೀಯ ಭಾಷೆಗಳಲ್ಲಿ ಇಂಥ ವಿಷಯಗಳು ಪ್ರಕಟವಾಗುತ್ತಿರುವುದು ತೀರ ಕಡಿಮೆ. ಅಥವಾ ಇಲ್ಲವೇ ಇಲ್ಲವೆಂದರೂ ಅತಿಶಯೋಕ್ತಿಯಾಗಲಾರದು. ಉದಾಹರಣಾರ್ಥವಾಗಿ "ಪೆಲಿಯೋಗ್ರಾಫಿ" (ಪುರಾತನ ಲಿಪಿಶಾಸ್ತ್ರ)ಯ ವಿಷಯದಲ್ಲಿ ಇಂಗ್ಲೀಷಿನಲ್ಲಿ ಬೇಕಾದಷ್ಟು ಮಹಾಗ್ರಂಥಗಳಿವೆ. ದೇಶೀಯ ಭಾಷೆಗಳಲ್ಲಿ ಹಿಂದಿಯೊಂದರ ಹೊರತು ಇನ್ನಾವುದರಲ್ಲಿಯೂ ಈ ಬಗೆಗೆ ಉದ್ಗ್ರಂಥಗಳಿಲ್ಲ. ಸ್ವತಂತ್ರವಾಗಿ ಇಂಥ ವಿಷಯವನ್ನೇ ಚರ್ಚಿಸುವ ನಿಯತಕಾಲಿಕ ಪತ್ರಿಕೆಗಳಂತೂ ದೇಶಭಾಷೆಗಳಲ್ಲಿ ಇನ್ನೂ ಕಡಿಮೆಯೇ ಸರಿ.

ಆದರೆ ಈಗೀಗ ಪ್ರಾಂತೀಯ ಭಾಷೆಗಳಲ್ಲಿ ಇಂಥ ಗಹನ ವಿಷಯಗಳ ಚರ್ಚೆ ಆರಂಭವಾಗುವ ಲಕ್ಷಣಗಳು ಅಲ್ಲಲ್ಲಿ ಕಾಣುತ್ತವೆ. ಇದು ಪ್ರಾಂತಿಕ ಜೀವನದ ಮುಂಬರುವ ಮಹಾವಿರಾಟ ಸ್ವರೂಪದ ದಿಗ್ದರ್ಶನವನ್ನೇ ಮೂಡಿಸುತ್ತಿದೆಯೆಂದು ಭಾವಿಸುವಂತಿದೆ. ತಮ್ಮ ಇಡೀ ರಾಷ್ಟ್ರಕ್ಕೆ ಸಂಬಂಧಿಸಿದ ವಿಷಯಗಳನ್ನಲ್ಲದೆ ಸಮಸ್ತ ಮಾನವ ಕೋಟಿಗೇ ಸಂಬಂಧಿಸಿದ ವಿಷಯಗಳನ್ನು ಎಷ್ಟು ಹೆಚ್ಚೆಚ್ಚಾಗಿ ಪ್ರಾಂತೀಯ ಭಾಷೆಗಳು ಚರ್ಚಿಸುವವೋ ಅಷ್ಟು ಹೆಚ್ಚೆಚ್ಚಾಗಿ ಅವು ಜಾಗತಿಕ ಜೀವನದ ಮಹಾಪ್ರವಾಹದಲ್ಲಿ ಘನತೆಯಿಂದ ಸಹಕರಿಸುವ ಯೋಗ್ಯ ಪದವಿಗೆ ಮುಟ್ಟುವವು. "ಬಿಡಿಯನ್ನು ಅರಿಯಬೇಕಾದರೆ ಇಡಿಯದನ್ನು ಅರಿಯಬೇಕು. ಕೆಳಗಿನದನ್ನು ಅರಿಯಬೇಕಾದರೆ ಮೇಲಿನದನ್ನು ಅರಿಯಬೇಕು. "You must know the whole before you can know the part and the highest before you

can truly understand the lower" ಎಂದು ಶ್ರೀ ಅರವಿಂದರು ನಿರೂಪಿಸಿದ ಮಹಾವಾಕ್ಯದ ಅರ್ಥವೇ ಇದಾಗಿದೆ. ಪ್ರಾಂತೀಯರಾದವರು ರಾಷ್ಟ್ರೀಯರೆಂಬ ಹಿರಿಹೆಸರಿಗೆ ಪಾತ್ರರಾಗಬೇಕಾದರೆ "ಜಾಗತಿಕ"ವೆಂಬ ಮಹಾಪರಿಘದ ಸರ್ವಾಂಗಗಳ ಪರಿಚಯವುಳ್ಳವರಾಗಬೇಕಾಗುವದೆಂಬ ಮಾತಿನಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಇದೇ ಇಂದಿನ ಯುಗಧರ್ಮ. ನಾವೀ ಗುರಿಯನ್ನು ಎಷ್ಟು ಸಾಧಿಸಿದರೆ ಅಷ್ಟು ಪ್ರಗತಿ ಹೊಂದುವೆವು. ಆದ್ದರಿಂದ ಹಿರಿ ವಿಷಯಗಳ ಅಧ್ಯಯನದ ಕಡೆಗೆ ನಾವಿನ್ನು ಸರ್ವಾಂಗೀಣವಾಗಿ ಪ್ರಯತ್ನಿಸುವುದು ಆವಶ್ಯಕವಾಗಿದೆ. ಇಂಥ ಪ್ರಯತ್ನಗಳಲ್ಲಿ ಈ ಚರ್ಚೆಯೂ ಒಂದು.

## ಪರಿಶಿಷ್ಟ

"The Boghaskoi (Turkish village) records contain another big surprise. The Hiftic rulers (conquerers of Hammurabbi dynasty of Babilonia) called themselves Maryani (Vedic Marya = Man). They worshipped In-da-ra, Mi-it-ra, M-ru-wana and Na-sa-at-tiyas which are just the names of the Rigvedic gods Indra, Mitra, Varuna and the two Ashwins......"

—An Introduction to Comparative Philology (Appendix 1 Page 16) by Dr. P. D. Gune, M.A.Ph.D.

"In the Hittile-Mittani (above the Hittile country) treaty between Subandhu son of Tushrata and Suttarna son of Artatama the Gods having names similar to the Vedic gods Agni, Indra, Teshub were witnesses; their chariots were of aik-vartanna, tera-vartanna, panza-vartanna and shahat-vartanna turnings"

—An Introduction to Comparative Philology (Appendix 1 Page 17) br Dr. P. D. Gune

"Mitanni kings in the treaty are obviously Aryan : Dushratta, Artasamara and Subandhu"

—An Introduction to Comparative Philology (Appendix 11 Page 27) by Dr. P. D. Gune

'ನಡೆದುಬಂದ ದಾರಿ' ಸಂ. ೩ – ೧೯೬೧

# ಹಳ್ಳಿಯ ಹಾಡುಗಳು

---

## ಕನ್ನಡ ಕಂದವ್ವನ ಲಾಲಿ

ಒರ್ವ ತಾಯಿಯು ತನ್ನ ಕೂಸಿನ ತೊಟ್ಟಿಲವ
ಕೈಯಿಂದ ತೂಗಂತಿಹಳೋ ।
ಪೂರ್ವಪಶ್ಚಿಮ ಘಟ್ಟದಲ್ಲಿ ಪಟ್ಟಿರುವಂಥ
ನಾಡನ್ನೆ ನೂಗುತಿಹಳೋ ॥ ಪ ॥
ನೆಟ್ಟು ನಾಟಿಸುವಂಥ ಮೆಚ್ಚುಮಾಟವ ಮಾಳ್ಪ
ಮೊಗವುಳ್ಳ ಮಗಳೆ ಜೋ ಜೋ ।
ಹುಚ್ಚು ಹಿಡಿಸುವ ಕಣ್ಣು ಮಂಚ್ಚಿದರೆ ನಗೆಯುಳ್ಳ
ನನ್ನ ಎದೆ ಮುಗುಳೆ ಜೋ ಜೋ ॥೧॥
ನಿನ್ನ ತಳಿ ಬಳೆಯಲೌ ಹಳ್ಳಿ ಹಳ್ಳಿಗೆ ಕರಿಕೆ
ಕಳ್ಳಿಯೊಲು ಕಂದ ಜೋ ಜೋ ।
ನಿನ್ನ ಹೊಳೆ ಹರಿಯಲೌ ಕೊಳ್ಳ ಕೊಳ್ಳಗಳಲ್ಲಿ
ತಾವರೆಯಬಳ್ಳಿ ಜೋ ಜೋ ॥ ೨ ॥
ಮುಗಿಲಿನೊಳಂ ತೊಟ್ಟಿಲವ ಕಟ್ಟಿಸುವೆ ಹೊಟ್ಟೆಯಲಿ
ಹುಟ್ಟಿಬಂದವ್ವ ಜೋ ಜೋ ।
ಹಗಲು ನಸುಕಿನ ಬಸುರಿನಿಂದ ಮೂಡವ ತೆರದೆ
ನನ್ನ ಕಂದವ್ವ ಜೋ ಜೋ ॥ ೩ ॥

ಎಂದು ಹಾಡಿ ಹರಸಿದ ಕಾವ್ಯಯೋಗಿಯ ಹರಕೆಯು ಕೈಗೂಡಲಿ ! ಹಳ್ಳಿ ಹಳ್ಳಿಗೂ ಕನ್ನಡ ಕಂದವ್ವನ ತಳಿಯು ಬೆಳೆಯಲಿ ! ಅದುವೆ ನಮ್ಮ ಹೆಚ್ಚಳ; ಅದುವೆ ನಮ್ಮ ಕನ್ನಡ ಕಂದವ್ವನ ನಿಚ್ಚಳವಾದ ಹೆಚ್ಚಳ. ಹೆಚ್ಚಳವು ನಿಚ್ಚಳವಾಗಲಿ; ಕತ್ತಲೆಯಲ್ಲಿರುವ ಹಳ್ಳಿಗಳು ಬೆಳಕಿಗೆ ಬರಲಿ !

**ಹಳ್ಳಿಯ ಹಿರಿಯತನ :-** ಇದೀಗಿನ ಕಾಲದಲ್ಲಿ ಹಳ್ಳಿಯನ್ನು ಕಾಡಿಗೆ ಬಗೆದು 'ಹಳ್ಳಿಗಾಡು' ಎಂದು ಪಳಿಸಿ ನುಡಿಯುವವರನೇಕರಾದರು. ಇದು ಹಳ್ಳಿಯೇ ? ಹಳ್ಳಿಯಲ್ಲ; ಕನ್ನಡ ನಾಡಿಗೆ ಬರಲಿಕ್ಕಿರುವ ಒರಿ ಹಗಲಿನ ಮುಂಬೆಳಗಿನಲ್ಲಿ ಮೂಡಿ ಮಿನುಗುತ್ತಿರುವ ಬೆಳ್ಳಿ; ಕನ್ನಡ ತಾಯಿಯ ವಿಶ್ರಾಂತಿ ಮಂಟಪಕ್ಕೆ ಹಬ್ಬಿದ ಬಳ್ಳಿ. ಜಗತ್ತಿನ ಸೌಂದರ್ಯವೇ ಅಲ್ಲಿ ಮಡುಗಟ್ಟಿ ನಿಂತಿದೆ. ಅಲ್ಲಿ ಬಗೆಯನ್ನರಳಿಸುವ ಹಾಡುಗಳ ಹಳ್ಳವೇ ಹರಿಯುತ್ತಿದೆ. ಹಳ್ಳಿಯೆಂದರೆ ಹಳ್ಳಿ; ಅಲ್ಲಿಯ ಸೊಬಗು ಇನ್ನೆಲ್ಲಿಯೂ ಸಿಕ್ಕದು. ಇಂತಹ ಹೃದಯ ಹಾರಿಯಾದ ನಂದನವನದ ಕೋಗಿಲೆಗಳ ಹಾಡು ಕಿವಿಗೆ ಸವಿಯಾಗದೆ ಏನು ಮಾಡೀತು! ಹಳ್ಳಿಯಾಗದೆ ಪತ್ತನವಾಗಲಿಲ್ಲ, ಸಣ್ಣದು ಬೆಳೆದು ದೊಡ್ಡದಾದುದೇನೋ ನಿಜ. ಎಳಕಿನಲ್ಲಿರುವ ಸವಿಯು ಬೆಳೆದವರಲ್ಲಿಲ್ಲ. ಮುದ್ದು ಮಗುವಿನಲ್ಲಿರುವ ಎಳನೋಟದ ಸೊಬಗು ಮುದಿ ಮುತ್ತಯ್ಯನಲ್ಲೆಲ್ಲಿಂದ ಬಂದೀತು! ಆದರೆ ಕೂಸಿನ ನುಡಿಯು ತೊದಲಾಗಿರಬಹುದು. ಏನಿದ್ದರೂ ಅದು ಚೆಲುವಾಗಿಯೇ ತೋರುವುದು.

**ಕನ್ನಡ ನಾಡಿನ ಹಳ್ಳಿಯ ಸಾಹಿತ್ಯ :** ಮಹಾರಾಷ್ಟ್ರದಲ್ಲಿ ಅನಂತಫಂದಿ ಮೊದಲಾದವರ ಲಾವಣಿಗಳು ಅಚ್ಚಾಗಿ ಎಷ್ಟೋ ದಿನಗಳಾದವು. ಬಂಗಾಳದ ಡಾಕಾ ಸಾಹಿತ್ಯ ಪರಿಷತ್ತು ಈ ಕೆಲಸವನ್ನು ಚೆನ್ನಾಗಿ ನೆರವೇರಿಸಿ ಗ್ರಾಮಸಾಹಿತ್ಯವನ್ನು ವೃದ್ಧಿಪಡಿಸಿರುವದಂತೆ. ಆದರೆ ನಮ್ಮ ಕನ್ನಡ ನಾಡಿನಲ್ಲಿ ಇಂತಹ ಪುಸ್ತಕಗಳು ಇನ್ನೂ ಹೊರಬೀಳಲಿಲ್ಲ; ಈಗೀಗ ಕೆಲವು ಪ್ರಕಟವಾಗಿದ್ದರೂ ಅವು ಹಳ್ಳಿಯವರ ಕೃತಿಗಳಲ್ಲ; ಸುಶಿಕ್ಷಿತರು ರಚಿಸಿದಂತಿವೆ. ನಿಜವಾದ ಗ್ರಾಮಸಾಹಿತ್ಯವು ಇನ್ನೂ ಅಚ್ಚುಕೂಟವನ್ನು ಕಾಣಲಿಲ್ಲ. ಕನ್ನಡ ವಾಙ್ಮಯದಲ್ಲಿ ಇದೊಂದು ದೊಡ್ಡ ಕೊರತೆಯೇ ಸರಿ.

ಹೊಸ ಹೊಸ ಗ್ರಂಥಗಳನ್ನು ಪ್ರಸಿದ್ಧಪಡಿಸಿ ವಾಙ್ಮಯವನ್ನು ಬೆಳೆಯಿಸುವೆವೆಂದು ಹೇಳಿಕೊಳ್ಳುವ ಪುಣ್ಯಾತ್ಮರನ್ನು ಬೇಡಿಕೊಳ್ಳುವದೇನೆಂದರೆ— ಮೊದಲು ಕೊರತೆಗಳನ್ನು ಸರಿಪಡಿಸಿರಿ; ಆಮೇಲೆ ಬೆಳೆಯಿಸುವುದಕ್ಕೆ ಪ್ರಯತ್ನಿಸಿರಿ. ಉಳಿಸುವುದಕ್ಕೆ ಯತ್ನಿಸದೆ ಬೆಳೆಯಿಸುವುದಕ್ಕೆ ಓಡಾಡುವದೆಂದರೇನು ? ಉಳಿಸಿ ಬೆಳೆಯಿಸಿರಿ. ಇಲ್ಲದಿದ್ದರೆ ರೋಗದಿಂದ ನರಳುವ ಮಗುವನ್ನು ಅಸಲಿ, ಬಿಂದಲಿ ಮೊದಲಾದ ಒಡವೆಗಳಿಂದ ಅಲಂಕರಿಸುವದರಲ್ಲಿ ತೊಡಗಿ ಔಷಧೋಪಚಾರಕ್ಕೆ ಅಸಡ್ಡೆ ಮಾಡಿದಂತಾಗುವುದು.

ಹಳ್ಳಿಯ ಸಾಹಿತ್ಯವು ಕನ್ನಡಕ್ಕೇನೂ ಕಡಿಮೆಯಿಲ್ಲ. ಮೈಸೂರಿನ ಶಾಸನಗಳಂತೆ ಗ್ರಾಮಸಾಹಿತ್ಯವೂ ಕೂಡ ಹಲವು ದೊಡ್ಡ ದೊಡ್ಡ ಪುಸ್ತಕಗಳ ರೂಪದಿಂದ ಮೆರೆಯಬಹುದು. ಅಂತಹ ಕಾಲವು ಇನ್ನೆಂದಿಗೆ ಬರುವುದೋ ಬರಲಿ. ಅದರ ಸವಿಯನ್ನು ತೋರಿಸಿಕೊಡುವುದೇ ಸದ್ಯದ ಕೆಲಸವಾದುದರಿಂದ ಆ ಕಡೆಗೆ ಹೊರಳುವೆನು.

**ಗಂಡಸರ ಹಾಡುಗಳು :** ಕರಡಿಯು ಹಾಡು (ತುರಾ ಲಾವಣಿ), ಡಪ್ಪಿನ ಹಾಡು (ಕಲ್ಗಿ ಮುಂತಾದ ಲಾವಣಿಗಳು), ಕಾಮನ ಹಾಡುಗಳು, ಹಂತಿಯು ಚುಟಕಿಗಳು, ಗೊಂದಲದ ಹಾಡುಗಳು, ಏಕತಾರಿ ಹಿಡಿದು ಹಾಡುವ ಅನುಭವ ಪದಗಳು— ಇವೇ ಮೊದಲಾದವು ಗಂಡಸರ ಬಾಯಲ್ಲುಳಿದಿವೆ. ಇದಲ್ಲದೆ, ಉತ್ತರ ಕರ್ನಾಟಕದಲ್ಲಿ ಕುರುಬರು ಡೊಳ್ಳು ಹೊಡೆದು ಹಾಡುತ್ತಿರುತ್ತಾರೆ. ಸುಮಾರು ಮೂರು ಸಾವಿರ ನುಡಿಗಳುಳ್ಳ ಬೀರನ ಹಾಡುಗಳು ಎಂಬುದೊಂದು ಅರವತ್ತು ಸಂಧಿಗಳನ್ನೊಳಗೊಂಡ ರಸವತ್ತಾದ ಗ್ರಾಮಕಾವ್ಯವು ಕುರುಬರಲ್ಲಿದೆ. ಇದನ್ನು ಆರು ರಚಿಸಿದರೋ ತಿಳಿಯದು. ಇಂದಿನವರೆಗೆ ಇದನ್ನು ಆರೂ ಬರೆದಿಡಲಿಲ್ಲ; ಪರಂಪರಾಗತವಾಗಿಯೇ ನಡೆದು ಬಂದಿದೆ. ಮುಸಲ್ಮಾನರ ಮೊಹರಂ ತಿಂಗಳಲ್ಲಿ ರಿವಾಯತಗಳೆಂಬ ಹಾಡುಗಳನ್ನು ಹಾಡುತ್ತಾರೆ. ಮುಸಲ್ಮಾನರಲ್ಲಾಗಿ ಹೋದ ಶರಣರ ಚರಿತ್ರಕ್ಕೆ ಸಂಬಂಧಪಟ್ಟಿರುವವುಗಳಲ್ಲದೆ ಬೆಡಗಿನ ಹಾಡುಗಳೂ ಕೂಡ ಆಗ ಹೇಳಲ್ಪಡುತ್ತವೆ. ಈ ಹಾಡುಗಳು ಮೈಸೂರು ನಾಡಿನಲ್ಲಿ ಬಳಕೆಯಲ್ಲಿವೆಯೋ ಇಲ್ಲವೋ ಎಂಬುದನ್ನು ನಾನರಿಯೆನು.

ಈ ಮೊದಲು ಜರುಗಿ ಹೋದ ಸಮ್ಮೇಳನದಲ್ಲಿ ಲಾವಣಿಗಳನ್ನು ಕುರಿತು ರಾವ್‌ಬಹಾದ್ದೂರ ಶ್ರೀಮಾನ್ ಹನುಮಂತಗೌಡರೇ ಮೊದಲಾದವರು ಹೇಳತಕ್ಕದ್ದನ್ನು ಹೇಳಿಬಿಟ್ಟಿದ್ದಾರೆ. ಆದುದರಿಂದ ಈಗ ರತಿಪ್ರಳಾಪ ದುಮದುಮೆಯ ನಾಲ್ಕಾರು ನುಡಿಗಳನ್ನು ಹೇಳಿ ಉತ್ತರ ಕರ್ನಾಟಕದ ಹಳ್ಳಿಯ ಹಾಡುಗಳಲ್ಲೆಲ್ಲ ಮೇಲ್ಮೆಯನ್ನು ಹೊಂದಬಹುದಾದ ಹೆಣ್ಣುಮಕ್ಕಳ ಹಾಡುಗಳನ್ನು ಕುರಿತು ನಾಲ್ಕು ಮಾತುಗಳನ್ನು ಹೇಳುವೆನು.

## ರತಿಪ್ರಳಾಪ*

ಕೇಳುತ್ತ ಚಿಂತೆಯ ತಾಳುತ್ತ ಧೈರ್ಯವ ಸೀಳುತ್ತ ಧರಣಿಗೆ ಬೀಳುತ್ತಲಿ । ದುಂದು ।
ಗಾಳಿಯತ್ತಲೆ ಕಣ್ಣ ನೀಳುತ್ತಲಿ । ಮತ್ತೆ । ಸಖಿಯರಿಗ್ಹೇಳುತ್ತಲಿ ॥ ಅಯ್ಯೊ ॥
ಭಾಳಲೋಚನನು ಎನ್ನಾಳುವ ರಾಯನ ಹಾಳುಮಾಡಿದನೆಂದು ಅಳಲಿದಳ್ ರತಿಯು ॥ ೧ ॥
ದೇವಿಯು । ರತಿದೇವಿಯು ॥

ಕೆಳದಿ ಕೇಳೆ ನಲ್ಲನಳಿದ ಮೇಲೆ ದೊಡ್ಡ ನಿಳಯದೊಳಗೆ ಹೊತ್ತುಗಳೆಯಲಾರೆ ।ಅವ್ವ।
ನಳಿನಾಸ್ತ್ರನಿದ್ದರೆ ಕರೆದು ತಾರೆ । ಬಹು । ಕಳವಳ ಹೆಚ್ಚಾಗಿ ತಾಳಲಾರೆ ॥ ಕಪ್ಪು ॥
ಗಳ ನಿನ್ನ ಬಯಕೆಯು ಕೈಯುಗೂಡಿತು ಎಂದು ತಳಮಳಿಸುತ ರತಿ ಚೀರಿ ದೂರಿದಳು ॥ ೨ ॥
ದೇವಿಯು । ರತಿದೇವಿಯು ॥

---

* ಇದನ್ನು ಬೆಂಗಳೂರಿನಲ್ಲಿ ಅಚ್ಚಾದ ಪ್ರತಿಯಿಂದ ಆಯ್ದುಕೊಂಡಿರುವೆನು.

ತೋರು ಮುತ್ತಿನಹಾರ ಚಾರು ಚಂದಿರ ಸರ ಗೀರು ನೆಲ್ಲಿಯ ಸರ ಕೊರಳಿಗ್ಯಾಕೆ ।ಶೃಂ।
ಗಾರ ರಾಗುಟ ಚೌರಿ ಹೆರಳಿಗ್ಯಾಕೆ। ರತ್ನ । ಸಾರಸದುಂಗುರ ಬೆರಳಿಗ್ಯಾಕೆ ॥ ಅವ್ವಾ ॥
ಮಾರನಿಲ್ಲದಲಿ ವಿಚಾರಪೇತಕೆಯೆಂದು ಭೋರುಗುಟ್ಟುತೆ ಬಾಲೆ ಹರಿದು ಚಲ್ಲಿದಳು
॥ ೩ ॥
ದೇವಿಯು । ರತಿದೇವಿಯು ॥

ಕಾಂತನೆ ಇರುಳು ಏಕಾಂತವನಾಡುವ ಪಂಥವ ನಡತೆಗಳ್ಬಚ್ಚಿಟ್ಟೆಯೊ । ಪ್ರಿಯ ।
ಇಂತು ಮಾತಾಡಲ್ಮನಿಸುಗೊಟ್ಟೆಯೊ । ಸರ್ವ । ಭ್ರಾಂತಿಯನೆಲ್ಲವ ಕಡೆಗಿಟ್ಟೆಯೊ ॥
॥ ಅಯ್ಯೊ ॥
ಇಂಥಾವಸ್ಥೆಯು ನಿನಗೆಂತು ಬಂದಿತು ಸ್ಮರ ಅಂತಕನಗರಿಗೆ ಆಳಾದ್ಯಾ ಧೊರೆಯೊ
॥ ೪ ॥
ಕಾಮನೇ । ನನ್ನ ಕಾಮನೇ ॥

ಇಂದುವಿಗಿಮ್ಮಡಿ ಚೆಲುವಾದ ಮುಖವನು ಕಂದರ್ಪರಾಯ ನೀನೆಲ್ಲಿಟ್ಟೆಯೊ । ನಿನ್ನ ।
ಚಂದದಾಭರಣದಾರಿಗೆ ಕೊಟ್ಟೆಯೊ । ದಯಾ । ಸಿಂಧು ನೀ ಎನ್ನೊಳ್ವೈರವ
ತೊಟ್ಟೆಯೊ ॥ ಮಾತ ॥
ನೊಂದಾದರಾಡೊ ನಿನ್ನೊಂದಿದವಳು ನಾನು ಎಂದು ಬೊಬ್ಬಿಟ್ಟಳು ಚಂದಿರವದನೆ
॥ ೫ ॥
ದೇವಿಯು । ರತಿದೇವಿಯು ॥

**ಹೆಣ್ಣುಮಕ್ಕಳ ಹಾಡುಗಳು** : ಅಹಹ ! ಹೆಣ್ಣುಮಕ್ಕಳೆಂದರೆ ಹೆಣ್ಣು ಮಕ್ಕಳು ! ಅವರ ಹೃದಯವೋ ಎಳೆಯ ಬಾಳೆಯ ಗೊನೆಗಿಂತ ಕೋಮಲ. ಇಂತಹ ಸುಕುಮಾರ ಹೃದಯದಿಂದ ಹೊರಟ ಭಾವನೆಯ ತೆರೆಗಳು ಎಳೆಮಕ್ಕಳ ಅರೆನಗೆಯ ಅಲೆಗಳಂತೆ ಮನೋಹರವಾಗಿರುವುದು ಸ್ವಾಭಾವಿಕ. ಆ ತೆರೆಗಳೋ ಬಿರುಗಾಳಿಗೆದ್ದ ಸರೋವರದ ತೆರೆಗಳಂತೆ ಭಯಂಕರವಾದವುಗಳಲ್ಲ; ಮನೋಹರ ವಾದ ಬೆಳ್ದಿಂಗಳಲ್ಲಿ ಮಂದ ಮಂದವಾಗಿ ಸುಳಿಯುವ ಸುಗಂಧ ಮಾರುತನಂತೆ ಮೆಲ್ಲಮೆಲ್ಲನೆ ಒಂದರ ಹಿಂದೊಂದು ಬಂದು ನಮ್ಮ ಬಗೆಯನರಳಿಸುವುದೇ ಈ ಅಲೆಗಳ ಧರ್ಮವು.

'ಮುದ್ದು ಬೀರಿ ಕುಣಿವ ಕುವರ'ನು ಆವ ಸುಕುಮಾರ ಹೃದಯದಡಿಯಲ್ಲಿ ಮಾಡಿದನೋ ಆ ಹೃದಯದಿಂದಲೇ ಈ ಭಾವನೆಯ ತೆರೆಗಳೂ ಮೂಡಿ ಮುಂದು ವರಿದವು. ಆದುದರಿಂದಲೇ ಈ ಅಲೆಗಳಿಗೆ ಆ ಎಳಗುವರನ ಎಳನೋಟದಂತಹ ಚಿತ್ತಾಕರ್ಷಕತೆಯು ಬಂದಿದೆ. ಎಳಮಗುವಿನ ಆಟದಲ್ಲಿ, ಎಳಮಗುವಿನ ನೋಟ ದಲ್ಲಿ, ಎಳಮಗುವಿನ ಅಕ್ಕರತೆಯಲ್ಲಿ ಹೇಗೆ ಅಕೃತಿಮತೆಯಿರುವುದೋ ಹಾಗೆ ಈ ಹೆಣ್ಣೆದೆಯಿಂದ ಹೊರಟ ಹಾಡುಗಳಲ್ಲಿಯೂ ಅಕೃತಿಮತೆಯಿರುತ್ತದೆ.

ಷಡಕ್ಷರಿಯು 'ತಿರುಕೊಳುವಿನಾಚಿ'ಯಾಗಿ ರಾಜಶೇಖರವಿಳಾಸದಲ್ಲಿ ಹಾಡಿಕೊಂಡು ಅತ್ತು ತೋರಿದನು. ಆದರೂ ಸಕ್ಕರೆಯ ರುಚಿಯನ್ನು ಬೆಲ್ಲದಿಂದ ತಿಳಿಸಿದಂತೆಯೇ. ಹೆಣ್ಣದೆಯ ಪರಿಯನ್ನು ಅವನು ಅರಿತುದೇನೋ ನಿಜ, ಅವನ ಎದೆಯು ಆ ವೇಳೆಗೆ ಹೆಣ್ಣೆದೆಯನ್ನು ಹೋಲುತ್ತಿರಬಹುದು. ಆದರೆ ಹೆಣ್ಣೆದೆಯಾಗಿರಲಿಲ್ಲ. ಸೀತೆಯ ವೇಷವನ್ನು ಧರಿಸಿದ ನಟನು ಸೀತೆಗಿಂತ ಹೆಚ್ಚಾಗಿ ಇಲ್ಲವೆ ಕಡಿಮೆಯಾಗಿ ಅಭಿನಯಿಸಬಹುದು. ಆದರೆ ಸೀತೆಯಂತೆ ಮಾತ್ರ ಅಭಿನಯಿಸಲಾರನು. ಏತಕ್ಕೆಂದರೆ ಅವನು ಸೀತೆಯೇ ಅಲ್ಲ. ಹೀಗೇಯೇ ಹೆಣ್ಣುಮಕ್ಕಳ ಭಾವನೆಗಳನ್ನು ಹೊರಪಡಿಸುವ ಕವಿಯು ಬರಿ ನಟನೆಯನ್ನು ಮಾತ್ರ ಮಾಡಿ ತೋರಿಸುವನು. ಆದರೆ ಈ ಕೃತ್ರಿಮತೆಯು ಸ್ವತಃ ಹೆಣ್ಣುಮಕ್ಕಳ ಹೃದಯದಿಂದುಕ್ಕಿದ ಹಾಡುಗಳಲ್ಲಿರದು.

ನಾನು ಈ ವರೆಗೆ ಹೇಳಿದುದು ಆವ ಹೆಣ್ಣುಮಕ್ಕಳನ್ನು ಕುರಿತು? ಅನ್ಯ ಸಂಸ್ಕೃತಿಯ ಸುಳಿಗಾಳಿಗೆ ಸಿಕ್ಕಿದಂತಹರನ್ನು ಕುರಿತು. 'ಟಿಸ್‌ಪಿಸ್' ಎಂದು ಮಾತನಾಡುತ್ತ ಗಂಡಸರೊಡನೆ ತಿರುಗಾಡುವ ಗಂಡರಾಮೆಯರ ಹೃದಯವು ಇಷ್ಟೊಂದು ಕೋಮಲವಾಗಿರುತ್ತದೆಯೋ ಇಲ್ಲವೋ ನಾನರಿಯೆನು. ಹಳ್ಳಿಯ ಮಾನವಂತೆಯರ ಹೃದಯವು ಮಾತ್ರ ಕೋಮಲವಾಗಿರುವುದು ಸ್ವಾಭಾವಿಕ.

ಹೆಣ್ಣುಮಕ್ಕಳ ಹಾಡುಗಳನ್ನು ಕೇಳಿಕೇಳಿ ಮಾರ್ಪಟ್ಟ ಹೃದಯದ ಒಬ್ಬ ಆಧುನಿಕ ಕವಿಯು ರಚಿಸಿದ ಒಂದು ಹಾಡನ್ನು ಹೇಳಿ, ಅದರಲ್ಲಿರುವ ನ್ಯೂನತೆಗಳನ್ನು ತೋರಿಸುವೆ.

## ತಾಯಿಯ ಕರುಳು

(ಮಗ್ಗುಲಲ್ಲಿ ಮಲಗಿದ್ದ ಧ್ರುವನನ್ನು ಕಾಣದೆ ಶೋಕಿಸಿದ ಸುನೀತಿಯ ಸ್ಥಿತಿಗತಿಗಳು)
ಮಟ್ಟು— "ಬಾರವ್ವ ಜಾಣೆ" ಎಂಬಂತೆ

ಸುನೀತಿದೇವಿ । ನಿದ್ದೆ ತಿಳಿದು । ಎದ್ದು ಕುಳಿತಳು ॥ ಪಲ್ಲವಿ ॥

ಎದ್ದು ಕುಳಿತು ಹೊದ್ದ ಸೆರಗ । ಸರಿಸಿ ಮುದ್ದುಮಗನ ಕಡೆಗೆ ।
ಕೈಯ ಚಾಚಿ ಕಾಣದಾದಳು । ಮಗನ ಕಡೆಗೆ । ಕೈಯ ಚಾಚಿ ಕಾಣದಾದಳು
॥ ೧ ॥

ಮಗನು ನಿದ್ದೆಗಣ್ಣಿನಲ್ಲಿ । ಮುಂದೆ ಸರಿದು ಹೋದನೆಂದು ।
ಬಗೆದು ಮುಂದೆ ಮುಂದೆ ಸರಿದಳು । ನೆಲಕೆ ಕೈಯ । ಸವರಿ
ಮಗನ ಕಾಣದಾದಳು ॥ ೨ ॥

ಏಳುಬೀಳುತೆದ್ದು ದೀಪ । ಹಚ್ಚಿ ನಾಲ್ಕು ಮೂಲಿ ನೋಡಿ ।
ಮಗನ ಸುಳಿವ ಕಾಣದಾದಳು । ಹುಡುಕಿ ಹುಡುಕಿ । ಮುದ್ದು
ಮಗನ ಕಾಣದಾದಳು ॥ ೩ ॥

ಕಣ್ಣು ತುಂಬ ನೀರತಂದು । ಕೊರಳ ಶಿರವು ಉಬ್ಬಿಬರಲು ।
ಹೊರಟು ಮೂಕಳಂತೆ ನಡೆದಳು । ತಾಯಿಯೆದ್ದು । ಮನೆಯು ಬಿಟ್ಟು
ಹೊರಗೆ ನಡೆದಳು ॥ ೪ ॥

ತೋಟಪಟ್ಟಿ ಹಳ್ಳಕೊಳ್ಳ । ಬಾವಿ ಕೆರೆಗಳಲ್ಲಿ ನೋಡಿ ।
ಕೇರಿ ಕೇರಿ ತಿರುಗಿ ದಣಿದಳು । ಹಿಂದಕೊಮ್ಮೆ । ಮುಂದಕೊಮ್ಮೆ
ಹೊರಳಿ ನೋಳ್ಪಳು ॥ ೫ ॥

ಅಲ್ಲಿ ಇರುವನೇನೊ ತರಳ । ಇಲ್ಲಿ ಇರುವನೇನೊ ಕಂದ ।
ಎಂದು ಮುಂದು ಮುಂದಕ್ಹೊರಟಳು । ಬಿಸಿಲು ಹೊಳೆಯು । ಹಿಂದೆ
ಚಿಗರಿಯಂತೆ ನಡೆದಳು ॥ ೬ ॥

ಮುಂದಕ್ಹೋಗಿ ಮತ್ತೆ ಮನಸಿ । ನಲ್ಲಿ ಮಗನು ಮನೆಗೆ ಹೋಗಿ ।
ಮಲಗಿಕೊಂಡನೇನೊ ಎಂದಳು । ಜೋಕಾಲಿಯಂತೆ । ತೂಗಲಾಡಿ
ಬಾಲೆ ದಣಿದಳು ॥ ೭ ॥

ಸಣ್ಣಕೂಸು ಐದು ವರುಷ । ತುಂಬಲಿಲ್ಲ ಇನ್ನು ತನಕ ।
ಇಂಥ ಕೂಸು ಎಲ್ಲಿ ಹೋಯಿತೇ । ಸಣ್ಣಗಿಣಿಯು ಕತ್ತಲಲ್ಲಿ ಎಲ್ಲಿ ಹಾರಿತೇ
॥ ೮ ॥

ದೇವರೆನಗೆ ರೆಕ್ಕೆಗಳನು । ಕಾಗೆಯಂಥ ಕಣ್ಣುಗಳನು ।
ಯೋಗಿಯಂಥ ಮನವ ಕೊಡುವನೇ । ಕೊಟ್ಟರೀಗ ಮುಗಿಲನೇರಿ
ನೋಡಿ ಬರುವೆನೇ ॥ ೯ ॥

ಎಂದು ಹಲುಬಿ ಹಂಬಲಿಸುವ । ತಾಯಿ ಜೋಲು ಮೋರೆ ಹಾಕಿ ।
ಹುಚ್ಚಳಂತೆ ಕುಳಿತು ಬಿಟ್ಟಳು । ಮುಂದಿವಂಕ್ಕ । ಉಲಿಯ ಕೇಳಿ
ಕಣ್ಣು ತೆರೆದಳು ॥ ೧೦ ॥

ನೆಲವೆ ಬಿರಿದು ನುಂಗಿತೇನೆ । ಮಗನೆ ಮಾಯವಾದನೇನೆ ।
ಏನು ಮಾಡಲೆಲ್ಲಿ ಹುಡುಕಲಿ । ಎಂದು ಮನಸಿ । ನೊಳಗೆ ಬಗೆದು
ಬಾಡಿ ಬೆಂದಳು ॥ ೧೧ ॥

ಗಿಡವೆ ಧ್ರುವನು ದನವೆ ಧ್ರುವನು । ಕಲ್ಲೆ ಧ್ರುವನು ಹುಲ್ಲೆ ಧ್ರುವನು ।
ಎಲ್ಲ ಕಡೆಗೆ ಧ್ರುವನ ಭ್ರಾಂತಿಯೇ । ಸುನೀತಿಯಲ್ಲಿ । ಮೂಡಿತಂದು
ಧ್ರುವನ ಮೂರ್ತಿಯೇ ॥ ೧೨ ॥

ಈ ಹಾಡಿಗೆ ಮಟ್ಟೆಂದು ಹೇಳಿರುವ—

ಬಾರವ್ವ ಜಾಣಿ । ರಂಗ ಹೋಗಿ । ತಿಂಗಳಾಯಿತು ॥ ಪ ॥
ರಂಗ ಹೋಗಿ ತಿಂಗಳಾಗಿ । ಮೋರೆಯೆನಗೆ ತೋರದಾದ ।
ನಾರಿಗಾಗಿ ನಾಡ ಸೇರಿದಾ । ಶ್ರೀ ಕೃಷ್ಣದೇವ । ಬಾಲೆಗಾಗಿ
ಬೆನ್ನಹತ್ತಿದಾ ॥ ೧ ॥

ಎಂಬ ಒಂದು ನುಡಿಯನ್ನು ಬೀಸುವಾಗ ಹಳ್ಳಿಯ ಹೆಣ್ಣುಮಕ್ಕಳು ಹಾಡುತ್ತಿರುತ್ತಾರೆ. ಈ ನುಡಿಯಲ್ಲಿ ಪ್ರತಿಯೊಂದು ಚರಣಕ್ಕೂ ಎರಡು ತುಂಡುಗಳಾಗಿ ಸರ್ವಜ್ಞಪದಗಳಲ್ಲಿಯಂತೆ ಭಾವವು ಕಡಿದುಬೀಳುತ್ತದೆ. ಆ ಎರಡು ತುಂಡುಗಳ ಆದ್ಯಕ್ಷರಗಳಾಗಲಿ ದ್ವಿತೀಯಾಕ್ಷರಗಳಾಗಲಿ ಒಂದೇ ಬಳ್ಳಿಯೊಳಗಿನವಿವೆ; ಶಬ್ದಗಳ ಸಂದಣಿಯು ಸ್ವಾಭಾವಿಕವಾಗಿದೆ. ಈ ಎಲ್ಲ ನಿಯಮಗಳೂ ತಾವಾಗಿಯೇ ಕೈಗೂಡಿವೆ; ಅದಕ್ಕಾಗಿ ಪ್ರಯತ್ನಪಟ್ಟಿರುವಂತಿಲ್ಲ. ಆದರೆ ಸುನೀತಿದೇವಿಯ ಹಾಡಿನಲ್ಲಿ ಈ ನಿಯಮಗಳಿಗೆ ಹಲವೆಡೆಗಳಲ್ಲಿ ಬಾಧೆ ಬಂದಿದೆ. ಆ ಹಾಡಿನ ಪದಪ್ರಯೋಗದಲ್ಲಿ ಇಷ್ಟೊಂದು ಸ್ವಾಭಾವಿಕತೆಯಿಲ್ಲ; ಆದರೂ ಹೆಣ್ಣುಮಕ್ಕಳ ಹಾಡುಗಳ ಸಂಸ್ಕಾರ ಹೊಂದಿದ ಕವಿಹೃದಯದಿಂದ ಸುನೀತಿಯು ಭಾವನೆಯು ಚೆನ್ನಾಗಿ ಬಿಚ್ಚಿಬಿದ್ದಿದೆ.

ನಮ್ಮ ಉತ್ತರಕರ್ನಾಟಕದ ಹಳ್ಳಿಯ ಹೆಣ್ಣುಮಕ್ಕಳು ತಮ್ಮ ಗಂಡನ ಹೆಸರನ್ನು ಹೇಳುವಾಗ ಹಾಕುವ ಒಗಟಗಳಲ್ಲಿ ತಿಳಿಗನ್ನಡ ಸುರಿಮಳೆಯೇ ಸುರಿಯುತ್ತಿರುತ್ತದೆ. ಇಂತಹ ಒಗಟಗಳನ್ನೂ ಹಾಡುಗಳನ್ನೂ ಸಂಗ್ರಹಿಸಿ ಅಚ್ಚುಹಾಕಿಸಿದರೆ ಸಾಮಾನ್ಯರಿಗಲ್ಲದೆ ಹೊಸದಾಗಿ ಹುಟ್ಟುವ ಕವಿಗಳಿಗೂ ಕೂಡ ಬಹಳ ಉಪಯೋಗವಾಗುತ್ತದೆ.

ಪುತ್ರಕಾಮೇಷ್ಟಿ ಹಾಡು, ರುಕ್ಮಿಣಿಗೆ ಚೇಳು ಕಡಿದ ಹಾಡು, ದ್ರೌಪದಿಯ ಸೀರೆಯ ಸೆಳೆದ ಹಾಡು ಮುಂತಾದವುಗಳು ಬಹಳ ನುಡಿಗಳನ್ನೊಳಕೊಂಡಿರುವವಾದುದರಿಂದ ಇವುಗಳನ್ನು ಬಿಟ್ಟು ಒಂದು ಸಣ್ಣ ಹಾಡನ್ನು ಹೇಳಿ ನನ್ನ ಈ ಪ್ರಬಂಧವನ್ನು ಮುಗಿಸುವೆನು.

## ಕೃಷ್ಣ ರುಕ್ಮಿಣಿಯರ ಲೆತ್ತದ ಹಾಡು

ಮಂದರಧರ ತಡೆದರೇತಕೆ । ಗಂಧ ಪರಿಮಳಕೆಳಸದೆ । ಸಖಿ ।
ಮಂದಿರದೊಳು ನಿಲ್ಲಲಾರೆನು । ಎಂದು ರುಕ್ಮಿಣಿ ಚಿಂತಿಸಿ ॥ ೧ ॥

ಚಕ್ರಧರ ಚೆಲುವ ಚೆನ್ನಿಗ । ರಕ್ಕಸರ ಸಂಹಾರಿಯು । ಸಖಿ ।
ಚಕ್ರಧರನ ಕರೆದು ತಾ ಇ । ನ್ನಕ್ಕ ಚಿಂತಿಸಲೇತಕೆ ॥ ೨ ॥

ಎಂದು ರುಕ್ಮಿಣಿ ಗೆಳತಿಗೆ ಹೇಳಲು—

ಬೇಗನೆದ್ದು ಸಾಗಿ ದೂತಿಯು। ನಾಗಶಯನಗೆರಗ್ಯಾಳು । ಶ್ರೀನಾಗ...।
ಭೋಗದಾ ಸತಿ ಕರೆದಳೆನುತಲೆ । ಬೇಗ ಶ್ರೀಹರಿ ಬಂದನು ॥ ೩ ॥

ರಂಗರಾಯಾ ಬರಲು ಕಾಣದೆ । ಮಂಗಳಾರತಿ ತಂದರು ।
ಜಯ ಮಂ... ।
ತುಂಗ ವಿಕ್ರಮ್ನ ಚರಣಕೆರಗಿ । ಅಂಗನೆಯರು ನಿಂದರು ॥ ೪ ॥

ಇಷ್ಟು ದಿನ ಬಾರದಿರುವುದಕ್ಕೆ ಕಾರಣವನ್ನು ಕೇಳಲು—

ಮಧುರೆಯೊಳು ಪೊಕ್ಕು ನಾನು । ಮದದಶ್ವಶುರನ ಹೊಡೆದೆನು ।
ಬಲುಮದ... :
ಮದಗಜವನು ಸೀಳಿಗಂಜಿ । ಬೆದರಿ ಬಂದೆನು ಭಾಪಕಿ (?) ॥ ೫ ॥

ರು : ಸೃಷ್ಟಿಕರ್ತ ಸ್ವಾಮಿ ನೀವು । ಕಷ್ಟವೇತಕೆ ಪಟ್ಟಿರಿ । ಬಲುಕಷ್ಟ...।
ಕೃ : ಬಟ್ಟಿಲೆ ಮಂದಾರವನೆತ್ತಿ । ಇಷ್ಟು ಶ್ರಮಿಸಿ ಬಂದೆನು ॥ ೬ ॥

ಕಾಳಿಂಗನ ಮಡುವ ಧುಮುಕಿ । ಕಮಲಗರಿಗಳ ತಂದೆವು ।
ಭಾಮೆ ಕಮಲ... ।
ಕಾಳಿಂಗನ ಹೆಡೆಯು ತುಳಿದು । ಭಾಳ ದಣಿದು ಬಂದೆವು ॥ ೭ ॥

ರು : ಲೋಕನಾಯಕ ತಡೆದರೇಕೆಂ । ದ್ವ್ಯಾಕುಲದೊಳಗಿರುವೆನು ।
ಸ್ವಾಮಿ ವ್ಯಾ... ।
ಕೃ : ಅನ್ನೆಕ ಶ್ರಮಿಸಿ ಬಂದೆ ರುಕ್ಮಿಣಿ । ಏಕೆ ಕರುಣವು ಬಾರದು ॥ ೮ ॥

ಆಗ—

ಕೇಳಿ ತನ್ನ ಪ್ರಾಣದೊಡೆಯನ ತೋಳು ತೊಡೆಗಳನೊತ್ತುತ ।
ಭಾಮೆ ತೋ... ।
ಭಾಳ ಪರಿಯಲಿ ಗಂಧ ಪೂಸುತ । ಗಾಳಿ ಬೀಸುತ ಬಳಕುತ ॥ ೯ ॥

ಬೀಸಿ ಸತಿ ಒಳಲಿದಳೆನುತಲೆ । ಕೇಶ ಬೈತಲ ತಿದ್ದಿದಾ । ಸ್ವಾಮಿ ಕೇ...।
ಪಾಶ ತಾರೆ ಪಗಡೆ ಆಡುಣ । ವಾಸುದೇವರು ನುಡಿದರು ॥ ೧೦ ॥

ಕೆಳದಿ ಕೇಳೆ ನನ್ನ ಕೈಯೊಳು । ಹಳದಿ ಹಸುರವ ಹಿಡಿಯುವೆ ।
ನಾ ಹ...।
ನಳಿನ ಮುಖಿಯಳ ಸೋಲಿಸುವೆನೆಂ । ದ್ಹೊಳೆವ ಲೆತ್ತವ ಪಿಡಿದರು
॥ ೧೧ ॥

ರು : ಸೋಲಿಸಿದರೆ ಸೋಲಿಸಿದಿರಿ । ಖ್ಯಾತಿ ನಿಮಗೇ ಬಾಹುದು ।
ಪ್ರಖ್ಯಾತಿ...।
ಸ್ವಾಮಿ ನೀವ್ಸೋತು ಹೋದರೆ । ಲೋಕದೊಳಗಪಕೀರ್ತಿಯು ॥ ೧೨ ॥

ಕೆಲಹೊತ್ತು ಆಟವಾಡಿದ ಮೇಲೆ—

ಮಾಣಿಕದ ಲೆತ್ತ ಹಾಕುತ । ಆನಿ ಕಟ್ಟಿಗೆ ನಡಿಸುತ । ಭಾಮೆ ಆನಿ...।
ಜಾಣೆ ಬಂದು ಕಾಯಿ ಕಡಿದರೆ । ವೇಣುನಾದರು ನುಡಿದರು ॥ ೧೩ ॥

---

(?) ಈ ಭಾಗದ ಕಥಾಸಂದರ್ಭವೇನು ?

ಕೃ : ಚೋರತನವೇನೆ ರುಕ್ಮಿಣಿ । ದಾರು ಕಂಡರೆ ಲೆತ್ತುವು । ಇಲ್ಲಿ ದಾ...।
ರು : ಚೋರತನ ಎನ್ನೊಳಿಲ್ಲಾ । ಚೋರು ಇಲ್ಲೇ ತೋರುವ ॥ ೧೪ ॥

ಗಂಡನುಳ್ಳರ ಮನೆಯ ಹೊಕ್ಕು । ಪುಂಡತನವ ಮಾಡಿದೀರಿ ।
ನೀವು ಪುಂ...।
ಕಂಡುಬಲ್ಲೆವು ನಿಮ್ಮ ಮೈಮೆಯ । ಎಂದು ರುಕ್ಮಿಣಿ ನುಡಿದಳು
॥ ೧೫ ॥

ಕೃ : ಒಬ್ಬರಿಗೆ ಇಟ್ಟ ಎಡೆಯ । ಒಬ್ಬರಿಗೆ ಇಡುವೆಯೇ । ಮತ್ತೊಬ್ಬ...।
ಅಣ್ಣನಾ ಗುಣ ತಂಗಿಗೆನ್ನುತೆ । ಕಣ್ಣ ಕೆಂಪಗೆ ಮಾಡ್ಯಾರು ॥ ೧೬ ॥

ಆಗ—

ಕೃಷ್ಣರಾಯಾ ಕೋಪದಿಂದ । ಬಿಟ್ಟು ಗದ್ದಿಗೆ ಇಳಿದರು । ಅಲ್ಲಿ ಬಿ...।
ಪಟ್ಟವಳಿ ಮುಸುಕ ಹಾಕಿ । ಪಟ್ಟಮಂಚದಿ ಮಲಿಗ್ಯಾರು ॥ ೧೭ ॥

ರು : ಏಕೆ ಕೋಪವು ಸ್ವಾಮಿ ನಿಮಗೆ । ದಾಕೆ ಮುಸುಕವ ತೆರೆದಳು ।
ಹೊತ್ತೊಲ್ಲಿ ಮಂ...।
ಕೃ : ಸಲ್ಲದೆಲೆ ನಿನಗಿಂಥ ಸಲಗಿಯು । ಇಲ್ಲಿಗೇತಕೆ ಬಂದೆಯೋ ॥ ೧೮ ॥

ಆಗ ರುಕ್ಮಿಣಿಯು—

ಸೆರಗು ಹಾಸಿ ಸ್ತೋತ್ರ ಮಾಡಿ । ಸೊರಗಿ ಚರಣಕ್ಕೆರಗ್ಯಾಳು ।
ಬಲು ಸೊ...।
ಸರಗಿ ಕಂಕಣ ಸಡಲಿ ಬೀಳಲು । ಹರಿಯು ಕಂಗೆಟ್ಟೆದ್ದರು ॥ ೧೯ ॥

ಎದ್ದು ಸತಿಯಳ ತೊಡೆಯೊಳಿರಿಸಿ । ಬಿದ್ದ ಒಡವೆಯನಿಡಿಸಿದಾ ।
ತಾ ಬಿದ್ದ...।
ತಿದ್ದಿ ಬೈತಲ ತಿಲಕವಿಟ್ಟು । ಮುದ್ದನಿಡುತಲೆ ನಗಿಸಿದಾ ॥ ೨೦ ॥

ಸಿರಿಗನ್ನಡಂ ಗೆಲ್ಗೆ । ಸಿರಿಗನ್ನಡಂ ಗೆಲ್ಗೆ ।
ಧನ್ಯವಾಗಲಿ ನಮ್ಮ ಮಾನ್ಯವಾದೀ ನಾಡು ॥

ವಿಜಾಪುರದಲ್ಲಿ ಜರುಗಿದ ೯ನೆಯ
ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ ಓದಿದ ಪ್ರಬಂಧ
ಗುರುವಾರ ದಿನಾಂಕ ೨೨-೧೧-೧೯೨೩

## ರಮ್ಯಜೀವನ

( ಹಲಸಂಗಿಯ ಲಾವಣಿಕಾರ ದಿವಂಗತ ಖಾಜಾಭಾಯಿ )

---

ಲೇಖಕನಿಗೆ ಸ್ವಗ್ರಾಮವೆಂಬ ಕಾರಣದಿಂದ ಹಲಸಂಗಿಯ ವಿಷಯದಲ್ಲಿ ಅಭಿಮಾನವೆನಿಸುತ್ತಿದ್ದರೆ ಅದೇನೂ ಬಹಳ ದೊಡ್ಡ ಮಾತಲ್ಲ. ಆದರೆ ಆ ಊರಲ್ಲಿ ಎಂದೆಂದಿನಿಂದಲೂ ಒಬ್ಬರಿಲ್ಲದೊಬ್ಬರು ಓದಾಳಿಗಳೂ ಹಾಡುಗಾರರೂ ಇದ್ದೇ ಇದ್ದುದನ್ನು ನೆನೆದರೆ ಈತನಿಗೆ ಸೋಜಿಗವೆನಿಸುತ್ತದೆ. ಒಂದಿಲ್ಲೊಂದು ವಿಧದ ಅಗಾಧ ಜೀವಗಳು ಈ ಊರಲ್ಲಿ ಯಾವ ಕಾಲದಲ್ಲಾದರೂ ಇದ್ದೇ ಇರುತ್ತಿರುವರೆಂಬ ಮಾತು ಈ ಊರೊಳಗಿನ ಪ್ರತಿಯೊಬ್ಬನಿಗೆ ಆಶ್ಚರ್ಯವನ್ನು ಹುಟ್ಟಿಸಿದೆ. ಇದೆಲ್ಲಾ ಈ ಊರಿನ ಯಾವ ಪೂರ್ವಸುಕೃತದ ಫಲವೋ ಏನೋ ಆ ಜಗದೀಶನೇ ಬಲ್ಲ !

"ಜೀವನಸಂಗೀತ"ದಲ್ಲಿ ಪ್ರಕಟವಾದ, ಮರುಳುಗೊಳಿಸುವ ಗೋಕುಲಾಷ್ಟಮಿಯ ಲಾವಣಿಯನ್ನು ಕಟ್ಟಿದ ಕವಿ ಸಂಗಣ್ಣನೂ, ತಲೆ ತೂಗಿಸಿ ಬಿಡುವ ಭೀಷ್ಮಪರ್ವದ ಹಾಡನ್ನು ಹೆಣೆದ ಕವಿ ಶಿವಲಿಂಗನೂ ಉಭಯ ಪಕ್ಷಕ್ಕೆ ನಿಂತು ಹಾಡಿಕೆಯನ್ನು ಮಾಡುತ್ತಿದ್ದ ಕಾಲದಲ್ಲಿ ಸುಮಾರು ನಾಲ್ವತ್ತು ವರುಷಗಳ ಹಿಂದೆ, ನಮ್ಮ ಖಾಜಾಭಾಯಿಗೆ ಆಗ ಇನ್ನೂ ತೀರ ಎಳೆ ವಯಸ್ಸು. ಸುಮಾರು ಹದಿನೈದರ ಮನೆಯಲ್ಲಿ ಎಂದು ಹೇಳಬಹುದು. ಆಗಿನಿಂದಲೇ ಅವನಿಗೆ ಹಾಡಿಕೆಯಲ್ಲಿ ಒಲವು ಹುಟ್ಟಿ, ಕಿವಿಗೆ ಬಿದ್ದ ಹಲ ಕೆಲವೇ ಹಾಡುಗಳನ್ನು ತನ್ನ ಮಟ್ಟಿಗೆ ತಾನು ಹಾಡುತ್ತಲಿರುತ್ತಿದ್ದನು. ಈ ಸಮಾಚಾರವು ಕವಿ ಸಂಗಣ್ಣನಿಗೂ ಆತನ ಸಹಸಂಗೀತಿಯಾದ ರಾಯಪ್ಪನಿಗೂ ಕಿವಿಗೆ ಬೀಳಲು, ಅವರು ಖಾಜಾಭಾಯಿಯನ್ನು ಕರೆದು ಹಾಡಿಸಿ ನೋಡಿ, ಆತನ ಹುಟ್ಟುಜಾಣ್ಮೆಗೆ ಹಿಗ್ಗಿ ಅವನನ್ನು ತಮ್ಮ ಕೈಕೆಳಗೆ ಕರೆದುಕೊಂಡು, ಹಾಡಿಕೆಯನ್ನು ಕಲಿಸುವುದಕ್ಕೆ ಮೊದಲು ಮಾಡಿದರು.

ಖಾಜಾಭಾಯಿಯ ಮುಖವು ಬಹಳ ಚೆಲುವಾಗಿದ್ದಿತು. ಮೂಗು ಬಲು ನಿಡಿದು, ಕೆಂಪಗಿನ ದುಂಡು ಮೋರೆ, ಮಿಂಚುವ ಅಂಬಲು ಮೈ. ಲೇಖಕನು ಆತನನ್ನು ಅವನ ಕೊನೆಗಾಲದಲ್ಲಿ ಕಂಡಿದ್ದಾಗಲೂ ಆ ರಸಮುಖವು ತುಂಬಿ ತುಳುಕುತ್ತಲೇ ಇತ್ತು. ಸುರಳಿ ಗಡ್ಡದ ನಡುವೆ ಒಪ್ಪುವ ಅವನ ನಗೆಮುಖವು ಕೇವಲ

ಕಬೀರನ ಚಿತ್ರವನ್ನು ಹೋಲುತ್ತಿತ್ತು. ಮುಖಲಕ್ಷಣದ ಮಟ್ಟಿಗೆ ಹೇಳಬಹುದಾದರೆ ರಸಿಕ ಶಿರೋಮಣಿಯಾದ ರಸ್ಕಿನ್ನನ ರಸಮುಖದ ಜಾತಿಯದಾತನದು. ಲೇಖಕನಿಗೆ ಅನಿಸಿದ್ದೇನೆಂದರೆ ಕಣ್ಣುಮುಂದೆ ಕಟ್ಟುವಂತೆ ಬಣ್ಣಿಸುವ ಕಲ್ಪಕತೆಯು ಇಂಥ ರಸಮುಖದವರ ಸಹಜಸಂಪತ್ತು. ಒಣಮೋರೆಯ ಉರುಟು ಮೈಯವರು ಕಾವ್ಯಕುಮಾರಿಗೆ ತಕ್ಕ ವರಗಳಲ್ಲ. ಅವರಿಗೆ ಅವಳ ಸ್ಪಷ್ಟ ದರ್ಶನವಾಗದೆ ಏಳು ಪರದೆಗಳೊಳಗಿಂದ ಸ್ಪರ್ಶ ಮಾತ್ರವಾಗುತ್ತಿರುತ್ತದೆ. ಆದುದರಿಂದ ಅಂಥವರ ಕವಿತೆಯ ಹುರುಳಿನಲ್ಲಿ ತರ್ಕದ ಛಾಯೆಯೂ ಕವಿತೆಯ ಭಾಷೆಯಲ್ಲಿ ಗದ್ಯೋಚಿತ ಶಬ್ದಗಳ ಸಮಾವೇಶವೂ ಕಂಡುಬರುತ್ತಿರುತ್ತವೆ, ಆದರೆ ನಮ್ಮ ಖಾಜಾಭಾಯಿಯ ಈ ಕೆಳಗಿನ ಒಂದೆರಡೇ ನುಡಿಗಳನ್ನು ನೋಡಿದರೂ ಸಾಕು, ಆತನ ಚಿತ್ರಕ ಶಕ್ತಿಯನ್ನು ನಾವು ಕಣ್ಣಾರೆ ಕಂಡು ಕುಣಿಯುವೆವು :

"....ನಾಗಿಣೀ ನೋಡ ತಿರುಗಿ ।
ಮರಿಗುಮರಿ ಕುಣಿಸಿದಂಗ ನಾಜುಕ ನಿನ ನಡಿಗಿ ।
ಹೊಳಿ ನೀರ ಥೆರಿಯ ಹೊಡದಂಗ ಒದುತೆ ನಿಲಗಿ ॥

× × × ×

ಗರಗರಾ ತಿರವತೇ ಕಣ್ಣ ।
ಕೆಂಪು ಮೈ ಬಣ್ಣ ।
ಬೇತಲ ಸಣ್ಣ । ಕತ್ತಿ ಧಾರಿ ॥

× × × ×

ನಿನ ಶಬ್ದ ಕೇಳಿ ಆಯ್ತು ಲುಬ್ಧ ।
ಕೋಗಿಲ ನಾಚಿ ಕದ್ದ ।
ವನಾ ಬಿಟ್ಟು ಎದ್ದ । ಹೊಯ್ತು ಹಾರಿ ॥

× × × ×

ನಿನ ಪ್ರಾಯ ತುಂಬಿದಾ ಹೊಳಿ ।
ಬಾಳಿಯಾ ಸುಳಿ ।
ಚಂದ್ರನಾ ಕಳಿ । ಕಸರ ಇಲ್ಲಾ ।
ಆದಿವಿಷ್ಣು ಪಿಂಡ ಮಾಡಿದನ ತಗದ ಹೊಯ್ಲಾ ।
ಬಿನ್ನ ಬ್ಯಾಸರಿಲ್ಲದೆ ತಿದ್ದಿ ಕೈಕಾಲಾ ॥

× × × ×

ಈ ಹೆಣ್ಣ ತೇಜಿಯಾ ಮರಿ ।
ಉಚ್ಚಿದ್ದಂಗ ವರಿ ।
ಅಲ್ಲ ಇಕಿ ಸರಿ । ಶಿವನ ಮನಿ ರಂಭಾ ॥

× × × ×

ಖಾಜಾಭಾಯಿಯ ಸರ್ವ ಕವಿತೆಗಳೂ ಇಂದಿಗೆ ಸಿಗದಂತಾಗಿ ಈ ಕೆಲವೇ ಪಂಕ್ತಿಗಳು ಲೋಕನೆದುರಿಗೆ ಉಳಿದಿದ್ದರೂ ಸಾಕಾಗುತ್ತದೆ; ಅವನೊಬ್ಬ ನಿಜವಾದ ವರಕವಿಯೆಂದು ಇವುಗಳಿಂದ ಮನಗಂಡುಬಿಡುವದರಲ್ಲಿ ಸಂದೇಹವಿಲ್ಲ.

ಇಲ್ಲಿ ಒಟ್ಟಿಗೆಲ್ಲ ಲಾವಣಿಗಳ ಮೇಲಿನ ಒಂದು ಆಕ್ಷೇಪವನ್ನು ಕುರಿತು ಒಂದಿಷ್ಟು ಹೇಳುವುದರ ಅವಶ್ಯಕತೆಯೂ ಇದೆ. ಅದೇನೆಂದರೆ— "ಲಾವಣಿಗಳೆಂದರೆ ಬೀಭತ್ಸದ ರಾಶಿ"ಯೆಂದು ನಮ್ಮೆಲ್ಲರಿಗೂ ಏಸೋ ಸಾರೆ ಅನಿಸಿದ್ದುಂಟು. ಇದರಲ್ಲಿ ಸತ್ಯವೆಷ್ಟೂ ಇಲ್ಲವೆಂತಲ್ಲ: ಅದು ನಿಜವೇ, ಆದರೆ ಹಾಗೆ ಆಕ್ಷೇಪಿಸುವದರಲ್ಲಿ ನಮ್ಮ ಅಲ್ಪಮತಿಯೂ ಇಲ್ಲದೆ ಇಲ್ಲ. ಅದೇನೆಂದರೆ— ನಮ್ಮೆಲ್ಲರ ಬುದ್ಧಿಯ ಮೇಲೆ ಚಿಕ್ಕಂದಿನಿಂದಲೂ ಒಂದು ಬಗೆಯ ಜುಲುಮೆಯು ನಡೆದಿರುತ್ತದೆ. ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದನ್ನು ನಮ್ಮಿಂದ ನಾವೇ ನಿರ್ಧರಿಸಿಕೊಳ್ಳುವುದಕ್ಕೆ ಸಹಾಯ ಮಾಡುವ ಬದಲು– ಇಂಥದು ಕೆಟ್ಟದು, ಇಂಥದು ಒಳ್ಳೆಯದು ಎಂದು ತಾವೇ ನಮಗೆ ಹೇಳಿಕೊಟ್ಟು ಜುಲುಮೆಯಿಂದ ಅದನ್ನು ನಮಗೆ ರೂಢಿ ಮಾಡಿಸಿರುತ್ತಾರೆ. ಅವರ ಹಿರಿಯರೂ ಅವರಿಗೆ ಹೀಗೇ ಮಾಡಿಸಿದ್ದು. ಇದರ ಫಲವಾಗಿ ಈಗಿನ ಜನಾಂಗಕ್ಕೆ ಬುದ್ಧಿಯ ಶುದ್ಧ ಉಪಯೋಗವನ್ನು ಮಾಡಿಕೊಳ್ಳುವ ಶಕ್ತಿಯೇ ಇಲ್ಲದಂತಾಗಿದೆ. ಎಲ್ಲ ರಸಗಳಂತೆ ಶೃಂಗಾರವೂ ಒಂದು ರಸ, ಸರಿಯಾಗಿ ಬಳಸಿಕೊಂಡರೆ ಅದೂ ಮಾನವನ ಅಂತರ್ವೃತ್ತಿಗಳ ವಿಕಾಸಕ್ಕೆ ಸಹಕಾರಿಯಾಗುವುದು. ಈ ವಿವರವನ್ನು "ಜೀವನ ಸಂಗೀತ"ದ ಮುನ್ನುಡಿಯಲ್ಲಿ ವಿಸ್ತಾರವಾಗಿ ವಿವೇಚಿಸಿದೆ.

ಖಾಜಾಭಾಯಿಯು ಸುಮಾರು ಹದಿನಾರನೆಯ ವಯಸ್ಸಿನಿಂದ "ಸಂಗೂರಾಯಪ್ಪ" ಇವರ ಮುದ್ದಿನವನಾಗಿ ಹಾಡಿಕೆಯನ್ನು ನಡಿಸಿದನು. ಅವನ ಜೊತೆಗೆ ದನಿ ಕೂಡಿಸಿ ಹಾಡುವುದಕ್ಕೆ ಆಗ ಆರಾರೋ ನಿಂತರು. ಆದರೆ ಅವನ ಏರು ದನಿಗೆ ಅವರಾರದೂ ಕೂಡಲಿಲ್ಲ. ಹೀಗಾಗಿ ಮುಂದೆ ಅವನು ಒಂಟು ಹಾಡಿಕೆಯನ್ನೇ ಮಾಡಹತ್ತಿದನು. ಮೊದಮೊದಲಿಗೆ ಅವನು ಬರೇ ಇನ್ನೊಬ್ಬರ ಹಾಡುಗಳನ್ನು ಹಾಡುವವನು. ಅಲ್ಲಿಂದ ಮುಂದಕ್ಕೆ ಸ್ವತಃ ತಾನೇ ಕವಿಗಾರನಾದನು. ಲಾವಣೀ ಕವಿಗಳ ರೀತಿಯೆಲ್ಲಾ ಬಹುಶಃ ಹೀಗೇ ಇರುತ್ತದೆ.

ಆ ಕಾಲದಲ್ಲಿ ನಮ್ಮ ಈ ಭಾಗದೊಳಗೆ ಪ್ರಸಿದ್ಧ ಲಾವಣಿಕಾರರೆಂದರೆ ಹದರಿಯ ಒಡೇಶಾ, ಚಾಣಕೊಟಗಿಯ ನಬೀಶಾ ಮತ್ತು ಕ್ವಾರಳ್ಳಿಯ ರಾಮಚಂದ್ರ ಮುಂತಾದವರೇ. ಇವರಲ್ಲಿಯೂ ಒಡೇಸಾಹೇಬನು ಮಿಗಿಲಾದವನು. ಇವನ ಹಾಡುಗಳಲ್ಲಿ ನುಡಿಗಳು ಎರಕಹೊಯ್ದಂತೆ ಭರಗಚ್ಚಾಗುತ್ತಿದ್ದವಲ್ಲದೆ ಅವಸಾನವಿಲ್ಲದೆ ಅನ್ನಬಾರದೆಂಬಷ್ಟು ದೊಡ್ಡವಾಗಿರುತ್ತಿದ್ದವು. ಅವನ ಹಾಡುಗಳನ್ನು ಇನ್ನೊಬ್ಬರಿಗೆ ಹಾಡುವುದಕ್ಕೂ ಕೂಡ ಶಕ್ಯವಾಗುತ್ತಿದ್ದಿಲ್ಲ. (ಹೀಗೆಂತಲೇ ಅವನ ಮರಣದನಂತರ

ಅವನ ಹಾಡುಗಳು ಎಲ್ಲಿಯೂ ಉಳಿಯಲಿಲ್ಲ.) ಬಡೇಶಾನ ಹಾಡಿಕೆಯೆಂದರೆ ಆ ಕಾಲದಲ್ಲಿ ಹಳ್ಳಿಗರಿಗೊಂದು ಹಿರಿಹಬ್ಬ.

ಇಷ್ಟು ಹೊತ್ತಿಗೆ "ಸಂಗೂ–ರಾಯಪ್ಪ" ಸತ್ತಿದ್ದರು. ಆಗ ಖಾಜಾಭಾಯಿಯು ಇನ್ನೂ ಚಿಕ್ಕವನಾದುದರಿಂದ ಲೋಕಪ್ರೀತಿಯು ಆತನ ಮೇಲೆ ಇನ್ನೂ ಅಷ್ಟೊಂದು ಉಂಟಾಗಿರಲಿಲ್ಲ. ಇಂಥ ಸಂದರ್ಭದಲ್ಲಿ ಒಮ್ಮೆ ಹಲಸಂಗಿಯವರು ಹದರಿಯ ಬಡೇಶಾನನ್ನು ಹಾಡಿಕೆಗೆ ಕರೆಯಿಸಿದ್ದರು. ಹಾಡಿಕೆ ಮುಗಿದ ಮೇಲೆ ಗ್ರಾಮಪ್ರಮುಖರು ಮನಮೆಚ್ಚಿ ಆತನಿಗೆ "ಆಹೇರಿ"ಯನ್ನು ಮಾಡುವ ನಿಶ್ಚಯ ಮಾಡಿದರು. ಆದರೆ ತರುಣ ಖಾಜಾಭಾಯಿಯು ಈ ಮಾತಿಗೆ ಅಡ್ಡಬಂದನು. ಯಾಕೆಂದರೆ ಹೆಣ್ಣಿನ ಪಕ್ಷ ಹಿಡಿದು ಹಾಡುವ ಬಡೇಶಾನಿಗೆ ಗಂಡಿನ ಪಕ್ಷದ ತಾನು ಸರಿಗಟ್ಟಿ ಹಾಡಬಲ್ಲೆನೆಂಬ ಭರವಸವಿತ್ತು. ಈ ಆತ್ಮವಿಶ್ವಾಸದಿಂದ ಅವನು ಗ್ರಾಮ ಜನರಿಗೆ ಹೀಗೆ ಹೇಳಿದನು : "ಬಡೇಶಾನಿಗೆ ನಾನು ಸರಿಗಟ್ಟಿ ಹಾಡುವವ ನಿರಲಿಕ್ಕಾಗಿ ನೀವು ಆತನಿಗೆ ಜಯಪತ್ರ ಸದೃಶವಾದ ಮುಯ್ಯವನ್ನು ಕೊಡುವುದು ಅನ್ಯಾಯವಾಗುತ್ತದೆ. ಅವನ ಹಾಡಿಕೆಗೆ ನೀವು ಮೆಚ್ಚಿದ್ದರೆ ಅವನಿಗೆ ಬೇಕಾದಷ್ಟು ಹಣವನ್ನು ಕೊಡಬಹುದು. ಆದರೆ "ಆಹೇರಿ"ಯನ್ನು ಮಾತ್ರ ಕೊಡಬೇಡಿರಿ". ಖಾಜಾಭಾಯಿಯ ಈ ಮಾತಿಗೆ ಜನರು ನಕ್ಕು "ಇವನೆಂಥಾ ಹುಚ್ಚನು" ಎಂದು ಗೇಲಿ ಮಾಡಿದರು.

ಇದರಿಂದ ಖಾಜಾಭಾಯಿಯ ಅಭಿಮಾನವು ಕೆರಳಿತು. ಆತನು ತನ್ನ ಮನೆಯೊಳಗಿನ ಎತ್ತುಗಿತ್ತುಗಳನ್ನೆಲ್ಲ ಮಾರಿ ಕೈಯಲ್ಲಿ ದುಡ್ಡು ಮಾಡಿಕೊಂಡು ಎರಡು ವರುಷಗಳವರೆಗೆ ಹಗಲಿರುಳೆನ್ನದೆ ಒಂದೇ ಸವನೆ "ಹಾಡಿನ ತಾಲೀಮು" ಮಾಡಿ, ಹದರಿ ಜಾತ್ರೆಗೆ ಹೋಗಿ ಬಡೇಸಾಹೇಬನ ತೆಕ್ಕೆಗೇ ಬಿದ್ದನು. ಹೀಗೆ ಒಮ್ಮೆಯಲ್ಲ, ಎರಡು ಸಲವಲ್ಲ; ಬಡೇಶಾನ ಹಾಡಿಕೆ ಎಲ್ಲೆಲ್ಲಿದೆಯೆಂದರೆ ಅಲ್ಲಲ್ಲೆಲ್ಲಾ ಖಾಜಾಭಾಯಿಯ ಡಪ್ಪು ಡಣ್ಣೆಂದು ಬೆನ್ನೇ ಹತ್ತಿತು. ಹೀಗೆ ಏಸೋ ಕಡೆಗೆ ಏಸೋ ಸಾರೆಯಾಗಿ ಕೊನೆಗೆ ತೆಲ್ಲಣಗಿ ಎಂಬ ಊರಲ್ಲಿ ಇವರ ಹಿರಸು ಬಿರಸಿಗೇ ಬಂದು ಬಿಟ್ಟಿತು. ಆಗ ಆ ಊರಲ್ಲಿ ಹಾಡಿಕೆಯನ್ನು ಕೇಳುವುದಕ್ಕೆ ಸುತ್ತಮುತ್ತಿನ ೧೦ ಹರದಾರಿಯ ಮೇಲಿನ ಮಂದಿ ನೆರೆದಿತ್ತು. ಅವರಿಗೆಲ್ಲಾ ಖಾಜಾಭಾಯಿಯು ಒಂದು ಬಿನ್ನಹವನ್ನು ಮಾಡಿದನು. ಅದೇನೆಂದರೆ– "ಬಡೇಸಾಹೇಬನು ನಾನು ಹೋದ ಹೋದಲ್ಲೆಲ್ಲಾ ಏನಾದರೂ ನೆವನ ಮಾಡಿ ತಪ್ಪಿಸಿಕೊಂಡು ಹೋಗುತ್ತಿದ್ದಾನೆ, ಇಲ್ಲಿ ಒಂದೇ ಸವನೆ ಏಸು ದಿನ ಹಾಡಿಕೆ ನಡೆಯುವದೋ ನಡೆಯಲಿ. ಕೊನೆಗೆ ಯಾರು ಸೋಲುವರೋ ಅವರು ಮುಂದೆ ಜನ್ಮದಲ್ಲಿ ಎಂದೂ ಹಾಡಿಕೆಯನ್ನೇ ಮಾಡಲಾಗದೆಂದು ಕಾಗದ ಬರೆದು ಕೊಡಬೇಕು." ಖಾಜಾಭಾಯಿಯ ಈ ಮಾತಿನಿಂದ ಜನಕ್ಕೂ ಒಂದು ಬಗೆಯ ಹುರುಪು ಹೆಚ್ಚಿತು. ಅವರೆಲ್ಲರೂ ಇದಕ್ಕೆ ಒಪ್ಪಿ

ಕೊಂಡರು. ಬಡೇಸಾಹೇಬನಿಗೂ ಈ ಕರಾರು ಹಾಕಿದರು. ಸತತ ಏಳು ದಿನ ಹಗಲಿರುಳು ಹಾಡಿಕೆ ನಡೆಯಿತು.

ಇಲ್ಲಿ ಒಂದು ವಿಷಯವನ್ನು ಸ್ವಲ್ಪ ವಿವರಿಸುವುದು ಉಚಿತವೆಂದೆನಿಸುತ್ತದೆ. ಅದೇನೆಂದರೆ- ಹೆಣ್ಣಿನ ಪಕ್ಷದ ಹಾಡಿಕೆಯವರು ಅಂದರೆ ನಾಗೇಶಿ ಅಥವಾ ಕಲ್ಗೀ ಲಾವಣಿಕಾರರು ತಮ್ಮ ಹಾಡುಗಳಲ್ಲಿ ಹೆಣ್ಣು, ಕತ್ತಲೆ, ಸಂಸಾರ, ದೇಹ ಮುಂತಾದ ವಿಷಯಂಗಳ ಪರವಾಗಿ ವಾದಿಸುವರು. ಆದರೆ ಗಂಡಿನ ಪಕ್ಷದ ಹರದೇಶಿ ಅಥವಾ ತುರಾ ಲಾವಣಿಯವರು ಗಂಡು, ಬೆಳಕು, ವೈರಾಗ್ಯ, ಆತ್ಮ ಮುಂತಾದವುಗಳ ಪರವಾಗಿ ವಾದಿಸುವರು. ಇಲ್ಲಿ ಒಂದು ಮಾತೇನೆಂದರೆ- "ಬೆಳಕು ಹೆಚ್ಚು" ಎಂದು ಬಣ್ಣಿಸಿದಾಗ ನಮ್ಮ ಬುದ್ಧಿಗೆ ಬೇಗನೆ ಸರಿಯೆನಿಸುತ್ತದೆ. ಯಾಕೆಂದರೆ ನಮಗೆ ಇದು ಸಹಜ ಗಮ್ಯವಾದ ಮಾತಾಗಿದೆ. ಆದರೆ "ಕತ್ತಲೆ ಬಹಳ ಮಹತ್ವದ್ದು" ಎಂದಾಗ ನಮ್ಮ ಬುದ್ಧಿಗೆ ಏನೋ ಒಂದು ಕೃತ್ರಿಮತೆಯು ತೋರಿದಂತಾಗುತ್ತದೆ. ಹೀಗಿರುವುದರಿಂದ ನಾಗೇಶಿಯವರಿಗೆ ತಮ್ಮ ಪಕ್ಷವನ್ನು ಮಂಡಿಸುವುದೂ ಕೂಡ ಬಹಳ ಬಿಗಿಯಾಗುತ್ತದೆ. ಯಾಕೆಂದರೆ ಇವರು ಪ್ರವಾಹದ ಇದುರಿಗೆ ಈಸುವ ಕೆಲಸವನ್ನು ಮಾಡಬೇಕಾಗುತ್ತದೆ. ಹರದೇಶಿಯವರಿಗೆ ತಮ್ಮ ತತ್ತ್ವವನ್ನು ಮಂಡಿಸಲಿಕ್ಕೆ ಬಹಳ ಜಡಹರಿಯುವದೂ ಇಲ್ಲ; ಮತ್ತು ಜನರಿಗೂ ಅದು ಅವರ ಸಂಸ್ಕಾರದ ಪ್ರವಾಹಕ್ಕೆ ಸರಿಯಾಗಿ ಇರುವದರಿಂದ ಗ್ರಹಿಸಲಿಕ್ಕೆ ಬಹಳ ಸುಲಭವಾಗುತ್ತದೆ. ಹೀಗಾಗಿ ತೆಲ್ಲಣಗಿಯ ಸಭೆಯಲ್ಲಿ ಬಡೇಸಾಹೇಬನ ಹಾಡಿಕೆಯು ಕುಂಠಿತವಾಯಿತು. ನಿಜವಾಗಿಯೂ ಅವನು ಬಹಳ ಮಿಗಿಲಾದ ಕವಿಯು. ಆದರೆ ಅವನು ಮಂಡಿಸಲಿರುವ ವಿಷಯವು ಲೋಕಸಂಸ್ಕಾರಕ್ಕೆ ವಿಪರೀತವಾಗಿರುವದರಿಂದ ಆತನ ಮತಿಯು ಕುಂಠಿತವಾಯಿತು.

ಇದರಲ್ಲಿ ಲೇಖಕನಿಗೆ ಅನಿಸುವುದೇನೆಂದರೆ, ಈಗ 'ಜೀವನ ಸಂಗೀತ'ದಲ್ಲಿ ಪ್ರಕಟವಾಗಿರುವ "ಕರೀ ಹುಡುಗಿ"ಯ ಹಾಡನ್ನು ಓದಿ ನೋಡಿದರೆ ಆ ತೆಲ್ಲಣಗಿಯ ಸಭೆಯಲ್ಲಿ ಜಯಪತ್ರವನ್ನು ಸಂಪಾದಿಸಿದ ಹಾಡು ಅದೇ ಆಗಿರಬಹುದೇನೋ ಎಂಬಂತೆ ತೋರುತ್ತದೆ. ಅದಲ್ಲದಿದ್ದರೆ ಅಂತಹದೇ ಇನ್ನಾವುದೋ ಒಂದು ಪದವಿರಬಹುದು. ವಾಚಕರು ಆ ಕರೀ ಹುಡುಗೀಯ ಹಾಡನ್ನು ಅವಶ್ಯವಾಗಿ ಓದಿ ನೋಡಬೇಕು. ಅದು ಹರದೇಶಿ ನಾಗೇಶಿ ತತ್ತ್ವಗಳ ವಾದವಿವಾದದ ಸರ್ವೋತ್ಕೃಷ್ಟ ಪದವೆಂದು ನನ್ನ ಅಭಿಪ್ರಾಯ.

ತೆಲ್ಲಣಗಿಯ ಸಭೆಯಲ್ಲಿ ಸರ್ವಜನರ ಸಮಕ್ಷಮದಲ್ಲಿ ಬಡೇಸಾಹೇಬನು ಬಾಜಾಸಾಹೇಬನಿಗೆ ಜಯಪತ್ರಕ್ಕೆ ಸಹಿ ಹಾಕಿಕೊಟ್ಟು "ಇಂದಿನಿಂದ ನೀನೇ ಗುರು, ನಾನೇ ಶಿಷ್ಯ" ಎಂದು ಬಾಯಿಬಿಚ್ಚಿ ನುಡಿದು "ಇಂದಿಗೆ ನಾನು ಹಾಡಿಕೆಯನ್ನು ಬಿಟ್ಟುಬಿಟ್ಟೆ"ನೆಂದು ಪ್ರತಿಜ್ಞೆ ಮಾಡಿ ತನ್ನ ಬಾರಿಸುವ ಡಪ್ಪನ್ನು ನೆಲಕ್ಕಿಟ್ಟನು.

ಇದುವರೆಗಿನ ವಿಷಯವೆಲ್ಲಾ ವಾಚಕರಿಗೆ ಏನೋ ಒಂದು ಸಾಮಾನ್ಯಸಂಗತಿಯೆಂದು ತೋರುವುದು ಸಹಜ. ಆದರೆ ರಸಜೀವಿಗಳ ಹೃದಯದಲ್ಲಿ ಇಂಥ ಪ್ರಸಂಗಗಳ ಮೂಲಕ ಎಂಥೆಂಥ ಅಗಾಧ ಪರಿವರ್ತನಗಳು ಘಟಿಸುವವೆಂಬುದನ್ನು ಊಹಿಸುವುದು ಅಸಾಧ್ಯ. ಬಡೇಸಾಹೇಬನು ಜಯಪತ್ರದ ಮೇಲೆ ಬರೇ ಹೊರಗಿನ ಕೈಯೊಂದರಿಂದ ಮಾತ್ರವೇ ಒಪ್ಪಿಗೆಯ ಸಹಿಯನ್ನು ಹಾಕಲಿಲ್ಲ; ಆದರೆ ತನ್ನ ಅಂತರಂಗದಲ್ಲಿ ನಿಜವಾಗಿಯೇ ಆತನು ಆ ಮಾತಿಗೆ ಒಪ್ಪಿ ತಲೆದೂಗಿದನು. ಇಷ್ಟು ದಿನಗಳವರೆಗೆ ತಾನು ಪದ್ಧತಿಯ ಬಂಧನದ ಮೂಲಕ ಮನಸ್ಸಿಲ್ಲದಿದ್ದರೂ ವಾದಕ್ಕೆಂದು ವಿಪರೀತ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದು ಅವನಿಗಿಂದು ಪಶ್ಚಾತ್ತಾಪದ ಕಾರಣವಾಯಿತು. ಖಾಜಾಭಾಯಿಯ ಹಾಡುಗಳಿಂದಲೇ ತನಗೆ ಜೀವನದ ನಿಜವಾದ ಮಾರ್ಗವು ಸಿಕ್ಕಿತೆಂದೆನಿಸಿತು. ಅಂದಿನಿಂದ ಆತನು ಖಾಜಾಭಾಯಿಯನ್ನು ತನ್ನ ಪರಮಾರ್ಥದ ನಿಜಗುರುವೆಂದು ಹೃದಯದಲ್ಲಿ ಭಾವಿಸಿ ಇವನೊಡನೆ ಇದಕ್ಕನುಗುಣವಾಗಿ ಅತ್ಯಂತ ಆದರಭಾವದಿಂದ ನಡೆದುಕೊಳ್ಳಹತ್ತಿದನು.

ಈ ಸಂಗತಿಯು ನಡೆದ ಬಳಿಕ ಈ ಪ್ರಾಂತದಲ್ಲೆಲ್ಲಾ ಖಾಜಾಭಾಯಿಯ ಕೀರ್ತಿಯು ಅತಿಶಯವಾಗಿ ಪಸರಿಸಿತು. ಎಲ್ಲಿ ನೋಡಿದಲ್ಲಿ ಖಾಜಾಭಾಯಿಯ ಹಾಡಿಕೆಯನ್ನು ಕೇಳಬೇಕೆಂಬ ಕುತೂಹಲವೇ ಕುತೂಹಲ.

ಹೀಗೆ ಒಂದೆರಡು ವರುಷಗಳು ದಾಟಿದವೆನ್ನುವಷ್ಟರಲ್ಲಿ ಇಂಡಿಯ ಜಾತ್ರೆಯಲ್ಲಿ ಇನ್ನೊಂದು ಪ್ರಸಂಗವು ನಡೆಯಿತು. ಅಲ್ಲಿ ಆಗ ಎಲ್ಲೆಲ್ಲಿಯವರೋ ಏಸೋ ಮಂದಿ ಲಾವಣಿಕಾರರು ನೆರೆದಿದ್ದರು. ಎಲ್ಲಾ ಹಾಡಿಕೆ ಮುಗಿಯುವ ಸುಮಾರಿಗೆ ಅಲ್ಲಿಯ ಗ್ರಾಮ ಪ್ರಮುಖರೆಲ್ಲಾ ಕೂಡಿ, ಅಲ್ಲಿಗೆ ಸಹಜವಾಗಿ ಜಾತ್ರೆಯನ್ನು ನೋಡಲಿಕ್ಕೆಂದು ಬಂದಿದ್ದ ಬಡೇಸಾಹೇಬನಿಗೆ– "ಏನಪ್ಪಾ, ನಿನ್ನವೊಂದೆರಡು ಹಾಡುಗಳನ್ನು ಕೇಳಬೇಕೆಂದು ನಮ್ಮೆಲ್ಲರ ಹೃದಯಗಳಿಗೆ ಬಹಳ ಹಸಿವೆಯಾಗಿದೆ. ನಮಗಿಷ್ಟು ಉಣಬಡಿಸಲಾರೆಯಾ ! ?" ಎಂದು ಕೇಳಿಕೊಂಡರು. ಅದಕ್ಕೆ ಆತನು "ನನ್ನ ಗುರುವಿಗೆ ನನ್ನ ಹಾಡಿಕೆಯನ್ನು ಅರ್ಪಿಸಿದ್ದೇನೆ; ಅದರ ಮೇಲೆ ನನ್ನ ಅಧಿಕಾರವಿಲ್ಲ. ಆ ಗುರುವು ಅಪ್ಪಣೆ ಕೊಟ್ಟ ಹೊರತು ಶಕ್ಯವಿಲ್ಲ" ಎಂದನು. ಅದಕ್ಕೆ ಅವರು– "ಏನಪ್ಪಾ ಬಡೇಶಾ, ಹಿಂದು ಹಾಡುಗಾರರ ಗಂಡ ನೀನು. ನಿನಗೊಬ್ಬ ಗುರುವಿನ್ನಾವನು ಬಂದನೋ ?" ಎಂದು ಆಶ್ಚರ್ಯದಿಂದ ಕೇಳಿದರು. ಆಗ ಅವನು ತನ್ನ ಗುರುವು ಖಾಜಾಭಾಯಿಯೆಂದು ಹೇಳಿ ತಲ್ಲಣಗಿ ಸಭೆಯಲ್ಲಾದ ಸರ್ವವೃತ್ತಾಂತವನ್ನು ಅವರ ಜ್ಞಾಪಕಕ್ಕೆ ತಂದುಕೊಟ್ಟನು. ಆಗ ಅವರು ಖಾಜಾಭಾಯಿಗೆ ಒಪ್ಪಿಗೆ ಕೊಡೆಂದು ಕೇಳಿಕೊಂಡರು. ಅವನು– "ಏನೋ ಬಡೇಶಾ, ತೀರಾ ಹೀಗೆ ಮಾಡುವರೇನು? ಹಿರಿಯರೆಲ್ಲಾ ಹಾಡೆಂದು ಹೇಳುತ್ತಿದ್ದಾರೆ. ಎರಡು ಪದಾ ಹಾಡು, ಅದರಲ್ಲೇನು ತಪ್ಪಾಗುವುದು ! ?" ಎಂದನು. ಬಡೇಸಾಹೇಬನು– "ಹಾ ! ನನ್ನ ಗುರುವಿನ ಅಪ್ಪಣೆಯಾಯಿತು !!" ಎಂದು ನುಡಿದು ಕೈಯಲ್ಲಿ

ಡಪ್ಪು ತೆಗೆದುಕೊಂಡು ಎರಡೆಂದರೆ ಕೇವಲ ಎರಡೇ ಹಾಡುಗಳನ್ನು ಹಾಡಿ "ನನ್ನ ಗುರುವಿನ ಅಪ್ಪಣೆ ನೆರವೇರಿತು !" ಎಂದು ಡಪ್ಪು ಕೆಳಗಿಟ್ಟನು. ಜನರಿಗೆ ಇನ್ನೂ ಈತನ ಹಾಡು ಕೇಳಬೇಕೆಂಬ ಕುತೂಹಲವು ಎಷ್ಟೋ ಇತ್ತು. ಆದರೆ ಆತನು ಅದಕ್ಕೆ ಎಳ್ಳಷ್ಟೂ ಸಮ್ಮತಿಸಲಿಲ್ಲ. ಇಷ್ಟೇ ಅಲ್ಲ, ಅದೇ ಕಾಲಕ್ಕೆ ಅವನು ತನ್ನ ಮೈಮೇಲಿನ ಅರಿವೆಗಳನ್ನೆಲ್ಲ ಹರಿದು ಸುಟ್ಟು ಕಾವಿಯ ಕಫನಿಯನ್ನು ಧರಿಸಿ "ಜಯ್ ಗುರುವೇ !" ಎಂದು ಬೈರಾಗಿಯಾಗಿ ಹೋದನು !

ಇಂಥ ಉದ್ರೇಕ ಪರವಶತೆಗೆ ನಮ್ಮ ಮನಸ್ಸು ಸಮ್ಮತಿಸಲಿ ಅಥವಾ ಸಮ್ಮತಿಸದಿರಲಿ, ಆದರೆ ಕವಿಕುಲತಿಲಕನಾದ ಬಡೇಸಾಹೇಬನ ಆ ನಿರ್ಮಲ ಹೃದಯಕ್ಕೆ ನಾವು ಸಾವಿರ ಸಾರೆ ನಮಸ್ಕರಿಸಿದರೂ ಸಾಲದು !

ಆ ಮೇಲೆ ಕೆಲವು ವರುಷಗಳಲ್ಲಿ ಖಾಜಾಭಾಯಿಯ ಕೈಕೆಳಗೆ ಬೇರೆ ಇಬ್ಬರು ನವತರುಣರು ಹಾಡಿಕೆಗೆ ಮೊದಲು ಮಾಡಿದರು. ಅವರಿಬ್ಬರ ಸ್ವರ ಮೆಟ್ಟಿಗೆಯ ಗತ್ತೂ ಕೂಡ ಬಹಳ ರಂಜಕವಾಗಿತ್ತು. ಖಾಜಾಭಾಯಿಯು ಇವರಿಬ್ಬರಿಗೂ ವಸ್ತಾದನಾಗಿ ತನ್ನ ಜೊತೆಗೆ ಇವರನ್ನು ಹಾಡಿಕೆಗೆ ಕರೆದುಕೊಂಡು ಹೋಗುತ್ತಿದ್ದನು. ಆ ಸಮಯದಲ್ಲಿ ಬೀಬೀಇಂಗಳಗಿಯ ಹಸನನೆಂಬ ನಾಗೇಶಿ ಲಾವಣಿಕಾರನ ಪ್ರಖ್ಯಾತಿಯು ಬಹಳ ಬೆಳೆಯಿತು. ಖಾಜಾಭಾಯಿ ತನ್ನ ಮೇಳದೊಂದಿಗೆ ಮದ-ಭಾವಿಯ ಜಾತ್ರೆಯಲ್ಲಿ ಹಸನನಿಗೆ ಇದಿರಾದನು. ಆದರೆ ಅವನದೊಂದು ಹಾಡಿಕೆಯ ಹೊಸ ಬಗೆಯ ದೊರುವು (ಮಟ್ಟು) ಆಗ ಜನರನ್ನು ಬಹಳ ಮರುಳು ಮಾಡಿತ್ತು. ಆದ್ದರಿಂದ ಅಲ್ಲಿ ಖಾಜಾಭಾಯಿಗೆ ಯಶವು ಸಿಕ್ಕಲಿಲ್ಲ. ಆಮೇಲೆ ಇವನು ತಿರುಗಿ ಊರಿಗೆ ಬಂದು ಹಸನನ ಮಟ್ಟಿನ ಮೇಲೆ ಪದಗಳನ್ನು ಹೆಣೆದು ತನ್ನ ಮೇಳದವರಿಗೆ ಕಲಿಸಿ ಚೆನ್ನಾಗಿ ಹಾಡಿಕೆಯ ತಾಲೀಮು ಮಾಡಿಸಿಕೊಂಡು ಮರುವರುಷ ಲಚ್ಯಾಣದ ಜಾತ್ರೆಯಲ್ಲಿ ಅವನಿಗೆ ಟಕ್ಕರು ಕೊಟ್ಟನು. ಆಗ ನೆರೆದ ಜನರೆಲ್ಲ "ಸೈ ಸೈ" ಅನ್ನ ಹತ್ತಿದರು. ಅದಕ್ಕೆ ಹಸನನು ಕೂಡಲೆ ಹೊಸ ಯುಕ್ತಿಯನ್ನು ಹುಡುಕಿ ತೆಗೆದನು. ಅವನು ತನ್ನದೆಂದು ಪ್ರಸಿದ್ಧಿಗೆ ಬಂದಿದ್ದ ಮಟ್ಟವನ್ನೆ ಒಮ್ಮೆಲೆ ಬದಲಿಸಿ ತೀರ ಹೊಸದೊಂದು ಮಟ್ಟಿನ ಹಾಡನ್ನು ಆಗಿನದಾಗ ಕಟ್ಟಿ ಹಾಡಿದನು. ಆ ಹೊಸ ಪದವು ಜನರನ್ನು ದಂಗುಬಡಿಸಿಬಿಟ್ಟಿತು. ಆದರೆ ಖಾಜಾಭಾಯಿಗೆ ಬೇಕಾದ ಹೊಸ ಮಟ್ಟಿನ ಮೇಲೆ ಆಗಿಂದಾಗ ಹಾಡನ್ನು ಹೆಣೆಯುವ ಕಲೆಯು ಈ ಪ್ರಸಂಗದಲ್ಲಿಯೇ ಸಾಧಿಸಿತೆಂದು ಹೇಳಬಹುದು. ಹಸನನ ಹಾಡು ಮುಗಿಯುವಷ್ಟರಲ್ಲಿ ಖಾಜಾಭಾಯಿಯು ಅದೇ ದೊರುವಿನ ಮೇಲೆ ತೋಡಿಯ ಹಾಡನ್ನು ಕಟ್ಟಿ ತನ್ನ ಮೇಳದವರ ಬಾಯಿಯಿಂದ ಹಾಡಿಸಿಬಿಟ್ಟನು. "ವರಜಿಗೆ ಪರಜು" ಎರಕು ಹೊಡೆದಂತೆ ಕೂಡಿದ್ದರಿಂದ ಜನರು ಬೆರಗುಬಟ್ಟರಷ್ಟೇ ಅಲ್ಲ; ಆದರೆ ಸ್ವತಃ ಹಸನನಿಗೆ ಹರುಷ ಹೆಚ್ಚಾಗಿ ಆತನು ಈ ಮೇಳದ ಹುಡುಗರ ತಲೆಯನ್ನು ಆಘ್ರಾಣಿಸಿ 'ಸೈ ಸೈ'

ಎಂದನಂತೆ ! ಇವರಿಬ್ಬರು ಕವಿಗಳ ಆ ಹೊಸ ಹಾಡುಗಳ ಪಲ್ಲವಿಗಳನ್ನು ಹೇಳುತ್ತೇನೆ.

ಹಸನ :–

"ಏನ ದಿಡಗ ಬಂತೊ ನಿನ್ಗ ಗುರು।
ಹಾಡಿನಾ ಧೊರು ।
ನನ್ನಲೆ ಕಲ್ತಿ ।
ನಾ ತಾಯಿ ಇರುವತನ ನಿನಗ್ಯಾತರ ಚಿಂತೀ ॥"

ಖಾಜಾಭಾಯಿ :–

"ನಮ್ಮ ತಂದಿ ಹಾನ ಅವ ಸೃಜ ।
ಅವನಲೀ ಬೀಜ।
ಜೀವಜ್ಯೋತಿ ।
ಗಂಡ ಗುರುವ ಇರುವತನ ನಿನಗ್ಯಾತಕ ಭೀತಿ ॥

ಆ ಬಳಿಕ ಮರುವರ್ಷ ಇಂಡಿಯ ಜಾತ್ರೆಗೆ ಇಪ್ಪತ್ತೆರಡು ಕಡೆಯ ಮೇಳದವರು ನೆರೆದಿದ್ದರು. ಆದರೆ ಹಸನನಿಗೆ ಪ್ರತಿಯಾಗಿ ಹಾಡುವುದಕ್ಕೆ ಯಾರೂ ತಟ್ಟಲಿಲ್ಲ. ಕೊನೆಗೆ ಖಾಜಾಭಾಯಿಯೇ ಅವನ ಸಮತೂಕದವನೆಂದು ಅಲ್ಲಿ ಸಿದ್ಧವಾಯಿತು. ಆಗ ಅಲ್ಲಿಯ ಗ್ರಾಮಪ್ರಮುಖರೆಲ್ಲಾ ಕೂಡಿ ಖಾಜಾಭಾಯಿಗೆ ಒಂದು ಹೊಲವನ್ನು ಪಾರಿತೋಷಕವಾಗಿ ಕೊಟ್ಟರು. (ಮುಂದೆ ಕೆಲ ವರ್ಷಗಳೊಳಗಾಗಿ ಈತನು ಆ ಹೊಲವನ್ನು ಅಲ್ಲಿಯ ದೇವರ ಗುಡಿಗೇ ಕೊಟ್ಟುಬಿಟ್ಟನು.) ಈ ಪ್ರಸಂಗದಿಂದ ಹಸನನೂ ಖಾಜಾಭಾಯಿಯೂ ಒಂದು ನಿಶ್ಚಯವನ್ನು ಮಾಡಿದರು. ಆದೇನೆಂದರೆ "ಎಲ್ಲಿ ಹಾಡಿದರೂ ಇನ್ನು ಮುಂದೆ ತಾವಿಬ್ಬರೇ ಒಬ್ಬರಿಗೆ ಪ್ರತಿಯಾಗಿ ಒಬ್ಬರು ಹಾಡಬೇಕಲ್ಲದೆ ಉಳಿದ ಅಂಥಿಂಥ ಹಾಡುಗಾರರ ಇದಿರಾಗಿ ಹಾಡಬಾರದು." ಈ ಕಾಲದಿಂದ ಮುಂದೆ ಹಸನನು ಸಹಜವಾದ ತನ್ನ ಮಾತುಕತೆಯಲ್ಲಿ ಕೂಡ "ಇಷ್ಟು ದಿನವೂ ನನಗೆ ಗಂಡನಾರೂ ಸಿಕ್ಕಿದ್ದಿಲ್ಲ; ಕೊನೆಗೆ ಖಾಜಾ, ನೀನೇ ಒಬ್ಬನು ನನಗೆ ಒಳ್ಳೆ ಗಂಡ ದೊರೆದಿ !" ಎಂದು ತನ್ನ ಜೀವಮಾನದಲ್ಲೆಲ್ಲಾ ಉದ್ಗಾರವನ್ನು ತೆಗೆಯುತ್ತಿದ್ದನಂತೆ ! ಇಂಥ ರಮ್ಯ ಸೋಲುಗೆಲವುಗಳು ಜಗತ್ತಿನಲ್ಲಿ ಇನ್ನೆಲ್ಲಿ ಸಿಕ್ಕಾವು ? !

ಹಿಂದೆ ಹೇಳಿದ ಹದರಿಯ ಬಡೇಸಾಹೇಬನ ಸಮಾಚಾರವು ಅಷ್ಟಕ್ಕೇ ಮುಗಿಯಲಿಲ್ಲ. ಕೆಲಕಾಲ ಕಳೆದ ಬಳಿಕ ಮುಂದೊಂದು ದಿನ ಖಾಜಾಭಾಯಿಯು ತನ್ನ ಮೇಳದವರೊಂದಿಗೆ ಬೇರೆ ಕಡೆಗೆಲ್ಲಿಯೋ ಹಾಡಿಕೆಯ ಸಲುವಾಗಿ ಹೊರಟಿದ್ದನು. ಆಗ ಒಂದು ರೇಲ್ವೇ ಸ್ಟೇಶನ್ನಿನಲ್ಲಿ (ಲಚ್ಯಾಣದಲ್ಲಿ) ಇವರು ತಮ್ಮ

ರೊಟ್ಟಿಯ ಗಂಟು ಬಿಚ್ಚಿಕೊಂಡು ಊಟಕ್ಕೆ ಕುಳಿತಿದ್ದರು. ಆಗ ಕಾವಿಯ ಕಫನಿಯ ಗಡ್ಡದವನೊಬ್ಬ ತಮ್ಮ ಕಡೆಗೆ ಹೊರಟಿದ್ದು ಇವರಿಗೆ ಕಾಣಿಸಿತು. ಇವರು 'ಅವನ್ಯಾರೋ' ಎಂದುಕೊಂಡರು. ಅವನ ಗುರುತು ಹತ್ತಲಿಲ್ಲ. ಆದರೆ ಅವನು ಬಂದವನೇ ಖಾಜಾಭಾಯಿಯನ್ನು ಅಪ್ಪಿಕೊಂಡು "ಗುರುವೇ ಕೊನೆಯ ಕಾಲಕ್ಕೆ ನನಗೆ ದರ್ಶನವನ್ನು ಕೊಟ್ಟಿ ! ಆನಂದವಾಯಿತು ! ಆನಂದವಾಯಿತು ! ಗುರುವೇ ಪರಮಾನಂದವಾಯಿತು !!! ದರ್ಶನ ಕೊಟ್ಟಿ ಸಾಕು ! ಆನಂದ ಆನಂದ !!" ಹೀಗೆಂದು ಆವೇಶದಿಂದ ಉದ್ಗಾರ ತೆಗೆಯಹತ್ತಿದನು. ಆಗ ಖಾಜಾಭಾಯಿಗೆ ಬಡೇಸಾಹೇಬ ನೆಂದು ಗುರುತ ಹತ್ತಲು ಅವನು ಆಶ್ಚರ್ಯಭರಿತನಾಗಿ "ಏನೋ ಬಡೇಶಾ, ಇದೇನು ನಿನ್ನ ಆಟ ? ನನಗಂತೂ ಏನು ತಿಳಿಯದು ನೋಡು ! ಹೀಗ್ಯಾಕೆ ಹುಚ್ಚನಂತೆ ಮಾಡುವಿ !? ಬಾ ನಮ್ಮೊಡನೆ ಊಟ ಮಾಡ ಬಾ" ಎಂದನು. ಅದಕ್ಕವನಿಗೆ ಮತ್ತಷ್ಟು ಹರುಷವಾಯಿತು. "ಅಹಾ ! ಗುರುವಿನ ಪ್ರಸಾದ ! ನಾನ್ಯಾಕೆ ಒಲ್ಲೆನ್ನಲಿ ಆನಂದ-ಆನಂದ-ಪರಮಾನಂದವಾಯಿತು !" ಹೀಗೆ ಅನ್ನುತ್ತ ಅನ್ನುತ್ತಲೇ ಊಟಮಾಡಿದನು. ಉಗಿಬಂಡಿಯು ಬಂದ ಬಳಿಕ ಖಾಜಾಭಾಯಿಯು ತನ್ನ ಮೇಳದವರೊಂದಿಗೆ ಒಳಗೆ ಸೇರಿದನು. ಅವನು ಬಂಡಿಯನ್ನೇರುವವರೆಗೂ ಬಡೇಸಾಹೇಬನ "ಆನಂದ ಆನಂದ"ವೆಂಬ ಆನಂದದ ಕೂಗು ನಿಂತಿರಲೇ ಇಲ್ಲ ! ಖಾಜಾಭಾಯಿಯು ಬಹಳೇ ಸೋಜಿಗಪಡುತ್ತ ಮುಂದೆ ಸಾಗಿದನು. ಅವನು ತನ್ನ ಹಾಡಿಕೆಯ ಪ್ರವಾಸವನ್ನೆಲ್ಲ ಮುಗಿಸಿಕೊಂಡು ಹಿಂದಿರುಗಿ ಬರುವಾಗ ಇನ್ನೊಂದು ಸ್ಟೇಶನ್ನಿನಲ್ಲಿ ಮುಸಲ್ಮಾನರದೊಂದು ಹೊಸ ಗೋರಿಯು ಖಾಜಾಭಾಯಿಯ ಕಣ್ಣಿಗೆ ಬಿತ್ತು !

ಖಾಜಾಭಾಯಿಗೆ ಏನೋ ಒಂದು ಬಗೆಯ ಸಂಶಯ ಬಂದು ನೆರೆದ ಜನರಿಗೆ "ಆ ಹೊಸ ಗೋರಿ ಯಾರದೆಂ"ದು ಆತುರತೆಯಿಂದ ಕೇಳಿದನು. ಅದಕ್ಕವರು "ಹದರಿ ಬಡೇಶಾನದು" ಎಂದರು ! ಕೂಡಲೇ ಖಾಜಾಭಾಯಿಯು "ಬಡೇಶಾ ! ಬಡೇಶಾ !!" ಎಂದು ಬಿಕ್ಕಿ ಬಿಕ್ಕಿ ಅಳಹತ್ತಿದನು ! ಬಡೇಸಾಹೇಬನ ಆನಂದೋನ್ಮಾದವೇ ಆತನ ಆನಂದ ಸಮಾಧಿಗೆ ಬೀಜವಾಗಿತ್ತು ! ಧನ್ಯ ಜೀವಾ, ನೀನೇ ಧನ್ಯನು ! ನಿನ್ನ ಭಾವವು ನಿನ್ನನ್ನು ತನ್ನ ಉಡಿಯಲ್ಲಿ ತೆಗೆದುಕೊಂಡಿತು.

ಖಾಜಾಭಾಯಿಗೆ ಬಡೇಸಾಹೇಬನು "ಗುರುವೇ ಗುರುವೇ" ಎಂದಂ ಅಂದು, ಇಂದು ಅವನನ್ನೆ ತನ್ನ ಶಿಷ್ಯನನ್ನಾಗಿ ಮಾಡಿಕೊಂಡನು ! ಖಾಜಾಭಾಯಿಯ ಜೀವನದ ದಿಶೆಯೇ ಅಂದಿಗೆ ಬದಲಾಯಿತು. "ನನ್ನಲ್ಲೇನೂ ಅಂಥಾದ್ದು ಇದ್ದಿದ್ದಿಲ್ಲ; ಆದರೆ ಆತನು ಅದರಲ್ಲಿಯೇ ಪಡಕೊಂಡನು ! ಅವನೇ ಪುಣ್ಯಶಾಲಿ, ನಾನು ಕಡು ಪಾಪಿ ! ಬಡೇಶಾ, ನಾನು ನಿನ್ನ ಮುಂದೆ ಇಂದಿಗೆ ಕಃಪದಾರ್ಥನು ! ಇಂದಿಗೆ ನಿಜವಾದ ಜಯಪತ್ರವನ್ನು ನೀನು ಪಡೆದಿ ! ನನ್ನ ಜಯಪತ್ರವಿಂದಿಗೆ ಜೊಳ್ಳು

ಕಾಗದವಾಯಿತು ! ನಾನು ನಿನ್ನ ದಾಸಾನುದಾಸನು. ಇಂದಿಗೆ ನನ್ನ ಜನ್ಮಕ್ಕೆ ಹಾದಿ ತೋರಿಸಿದಿ ! ಬಡೇಶಾ, ನಿನ್ನನ್ನು ಎಷ್ಟು ನೆನೆಯಲಿ!" ಖಾಜಾಭಾಯಿಯು ತನ್ನ ಜೀವಮಾನದಲ್ಲೆಲ್ಲಾ ಈ ವಿಷಯವನ್ನು ಕತೆಮಾಡಿ ಹೇಳುತ್ತಿದ್ದನು.

ಈ ಕಾಲದಿಂದ ಮುಂದೆ ಖಾಜಾಭಾಯಿಯ ಜೀವವು ಅಂತರ್ಮುಖವಾಯಿತು. ನಮಾಜು, ಧ್ಯಾನ ಮುಂತಾದವುಗಳು ಅವನ ಜೀವನದ ಮುಖ್ಯಕಾರ್ಯಗಳಾದವು.

ಹೀಗೆಲ್ಲಾ ಆದ ಬಳಿಕ ನೈತಿಕ ವಿಷಯವು ಆತನ ಹಾಡುಗಳ ಮುಖ್ಯ ವಿಷಯ ವಾಯಿತು. ಒಮ್ಮೆ ಇವನು ವ್ಯಭಿಚಾರವನ್ನು ನಿಷೇಧಿಸುವ ಹಾಡೊಂದನು ಹೆಣೆದನು, ಅದರಲ್ಲಿ "ರಂಡೀ ಮಾಡಿದವಗ ಪುಂಡ ಹ್ಯಾಂಗನಬೇಕು ಷಂಡನ ಸಮಾನಾ ॥" ಎಂದು ಮುಂತಾದುದಾಗಿ ಹಾಡಿದ್ದನು. ಆಗ ಊರೊಳಗಿನ ಪ್ರಮುಖರೆಂಬರಲ್ಲೆಷ್ಟೋ ಜನರಿಗೆ ಆ ಹಾಡಿನಿಂದ ಬಹಳವಾಗಿ ಪೆಟ್ಟುಹತ್ತಿತು. ಊರಲ್ಲೆಲ್ಲಾ ವಿರೋಧವೇ ವಿರೋಧ; ಬೈಗಳೇ ಬೈಗಳು. ಇವನ ಪ್ರತಿಪಕ್ಷಗಳು ಆ ಹಾಡಿಗೆ ತೋಡಿ ಹಾಡೆಂದು ಒಂದು ಪದವನ್ನು ಕಟ್ಟಿ ಅದರಲ್ಲಿ ಖಾಜಾಭಾಯಿಯನ್ನು ಒಳಿತಾಗಿ ಬೈದರು ಮತ್ತು ಅವನ ಮೇಳದವರ ಮನೆತನದ ಹುಳುಕುಗಳನ್ನೆಲ್ಲ ಹಾಡಿನಲ್ಲಿ ಟೀಕಿಸಿದರು. ಒಟ್ಟಾರೆ ಇದೆಲ್ಲ ಪ್ರಕರಣದಿಂದ ಖಾಜಾಭಾಯಿಯ ಕೋಮಲಾಂತಃಕರಣಕ್ಕೆ ಬಹಳ ಪೆಟ್ಟು ತಗುಲಿತು.

ನಿಜವಾದ ತೋಡಿಯೆಂದರೆ ಹೀಗಲ್ಲ. ಪೌರಾಣಿಕ ಕಥೆಗಳೊಳಗಿನ ದೊಡ್ಡ ದೊಡ್ಡವರ ವ್ಯಭಿಚಾರದ ಸಂದರ್ಭಗಳನ್ನೆಲ್ಲ ಶೇಖರಿಸಿ ಒಂದು ಪದವನ್ನು ಮಾಡಿ, ಅದರಲ್ಲಿ "ಲೋಕದೊಳಗೆ ವ್ಯಭಿಚಾರ ಮಾಡದೆ ಯಾರು ಬಿಟ್ಟಿದ್ದಾರೆ ?" ಎಂದು ತೋರಿಸಿಕೊಡಬೇಕಾಗಿತ್ತು. ಯಾಕೆಂದರೆ ಹಾಡಿಕೆಯವರ ರೀತಿಯೇ ಹೀಗಿದೆ. ಆದರೆ ಊರೊಳಗಿನವರು ಹೀಗೆ ಮಾಡುವದರ ಬದಲು ವೈಯಕ್ತಿಕ ಗೃಹಛಿದ್ರಗಳನ್ನೆಲ್ಲ ಪೋಣಿಸಿ ತೋಡಿಯನ್ನು ಮಾಡಿದ್ದರಿಂದ ಖಾಜಾಭಾಯಿಯು ತನ್ನ ಹಾಡಿಗೆ ತಾನೇ ಒಂದು ಪದ್ಧತಿಗೆ ಸರಿಯಾದ ತೋಡಿಯನ್ನು ಮಾಡಿ ಅದನ್ನು ಜನರಲ್ಲಿ ಮಾದರಿಯ ಸಲುವಾಗಿ ಹಾಡಿ ತೋರಿಸಿದನು. ಇಷ್ಟೊತ್ತಿಗೆ ಇವನ ಸರಿಸಮಾನಿಕರಾದ ಇಂಗಳಗಿಯ ಹಸನನು ತೀರಿ ಹೋಗಿದ್ದನು. ಆದ್ದರಿಂದ ಆ ತೋಡಿಯ ಕೊನೆಯಲ್ಲಿ—

"ತೋಡೀ ಮಾಡವ ಹೋದನಾ ।
ಅವನೇ ಇಂಗಳಗೀ ಹಸನಾ ।
ಫಾಲತೂ ಉಳದದ್ದೇ ಕಡದನಾ ॥"

ಎಂದು ಖಾಜಾಭಾಯಿಯು ತನ್ನ ನಿಜಪ್ರತಿಪಕ್ಷಿಯಾದ ಕವಿ ಶೇಖರನಿಗೆ ಕೊನೆಯ ತಿಲಾಂಜಲಿಯನ್ನು ಕೊಟ್ಟನು ! ಈ ರಸಕವಿಗಳ ಪರಸ್ಪರ ಗುಣಗ್ರಾಹಿತೆಯನ್ನು

ಎಷ್ಟು ಕೊಂಡಾಡಿದರೂ ಸಾಲದು. ಇಂದಿನ ನವಸಂತಾನಕ್ಕೆ ದಿವ್ಯಸದ್ಗುಣಗಳು ಲಭಿಸಲಿ !

ಇಲ್ಲಿಗೆ ನಮ್ಮ ಕವಿಕುಲ ಚೂಡಾಮಣಿಯ ಸ್ವಗ್ರಾಮದ ಜೀವನದ ಇತಿಶ್ರೀ ಯಾಯಿತು. ಖಾಜಾಭಾಯಿಯು ಊರೊಳಗಿನವರ ತಿರಸ್ಕಾರದ ಸಲುವಾಗಿ ಊರ ಬಿಟ್ಟು ಬೇರೂರಿಗೆ ಹೋದನು. ಅಲ್ಲಿಯೂ ಒಂದೆರಡು ವರುಷ ಇರುವಷ್ಟ ರಲ್ಲಿ ಹೀಗೆಯೇ ಆಯಿತು. ಅಲ್ಲಿಯ ಮುಖ್ಯ ವ್ಯಕ್ತಿಗಳ ಗುಣಾವಗುಣಗಳಿಗೆ ಸಂಬಂಧಿಸಿದ್ದೊಂದು ಹಾಡನ್ನು ಕಟ್ಟಿ, ಅಲ್ಲಿ ಹಾಡಲು ಅಲ್ಲಿಯೂ ಈತನಿಗೆ ನಿಲ್ಲಲಿಕ್ಕೆ ಮನಸ್ಸು ಒಪ್ಪಲಿಲ್ಲ. ಅಲ್ಲಿಂದ ಮುಂದೆ ಮತ್ತೊಂದು ಊರಿಗೆ ಹೋದನು. ಅಲ್ಲಿಯ ಪ್ರಮುಖರು ಆತನನ್ನು ಬಹಳ ಪರಾಮರಿಸಿ ಕರೆದುಕೊಂಡರು. ಅವನಿಗೆ ಅಲ್ಲಿ ಅವರು ಬಹಳ ಅನುಕೂಲತೆಯನ್ನು ಮಾಡಿಕೊಟ್ಟರು. ಆಗಿನಿಂದ ಆತನು ಬಹುತರವಾಗಿ ಯಾವಾಗಲೂ ದರ್ಗಾದಲ್ಲಿಯೇ ದಿನವನ್ನೆಲ್ಲಾ ಕಳೆಯಹತ್ತಿದನು. ದಿನಾಲು ಐದು ಸಾರೆ ನಮಾಜ ಮಾಡಹತ್ತಿದನು. ಹೀಗೊಂದು ವಿಧದಿಂದ ಕವಿಯ ಜೀವನವು ಸರ್ವ ಸಂತಾಪಗಳಿಂದ ದೂರವಾಗಿ ಶಾಂತವಾತಾವರಣವನ್ನು ಹುಡುಕಿ ಕೊಂಡಿತು. ಆ ಕಾಲದಲ್ಲಿ ಹಾಡಿದ ಹಾಡುಗಳಲ್ಲಿ ತತ್ತ್ವದ ಚುಟಕಿಗಳೇ ಹೆಚ್ಚು. ಅದರಲ್ಲಿಯೂ ಕೆಲ ಕೆಲವು ಲಾವಣಿಗಳನ್ನು ಕಟ್ಟಿದ್ದೆಂದರೆ ಅವುಗಳೆಲ್ಲಾ ಭಕ್ತಿಸಾರ ಕಥಾ ಲಾವಣಿಗಳೇ ಸರಿ.

ಇಷ್ಟು ಹೊತ್ತಿಗೆ 'ಜೀವನ ಸಂಗೀತ'ದ ಸಂಗ್ರಹಕರ್ತರಲ್ಲೊಬ್ಬರು (ಲೇಖಕನ ಗೆಳೆಯನು) "ಇಂಥಾ ರತ್ನವನ್ನು ತಿರುಗಿ ಕರೆತರಲೇ ಬೇಕು" ಎಂದು ಬಗೆದು ಆತನಿದ್ದಲ್ಲಿಗೆ ಹೋಗಿ ಬಹುಪರಿಯಿಂದ ಪ್ರಯತ್ನಿಸಿದರೂ ಅಲ್ಲಿಯ ಪ್ರಮುಖರು ಇದಕ್ಕೆ ಸಹಸಾ ಒಪ್ಪದಾದರು. "ಹೋಗಿರಿ, ಕಳಕೊಂಡು ಹುಡುಕಿದರೆ ಹೇಗೆ ದೊರೆತೀತು ?!" ಎಂದು ಅವರೆಂದರು. ಅದಕ್ಕೆ ಕವಿಯು ಅವರಿಗೆಲ್ಲಾ ಹೀಗೆ ಬಿನ್ನವಿಸಿಕೊಂಡನು : 'ನೀವು ನನ್ನನ್ನು ಬಹು ಪರಾಮರಿಸಿರುವಿರಿ. ಆದರೆ ಈಗ ನನ್ನ ಜನ್ಮಸ್ಥಾನವು ನನಗೆ ತಿರುಗಿ ಬಾರೆಂದು ಕರೆಯಲಿಕ್ಕೆ ಬಂದಿದೆ. ಇದಕ್ಕೆ ನೀವು ಮೋರೆದಿರುವ ಬೇಡಿರಿ, ನನ್ನನ್ನು ಬಿಡಿರಿ." ಅದಕ್ಕೆ ಅವರು ಕೊನೆಗೆ ಒಪ್ಪಿಕೊಂಡರೂ ಆಗಿನದಾಗ ಕಳುಹಿಸಲಿಕ್ಕೆ ಸಮ್ಮತಿಸಲಿಲ್ಲ. "ನಾವು ಹೀಗೆ ಬಂದದ್ದು ಬಂದಹಾಗೆ ಹಿಂದಕ್ಕೆ ಕಳುಹಿಸಲಾರೆವು. ಈ ಸುಗ್ಗಿಯು ಮುಗಿದ ಮೇಲೆ ನಮ್ಮ ಮನಸ್ಸಿಗೆ ತೃಪ್ತಿಯಾಗುವಷ್ಟು ಏನಾದರೂ ಸಂಭಾವನೆಯನ್ನು ಕೊಟ್ಟು ಆಮೇಲೆ ನಿಮ್ಮ ರತ್ನವನ್ನು ನಿಮಗೆ ಒಪ್ಪಿಸುವೆವು" ಎಂದರು. ಅಂದಿನ ರಾತ್ರಿಯಲ್ಲಿ ಬಹಳ ಹೊತ್ತಿನವರೆಗೆ ಕವಿಯು ತನ್ನ ಸುಖ ದುಃಖದ ಮಾತುಗಳನ್ನೆಲ್ಲ ಹೇಳಿ ನನ್ನ ಆ ಗೆಳೆಯನಿಗೆ ಆತನು ತನ್ನ ಆ ಕಾಲದ್ದೊಂದು ಭಕ್ತಿಸಾರ ಕಥಾಲಾವಣಿಯನ್ನು ವೀರಮುಂಡೆಯೂರಿ ಕುಳಿತು ಹಾಡಿತೋರಿಸಿದ್ದು ಇಂದಿಗೂ ಇವನಿಗೆ ಮರೆಯದ ಮಾತಾಗಿದೆ. "ಸಾಧು ಕಬೀರನ ಭಕ್ತ ಭಾವಕ ಹರಿಯು ಒಲ್ದ ಭಗವಾನಾ!!" ಎಂಬ

ಪಲ್ಲವಿಯು ಇಂದಿಗೂ ನನ್ನ ಗೆಳೆಯನ ಕಿವಿಯಲ್ಲಿ ತುಂಬಿಕೊಂಡು ಕುಳಿತ ಹಾಗೆ ಆಗಿದೆಯಂತೆ !

ಆಯಿತಂ, ಕರೆಯಲಿಕ್ಕೆ ಹೋಗಿ ಮರಳಿ ಹಾಗೇ ಬಂದುದಾಯಿತು, ಮುಂದೆ ತುಸು ದಿನಗಳಾದ ಬಳಿಕ ಅಲ್ಲಿಯವರು ತಮ್ಮ ಮಾತಿನಂತೆ ಕವಿಯನ್ನು ಸತ್ಕರಿಸಿದರು. ಆದಗೆ ಖಾಜಾಭಾಯಿಯು ಅಲ್ಲಿಂದ ಹೊರಟು ನೆಟ್ಟಗೆ ಊರಿಗೆ ಬರಲಿಲ್ಲ. ಮೊದಲು ಹಲಸಂಗಿಯನ್ನು ಬಿಟ್ಟಮೇಲೆ ಯಾವ ಆ ಎರಡನೇ ಊರಿಗೆ ಹೋಗಿದ್ದನೋ ಈಗ ಅಲ್ಲಿಗೇ ಮತ್ತೆ ಕೆಲ ದಿನಗಳ ಮಟ್ಟಿಗೆಂದು ಹೋದನಂ. ಅಲ್ಲಿ ಕೆಲದಿನವಿದ್ದು ಮುಂದೆ ತನ್ನ ಹುಟ್ಟಿದೂರಿಗೆ ಹೊರಡುವದಾಗಿ ಆತನಂ ಆಲೋಚಿಸಿದ್ದನು. ಆದರೆ ಪರಮಾತ್ಮನಿಗೆ ಅದು ಬೇಕಾಗಿರಲಿಲ್ಲ. ಆತನ ಆತ್ಮವು ಅಲ್ಲಿಯೇ ಪರಮಾತ್ಮನ ಪಾದಕ್ಕೆ ಸೇರಿತು ! "ಕಳೆದ ರತ್ನವು ಹಲಸಂಗಿಗೆ ತಿರುಗಿ ಬರಲಿಲ್ಲ ! ಕಳೆದದ್ದು ಕಳದೇ ಹೋಯಿತು !" ಎಂದು ನಾವೆಲ್ಲರೂ ಕಳವಳಿಸಿದೆವು. ಇಂಥವರನ್ನು ಪಡೆಯುವ ಸುಕೃತವು ಹಲಸಂಗಿಗಿದೆಯಾದರೂ ಕಾಯ್ದುಕೊಳ್ಳುವ ಸೌಭಾಗ್ಯವು ಅದಕ್ಕಿಲ್ಲವಲ್ಲಾ ! ಕವಿರತ್ನನನ್ನು ಕಳಕೊಂಡು ಹತ್ತುವರುಷವಾಗುತ್ತ ಬಂತಂ. ಕಾಲಾಯ ತಸ್ಮೈ ನಮಃ !

ಕವಿರಾಯನ ಪಾದಕ್ಕೆನ್ನ ಅನಂತವಂದನೆಗಳನ್ನರ್ಪಿಸಿ ನನ್ನ ಲೇಖನವನ್ನು ಮುಂಗಿಸುವೆನು. ಓಂ ಶ್ರೀ ಓಂ

"Use the temporal; desire the eternal" Imitation of Christ. Book III chap 15 para 1.

ನಿನ್ನ ಪಾದದ ಮ್ಯಾಲ ನನ ಆಶಿ
ನಿಜಾ ತೋರಿಸೋ ಗುರುಂ† ಪರಿಹರಿಸಿ

—ಕವಿ ಖಾಜಾ
('ಜೀವನ ಸಂಗೀತ'ದಲ್ಲಿ)

ಜ. ಕ. ೧೨-೧೧ ಅಕ್ಟೋಬರ ೧೯೩೪

† ಖಾಜಾಭಾಯಿಯು ಜಗದೀಶನಿಗೆ ಗುರುವೆಂದು ಸಂಬೋಧಿಸುತ್ತಿದ್ದನು. ಅವನು ಮಾನವ ಗುರುಗಳ ದಾಸನಾಗಿದ್ದಿಲ್ಲ.

## ಹೆಣ್ಮಕ್ಕಳ ಗಾದೆಗಳು

---

[ಹದಿನೈದು ನೂರು ಗಾದೆಗಳ ಸಂಗ್ರಹವೊಂದು 'ಲೋಕೋಕ್ತಿ ನಿಧಾನ'ವೆಂಬ ಹೆಸರಿನಿಂದ ಮಂಗಳೂರಲ್ಲಿ ಪ್ರಕಟವಾಗಿ ಬಹು ಕಾಲವಾಯ್ತು; ೪–೬ ವರುಷಗಳ ಹಿಂದೆ ಸಾವಿರ ಮಾತಿನ ಸರದಾರ ಎಂಬ ಪುಸ್ತಕವೊಂದು ಹೊರಬಿದ್ದಿದೆ. ಇದರ ಸಂಗ್ರಾಹಕರು 'ಲೋಕೋಕ್ತಿ ನಿಧಾನ'ವನ್ನು ಕಂಡಿಲ್ಲವೆಂದು ತೋರುತ್ತದೆ. ಅಂತೇ ಸಾವಿರ ಗಾದೆಗಳನ್ನು ಬಾಯಿಗೂಡಿಸುವುದಕ್ಕಾಗಿ ಕೆಲಕೆಲವನ್ನು ಸ್ವತಃ ರಚಿಸಿಯೇ ಸೇರಿಸಿದ್ದಾರೆಂಬುದು 'ಸಾವಿರ ಮಾತಿನ ಸರದಾರ'ದ ಕೊನೆಯ ಭಾಗವನ್ನು ನೋಡಿದರೆ ತಿಳಿದುಬರುವುದು. 'ಲೋಕೋಕ್ತಿ ನಿಧಾನ'ದಲ್ಲಿಲ್ಲದ ಗಾದೆಗಳು, 'ಸರದಾರ'ನಲ್ಲಿ ಕೆಲವು ಮಾತ್ರ ಕಂಡುಬರುವವು. ಹೀಗಿದ್ದರೂ 'ಸರದಾರ'ನನ್ನು ಅನೇಕ ಪತ್ರಿಕೆಗಳು ಹೊಗಳಿದ್ದುಂಟು. ಆದರೆ ಪಾಪ ! ಆ ಸಂಪಾದಕರಿಗೂ ಹದಿನೈದು ನೂರರ ಆ ನಿಧಿಯು ಗೊತ್ತಿಲ್ಲದಿದ್ದರೆ ಉಪಾಯವೇನು ? ನಾನು ಸಂಗ್ರಹಿಸಿದ ಈ ಗಾದೆಗಳು, ಈ ಪುಸ್ತಕಗಳಲ್ಲಿ ಇಲ್ಲದಂಥವುಗಳು, ಕೆಲವು ಕಡೆಗಳಲ್ಲಿ ಪಾಠಾಂತರಗಳಿವೆ. ಹೀಗಿದ್ದ ಬಳಕೆಯ ಎಲ್ಲಾ ಗಾದೆಗಳ ಬರೀ ಸಂಗ್ರಹವಾದರೂ ಮೊದಲು ಆಗಬೇಕಾಗಿದೆಯಾದುದರಿಂದ ನಾನೀಗ ಅಕ್ಷರಾನುಕ್ರಮದಿಂದ ಅವುಗಳನ್ನು ಬರೆದಿಲ್ಲ. ನನ್ನಲ್ಲಿರುವ ಅಪ್ರಕಾಶಿತ ಗಾದೆಗಳು ಮುನ್ನೂರರಷ್ಟು ಮಾತ್ರ. ಬೇರೆ ಬೇರೆ ಭಾಗದ ಕನ್ನಡಿಗರೂ ತಮ್ಮ ಕಡೆಯ ಗಾದೆಗಳನ್ನು 'ಜಯಕರ್ನಾಟಕ'ದಲ್ಲಿ ಪ್ರಕಟಿಸಿದರೆ, ಎಲ್ಲಾ ಒತ್ತಟ್ಟಿಗಾಗಲಿಕ್ಕೆ ಸಂಶಯವಿಲ್ಲ.]

೧. ಎಚ್ಚ ಇದ್ದರ ಹುಚ್ಚಿ ಮಾಡತಾಳ ಅಡಿಗಿ
೨. ನಾಚಿಕಿಗೇಡೀ ಬಾಯಾಗ ನಾಲಿಗಿಪ್ರು ನಾಕೆಮ್ಮಿ ಹೈನ ಇದ್ದಾಂಗ
೩. ಹತ್ತಿಬರೂ ಹಾದರಲ್ಲ, ಕಿತ್ತಿಬರೂ ಕೂದಲಲ್ಲ
೪. ಪದಗೇಡಿನ ಪಲ್ಲಕ್ಯಾಗ ಕೂಡ್ರಿಸಿದರ, ಝಾವ ಝಾವಕ ಇಳ್ಸು ಅಂತಿತ್ತು
೫. ಕರುಳಲ್ಲ ಕರಗಲಿಕ್ಕೆ, ಮನ ಅಲ್ಲ ಮರಗಲಿಕ್ಕೆ
೬. ಯಾತರಾಗೇನಿಲ್ಲ, ಮಗನ ಹೆಸರು ಸೋಮಣ್ಣ
೭. ಹಾಲಿಲ್ಲ ಬಟ್ಟಲಿಲ್ಲ 'ಗುಟುಕ್' ಅಂದರು

೮. ಕೋಣನ ಮುಂದ ಕಿನ್ನರೀ ಬಾರಿಸಿದರ, ಶಂಭುದೇವರ ಗುಡಿ ಎಲ್ಲಿ ಅಂತಿತ್ತು
(ಕಿನ್ನರಿ ಬಾರಿಸಿದರ ಕೊಂಬುಕೊಳಗ ಅಂದಿತು – ಲೋ.ನಿ. ಮತ್ತು ಸಾ.ಸ. ದಲ್ಲಿಯ ಪಾಠಾಂತರ.)

೯. ತಾ ಸಾಯದೆ ಸ್ವರ್ಗ ಕಾಣೋದಿಲ್ಲ
(ತಾನು ಸಾಯಬೇಕು, ಸ್ವರ್ಗ ಪಡೆಯಬೇಕು. ಲೋ.ನಿ.)

೧೦. ಸತ್ತಿಯಾ ಸತ್ತು ಆರು ತಿಂಗಳಾಯಿತು

೧೧. ತನ್ನವರು ಹೊಡೆದರೂ ಹೋಗೂದಿಲ್ಲ, ಇನ್ನವರು ಕರೆದರೂ ಬರೂದಿಲ್ಲ

೧೨. ಮಗೀ ಮಾಡಲಿಕ್ಕೆ ಬರೂದಿಲ್ಲ, ರಂಜಣಗೀ ಇಸಾರ ಹಿಡಿದರು

೧೩. ಹರೇದ ಕಾಲಕ್ಕ ಹಾದರಾ ಮಾಡಿ, ಮುಪ್ಪಿನ ಕಾಲಕ್ಕ ಆಚಾರ ಹೇಳಿದರು
(ಹರೆಯ ಇರುವಾಗ ಹಾರಾಟ, ಮುಪ್ಪಿನಾಗ ಆಚಾರ– ಲೋ.ನಿ.)

೧೪. ಆಚಾರ ಹೇಳೂ ಗೌಡ, ಕತ್ತೀ ಹಿಡಿದ

೧೫. ಅವ್ವನ ಸೀರೀಗಿ ಹತ್ತಿಲ್ಲ, ಅಪ್ಪನ ಧೋತರಕ್ಕ ಹತ್ತಿಲ್ಲ

೧೬. ಹಲ್ಲ ಹಲ್ಲಪುಡಿ ಕಾಣೊಲ್ಲದು, ಕಿವಿ ಗಂಧೆಣ್ಣಿ ಬೇಡತಿತ್ತು

೧೭. ಅರಗೊಡ್ಡಿ ಸೂಳಿ ಅಮಾಸಿ ಮಾಡಿದಳು

೧೮. ಎಂದಿಲ್ಲದ್ದೊಮ್ಮೆ 'ಎಲಗ' ಅಂದರೆ ತಿಂಗಳಿಗೊಮ್ಮೆ ನಗೀ ಬಂತು

೧೯. ವೆಚ್ಚಕ್ಕಿದ್ದರ ನಿಚ್ಚಾ ಪರೂತಕ್ಕ ಹೋಗುವರು

೨೦. ಊರೀಗಿ ಒಕ್ಕಲಲ್ಲ, ಮಸೂತೀಗಿ ಹಣ ಅಲ್ಲ

೨೧. ಮುಲ್ಲಾನ ಗಡ್ಡ ಉದ್ದಾದರ ಹಗ್ಗಾ ಹೊಸೀಲಿಕ್ಕೆ ಬಂದೀತೆ ?

೨೨. ಬಾಯಿ ಬಳ್ಳೊಳ್ಳಿ ಕಾಣೊಲ್ಲದು, ಕಿವಿ ಲವಂಗ ಬೇಡತಾವ

೨೩. ಕಾಗಿ 'ಕರ್‌' ಅಂದರ, ಲಾಳಿ ಎತ್ತು ಬೆದರಿತು

೨೪. ಒಂದು ಮಗಿ ಮಗಿ ಅಲ್ಲ, ಒಂದು ಮಂಗ ಮಂಗ ಅಲ್ಲ
(ಒಂದು ದೀಪ ಅಲ್ಲ, ಒಂದು ಮಗ ಅಲ್ಲ– ಲೋ.ನಿ.)

೨೫. ಹಚ್ಚಗಿದ್ದಲ್ಲಿ ತಿಂದು ಬೆಚ್ಚಗಿದ್ದಲ್ಲಿ ಮಲಗೋರು

೨೬. ಹೊರಸ ಕಂಡಲ್ಲಿ ಹೊಟ್ಟಿಲಾಗುವರು

೨೭. ಕೊಟ್ಟರೆ ಕೊಂಡರೆ ಗೆಳತಿ, ಕುಡದಿದ್ದರೆ ನನ್ನ ಸವತಿ

೨೮. ಹುಟ್ಟ್ಯಾ ಸತ್ತಿಲ್ಲ, ಸುಡಗಾಡ ಕಂಡಿಲ್ಲ
(ಹುಟ್ಟಿಲ್ಲ ಸತ್ತಿಲ್ಲ, ಸುಡಗಾಡ ಕಂಡಿಲ್ಲ– ಲೋ.ನಿ.)

೨೯. ಜೋಳಿಗೀ ಇಡಲಿಕ್ಕೆ ಜಾಗಾ ಕೊಟ್ಟರ, ಮಂತಾ ಎಲ್ಲಾ ತನ್ನದೇ ಅಂತಿದ್ದರು

೩೦. ಕತ್ತಿ ಕೂರಾದರ ಮರ ಕಡೀ ಬಲ್ಲುದೆ ?

೩೧. ಕುರುಬ ಕುಂಬಾರ್ತಿಗ್ಹೋದರ, ಜಾಡ ಆಡಿನ ಕಾಲ ಮುರಿಯೂ ಕಾರಣವೇನು ?

೩೨. ಎರಕೊಳ್ಳುವರ ಬುಡಕ ಬಗ್ಗುವರು

೩೩. ಕಾಗೀ ಬಾಯಿಲೆ ಢೋರ ಸಾಯುಂವನೆ ?
೩೪. ಕತ್ತೆ ಏನು ಬಲ್ಲುದು, ಕಸ್ತೂರಿ ಬೆಲೆ ?
೩೫. ಲಜ್ಜೆಗೇಡೀಗಿ ಲಜ್ಜೆಯಲ್ಲಿ ? ಕೋತಂಬರಿಗೆ ಕೆಜ್ಜ ಎಲ್ಲಿ ?
೩೬. ಅರಸನ ಕಂಡು, ಪುರುಸನ್ನ ಮರೆತರು
೩೭. ಗಂಡಂದು ತಿಂದು ಮಿಂಡನ ಚಾಕರಿ ಮಾಡಿದರು
೩೮. ಎಳ್ಳಕೊಂಡ್ಹಾಂಗ ಎಣ್ಣೀ ಮಾರೋದು
೩೯. ನಡೆಯೂ ಹೆಣ್ಣೀಗಿ ನಾದನಿ ಮೂಲ
೪೦. ಎಂಟೆತ್ತಿಗೊಂದು ಎಮ್ಮಿ ಮೂಲ
೪೧. ಪದವಿ ಬತ್ತೋ ಪಾಪಟಿಗಿಗಲ್ಲ, ಅಂದರೆ ಛತ್ತರಿಗಿ ಒಡಿ ಚಪ್ಪಲೀನ
೪೨. ಕಣ್ಣಿಗಟ್ಟು ಕಂಬಾರಗ್ಹೋದರ ಮೂಗಿನ ತಟಕು ಬಾಯಲ್ಲಿ ಬಿತ್ತು
೪೩. ಅಡಗಲಿಕ್ಕೆ ಹೋದಲ್ಲಿ ಒಡಕೊಂಡರು
೪೪. ಕಾಗೀ ಕೈಯಾಗ ಕಚೇರಿ ಕೊಟ್ಟರ, ಕಚೇರೆಲ್ಲಾ ಹೇಸಿಕೆ ಮಾಡಿತು
೪೫. ಹದ್ದು ಆಡಲ್ಲಿ ಹೊಲೇನ ಬಿಡಬಾರದು, ಹೊಳಿಗೀ ಕಂಡಲ್ಲಿ ಅಯ್ಯನ್ನ ಬಿಡಬಾರದು
೪೬. ಕೋಚಗ್ಯಾಗ ಕುಲಾಯಿ ಮಾಡವರು
೪೭. ಹತ್ತು ಅಂದರ ನನ್ನೆತ್ತೀಗಿ ಅಂದರು, ನೂರಂದರ ನನ್ನ ಹೋರೀಗಿ ಅಂದರು
೪೮. ಸಂಗಾತ ಬ್ಯಾಡಾ ಅಂದರ, ಯಾವ ಎತ್ತಿನ ಮ್ಯಾಲ ಕೂಡ್ರಲಿ ಅಂತಿತ್ತು
೪೯. ದೆಸೆಗೇಡಿ ಸಂತೀಗಿ ಹೋದರ, ಕಹಿ ಜೀರಗೀಗಿ ಪಿರಿ ಆಯ್ತು
೫೦. ಉಡಕೀ ಗಂಡನ ಉಪದ್ರ
೫೧. ಹಾಲು ಬೋನಾ ಉಂಡು ಹಾಸು ಹೊಯ್ಯೋ ಮಂಗಳೇ ಅಂದರ, ಮಿಂಡಗಾರಗ ಕರಕೊಂಡು ನೀರ ತರತ ಅಂತಿದ್ದಳು

(...ಮಂಗಳೇ ಅಂದ್ರ ನಾಲ್ವರ ಕಂಡು ನೀರ ತರತ ಅಂತಿದ್ದಳು -ಲೋ.ನಿ.)

**ಜ. ಕ. ೧೭-೯ ಸಪ್ಟೆಂಬರ ೧೯೩೬**

# ದೃಷ್ಟಾರರಾದ ಎ. ಈ. ಯವರು

"ಎ. ಈ. (AE)" ಅವರ ನಿಜವಾದ ಹೆಸರು ಜಾರ್ಜ ವಿಲ್ಲ್ಯಮ್ ರಸ್ಸೆಲ್ ಎಂಬುದಾಗಿದೆ. ಇವರು ಅಯರ್ಲಂಡಿನ ಅರ್ಮಾಘ್ ಎಂಬ ಹಳ್ಳಿಯಲ್ಲಿ ೧೮೬೭ನೇ ಇಸವಿಯ ಎಪ್ರಿಲ್ ೧೦ನೆಯ ತಾರೀಖಿಗೆ ಜನ್ಮತಾಳಿದರು. ಇವರು ೧೯೩೫ ನೆಯ ಜುಲೈ ೧೮ನೆಯ ತಾರೀಖಿಗೆ ದೇಹವನ್ನಿಟ್ಟರು. ಇವರ ಜೀವನದಲ್ಲಿ ಹದಿನಾರು ಹದಿನೇಳನೆಯ ವಯಸ್ಸು ಬಹಳ ಮಹತ್ವದ್ದು. ಆ ಕಾಲದಲ್ಲಿ ಇವರು ಪಟ್ಟಣದ ಗದ್ದಲಕ್ಕೆ ಬೇಸತ್ತು ಸೂಟಿಯಲ್ಲಿ ಗಿರಿದರಿಗಳಲ್ಲಿ ತಿರುಗಾಡುತ್ತಿದ್ದಾಗ ಒಂದಿರಳು ಭೂಮಿಯು ದೇವತಾ ಪೃಥಿವಿಯಾಗಿ ಇವರ ದಿವ್ಯಾಂತಃಕರಣವನ್ನು ಸ್ಪರ್ಶಿಸಿದಳು. ಆವಾಗಲೇ ಇವರಿಗೆ ಕಾವ್ಯಸ್ಫೂರ್ತಿಯ ಉದಯವಾಯಿತು. ಮುಂದೆ ಒಂದು ವಾರದೊಳಗಾಗಿಯೇ ಇವರ ಜೀವಮಾನದ ಜೀವದ ಮಿತ್ರರಿಗೆಲ್ಲ ಪ್ರಥಮ ಪರಿಚಯ ವಾಯಿತಂತೆ! ಆಗ ಇವರ ಕವಿತೆ, ಲೇಖ ಮುಂತಾದವುಗಳೆಲ್ಲ "ಈಯನ್ (AEON)" ಎಂಬ ಗೂಢನಾಮದಿಂದ ಅಲ್ಲಲ್ಲಿ ಸಾಮಯಿಕ ಪತ್ರಿಕೆಗಳಲ್ಲಿ ಪ್ರಕಟವಾಗ ಹತ್ತಿದವು. ಈ ಹೆಸರಿನ ಮೊದಲಿನ ಎರಡಕ್ಷರಗಳನ್ನೇ ಮುಂದೆ ಇವರು ತಮ್ಮ ಉಪನಾಮವಾಗಿ ಉಪಯೋಗಿಸಹತ್ತಿದರು. ಎ.ಈ. (AE) ಎಂಬ ಹೆಸರು ಹುಟ್ಟಿದ್ದು ಹೀಗೆ. ಈ "ಈಯನ್ (AEON)" ಎಂಬ ಶಬ್ದದ ಸಂಬಂಧವು ಇವರ ಜೀವನಕ್ಕೆ ಯಾವ ಚಮತ್ಕಾರಣದಿಂದುಂಟಾಯಿತೆಂಬುದರ ಬಗೆಗೆ ತಮ್ಮ "ದರ್ಶನದೀಪ"ವೆಂಬ ಪುಸ್ತಕದಲ್ಲಿ ಅವರೇ ಹೇಳಿದುದನ್ನು ಇಲ್ಲಿ ನಾನು ಸಂಗ್ರಹಿಸಿ ಬರೆಯುವೆ—

"ನನಗಾಗ ೧೭–೧೮ ವರುಷ ವಯಸ್ಸು, ನನ್ನ ತಲೆಯಲ್ಲಿ ನಿಚ್ಚಳವಾದ ಕಲ್ಪನಾ ಚಿತ್ರಗಳು ತಾಕಲಾಡಹತ್ತಿದವು. ನಾನವುಗಳನ್ನೆಲ್ಲಾ ಚಿತ್ರಿಸಹತ್ತಿದೆನು. ಒಂದು ಚಿತ್ರಮಾಲಿಕೆಯನ್ನೇ ನಾನು ಬಹು ಸ್ಫೂರ್ತಿಯಿಂದ ಚಿತ್ರಿಸಿದೆನು...... ಈ ಚಿತ್ರಗಳು ನನ್ನಂಥ ಒಬ್ಬ ಬಾಲವಯಸ್ಸಿನವರ ಕಾಲ್ಪನಿಕ ಮನೋರಾಜ್ಯದಲ್ಲಿ ಮೂಡಿ ದವುಗಳಾಗಿದ್ದವು. ಆದರೆ ಅವುಗಳಲ್ಲೊಂದನ್ನು ನೋಡಿದರೆ, ದೈವೀ ಮಾನವನ ಪ್ರಥಮೋತ್ಪತ್ತಿಯು ದೇವನ ಚಿತ್ತದಲ್ಲಿ ಮೊದಲಿಗೆ ಹೇಗಾಯಿತೆಂಬುದನ್ನು ಚಿತ್ರಿಸು

ವದಕ್ಕೆ ನಾನು ಪ್ರಯತ್ನಿಸುತ್ತಿದ್ದೇನೆಂದು ನನಗೆ ಆಳವಾಗಿ ಅನಿಸಹತ್ತಿತು. ಅಂದು ಇಡೀ ರಾತ್ರಿಯೆಲ್ಲ ನಾನು ಅದನ್ನೇ ಆಲೋಚಿಸುತ್ತಲಿದ್ದೆನು. ಈ ಚಿತ್ರಮಾಲಿಕೆಯ ಕೆಳಗಡೆಯಲ್ಲಿ ಯಾವ ಕಥೆಯನ್ನು ಬರೆಯಬೇಕೆಂಬುದರ ಕಡೆಗೇ ನನ್ನ ಚಿತ್ತವೆಲ್ಲಾ ತೊಡಗಿಕೊಂಡಿದ್ದಿತು. ಅಷ್ಟರಲ್ಲಿ ಊಹೆಗೆ ನಿಲುಕದಂತೆ ಒಂದು ಸಂಗತಿಯು ನಡೆಯಿತು. ನಾನೊಂದು ಕತ್ತಲೆಯ ಕೋಣೆಯಲ್ಲಿದ್ದ ಹಾಗೆಯೂ ಅಲ್ಲೊಂದು ಅನ್ಯ ಪ್ರಾಣಿಯು ಉಸಿರಾಡಿಸುತ್ತಿರುವದನ್ನು ನಾನು ಲಕ್ಷಿಸುತ್ತಿರುವ ಹಾಗೆಯೂ ಅದು ನನಗೆ ಏನೋ ಹೇಳುತ್ತಿರುವಂತೆ ಕಾದುಕೊಂಡು ಕುಳಿತಿರುವ ಹಾಗೆಯೂ ಭಾಸವಾಯಿತು...... ಅಷ್ಟರಲ್ಲಿ ಅದು ನನಗೆ 'ಈಯನ್(AEON)ನ ಜನ್ಮವೆಂದು ಅದಕ್ಕೆ ಹೆಸರಿಡು' ಎಂದು ಪಿಸುಮಾತಿನಲ್ಲಿ ಹೇಳಿದಂತಾಯಿತು. ನನಗೆ 'ಈಯನ್' ಎಂಬ ಶಬ್ದವು ಬಹಳೇ ಆಶ್ಚರ್ಯವನ್ನುಂಟು ಮಾಡಿತು. ಯಾಕೆಂದರೆ ಆ ಶಬ್ದವು ಪುರಾತನ ಭಾವಗಳನ್ನೊಳಗೊಂಡ ಹಾಗೆ ನನಗೆ ತೋರಿತು. ಆಗಿನಿಂದ ನಾನು ಆ ಶಬ್ದದಿಂದ ಹೊರಡಬಹುದಾದ ವಿಶೇಷಾರ್ಥವೇನೆಂಬುದರ ಕಡೆಗೇ ಚಿತ್ತವನ್ನಿಟ್ಟುಕೊಂಡು ಕುಳಿತಿದ್ದೆನು. ಮರುದಿನವೇ ನನ್ನ ಮನೋರಾಜ್ಯದಲ್ಲಿ ಕಲ್ಪನಾ ಚಿತ್ರಗಳ ಸುಳಿದಾಟಕ್ಕೆ ಮತ್ತೆ ಮೊದಲಾಯಿತು. ಈ ಹೊಸ ಚಿತ್ರ ಮಾಲಿಕೆಯು ಮುಂಚಿನದರ ಉತ್ತರಾರ್ಧವಾಯಿತು. 'ಈಯನ್'ನು ಸ್ವರ್ಗದಲ್ಲಿ ತಂಟೆಮಾಡಿಕೊಂಡು ಪ್ರತಿಸ್ವರ್ಗವನ್ನು ತನಗಾಗಿ ನಿರ್ಮಿಸಿಕೊಳ್ಳುವೆನೆಂದು ಭೂಮಿಗಿಳಿದು ಭೂಮಿಯ ದೇವನಾದನು. ಅಯರ್ಲಂಡಿನ ಒಂದು ಹಳ್ಳಿಯಾದ ಅರ್ಮಾಘದ ಜೀವಿಗಳಲ್ಲಿ ಅಡ್ಡಾಡುತ್ತಿದ್ದ ನನ್ನಂಥ ಒಬ್ಬ ಬಾಲಕನ ಕಲ್ಪನಾ ರಾಜ್ಯದೊಳಗಿಂದ ಹಾಯ್ದು ಹೀಗೊಬ್ಬ ದೇವಜೀವಿಯ ಅವತಾರವಾದಂತಾಯಿತು. ಮುಂದೆ ಹದಿನೈದು ದಿನಗಳಲ್ಲಿ ನಾನು ನನ್ನ ಹಳ್ಳಿಯಿಂದ ಮರಳಿ ಡಬ್ಲಿನ್ ಪಟ್ಟಣಕ್ಕೆ ಹೋದೆನು. ಅಲ್ಲಿ ವಾಚನಾಲಯಕ್ಕೆ ಹೋದಾಗ ಒಂದು ಕಲಾವಿಷಯಕವಾದ ಸಾಮಯಿಕ ಪುಸ್ತಕವನ್ನು ಇಸಕೊಳ್ಳುವದಕ್ಕೆಂದು ವ್ಯವಸ್ಥಾಪಕನ ಬಳಿಗೆ ಹೋದೆನು. ಅಲ್ಲಿ ಮೇಜಿನ ಮೇಲೆ ಒಂದು ಪುಸ್ತಕವು ತೆರೆದು ಬಿದ್ದಿತ್ತು. ನನ್ನ ದೃಷ್ಟಿಯು ಅದರ ಮೇಲೆ ಬಿದ್ದಾಗ ಮೊಟ್ಟಮೊದಲಿಗೆ ಅದರಲ್ಲಿ ನನಗೆ ಪೂರ್ವೋಕ್ತ 'ಈಯನ್' ಎಂಬ ಶಬ್ದವೇ ಕಾಣಿಸಿತು. "ಧಾರ್ಮಿಕ ಶಬ್ದಕೋಶ" ಎಂಬ ಆ ಪುಸ್ತಕದಲ್ಲಿ ಈ ಶಬ್ದದ ಮುಂದೆ ಪ್ರಥಮಜಾತ ಜೀವಿಗಳನ್ನು ಈ ಹೆಸರಿನಿಂದ ಗ್ನಾಸ್ಟಿಕ್ ಎಂಬ ಸಂಪ್ರದಾಯದವರು ಸಂಬೋಧಿಸಿರುವರೆಂದು ಬರೆದಿದ್ದಿತು. ಕೂಡಲೇ ನನ್ನ ಮೈಯೆಲ್ಲಾ ಜುಮ್ ಎಂದಂತಾಯಿತು. ಆ ಕಾಲದಲ್ಲಿ ನಾನು ಬಾಲಕರು ಓದಬಹುದಾದ ಕಥೆ ಮುಂತಾದವುಗಳಿಗಿಂತ ಹೆಚ್ಚಿನ ಯಾವ ಶಾಸ್ತ್ರಗ್ರಂಥಗಳನ್ನೂ ಓದಿರಲಿಲ್ಲ. ಅಲ್ಲದೆ ಕಲ್ಪನಾಶಕ್ತಿ ಎಂಬುದರಲ್ಲಿ ಕಲ್ಪನೆಗಿಂತ ಹೆಚ್ಚಿನ ನಿಜವಾದ ಸತ್ಯವೇನಾದರೂ ಇರಬಲ್ಲುದೆಂಬುದರ ಕಲ್ಪನೆ ಕೂಡ ನನಗಾಗ ಇದ್ದಿರಲಿಲ್ಲ. ಅಲ್ಲದೆ ಆ ಶಬ್ದವನ್ನು ನಾನು ಹಿಂದೆಂದೂ ಕೇಳಿರಲಿಲ್ಲ. ಆದುದರಿಂದ ನನ್ನ ಬುದ್ಧಿಗೆ ಆಗ ಪೂರ್ವಜನ್ಮ ತತ್ತ್ವವು ಸತ್ಯವೆಂದೂ ಇದೆಲ್ಲಾ

ಪುರಾತನ ಕಾಲದ ಸ್ಮೃತಿಯೆಂದೂ ತೋರಿತು. ಇನ್ನು ನಾನೇ ಸ್ವತಃ ಈ ಬಗೆಗೆ ವಿಚಾರ ಮಾಡಿಕೊಳ್ಳಬೇಕೆಂದೂ ಅಲ್ಲಿಂದ ಹೊರಟೆನು. ಆದರೆ ನನ್ನ ವಿಚಾರಗಳು ನನ್ನನ್ನು ಕೂಡಲೇ ಮತ್ತೆ ಹಿಂದಕ್ಕೆ ಹೊರಳಿಸಿದವು. ತಿರುಗಿ ಹೋಗಿ ಲಾಯಬ್ರರಿಯೆನ್ನನಿಗೆ– ಗ್ನಾಸ್ಟಿಕ್ ಸಂಪ್ರದಾಯದವರ ತತ್ತ್ವ ಮುಂತಾದವುಗಳ ಬಗೆಗೆ ಪುಸ್ತಕಗಳೇನಾದರೂ ಇವೆಯೋ ಎಂದು ಕೇಳಿದೆನು. ಅವನು ನನಗೆ 'ನೀಂಡರ್' ಎಂಬವನು ಬರೆದ ಚರ್ಚ ಹಿಸ್ಟರಿ (ಧರ್ಮಸಂಘದ ಇತಿಹಾಸ) ಎಂಬ ಪುಸ್ತಕವನ್ನು ಸೂಚಿಸಿದನು. ಅದರಲ್ಲಿ ನಕ್ಷತ್ರ ಪೂಜಕರಿಗೆ ಸಂಬಂಧಿಸಿದ ಖಂಡದಲ್ಲಿ ದೇವತಾಜೀವಿಯಾದ ಈಯನ್ನ ನ ವಿಷಯದಲ್ಲಿ–ಬಿಂಕಗಾರನಾದ ಈತನು ತಾನಾಗಿ ಜಡಸೃಷ್ಟಿಗೆ ಜಿಗಿದು ನಮ್ಮ ಜಗತ್ತಿನ ಪ್ರಭುವಾದನು ಎಂದು ಬರೆದಿದ್ದಿತು. ನಾನು ಆಗ ನಂಬಿದ್ದೇನೆಂದರೆ– ನಮ್ಮೊಳಗಿನ ನಾಶರಹಿತನಾದ ಅಮರಪುರುಷನಿಗೆ ತನ್ನ ಚಿರಂತನ ಸರ್ವಜ್ಞಾನದ ಸ್ಮರಣವಿರುತ್ತದೆ. ಅಲ್ಲದೆ ಆತ್ಮನ ಈ ಸ್ಮೃತಿಯೇ ಕಲ್ಪನಾಶಕ್ತಿಯೆಂಬುದರ ತಳಹದಿಯಾಗಿದೆ" (ಕ್ಯಾಂಡಲ್ ಆಫ್ ವಿಜನ್, ಪುಟ : ೭೩–೭೫).

ಏ. ಈ.ಯವರು ಪುರಾತನ ಋಷಿಗಳಂತೆ ದಿವ್ಯಪ್ರತಿಭೆಯುಳ್ಳವರೂ ಆಗಿದ್ದರು. ಇವರನ್ನು "ಅನುಭಾವ ಕವಿ" ಅಥವಾ 'ಗೂಢ ಕವಿ" (ಮಿಸ್ಟಿಕ್ ಪೋಯೆಟ್) ಎಂದು ವಿದ್ವಾಂಸರು ಕರೆಯುತ್ತಾರೆ. ಇವರ ಕವಿತೆಗಳ ಮೊದಲನೆಯ ಸಂಗ್ರಹವು ಇವರ ೪೭ನೆಯ ವಯಸ್ಸಿಗೆ ೧೯೧೩ ರಲ್ಲಿ ಪ್ರಸಿದ್ಧವಾಯಿತು. ಇದಕ್ಕಿಂತ ಮುಂಚೆ ೧೯೦೭ ರಲ್ಲಿ ಒಂದು ನಾಟಕವಾವುದೋ ಇವರದು ಪ್ರಕಟವಾಯಿತಂತೆ. ಆದರೆ ದಿವ್ಯದೃಷ್ಟಿಗೆ ಸಂಬಂಧಿಸಿದ ಇವರ ಮಹತ್ವದ ಗ್ರಂಥವಾದ "ದರ್ಶನದೀಪ" ವೆಂಬುದು ೫೧ ನೆಯ ವಯಸ್ಸಿನಲ್ಲಿ (೧೯೧೮) ಪ್ರಸಿದ್ಧವಾಯಿತು. ಮುಂದೆ ಕೆಲದಿನಗಳಲ್ಲಿಯೇ ಇವರ ಗದ್ಯಪದ್ಯ ಗ್ರಂಥಗಳು ಕೆಲವು ಪ್ರಕಟವಾದವು. ಅವುಗಳಲ್ಲಿ ೧೯೨೨ ರಲ್ಲಿ ಪ್ರಕಟವಾದ "ಅ ರ್ಥ ಗಾ ರ ರು" ಎಂಬುದು ಮಹತ್ವದ್ದು. "ಅವತಾರಗಳು" ಎಂಬ ಇವರ ಕೊನೆಯ ಪ್ರಖ್ಯಾತವಾದ ಗದ್ಯಗ್ರಂಥವು ಈಗೆರಡು ಮೂರು ವರುಷಗಳ ಹಿಂದೆ ೧೯೩೩ ರಲ್ಲಿ ಪ್ರಸಿದ್ಧವಾಯಿತು. ಅದರ ಬಳಿಕ ಈಚೆಗೆ ಮತ್ತೆ ಎರಡು ಮೂರು ಕವಿತಾಗ್ರಂಥಗಳು ಪ್ರಕಟವಾಗಿವೆ. ಇವರು ಕವಿಗಳಾಗಿದ್ದಂತೆ ಚಿತ್ರಕಾರರೂ ಆಗಿದ್ದರು. ಅಲ್ಲದೆ ಅಯರ್ಲಂಡಿನ ಒಕ್ಕಲಿಗರ ಉನ್ನತಿಗಾಗಿಯೂ ಇವರು ಹೆಣಗಿದರು. ಈ ವಿಷಯದಲ್ಲಿ "ರಾಷ್ಟ್ರೀಯ ಜೀವನ'ವೆಂಬ ಪುಸ್ತಕವೊಂದನ್ನು ಬರೆದಿರುವರು.

ಸೃಷ್ಟಿಯೊಂದಿಗೆ ಗೂಢತಾದಾತ್ಮ್ಯವನ್ನು ಗಳಿಸುವದೇ ನಾಳಿನ ಸಂಸ್ಕೃತಿಯ ಆದೇಶವನ್ನು ಪಡೆಯುವದಕ್ಕೆ ಉಪಾಯವೆಂದು ಹೇಳಿ ನಗರ ಜೀವನದ ಪ್ರಕ್ಷುಬ್ಧತೆಯನ್ನು ನಿರ್ದಾಕ್ಷಿಣ್ಯವಾಗಿ ಇವರು ಅಲ್ಲಗಳೆದಿರುವರು. ಆದುದರಿಂದ ಕರ್ಮ ಕೋ ಲಾ ಹ ಲ ಪ್ರಿ ಯ ರಾ ದ ಪಾಶ್ಚಾತ್ಯರಲ್ಲಿ ಇವರನ್ನು 'ಕಾಡಾಡಿ' ಎಂದು ಹೀಯಾಳಿಸುವವರುಂಟು.

ಏ. ಈ. ಯವರನ್ನು ಸ್ವತಃ ಅವರ ಮಾತಿನಲ್ಲಿಯೇ ಬಣ್ಣಿಸಬೇಕೆಂದರೆ ಅವರ "ಅವತಾರಗಳು" ಎಂಬ ಒಂದು ಪುಸ್ತಕದಲ್ಲಿ ಒಂದು ಪಾತ್ರವನ್ನು ಕುರಿತು ಅವರೇ ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು.

"ಸೃಷ್ಟಿಯು ಕನಿಷ್ಠ ಪಕ್ಷಕ್ಕೆ ಅವನಿಗೆ ಜೀವಂತವಾಗಿದ್ದಿತು. ಪೃಥಿವಿಯು ಆತನಿಗೆ ಸಮರ್ಥಳಾದ ತಾಯಿಯಾಗಿದ್ದಳು. ಅವಳು ಅವನೊಡನೆ ಚಿತ್ರರೂಪದಲ್ಲಿ ಮಾತನಾಡುತ್ತಿದ್ದಳು. ಆದರೆ ಶಬ್ದಗಳಿಂದಲ್ಲ." ('ಅವತಾರಗಳು' ಪುಟ-೯೩).

ಇವರು ತಮ್ಮ ದಿವ್ಯದೃಷ್ಟಿಯಲ್ಲಿ ಕಂಡ ಸಂಗತಿಗಳಿಂದಲೇ "ಅವತಾರಗಳು" ಎಂಬ ಪುಸ್ತಕದಲ್ಲಿ ಜಗತ್ತಿನ ಭಾವೀ ಸಂಸ್ಕೃತಿಯ ಸ್ವರೂಪವನ್ನು ಚಿತ್ರಿಸಿರುವರು. ಇವರ ದಿವ್ಯ ದರ್ಶನಗಳಲ್ಲಿ ಪುರಾತನ ಕಾಲದ ದ್ರಷ್ಟಾರರ ಪ್ರತಿಬಿಂಬವು ಬಹಳ ಕಡೆಯಲ್ಲಿ ಕಾಣುತ್ತದೆ. ಆ ಮಾತಿನ ಅನುಭವವು ಸ್ವತಃ ಇವರಿಗೇ ಇದ್ದಿತೆಂಬುದನ್ನು ನಾವು ಇವರ ಈಯನ್ನನ ಕಲ್ಪನಾಜಾಲವೆಂಬ ಹಿಂದಿನ ಸಂಗತಿಯಲ್ಲಿಯೇ ಕಂಡಿರುವೆವು. ಆದರೆ ಇವರ ಇನ್ನು ಕೆಲವು ದರ್ಶನಗಳಿಗೆ ಹೀಗೇ ಪುರಾತನ ಸಂಬಂಧವಿದ್ದಿತೆಂಬುದು ಇವರಿಗೇ ಹೊಳೆದಿದ್ದಿತೋ ಇಲ್ಲವೋ ಎಂಬುದು ಸಂದಿಗ್ಧ ವಾಗಿದೆ. ಅಂಥದೊಂದು ಸಂಗತಿಯನ್ನು ಇಲ್ಲಿ ತೋರಿಸಿಕೊಡುವೆನು. "ದರ್ಶನ ದೀಪ"ದ ೩೬ ನೆಯ ಪುಟದಲ್ಲಿ ಮತ್ತು "ಅವತಾರಗಳು" ಎಂಬ ಪುಸ್ತಕದ ೩೬ ನೆಯ ಪುಟದಲ್ಲಿ ಬಂದಿರುವ ಒಂದು ದರ್ಶನವು ಬಾಯಬಲ್ಲಿನ ರೆವ್ಹಲೇಶನ್ (ದಿವ್ಯಪ್ರಕಟನೆ) ಎಂಬ ಗ್ರಂಥದ ೪ ನೆಯ ಅಧ್ಯಾಯದಲ್ಲಿ ಅಚ್ಚಳಿಯದೆ ಯಥಾವತ್ತಾಗಿ ಬಂದು ಬಿಟ್ಟಿದೆ. ತುಲನೆಗಾಗಿ ಅವೆರಡನ್ನು ಇಲ್ಲಿ ವಿವರಿಸುವೆನು.

"ದೇವಸ್ಥಾನಕ್ಕಿಂತ ಬಲುದೊಡ್ಡದಾದ ಒಂದು ಹಜಾರವನ್ನು ಕಂಡೆನು. ಅದರ ಕಂಬಗಳು ಜೀವಂತವಾಗಿ ಮಿಸುಕುತ್ತಲಿದ್ದ ಶ್ವೇತ ಸ್ಫಟಿಕಗಳಿಂದಲೋ ನಕ್ಷತ್ರ ಪದಾರ್ಥಗಳಿಂದಲೋ ನಿರ್ಮಿಸಲ್ಪಟ್ಟಿದ್ದವು. ಅವು ಪ್ರತಿ ಮಿಸುಕಿನೊಡನೆ ಬೆಳಗು ಬೈಗುಗಳ ಬಗೆಬಗೆಯ ಬಣ್ಣಗಳಿಂದ ಮಿನುಗುತ್ತಿದ್ದವು. ಬಂಗಾರದ ಅಂತರಿಕ್ಷವು ಅದರಲ್ಲಿ ಬೆಳಗುತ್ತಲಿತ್ತು. ಆ ವಿಶಾಲವಾದ ಹಜಾರದ ತುಂಬೆಲ್ಲ ಕಂಬಗಳ ನಡುವೆ ಉನ್ನತ ಸಿಂಹಾಸನಗಳು ಒಂದರ ಬೆಳಕಿನಲ್ಲೊಂದು ಕಂದುವಂತೆ ಕಾಣುತ್ತಿದ್ದವು. ಅವುಗಳ ಮೇಲೆ ಜ್ವಾಲಾಯಮಾನವಾದ ಶಿರಃಪ್ರಭಾವಳಿಗಳಿಂದೊಪ್ಪುವ ದೇವೇಂದ್ರರು ಕುಳಿತಿದ್ದರು. ನಾನು ಅವರೊಳಗೊಬ್ಬನ ತಲೆಯ ಮೇಲೆ ಮಹಾಶೇಷನ ಫಣಾವಲಯವನ್ನು ಕಂಡೆನು. ಮತ್ತೊಬ್ಬನು ನೆಗೆನೆಗೆಯುವ ತೇಜೋಮಯವಾದ ಅಗ್ನಿಜ್ವಾಲೆಯ ಗರಿಗಳಿಂದ ಶೋಭಿಸುತ್ತಿದ್ದನು. ನಕ್ಷತ್ರ ಗಳಂತೆ ಪ್ರಕಾಶಿಸುತ್ತಿದ್ದ ಅವರು ಬೊಂಬೆಗಳಂತೆ ಮೌನ ತಾಳಿದ್ದರು. ಅಲ್ಲದೆ ಅವರು ಇಜಿಪ್ತದ ದೇವತಾಪ್ರತಿಮೆಗಳಿಗಿಂತಲೂ ಮಿಗಿಲಾಗಿ ಮಹಾಕಾಯರಾಗಿದ್ದರು. ಹಜಾರದ ಕೊನೆಯಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಎತ್ತರವಾದ ಸಿಂಹಾಸನವೊಂದಿದ್ದಿತು.

ಅದರ ಮೇಲೆ ಉಳಿದೆಲ್ಲರಿಗಿಂತ ಹೆಚ್ಚಿನವನೊಬ್ಬನು ಕುಳಿತಿದ್ದನು. ಅವನ ಹಿಂದೆ ಸೂರ್ಯನಷ್ಟು ಪ್ರಭಾವುಯವಾದ ಒಂದು ದಿವ್ಯ ಜ್ಯೋತಿಯು ಥಳಥಳಿಸುತ್ತಿದ್ದಿತು. ಕೆಳಗಡೆ ನೆಲಗಟ್ಟಿನ ಮೇಲೆ ಒಂದು ಕೃಷ್ಣವರ್ಣದ ಆಕೃತಿಯು ಸಮಾಧಿ ಮಗ್ನವಾಗಿ ರುವಂತೆ ಬಿದ್ದುಕೊಂಡಿದ್ದಿತು. ಆ ದೇವೇಂದ್ರರಲ್ಲಿಬ್ಬರು ಆ ಆಕೃತಿಯ ತಲೆ ಮತ್ತು ಮೈಯ ಕಡೆಗೆ ತಮ್ಮ ಕೈಗಳನ್ನಲ್ಲಾಡಿಸಿದರು. ಅವರ ಆ ಕೈಗಳ ಅಲ್ಲಾಟದೊಡನೆ ರತ್ನಕಾಂತಿಯಂತೆ ಅಗ್ನಿಕಣಗಳು ಸ್ಫುರಿಸತೊಡಗಿದವು. ಆ ಕೃಷ್ಣವರ್ಣದ ಆಕೃತಿ ಯೊಳಗಿಂದ ಅಲ್ಲಿದ್ದ ಸಿಂಹಾಸನಾರೂಢರಿಗೆ ಸರಿದೂಗುವ ಮಹಾಕಾಯದಿಂದಲೂ ಮಹಿಮೆಯಿಂದಲೂ ಪ್ರತಿಭೆಯಿಂದಲೂ ಯುಕ್ತನಾದ ಪುರುಷನೊಬ್ಬನು ಪ್ರಕಟ ನಾದನು. ಅವನು ಹಾಗೆ ಏಳುತ್ತಲೇ ಆ ಮಂದಿರದೊಡನೆ ತನಗಿದ್ದ ದೈವೀ ಸಂಬಂಧದ ಅರಿವುಳ್ಳವನಾಗಿ ಅಲ್ಲಿರುವವರಿಗೆ ವಂದಿಸುವದಕ್ಕೆ ತನ್ನ ಕೈಗಳನ್ನು ಮೇಲಕ್ಕೆತ್ತಿದನು. ಅವನು ಅಂಧಃಕಾರದ ಯಾತ್ರೆಯನ್ನು ಮುಗಿಸಿ ಇದೀಗ ಮರಳಿ ಬಂದವನು. ಈಗ ಪುನಃ ಅವನು ದೇವತಾ ಸಂಘದೊಳಗೊಬ್ಬ ಪ್ರಭು ವಾದನು. ಅವನು ಉಳಿದವರ ಕಡೆಗೆ ದೃಷ್ಟಿ ಚೆಲ್ಲುವುದೇ ತಡ; ಆ ಸುವರ್ಣಮಯ ಆಕೃತಿಗಳೆಲ್ಲ ತಮ್ಮ ತಮ್ಮ ಸಿಂಹಾಸನದಿಂದ ಜಿಗಿದು ವಂದನಾ ಸೂಚಕವಾದ ತಮ್ಮ ಕೈಗಳನ್ನು ಮೇಲಕ್ಕೆ ಎತ್ತಿದವು. ಮತ್ತು ಅವೆಲ್ಲವೂ ನನ್ನ ಕಣ್ಣಿಗೆ ಮರೆಯಾಗಿ ಸಿಂಹಾಸನದ ಹಿಂಬದಿಗಿದ್ದ ಮಹಾಪ್ರಭೆಯಲ್ಲಿ ಮಿಲಿತವಾದವು" (ದರ್ಶನದೀಪ ಮತ್ತು ಅವತಾರಗಳು).

ಬಾಯಬಲ್ಲಿನಲ್ಲಿ ಇಂಥದೇ ಒಂದು ದರ್ಶನವು ಹೇಗೆ ಇದೆಯೆಂದರೆ– "...ಪರಲೋಕದಲ್ಲಿ ಒಂದು ಸಿಂಹಾಸನವಿತ್ತು. ಸಿಂಹಾಸನದ ಮೇಲೆ ಒಬ್ಬನು ಕುಳು ತಿದ್ದನು. ಅವನು ಕಣ್ಣಿಗೆ ಸೂರ್ಯಕಾಂತ ಪದ್ಮರಾಗ ಮಣಿಗಳಂತೆ ಕಾಣುತ್ತಿದ್ದನು. ಸಿಂಹಾಸನದ ಸುತ್ತಲೂ ಪಚ್ಚೆಯಂತೆ ತೋರುತ್ತಿದ್ದ ಕಾಮನಬಿಲ್ಲು ಇತ್ತು. ಇದಲ್ಲದೆ ಆ ಸಿಂಹಾಸನದ ಸುತ್ತಲೂ ಬೇರೆ ಇಪ್ಪತ್ನಾಲ್ಕು ಸಿಂಹಾಸನಗಳಿದ್ದವು. ಆ ಸಿಂಹಾಸನ ಗಳ ಮೇಲೆ ಶುಭ್ರವಸ್ತ್ರಧಾರಿಗಳಾದ ಇಪ್ಪತ್ತುನಾಲ್ಕು ಮಂದಿ ಹಿರಿಯರು ಕುಳಿ ತಿದ್ದರು. ಅವರ ತಲೆಗಳ ಮೇಲೆ ಚಿನ್ನದ ಕಿರೀಟಗಳಿದ್ದವು...... ಸಿಂಹಾಸನದ ಮುಂದೆ ಸ್ಫಟಿಕಕ್ಕೆ ಸಮಾನವಾದ ಗಾಜಿನ ಸಮುದ್ರವಿದ್ದ ಹಾಗೆ ತೋಚಿತು. ಈ ಇಪ್ಪತ್ತುನಾಲ್ಕು ಮಂದಿ ಹಿರಿಯರು ಸಿಂಹಾಸನದ ಮೇಲೆ ಕೂತಾತನ ಪಾದಕ್ಕೆ ಬಿದ್ದು ತಮ್ಮ ಕಿರೀಟಗಳನ್ನು ಸಿಂಹಾಸನದ ಮುಂದೆ ಹಾಕಿ... ಸದಾ ಶಾಶ್ವತವನ್ನು ಆರಾಧಿಸುತ್ತಾರೆ... ಸಿಂಹಾಸನವು ಇದ್ದ ಸ್ಥಳಕ್ಕೂ ಹಿರಿಯರು ಇದ್ದ ಸ್ಥಳಕ್ಕೂ ಮಧ್ಯದಲ್ಲಿ ಒಂದು ಯಜ್ಞಪಶುವು ಕೊಯ್ಯಲ್ಪಟ್ಟದ್ದಾಗಿ ಕಂಡೆನು. ಅದಕ್ಕೆ ಏಳು ಕಣ್ಣುಗಳು, ಏಳು ಕೊಂಬಗಳೂ ಇದ್ದವು. ಅವು ಏನೆಂದರೆ– ಭೂಮಿಯ ಮೇಲೆಲ್ಲಾ ಕಳುಹಿಸಲ್ಪಟ್ಟಿರುವ ದೇವರ ಏಳು ಆತ್ಮಗಳು. ಈತನು ಮುಂದೆ ಬಂದು ಸಿಂಹಾ ಸನದ ಮೇಲೆ ಕುಳುತಿದ್ದಾತನ ಬಲಗೈಯೊಳಗಿರುವ (ಬರಹದ) ಸುರುಳಿಯನ್ನು

ತೆಗೆದುಕೊಂಡನು. ತೆಗೆದುಕೊಂಡಾಗ ಆ ಇಪ್ಪತ್ತುನಾಲ್ಕು ಮಂದಿ ಹಿರಿಯರು ಯಜ್ಞಪಶುವಾದಾತನ ಪಾದಕ್ಕೆ ಬಿದ್ದರು".

ಈ ಪುರಾತನ ಋಷಿ ಸದೃಶರಾದ ಏ ಈ ಯವರು ಭೂಮಿತಾಯಿಯ ತೊಡೆಯಿಂದೆದ್ದು ಅವಳ ಉಡಿಯಲ್ಲಿ ಒರಗಿಕೊಂಡ ಸಮಾಚಾರವನ್ನು ಕೇಳಿದಾಗಿನಿಂದ ತಳಮಳಿಸುತ್ತಿದ್ದ ಅಂತಃಕರಣದ ದಿವ್ಯಕೃತಜ್ಞತೆಯ ಪುಷ್ಪಾಂಜಲಿ ಸ್ವರೂಪವಾಗಿ ಬರೆದ ಈ ನನ್ನ ಚಿಕ್ಕ ಲೇಖನವನ್ನು ಇಲ್ಲಿಗೆ ಮುಗಿಸಿ ಕವಿಋಷಿಯ ಶ್ರೀಚರಣಕ್ಕೆ ಭಕ್ತಿ ಭಾವದಿಂದ ಬಾಗುವೆನು.

ಓಂ ಶ್ರೀ ಓಂ

ಜ. ಕ. ೧೪-೬ ಜೂನ ೧೯೩೬

# ಸದ್ಯಕ್ಕೆ ದ್ಯಾಂಪುರವೆಂಬ ಚಿಕ್ಕ ಹಳ್ಳಿಯಲ್ಲಿ

(ಕವಿಕಾವ್ಯ ಪರಿಚಯ)

---

ನಮ್ಮ ವಾಙ್ಮಯಲೋಕದ ದೃಷ್ಟಿಯು ಈಗ ಮೂರು ಬಗೆಯದಾಗಬೇಕೆಂದು ನನಗೆ ಅನಿಸುತ್ತದೆ. ಯಾಕೆಂದರೆ ವಾಙ್ಮಯವೇ ಹಾಗೆ ಮೂರು ತೆರನಾಗಿದೆ. ವಿಶ್ವಸಾಹಿತ್ಯದ ಪರಿಚಯವುಳ್ಳವರ ವಾಙ್ಮಯ, ಕೇವಲ ಪೂರ್ವಕೃತಿಗಳ ವ್ಯಾಸಂಗವುಳ್ಳವರ ವಾಙ್ಮಯ ಮತ್ತು ಸಂಸ್ಕೃತಿಯ ಸಂಘರ್ಷಣವಿಲ್ಲದ ಸುಲಭ ಜೀವನದ ಹಳ್ಳಿವಾಡದವರಿಗೊಪ್ಪುವ ವಾಙ್ಮಯ.

ಇದೀಗ ಹಲವರು ನವಸಾಹಿತ್ಯವನ್ನು ಪ್ರೀತಿಸುವವರಾದರೆ ಕೆಲವರು ಇನ್ನೂ ಹಳೆಯ ಶೈಲಿಯನ್ನು ಪುರಸ್ಕರಿಸುವವರು. ಇವರಿಬ್ಬರ ವಿವಾದವೇನೇ ಇರಲಿ; ಇಬ್ಬರಿಗೂ ಬೆಲೆಯಿದೆ. ಆದರೆ ಇವರಿಬ್ಬರನ್ನು ಬಿಟ್ಟು ಇನ್ನೂ ಒಂದು ಬಗೆಯ ಅನಾಥ (ಕೇಳುವವರು ದಿಕ್ಕಿಲ್ಲದ) ಸಾಹಿತಿಗಳುಂಟು. ಅವರ ಬಗೆಗೆ ಪ್ರಸ್ತುತ ಲೇಖನದಲ್ಲಿ ಯಾವ ಮಾತನ್ನೂ ಹೇಳಬೇಕಾಗಿರದಿದ್ದರೂ ಸಾಹಿತ್ಯ ಕ್ರಮದಲ್ಲಿ ಅವರ ಬಗೆಗೂ ಒಂದು ಮಾತನ್ನು ಹೇಳಬೇಕಾಯಿತು. ಆದರೆ ನನ್ನ ಸದ್ಯದ ಉದ್ದೇಶವು ಈ ಎರಡನೆಯ ಬಗೆಯ ಸಾಹಿತಿಗಳಲ್ಲೊಬ್ಬರಾದ ದ್ಯಾಂಪುರದ ಶ್ರೀ ಚೆನ್ನಕವಿಗಳ ಕಾವ್ಯಪರಿಚಯವನ್ನು ನಾಡಿನ ಅಣ್ಣಂದಿರಿಗೆ ಮಾಡಿಕೊಡುವದಾಗಿದೆ. ಈ ಕವಿಯು ೭೨೬ ವಾರ್ಧಕ ಷಟ್ಪದಿಗಳುಳ್ಳ "ಹೇಮರಡ್ಡಿಯ ಮಲ್ಲಮ್ಮನ ಚರಿತ್ರ"ವನ್ನೂ ೧೩೧೭ ಭಾಮಿನೀ ಷಟ್ಪದಿಗಳುಳ್ಳ (ಆಧುನಿಕ ಶಿವಶರಣರೊಬ್ಬರ ಚರಿತ್ರವನ್ನೊಳಗೊಂಡ) "ಶ್ರೀ ವೀರೇಶ್ವರ ಪುರಾಣ"ವನ್ನೂ ಬರೆದಿದ್ದಾರೆ. ಇವರೇ ಬರೆದ ಇನ್ನೂ ಒಂದೆರಡು (ಆಧುನಿಕ ಮಹಾನುಭಾವರ ಚರಿತ್ರಕ್ಕೆ ಸಂಬಂಧಿಸಿದ) ಪುರಾಣಗಳೂ ಇವೆಯೆಂದು ಕೇಳಿದ್ದೇನೆ. ಕವಿಗಳು ಇನ್ನೂ ಒಂದೆರಡು ಕಾವ್ಯಗಳನ್ನು ಬರೆಯುವ ಆಲೋಚನೆಯಲ್ಲಿಯೂ ಇದ್ದಾರಂತೆ.

ದ್ಯಾಂಪುರವು ನೈಜಾಮ್ ರಾಜ್ಯಕ್ಕೆ ಸೇರಿದ ಕೊಪ್ಪಳ ತಾಲೂಕಿನಲ್ಲೊಂದು ಚಿಕ್ಕಹಳ್ಳಿ. ಜನಸಂಖ್ಯೆಯು ಸುಮಾರು ಐದು ನೂರಕ್ಕಿಂತ ಹೆಚ್ಚಿಗಿಲ್ಲವೆಂದು ಕೇಳಿದ್ದೇನೆ. ಅಲ್ಲಿ ಇನ್ನೂ ಒಬ್ಬಿಬ್ಬರು ಕವಿಗಳಿದ್ದಾರೆಂದೂ ಅವರೂ ಒಂದೆರಡು ಪುರಾಣಗಳನ್ನು ಬರೆದಿದ್ದಾರೆಂದೂ'ಸಹ ಕೇಳಿದ್ದೇನೆ. ಈ ಹಳ್ಳಿಯ ಒಬ್ಬ ಜಂಗಮ

ಸ್ವಾಮಿಗಳ ಮನೆತನದವರೇ ಈ ಚೆನ್ನಕವಿಗಳು. ಇವರಿಗೆ ಈಗ ಸುಮಾರು ೪೫ ವಯಸ್ಸು.

ನನ್ನ ಕೈಗೆ ಬಿದ್ದಿರುವ ಇವರ ಎರಡು ಮುದ್ರಿತ ಕಾವ್ಯಗಳೊಳಗಿನ ಕೆಲವು ಪದ್ಯಗಳನ್ನು ವಾಚಕರ ಅವಗಾಹನೆಗಾಗಿ ನಾನಿಲ್ಲಿ ಕೊಡಲಿಚ್ಛಿಸುತ್ತೇನೆ. ಈ ಪದ್ಯಗಳನ್ನು ನೋಡಿದರೆ ಶ್ರೀ ಚೆನ್ನಕವಿಗಳ ಕಾವ್ಯಶಕ್ತಿಯು ಎಷ್ಟೋ ಹದಕ್ಕೆ ಬಂದಿದೆಯೆಂದು ಸ್ಪಷ್ಟವಾಗಿ ತೋರದಿರದು. ಇಂಥವರ ಜೀವಮಾನ ಕಾಲದಲ್ಲಿಯೇ ಅವರ ಕವಿತೆಗಳ ತಕ್ಕ ಬೆಲೆಯಾಗಿ ಲೋಕಾನುಗ್ರಹಕ್ಕೆ ಪಾತ್ರವಾದರೆ, ಅವರ ಆತ್ಮಕ್ಕೆ ಎಷ್ಟು ಧನ್ಯತೆಯೆನಿಸಲಿಕ್ಕಿಲ್ಲ? ಮುಡಿಯುವ ಭೋಗಿಗಳು ಲಭಿಸದಿದ್ದರೆ ಮಾಲೆಗಾರನು ಏಸು ಬಾಸಿಗಗಳನ್ನು ಕಟ್ಟಿ ಏನು ತಾನೆ ಫಲ? ಇದಿರಲಿ, ವಾಚಕರು ಈ ಕವಿಯ ಕವಿತಾಲಹರಿಯಲ್ಲಿಷ್ಟು ಓಲಾಡಲಿ.

## ೧. ವೀರೇಶ್ವರ ಪುರಾಣ

ಸೊಲ್ಲಾಪುರದಲ್ಲಿ ಹದಿನೈದು ವರುಷಗಳ ಹಿಂದೆ ಲಿಂಗೈಕ್ಯರಾದ, ನಾಲತ್ತವಾಡದ ಶಿವಶರಣರೆಂದು ಹೆಸರುಗೊಂಡ ಶ್ರೀ ವೀರಯ್ಯ ಮಹಾನುಭಾವರ ಚರಿತ್ರವು ಈ ಕಾವ್ಯದ ವಿಷಯವಾಗಿದೆ. ಈ ಕಾವ್ಯದಲ್ಲಿ ಭಾಮಿನೀ ಷಟ್ಪದಿಯಲ್ಲಿ ಬರೆದ ಇಪ್ಪತ್ತೊಂದು ಸಂಧಿಗಳಿವೆ. ಪದ್ಯಸಂಖ್ಯೆ ೧೩೧೭, ಈ ಕಾವ್ಯವನ್ನು ಕವಿಯು ೧೯೩೧ರಲ್ಲಿ ಬರೆದು ಮುಗಿಸಿದ್ದಾರೆ. ಮಂಗಳೂರಿನ ಧರ್ಮಪ್ರಕಾಶ ಪ್ರೆಸ್ಸಿನಲ್ಲಿ ಮುದ್ದಾಗಿ ಮುದ್ರಿಸಲಾಗಿದೆ. ಗದುಗಿನ ಆನಂದಾಶ್ರಮದ ಸ್ವಾಮಿಗಳಾದ ಶ್ರೀ ಮಹಾಂತ ಶಿವಯೋಗಿಗಳ ಆಶ್ರಯದಲ್ಲಿ ಈ ಕಾವ್ಯವು ಬರೆಯಲ್ಪಟ್ಟಿದೆ. ಬೆಲೆ ೩ ರೂಪಾಯಿಗಳು. ಕವಿಯು ಕವಿತಾಶಕ್ತಿ ದ್ಯೋತಕವಾದ ಕೆಲವು ಪದ್ಯಗಳನ್ನು ಕೆಳಗೆ ಬರೆಯಲಾಗಿದೆ:

**ತನ್ನ ಕಾವ್ಯ**

ಬೆಳಸಿ ಬರೆದ ಚರಿತ್ರಮಲ್ಲಂ
ಕಳೆದಳೆಯಲೆಂದೊರೆದ ಪುಸಿನುಡಿ-
ಗಳ ಬಳಗದೊಂದಿಕ್ಕೆಯಲ್ಲಂ ಪಾಳು
ಮಾತಲ್ಲ ॥
ಗಳಿತ ರಸಮಂಯುಮಲ್ಲ ಲಕ್ಷಣ-
ವಳಿದ ಪದ್ಯಪ್ರಯುತಮಲ್ಲಂ
ಮಿಲಿತ ಶಿಥಿಲಕ್ಲಿಷ್ಟಮಲ್ಲಂ ಮತ್ತಬಂಧ-
ಮಿದಂ ॥

ಸಂಧಿ ೧– ಪದ್ಯ ೨೨

**ಪುತ್ರದೋಹಳ**

ಚಿಕ್ಕ ಹರೆಯದೊಳೆಳೆಯನಂ ಪೆ-
ತ್ತಕ್ಕರದೆ ಮೃದುಕರಗಳಿಂ ಮೇ-
ಲಕ್ಕೆ ರಯ್ಯನೆ ನೆಗಹುತೆತ್ತುತೆ ನಗಿನಗಿಸಿ
ನೋಡಿ ॥
ಗಕ್ಕನವನೆಳೆಗಲ್ಲದೊಳು ಮನ
ವುಕ್ಕಿ ಬಾಯಿಟ್ಟಲುಗಿಸುತ್ತಂ
ಜಕ್ಕುಲಿಸಿ ಮುದ್ದಿಸುವುದಂ
ಪಡೆದಿಲ್ಲವಾಂ ಮೊದಲು ॥

೨–೩೧

### ಕಥಾನಾಯಕನ ಬಾಲ್ಯ

ಕಾಡಲಿಲ್ಲಂ ತಂಧೆತಾಯ್ಗಳ
ಬೇಡಲಿಲ್ಲಂ ರಮ್ಯವಸ್ತುವ
ನಾಡಲಿಲ್ಲಂ ನಿಷ್ಠುರವನನುಚಿತದ
ಮರೆದೊಮ್ಮೆ ॥
ಮಾಡಲಿಲ್ಲಂ ಕೆಟ್ಟ ಕೆಲಸವ
ಕೂಡಲಿಲ್ಲಂ ದುಷ್ಟಜನದೊಳು
ನೋಡಲಿಲ್ಲಂ ಪರಪದಾರ್ಥವನೀ
ಕುಮಾರಕನು ॥
೩-೧೫

### ಕಾಯಕ ಮಹತ್ವ

ಬೇಡಿ ತಂದೊಡೆ ಋಣಮದೆಂಬಂ
ಕಾಡಿ ತಂದೊಡೆ ಪಾಪವೆಂಬಂ
ಕಾಡದಲೆ ಬೇಡದಲೆ ಜನರಿಂ ತಾನೆ
ಬಂದುದದು ॥
ರೂಢಿಯೊಳು ಹಂಗೆಂಬನೀತಂ
ನಾಡೆ ಕಾಯಕ ರೂಪದಿಂದಂ
ಕೂಡದಿಹ ವಸ್ತುಗಳನೊಲ್ಲನೆ
ಮೋಹವಿರಹಿತನು ॥
೮-೧೨೦

### ಸುಮಂಗಲೆಯರು

ಮಂದಗಮನೆಯರಬ್ಜಗಂಧಿಯ
ರಿಂದುಮುಖಿಯರ್ಕೋಕಕುಚೆಯರು
ಕುಂದರದನೆಯ ರಂಗಭವದರ್ಪಣ
ಕಪೋಲೆಯರು ॥
ಸುಂದರಾಂಗಿಯರಳಿಕಬರಿಯರು
ಚೆಂದುಟಿಯ ರಮಣೀಮಣಿಯರರ-
ವಿಂದಲೋಚನಯುಗಳೆಯರು
ಕಲಕೀರವಾಣಿಯರು ॥

ಕಲಶ ಕುಚಯುಗ ಭರಕೆ ಒಡನಡು
ಬಳುಕೆ, ಜಘನಂ ಪೊಡರೆ, ನೂಪುರ
ಮುಲಿಯೆ, ಸುತ್ತ ಚಂದ್ರಿಕಾಚಂಚಲ
ಕಟಾಕ್ಷಗಳು ॥
ಪೊಳೆಯೆ, ಕಚಗಂಧಕ್ಕೆ ಭ್ರಮರಂ-
ಗಳು ಭರದೆ ಮೊರೆದೆರಗೆ, ವಿಭವಂ
ದಳಿದು ಪರಿತಂದರ್ವಿವಾಹ
ಸುಮಂಟಪಕೆ ಮುದದೆ ॥
೩-೩೪, ೩೫

### ಬನಸಿರಿ

ಕುಸುಮಮಂಜರಿದಳೆದ ಲತೆಯಾ
ಮಿಸುಪ ಲತೆಗಡರಿದ ಮರಂ, ತ
ದ್ವಸುಮತೀಜನ ಬಾಗಿಸಿದ ಫಲವಾ
ಫಲವ ಸೀಳ್ದು ।
ರಸವನೀಂಟುವ ಕೀರಮಾ ಶುಕ
ವಿಸರ ವರ್ಣವನೆಳೆದಳಿರ್ಗೆ-
ತ್ತೊಸೆದು ಒಳಿಸಾರುವ ಪಿಕಂಗಳ್ಮೆರೆದವಾ
ಬನದೆ ॥

ತಳಿರಡಿಗಳಿಂ, ಬಾಳೆಗಂಬಂ
ಗಳ ತೊಡೆಗಳಿಂದಂ, ಕಪಿತ್ಥೋ
ತ್ಫಲ ಕುಚಗಳಿಂ, ಪೂಗಭುಜಯುಗದಿಂದ
ದಾಡಿಮದ ॥
ಚೆಲುರದಗಳಿಂ, ಚಂಪಕದ ಸ-
ಲ್ಲಲಿತ ನಾಸಿಕದಿಂದಲರ ಕಂ-
ಗಳಿನಳಿಯ ಕುಂತಲದಿನೆಸೆದಳು
ವನಕಮಲನಿಲಯೆ ॥
೯- ೩೩, ೩೫

ನಾಯಕನ ಮಹಿಮೆ

ಕೆಲಬರಿವನಂ ಮರುಳನೆಂದರ್
ಕೆಲಬರೀತಂ ಮುಗ್ಧನೆಂದರ್
ಕೆಲರು ದಂಭಾಚಾರಪರನಿವನೆಂದುಂ
ಗಳಪಿದರು ॥
ಕೆಲಬರಿವನಗಿ ಕುಟಿಲನೆಂದರು
ಕೆಲಬರೂಹಿಸಲರಿಯೆವೆಂದರು
ಪಲವು ಬಗೆಯಿಂದಿಂತು ನುಡಿದರು
ಜನರು ತಿಳಿದಂತೆ ॥

ಮುರಿದ ಬೆತ್ತಂ, ಪರಿದ ಜೋಳಿಗೆ
ಕಿರಿಯ ಕೋವಣಮುಗುವ ಜೊಲ್ಲುಂ
ನರೆನವಿರು, ಪಳೆಸಜ್ಜೆ, ಮಾಸಿದ
ಭಸಿತರೇಖೆಗಳು ॥
ವಿರಸವಚನಂ, ನಿರಿದೊವಲ್ಪೊಂ-
ದಿರುವ ಗಣನಂ ಕಂಡು ಶಿವನೆಂ
ದೆರಗಿ ತತ್ಕೃಪೆಪಡೆಯುದಾತಂ
ಭಕ್ತನೆನಿಸುವನೇ ॥
೧೨–೩೭

ಶರಣರೊರೆದೊಡೆ ಶರಣರುಗುಳ್ದೊಡೆ
ಪರಮಶರಣರು ದುಡಿಸಿಕೊಂಡೊಡೆ
ಶರಣಪರ್ಯರು ಕಾಡಿದೊಡೆ ಬೈದೊಡೆ
ಬಡಿದೊಡಪರ ॥
ಕರುಣವೆಂದೇ ಭಾವಿಸದೆ ಶಿವ-
ಶರಣನಂ ದಂಡಿಸಿದ ಮನುಜನ
ದುರಿತಸಂಚಯನ ಕೊಳವೆ, ನಿಷ್ಕೃತಿ
ಸರ್ವಶಾಸ್ತ್ರದೊಳು ॥
೧೦- ೧೨, ೩೧

ಪರದ ಶಿವಭಕ್ತಿಯ ಕುರುಹು, ಭಾ
ಸುರ ಶಿವಜ್ಞಾನದ ತಿರುಳು, ಬಂ
ಧುರ ವಿರಾಗದ ಸುಗ್ಗಿ,
ಶೈವಾನುಭವದೈಸಿರಿಯು ॥
ಪರಮ ಲಿಂಗಾಂಗಗಳ ಸಮರಸ-
ದಿರವವಿರಳಾನಂದಗೃಹವೀ
ಪುರುಷನಿವನೆಂದಾಡುತಿರ್ದಂ
ತಚ್ಚರೋತ್ತಮನು ॥
೨೦–೭

## ೨. ಮಲ್ಲಮ್ಮನ ಚರಿತ್ರ

ಇದೀಗ ಉತ್ತರ ಕರ್ನಾಟಕದಲ್ಲಿ ಎಲ್ಲೆಲ್ಲಿ ನೋಡಿದರೆ ಅಲ್ಲಲ್ಲಿ ಈ ಪುಣ್ಯಾತ್ಮಳ ನಾಟಕದ ಸುಗ್ಗಿ. "ಹೇಮರಡ್ಡೀ ಮಲ್ಲಮ್ಮನ ಪುರಾಣ"ವೆಂಬ ಹೆಸರಿನ ಜೈನಾಪುರದ ರುದ್ರಾಕ್ಷ್ಯ ಕವಿಗಳು (ಇತ್ತೀಚೆ ಕೆಲ ವರುಷಗಳ ಹಿಂದೆ) ಸಾಂಗತ್ಯ ರೂಪದಿಂದ ಬರೆದದ್ದನ್ನೇ ಆಧಾರವಾಗಿ ಇಟ್ಟುಕೊಂಡು, ಬಹು ಪರಿಶ್ರಮದಿಂದ ಹೊಸ ವಿಷಯುಗಳನ್ನು ಸಂಶೋಧಿಸಿ ಸೇರಿಸಿ, ನಮ್ಮೀ ಚೆನ್ನಕವಿಗಳು ಇದನ್ನು ವಾರ್ಧಕಷಟ್ಪದಿಯಲ್ಲಿ ಬರೆದಿದ್ದಾರೆ. ಈ ಗ್ರಂಥವು ೧೯೨೨ ರಲ್ಲಿ ಬರೆದು ಮುಗಿಸಲ್ಪಟ್ಟಿದೆ. ಇದರದೂ ಮಂಗಳೂರಿನ ಮುದ್ದಾದ ಮುದ್ರಣವೇ. ಬೆಲೆ ಈಗ ೨ ರೂಪಾಯಿಗಳು. ಇದರಲ್ಲಿ ಹದಿನೆಂಟು ಸಂಧಿಗಳೂ ೬೨೬ ಪದ್ಯಗಳೂ ಇವೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಆರಿಸಿ ಬರೆಯುತ್ತೇನೆ :

### ಶ್ರೀಶೈಲ ಪರ್ವತ

ಶಿವಯೋಗಿಗಳ ಬೀಡು, ಮಂಗಲದ ನೆಲೆ, ಮುನಿಪ–
ನಿವಹಗಳ ಗೊತ್ತು, ಸೈಪಿನ ಸೀಮೆ, ಪರಮುಕ್ತಿ
ಯುವತಿಯು ತವರ್ಮನೆ, ಗಣಾಧಿನಾಯಕರಿರ್ಕೆ, ಸೈರಣೆಯು
ಜನ್ಮಭೂಮಿ ॥
ದಿವಿಷದುದ್ಯದ್ವಿರಾಮಸ್ಥಲಂ, ಪ್ರಥಮ ಪುಂ–
ಗವ ಸಮೂಹ ನಿಕೇತನಂ, ಮೇನಕಾತ್ಮಜಾ
ಧವ ರಾಜಧಾನಿಯೆನಲೊಪ್ಪಿದುದು ಪೆಂಪಿನಿಂದುರುತರದ ಶ್ರೀಶೈಲವು॥
ಸಂಧಿ ೨, ಪದ್ಯ ೧

### ಮಲ್ಲಮ್ಮನ ಮೇಲ್ಮೆ

ನಡೆಯ ಬಂದರು ಮುಂದೆ ಸೊಸೆಯರವರೊಳಗೊಬ್ಬ
ನಡುವಿನವಳಾದ ಮೂರನೆಯ ಪುತ್ರನ ಸತಿಯು
ಕಡು ಚೆಲುವೆ ಪರಮ ಪಾತಿವ್ರತ್ಯ ಸಂಪನ್ನೆ ಮಲ್ಲಮ್ಮನೆಂಬ
ಸೊಸೆಯು ॥
ಬಿಡದತ್ತೆಮಾವರಂ ಮನಮುಟ್ಟಿ ಸೇವಿಸು–
ತ್ತೆಡರಿಗಂಜದೆ ಸಂಪದಕ್ಕೆ ಹಿಗ್ಗದೆ ಶಾಂತಿ
ಗೆಡದೆ ಲೌಕಿಕ ಚಮತ್ಕೃತಿಯರಿದಿರ್ದಳಾ ಮುಗ್ಧೆ ಭಕ್ತಿಯ ವಿದಗ್ಧೆ ॥

ಮಂದಗಮನದ, ಭ್ರಮರಕುಂತಲದ, ಗುರುಕುಚದ,
ಕುಂದರದನದ, ಕಂಬುಕಂಠದ, ಪಿಕಲಾಪ–
ದಿಂದುವದನದ, ಮೃದುಲಕರದ, ಬಿಂಬಾಧರದ, ರಾಜೀವದಳ
ನೇತ್ರದ ॥
ಸುಂದರಾಂಗಿಯು ಚೆಲ್ವಿಕೆಯನಾರು ಬಣ್ಣಿಪರು
ಕಂದರ್ಪವೀರನೀರೇಳು ಲೋಕಗಳನಾ–
ರ್ಪಿಂದ ಗೆಲೆಯಲ್ಕಿದೊಂದಾಯುಧಮೊ ಎಂಬಂತೆ ರಂಜಿಸಿದಳಾ
ಮಾನಿನಿ ॥
೨–೧೦, ೧೧

ಬಿಸಿಲಿಂದ ಬಸವಳಿದು ಪಸಿದು ನೀರಡಿಸಿ ಮನೆ–
ಗಸವಸದೊಳಡವಿಯಿಂ ಬಂದ ಮಲ್ಲಮ್ಮನಂ
ಮುಸುಡೆತ್ತಿ ನೋಡಿ ಮುರುಗದೆ ಮುನಿದು ಪೊತ್ತಿದೊಣಗಿದ
ಹಳಸಿದಂಬಲಿಯನು ॥

ಹಸಿಬಿಸಿಯ ರಸವುಡಗಿ ನಾರುತಿಹ ಶಾಕಮಂ
ಮುಸಗಿ ತಂಗುಳ ಚೂರನೊಡಲಿಗಂ ಸಾಲದನಿ-
ತಶನಮಂ ನೆಗೆವೆಣ್ಣೆಯುರು ಕೊಡುತಲಿರ್ದರವರಂ ಪೋಲ್ವ
ನೀಚರೊಳರೇ ॥
೨-೨೭

ತನಗತ್ತೆ ಬೇಸರಂ ಗೈವಳೆನ್ನದೆ ತನ್ನ-
ನಿನನುದಾಸೀನವೆಸಗವನೆಂದು ಚಿಂತಿಸದೆ
ಮುನಿದು ನೆಗೆವೆಣ್ಣೆಯುರು ದ್ವೇಷಿಸುವರೆಂದು ಸಿಡಿಮಿಡಿಗೊಳದೆ
ಮೃಷ್ಟಾನ್ನವ ॥
ಮನೆಯ ಜನರೆಲ್ಲರುಂಬುಪರೆಂದು ಮರುಗದನು-
ದಿನಮಿವರ್ ತಂಗಳವನೀವರೆನ್ನದೆ ತುರುಗ
ಳನು ಕಾವುದೆನಗೆ ನೆಲೆಯಾದುದೆಂಪಳು ಸದಾ ಮುಗ್ಧೆ
ಸುಖದಿಂದಿರ್ದಳು ॥

ಮಳೆಯೊಳಗೆ ಚಳಿಯೊಳಗೆ ಬೇಸಿಗೆಯ ಬಿಸಿಲೊಳಗೆ
ಬಳಿದರಣ್ಯದೊಳು ಬರಿಗಾಲಿಂದ ಬಲುಹರಕು
ಹಳೆಯ ಸೀರೆಯನುಟ್ಟು ನಡುಗುತಂ ಮುಲುಗುಂತಂ ಬಳಲಿ
ಬೆಂಡಾಗುತ್ತಲಿ ॥
ತೊಳಲುತಂ ಕಲ್ಮುಳ್ಳುಗಳನೊತ್ತಿ ತುಳಿವುತಂ
ಪಲವು ಕಷ್ಟಗಳಾದಡುಂ ಮನದೆ ಧೃತಿಗೆಡದೆ
ಚೆಲುವೆ ಮಲ್ಲಮ್ಮನಾವುಗಳ ಹಿಂಡಂ ಕಾವುತಿರ್ದಳತಿ ಸಂತಸದೊಳು ॥

ಮಲಗುವಾಸನವಿಲ್ಲ ಹೊದಿವ ಹಚ್ಚಡವಿಲ್ಲ
ತಲೆಗಿಂಬದೆಲ್ಲಿ ಮತ್ತೊಂದು ಕುಪ್ಪಸವಿಲ್ಲ
ಹೊಳೆವ ಮಂಗಳಸೂತ್ರಮಲ್ಲದಿನ್ನೊಂದಿಲ್ಲ ಬೇಡಲಿಕೆ ಬಾಯಿಲ್ಲವು ॥
ತಲೆಗೆ ನೇಹಮದಿಲ್ಲ ಮರುಗುತಿಪ್ಪವರಿಲ್ಲ
ಪಳಿಯದವರಾರುಮಿಲ್ಲಂ ನಿಳಯದೊಳು, ಕೈಗೆ
ಬಳೆಗಳಿಲ್ಲೀ ಪರಿಯೊಳಿರ್ದೊಡಂ ಮುಗ್ಧಭಕ್ತೆಯ ಮನಂ ಕದಡಲಿಲ್ಲ ॥

ನಡೆವಲ್ಲಿ ನುಡಿವಲ್ಲಿ ಹಿಡಿವಲ್ಲಿ ಬಿಡುವಲ್ಲಿ
ಕೊಡುವಲ್ಲಿ ಕೊಳ್ಳುತ್ತಿಪ್ಪಲ್ಲಿ ಕುಳ್ಳಿರುವಲ್ಲಿ
ಬಿಡದೇಳುವಲ್ಲಿ ಮಲಗುವ ಸಮಯದಲ್ಲಿ ಪ್ರತಿ ಕಬಳಮಂ ನುಂಗುವಲ್ಲಿ ॥

ತಡೆಯದೆಲ್ಲೆಡೆಗಳೊಳು ಸಂತತಂ ಚಂದ್ರಧರ-
ನಡಿಗಳಂ ಸಡಗರದೆ ನೆನೆಯುತಂ ವಿನಯದಿಂ
ದುಡಿಯುತಿರ್ದಳ್ ಮನೆಯ ತೊತ್ತಿನಂತೆಡೆವಿಡದೆ
ಜಗವಿದಚ್ಚರಿವಡಂತಿರೆ ॥

ಎನಿತರುಚಿಯುರೆಗೂಳನುಂಡಡುಂ ಸೊರಗಲಿ–
ಲ್ಲೆನಿತಡವಿಯೊಳ್ಬಾಳ್ದಡುಂ ಕಾಂತಿಗುಂದಲಿ–
ಲ್ಲೆನಿತು ಹಳೆ ಹರಕು ಸೀರೆಯನುಟ್ಟೊಡುಂ ಶೋಭೆಗೆಡಲಿಲ್ಲ
ಚಳಿಮಳೆಯೊಳು ॥

ಎನಿತು ದುಡಿದೊಡಮಾಕೆಗಾವುಯಂ ಬರಲಿಲ್ಲ–
ಮೆನಿತು ದಣಿದಡಮುಮಳವಾರಲಿಲ್ಲೆಂತಿರ್ದ–
ಡೆನಿತಾದಡುಂ ಕುಂದಡಸಲಿಲ್ಲವಂಭವ ಪ್ರಸಾದ ಪ್ರಭಾವದಿಂದ ॥
ಸಂಧಿ ೨, ಪದ್ಯ ೩೬, ೩೭, ೩೮, ೪೦, ೪೧

ಜ. ಕ. ೧೫–೧೧ ನವ್ಹಂಬರ ೧೯೩೭

# ಬೆಳಗಾವಿ ಜಿಲ್ಲೆಯ ಸಾಹಿತ್ಯ ಸಮ್ಮೇಲನ ಅಧ್ಯಕ್ಷ ಭಾಷಣ

---

ಸುಹೃದಯರಾದ ಸಕಲಬಂಧು ಭಗಿನಿಯರೇ,

ಜನತಾ ಸೇವೆಗೆಂದು ಜನತಾ ಜನಾರ್ದನನ ಇದಿರಿಗೆ ತಲೆಬಾಗಿ ನಾನು ನಿಂತು ದೆಂದರೆ ಇದೇ ಮೊದಲು. ಸದಯಾಂತಃಕರಣದಿಂದ ತಾವೆಲ್ಲರು ಈ ಅಲ್ಪಜ್ಞನ ಅಣುಮಾತ್ರ ಸೇವೆಯನ್ನು ಸ್ವೀಕರಿಸಿ ಸಂತುಷ್ಟರಾಗಬೇಕೆಂದು ಪ್ರಾರ್ಥಿಸುತ್ತೇನೆ.

ನಾನು ಕೋಣೆಯ ಕೂಸು. ಓಣಿಗೆ ಬರುವದೆಂದರೆ ದಿಗಿಲು, ಸಾರ್ವಜನಿಕ ಜೀವನದಲ್ಲಿ ನನ್ನ ಸುಳಿದಾಟ ವಿಶೇಷವಾಗಿ ಕಾಣದಿರುವುದೇ ಇದಕ್ಕೆ ಸಾಕ್ಷಿಯೆಂದು ತಮ್ಮಲ್ಲಿ ನಾನು ಬೇರೆ ಬಿನ್ನೈಸಬೇಕಾಗಿಲ್ಲ. ಆದರೂ ತಾವು ಮತ್ತು ನನ್ನ ಕೆಲ ಜೀವನ್ಮಿತ್ರರು ಹಾಗೂ ಒಬ್ಬಿಬ್ಬರು ಹಿರಿಯರು ಕೂಡಿ ಅಕ್ಕರತೆಯಿಂದ ನಾಡ ತಾಯಿಯ ಈ ರಂಗಮಂಟಪಕ್ಕೆ ನನ್ನನ್ನು ಕರೆತಂದು ತಾಯಿಯ ಸೇವೆಯ ಭಾಗ್ಯ ನನಗೆ ಲಭಿಸುವಂತೆ ಮಾಡಿರುವಿರಿ. ಇದಕ್ಕಾಗಿ ನಾನು ತಮ್ಮೆಲ್ಲರಿಗೆ ಕೃತಜ್ಞನಾಗಿರುವೆನು.

ಒಂದು ಎಳೆಯ ಕೂಸು ತಾನಿರಬೇಕಾದ ಜಗತ್ತಿನೊಳಗಿನ ಪ್ರತಿಯೊಂದು ವಸ್ತುವನ್ನೆಲ್ಲ ತಟ್ಟಿ, ಮುಟ್ಟಿ, ತೂಗಿ, ನಿರೀಕ್ಷಿಸಿ, ಪರೀಕ್ಷಿಸಿ ಅದರದರ ಮಹತ್ವ, ಪ್ರಯೋಜನ, ಅವಶ್ಯಕತೆ, ರೀತಿ, ನೀತಿ ಇತ್ಯಾದಿಗಳನ್ನೆಲ್ಲ ಅರಿತುಕೊಳ್ಳಲೆಳೆಸುವಂತೆ ಹಿಂದಿನ ಶ್ರದ್ಧಾ ಜಗತ್ತಿನಿಂದ ಇಂದಿನ ವಿಚಾರ ಜಗತ್ತಿಗೆ ಬಂದು ಮುಟ್ಟಿದ ನವ ಮಾನವ ಶಿಶುವು ತಾನು ನೆಲೆಸಬೇಕಾಗಿರುವ ತನ್ನ ಸುತ್ತಮುತ್ತಲಿನ ಪ್ರತಿಯೊಂದು ವಿಷಯವನ್ನೂ ಬುದ್ಧಿಯ ಒರೆಗಲ್ಲಿನ ಮೇಲೆ ಪುನಃ ತಿಕ್ಕಿ-ತಿಕ್ಕಿ ನೋಡಿ ಅದರದರ ಬೆಲೆಯನ್ನೂ ಅಗತ್ಯವನ್ನೂ ಕಂಡುಕೊಳ್ಳಲೆಳಸುತ್ತಿದ್ದಾನೆ.

ಧರ್ಮ, ಸಾಹಿತ್ಯ, ಶಾಸ್ತ್ರ, ಸಮಾಜ, ಅರ್ಥನೀತಿ, ರಾಜನೀತಿ, ವ್ಯಕ್ತಿಧರ್ಮ, ಕುಟುಂಬಧರ್ಮ, ದೇಶ, ಕೋಶ, ಸಮಸ್ತ ಮಾನವಕೋಟಿ ಇತ್ಯಾದಿ ವಿಷಯಂಗಳನ್ನೆಲ್ಲ ಇಂದು ಮಾನವನು ಸಂಶೋಧನೆಯ ಭಟ್ಟಿಯಲ್ಲಿ ಹಾಕಿ ಅದರದರ ಅಂತಸ್ತನ್ನು ಅಳೆಯತೊಡಗಿದ್ದಾನೆ. ಇದೀಗ ನಾವು ಸಾಹಿತ್ಯದ ಬೆಲೆಯನ್ನೂ, ನೆಲೆಯನ್ನೂ, ಫಲವನ್ನೂ, ಪ್ರಯೋಜನವನ್ನೂ ಈ ಹೊಸ ದೃಷ್ಟಿಯಿಂದ ಕಂಡುಕೊಳ್ಳುವುದಕ್ಕೆ

ನಡೆಯಿಸಿರುವ ಪ್ರಯೋಗಗಳೇ ಈ ಸಣ್ಣ ದೊಡ್ಡ ಸಾಹಿತ್ಯ ಸಮ್ಮೇಲನಗಳ ಉದ್ದೇಶವು.

ಇಂಥ ದೊಡ್ಡ ಕಾರ್ಯದ ಒಂದು ಸಣ್ಣ ಅಂಗವಾಗಿರುವ ಸದ್ಯದ ಈ ಸಮ್ಮೇಲನಕ್ಕೆ ನನಗಿಂತ ಬಲ್ಲವರಾದ ಹಿರಿಯ ಸಾಹಿತಿಗಳು ಅಧ್ಯಕ್ಷರಾಗಿದ್ದರೆ ಚೆನ್ನಾಗಿದ್ದಿತೆಂದು ನನಗೆ ಅನಿಸುತ್ತದೆ. ಏಕೆಂದರೆ ಇಂಥ ಹಿರಿಕಾರ್ಯದಲ್ಲಿ ನನ್ನ ಅಲ್ಪ ಸೇವೆಯು, "ಸಮುದ್ರದಲ್ಲಿ ಕಸಕಸಿ" ಎಂದು ಹೇಳುವಂತೆ ವಿಶೇಷ ಪ್ರಯೋಜನ ಕರವಾಗಲಾರದಲ್ಲಾ, ಎಂದು ನಾನು ಕನವರಿಸುತ್ತೇನೆ.

ಆದರೆ ದಯಾಮಯಿಯಾದ ನಾಡದೇವಿಯೂ ಅವಳ ಸಹೃದಯಿ ಸಂತಾನ ರಾದ ತಾವೂ ಚಿಕ್ಕಮಕ್ಕಳ ಆಟವನ್ನೇ ಅಕ್ಕರತೆಯಿಂದ ದೊಡ್ಡದನ್ನಾಗಿ ಮಾಡಿ ನೋಡಿ ನಲಿಯುವ ತಾಯಿ–ತಂದೆಗಳಂತೆ, ಅಣ್ಣ–ಅಕ್ಕಂದಿರಂತೆ ಅಲ್ಪಜ್ಞನಾದ ನನ್ನನ್ನೇ ಈ ಕೆಲಸಕ್ಕೆ ನಿಯಮಿಸಿರುವಿರಿ. ಇದು ತಮ್ಮೆಲ್ಲರ ಅಕ್ಕರತೆಯ ಹಾಗೂ ನಾಡತಾಯಿಯ ಅಪಾರ ಕರುಣೆಯ ಪರಕೆಯೆಂದು ಭಾವಿಸಿ ಅವಳ ಕೃಪೆಯಿಂದ ನಾನು ನಮ್ರಭಾವದಿಂದ ನನ್ನ ಅಳಿಲು ಭಕ್ತಿಯಿಂದ ಅವಳ ಪಾದಕ್ಕೆ ಸಲ್ಲಿಸುತ್ತೇನೆ. ಸ್ವೀಕರಿಸಿ ಆ ತಾಯಿ ನನ್ನನ್ನು ಆಶೀರ್ವದಿಸಲೆಂದು ಹಾರೈಸುತ್ತೇನೆ ಹಾಗೂ ತಮ್ಮಲ್ಲಿಯೂ ಅದನ್ನೇ ಬೇಡಿಕೊಳ್ಳುತ್ತೇನೆ.

ಸಾಹಿತ್ಯದಲ್ಲಿ ಶಾಸ್ತ್ರವೆಂದೂ ಕಾವ್ಯವೆಂದೂ ಮುಖ್ಯವಾಗಿ ಎರಡು ಭಾಗ ಗಳುಂಟು. ಶಾಸ್ತ್ರವು ವಿಚಾರ ಪ್ರಧಾನ, ಕಾವ್ಯವು ಭಾವನಾಪ್ರಧಾನ. ಶಾಸ್ತ್ರ ಹಾಗೂ ಕಾವ್ಯ ಇವೆರಡರಲ್ಲಿ ಪುನಃ ಪಾರಮಾರ್ಥಿಕವೆಂದೂ, ಲೌಕಿಕವೆಂದೂ ಎರಡು ಭಾಗ ಗಳಿರುತ್ತವೆ. ಧರ್ಮ, ತತ್ತ್ವಜ್ಞಾನ, ಮೊದಲಾದವುಗಳು ಪಾರಮಾರ್ಥಿಕ ಶಾಸ್ತ್ರ ಗಳಾದರೆ ಸಮಾಜಶಾಸ್ತ್ರ, ಭೌತಿಕಶಾಸ್ತ್ರ, ಇತಿಹಾಸ, ಅರ್ಥಶಾಸ್ತ್ರ ಮೊದಲಾದವು ಗಳು ಲೌಕಿಕ ಶಾಸ್ತ್ರಗಳು. ಅದರಂತೆ ಪುರಾಣ, ಕೀರ್ತನೆ, ವಚನ ಮೊದಲಾದವು ಗಳು ಪಾರಮಾರ್ಥಿಕ ಕಾವ್ಯಗಳಾದರೆ, ಸಾಮಾಜಿಕ ನಾಟಕ, ಪ್ರಾಪಂಚಿಕ ಕಾವ್ಯ (ಕಥೆ-ಕಾದಂಬರಿ) ಮೊದಲಾದಗಳು ಲೌಕಿಕ ಕಾವ್ಯಗಳಾಗಿರುವವು.

ಇತ್ತೀಚೆಗೆ ಪಾಶ್ಚಿಮಾತ್ಯ ಪೌರಸ್ತ್ಯ ವಿಚಾರಗಳ ಸಮ್ಮಿಲನದಿಂದ ಈ ಲೌಕಿಕ ಪಾರಮಾರ್ಥಗಳ ನಡುವಿನ ಪರದೆಯು ಮೆಲ್ಲಮೆಲ್ಲನೆ ಹರಿದು ಅವೆರಡರ ಭಿನ್ನತ್ವವು ಕಡಿಮೆಯಾಗತೊಡಗಿದೆ. "ಸತ್ಯವೇ ಸೌಂದರ್ಯವು ಸೌಂದರ್ಯವೇ ಸತ್ಯ" ಎಂಬ ತತ್ತ್ವವನ್ನು ಆಧುನಿಕ ಪಾಶ್ಚಿಮಾತ್ಯ ಮಹಾಕವಿಗಳ ಕಾವ್ಯಗಳಲ್ಲಿ ಕಂಡು ನಮ್ಮವರೂ ಆ ನಿಟ್ಟಿಗೆ ಸಾಗುತ್ತಿದ್ದಾರೆ, ಕಾಣುವ ಸೌಂದರ್ಯದ ಹಿಂದೆ ಕಾಣದ ಮಹಾಸತ್ಯ ವೊಂದುಂಟೆಂಬ ಪ್ರತೀತಿ ಇಂದಿನ ಕವಿಗಳಿಗೂ ಕಲಾಕುಶಲರಿಗೂ ಹೆಜ್ಜೆಹೆಜ್ಜೆಗೆ ಬರತೊಡಗಿದೆ. ಕಾಣುವುದು ಅದರ ಮೈ; ಕಾಣದ್ದು ಅದರ ಜೀವ. ಜೀವ ದೇಹ ಎರಡೂ ಕೂಡಿದ್ದೇ ವಸ್ತು. ಜೀವವಿಲ್ಲದಿದ್ದರೆ ಹೊರಮೈಯೊಂದು ಹೆಣ;

ದೇಹವಿಲ್ಲದಿದ್ದರೆ ಜೀವವೊಂದು ಅಂತರಪಿಶಾಚಿ; ಗಾಳಿ. ಇವೆರಡೂ ಉಪಯೋಗಕ್ಕೆ ಬಾರವು. ಎರಡೂ ಕೂಡಿದರೆ ಅಮೃತ. ಉಪ್ಪು ನೆಲ್ಲಿ ಕೂಡಿದ ಹಾಗೆ.

ತುಕಾರಾಮ ಸಿನೇಮಾದಲ್ಲಿ ಒಂದು ಬೀಜದ ಹೊಟ್ಟೆಯಲ್ಲಿ ಒಂದು ಸಸಿ ಹುಟ್ಟಿ, ಆ ಸಸಿಯಲ್ಲಿ ಅನೇಕ ಬೀಜಗಳದೊಂದು ತೆನೆ ಹುಟ್ಟುವುದನ್ನೂ ಆ ತೆನೆಯೊಳಗಿನ ಅಸಂಖ್ಯ ಬೀಜಗಳಿಂದ ಪುನಃ ಅಸಂಖ್ಯ ಸಸಿಗಳು ಹುಟ್ಟುವುದನ್ನು ಹೃದಯಂಗಮವಾಗಿ ಪ್ರದರ್ಶಿಸಿ ಅದರ ಜೊತೆಗೆ "ಏಕತ್ವದಲ್ಲಿ ಬಹುತ್ವವನ್ನೂ, ಬಹುತ್ವದಲ್ಲಿ ಏಕತ್ವವನ್ನೂ" ಸಾರುವ ಪದ್ಯವನ್ನು ಸಮ್ಮಿಲನಗೊಳಿಸಿದ್ದು ಲೌಕಿಕ ಪರಮಾರ್ಥಗಳ ಬಂಗಾರ ಮತ್ತು ಕುಂದಣ ಕೂಡಿದಂತೆ ಯಾರಿಗೆ ಅನಿಸುವುದಿಲ್ಲ ? ಅಲ್ಲಿ ಲೌಕಿಕ ಪರಮಾರ್ಥಗಳು, ಬೆಳೆಯ ದೃಶ್ಯ ಹಾಗೂ ಅಭಂಗ ಪದ್ಯ ಇವುಗಳು ವಿರೋಧಕಗಳಾಗಿ ಎಲ್ಲಿ ತೋರುವವು.

ಈ ರೀತಿಯಿಂದ ಈಗ ಕಾಲವು ಬದಲಾಗುತ್ತಿದೆಯೆಂಬುದನ್ನು ನಾವು ಹೆಜ್ಜೆ ಹೆಜ್ಜೆಗೆ ಕಾಣುವೆವು. ಉದಾಹರಣಾರ್ಥವಾಗಿ ಹಿಂದಿನ ಶೃಂಗಾರ ಲಾವಣಿಗಳನ್ನೂ ಪುರಾತನ ಕಾವ್ಯಗಳೊಳಗಿನ ಶೃಂಗಾರ ರಸದ ಆಶ್ವಾಸಗಳನ್ನೂ ಇಂದು ಸಭೆ–ಸಮ್ಮೇಲನಗಳಲ್ಲಿ ಹಾಡಿದರೆ ಯಾರು ಕೇಳಲಿಕ್ಕೆ ಸಿದ್ಧರಿರುವರು ? ಆದರೆ ದುರ್ದೈವದಿಂದ ಅಂಥಾ ಸಿನೇಮಾಗಳನ್ನು ಇಂದಿನ ತರುಣರಲ್ಲನೇಕರು ಕತ್ತಲೆಯಲ್ಲಿ ಕುಳಿತು ನೋಡಲು ತವಕಗೊಳ್ಳುವುರೆಂಬ ಮಾತು ಬೇರೆ. ಆದರೆ ಅವರಿನ್ನು ಬಹಳ ದಿನ ಹಾಗೆ ನೋಡಲಾರರು. ಯಾಕೆಂದರೆ ಕತ್ತಲೆಯಲ್ಲೇ ಎಷ್ಟುದಿನ ಉಳಿಯುವರು ? ಈಗ ನೋಡಿರಿ ವಚನಗಾಯನವೆಂದರೆ ಜನರಿಗೆ ಎಷ್ಟು ಹಿಗ್ಗು, ಎಷ್ಟು ಹರುಷ ! ದಾಸರ ಪದಗಳೂ ಹರಿಹರನ ರಗಳೆಗಳೂ ಈಗ ಸಭೆ–ಸಮ್ಮೇಲನಗಳಲ್ಲಿ ಎಷ್ಟು ಆದರ ! ಎಷ್ಟು ಸ್ವಾಗತ !!

ಹಾಗೆಯೇ ಇಂಗ್ಲೀಷಿನಲ್ಲಿ ರವೀಂದ್ರರ ಗೀತಾಂಜಲಿಗೆ ಸುಶಿಕ್ಷಿತ ಸಮಾಜದಲ್ಲಿ ಈಗ ದಿನದಿನಕ್ಕೆ ಎಷ್ಟು ಹೆಚ್ಚು ಪ್ರಾಶಸ್ತ್ಯ ಸಿಗಹತ್ತಿದೆಯೆಂಬುದಕ್ಕೆ ಪ್ರತಿಯೊಂದು ಭಾಷೆಯಲ್ಲಿ ಅದರ ಅನುವಾದಗಳು ಅನೇಕಾನೇಕಗಳಾಗತೊಡಗಿದ್ದೇ ಸಾಕ್ಷಿ. ಆದರೆ ಪ್ರಗತಿಪರ ಸಾಹಿತಿಗಳು ಕೆಲಮಟ್ಟಿಗೆ ಇಂಥ ಸಾಹಿತ್ಯಕ್ಕೆ ವಿರೋಧ ತೋರಿಸುತ್ತಿರುವರೆಂಬುದೇನೋ ನಿಜ. ಆದರೆ ಅವರೂ ಇನ್ನು ಮುಂದೆ ಬಹಳ ದಿನ ಹಾಗೆ ಮಾಡಲಾರರು. ಯಾಕೆಂದರೆ ತಾವು ಮಾನವನ ಬಾಹ್ಯ ಕಷ್ಟನಷ್ಟಗಳಿಗಷ್ಟೇ ಲಕ್ಷಗೊಟ್ಟಿದ್ದು ಅವನೊಳಗೆ ಇನ್ನೂ ಒಂದು ಬೇರೆ ಬೆಂಕಿ ಹೊತ್ತುತ್ತಿದೆಯೆಂಬುದನ್ನೂ ಆ ಬೆಂಕಿಯು ತನ್ನೊಳಗಿನ ಒಂದು ಆರದ ಬೆಳಕಿಗಾಗಿ ಕಾತರಿಸುತ್ತಿದೆಯೆಂಬುದನ್ನೂ ಅವರು ಬೇಗನೆಯೇ ಮನಗಾಣುವರೆಂಬುದರಲ್ಲಿ ಸಂದೇಹವಿಲ್ಲ. ಹಸಿದವನು ಮೊದಲು, "ಕೂಳು ಕೂಳು" ಎಂಬ ಕೂಗನ್ನೇ ಕೂಗುವನು. ಆದರೆ ಹೊಟ್ಟೆತುಂಬಿದ ಬಳಿಕ ಚಾಣಕರಾಯನ ಕಥೆಯನ್ನೇ ಹೇಳತೊಡಗುವನು. ಇಂದಿನ ಮಾನವರ ಹೊರಗಿನ

ಕಷ್ಟಗಳೆಲ್ಲ ಆಯಾ ದೇಶದೊಳಗಿನ ಧುರೀಣರ ಪ್ರಯತ್ನದಿಂದ ದೂರಾದ ಬಳಿಕ ಪ್ರಗತಿಪರ ಸಾಹಿತಿಗಳು ಆಮೇಲೆ ಯಾವ ಗೋಳನ್ನು ಕುರಿತು ಹಾಡುವರು ?

ಈಗ ನಮ್ಮ ನುಡಿಯಲ್ಲಿ ಅನೇಕ ಪ್ರಕಾರದ ಲೌಕಿಕ ಪಾರಮಾರ್ಥಿಕ ಶಾಸ್ತ್ರ ಗ್ರಂಥಗಳು ಹುಟ್ಟಬೇಕಾಗಿವೆಯೆಂಬುದೇನೋ ನಿಜವೇ. ಆದರೂ ಲಲಿತ ಸಾಹಿತ್ಯದ ಬಗೆಗೆ ಅದರಲ್ಲಿಯೂ ಮುಖ್ಯವಾಗಿ ಕಾವ್ಯದ ಬಗೆಗೆ ಹೆಚ್ಚಿಗೆ ವಿಚಾರ ಮಾಡ ಬಯಸುತ್ತೇನೆ. ಯಾಕೆಂದರೆ ನನಗೆ ಈ ವಿಷಯದಲ್ಲಿಯೇ ಒಂದಿಷ್ಟು ಹೆಚ್ಚಾಗಿ ವ್ಯಾಸಂಗವಿದೆ. ನಾಟಕ ಕಲೆಯಲ್ಲಿ ದಿವಂಗತ ಕೈಲಾಸಂ ಅವರು ಕನ್ನಡ ತಾಯಿಗೆ ಇಡಿಸಿದ ರತ್ನಾಭರಣಗಳೇನೂ ಕಡಿಮೆಯಿಲ್ಲ. ಅವರು ಆ ವಿಷಯದಲ್ಲಿ ಕನ್ನಡ ಕುವರರಿಗೆ ಶಾಶ್ವತ ರಾಜಮಾರ್ಗವನ್ನು ಹಾಕಿಕೊಟ್ಟಿದ್ದಾರೆ.

ಸಣ್ಣಕತೆಗಳಿಗೆ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರರು ಆದಿ ಪಿತರಾಗಿ-ರುವರು. ಶ್ರೀಮಾನ್ ಆನಂದರವರು ಆ ಕಾರ್ಯದಲ್ಲಿ ತಮ್ಮ ಮುನ್ನಡೆಯನ್ನು ನಡೆಸಿರುವರು.

ಕಾದಂಬರಿಗಾಗಿ ಶ್ರೀಮಾನ್ ಕಾರಂತರವರೂ ತಪಗೈಯುತಲಿರುವರು. ಆದರೆ ಅದು ಇನ್ನೂ ರೂಪಗೊಳ್ಳದ ಕಗ್ಗಲ್ಲಿನಂತೆಯೇ ಯಾರಿಗೂ ಹಣಿಯದೆಯೇ ಕುಳಿತಿದೆ. ಕನ್ನಡ ತಾಯಿಯ ಕಾವ್ಯ ಸಂಪತ್ತು ಉಳಿದೆಲ್ಲದಕ್ಕಿಂತ ಹೆಚ್ಚಾಗಿ ಬೆಳವಣಿಗೆ ಹೊಂದಿದೆ. ಕಾವ್ಯದಲ್ಲಿ ಶ್ರೀಮಾನ್ ಅಣ್ಣ ಬೇಂದ್ರೆಯವರೂ, ಶ್ರೀಮಾನ್ ತರುಣ ತಪಸ್ವಿ ಕೆ. ವಿ. ಪುಟ್ಟಪ್ಪನವರೂ ಸಿದ್ಧಹಸ್ತರು. ಉಳಿದವರೆಲ್ಲ ಕವಿಗಳಲ್ಲವೆಂದು ನನ್ನ ಅಭಿಪ್ರಾಯವಲ್ಲ. ಏಕಮುಖರು, ದ್ವಿಮುಖರು ಅನ್ನುತ್ತಾರಲ್ಲ, ಹಾಗೆ ತಮ್ಮ ಒಂದು ಇಡೀ ಜೀವನದಲ್ಲಿ ಎರಡು, ಮೂರು, ನಾಲ್ಕು ಕಾವ್ಯಗಳನ್ನೋ ಬರೆದು ಕನ್ನಡ ತಾಯಿಯ ಕಿರೀಟಕ್ಕೆ ರತ್ನ ವಜ್ರಗಳ ಸೇವೆ ಸಲ್ಲಿಸಿದ ಮಹಾಕೀರ್ತಿಶಾಲಿ ಕವಿ ಮಹಾನುಭಾವರೇನೂ ಕಡಿಮೆಯಿಲ್ಲ. ಅವರು ಕಡಿಮೆಯವರೆಂದೂ ನನ್ನ ಅಭಿಪ್ರಾಯವಲ್ಲ. ಕೇಳಿದರೆ ಅವರಿಗೆ ನನ್ನ ಸಹಸ್ರ ವಂದನೆಗಳು. ಶ್ರೀಗಳಾದ ಡಿ. ವಿ. ಗುಂಡಪ್ಪ, ವೀ. ಸೀ, ಜಿ. ಪಿ. ರಾಜರತ್ನಂ ಮತ್ತು ಈಶ್ವರ ಸಣಕಲ್ಲ ಮೊದಲಾದ ಇನ್ನನೇಕ ಕವಿ ಮಹಾನುಭಾವರ ಹೆಸರು ಕನ್ನಡ ತಾಯಿಯ ಪಾದ ಪೀಠದ ಮೇಲೆ ಚಿರಶಾಶ್ವತವಾಗಿ ಕೆತ್ತಲ್ಪಟ್ಟಿವೆ. ದಿವಂಗತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಂತೂ ನಾಡತಾಯಿಯ ಚೊಚ್ಚಿಲ ಮಕ್ಕಳೆಂಬುದನ್ನು ಕನ್ನಡಿಗರು ಎಂದಿಗಾದರೂ ಮರೆಯಲಿಕ್ಕೆ ಶಕ್ಯವಿದೆಯೇ ? ಆದರೆ ಮೇಲೆ ಹೇಳಿದ ಇಬ್ಬರು ಸಿದ್ಧಕವಿಗಳು ಸಹಸ್ರಮುಖ ಶತಮುಖರಿದ್ದ ಹಾಗೆ. ವರ್ಷವರ್ಷಕ್ಕೆ ನಾಲ್ಕೆರಡು ಹೊಸಕಾವ್ಯಗಳ ಹೊಳೆಯನ್ನೇ ಹರಿಸುವವರು. ಹೀಗೆಂದು ನಾನೀ ಎರಡು ಹೆಸರುಗಳನ್ನು ಮಾತ್ರ ಪ್ರಾಮುಖ್ಯವಾಗಿ ಹೇಳಿದ್ದೇನೆ. ಇದರಂತೆಯೇ ಈ ಮೊದಲು ನಾಟಕ, ಸಣ್ಣಕಥೆ, ಕಾದಂಬರಿ ಮುಂತಾದವುಗಳ ಸಂಬಂಧದಲ್ಲಿಯೂ ಒಂದೊಂದೋ

ಒಂದೆರಡೋ ಹೆಸರುಗಳನ್ನು ಮಾತ್ರ ಹೇಳಿದ್ದೇನೆ. ಅಂದರೆ ಆಯಾ ವಿಷಯದಲ್ಲಿ ಇನ್ನಾರೂ ಪ್ರಖ್ಯಾತ ಗ್ರಂಥಕಾರರಿಲ್ಲವೆಂತಲ್ಲ. ಆದರೆ ಆಯಾ ವಿಷಯಗಳಲ್ಲಿ ವಿಶೇಷವಾಗಿ ಪರಿಶ್ರಮಿಸಿದವರು ಯಾರೆಂಬುದನ್ನು ಮಾತ್ರ ಉಲ್ಲೇಖಿಸಿದ್ದೇನೆ. ಅನಂತರ ಅನೇಕ ಜನ ಮಹನೀಯರು ಆಯಾ ದಿಶೆಗಳಲ್ಲಿ ಸಾಹಿತ್ಯ ನಿರ್ಮಾಣ ಮಾಡತೊಡಗಿದ್ದಾರೆಂಬುದನ್ನು ತಾವೆಲ್ಲ ಮಹನೀಯರು ಅರಿತಿರುವ ವಿಷಯವೇ ಇದೆ. ಇಲ್ಲಿ ನಾನು ಯಾರನ್ನು ಕೆಳಮಟ್ಟಕ್ಕೆ ಇಳಿಸಲು ಪ್ರಯತ್ನಿಸುತ್ತಾ ಇಲ್ಲವೆಂಬು ದನ್ನು ತಮ್ಮೆಲ್ಲರಲ್ಲಿ ನಮ್ರಪೂರ್ವಕವಾಗಿ ಪುನಃ ಪುನಃ ನಿವೇದಿಸುತ್ತೇನೆ. ಯಾರೂ ಅನ್ಯಥಾ ಭಾವಿಸಬಾರದೆಂದು ಬೇಡಿಕೊಳ್ಳುತ್ತೇನೆ.

ಕಾವ್ಯದಿಂದ ಪ್ರಯೋಜನವೇನು ? ಎಂಬುದನ್ನು ನೋಡುವಾ. ಮ್ಯಾರಿಸ್ ಮೆಟರ್ಲಿಂಕರು "ತತ್ತ್ವಜ್ಞಾನದಿಂದ ಪ್ರಯೋಜನವೇನು ?" ಎಂಬ ಪ್ರಶ್ನೆಗೆ ತಮ್ಮದೊಂದು ಗ್ರಂಥದಲ್ಲಿ ಒಳ್ಳೆಯ ಮಾರ್ಮಿಕವಾಗಿ ಉತ್ತರವನ್ನು ಕೊಟ್ಟಿದ್ದಾರಂತೆ. ಅದನ್ನೇ ನಾವು ಕಾವ್ಯ ಹಾಗೂ ಸಾಹಿತ್ಯದ ವಿಷಯಕ್ಕೂ ಹಚ್ಚಿಕೊಳ್ಳಬಹುದು. ಮೆಟರ್ಲಿಂಕರು ಹೇಳಿದ ಉತ್ತರವು ಹೇಗಿದೆಯೆಂದರೆ, 'ಶರೀರಕ್ಕೆ ಬೇನೆ ಬೇಸರಿಕೆಗಳು ಬಂದಾಗ ವೈದ್ಯರು ಅವುಗಳನ್ನು ಕಳೆದು ಮನುಷ್ಯರಿಗೆ ಸುಖಕೊಡುತ್ತಾರೆ. ಹಾಗೆಯೇ ಮನಸ್ಸಿಗೆ ದುಗುಡದುಮ್ಮಾನಗಳುಂಟಾದಾಗ ತತ್ತ್ವಜ್ಞಾನಿಗಳು ಸಯುಕ್ತಿಕ ಸಮಾಧಾನಗಳನ್ನು ಹೇಳಿ ಮಾನವರಿಗೆ ಹಿತಮಾಡುತ್ತಾರೆ. ಆದ್ದರಿಂದ ತತ್ತ್ವಜ್ಞಾನಿ ಗಳ ಬೆಲೆಯು ಕನಿಷ್ಠಪಕ್ಷಕ್ಕೆ ವೈದ್ಯರಷ್ಟಾದರೂ ಇಲ್ಲವೇ ?" ಎಂದು ಮೆಟರ್ಲಿಂಕನು ಹೇಳಿದ್ದು ಎಲ್ಲ ಪ್ರಕಾರದ ಉಚ್ಚ ವಾಙ್ಮಯಕ್ಕೂ, ಉಚ್ಚಕಲೆಗಳಿಗೂ ಅನ್ವಯಿಸುವು ದಿಲ್ಲವೇ ? ಅಲ್ಲದೆ ಶ್ರಮಜೀವಿಗಳನ್ನು ನೋಡಿರಿ, ಹೆಣ್ಣುಮಕ್ಕಳು ಬೀಸುವಾಗ, ಕುಟ್ಟುವಾಗ ಹಾಡುಗಳನ್ನು ಹೇಳುತ್ತ ತಮ್ಮ ಶ್ರಮವನ್ನೆಲ್ಲ ಮರೆಯುತ್ತಾರೆ. ಪುರುಷರು ಯಾತ ಹೊಡೆಯುವಾಗ, ಹಂತಿ ಹೊಡೆಯುವಾಗ ಹಾಡುಗಳನ್ನು ಹೇಳುತ್ತ ಬೇಸರವನ್ನು ಕಳೆದುಕೊಳ್ಳುತ್ತಾರೆ. ಹೀಗೆಂದ ಬಳಿಕ ಕಾವ್ಯವು ಮನುಷ್ಯನ ದೈನಂದಿನ ಜೀವನದ ಆವಶ್ಯಕವಾದ ಹಾಗೂ ನೈಸರ್ಗಿಕವಾದ ವಸ್ತುವೆಂದು ಬೇರೆ ಹೇಳಬೇಕಾಗಿಲ್ಲ.

ಕಾವ್ಯದ ಪ್ರಯೋಜನವೇನೆಂಬುದು ತಿಳಿದ ಮೇಲೆ ಜಾಗತಿಕ ಜೀವನದಲ್ಲಿ ಕವಿಗಳ ಪ್ರಯೋಜನವೇನೆಂಬುದು ತಾನಾಗಿಯೇ ಸ್ಪಷ್ಟವಾಗುತ್ತದೆ. ಹಿಂದೆ ಗ್ರೀಸಿನಲ್ಲಿ ಪುರಾಣಕವಿಗಳು ತಮ್ಮ ವೀರಗೀತೆಗಳಿಂದ ಪ್ರತ್ಯಕ್ಷ ಯುದ್ಧದಲ್ಲಿ ಯೋಧರನ್ನು ಹುರುಪುಗೊಳಿಸುತ್ತಿದ್ದರಂತೆ, ವೇದಕಾಲದಲ್ಲಿ ಕವಿಋಷಿಗಳು ಸಾಮುದಾಯಿಕ ಜೀವನದ ಹಿತಾರ್ಥವಾಗಿ ಜರಗುತ್ತಲಿದ್ದ ಯಜ್ಞಯಾಗಗಳಿಗಾಗಿ ವೇದಮಂತ್ರಗಳನ್ನು ರಚಿಸುತ್ತಿದ್ದರು. ಅವರಿಗೆ ವೇದದಲ್ಲಿ ಪುನಃ ಪುನಃ "ಕವಿಗಳು" ಎಂದು ಸಂಬೋಧಿಸ ಲಾಗಿದೆ. ಸದ್ಯದ ಕಾಲದಲ್ಲಿ ದಿವಂಗತ ವಿಶ್ವಕವಿ ರವೀಂದ್ರನಾಥ ಟಾಗೋರರು ತಮ್ಮ 'ಗೀತಾಂಜಲಿ'ಯಲ್ಲಿ ಕವಿಯ ಕಾರ್ಯಮಹತ್ವವನ್ನು ಇದೇ ಪ್ರಕಾರವಾಗಿಯೇ

ಬಣ್ಣಿಸಿದ್ದಾರೆ. ಅದು ಹೇಗೆಂದರೆ– "ಈ ಜಗತ್ತಿನ ಉತ್ಸವದಲ್ಲಿ ನನಗೆ ಆಮಂತ್ರಣ ಬಂದಿದೆ. ಅದರಿಂದ ನಾನು ಧನ್ಯನು... ಈ ಸಮಾರಾಧನೆಯಲ್ಲಿ ನನ್ನ ವಾದ್ಯಗಳನ್ನು ನಾನು ನುಡಿಸುವದೇ ನನ್ನ ಕಾರ್ಯವಾಗಿದೆ..." (ಗೀತಾಂಜಲಿ, ಕವಿತೆ ೧೬)

ಇನ್ನು ಕಾವ್ಯದಲ್ಲಿ ಪ್ರಕಾರಗಳೆಷ್ಟೆಂಬುದನ್ನು ನೋಡುವಾ. ಭಗವಾನ್ ಶ್ರೀ ಅರವಿಂದರ ಆಶ್ರಮದ ಸೆಕ್ರೆಟರಿಗಳಾದ ಶ್ರೀ ನಲಿನಿಕಾಂತ ಗುಪ್ತ ಎಂಬ ಮೇಧಾವಿಗಳು ತಮ್ಮ 'ಸಾಹಿತ್ಯಿಕಾ' ಎಂಬ ಬಂಗಾಲೀ ಪುಸ್ತಕದಲ್ಲಿ "ಕಾವ್ಯದ ತ್ರಿಧಾರೆ" ಎಂಬ ಪ್ರಬಂಧದಲ್ಲಿ ಕಾವ್ಯದ ಸ್ವರೂಪವು ಮೂರು ಪ್ರಕಾರವಾಗಿದೆಯೆಂದು ಹೇಳಿದ್ದಾರೆ. ಒಂದು ಕುಸುಮ ಸುಕುಮಾರವಾದ ಹೃದಯದ ಮೃದುಭಾವನೆಗಳಿಂದ ಕೂಡಿದ್ದು, ಇನ್ನೊಂದು ವಜ್ರಕಠೋರವಾದ ಇಚ್ಛಾಶಕ್ತಿಯ ಪ್ರಚೋದನೆಯಿಂದ ತುಂಬಿದ್ದು, ಅದೃಶ್ಯದ ಅನುಭವಗಳಿಂದಿದ್ದುದು ಮತ್ತೊಂದು. ಮೊದಲನೆಯದಕ್ಕೆ ರಾಮಾಯಣದೊಳಗಿನ ಮೃದುಮಧುರ ಸಮರ್ಪಣಭಾವದ ಶ್ಲೋಕವೊಂದನ್ನೂ ಎರಡನೆಯದಕ್ಕೆ ಮಹಾಭಾರತದೊಳಗಿನ ಹುಚ್ಚು ಬಿಡಿಸುವ ಗುಡುಗು ಸಿಡಿಲಿನಂಥ ಪ್ರಚೋದನಾ ಪ್ರಧಾನವಾದ ಶ್ಲೋಕವೊಂದನ್ನೂ ಮೂರನೆಯದಕ್ಕೆ ಆಯರ್ಲಂಡಿನ ದಿವಂಗತ ದ್ರಷ್ಟಾರಕವಿ, "ಎ. ಈ."ಯವರ ಅನುಭಾವ ಕವಿತೆಯೊಂದನ್ನೂ ಶ್ರೀ ನಲಿನೀಕಾಂತ ಗುಪ್ತರು ಉದಾಹರಿಸಿದ್ದಾರೆ.

"ನೀನಿಲ್ಲದ ಅರಮನೆ ನರಕ, ನೀನಿದ್ದರೆ ಕಾಡು ಸ್ವರ್ಗವೆನಗೆ." ಎಂದು ಜಗನ್ಮಾತೆ ಸೀತಾದೇವಿ ಶ್ರೀರಾಮಚಂದ್ರದೇವರಿಗೆ ಬಿನ್ನವಿಸಿದುದೊಂದು ರೀತಿಯಾದರೆ "ಪತಿಗಳಿರಾ, ನೀವು ಹೆಂಗಳೆಯರಂತೆ ಕೈಗಳಲ್ಲಿ ಬಳೆಗಳನ್ನಿಟ್ಟಿರುವಿರಾ, ಮೈಮೇಲೆ ಸೀರೆಯನ್ನುಟ್ಟಿರುವಿರಾ ?" ಎಂದು ಮೂದಲಿಸುವ ಅಗ್ನಿಕುಮಾರಿ ದ್ರೌಪದಿದೇವಿಯಾಡಿದ ಸಿಡಿಲು ನುಡಿಯದಿನ್ನೊಂದು ಪ್ರಕಾರವಾಗಿರುವದು. "ಭೂಮಿತಾಯಿ ಮಾತನಾಡಿದಳೆನ್ನೊಡನೆ; ಆದರೆ ವಾಣಿಯಿಂದಲ್ಲ, ಚಿತ್ರಗಳಿಂದ" ಎಂಬುದು ಎ.ಈ. ಯವರದೊಂದು ಅನುಭಾವ ವಚನ.

ಕಾವ್ಯಗಳಲ್ಲಿ ಗುಣಾನುಸಾರವಾಗಿ ಪ್ರಾಸಾದಿಕ, ಓಜಃಪೂರ್ಣ, ಉದಾರ ಎಂಬ ಅನೇಕ ಭೇದಗಳುಂಟೆಂಬುದನ್ನು ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ 'ಕನ್ನಡ ಕೈಪಿಡಿ' ಎಂಬ ಪುಸ್ತಕದಲ್ಲಿ ಹೇಳಲಾಗಿದೆ. ಇವುಗಳಲ್ಲಿ ಮೊದಲಿನವೆರಡು ಮೇಲೆ ಹೇಳಿದ ರಾಮಾಯಣ ಮಹಾಭಾರತ ಶ್ಲೋಕಗಳಿಗೆ ಅನ್ವಯಿಸುವವು. ಮೂರನೆಯದಾದ 'ಉದಾರ' ಎಂಬ ಕಾವ್ಯ ಗುಣದ ಅರ್ಥವಿವರಣೆಯು ಬೇರೆ ವಿಧವಾಗಿದ್ದರೂ 'ಉದಾರ' ಎಂಬ ಶಬ್ದವು ಅನುಭಾವ ಕಾವ್ಯಕ್ಕೆ ಯೋಗ್ಯವಾಗಿರುವದರಿಂದ ನಾವು ಸದ್ಯದ ಮಟ್ಟಿಗೆ ಇದನ್ನೇ ಉಪಯೋಗಿಸಿಕೊಳ್ಳುವಾ. ಮೃದು, ಗಂಭೀರ, ಗೂಢ ಭಾವದ ಮೂರು ಪ್ರಕಾರದ ಶ್ರೀ ನಲಿನೀಕಾಂತರ ವರ್ಗೀಕರಣಕ್ಕೆ ಪುರಾತನ ಶಬ್ದಗಳಲ್ಲಿ ನಾವು ಪ್ರಸಾದ, ಓಜಸ್ಸು, ಉದಾರತೆಗಳಿಂದ ಕೂಡಿದ ೧. ಪ್ರಾಸಾದಿಕ ಕಾವ್ಯ; ೨. ಓಜಸ್ವೀ ಕಾವ್ಯ ೩. ಉದಾರ ಕಾವ್ಯ ಎಂದು ನಾಮಕರಣ ಮಾಡಬಹುದು.

ನಮ್ಮಲ್ಲಿಯೇ ನೋಡಿದರೆ ಈಗ ಕಾವ್ಯವು ಎತ್ತ ಸಾಗಿದೆಯೆಂಬುದನ್ನು ಆಲೋಚಿಸುವಾ. ನವರಸಗಳಲ್ಲಿ ಹಿಂದೆ ಬಹು ಮಾನ್ಯತೆಯನ್ನು ಪಡೆದ, ಈಗ ಅನಾದರಕ್ಕೆ ಪಾತ್ರವಾಗಿರುವ ಶೃಂಗಾರ ರಸವು ತನ್ನ ಕಲ್ಮಶವನ್ನು ಕಳೆದುಕೊಂಡು ಸೌಂದರ್ಯಾನುಭೂತಿಯ ಸ್ವರೂಪವನ್ನು ತಾಳಿ, ವಿಶ್ವಮಾತೆಯ ಪ್ರಕೃತಿ ಸೌಂದರ್ಯದ ಮತ್ತು ಜೀವನದ ಲಾಲಿತ್ಯದ ಕವನಗಳಿಗೆ ಎಡೆಗೊಟ್ಟಿದೆ; ಇದೊಂದು ದಿಶೆ. ಇನ್ನೊಂದು ದಿಶೆಯಲ್ಲಿ ಎಲ್ಲಕ್ಕೂ ಮೇಲಿನದಾದ ಶಾಂತಿರಸವು ತನ್ನ ವೈರಾಗ್ಯದ ದಿಗಂಬರ ರೂಪವನ್ನು ತೊರೆದು ಪರಮಾತ್ಮನೆಡೆಗೆ ಜೀವ ಆಕರ್ಷಣರೂಪ ಧಾರಣೆ ಮಾಡಿ ಬಗೆಬಗೆಯ ಭಕ್ತಿಗೀತೆಗಳಿಗೆ ಎಡೆಯನ್ನು ಕೊಟ್ಟಿದೆ. ಇವೆರಡು ರಸಗಳು ಸದ್ಯಕ್ಕೆ ಗಂಗಾಯಮುನಾ ನದಿಗಳಂತೆ ಕೈ-ಕೈ ಹಿಡಿದು ನಮ್ಮ ಸಾಹಿತ್ಯದಲ್ಲಿ ಹರಿಯ ತೊಡಗಿವೆ. ಇದರ ಜೊತೆಗೆ ನಡುವಿನ ಏಳು ರಸಗಳು ತಾಳಗಳನ್ನು ಬಾರಿಸುತ್ತ ಪ್ರಗತಿಪರ ಸಾಹಿತ್ಯವೆಂಬ ಹೆಸರಿನಿಂದ ಕರುಣ, ವೀರ, ಹಾಸ್ಯಪೂರ್ಣ, ಗದ್ಯಪದ್ಯ ಗ್ರಂಥಗಳುದಯವಾಗತೊಡಗಿವೆ. ಇದು ನಿಜವಾಗಿ ಮೊದಲು ಹೇಳಿದ ಮೂರು ಪ್ರಕಾರಗಳೊಳಗಿನ ಗರ್ಜನಾಮಯವಾದ ಓಜಸ್ವೀ ಪ್ರಚೋದಕ ಕಾವ್ಯಾವತಾರದ ಪ್ರಸೂತಿ ವೇದನೆಯಂತಿದೆ. ಶಾಂತಿ ಸೌಂದರ್ಯಗಳ ಅತಿಭಾವುಕತನಕ್ಕೆ ಅಳತೆಯನ್ನು ಕಲಿಸುವದಕ್ಕೋ ಅಥವಾ ತನ್ನ ಹಕ್ಕನ್ನು ಸಮರ್ಥನೆಗೊಳಿಸಿ ತನ್ನ ಸ್ಥಾನವನ್ನು ತೆರವು ಮಾಡಿಕೊಳ್ಳುವದಕ್ಕೋ ಅದು ಇಂದು ಪ್ರಯತ್ನಿಸತೊಡಗಿದೆ. ನಿಜವಾಗಿ ಅದಕ್ಕೊಂದು ಸ್ಥಾನವುಂಟು. ಅದು ಉಳಿದೆರಡರ ಗಾಢ ಸಖ್ಯತ್ವವನ್ನು ಬೆಳಿಸಿ, ರಸಗಳು ಏಳೇ ಅಲ್ಲ, ಒಂಭತ್ತು ಎಂಬುದನ್ನು ಅರಿತುಕೊಳ್ಳಬೇಕು. ಅದರಂತೆ ಉಳಿದೆರಡು ತಾವು ಒಂದೊಂದೇ ಮುಖ್ಯವಲ್ಲವೆಂಬುದನ್ನು ಮನದಂದು, ತಮ್ಮ ಸ್ವಭಾವ ಸುಲಭವಾದ ಸಮನ್ವಯ ಮಾರ್ಗವನ್ನು ಅನುಸರಿಸಬೇಕು. ಆವಾಗ ೧. ಮೃದುಮಧುರ ಕಾವ್ಯ, ೨. ವೀರಕಾವ್ಯ, ೩. ಆಧ್ಯಾತ್ಮಿಕ ಕಾವ್ಯ, ಎಂಬ ತ್ರಿಮೂರ್ತಿಗಳಿಂದ ಕಾವ್ಯಜಗತ್ತು ಸುವ್ಯವಸ್ಥಿತವಾಗಿ ಸರ್ವಾಂಗ ಸಂಪೂರ್ಣವಾಗುವದು. ಆದರೆ ಈಗಿನಂತೆ ಪ್ರಗತಿಪರ ಸಾಹಿತಿಗಳು, ಪರಂಪರೆಯ ಸಾಹಿತಿಗಳು ಎಂದು ಬಡೆದಾಡುತ್ತ ಕೂಡ್ರುವದರಲ್ಲಿ ಅರ್ಥವಿಲ್ಲ.

ಇದೆಲ್ಲಾ ಭೂತಕಾಲ, ವರ್ತಮಾನಕಾಲದ ವಿಷಯವಾಯಿತು. ಇನ್ನು ಭವ್ಯ ಭವಿಷತ್ಕಾಲವು ಯಾವ ನಿಟ್ಟಿನ ಕಡೆಗೆ ತನ್ನ ಹೋಕಾಯಂತ್ರದ ಮುಳ್ಳನ್ನಿಟ್ಟು ಕೊಂಡು ನಮ್ಮೆಡೆಗೆ ಜಿಗಿಯುತ್ತ ಬರುತ್ತಲಿದೆಯೆಂಬುದನ್ನು ಅರಿತುಕೊಳ್ಳಲು ಬೇಕು. ಭಗವಾನ್ ಶ್ರೀ ಅರವಿಂದರು ತಮ್ಮ "ನಾಳಿನ ಕಾವ್ಯ" (Future Poetry) ಎಂಬ ಗ್ರಂಥದಲ್ಲಿ ವೇದಕಾಲದಂಥ ಮಂತ್ರಶಕ್ತಿಯುಳ್ಳ, ಸಚ್ಚಿದಾನಂದದಿಂದ ಉದ್ಭೂತ ವಾಗುವ ಆಧ್ಯಾತ್ಮ ರಾಜ್ಯದ ಕವಿತೆಯೇ ಏಕಮೇಯಾದ್ವಿತೀಯವಾಗಿ ನಾಳಿನ ಸಿರಿಪಟ್ಟವನ್ನಾಳುವುದೆಂದು ಅಮೋಘವಾಗಿ ಪ್ರತಿಪಾದಿಸಿರುವರು. ದಿವಂಗತರಾದ ವಾಲ್ಟ್‌ವ್ಹಿಟ್ಮನ್, ಏ. ಈ, ರವೀಂದ್ರನಾಥ ಟಾಗೋರ ನಾಳಿನ ಕಾವ್ಯದ ಪೂರ್ವ

ನಿದರ್ಶಕರೆಂದು ಭಗವಾನ್ ಶ್ರೀ ಅರವಿಂದರು ತಮ್ಮ ಗ್ರಂಥದಲ್ಲಿ ನಾಮ ನಿರ್ದೇಶ ಮಾಡಿರುವರು.

ಮೊನ್ನೆ ಮೊನ್ನೆ ಕೊಲ್ಹಾಪುರ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ಶ್ರೀಮಾನ್ ಅಭಿನಾಶಚಂದ್ರ ಬಸು ಎಂಬ ಮಹಾಶಯರು "ಅನುಭಾವ ಕವಿತ್ವ (Mystic Poetry) ಎಂಬ ಗ್ರಂಥವನ್ನು ಬರೆದು ಮೇಲ್ಕಾಣಿಸಿದ ಮೂವರಲ್ಲಿ ಕೊನೆಯ ಇಬ್ಬರು ಮಹಾಕವಿಗಳ ಕವಿತ್ವದ ಬಗೆಗೆ ನಮಗೆ ಕೈಗನ್ನಡಿಯನ್ನು ಸಿದ್ಧಗೊಳಿಸಿ ಕೊಟ್ಟಿದ್ದಾರೆ. ಬಲ್ಲವರು ಅದನ್ನೋದಿ ನಾಳಿನ ಕಾವ್ಯದ ಹಾದಿಯನ್ನು ಕಂಡುಕೊಳ್ಳ ಬೇಕೆಂದು ವಿನಮ್ರಭಾವದಿಂದ ತಮ್ಮಲ್ಲಿ ನಾನು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ.

ಇನ್ನು ಕಾವ್ಯದ ಬಾಹ್ಯಾಂಗವನ್ನು ಕುರಿತು ಸ್ವಲ್ಪಮಟ್ಟಿಗೆ ನಿವೇದಿಸಿ ನನ್ನ ಭಾಷಣದ ಉಪಸಂಹಾರವನ್ನು ಮಾಡುತ್ತೇನೆ.

ವರ್ಣನಾರೀತಿಯು ನಾಲ್ಕು ಪ್ರಕಾರವಾಗಿರಬಹುದೆಂದು ನಾನು ಭಾವಿಸುತ್ತೇನೆ. ಇದ್ದ ಸಂಗತಿಯನ್ನು ಯಾವ ಉಪಮಾನ ಉಪಮೇಯಗಳಿಲ್ಲದೆ, ಉಚಿತ ಲಲಿತ ಶಬ್ದಗಳಿಂದ, ಕಣ್ಣ ಮುಂದೆ ಚಿತ್ರಕಟ್ಟಿದ ಹಾಗೆ ಹೃದಯಂಗಮವಾಗಿ, ಸ್ವಾಭಾವಿಕವಾಗಿ ಬಣ್ಣಿಸುವ ಸ್ವಭಾವೋಕ್ತ್ಯಲಂಕಾರದ ಕವಿತೆಗಳು ಒಂದು ಪ್ರಕಾರದವು. ಎರಡನೆಯನಾಗಿ ರಮ್ಯ ಉಪಮೇಯಗಳಿಂದ ಅಲಂಕರಿಸಿ ಮನೋಹರವಾಗುವಂತೆ ರಮಣೀಯವಾಗಿ ಬಣ್ಣಿಸುವ ಉಪಮಾಲಂಕಾರದ ಕವಿತೆಗಳು ಮತ್ತೊಂದು ಪ್ರಕಾರದವು. ಹಾಗೂ ಮೂಲಭಾವಗಳನ್ನು ಇದ್ದುದಕ್ಕಿದ್ದಂತೆ ಅನ್ಯವಸ್ತುಗಳ ರೂಪದಲ್ಲಿ ರೂಪಾಂತರಗೊಳಿಸಿ, ಗೊತ್ತಿರುವ ಭಾವದಿಂದ ಗೊತ್ತಿಲ್ಲದ ಭಾವವನ್ನು ವ್ಯಕ್ತಗೊಳಿಸುವ ಗೂಢರೂಪಕ ಕವಿತೆಗಳು ಮೂರನೆಯ ಪ್ರಕಾರದವು. ಇನ್ನು ಇನ್ನಾವುದರ ಸಹಾಯವೂ ಇಲ್ಲದೆ ತನ್ನ ಅರ್ಥವನ್ನು ತಾನೇ ಪ್ರಕಟಗೊಳಿಸಲು ಸಮರ್ಥವಾದ, ತನಗೆ ತಾನೇ ಅಲಂಕಾರವಾದ ನಿರುಪಮ ದಿವ್ಯಕವಿತೆಗಳು ಕೊನೆಯವುಗಳೆಂದು ಸದ್ಯದಮಟ್ಟಿಗೆ ನಾವು ಇಟ್ಟುಕೊಳ್ಳುವಾ.

ಶಾಕುಂತಲ ನಾಟಕದಲ್ಲಿ ಪ್ರಥಮ ಪ್ರವೇಶದಲ್ಲಿ ದುಷ್ಯಂತನ ರಥವು ಆಶ್ರಮ ಮೃಗವನ್ನು ಬೆನ್ನಟ್ಟಿದಾಗ ರಥದ ವೇಗವನ್ನೂ ಮೃಗದ ದುರ್ದೆಶೆಯನ್ನೂ ವರ್ಣಿಸುವ ಎರಡು ಪದ್ಯಗಳಲ್ಲಿ ಯಾವ ಉಪಮಾನೋಪಮೆಯಗಳಿಲ್ಲದೆ ಕೇವಲ ಕಣ್ಣಿಗೆ ಕಾಣುವಷ್ಟನ್ನೇ ಕಣ್ಣುಮುಂದೆ ಕಟ್ಟುವಂತೆ, ಮನದ ಮುಂದೆ ಕುಣಿಯುವಂತೆ ಕವಿ ವರ್ಣಿಸಿದ್ದಾನಲ್ಲಾ ಅದೇ ಸ್ವಭಾವಲಂಕಾರವು. ಕವಿಕುಂಜರ ನೇಮಿಚಂದ್ರನ, "ಲೀಲಾವತೀ ಕಾವ್ಯ"ದಲ್ಲಿ—

ಗಾಳಿಯಿಂದ ಎಚ್ಚತ್ತ ಲೀಲಾವತಿಯು ಸ್ವಪ್ನದಲ್ಲಿ ಕಂಡ ಪತಿಯು ಮಂಚದಲ್ಲಿಲ್ಲದ್ದನ್ನು ಕಂಡು. "ಚಲಿಯಾವಳ್, ಮೂರ್ಛೆಹೋದಳ್, ಮರೆದೊರಗಿದಳ್,

ಆಸತ್ತಳ್, ಅತ್ತಳ್, ಬೆಮರ್ತಳ್, ನೆಲೆಯಿಂದಂ ಬಿದ್ದಳೆದ್ದಳ್ ವಿರಹದುರಿಯಂ ಸಂತಾಪ ವಿಭ್ರಾಂತಿಯಿಂದಂ" ಎಂಬುದರಲ್ಲಿ ಪರಿಪರಿಯಿಂದ ಅವಳ ಕಳವಳವನ್ನು ಕಣ್ಣುಮುಂದೆ ಕಟ್ಟುವಂತೆ ಚಿತ್ರಿಸಲಾಗಿದೆಯೇ ಹೊರತು ಇಲ್ಲಿ ಯಾವ ಉಪಮಾನ ಉಪಮೇಯಗಳ ಸುಳಿವೇ ಇಲ್ಲ. ಆದರೂ ವರ್ಣನೆಯು ಎಷ್ಟು ಸುಂದವಾಗಿದೆ ನೋಡಿರಿ. ಇದು ಸ್ವಭಾವಾಲಂಕಾರಕ್ಕೆ ಒಳ್ಳೆ ಉದಾಹರಣೆ.

ಗೀತಾಂಜಲಿಯು ಇಂಥ ಕವಿವೆತೆಗಳ ಆಗರವೇ ಆಗಿದೆ. ಅಂತೆಯೇ ಅದರಲ್ಲಿ ಆರಂಭದ ಕವಿತೆಯೊಂದರಲ್ಲಿ "ನನ್ನ ಗೀತವು ತನ್ನ ಆಭರಣಗಳನ್ನೆಲ್ಲ ಬಿಸಾಟಿ ಹಾಕಿರುವದು. ಅದಕ್ಕೆ ತನ್ನ ಉಡಿಗೆ–ತೊಡಿಗೆಗಳ ಗರ್ವವಿಲ್ಲ. ಆಭರಣಗಳು ನಮ್ಮಿಬ್ಬರ ಐಕ್ಯಕ್ಕೆ ಅಂತರವನ್ನುಂಟು ಮಾಡುವವು. ಅವುಗಳ ಸಪ್ಪಳವು ನಿನ್ನ ಕಿವಿಮಾತನ್ನು ಕೇಳಿಸಗೊಡವು" ಎಂದು ಶ್ರೀ ರವೀಂದ್ರರು ಹಾಡಿದ್ದಾರೆ.

ಇನ್ನು ಎರಡನೆಯ ಪ್ರಕಾರದ ಕವಿತೆಗಳಿಗೆ ಸಾಹಿತ್ಯದಲ್ಲಿ ಕೊರತೆಯೇ ಇಲ್ಲ. ಮುಖ್ಯವಾಗಿ ಸಾಹಿತ್ಯವೆಂಬುದೇ ಉಪಮಾಲಂಕಾರದ ಮೇಲೆ ನಿಂತಿದೆ. ಜನಪದ ಸಾಹಿತ್ಯದಲ್ಲಿ, ಪುರಾತನ ಕಾವ್ಯಗಳಲ್ಲಿ, ನೂತನ ಕವಿತೆಗಳಲ್ಲಿ ಎಲ್ಲಿಯೆಂದರೆ ಅಲ್ಲಿ ರಮ್ಯ ಉಪಮಾಲಂಕಾರದಿಂದ ಕೂಡಿದ ಪದ್ಯಗಳು ಹೇರಳವಾಗಿ ಸಿಗುವವು.

"ಅಳುವ ಕಂದನ ತುಟಿಯು ಹವಳಃದ ಕುಡಿಯಂಗ ।
ಕುಡಿಹುಬ್ಬ ಬೇವಿನೆಸಳಂಗ ಕಣ್ನೋಟ ।
ಶಿವನ ಕೈಯಲಗು ಹೊಳೆದಂಗ"

"ಮನದೊಳಗೆ ನಿನ್ನ ನೆನಪಾದರಾ ಕ್ಷಣದೊಳಗೆ
ಮುಗಿಲೊಳಗೆ ಎಳೆಚಂದ್ರ ಮೂಡಿದಂತೆ ।
ಬನದೊಳಗೆ ಕೇರಳದ ಕೋಗಿಲೆಯ ದನಿಯಂತೆ
ಗರಿಬಿಚ್ಚಿ ಗಂಡು ನವಿಲಾಡಿದಂತೆ ॥ "

ದಯುವಿಟ್ಟು ಸಕಲ ಸಜ್ಜನರು ಕ್ಷಮಿಸಬೇಕು. ಏಕೆಂದರೆ ಇಲ್ಲಿ ಹೇಳಿದ ಎರಡನೆಯ ಪದ್ಯವು ನನ್ನ ಸ್ವತಃದ ಕವಿತೆಯೊಂದರೊಳಗಿಂದ ಆರಿಸಲ್ಪಟ್ಟಿದೆ. ಅದೇ ನೆನಪಿಗೆ ಬಂದುದರಿಂದ ಹೇಳಿರುವೆನೇ ಹೊರತು ನನ್ನ ಹೆಮ್ಮೆಯಿಂದಲ್ಲವೆಂದು ನಿವೇದನಗೊಳಿಸುತ್ತೇನೆ.

ಇನ್ನು ಮೂರನೆಯ ಪ್ರಕಾರದ್ದಾದ ರೂಪಕಕವಿತೆಗಳು ನಮ್ಮ ಇತ್ತೀಚಿನ ಸಾಹಿತ್ಯದಲ್ಲಿ ಕಡಿಮೆ. ಬಹಳ ಪುರಾತನದವುಗಳಾದ ವೇದಗಳಲ್ಲಿ ಮುಖ್ಯವಾಗಿ ಇವೇ ಹೆಚ್ಚಾಗಿವೆಯೆಂದು ಭಗವಾನ ಶ್ರೀ ಅರವಿಂದರು ತಮ್ಮ "ವೇದ ರಹಸ್ಯ"ವೆಂಬ ಪುಸ್ತಕದಲ್ಲಿ ಹೇಳಿದ್ದಾರೆ. ಆಧುನಿಕ ಜಗತ್ತಿನಲ್ಲಿ ಶ್ರೀ ರವೀಂದ್ರನಾಥ ಟಾಗೋರರ ಗೀತಾಂಜಲಿಯಲ್ಲಿ ಇಂಥವುಗಳನ್ನು ಸಾಕಷ್ಟು ಕಾಣಬಹುದು. ರವೀಂದ್ರರು

"ಮೋಡ ಬಂತು, ಕತ್ತಲೆ ಮುಸುಕಿತು, ಮಳೆ ಬಂತು" ಎಂದು ಹೇಳಿದರೆಂದರೆ ತೀರಿತು. ಅಂಥಲ್ಲೆಲ್ಲಾ "ನಿರಾಶೆ ಬಂತು, ಕಣ್ಣು ಕಟ್ಟಿತು, ದುಃಖ ಉಂಟಾಯಿತು" ಎಂತಲೇ ಅರ್ಥ ಮಾಡಿಕೊಳ್ಳತಕ್ಕದ್ದು.

ಬಂಗಾಲೀ ಚಿತ್ರಕಲೆಯಲ್ಲಿ ಇಂಥ ಕಲಾ ಸಂಕೇತವನ್ನು ವಿಪುಲವಾಗಿ ಕಾಣಬಹುದು. ಆದರೆ ವಾಙ್ಮಯದಲ್ಲೆಂದರೆ ಅದು ಶ್ರೀ ರವೀಂದ್ರರ ವಾಙ್ಮಯದಲ್ಲಿಯೇ. ಗೀತಾಂಜಲಿಯೊಳಗಿನ ೨೨ ನೆಯ ಗೀತವು ಇಂಥ ರೂಪಕಾಲಂಕಾರಕ್ಕೆ ಪರಮ ಉದಾಹರಣ ಸ್ವರೂಪವಾಗಿದೆ. ಅದನ್ನಿಲ್ಲಿ ಹೇಳುವ.

"ಶ್ರಾವಣ ಮಳೆಗಾಲದ ಗಂಭೀರ ಛಾಯೆಯಲ್ಲಿ (ಅಂದರೆ ಘನದುಃಖ ಕಾಲದ ಗಾಢ ನಿರಾಶೆಯಲ್ಲಿ) ಇರುಳಿನಂತೆ ಸ್ತಬ್ಧವಾಗಿ (ಅಂದರೆ ಬುದ್ಧಿಗೆ ತಿಳಿಯದಂತೆ) ಮೆಲ್ಲಡಿಯಿಡುತ ನೀನು (ಹೇ, ಪ್ರಭುವೇ) ಎಲ್ಲ ಕಾವಲುಗಾರರ (ಷಡ್ರಿಪುಗಳೆಂಬ ಬಂದಿಕಾರರ) ಕಣ್ಣು ತಪ್ಪಿಸಿ (ಅವರ ಕೈಯಲ್ಲಿ ಸಿಕ್ಕು ಬೀಳದೆ ಅಥವಾ ಅವರಿಂದ ನಿರಾಕೃತನಾಗದೆ) ಅಡ್ಡಾಡುತಿರುವಿ. (ನನಗೆ ದರ್ಶನವೀಯುವ ಸಲುವಾಗಿ ನನಗೆ ಗೊತ್ತಾಗದಂತೆ ನನ್ನ ಸುತ್ತುಮುತ್ತ ಸುಳಿದಾಡುತ್ತಿರುವಿ.)

"ಆದರೆ ಇಂದು ಪ್ರಭಾತ ಕಣ್ಣು ಮುಚ್ಚಿರುವ (ಆಶಾಕಿರಣವೇ ಇನ್ನೂ ನನ್ನೊಳಗೆ ಮೂಡಿಲ್ಲ) ನಿರಂತರವಾಗಿ ಭೋರ್ಗರೆಯುತ್ತಿರುವ ಮೂಡಣಗಾಳಿಯ (ನಿಬಿಡವಾದ ನಿಟ್ಟುಸಿರಿನ) ಕರೆಯ ಪರವೆಯೇ ಆತನಿಗಿಲ್ಲ. (ಆಶಾಕಿರಣದ ಸುಳಿವೇ ಇಲ್ಲ) ನಿತ್ಯ ಜಾಗೃತವಾದ ನೀಲ ಆಕಾಶದ (ಸದಾ ಆನಂದಮಯನಾಗಿರುವ ಆತ್ಮನ) ಮೊಗದ ಮೇಲೆ ನಿಬಿಡವಾದ ಮುಸುಕು (ಆತ್ಮನನ್ನು ವಿಸ್ಮರಣಗೊಳಿಸುವ ಅಜ್ಞಾನವು) ಹಾಕಲ್ಪಟ್ಟಿದೆ.

ವನಭೂಮಿಗಳಲ್ಲಿ (ನರವಿಂಧ್ಯವೆಂಬ ಜಗದರಣ್ಯದಲ್ಲಿ) ಹಾಡಿನ ಸದ್ದು (ಉಲ್ಲಾಸದ ಉಲುವು) ಅಡಗಿದೆ. ಪ್ರತಿಯೊಂದು ಮನೆಯ (ಪ್ರತಿಯೊಬ್ಬ ವ್ಯಕ್ತಿಯ) ಬಾಗಿಲುಗಳು (ಹೃದಯದ್ವಾರಗಳು) ಮುಚ್ಚಿವೆ. ಈ ನಿರ್ಜನ ಬೀದಿಗಳಲ್ಲಿ ನೀನು (ಹೇ, ಒಡೆಯಾ) ಏಕಾಂಗಿಯಾದ ಪಥಿಕನಾಗಿರುವಿ. (ನಿನ್ನನ್ನು ಬಯಸಿ ನಿನ್ನೆಡೆಗೆ ಬರುವವರು ಯಾರೂ ಇಲ್ಲ, ನಿನ್ನನ್ನು ತಮ್ಮ ಮನೆಯಲ್ಲಿ ಕರೆಯುವವರು ಯಾರೂ ಇಲ್ಲ.) ನನ್ನ ಏಕಮಾತ್ರ ಸಖನೇ (ನನ್ನ ಗತಿಯೇ, ಮತಿಯೇ,) ನನ್ನ ನಚ್ಚಿನ ನಲ್ಲನೇ, ನನ್ನ ಮನೆಯ ಬಾಗಿಲುಗಳು (ಹೃದಯ ದ್ವಾರಗಳು) ತೆರೆದಿವೆ. (ನಿನಗಾಗಿ ನನಗೆ ಆಶೆ ಹುಟ್ಟಿದೆ) (ಒಡೆಯಾ,) ಕನಸಿನಂತೆ (ಆಶೆ ತೋರಿಸಿ) ಮರೆಯಾಗದಿರು.

ಬೆಡಗಿನ ವಚನಗಳು ಇದೇ ಮಾದರಿಯವು.

ನಮ್ಮ ಜಾನಪದ ಸಾಹಿತ್ಯದಲ್ಲಿಯೂ ಇಂಥ ಕವಿತೆಗಳ ಸುಳಿದಾಟವು ಕೆಲವೊಟ್ಟಿಗೆ ಕಂಡುಬರುತ್ತದೆ. ಒಂದು ಪದ್ಯವನ್ನಿಲ್ಲಿ ಹೇಳುವೆ.

ತಾಯಿ :–

"ನಾಜುಕದ ಮಡದೀಗಿ ಏನಂದ್ಯೋ ನನ ಬಾಳಾ ? ।"

ಮಗ :–

"ಕಾಕಿ ಹಣ್ಣಿಲೆ ಹೊಡದೆ ಕಮಳದ್ಹೂವಿಲೆ ಹೊಡದೆ ।
ಮೋಜಿಲೆ ಅಳತಾಳ ಹಡದವ್ವಾ ॥"

ಇಲ್ಲಿ ಮಗನ ಉತ್ತರವು ಬಹಳೇ ಮಾರ್ಮಿಕವಾಗಿದೆ. ಅದೇನಂದರೆ ನೀಳವಾದ ಕೈಯೇ ನಾಳ ಸಹಿತವಾದ ಕಮಲ. ಮೆಲ್ಲಗೆ ಮೋಜಿಗಾಗಿ ಹೊಡೆದೆನೆಂಬುದಕ್ಕೆ ಕಮಲದ ಹೂವಿನಿಂದ ಹೊಡೆದೆನೆಂದೆನ್ನುತ್ತಾನೆ. ಅಲ್ಲದೆ ಸ್ವಲ್ಪ ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿದೆನೆಂದು ಹೇಳುವುದಕ್ಕೆ ಕಾಕಿ ಹಣ್ಣಿನಿಂದ ಹೊಡೆದುದಾಗಿ ಹೇಳುತ್ತಾನೆ. ಕಾಕಿ ಹಣ್ಣು ಬಹಳ ಚಿಕ್ಕದು. ಆದ್ದರಿಂದ ತೀರ ತುಸು ಸಿಟ್ಟು ತೋರಿಸಿದೆನೆಂದು ಅವನ ಅಭಿಪ್ರಾಯ. ಕಾವ್ಯಶಾಸ್ತ್ರಗಳಲ್ಲಿ ಇದಕ್ಕೆ "ಧ್ವನಿ" ಎಂದು ಎನ್ನುವರು. ಧ್ವನಿ ತಾರ್ಥವೇ ಕಾವ್ಯಕ್ಕೆ ಮುಖ್ಯವಾದುದೆಂದು "ಧನ್ಯಾಲೋಕ"ವೆಂಬ ಸಂಸ್ಕೃತ ಅಲಂಕಾರ ಗ್ರಂಥವು ಹೇಳುವದಂತೆ.

ಇನ್ನು ನಾಲ್ಕನೆಯದಕ್ಕೆ ಉದಾಹರಣೆಗಳು ಉಪನಿಷತ್ತುಗಳಲ್ಲಿ ಹೇರಳವಾಗಿ ಸಿಗುತ್ತವೆಂದು ತೋರುತ್ತದೆ. ಶಾಕುಂತಲ ನಾಟಕದ ಏಳನೆಯ ಅಂಕಿನ ಆರಂಭದಲ್ಲಿ ಇಂದ್ರಲೋಕದಿಂದ ದುಷ್ಯಂತನು ಆಕಾಶಮಾರ್ಗದಿಂದ ತಿರುಗಿ ಬರುವಾಗ ಕೆಳಗೆ ಪೃಥ್ವಿಯು ಹೇಗೆ ಕಾಣಿಸುತ್ತಿದ್ದಿತೆಂಬದರ ಆಗಾಧ ವರ್ಣನೆ ಬರುತ್ತದೆ. ಅದು ಇಂಥ ನಿರುಪಮಾಲಂಕಾರದ ದಿವ್ಯಕವಿತಾ ಜಾತಿಗೆ ಒಳ್ಳೇ ಉದಾಹರಣವಾಗಿದೆ. ಇನ್ನು ವಚನಗಳಲ್ಲಿ ಐಕ್ಯಸ್ಥಲದಲ್ಲಿ ಇದಕ್ಕೆ ಉದಾಹರಣೆಗಳು ಸಿಗಬಹುದು. ಶ್ರೀ ಚೆನ್ನಬಸವಣ್ಣನವರ ಒಂದು ವಚನದಲ್ಲಿ :

"ಆದಿಯಾಧಾರ ಘನ
ಆ ಘನ ವೇಧಿಸುವದು ಮನ
ಆ ಮನ ಮಹದಲ್ಲಿ ನಿಂತದ್ದೆ ಭಕ್ತಿ"

ಎಂದು ಆಕಾರ ಸೃಷ್ಟಿಗೆ ಆಧಾರವಾಗಿರುವ ಸಚ್ಚಿದಾನಂದ ಮಹಾಘನ ಪರಬ್ರಹ್ಮ ವಸ್ತುವಿನ ವರ್ಣನೆಯಿದೆ.

ಜನಪದ ಸಾಹಿತ್ಯದಲ್ಲಿ ತಾತ್ತ್ವಿಕ ಲಾವಣಿಗಳಲ್ಲಿ ಒಮ್ಮೊಮ್ಮೆ ಇದರ ಛಾಯೆ ಕಂಡು ಬರುತ್ತದೆ. ಉದಾಹರಣಾರ್ಥವಾಗಿ :–

"ಶೂನ್ಯ, ಶೂನ್ಯ,
ಮಹಾಶೂನ್ಯದಾಚೆಗಿ
ಘನ್ನ ಮುಂಡಾಸಿತ್ತು
ಅದರಿಂದು ಬರತಿತ್ತು ಧನಿ ॥"

ಎಂದಂ ಅವ್ಯಕ್ತ, ಅದರಾಚೆಗೆ ಚಿದ್ಘನ, ಅದರೊಳಗೆ ಜಗದೊಳಗೆ ಜಗದಾದಿಗೆ ಕಾರಣವಾದ ಓಂಕಾರ ಧ್ವನಿ, ನಾದಬ್ರಹ್ಮ. ಹೀಗಿದೆ ಇದರ ತಾತ್ಪರ್ಯ.

ವಚನಗಳಲ್ಲಿ ಮೇಲ್ಕಾಣಿಸಿದ ಈ ನಾಲ್ಕೂ ಪ್ರಕಾರಗಳಿಗೆ ಉದಾಹರಣೆಗಳು ಸಿಗುತ್ತವೆ.

ಕೊನೆಗೆ ಒಂದು ಮಾತಿನ ಬಗೆಗೆ ಹೇಳಿ ನನ್ನ ಭಾಷಣವನ್ನು ಮುಗಿಸಂತ್ತೇನೆ. ಅದೇನೆಂದರೆ– ಇನ್ನು ಮುಂದಿನ ಕಾಲದಲ್ಲಿ ಆಧ್ಯಾತ್ಮಿಕ ಕಾವ್ಯವೇ ಪಟ್ಟವನ್ನೇರುವ ದಾದರೆ ಉಳಿದ ಲೌಕಿಕ ವಿಷಯಗಳ ಗತಿಯೇನು ? ಎಂಬುದೇ ಆ ಯಕ್ಷಪ್ರಶ್ನೆ.

"ಸರ್ವಂ ಖಲ್ವಿದಂ ಬ್ರಹ್ಮ" ಎಂದಿರುವಾಗ, ಎಲ್ಲವೂ ಬ್ರಹ್ಮರೂಪವೇ ಎಂದ ಬಳಿಕ ಯಾವುದೂ ಬಹಿಷ್ಕಾರ ಹೊಂದುವುದಕ್ಕೆ ಕಾರಣವಿಲ್ಲ. ಬ್ರಹ್ಮಜ್ಞಾನಿಯ ದೃಷ್ಟಿಗೆ ಎಲ್ಲವೂ ಬ್ರಹ್ಮಮಯವಾಗಿಯೇ ಕಾಣುವದು. ಎಲ್ಲದರಲ್ಲಿಯೂ ಬ್ರಹ್ಮ ರಸವನ್ನೇ ಬ್ರಹ್ಮಾನಂದವನ್ನೇ ಆಸ್ವಾದಿಸುವನು. ಹೀಗೆಂದ ಬಳಿಕ ಅಂಥ ತತ್ತ್ವಜ್ಞಾನಿ ಕವಿಯು ಎಲ್ಲ ವಿಷಯಗಳನ್ನು ತನ್ನ ಆ ಸರ್ವಗ್ರಾಹಿಯಾದ ಎಲ್ಲವನ್ನೊಳಗೊಳ್ಳುವ, ಶಿವದೃಷ್ಟಿಯಿಂದಲೇ ಕಂಡು ಅದಕ್ಕನುಗುಣವಾಗುವಂತೆ ವರ್ಣಿಸುವನು. ವರ್ಣಿಸುವನೆಂಬುದಷ್ಟೇ ಅಲ್ಲ, ಅಂಥ ಮಾನವನು–ನಾಳಿನ ಮಾನವನು–ಸಮಸ್ತ ಜೀವನವನ್ನೇ ಆ ದೃಷ್ಟಿಯಿಂದ ನಡೆಯಿಸುವನು.

"ನಾಳಿನ ಕಾಲದ ಕವಿಯು ಪರಮಾತ್ಮನನ್ನು ಕಾಣುವ, ಆತ್ಮನನ್ನು ಕಾಣುವ ಮಾರ್ಗದೊಳಗಿನ ಅಳಿಲು ನೋವುಗಳ ಕವಿತೆಗಳನ್ನೂ ಆತ್ಮನನ್ನು ಪರಮಾತ್ಮನನ್ನು ಕಾಣುವದರಿಂದಾಗುವ ಆನಂದ ತನ್ಮಯತೆಗಳನ್ನು ಬಣ್ಣಿಸುವ ಕವನಗಳನ್ನೂ ಅಂಥ ಆ ದೃಷ್ಟಿಗೆ ಕಾಣುವ ಸೃಷ್ಟಿ ವೈಭವದ ವರ್ಣನೆ, ಅಂಥ ಅವಸ್ಥೆಗೆ ಮುಟ್ಟಿ ನಡೆ ಯಿಸುವ ಅಮೃತಮಯ ಜೀವನದ ರೀತಿ ನೀತಿಗಳ ವರ್ಣನೆ ಇವೇ ಮೊದಲಾದವು ಗಳಿಗೆ ಸಂಬಂಧಿಸಿದ ಕವಿತೆಗಳನ್ನು ನಿರ್ಮಿಸುವನು......" ಮುಂತಾದುದಾಗಿ ಶ್ರೀ ಅರವಿಂದರು ತಮ್ಮ "ನಾಳಿನ ಕಾವ್ಯ" ಎಂಬ ಗ್ರಂಥದಲ್ಲಿ ('ಆರ್ಯ' ಪತ್ರಿಕೆ ಯಲ್ಲಿ) ಹೇಳಿರುವರು. ಈ ದೃಷ್ಟಿಯಿಂದ ನೋಡಿದರೆ ನಮ್ಮ ಕನ್ನಡ ನಾಡಿನ ಪುರಾತನ ಕಾವ್ಯಗಳಲ್ಲಿ ಹರಿಹರನ ರಗಳೆಗಳು, ಲಕ್ಷ್ಮೀಶನ ಜೈಮಿನಿ ಭಾರತ, ರತ್ನಾಕರ ವರ್ಣಿಯ ಭರತೇಶವೈಭವ ಇವು ಅತ್ಯಂತ ಅಭ್ಯಾಸಾರ್ಹವಾಗಿವೆ. ವಚನಗಳು ಮತ್ತು ದಾಸರ ಕೀರ್ತನೆಗಳಂತೂ ಸರಿಯೇ ಸರಿ. ಪಂಪಾಶತಕ, ರತ್ನಾಕರಾಧೀಶ್ವರ ಶತಕಗಳೇನೂ ಸಾಮಾನ್ಯವಾಗಿಲ್ಲ.

ಮಹಾಶಯರೇ, ದಿವಂಗತ ದೃಷ್ಟಾಕವಿ ಏ. ಈ. ಅವರು ಬರೆದ "ಕವಿತೆಯ ಉಗಮುಗಳು" (Fountains of Song) ಎಂಬ ಗ್ರಂಥವನ್ನು ಅವಶ್ಯವಾಗಿ ಅವ ಲೋಕಿಸಬೇಕಾಗಿ ವಿನಮ್ರಭಾವದಿಂದ ಭಿನ್ನವಿಸುತ್ತೇನೆ. ಅದರಲ್ಲಿ ಅವರು ತಮ್ಮ ಕವಿತೆಗಳಿಗೆ ಅನುಭಾವದ ಮೂಲವು ಹೇಗಿದೆ ಎಂಬುದನ್ನು ಸವಿಸ್ತಾರವಾಗಿ ವಿವರಿಸಿ

ದ್ದಾರೆ. ನಾಳಿನ ಕಾಲದ ಕಡೆಗೆ ದೃಷ್ಟಿಯನ್ನಿಡಲಾರದೆ ನಮ್ಮ ಹೆಜ್ಜೆಗಳು ಮುಂದಕ್ಕೆ ಸಾಗಲಾರವು.

ನಮ್ಮೆಲ್ಲರನ್ನು ಹುಟ್ಟಿಸಿದ, ನಮ್ಮ ಒಳಗೆ ಕುಳಿತಿರುವ, ನಮ್ಮೆಲ್ಲರನ್ನ ಪರಸ್ಪರ ಹೆಣೆದಿರುವ ಪರಮ ಪ್ರಭುವನ್ನರಿತು; ಆತನ ಇಚ್ಛೆಯಂತೆ ನಡೆದಿರುವ ಜಗತ್ತಿನಲ್ಲಿ ನಾವು ಆತನ ಕೃಪೆಯಿಂದ ಪರಮಾನಂದ ಪೂರ್ಣರಾಗಿ ಆಡಿ, ಹಾಡಿ, ಒಬ್ಬರಿಗೊಬ್ಬರು ಕೂಡಿ, ಕಂಡು-ಉಂಡು-ನಲಿದು, ಅಂಥ ಅಮರ ಜೀವನದ ಸಾಹಿತ್ಯವನ್ನು ನಿರ್ಮಾಣ ಮಾಡಬಾರದೇಕೆ ? ಯಾರಾದರೂ ಸರಿ, ಜಗತ್ತಿನಲ್ಲಿ ಸ್ವ-ಪರ ಆನಂದವನ್ನೇ ಬಯಸುವವರು. ಒಡೆಯನನ್ನು ಪಡೆದು ಆತನ ಮಕ್ಕಳಾಗಿ ಆತನ ದೃಷ್ಟಿ ಸುಖವನ್ನುಣ್ಣುವದಕ್ಕಿಂತ ಹೆಚ್ಚಿನ ಆನಂದವಿದ್ದೀತೇ? "ಆನದಂ ಬ್ರಹ್ಮ".

ಪ್ರಿಯ ಬಂಧು ಭಗಿನಿಯರೇ, ಇದುವರೆಗಿನ ನನ್ನ ವಿವರವೆಂದರೆ ಸಣ್ಣ ಬಾಯಿಂದ ಬಹಳ ದೊಡ್ಡ ತುತ್ತನ್ನು ನುಂಗಿದಂತೆಯೇ ಸರಿ. ಇದು ನನ್ನಂಥ ಸಾಮಾನ್ಯನ ಕಾರ್ಯವಲ್ಲ. ಇದು ದೊಡ್ಡ ದೊಡ್ಡ ಮೇಧಾವೀ ಸಾಹಿತಿಗಳ ಕಾರ್ಯವು. ಆದರೂ ನವಕಾಲದ ಅರುಣೋದಯವಾಗುತ್ತಿರುವಾಗ ಚಿಕ್ಕ ಹಕ್ಕಿಗಳೂ ಚಿವ್‌ಗುಡುವದು ಸ್ವಾಭಾವಿಕವೇ ಆಗಿದೆಯಷ್ಟೆ? ಸಹೃದಯರಾದ ತಾವು ಅಲ್ಪಜ್ಞನಾದ ನನ್ನೀ ತೊದಲ್ನುಡಿಯನ್ನು ಅಕ್ಕರತೆಯಿಂದ ಆಲಿಸಿದ್ದಕ್ಕಾಗಿ ನಾನು ತಮ್ಮೆಲ್ಲರಿಗೆ ಚಿರಕೃತಜ್ಞನಾಗಿದ್ದೇನೆ.

ನನ್ನನ್ನು ಹೇಗೋ ಹಾಗೆ ಇನ್ನೆಲ್ಲ ಹಿರಿಕಿರಿ ಸಾಹಿತಿಗಳನ್ನೆಲ್ಲ ಭೇದವಿಲ್ಲದೆ ಅಂದರೆ ೧. ಲಲಿತ ಸಾಹಿತಿಗಳು, ೨. ಪ್ರಗತಿಪರ ಸಾಹಿತಿಗಳು ಅಥವಾ ವೀರಮಾರ್ಗಿಗಳು ಹಾಗೂ ೩. ಶಾಂತ ಸಾಹಿತಿಗಳು ಅಥವಾ ಆಧ್ಯಾತ್ಮ ಮಾರ್ಗಿಗಳು ಎಂಬ ಭೇದವಿಲ್ಲದೆ ಸರ್ವರನ್ನೂ ಸಮಾನವಾಗಿ ಮನ್ನಿಸಿ ಕನ್ನಡ ತಾಯಿಯ ಪಾದಸೇವೆಯು ಸರ್ವಾಂಗೀಣವಾಗಿ ಸಮಗ್ರತೆಯಿಂದ ಕೂಡಿ, ಸರ್ವಾಂಗ ಸಂಪೂರ್ಣವಾಗುವಂತೆ ಮಾಡುವಿರೆಂದು ಬೇಡಿಕೊಂಡು ಶಾರದೆಯ ಅಡಿದಾವರೆಗಳಲ್ಲಿ ಪೊಡಮಟ್ಟು, ಅವಳ ಹಿರಿಹರಕೆಯನ್ನು ಬೇಡಿ ಹಾಗೂ ಈ ಜಿಲ್ಲೆಯ ನನ್ನ ಕವಿ ಮಿತ್ರರ ಹಾಗೂ ಸಣ್ಣದೊಡ್ಡ ಸಕಲ ಸಾಹಿತಿಗಳ ಹಾಗೂ ಸಾಹಿತ್ಯಾಭಿಮಾನಿಗಳಾದ ಹಿರಿಯರ ಮಹೋಪಕಾರವನ್ನು ಮನ್ನಿಸಿ, ಅಲ್ಲದೆ ಈ ಜಿಲ್ಲಾ ಸಾಹಿತ್ಯ ಸಮ್ಮೇಲನದ ಏಳಿಗೆಗಾಗಿ ಏರ್ಪಾಡಿಗಾಗಿ ಈ ಜಿಲ್ಲೆಯಲ್ಲಿ ಮೊದಲಿನಿಂದ ಬಹಳವಾಗಿ ಪರಿಶ್ರಮಿಸಿದ ಮುಂದಾಳುಗಳ ಕೀರ್ತಿಯನ್ನು ಕೊಂಡಾಡಿ, ಮತ್ತು ಭವಿಷತ್ಕಾಲದಲ್ಲಿ ಪರಮಾತ್ಮನ ಕೃಪೆಯಿಂದಲೂ ನಾಡತಾಯಿಯ ಆಶೀರ್ವಾದದಿಂದಲೂ ಇಂಥ ಸಮ್ಮೇಲನಗಳು ದಿನದಿನಕ್ಕೆ ಹೆಚ್ಚು ಹೆಚ್ಚು ಊರ್ಜಿತ ದೆಶೆಗೆ ಮುಟ್ಟುತ್ತ ಚಿರಕಾಲ ಸಾಗಲೆಂದು ಪರಮಾತ್ಮನಡಿಗಳಲ್ಲಿ ಪ್ರಾರ್ಥಿಸಿ, ನನ್ನೀ ಅಲ್ಪ ಭಾಷಣವನ್ನು ಮುಗಿಸುವೆನು.

ಓಂ ಶ್ರೀ ಓಂ

ನಂದಗಡ ೧೩-೧-೧೯೪೭

# ಮೂವತ್ತಮೂರನೆಯ ಕನ್ನಡ ಸಾಹಿತ್ಯ ಸಮ್ಮೇಳನದ

## ಕವಿಗೋಷ್ಠಿಯ ಅಧ್ಯಕ್ಷ ಭಾಷಣ

---

ಹಿರಿಯರೇ, ಬಂಧುಗಳೇ, ಭಗಿನಿಯರೇ,

ಈ ಕವಿಗೋಷ್ಠಿಗೆ ಅಧ್ಯಕ್ಷನಾಗುವ ಯೋಗ್ಯತೆ ನನಗಿಲ್ಲದಿದ್ದರೂ ಕನ್ನಡ ತಾಯಿಯ ಅಪಾರ ಕರುಣೆ ಹಾಗೂ ಕನ್ನಡನಾಡಿನ ಹಿರಿಯರ, ಸೋದರರ, ಸೋದರಿಯರ ಅಗಾಧವಾದ ಅಕ್ಕರತೆ, ಈ ಉಭಯ ಹರಕೆಗಳ ಬಲದಿಂದ ನನ್ನ ಯೋಗ್ಯತೆಗೆ ಮೀರಿದ ಈ ಪವಿತ್ರ ಕಾರ್ಯಕ್ಕೆ ಅಂಜಲಿ ಬದ್ಧನಾಗಿ ನಿಂತಿದ್ದೇನೆ. ಕನ್ನಡ ತಾಯಿಯ ಆಶೀರ್ವಾದವೂ ತಮ್ಮೆಲ್ಲರ ಅಂತಃಕರಣವೂ ನನ್ನನ್ನು ಕೈಹಿಡಿದು ನಡಿಸಿಕೊಂಡು ಹೋಗಲೆಂದು ನಾನು ಹೃತ್‌ಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ನಾನು ಆಧ್ಯಾತ್ಮ, ಸಾಹಿತ್ಯ, ಇತಿಹಾಸ, ಭಾಷಾಶಾಸ್ತ್ರ ಮತ್ತು ಸಮಾಜಶಾಸ್ತ್ರ ಇವೆಲ್ಲವುಗಳಲ್ಲಿ ಸತತ ಸಂಶೋಧನವನ್ನು ನಡಿಸಿರುವೆನೆಂಬುದು ತಮ್ಮೆಲ್ಲರಿಗೂ ತಿಳಿದ ವಿಷಯವಿದೆ. ಆದುದರಿಂದ ಕಾವ್ಯ ವಿಷಯದಲ್ಲಿ ನಾನು ಮಾಡಿದ ಸಂಶೋಧನೆಗಳನ್ನು ತಮ್ಮ ಇದಿರಿಗೆ ಇಡಬೇಕೆಂದು ನನ್ನ ಅಪೇಕ್ಷೆಯಿದೆ.

ಮೊದಲಿಗೆ "ಛಂದೋಬದ್ಧವಾಣಿಯೇ ಕವಿತೆ"ಯೆಂದು ನನಗೆ ಕಲ್ಪನೆಯಾಯಿತು. ಅದು ಸುಮಾರು ಕ್ರಿಸ್ತಾಬ್ದ ೧೯೧೮ ನೆಯ ವರ್ಷ. ಆಗ ಧಾರವಾಡದಲ್ಲಿ "ಪ್ರಭಾತ"ವೆಂಬ ಕವಿತಾ ಮಾಸಪತ್ರಿಕೆ ಹೊರಡುತ್ತಿದ್ದ ಪ್ರಭಾತಕಾಲ. ಆಗ ನಾನು ಶಾಲೆಯಲ್ಲಿ ಕನ್ನಡದ ಐದನೆಯ, ಆರನೆಯ ಇಯತ್ತೆಯಲ್ಲಿ ಅಭ್ಯಾಸ ಮಾಡುತ್ತಿದ್ದೆನು. ಪ್ರಾಥಮಿಕ ಶಿಕ್ಷಣದ ಕೊನೆಯ ಪರೀಕ್ಷೆಗೆಂದು (ಮುಲಕೀಪರೀಕ್ಷೆ) ತುಸುಮಟ್ಟಿಗೆ ಛಂದಸ್ಸಿನ ನಿಯಮಗಳ ಜ್ಞಾನವನ್ನು ಮಾಡಿಕೊಡುವುದು ಎಂದಿನಿಂದಲೂ ನಡೆದು ಬಂದಿದೆಯಷ್ಟೇ? ಆ ಮೇರೆಗೆ ಮಾತ್ರಾ ಮತ್ತು ಗಣಗಳ ನಿಯಮಗಳಿಂದ ಕೂಡಿದ ಸಾಮಾನ್ಯ ಪದ್ಯಗಳನ್ನು ರಚಿಸಲಿಕ್ಕೆ ಆರಂಭಮಾಡಿದೆನು. ನನ್ನ ಆ ಕವಿತೆಗಳನ್ನು ನೋಡಿದರೆ ಇಂದು ನಾನೇ ನಗಬಹುದು. ಉದಾಹರಣಾರ್ಥವಾಗಿ ಗದ್ಯದಲ್ಲಿ ಬರೆಯುವ ಪತ್ರಗಳನ್ನೇ ಮಾತ್ರಾ ನಿಯಮಗಳಿಂದ ಪದ್ಯದಲ್ಲಿ ಬರೆಯುವದು, ಹಾಗೂ ಶಾಲೆಯ ಭೂಗೋಲ ಪುಸ್ತಕದೊಳಗಿನ ಬೇರೆ ಬೇರೆ ದೇಶಗಳ ವ್ಯಾಪಾರದ ಜಿನಸುಗಳ ಯಾದಿಯನ್ನು ನೆನಪಿನಲ್ಲಿಡುವ ಸಲುವಾಗಿ ಪದ್ಯರೂಪದಲ್ಲಿ ಬರೆದು ಇಟ್ಟುಕೊಳ್ಳುವುದು, ಇವೇ ಆಗಿನ ನನ್ನ ಕವಿತೆಗಳು.

ಆದರೆ ಅಷ್ಟರಲ್ಲಿ ಅದೇ "ಪ್ರಭಾತ"ದಲ್ಲಿ ಬಂದ ಅಣ್ಣ ಶ್ರೀ ಅಂಬಿಕಾತನಯು ದತ್ತರ "ತುಂತುರಿ"ಎಂಬ ಕವಿತೆಯ ವಾಚನ ಹಾಗೂ ನನ್ನೊಬ್ಬ ವಿದ್ಯಾಗುರುಸ್ವರೂಪ ರಾದ ಹಿರಿಯರು ತಮ್ಮ ಮನೆಯ ಹುಡುಗನೊಬ್ಬನಿಗೆ (ಅವನೀಗ ನನ್ನ ಗೆಳೆಯು) ಹೇಳಿಕೊಡುತ್ತಿದ್ದ ಶಾಕುಂತಲ ನಾಟಕದ ಶ್ರವಣ ಹಾಗೂ ಅದೇ ಹೊಸದಾಗಿ ಹೊರಬಿದ್ದ ವಚನಶಾಸ್ತ್ರದ ಪ್ರಥಮ ಸಂಪುಟದ ಅಭ್ಯಾಸ ಮೊದಲಾದವುಗಳಿಂದ "ಭಾವವೇ ಕವಿತೆಯ ಜೀವ"ವೆಂದು ನನಗೆ ಮನವರಿಕೆಯಾಯಿತು. ಇದು ಸುಮಾರು ಕ್ರಿಸ್ತಾಬ್ದದ ೧೯೨೨ ರ ಕಾಲ; ಆಗ ನನ್ನ ಕವಿತೆಗಳಲ್ಲಿಯೂ ಒಂದು ಬದಲಾವಣೆಯು ಬಂದಿತು. ನನ್ನ "ನರ್ತಕಿ ನೀನಾರೆ ?" ಎಂಬ ಸೃಷ್ಟಿ-ಸೌಂದರ್ಯವನ್ನು ವರ್ಣಿಸುವ ಕವಿತೆಯೂ, ನಿದ್ರೆಯಲ್ಲಿ ಮಗನನ್ನು ಅಗಲಿದ ಸುನೀತಿ ದೇವಿಯ ಮನೋಭಾವ ಗಳನ್ನು ಬಣ್ಣಿಸುವ "ಧ್ರುವ" ಕವಿತೆಯೂ ಇದಕ್ಕೆ ಉದಾಹರಣೆಗಳು.

ಆಮೇಲೆ, ಕವೀಂದ್ರ ರವೀಂದ್ರರ ಹಾಗೂ ಅನುಭಾವಕವಿ ಏ. ಈ. ಯವರ ಆಧ್ಯಾತ್ಮಿಕ ಕವಿತೆಗಳನ್ನು ಶ್ರೀ ಅರವಿಂದರ ಅಧ್ಯಾತ್ಮವನ್ನು ಆದರ್ಶವಾಗಿಟ್ಟು ಕೊಂಡು ಅಣ್ಣ ಶ್ರೀ ಬೇಂದ್ರೆಯವರ ಹಿರಿತನದಲ್ಲಿ ನವಕವಿತಾ ರಚನೆ ನಡಿಸಿದ "ಗೆಳೆಯರ ಗುಂಪಿ"ನೊಡನೆ ಸ್ನೇಹವಾದಾಗಿನಿಂದ ಕವಿತಾ ಮಹಾಸಾಗರದ ಆಗಾಧವಾದ ಆಳ ಒಂದನ್ನು ಕಂಡು ಬೆಪ್ಪಾಗಿ ನಿಂತೆನು, ಅದು ಕ್ರಿಸ್ತಾಬ್ದದ ೧೯೨೪-೨೫ ರ ಕಾಲ. ಆಗ "ಇಂಥ ಕವಿತೆಗಳನ್ನು ತಿಳಿದುಕೊಳ್ಳುವ ಭಾಗ್ಯವಾದರೂ ನನಗೀ ಜನ್ಮದಲ್ಲಿ ಲಭಿಸಿದರೆ ನಾನು ಧನ್ಯನು" ಎಂದು ನಾನು ಪರಮಾತ್ಮನಲ್ಲಿ ಮೊರೆ ಇಡುತ್ತಿದ್ದೆನು. "ಗೆಳೆಯರ ಗುಂಪಿನ ಕವಿತೆಗಳೇ ನಮಗೆ ತಿಳಿಯುವದಿಲ್ಲ" ಎಂದು ಆಗ ಆಕ್ಷೇಪವನ್ನೆತ್ತುತ್ತಿದ್ದವರು ಹಾಗೂ ಇಂದಿಗೂ ಸಹ "ಶ್ರೀ ಬೇಂದ್ರೆಯವರ ಕವಿತೆಗಳ ಅರ್ಥವೇ ನಮಗೆ ಆಗುವದಿಲ್ಲ, ಇವೆಂಥ ಕವಿತೆಗಳೋ ಏನೋ ?" ಎಂದು ಅನ್ನುವವರ ಮಾನಸಶಾಸ್ತ್ರವು ನನ್ನ ಅಂದಿನ ಮನೋ ಭೂಮಿಕೆಗೆ ಸಮಾನವಾಗಿರ ಬಹುದೆಂದು ಹೇಳಬಹುದಲ್ಲವೇ ? ಹೀಗೆ ನನಗಾಗ ಮೂಕನು ಸಕ್ಕರೆ ಸವಿದಂತೆ; ಅಲ್ಲ ಅಲ್ಲ; ಏನೋ ಒಂದು ಗೊತ್ತಿಲ್ಲದ ಹೊಸ ಪದಾರ್ಥ ತಿಂದಂತೆ; ಆ ಹೊಸ ಕವಿತಾರಾಜ್ಯದ ಬಗೆಗೆ ದಿಗ್ಭ್ರಮೆ ಹಿಡಿಯಿತು. ಆ ಹೊಸ ಕವಿತೆಗಳ ಸ್ವರೂಪ ಜ್ಞಾನವು ನನ್ನ ಬಾಹ್ಯ ಬುದ್ಧಿಗೆ ಎಷ್ಟೂ ಗೊತ್ತಾಗದಿದ್ದರೂ, ಸಹವಾಸದ ಫಲವು ಗೊತ್ತಾಗದಂತೆ ಒಳಗೆ ಪರಿಣಾಮ ಮಾಡುವದೆಂದು ಹೇಳುವಂತೆ ನಾನಾಗ "ಮೌನ ಕೋಕಿಲೆಗೆ" ಮೊದಲಾದ ಹೊಸ ಜಾತಿಯ ಕವಿತೆಗಳನ್ನು ಅರಿತರಿತು ಬರೆಯದ, ಅರೆನಿದ್ದೆಯಲ್ಲಿ ಉಣ್ಣುವ ಮಕ್ಕಳಂತೆ ಅರಿಯಧೆಯೇ ಬರೆದೆನೆಂದು ಹೇಳಬಹುದು.

ಹಿಂದಿನಿಂದ ಇಂತಹ ಕವಿತೆಗಳಿಗೆ ಅರ್ಥವಾಗುವ ಒಂದು ಕಾಲವೂ ಪರಮಾತ್ಮನ ಕೃಪೆಯಿಂದ ನನಗೆ ಬಂತು. ಕಲ್ಯಾಣ ಮಹಾಕ್ಷೇತ್ರದಲ್ಲಿ ಶ್ರೀ ಬಸವಣ್ಣನವರ ವಚನಗಳ

ಪುಸ್ತಕವನ್ನೂ ಕವೀಂದ್ರ ರವೀಂದ್ರರ ಗೀತಾಂಜಲಿಯನ್ನೂ ಒಮ್ಮೆ ಪಾರಾಯಣ ಮಾಡಿದ್ದರ ಫಲದಿಂದಲೂ ಮತ್ತು ಮುಂದೆ ನನ್ನ ಅಶಕ್ತತೆಯ ಕಾಲದಲ್ಲಿ ಬಾಗಲಕೋಟೆಯ ಅಡವಿಯಲ್ಲಿ ವಾಸಿಸುತ್ತಿರುವಾಗ ಪರಮಾತ್ಮನ ಕೃಪೆಯಿಂದ ಬಾಗಿಲಿಲ್ಲದ ಅಧ್ಯಾತ್ಮದ ಕೋಟೆಯ ಬಾಗಿಲು ತೆರೆದದ್ದರಿಂದಲೂ, ಅಂಥ ಒಂದೆರಡು ಅನುಭಾವ ಕವಿತೆಗಳನ್ನು ಅರಿತರಿತು ಬರೆಯುವ ಭಾಗ್ಯವೂ ಕೂಡ ನನಗೆ ಲಭಿಸಿತು. ನನ್ನ "ನನ್ನನಲ್ಲ" "ಮಧುರಗೀತ"ಗಳು ಈ ಕಾಲದಲ್ಲಿ ಬರೆದವುಗಳು. ಆಗ ಕ್ರಿಸ್ತಾಬ್ದದ ೧೯೨೯-೩೦ ನೆಯ ವರುಷಗಳ ಕಾಲ.

ಇಂಥ ಕವಿತೆಗಳು ಅನುಭವ ಬರುವದಕ್ಕೆ ಮುಂಚೆ ಇಷ್ಟು ಗೂಢವಾಗಿ (ಅರ್ಥ ತಿಳಿಯದಂತಹವುಗಳಾಗಿ) ತೋರುವವೆಂತಲೇ ಇವುಗಳಿಗೆ "ಗೂಢ" ಕವಿತೆಗಳೆಂದು (ಮಿಸ್ಟಿಕ್ ಪೋಯಮ್ಸ) ಅನ್ನುವರೇನೋ ಎಂದು ಒಮ್ಮೊಮ್ಮೆ ಅನಿಸುತ್ತದೆ. ಆದರೆ ಮಿಸ್ಟಿಕ್ ಎಂಬ ಇಂಗ್ಲೀಷ ಶಬ್ದದ ನಿಜವಾದ ಅರ್ಥವು "ಭಕ್ತ" "ಅನುಭಾವಿ" ಎಂದಾಗುತ್ತದೆ. ಆದ್ದರಿಂದ 'ಮಿಸ್ಟಿಕ್ ಪೋಯಟ್ರಿ" ಎಂಬುದಕ್ಕೆ "ಭಕ್ತಿ ಕಾವ್ಯ" "ಅನುಭಾವ ಕಾವ್ಯ" ಎಂದು ಬಲ್ಲವರು ಅರ್ಥಮಾಡುತ್ತಾರೆಂಬುದು ಎಲ್ಲರಿಗೆ ಗೊತ್ತಿದ್ದ ಮಾತು.

ಹಾಗಾದರೆ ಅನುಭಾವ ಕಾವ್ಯವೆಂಬುದು ಹೀಗೆ ತಿಳಿದುಕೊಳ್ಳಲಿಕ್ಕೆ ಆಗಲಾರ ದಷ್ಟು ಬಿಗಿಯಾಗಿರಬೇಕೆಂಬುದೇ ಒಂದು ನಿಯಮವಾಗಿದೆಯೇ ಹೇಗೆ? ಎಂದು ಒಂದು ಪ್ರಶ್ನವು ಉದ್ಭವಿಸುತ್ತದೆ. ಆದರೆ ಹಾಗೇನೂ ಇಲ್ಲ. ಅನುಭವವು ಎಷ್ಟು ದೂರ ದೂರದ್ದಾಗಿರುತ್ತದೆಯೋ ಅಷ್ಟಷ್ಟು ಅದು ನಮಗೆ ಅಪರಿಚಿತವಾಗಿರು ತ್ತದೆ ಎಂಬ ಮಾತು ಸ್ಪಷ್ಟವಾಗಿದೆಯಷ್ಟೇ. ಅಪರಿಚಿತವಾಗಿದ್ದಷ್ಟೂ ವಿಷಯವು ಬಿಕ್ಕಟ್ಟಾಗುತ್ತದೆಯೆಂಬ ಮಾತೂ ನಮಗೆ ಗೊತ್ತಿದ್ದದ್ದೇ ಆಗಿದೆ. ಅಲ್ಲದೆ ಒಂದೊಂದು ಮೆಟ್ಟಲಿನ ಅನುಭವದ ಭಾಷೆಯು ಕೂಡ ಒಂದೊಂದು ವಿಧವಾಗಿರುತ್ತದೆ ಯೆಂಬುದೂ ಅಷ್ಟೇ ಸತ್ಯವಾಗಿದೆ. ಉದಾಹರಣಾರ್ಥವಾಗಿ ಭಕ್ತಸ್ಥಲದ ಭಕ್ತಿಭಾವದ ವಚಗಳ ರೀತಿಯೇ ಬೇರೆ. ಸಾಮಾನ್ಯವಾಗಿ ನಾವೆಲ್ಲರೂ ಯೋಗ (ಪ್ರಾಣಲಿಂಗಿ) ಹಾಗೂ ಐಕ್ಯಸ್ಥಲಗಳ ವಿಶೇಷ ಅನುಭವವಿಲ್ಲದೆ ಧರ್ಮಭಾವದಲ್ಲಿ 'ಮಾತ್ರ ಬೆಳೆದವರಾದುದರಿಂದ ಭಕ್ತಸ್ಥಲವೇ ಮೊದಲಾದ ಪೂರ್ವಾನುಭಗಳ ವಚನಗಳನ್ನು ನಾವು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಆದರೆ ಉತ್ತರಾನುಭವಗಳಾದ ಯೋಗ ಹಾಗೂ ಐಕ್ಯಸ್ಥಲದ ವಚನಗಳ ಅರ್ಥಮಾಡಿ ಕೊಳ್ಳುವದು ನಮಗೆ ಬಿಗಿ ಅನಿಸುತ್ತದೆ. ಅದುದರಿಂದಲೇ ಭಕ್ತಿ ರಾಜ್ಯವೇ ಮುಖ್ಯವಾಗಿರುವ ಶ್ರೀ ಬಸವಣ್ಣನವರ ಗ್ರಂಥವನ್ನೋದುವದು ಸುಲಭವೆನಿಸ ಬಹುದಾದರೂ ಐಕ್ಯಾನುಭವವೇ ಮುಖ್ಯವಾಗಿರುವ ಶ್ರೀ ಅಲ್ಲಮಪ್ರಭುದೇವರ ವಚನ ಗ್ರಂಥವನ್ನೋದುವದು ಬಹಳ ಬಿಗಿಯೆನಿಸುವದೆಂಬ ಮಾತು ಸರ್ವರಿಗೂ

ಗೊತ್ತಿದ್ದ ವಿಷಯವಾಗಿದೆ. ಅಲ್ಲದೆ ಯೋಗಾನುಭವವೇ ಮುಖ್ಯವಾಗಿರುವ ಲಿಂಗಮ್ಮನ ವಚನದ ಉತ್ತರಾರ್ಧವಂತೂ ನಮಗೆ ಗೊತ್ತಿಲ್ಲದ ವಸ್ತುಗಳ ಅಂಗಡಿಯಂತೆ ಅನಿಸುತ್ತದೆಯೆಂಬುದನ್ನು ಎಲ್ಲರೂ ಬಲ್ಲರು. ಆದ್ದರಿಂದಲೇ ಶ್ರೀ ಅರವಿಂದರು ಹೇಳುವಂತೆ "ವಾಚಕರಿಗೂ ಓದಿಕೊಳ್ಳುವ ಒಂದು ಹೆಚ್ಚಿನ ಸಂಸ್ಕಾರವುಂಟಾಗಿರಬೇಕಾಗಿರುತ್ತದೆ" ಎಂಬ ಮಾತು ಅಷ್ಟೇ ನಿಜವಾಗಿರುತ್ತದೆ.

೨

ಕವಿಚಕ್ರವರ್ತಿಯಾದ ಕಾಳಿದಾಸನ ಗ್ರಂಥಗಳನ್ನು ಅಭ್ಯಾಸ ಮಾಡಿದ ಹಾಗೆಲ್ಲ "ರಮ್ಯವಾದ ಸ್ವಾಭಾವಿಕ ವರ್ಣನೆಯೇ ಕಾವ್ಯದ ಮುಖ್ಯ ಲಕ್ಷಣ"ವೆಂದು ನನ್ನ ಹೃದಯದಲ್ಲಿ ಬಲವಾಗಿ ಬೇರೂರಿತು. ಅಲ್ಲದೆ ಭರತಖಂಡದ ಪುರಾತನ ಕವಿಗಳಲ್ಲಿ ಕಾಳಿದಾಸನೊಬ್ಬನೇ ಅಂದಿನಿಂದ ಇಂದಿನವರೆಗೆ ಏಕೈಕ ಸಾಮ್ರಾಟನಾಗಿರುವ ದರಿಂದ ಅವನ ಆದರ್ಶವೇ ಕಾವ್ಯದ ನಿಜವಾದ ಆದರ್ಶವೆಂದು ನಾನು ಬಹಳ ದಿವಸಗಳಿಂದ ತಿಳಿದುಕೊಂಡಿದ್ದೆನು. ಆತನು ಲೌಕಿಕ ಕಾವ್ಯಗಳನ್ನಲ್ಲದೆ ಧಾರ್ಮಿಕ ಕಾವ್ಯಗಳನ್ನು ಸಮಪ್ರತಿಭೆಯಿಂದಲೇ ಬರೆದಿರುವದರಿಂದ ಲೌಕಿಕ ಪರಮಾರ್ಥಗಳೆರಡ ರಲ್ಲಿಯೂ ಅವನ ಆದರ್ಶವನ್ನೇ ಇಟ್ಟುಕೊಳ್ಳಬಹುದೆಂದು ನನಗೆ ಅನೇಕ ದಿವಸಗಳಿಂದ ಅನಿಸುತ್ತಿದ್ದಿತು. ನನ್ನ "ನನ್ನನಲ್ಲ" ಮತ್ತು "ಮಧುರಗೀತ"ಗಳೊಳಗಿನ ಸೃಷ್ಟಿಸೌಂದರ್ಯದ ವರ್ಣನೆಯು ಮೇಲ್ಕಾಣಿಸಿದ ಮಾತಿಗೆ ಸಾಕ್ಷಿಯಾಗಿದೆ. ಕಾಳಿದಾಸನ ಕಾವ್ಯಗಳೊಳಗಿನ ನಾಯಕ ನಾಯಕಿಯರು ಬಂಗಾಲದ ವೈಷ್ಣವದಾಸರ ಶ್ರೀ ರಾಧಾಕೃಷ್ಣರ ವರ್ಣನೆಯ ಪದಗಳಲ್ಲಿರುವಂತೆಯೂ, ಶಿವಶರಣರ ಸತಿಪತಿ ಭಾವದ ವಚನಗಳಲ್ಲಿರುವಂತೆಯೂ, ಇರಾಣದ ಸೂಫೀ ವೇದಾಂತಿ ಕವಿಗಳ ಕಾವ್ಯ ಗಳಲ್ಲಿ ವರ್ಣಿಸಲ್ಪಟ್ಟ ಪ್ರಿಯತಮ ಪ್ರಿಯತಮೆಯರಂತೆಯೂ ಜೀವ ಶಿವರೇ ಆಗಿದ್ದಾರೆಂದು ಕಾಳಿದಾಸನ ಮೇಘದೂತ, ಶಾಕುಂತಲಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಮೇಲೆ ನನಗೆ ಅನಿಸಿದ್ದಿತು. ಆದರೆ ಇದೇನೇ ಇದ್ದರೂ "ಕೇವಲ ಅಧ್ಯಾತ್ಮವು ಕಾಳಿದಾಸನ ಕಾವ್ಯಗಳಲ್ಲಿ ಅಂಶಮಾತ್ರವೇ ಆಗಿದ್ದು, ಬಾಹ್ಯ ಸ್ಥೂಲ ಸೌಂದರ್ಯದ ವರ್ಣನೆಯೇ ಮುಖ್ಯವಾಗಿದೆ" ಎಂಬ ಮಾತು ಶ್ರೀ ಅರವಿಂದರ "ಕಾಳಿದಾಸ" ಎಂಬ ಗ್ರಂಥವನ್ನೋದಿದ ಮೇಲೆ ಮನವರಿಕೆಯಾಯಿತು.

ಇನ್ನು ಶ್ರೀ ಅರವಿಂದರ "ನಾಳಿನ ಕಾವ್ಯ" (ಫ್ಯೂಚರ್ ಪೋಯಟ್ರಿ) ಎಂಬ ಗ್ರಂಥದಲ್ಲಿ ವೇದದಂತಹ ಪೂರ್ಣಾನುಭವಗಳಿಂದ ಕೂಡಿದ ಸತ್ಯ ಆಧ್ಯಾತ್ಮಿಕ ಕವಿತೆಗಳೇ ನಾಳಿನ ಕಾಲದಲ್ಲಿ ಬರತಕ್ಕ ಕವಿತೆಗಳು. ಕವೀಂದ್ರ ರವೀಂದ್ರರೂ, ಏ.ಈ. ಯವರೂ, ವಾಲ್ಟ ವ್ಹಿಟ್ಮನ್ನರೂ, ಈಟ್ಸರೂ ಇಂದು ಅಂಥ ಕವಿತೆಗಳಿಗೆ ಹಾದಿ ಹಾಕಿಕೊಟ್ಟಿದ್ದಾರೆ" ಎಂದು ಹೇಳಿದ್ದು ಗೊತ್ತಾದ ಬಳಿಕ, ನಾನು ಈ ಆಧುನಿಕ ಮಹಾ ಅಧ್ಯಾತ್ಮಿಕ ಕವಿಗಳಲ್ಲಿ ಕವೀಂದ್ರ ರವೀಂದ್ರರ ಹಾಗೂ ಅನುಭಾವಕವಿ ಏ. ಈ. ಯವರ

ಕವಿತೆಗಳ ಅಭ್ಯಾಸ ಮಾಡತೊಡಗಿದೆನು. ಕಾಳಿದಾಸನಲ್ಲಾದರೋ ಉಪಮಾಲಂಕಾರವು ಅತ್ಯಂತ ಪ್ರಖ್ಯಾತಿಯನ್ನು ಪಡೆದು "ಉಪಮಾ ಕಾಲಿದಾಸಸ್ಯ" (ಕಾಳಿದಾಸನ ಉಪಮೆಯೇ ಉಪಮೆ) ಎಂಬ ಗಾದೆಯು ಮಾತಿನವರೆಗೆ ಬಂದು ಮುಟ್ಟಿದ್ದಿತಾದರೂ ಕವೀಂದ್ರ ರವೀಂದ್ರರು ತಮ್ಮ ಗೀತಾಂಜಲಿಯಲ್ಲಿ "ನನ್ನ ಹಾಡುಗಳಿಗೆ ಅಲಂಕಾರಗಳು ಬೇಡ. ನಿರಲಂಕಾರರಗಳೇ ಇರಲಿ. ಮಗುವಿನ ಮೈಮೇಲಿನ ಅಲಂಕಾರಗಳು ತಾಯಿಯ ಅಪ್ಪುಗೆಗೆ ಆತಂಕವನ್ನುಂಟು ಮಾಡುತ್ತವೆ" ಎಂದು ಹೇಳಿದ್ದಲ್ಲದೆ ತಮ್ಮ ಗೀತಾಂಜಲಿಯನ್ನು ತಮ್ಮ ಈ ಆದರ್ಶದಂತೆಯೇ ಅವಾಂತರಗಳ ಅಲಂಕಾರ ವಿಲ್ಲದೆ ಕೇವಲ ಪರಮಾತ್ಮನ ಪ್ರಾರ್ಥನಾರೂಪವಾಗಿ ಬರೆದಿರುವದನ್ನು ನೋಡಿದ ಮೇಲೆ "ರಮಣೀಯ ವರ್ಣನೆಗಳಿಂದ ಕೂಡಿದ್ದೇ ಕವಿತೆ" ಎಂಬ ನನ್ನ ಕಾವ್ಯ ಕಲ್ಪನೆಯು ತುಂಬ ಬದಲಾಗಿ ಹೋಯಿತು.

ಭಾರತದ ಕಾವ್ಯ ಕೃತಿಗೆ ಸೀಮಾಪುರುಷರಾದ ಈ ಇಬ್ಬರು ಕವಿಚಕ್ರವರ್ತಿಗಳ (ಕವಿ ಕಾಳಿದಾಸ ಮತ್ತು ಕವೀಂದ್ರ ರವೀಂದ್ರರ) ಕಾವ್ಯಾಭ್ಯಾಸದಿಂದ ಹಿಂದಿನ ಹಾಗೂ ಇಂದಿನ ಯುಗ ಇವೆರಡರ ಕಾವ್ಯಾದರ್ಶವನ್ನು ಮನಗಂಡಂತಾಯಿತು.

೩

ಈ ಮೊದಲೇ ಶ್ರೀ ಅಣ್ಣ ಬೇಂದ್ರೆಯವರ ನೇತೃತ್ವದಲ್ಲಿ ಗೆಳೆಯರ ಗುಂಪಿ ನಿಂದ ನಡೆಯುತ್ತಿದ್ದ "ಜಯ ಕರ್ನಾಟಕ" ಮಾಸಪತ್ರಿಕೆಯಲ್ಲಿ ಜನಪದ ಸಾಹಿತ್ಯವು ಸ್ವಲ್ಪ ಸ್ವಲ್ಪವಾಗಿ ಪ್ರಕಟವಾಗತೊಡಗಿತು. ಆಗ ಆ ಜನಪದ ಸಾಹಿತ್ಯದ ರುಚಿ ಗಂಡು ನಾವು ಹಲಸಂಗಿ ಗೆಳೆಯರೆಲ್ಲರು ಕೂಡಿ ಒಹಳವಾಗಿ ಜನಪದ ಗೀತೆಗಳನ್ನು ಸಂಗ್ರಹಿಸಿದ್ದು ತಮ್ಮೆಲ್ಲರಿಗೂ ತಿಳಿದ ವಿಷಯ. ಜನಪದ ಸಾಹಿತ್ಯದ ಈ ವಿಶೇಷ ಪರಿಶೀಲನದಿಂದ ಕಾವ್ಯ ತತ್ತ್ವದ ಸ್ವಾಭಾವಿಕತೆಯ ಬಗ್ಗೆ ನನಗೆ ಬಹಳ ಮನವರಿಕೆ ಯಾಯಿತು. ಗ್ರಾಮ್ಯ ಭಾಷೆಯೂ ಕೂಡ ಹೃದಯಾಕರ್ಷಕವಾದ ಸಾಹಿತ್ಯವನ್ನು ನಿರ್ಮಿಸಲಿಕ್ಕೆ ಶಕ್ಯವಿದೆಯೆಂದ ಬಳಿಕ "ಹಳೆಯ ಭಾಷೆಗಳಲ್ಲಿಯೇ ಮಾತ್ರ ಉತ್ಕೃಷ್ಟ ಕವಿತೆ ರಚಿಸಲಿಕ್ಕೆ ಸಾಧ್ಯವಿದೆ. ಈಗಿನ ಹೊಸ ಕಾಲದ ಭಾಷೆಗಳಲ್ಲಿ ಅಂಥ ಕವಿತೆ ರಚಿಸಲಿಕ್ಕೆ ಸಾಧ್ಯವಿಲ್ಲ" ಎಂಬ ವಾದದಲ್ಲಿ ಏನೂ ಹುರುಳಿಲ್ಲವೆಂಬುದು ಇದರಿಂದ ನನ್ನ ಮನಸ್ಸಿಗೆ ಸ್ಪಷ್ಟವಾಯಿತು. ಕೆಲವು ದಿನಗಳ ಹಿಂದೆ ನವಶಿಕ್ಷಿತರಲ್ಲೆಷ್ಟೋ ಜನರು– "ಇಂಗ್ಲೀಷು ಕವಿತೆಗಳನ್ನು ಕನ್ನಡದಲ್ಲಿ ಕವಿತಾ ರೂಪದಿಂದ ಇಳಿಸಲಿಕ್ಕೇ ಶಕ್ಯವಿಲ್ಲ. ಅಂಥ ಸೂಕ್ಷ್ಮಭಾವಗಳನ್ನು ಚಿತ್ರಿಸುವ ಶಬ್ದಸಂಪತ್ತಿಯು ಹೊಸ ಗನ್ನಡಕ್ಕೆ ಇಲ್ಲವೇ ಇಲ್ಲ" ಎಂದು ಹೂಡಿದ ವಾದವನ್ನು ದಿವಂಗತ ಕವಿ ಶ್ರೀ ಬಿ ಎಂ. ಶ್ರೀಕಂಠಯ್ಯನವರು ತಮ್ಮ ರತ್ನಪ್ರಾಯವಾದ "ಇಂಗ್ಲೀಷ ಗೀತೆಗಳು" ಎಂಬ ರಮ್ಯ ಅನುವಾದ ಗ್ರಂಥದಿಂದ ಸಮೂಲವಾಗಿ ಹೊಡೆದೋಡಿಸಿ ದುದಂತೂ ಇಡೀ ಕರ್ನಾಟಕಕ್ಕೇ ಗೊತ್ತಿದೆ. ನನಗೆ ಬಹಳ ದಿವಸಗಳಿಂದಲೂ

ಇನ್ನೊಂದು ಮಾತು ಒಳಗೊಳಗೇ ಅನಿಸುತ್ತಿದ್ದಿತು. ಅದೇನೆಂದರೆ– "ಹಿಂದಿನ ಕಾಲದಲ್ಲಿ ಕಾವ್ಯರಚನೆ ಮಾಡಿದವರೆಲ್ಲರೂ ತಮ್ಮ ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ಭಾಷೆಯಲ್ಲಿಯೇ ಕಾವ್ಯರಚನೆ ಮಾಡಿದ್ದಾರಲ್ಲದೆ ತಮಗಿಂತ ಹಿಂದಿನ ಭಾಷೆಯಲ್ಲಿ ಬರೆಯಲು ಪ್ರಯತ್ನಿಸಿಲ್ಲ. ಇಂದಿನವರಾದ ನಾವು ಮಾತ್ರವೇ ನಮಗಿಂತ ಹಿಂದಿನ ಕಾಲದ ಭಾಷೆಯಲ್ಲಿ ಏತಕ್ಕೆ ಕವಿತಾ ರಚನೆ ಮಾಡಲು ಪ್ರಯತ್ನಿಸಬೇಕು ?" ನನ್ನ ಅನಿಸಿಕೆಯು ಜನಪದ ಸಾಹಿತ್ಯದ ಅಭ್ಯಾಸದಿಂದ ಬೇಕಾದಷ್ಟು ದಿಟವಾಯಿತು. ಅಲ್ಲದೆ ಪ್ರತಿಭೆಯೊಂದಿದ್ದರೆ ಉಚಿತ ಶಬ್ದ, ಪ್ರಾಸ, ಅಲಂಕಾರ, ಛಂದಸ್ಸು ಮೊದಲಾದವುಗಳನ್ನು ಅದು ತಾನೆ ಆರಿಸಿಕೊಳ್ಳುತ್ತದೆಯೆಂಬ ಮಾತು ಕೂಡ ಜನಪದ ಸಾಹಿತ್ಯದ ಅಭ್ಯಾಸದಿಂದ ನನಗೆ ಸಂಪೂರ್ಣವಾಗಿ ಮನವರಿಕೆಯಾಯಿತು. ಇಲ್ಲಿ ನನಗೊಂದು ಮಾತು ನೆನಪಾಗುತ್ತದೆ. ಅದಾವುದೆಂದರೆ, ದಿವಂಗತ ಲೋಕಮಾನ್ಯ ತಿಲಕರು ತಮ್ಮ ಪೂರ್ವ ವಯಸ್ಸಿಯಲ್ಲಿ ತಮ್ಮ ಕಾಲದ ಒಬ್ಬ ಮುಪ್ಪಿನ ದೇಶಭಕ್ತರನ್ನು ಕಂಡು "ನಾನು ಒಳ್ಳೆಯ ವ್ಯಾಖ್ಯಾನಕಾರನಾಗುವದಕ್ಕೆ ಏನು ಮಾಡಬೇಕು?" ಎಂದು ಕೇಳಿದರಂತೆ. ಅದಕ್ಕೆ ಆ ಹಿರಿಯರು "ನಿಮಗೆ ದೇಶದ ಜನರ ಮೇಲೆ ಪ್ರೇಮವಿದೆಯೋ?" ಎಂದು ಕೇಳಿದರಂತೆ. ಅದಕ್ಕೆ ಇವರು ಹೌದು ಎಂದು ಉತ್ತರ ಕೊಟ್ಟಾಗ ಆ ಹಿರಿಯರು "ಹಾಗಿದ್ದರೆ ನೀವು ಬೇಕಾದಷ್ಟು ಉತ್ತಮ ವ್ಯಾಖ್ಯಾತರಾಗಬಲ್ಲಿರಿ" ಎಂದು ಹೇಳಿದರಂತೆ. ಕವಿಗೆ ಪ್ರತಿಭೆಯೇ ಮುಖ್ಯ. ಅದಿದ್ದರೆ ಭಾವ, ಭಾಷೆ, ಛಂದಸ್ಸು ಎಲ್ಲವೂ ಬರುತ್ತವೆ. ಅದೊಂದಿಲ್ಲದಿದ್ದರೆ ಯಾವದೂ ಉಚಿತವಾಗಿ ಹೊಂದುಗೂಡುವದಿಲ್ಲ. ಅದೇ ಸುಮಾರಿಗೆ ಜನಪದ ಸಾಹಿತ್ಯದ ಅಭ್ಯಾಸದ ಕಾಲದಲ್ಲಿಯೇ ಅಂದರೆ ಕ್ರಿಸ್ತಾಬ್ದದ ೧೯೩೩-೩೪ರ ಹೊತ್ತಿಗೆ ನನಗೆ ಇನ್ನೊಂದು ಮಾತು ತಿಳಿಯಿತು. ಅದಾವುದೆಂದರೆ "ಕಾವ್ಯದ ವಸ್ತು ಕವಿಗೆ ಯಾವದೋ ಇನ್ನೊಂದು ಲೋಕದಿಂದ ಕಲ್ಪನಾರೂಪದಿಂದ ಹೊಳೆಯುತ್ತಿದೆ." ಏಕೆಂದರೆ ಕುರುಬರ ಹಾಡು ಮೊದಲಾದವುಗಳಲ್ಲಿ ಹಳ್ಳಿಯ ಕಗ್ಗ ಜನರು ತಮ್ಮ ಜೀವನದಲ್ಲಿಯೇ ಎಂದೂ ಕಂಡರಿಯಲಾರದ ಮಹಾವೈಭವವನ್ನು ತಮ್ಮ ಹಾಡುಗಳಲ್ಲಿ ಧಾರಾಳವಾಗಿ ವರ್ಣಿಸಿದ್ದು ಕಂಡುಬರುತ್ತದೆ. ಅಲ್ಲದೆ ಹೆಣ್ಣುಮಕ್ಕಳ ಒಂದೊಂದು ಹಾಡಿನ ಮಟ್ಟುಗಳಂತೂ ಎಷ್ಟು ಹೃದಯಾಕರ್ಷಕವಾಗಿರುವವೆಂದರೆ ಅಂಥ ಇಂಪಾದ, ಸೊಂಪಾದ ಸಂಗೀತವನ್ನೇ ಅವರು (ಹಳ್ಳಿಯ ಹೆಣ್ಣುಮಕ್ಕಳು) ಕಿವಿಯಾರೆ ಕೇಳಿರಲಿಕ್ಕೆ ಶಕ್ಯವಿಲ್ಲ. ಇದೆಲ್ಲಾ ಮಾತುಗಳ ಮೇಲಿಂದ ಮಾನವನ ಕಲ್ಪನಾ ನೇತ್ರಕ್ಕೆ ಬೇರೆ ಇನ್ನಾವುದೋ ಒಂದು ಲೋಕವು ಕಾಣಿಸುತ್ತಿದ್ದು ಅದನ್ನು ಆತನು ತನ್ನ ಹಾಡಿನಲ್ಲಿ ಇಳಿಸುತ್ತಿರಬಹುದೆಂದು ನನಗಾಗ ಒಳಗೊಳಗೆ ಅನ್ನಿಸತೊಡಗಿತು. ಕೆಲದಿನಗಳ ಅನಂತರ ದಿವಂಗತ ಅನುಭಾವ ಕವಿ ಏ. ಈ. ಯವರ "ಫೌಂಟನ್ಸ ಆಫ್ ದಿ ಸಾಂಗ್" (ಕಾವ್ಯದ ಉಗಮಗಳು) ಎಂಬ ಗ್ರಂಥವು ನನಗೆ ಓದಲಿಕ್ಕೆ ಸಿಕ್ಕಿತು. ಅದರ ತುಂಬೆಲ್ಲಾ ಏ. ಈ. ಯವರು ತಮ್ಮ ಕವಿತೆಗಳಿ

ಗೆಲ್ಲ ಗೂಢಲೋಕದ ದರ್ಶನಗಳು ಹೇಗೆ ಕಾರಣೀಭೂತವಾಗಿವೆ ಎಂಬುದನ್ನು ಉದಾಹರಣಪೂರ್ವಕವಾಗಿ ತೋರಿಸಿಕೊಟ್ಟಿದ್ದಾರೆ. ಶ್ರೀ ಅರವಿಂದಾಶ್ರಮದ ಸಂಚಾಲಿಕೆಯರಾದ ಶ್ರೀ ಮಹಾಮಾತಾಜಿಯವರು ತಮ್ಮ ವಚನ ಒಂದರಲ್ಲಿ "ಇಂಥದೊಂದು ಲೋಕವಿದೆ. ಕಥೆ, ಕವಿತೆ, ನಾಟಕ, ಸಿನೇಮಾಗಳ ಮೂಲ ಕಥಾವಸ್ತುವೆಲ್ಲಾ ಅಲ್ಲಿಂದಲೇ ಲಭಿಸುತ್ತಿರುತ್ತದೆ. ಬಹ್ವಂಶ ಲೇಖಕರಿಗೆಲ್ಲ ಪ್ರತಿಭೆಯು ಅಲ್ಲಿಂದಲೇ ಬರುತ್ತಿರುತ್ತದೆ. ನಮ್ಮ ಅಹಂಕಾರವು ಲೋಪವಾದ ಹಾಗೆಲ್ಲಾ ಅಂಥ ಲೋಕಗಳು ನಮಗೆ ಪ್ರತ್ಯಕ್ಷವಾಗುತ್ತವೆ" ಎಂದು ಹೇಳಿದ್ದಾರೆ. ಇದೀಗ ತಾನೆ ಪ್ರಕಟವಾದ "ಶ್ರೀ ಅರವಿಂದರ ಪತ್ರಗಳು" (ಲೆಟರ್ಸ ಆಫ್ ಶ್ರೀ ಅರೊಬಿಂದೊ ಎಂಬ ಇಂಗ್ಲೀಷ ಗ್ರಂಥದ ಕಾವ್ಯ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ) ಮೂರನೆಯ ಸಂಪುಟದಲ್ಲಿಯೂ ಈ ಮಾತನ್ನು ವಿವರಿಸಿದ್ದಾರೆ. "ಕಾವ್ಯವಸ್ತುವೆಲ್ಲಾ ಮೇಲಿನ ಲೋಕಗಳಿಂದಲೇ ಬರುತ್ತದೆ. ಹೊರಗಿನ ಸನ್ನಿವೇಶಗಳು ಕೇವಲ ಬಾಹ್ಯಕಾರಣಗಳು ಮಾತ್ರವಾಗಿರುತ್ತವೆ." ಎಂದು ಅದರಲ್ಲಿ ಶ್ರೀ ಅರವಿಂದರು ಒಂದೆಡೆಯಲ್ಲಿ ನಿರೂಪಿಸಿದ್ದಾರೆ.

೪

ಬಹುಕಾಲದ ಮುಂಚೆಯೇ ಅಂದರೆ ನಾನು ಕನ್ನಡ ಶಾಲೆಯ ಅಭ್ಯಾಸವನ್ನೆಲ್ಲಾ ಕಲಿತು ಮುಗಿಸುವ ಹೊತ್ತಿಗೆ (ಕ್ರಿಸ್ತಾಬ್ದದ ೧೯೨೧) "ಕನ್ನಡ ಕವಿಚರಿತೆ" "ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ"ಗಳ ಪರಿಚಯವು ನನಗಾದದ್ದರಿಂದ ನಮ್ಮ ಕನ್ನಡ ನಾಡಿನ ಪುರಾತನ ಕವಿಗಳು ಬರೆದ ಹಳೆಗನ್ನಡ ಕಾವ್ಯಗಳ ಅಭ್ಯಾಸವನ್ನಾದರೂ ನಾನು ಆಗಿನಿಂದಲೂ ಮನವಿಟ್ಟು ಮಾಡುತ್ತಲಿದ್ದೆ. ರನ್ನನ ಗದಾಯುದ್ಧ, ಲಕ್ಷ್ಮೀಶನ ಜೈಮಿನೀ ಭಾರತ, ಹರಿಹರನ ಬಸವರಾಜದೇವರ ರಗಳೆ, ರತ್ನಾಕರನ ಭರತೇಶ ವೈಭವ ಇವು ನನ್ನನ್ನು ಇಂದಿಗೂ ಬಲವಾಗಿ ಮರುಳಗೊಳಿಸಿಬಿಟ್ಟಿರುವವು. ಹರಿಹರನ ಪಂಪಾಶತಕವೂ ರತ್ನಾಕರನ ರತ್ನಾಕರಾಧೀಶ್ವರಶತಕವೂ ಸಹ ನನ್ನನ್ನು ಬಲವಾಗಿ ಆಕರ್ಷಿಸಿಕೊಂಡು ಬಿಟ್ಟಿದ್ದವು. ಇವುಗಳಲ್ಲಿ ಪಂಪಾಶತಕವನ್ನು ಹಂಪೆಯಲ್ಲಿ ಬಹು ವರುಷಗಳ ಹಿಂದೆ ಮಾತಂಗ ಋಷಿಗಳ ಯಜ್ಞಗಂಹೆಯಲ್ಲಿ ನನ್ನ ಗೆಳೆಯರೊಂದಿಗೆ ಹಾಗೂ ಮನೆಯವರೊಂದಿಗೆ ಪಾರಾಯಣ ಮಾಡಿದ್ದೆನು. ಮೊನ್ನೆ ಮೊನ್ನೆ ಹರಿಹರನ ಗಿರಿಜಾ ಕಲ್ಯಾಣವನ್ನು ಪುನಃ ಆಧ್ಯಾತ್ಮಿಕ ಕಾವ್ಯ ಅನುಶೀಲನದ ದೃಷ್ಟಿಯಿಂದ ಅಭ್ಯಾಸ ಮಾಡಿದೆನು. ಭರತೇಶವೈಭವದಲ್ಲಿ ರತ್ನಾಕರನು ಗಳಿಗೆ ಗಳಿಗೆಗೊಮ್ಮೆ ತನ್ನ ನಾಯಕನನ್ನು ವ್ಯವಹಾರದಲ್ಲಿಯೂ ಅಧ್ಯಾತ್ಮದಲ್ಲಿಯೂ ಓಲಾಡಿಸಿ ತೋರಿಸುವಂತೆ, ಹರಿಹರನು ಕೂಡ ತನ್ನೀ ಗ್ರಂಥದಲ್ಲಿ ಶ್ರೀ ಪಾರ್ವತಿ ದೇವಿಯನ್ನು ಕ್ಷಣ ಕ್ಷಣಕ್ಕೆ ಬಾಹ್ಯಿಕ ಜೀವನ ಹಾಗೂ ಶಿವಪೂಜೆಯಲ್ಲಿ ನಿರತಳಾಗಿರುವಂತೆ ವರ್ಣಿಸಿದ್ದಾನೆ. ಅನೇಕ ಜೈನ ಕವಿಗಳೂ ಕೂಡ ಧಾರ್ಮಿಕ ಪುರಾಣ ಹಾಗೂ ಲೌಕಿಕ ಕಾವ್ಯಗಳನ್ನು ಜೊತೆ ಜೊತೆಯಾಗಿಯೇ ಬರೆದಿದ್ದಾರೆಂಬುದು ತಮ್ಮೆಲ್ಲರಿಗೂ

ಗೊತ್ತಿದ್ದ ವಿಷಯವೇ ಆಗಿದೆ. ಇತ್ತೀಚೆಗೆ ಪಂಡಿತ ಶ್ರೀ ಎಂ. ತಿಮ್ಮಪ್ಪಯ್ಯನವರೂ ನವಕವಿ ಶ್ರೇಷ್ಠರಲ್ಲೊಬ್ಬರಾದ ಶ್ರೀ ಜಿ. ಪಿ. ರಾಜರತ್ನಂರವರೂ ಪಂಪ-ರನ್ನರ ಗ್ರಂಥಗಳನ್ನೆಲ್ಲ ಶುದ್ಧ ಹೊಸಗನ್ನಡಕ್ಕಿಳಿಸಿ ಮಹದುಪಕಾರ ಮಾಡಿದ ಸಂಗತಿಯುಂ ತಮ್ಮೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಅಲ್ಲದೆ ಮೈಸೂರಿನ ವಿಶ್ವವಿದ್ಯಾನಿಲಯದ ಗ್ರಂಥಮಾಲೆಯವರು ಅನೇಕ ಪುರಾತನ ಕಾವ್ಯಗಳ ಸರ್ವಾಂಗ ಸುಂದರ "ಸಂಗ್ರಹ" ಗಳನ್ನು ಪ್ರಕಟಿಸುವ ಕಾರ್ಯವನ್ನು ಆರಂಭಿಸಿ ಹೇಳತೀರದಷ್ಟು ಉಪಕಾರ ಮಾಡಿದ್ದು ತಮ್ಮೆಲ್ಲರಿಗೆ ಗೊತ್ತೇ ಇದೆ, ಇರಲಿ. ಭರತಖಂಡದ ಪುರಾತನ ಸಾಹಿತ್ಯದಲ್ಲಿ ಸಂಸ್ಕೃತದ ಅನಂತರ ತಮಿಳು ಸಾಹಿತ್ಯವು ಕ್ರಿಸ್ತಶಕಕ್ಕಿಂತ ಪೂರ್ವದಿಂದಲೂ ಸುಪ್ರಸಿದ್ಧಿಯನ್ನು ಪಡೆದಿದೆ. ಕನ್ನಡ ಸಾಹಿತ್ಯದ ಆರಂಭ-ಬಿಂದುರೂಪವಾದ ಪದ್ಯಮಯ ಶಿಲಾಶಾಸನಾದಿಗಳು ಕ್ರಿಸ್ತಶಕದ ಆರೇಳನೆಯ ಶತಮಾನದಿಂದಲೂ ಸಿಗುತ್ತವೆ. ಕನ್ನಡದ ಸುವಿಖ್ಯಾತ ಮಹಾಕವಿಗಳಾದ ಪಂಪ-ರನ್ನರು ಹುಟ್ಟಿ ಇಂದಿಗೆ ಸರಿಯಾಗಿ ಸಾವಿರ ವರ್ಷಗಳಿಗಿಂತ ಹೆಚ್ಚು ಕಾಲ ಸಂದಿತೆಂಬುದು ತಮ್ಮೆಲ್ಲರಿಗೂ ತಿಳಿದಿರುವ ವಿಷಯ. ಭರತಖಂಡದ ಇನ್ನುಳಿದ ಯಾವ ಆಧುನಿಕ ಭಾಷೆಗಳಲ್ಲಿಯೂ ಇಷ್ಟು ಶತಮಾನಗಳ ಹಿಂದೆ ಸಾಹಿತ್ಯ ರಚನೆಯಾಗಿಲ್ಲ. ಇಂಥ ಪುರಾತನ ಗೌರವಾನ್ವಿತ ಸಾಹಿತ್ಯವು ಆದರ್ಶ ಸಾಹಿತ್ಯವಾಗಿರಲಾರದೇ ? ಹಿಂದೆ ಹೇಳಿದ ಕರ್ನಾಟಕದ ಮಹಾಕವಿಗಳ ಪುಣ್ಯ ಕಾವ್ಯಗಳನ್ನು ಓದಿದರೆ ಇಂದಿನವರಿಗೂ ಕೂಡ ಆಶ್ಚರ್ಯವಾಗದಿರದು. ಇನ್ನೊಂದು ಮಹತ್ವದ ಮಾತೆಂದರೆ, ನಮ್ಮ ಹಿಂದಿನ ಸಾಹಿತ್ಯದ ಬೆಳಕಿನ ಕಿರಣಗಳಾಗಿರುವ ಶರಣರ ವಚನಗಳು ಹಾಗೂ ದಾಸರ ಪದಗಳು (ಕೀರ್ತನಗಳು) ಇವುಗಳ ನಿಜವಾದ ಬೆಲೆಯನ್ನಂತೂ (ಸಂಸ್ಕೃತ ಆಧ್ಯಾತ್ಮಿಕ ಸಾಹಿತ್ಯದ ದೃಷ್ಟಿಯಿಂದ) ನಿರ್ಣಯಿಸಲಿಕ್ಕೆ ಇನ್ನೂ ಸಂಪೂರ್ಣವಾಗಿ ಶಕ್ಯವಾಗಿಲ್ಲ. ಅಷ್ಟೇ ಏಕೆ, ಭಾರತದ ಇನ್ನುಳಿದ ಯಾವ ಭಾಷೆಗಳೊಳಗಿನ (ಸಂಸ್ಕೃತದ ಹೊರತು) ಆಧ್ಯಾತ್ಮಿಕ ಪದ-ಪದ್ಯ ಸಾಹಿತ್ಯದ ನಿಜವಾದ ಬೆಲೆಯನ್ನು ಸಂಪೂರ್ಣವಾಗಿ ನಿರ್ಣಯಿಸುವದಕ್ಕೆ ಇದುವರೆಗೂ ಸಾಧ್ಯವಾಗಿಲ್ಲ. ಅರ್ಥಾತ್ ಸಂಸ್ಕೃತದಲ್ಲಿರುವ ಅಧ್ಯಾತ್ಮ ಸಾಹಿತ್ಯದ ಮಾನದಿಂದ ಈ ಬೇರೆ ಬೇರೆ ಭಾಷೆಗಳೊಳಗಿನ ಅಧ್ಯಾತ್ಮ ಸಾಹಿತ್ಯದ ಸ್ಥಾನಮಾನವು ಏನೆಂಬುದರ ಸ್ಪಷ್ಟ ನಿರ್ಣಯವು ಇನ್ನೂ ಆಗಿರುವದೇ ಇಲ್ಲ. ಅತಿ ಪುರಾತನದ ಪಾಲೀ ಮತ್ತು ಮಾಗಧೀ ಸೂತ್ರಗಳ (ಜೈನ, ಬೌದ್ಧ) ಸ್ಥಾನವು ಮಾತ್ರ ಸಂಸ್ಕೃತ ಅಧ್ಯಾತ್ಮ ಸಾಹಿತ್ಯಕ್ಕೆ ಸಮಾನವಾದದ್ದಾಗಿದೆಯೆಂದು ಆಧುನಿಕ ವಿದ್ವಾಂಸರ ಬಹುದಿನಗಳ ಪರಿಶೀಲನದಿಂದ ನಿಸ್ಸಂದಿಗ್ಧವಾಗಿ ಸಿದ್ಧವಾಗಿದೆ. ಆದರೆ ಉಳಿದ ದೇಶೀಯ ಭಾಷೆಗಳ ಆಧ್ಯಾತ್ಮಿಕ ಪದ-ಪದ್ಯ ಸಾಹಿತ್ಯದ ಅನುಶೀಲನವೂ ಇನ್ನೂ ಆಗಬೇಕಾದಷ್ಟು ಆಗಿಯೇ ಇಲ್ಲ. ಆದರೆ ಈ ಹತ್ತಿಪ್ಪತ್ತು ವರ್ಷಗಳಲ್ಲಿ ಆಯಾ ಪ್ರಾಂತದೊಳಗಿನ ಮಹಾಮೇಧಾವಿಗಳ ಪರಿಶ್ರಮದಿಂದ ಆಯಾ ಪ್ರಾಂತದ ಅಧ್ಯಾತ್ಮ ಸಾಹಿತ್ಯವು ಆಯಾ ಪ್ರಾಂತದಮಟ್ಟಿಗೆ ಅತ್ಯಂತ ಶ್ರೇಷ್ಠವಾದುದಾಗಿದೆ ಎಂಬ ಮಾತು ಸಂಪೂರ್ಣವಾಗಿ ಸಿದ್ಧವಾಗಿದೆ

ಯೆಂಬುದು ತಮ್ಮೆಲ್ಲರಿಗೂ ತಿಳಿದ ವಿಷಯ. ಆದರೆ ಸಮಸ್ತ ಭಾರತ ಸಂಸ್ಕೃತಿಯ ಆಧಾರಸ್ತಂಭವಾಗಿರುವ ಸಂಸ್ಕೃತ ಅಧ್ಯಾತ್ಮ ಸಾಹಿತ್ಯದ ಮಾನದಿಂದ ಈ ಪ್ರಾಂತೀಯ ಅಧ್ಯಾತ್ಮ ಸಾಹಿತ್ಯಗಳ ಸ್ಥಾನಮಾನದ ನಿರ್ಣಯವು ಇನ್ನೂ ಭವಿಷ್ಯತ್ಕಾಲದ ಸಂಶೋಧನೆಯ ವಿಷಯವಾಗಿಯೇ ಉಳಿದಿದೆ. ವಚನ, ಅಭಂಗ, ದಾಸಸಾಹಿತ್ಯ, ಉತ್ತರ ಹಿಂದುಸ್ಥಾನದ ಭಕ್ತಿಪದಗಳ ಸಾಹಿತ್ಯ ಇವು ಸಂಸ್ಕೃತ ಆಧ್ಯಾತ್ಮಿಕ ಸಾಹಿತ್ಯಕ್ಕಿಂತ ಏಕೆ ಕಡಿಮೆಯಾಗಿರಬೇಕೋ ತಿಳಿಯದು. ಇವೆಲ್ಲವುಗಳಲ್ಲಿಯೂ ಗಾಢಭಕ್ತಿ, ಗೂಢಯೋಗಾನುಭವ ಹಾಗೂ ಅಗಾಧವಾದ ಐಕ್ಯಾನುಭೂತಿ ಮುಂತಾದ ವಿಷಯಗಳೆಲ್ಲ ಇದ್ದೇ ಇವೆ. ಅಲ್ಲದೆ ಅವುಗಳ ಭಾಷೆಯ ರೀತಿಯಲ್ಲಿ ಓಜಸ್ಸೂ ಕೂಡ ಸಂಪೂರ್ಣವಾಗಿ ಇದ್ದೇ ಇವೆ. ಹೀಗೆಂದ ಬಳಿಕ ಇವು ಸಂಸ್ಕೃತ ಅಧ್ಯಾತ್ಮ ಸಾಹಿತ್ಯಕ್ಕಿಂತ ಕಡಿಮೆಯವೆಂಬ ಭಾವನೆಯು ಏಕೆ ಆಗಬೇಕೋ ಏನೋ ತಿಳಿಯದು, ಉಪನಿಷತ್ತು ಹಾಗೂ ತ್ರಿಪಿಟಕಗಳೊಳಗಿನ ಆಧ್ಯಾತ್ಮಿಕ ಸಂವಾದಗಳೊಳಗಿನ ಪ್ರಜ್ವಲತೆಗೂ ವಚನ, ಕೀರ್ತನೆ, ಅಭಂಗ, ಭಜನ ಮೊದಲಾದವುಗಳೊಳಗಿನ ಉಜ್ವಲ ಅನುಭವಕ್ಕೂ ಏನು ತಾರತಮ್ಯವಿದೆಯೆಂಬುದನ್ನು ಇಂದಿನ ಘನವಿದ್ವಾಂಸರು ಸೂಕ್ಷ್ಮ ಅನುಶೀಲನ ಪರಿಶೀಲನಗಳಿಂದ ನಿರ್ಣಯಿಸಬೇಕಾಗಿದೆಯೆಂಬುದನ್ನು ಮಾತ್ರ ನಾನು ವಿನಮ್ರಭಾವದಿಂದ ತಮ್ಮೆಲ್ಲರ ಅವಗಾಹನೆಗೆ ತಂದುಕೊಡುತ್ತೇನೆ. ಈ ರೀತಿಯಿಂದ ಕರ್ನಾಟಕದ ಪುರಾತನ ಲೌಕಿಕ ಹಾಗೂ ಪರಮಾರ್ಥಿಕ ಸಾಹಿತ್ಯಗಳೆರಡೂ ನೂತನ ಕಾವ್ಯ ನಿರ್ಮಾಣಕ್ಕೆ ಸಹಾಯವನ್ನು ಒದಗಿಸಿಕೊಡುವವೆಂಬ ಮಾತು ಇದುವರೆಗಿನ ವಿವರಣೆಯಿಂದ ತಮ್ಮೆಲ್ಲರಿಗೆ ಸ್ಪಷ್ಟವಾಗಿದೆಯೆಂದು ನನ್ನ ನಂಬುಗೆ.

ಶ್ರೀ ಅರವಿಂದರ "ಭಾರತ ಸಂಸ್ಕೃತಿಯ ಸಮರ್ಥನೆ" "ಭರತಖಂಡವು ನಾಗರಿಕತೆಯನ್ನು ಹೊಂದಿದೆಯೆ ?" "ಭಾರತೀಯ ನವಜನ್ಮ" ಮೊದಲಾದ ಗ್ರಂಥಗಳಲ್ಲಿ "ನಮ್ಮ ಪುರಾತನ ಸಂಸ್ಕೃತಿಯೊಳಗಿನ ಶಾಶ್ವತ ಸತ್ಯದ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಇಂದಿನ ನವಜಾಗತಿಕ ಓಘಗಳ ಸತ್ಯಾಂಶ ಭಾಗಗಳನ್ನು ಸ್ವೀಕರಿಸಿ, ನಾಳಿನ ನವರಚನೆಯ ರೂಪರೇಷೆಗಳನ್ನು ಆಧ್ಯಾತ್ಮಿಕ ದಿವ್ಯದೃಷ್ಟಿಯಿಂದ ಅರಿತುಕೊಂಡು, ನಾಳಿನ ಭವ್ಯಭವಿಷ್ಯತ್ತನ್ನು ನಿರ್ಮಿಸಬೇಕಾಗಿದೆ" ಎಂದು ನಿರೂಪಿಸಿರುವಂತೆ ನಾಳಿನ ನವಕಾವ್ಯ ರಚನೆಯನ್ನು ಕೂಡ ಮೇಲ್ಕಾಣಿಸಿದ ಮಹಾಸಿದ್ಧಾಂತದ ಅನುಸಾರವಾಗಿಯೇ ಸಾಧಿಸಬೇಕಾಗುವದೆಂಬುದು ಸ್ಪಷ್ಟವಾದ ಮಾತೇ ಆಗಿದೆ.

೫

ಇದು ಇರಲಿ, ಶ್ರೀ ಅರವಿಂದರು ತಮ್ಮ "ನಾಳಿನ ಕಾವ್ಯ" (ಫ್ಯೂಚರ್ ಪೋಯಟ್ರಿ) ಎಂಬ ಗ್ರಂಥದಲ್ಲಿ ವೇದದಂಥ ವಾಙ್ಮಯವು ಇನ್ನು ಮುಂದೆ ಬರುವದೆಂದು ಹೇಳಿದ್ದಾರಷ್ಟೆ? ಆದ್ದರಿಂದ ಕಾಳಿದಾಸನಿಂದ ಮೊದಲುಮಾಡಿ ವೇದದವರೆಗಿನ ವಿಶಾಲವಾದ ಅತ್ಯುಚ್ಚ ಕವಿತಾರಾಜ್ಯದ ಮಧ್ಯಪ್ರದೇಶಗಳಾಗಿರುವ

ರಾಮಾಯಣ, ಮಹಾಭಾರತ, ಭಗವದ್ಗೀತೆ ಹಾಗೂ ಉಪನಿಷತ್ತುಗಳು ಇವೆಲ್ಲ ಪವಿತ್ರ ಗ್ರಂಥಗಳ ಕಾವ್ಯ ಸ್ವರೂಪವು ಎಂಥದೆಂಬುದನ್ನು ಅರಿತುಕೊಳ್ಳುವ ಕುತೂಹಲವು ಕೆಲವು ವರ್ಷಗಳ ಹಿಂದೆ ನನ್ನ ಹೃದಯದಲ್ಲಿ ಮೂಡಿತು. ಬಹಳ ವರ್ಷಗಳ ಹಿಂದೆಯೇ ಕಾಳಿದಾಸನ ಗ್ರಂಥಗಳನ್ನೂ, ಭಗವದ್ಗೀತೆಯನ್ನೂ, ಉಪನಿಷತ್ತುಗಳನ್ನೂ, ವೇದದ ಕೆಲವು ಋಚಗಳನ್ನೂ (ಅನುವಾದ ಗ್ರಂಥಗಳ ಸಹಾಯದಿಂದ) ಇವೆಲ್ಲಾ ನಮ್ಮ ಭರತಖಂಡದ ಮಹಾಗ್ರಂಥಗಳೆಂಬ ಪರಮ ಪ್ರೇಮದಿಂದ ಓದಲಾರಂಭಿಸಿದ್ದೆನು. ಸುಮಾರು ೧೦-೧೨ ವರ್ಷಗಳ ಸತತ ಅಭ್ಯಾಸದ ಫಲದಿಂದ ಮೇಲ್ಕಂಡ ಈ ನಾಲ್ಕೂ ದಿವ್ಯರತ್ನದ ಖಣಿಗಳ ಪರಿಚಯವು ಪರಮಾತ್ಮನ ಕೃಪೆಯಿಂದ ಸ್ವಲ್ಪಮಟ್ಟಿಗೆ ಆಯಿತು. ಆ ಒಳಿಕ ಪಂಚಮವೇದ ಅಥವಾ ಭರತಖಂಡದ ಮಹಾಕಾವ್ಯಗಳೆಂದಿನಿಸಿದ ಮಹಾಭಾರತ ಹಾಗೂ ರಾಮಾಯಣಗಳ ಹಲಕೆಲವು ಭಾಗಗಳನ್ನು ಓದಿ ತಿಳಿದುಕೊಳ್ಳುವುದು ಸಹಜವಾಗಿಯೇ ಸುಲಭವಾಯಿತು.

ರಾಮಾಯಣದ ಲಲಿತ, ಮಧುರ, ಸರಸ ಶೈಲಿ; ಮಹಾಭಾರತದ ಸಮರ್ಥ, ಸ್ಪಷ್ಟ, ತೇಜಸ್ವೀ ಶೈಲಿ; (ಭಗವದ್ಗೀತೆಯು ಮಹಾಭಾರತದ್ದೇ ಒಂದು ಭಾಗವಾದದ್ದರಿಂದ ಮಹಾಭಾರತದ ಶೈಲಿಯೂ ಇದರ ಶೈಲಿಯೂ ಒಂದೇ ಎಂದು ಬೇರೆ ಹೇಳಬೇಕಾಗಿಲ್ಲ)ಉಪನಿಷತ್ತುಗಳ ಶಾಂತ, ಗಂಭೀರ, ಧ್ಯಾನಮಗ್ನ ಶೈಲಿ; ವೇದಗಳ ಗಹನ, ಉಜ್ವಲ ಮಂತ್ರಮಯ ಅಗಾಧ ಶೈಲಿ; ಇವೆಲ್ಲ ಕಾಳಿದಾಸನ ರಮಣೀಯ, ರಮ್ಯ, ಚಿತ್ರಕ ಶೈಲಿಗಿಂತ, ಒಂದಕ್ಕಿಂತ ಒಂದು ಮೇಲಿನ ಶ್ರೇಷ್ಠ ಶೈಲಿಗಳೆಂಬುದು ಅಭ್ಯಾಸ ಮಾಡಿದಂತೆಲ್ಲಾ ಗೊತ್ತಾಗುತ್ತವೆ. ಆಹಾ ! ಏನು ಒಂದಕ್ಕಿಂತ ಒಂದು ಅಂದವಾದ ಶೈಲಿಗಳು ! ಒಂದಕ್ಕಿಂತ ಒಂದು ಮೇಲೆತ್ತರದ ಶೈಲಿಗಳು !! ಒಂದಕ್ಕಿಂತ ಒಂದು ಎತ್ತರವಾಗಿರುವ ಹಿಮಾಲಯದ ರಮ್ಯ ಶ್ರೇಣಿಗಳಂತೆ ಎಂಥ ಮನೋಹರವಾದ ದಿವ್ಯಶೈಲಿಗಳಿವು !!! ಭರತಖಂಡದ ಈ ಉತ್ತುಂಗ ಶ್ರೇಣಿಗಳಿಂದ ಬಹು ಪುರಾತನ ಕಾಲದಿಂದಲೂ ಹರಿದು ಬರುತ್ತಿರುವ ಪವಿತ್ರ ಭಾವಗಂಗಾ ಲಹರಿಗಳು ಭರತಖಂಡವನ್ನು ಇಂದಿನವರೆಗೂ ಪವಿತ್ರವಾಗಿ ಇರಿಸಿರುವವಲ್ಲವೇ ? ಈ ದಿವ್ಯ ಹಿಮಾಲಯ ಶ್ರೇಣಿಗಳೂ, ಈ ಪವಿತ್ರ ಗಂಗಾ-ಯಮುನಾ ಪ್ರವಾಹಗಳೂ ನಮಗೆ ಇನ್ನು ಮುಂದೆಯೂ ಕೂಡ ಎಂದೆಂದಿಗೂ ಬೇಕೇಬೇಕಲ್ಲವೆ ???

ವೇದದೊಳಗಿನ ಉಷಾಸೂಕ್ತಗಳು, ಉಪನಿಷತ್ತಿನೊಳಗಿನ ಬ್ರಹ್ಮಸ್ವರೂಪ ವರ್ಣನೆಗಳು, ಭಗವದ್ಗೀತೆಯ ವಿಶ್ವರೂಪ ವರ್ಣನೆಯು, ಮಹಾಭಾರತದ ಬಡಿದೆಬ್ಬಿಸುವ ಪ್ರಚೋದನೆಗಳು, ರಾಮಾಯಣದ ಕರುಳು ಕರಗಿಸುವ ಭಾವ ಲಹರಿಗಳು ಇವೆಲ್ಲ ಇಂದಿನ ಸಂಶೋಧನ-ಪರಾಯಣ ಹೃದಯ ಬುದ್ಧಿಗಳಿಗೂ ಕೂಡ ಆನಂದವನ್ನೂ ಬೆಳಕನ್ನೂ ಕೊಡದಿರಲಾರವು. ಆದ್ದರಿಂದ ಇಂದಿನವರಾದ ನಾವು ಇವೆಲ್ಲವುಗಳ ಮರ್ಮವನ್ನರಿತುಕೊಂಡು, ನಮ್ಮ ಮುಂದಿನ ನವ ನಿರ್ಮಾಣವನ್ನು ಉಜ್ವಲಗೊಳಿಸಬೇಕಲ್ಲವೇ ?

ಕಾಲವು ಚಕ್ರಾಕಾರವಾಗಿ ತಿರುಗುತ್ತದೆಯೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ಅದರ ಒಂದು ಸುತ್ತಿನ ಕೊನೆಯ ತುದಿಯು ಮುಗಿದು ಮೊದಲ ತುದಿಗೆ ಪುನಃ ಬಂದಿದೆಯೆಂದು ನಾವು ಅನ್ನಬಹುದಲ್ಲವೇ? ಹಳೆಯ ಪರಿಭಾಷೆಯಲ್ಲಿ ಕಲಿಕಾಲ ಮುಗಿದು ಸತ್ಯಯುಗದ ಹೊಸ್ತಿಲಲ್ಲಿ ಪುನಃ ಬಂದು ನಿಂತಿದ್ದೇವೆಂದು ಹೇಳಬಹುದಲ್ಲವೇ? ಆದ್ದರಿಂದ ಇಂದು ಪುನಃ ನಾವು ಉಪನಿಷತ್ತಿನ ಋಷಿಗಳಂತೆ "ಅಸತ್ತಿನಿಂದ ನಮ್ಮನ್ನು ಸತ್ತಿಗೆ ಒಯ್ದು ಮುಟ್ಟಿಸು, ಕತ್ತಲೆಯಿಂದ ನಮ್ಮನ್ನು ಬೆಳಕಿಗೆ ಒಯ್ದು ಮುಟ್ಟಿಸು, ಮೃತ್ಯುವಿನಿಂದ ನಮ್ಮನ್ನು ಅಮರತ್ವಕ್ಕೆ ಒಯ್ದು ಮುಟ್ಟಿಸು" ಎಂದು ಪರಮಾತ್ಮನಲ್ಲಿ ಪ್ರಾರ್ಥಿಸಬೇಕಲ್ಲವೇ? ಆವಾಗಲೇ ವೇದಕಾಲದ ಋಷಿಗಳು ಹಾಡಿದಂತೆ "ಗಾಳಿಗಳು ಆನಂದಾಮೃತವನ್ನೇ ಬೀಸುವವು. ಹೊಳೆಗಳು ಆನಂದಾಮೃತವನ್ನೇ ಹರಿಯಿಸುವವು. ಪೃಥಿವಿಯ ಹುಡಿಯು ಕೂಡಾ ಆನಂದಾಮೃತವನ್ನೇ ಹೊರಸೂಸುವದು, ಆಕಳುಗಳು ಆನಂದಾಮೃತವನ್ನೇ ಕರೆಯುವವು, ತರು ಮರಗಳೂ ಆನಂದಮಯ ಅಮೃತವನ್ನೇ ಸುರಿಸುವವು" ಅಲ್ಲವೇ ? ಇದಕ್ಕಿಂತ ಹೆಚ್ಚಿಗೆ ನಮಗೇನು ಬೇಕು ? ನಮ್ಮ ಅಂತರ್ಬಾಹ್ಯ ಜೀವನಗಳೆರಡೂ ಆನಂದಮಯ, ಅಮೃತಮಯವಾಗುವದಕ್ಕಿಂತ ಹೆಚ್ಚಿನ ಬೇಡಿಕೆಯು ನಮ್ಮದೇನಿದೆ ? ಬಹಳ ಬಲ್ಲವರಾದ ತೀರ ಹಿಂದಿನ ಹಿರಿಯರು ಬೇಡಿದ ಪ್ರಾರ್ಥನೆಗಳಲ್ಲಿ ಎಂದೆಂದಿಗೂ ಮುಗಿದು ಹೋಗಲಾರದ ಬೀಜ ಮಾತುಗಳು ಅನೇಕವಾಗಿ ಇವೆ. ಅನಂತ ಶಾಶ್ವತವನ್ನು ಪಡೆದವರ ವಾಣಿಯಲ್ಲಿ ಅನಂತ ಶಾಶ್ವತ ವಸ್ತುಗಳು ಎಷ್ಟೋ ಇರಬೇಕೆಂದು ಸಹಜ ಸಿದ್ಧವಾದ ಮಾತಾಗಿದೆಯಲ್ಲವೇ ? "ಮಮೇದಂ ಬ್ರಹ್ಮ ರಕ್ಷತಿ ಭಾರತಂ ಜನಂ" (ನನ್ನ ಈ ವಾಣಿಯು ಭಾರತ ಜನರನ್ನು ರಕ್ಷಿಸುವದು) ಎಂದು ವೇದದಲ್ಲಿ ನುಡಿದ ವಿಶ್ವಾಮಿತ್ರ ಋಷಿಯ ಆತ್ಮವಿಶ್ವಾಸ ಎಂತಹದೆಂಬುದನ್ನು ನೆನೆಸಿದರೆ ಇಂದಿಗೂ ಅಂಥವರ ನುಡಿಯ ಮೇಲೆ ನಾವು ವಿಶ್ವಾಸವನ್ನಿಟ್ಟು ಸಾಗುವದರಲ್ಲಿ ಅರ್ಥವಿದೆಯೆಂದು ಸ್ಪಷ್ಟವಾಗಿ ಅನಿಸುವದಲ್ಲವೇ ? ಆದ್ದರಿಂದ ವೇದದಂಥ ವಾಙ್ಮಯವು ಪುನಃ ಇಂದು ಭೂಮಿಯ ಮೇಲೆ ಬರಲಿದೆಯೆಂಬ ಶ್ರೀ ಅರವಿಂದರ ವಾಣಿಯು ನಮಗೆ ನಾಳಿನ ಕಾಲದ ಬಗೆಗೆ ಹೆಚ್ಚಿನ ಭರವಸೆಯನ್ನೂ ಹಿಗ್ಗನ್ನೂ ಹುಟ್ಟಿಸುವದಿಲ್ಲವೇ ?

ಇದೆಲ್ಲ ಸರಿ, ಆದರೆ ಹಲ್ಲಿಗೆ ಹಣಿಯದ ಉಕ್ಕಿನ ಕಡಲೆಯಂತಿರುವ ವೇದ ವಾಙ್ಮಯವನ್ನು ತಿಳಿದುಕೊಳ್ಳುವದು ಹೇಗೆ ? ಎಂಬ ಪ್ರಶ್ನೆಯು ತಲೆಯೆತ್ತುವದು ಸಹಜ. ಅದಕ್ಕೆ ಶ್ರೀ ಅರವಿಂದರು ಒಂದು ಯುಕ್ತಿಯನ್ನು ಹೇಳಿದ್ದಾರೆ. ಅದೇನೆಂದರೆ : "ವೇದದಲ್ಲಿ ತೀರ ಸುಲಭವಾಗಿ ಅರ್ಥವಾಗುವ ಪಂಕ್ತಿಗಳು ಎಷ್ಟೋ ಇವೆ." ಉದಾಹರಣಾರ್ಥವಾಗಿ ಉಪನಿಷತ್ತುಗಳಲ್ಲಿ ಆಧಾರ ವಾಕ್ಯಸ್ವರೂಪದಿಂದ ಬಂದಿರುವ "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಮೊದಮೊದಲಾದ ವೇದ ವಾಕ್ಯಗಳ ಅರ್ಥವಂತೂ ಈಗಾಗಲೇ ನಮಗೆ ಸುಲಭವಾಗಿ ಬಿಟ್ಟಿದೆ. ಇಂಥ

ಸುಲಭವಾಗಿರುವ ವಾಕ್ಯಗಳನ್ನೆಲ್ಲ ವೇದದೊಳಗಿಂದ ಆರಿಸಿಕೊಂಡು ಮೊದಲಿಗೆ ಅಭ್ಯಾಸ ಮಾಡಬೇಕು. ಆಮೇಲೆ ಅವುಗಳ ಸಹಾಯದಿಂದ ಉಳಿದ ಭಾಗವನ್ನೆಲ್ಲ ತಿಳಿದುಕೊಳ್ಳುವದಕ್ಕೆ ಸಹಾಯ ಸಿಗುತ್ತದೆ. ಹಾಗೆ ತಿಳಿದಷ್ಟರ ಸಹಾಯದಿಂದ ತಿಳಿಯದ್ದರ ಕಡೆಗೆ ಸಾಗುತ್ತ ಹೋದರೆ ಒಟ್ಟಾರೆ ಇಡಿ ವೇದದ ಬಹುಭಾಗವು ತಿಳಿಯಲಿಕ್ಕೆ ಸಾಧ್ಯವಾಗುತ್ತದೆ. ಕೊನೆಗೂ ತಿಳಿಯಲಾರದಂಥ ಕೆಲವು ಅಂಶಗಳು ಉಳಿದರೆ ಪುರಾತನ ಭಾಷ್ಯಗಳ ಸಹಾಯದಿಂದ ಶಬ್ದಾರ್ಥವನ್ನು ಸ್ಪಷ್ಟಮಾಡಿಕೊಳ್ಳ ಬೇಕು. ಭಾವಾರ್ಥವನ್ನಂತೂ ಈ ಮೊದಲು ನಮಗೆ ಲಭಿಸಿದ ಜ್ಞಾನದಿಂದಲೇ ಹೊಂದಿಸಿಕೊಳ್ಳಬೇಕು. ಹೀಗೆ ಮಾಡಿದರೆ ಇಡೀ ವೇದವನ್ನೇ ನಮ್ಮಿಂದ ನಾವೆ ತಿಳಿದುಕೊಳ್ಳಲು ಸಮರ್ಥರಾಗುವೆವು.

ನೋಡಿರಿ, ಇದು ಎಷ್ಟು ಸುಲಭ ಉಪಾಯವಿದೆ ! ನಮಗೆ ತಿಳಿಯಬಾರದ ವಾಙ್ಮಯವನ್ನೆಲ್ಲ ತಿಳಿದುಕೊಳ್ಳುವದಕ್ಕೆ ನಾವು ಇದೇ ರೀತಿಯಿಂದ ಪ್ರಯತ್ನಿಸಿದರೆ "ತಿಳಿಯುವದಿಲ್ಲ, ತಿಳಿಯುವದಿಲ್ಲ" ಎಂಬ ನಮ್ಮ ತಳಮಳಿಕೆಯೇ ತಪ್ಪಿಹೋಗುವದ ರಲ್ಲಿ ಸಂಶಯವಿಲ್ಲ. ನಮಗೆ ಆಗಬೇಕಾದ ಸಂಸ್ಕಾರವೆಂಬುದು ಇದೇ. ಇಷ್ಟಾದರೆ ಆಗ ನಮಗೆ ಎಲ್ಲವೂ ಸುಲಭವಾಗಿ ಬಿಡುವದು. (ಶ್ರೀ ಅರವಿಂದರ "ವೇದರಹಸ್ಯದ" ಹಿಂದೀ ಅನುವಾದವು ಇದೀಗ ಪ್ರಕಟವಾಗಿದ್ದು ಇಂಥ ಗ್ರಂಥಗಳನ್ನೋದುವದರಿಂದ ನಮಗೆ ಭರತಖಂಡದ ಬಹು ಪುರಾತನ ಜ್ಞಾನ ಭಾಂಡಾರದ ಬೀಗಮುದ್ರೆ ಯನ್ನೊಡೆಯಲಿಕ್ಕೆ ಸಾಧ್ಯವಾಗುತ್ತದೆ. ಅದರಿಂದ ನಮ್ಮ ಮುಂದಿನ ದಾರಿಯು ಸಹ ಸುಲಭವಾಗುತ್ತದೆ. ಅರ್ಥಾತ್ ಇನ್ನು ಮುಂದೆ ಬರಲಿರುವ ವೇದದಂಥ ಸಾಹಿತ್ಯದ ಅರ್ಥ ಮಾಡಿಕೊಳ್ಳಲಿಕ್ಕೆ ನಮಗೆ ಶಕ್ಯವಾಗುವದು.)

೬

ಇನ್ನೊಂದು ವಿಷಯವೆಂದರೆ ಶ್ರೀ ಅರವಿಂದಾಶ್ರಮದ ಸಾಧಕ ಕವಿಗಳೂ ಕೂಡ ಆದ ಶ್ರೀ ಅರವಿಂದರ ಪತ್ರವ್ಯವಹಾರ. ಆಧುನಿಕ ಕವಿಗಳಿಗೆ, ಸಾಹಿತಿಗಳಿಗೆ, ವಿಮರ್ಶಕ ರಿಗೆ ಇದೊಂದು ಅಮೌಲ್ಯ ಬೊಕ್ಕಸ. ೧೫ ವರುಷಗಳ ಹಿಂದೆ ಆಶ್ರಮದ ಹಿರಿಯ ಸಾಧಕರಲ್ಲೊಬ್ಬರಾದ (ಹಾಗು ಪ್ರಖ್ಯಾತ ಕವಿಗಳೂ ಸಂಗೀತಜ್ಞರೂ ಆದ) ಶ್ರೀ ದಿಲೀಪಕುಮಾರ ರಾಯರವರ "ಅನಾಮೀ" ಹಾಗೂ 'ಸೂರ್ಯಮುಖಿ" ಎಂಬ ಕವಿತಾ ಸಂಗ್ರಹಗಳ ಪರಿಶಿಷ್ಟದಲ್ಲಿ ಅರವಿಂದರಿಗೂ ಅವರಿಗೂ (ಶ್ರೀ ದಿಲೀಪಕುಮಾರ ರಾಯರಿಗೂ) ಆದ ಅಂಥ ನೂರಾರು ಪತ್ರಗಳ ಪತ್ರವ್ಯವಹಾರವನ್ನು ಪ್ರಕಟಿಸಲಾಗಿ ದ್ದಿತು. ಅವುಗಳನ್ನೋದಿದಾಗ ನನಗೆ "ರತ್ನ ಪರೀಕ್ಷೆಯೂ, ಕಾವ್ಯ ಪರೀಕ್ಷೆಯೂ ಒಂದೇ ಆಗಿದೆ" ಎಂದು ಅನಿಸಿತು. ಅಷ್ಟು ಕೂಲಂಕಷ ವಿಚಾರ ಈ ಪತ್ರಗಳಲ್ಲಿದೆ. ಇದರಿಂದ ನನಗೆ ಎಂದಿಗೂ ಗೊತ್ತಿಲ್ಲದ ಹೊಸ ಕಣ್ಣುಗಳೇ ತೆರೆದಂತಾದುವು.

ಇಂಥ ಅನೇಕ ಪತ್ರಗಳಿಂದ ಕೂಡಿದ ೩೫೦ ಪುಟಗಳ ಒಂದು ಸ್ವತಂತ್ರ ಗ್ರಂಥವೇ ಇದೀಗ ತಾನೆ ಮೊನ್ನೆ ಮೊನ್ನೆ (ನವ್ಹಂಬರ ೧೯೪೯ ರಲ್ಲಿ) ಪ್ರಕಟವಾಗಿದೆ.

ಅದರ ಹೆಸರು "ಶ್ರೀ ಅರವಿಂದರ ಪತ್ರಗಳು ಸಂಪುಟ ೩" (ಕಾವ್ಯ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ್ದು) ಇದರಲ್ಲಿ ಒಂಬತ್ತು ವಿಭಾಗಗಳಿವೆ. ಅವುಗಳು ಯಾವುವೆಂದರೆ ೧. ಕಾವ್ಯದ ಕ್ರಮ, ರೂಪವಸ್ತು; ೨. ಕಾವ್ಯ ಪ್ರತಿಭೆ ಹಾಗೂ ದರ್ಶನಗಳ ಉಗಮಗಳು, ಅನುಭಾವಕಾವ್ಯ ಮತ್ತು ಆಧ್ಯಾತ್ಮಿಕ ಕಾವ್ಯ; ೩. ಕಾವ್ಯದ ಛಂದಸ್ಸು ಮತ್ತು ರಚನೆ: ೪. ಕಾವ್ಯಗಳ ಅನುವಾದ; ೫. ಆಧುನಿಕ ಕಾವ್ಯ; ೬. ಭಾರತೀಯರು ಬರೆದ ಇಂಗ್ಲೀಷ ಕವಿತೆಗಳು: ೭. ಕಾವ್ಯ ಮತ್ತು ಕಲೆಗಳ ಬಗೆಗೆ ಮೆಚ್ಚಿಕೆ; ೮. ಕಾವ್ಯ ನಿರ್ಮಾಣ ಹಾಗೂ ಯೋಗ ಸಾಧನದಲ್ಲಿ ಸಾಹಿತ್ಯ ಮೊದಲಾದವುಗಳ ಪ್ರಯೋಜನ; ೯. ಕವಿಗಳು ಅನುಭಾವಿಗಳು ಹಾಗೂ ಮೇಧಾವಿಗಳು.

ಮೇಲ್ಕಾಣಿಸಿದ ಗ್ರಂಥದ ವಿಭಾಗಗಳ ಹೆಸರುಗಳ ಮೇಲಿಂದಲೇ ಅದರ ವಿಷಯ ವ್ಯಾಪ್ತಿಯ ವಿಸ್ತಾರದ ಕಲ್ಪನೆಯು ಆಗುವಂತಿದೆ. ಅಲ್ಲದೆ ಇದರೊಳಗಿನ ಕೆಲವು ಪತ್ರಗಳು ತೀರ ಇತ್ತೀಚಿಗೆ ಅಂದರೆ ಕ್ರಿಸ್ತಾಬ್ದದ ೧೯೪೬-೪೭ ರಲ್ಲಿ ಬರೆದಂಥವುಗಳಾಗಿವೆ. ಅಲ್ಲದೆ ಅವು ಬಹಳ ದೊಡ್ಡದೊಡ್ಡವಾಗಿವೆ. ಒಂದೊದು ೨೦–೩೦ ಪುಟಗಳವು. ಆದುದರಿಂದ ಈ ಪುಸ್ತಕವನ್ನು ಪ್ರತಿಯೊಬ್ಬ ಸಾಹಿತ್ಯ ವಿಚಾರಿಯೂ ಓದಬೇಕಾದುದು ಅತ್ಯಾವಶ್ಯಕ.

ಈ ಪುಸ್ತಕದೊಳಗಿನ ಒಂದು ವಿಷಯವನ್ನು ಮಾತ್ರ ನಾನಿಲ್ಲಿ ಸೂಚಿಸುತ್ತೇನೆ. ಅದಾವುದೆಂದರೆ– "ಅನುಭಾವ ಕಾವ್ಯಗಳಲ್ಲಿ ಮುಖ್ಯವಾದ ಪ್ರಕಾರಗಳು ಎರಡು : (೧) ಅಂತರ್ ಹೃದಯದಿಂದ (ಹೃತ್ಕಮಲದಿಂದ) ಬಂದ ಕಾವ್ಯ ಹಾಗೂ (೨) ಮಸ್ತಕೋರ್ಧ್ವದಿಂದ (ಸಹಸ್ರದಳ ಕಮಲದಿಂದ ಹಾಗೂ ಅದಕ್ಕೂ ಮೇಲಿನಿಂದ) ಬಂದ ಕಾವ್ಯ. ಇವೆರಡರಲ್ಲಿ ಮೊದಲನೆಯ ಪ್ರಕಾರದ ಕವಿತೆಗಳು ಅತ್ಯಂತ ಮಧುರವಾಗಿಯೂ ಸರಲವಾಗಿಯೂ ನಯವಾಗಿಯೂ ಇರುತ್ತವೆ. ಆದರೆ ಎರಡನೆಯ ಪ್ರಕಾರದ ಕವಿತೆಗಳಲ್ಲಿ ಔನ್ನತ್ಯ, ತೇಜ, ಗಂಭೀರತೆ, ವಿಶಾಲತೆಗಳು ತುಂಬಿ ತುಳುಕುತ್ತಿರುತ್ತವೆ." "ಎರಡನೆಯ ಪ್ರಕಾರದಲ್ಲಿ, ಒಮ್ಮೊಮ್ಮೆ ತೀರ ಸಾದಾ ವಿಷಯಗಳನ್ನು ಸಹ ಕವಿತೆಯ ವಸ್ತುವಾಗಿ ಆರಿಸಿಕೊಂಡಿರುವದುಂಟು. ಏಕೆಂದರೆ ಅದು ಆತ್ಮದೃಷ್ಟಿ, ಆತ್ಮನಿಗೆ ಎಲ್ಲದರಲ್ಲಿಯೂ ಪರಮಾತ್ಮನ ವಾಸ್ತವ್ಯವು ಗೋಚರಿಸುತ್ತದೆ. ಸಾಮಾನ್ಯ ವಸ್ತುವಿನಲ್ಲಿ ಕೂಡ ಆ ದೃಷ್ಟಿಗೆ ಅನಂತತೆಯೂ ದಿವ್ಯ ಸೌಂದರ್ಯವೂ ಅನುಭವಕ್ಕೆ ಬರುತ್ತವೆ. ಹೀಗೆಂದೊಡನೆ ಸಾಮಾನ್ಯತೆಯ ಅರಿವೇ ಆ ದೃಷ್ಟಿಯವರಿಗಿರುವದಿಲ್ಲವೆಂತಲ್ಲ. ಆದರೆ ಸಾಮಾನ್ಯತೆಯಲ್ಲಿ ಕೂಡ ಹುದುಗಿದ ಅಸಾಮಾನ್ಯತೆಯ ಸುಳಿವು ಅವರಿಗೆ ಹತ್ತಿರುತ್ತದೆ. (ಉದಾಹರಣಾರ್ಥವಾಗಿ, ಬಂಗಾಲಿ ಚಿತ್ರಗಳನ್ನು ನಾವು ನೆನಪಿಗೆ ತಂದುಕೊಳ್ಳಬಹುದೆಂದು ನನ್ನ ಅನಿಸಿಕೆ.) ಈ ಎರಡನೆಯದರಲ್ಲಿ ಅನೇಕ ಉಪವಿಭಾಗಗಳಿವೆ. ಒಂದು ಊರ್ಧ್ವವಿಚಾರ, ಒಂದು ಊರ್ಧ್ವದರ್ಶನ, ಊರ್ಧ್ವಶ್ರುತಿ ಅಥವಾ ಪ್ರೇರಣೆ, ಒಂದು ಎಲ್ಲವನ್ನೂ ತನ್ನಲ್ಲಿ ಹಾಗೂ

ತನ್ನನ್ನು ಎಲ್ಲದರಲ್ಲಿ ಕಾಣುವ ಊರ್ಧ್ವ ಅನುಭವ ಮುಂತಾದುದಾಗಿ ಊರ್ಧ್ವ ಭೂಮಿಕೆಯಲ್ಲಿ ಅನೇಕ ಉಪಶ್ರೇಣಿಗಳಿವೆ. ಈ ಎಲ್ಲ ಶ್ರೇಣಿಗಳಿಂದ ಬರುವ ಕವಿತೆಗಳ ಭಿನ್ನ ಭಿನ್ನ ಲಕ್ಷಣಗಳನ್ನೆಲ್ಲ ಶ್ರೀ ಅರವಿಂದರು ತಮ್ಮ ಮೇಲ್ಕಾಣಿಸಿದ ಪತ್ರಗಳಲ್ಲಿ ವಿವರಿಸಿದ್ದಾರೆ (ಪುಟ ೧೧೬).

ಒಟ್ಟಾರೆ ಮೊದಲನೆಯ ಪ್ರಕಾರಕ್ಕೆ ಭಕ್ತಿದೃಷ್ಟಿ ಎಂದೂ ಎರಡನೆಯ ಪ್ರಕಾರಕ್ಕೆ ಧ್ಯಾನದೃಷ್ಟಿ ಅಥವಾ ದಿವ್ಯದೃಷ್ಟಿ ಎಂದೂ ನಾವು ಅರ್ಥವನ್ನು ಕಲ್ಪಿಸಿಕೊಂಡರೆ, ನಮಗೆ ಈ ಎರಡೂ ವಿಧದ ಕವಿತೆಗಳ ಪರಸ್ಪರ ವ್ಯತ್ಯಾಸವನ್ನು ಗುರುತಿಸುವದಕ್ಕೆ ಸುಲಭವಾಗುವದೆಂದು ನನ್ನ ಅನಿಸಿಕೆ. ನಾವು ಮೊದಲನೆಯ ಪ್ರಕಾರದ ಅನುಭಾವ ಕಾವ್ಯಕ್ಕೆ ರಾಮಾಯಣವನ್ನೂ ಎರಡನೆಯ ಪ್ರಕಾರದ್ದಕ್ಕೆ ಮಹಾಭಾರತ, ಭಗವದ್ಗೀತೆ, ಉಪನಿಷತ್ತು ಮೊದಲಾದವುಗಳನ್ನೂ ಉದಾಹರಣಸ್ವರೂಪವಾಗಿ ತೆಗೆದುಕೊಳ್ಳಬಹುದೆಂದು ನನಗೆ ಅನಿಸುತ್ತದೆ.

ಈ ಮಹಾಗ್ರಂಥಗಳೆಲ್ಲ ಎರಡನೆಯ ಪ್ರಕಾರಕ್ಕೆ ಸಂಬಂಧಿಸಿದ ಅನೇಕ ಉಪಶ್ರೇಣಿಗಳಲ್ಲಿ ಒಂದೊಂದು ಶ್ರೇಣಿಗೆ ಒಂದೊಂದು ಉದಾಹರಣಸ್ವರೂಪವಾಗಬಹುದು. ನಮ್ಮ ಕನ್ನಡನಾಡಿನ ಅಧ್ಯಾತ್ಮಿಕ ವಾಙ್ಮಯದಲ್ಲಿ ಶ್ರೀ ಬಸವಣ್ಣನವರ ವಚನವನ್ನೂ, ಪುರಂದರದಾಸರ ಕೀರ್ತನೆ(ಪದ)ಗಳನ್ನೂ ಮೊದಲನೆಯ ವಿಭಾಗದಲ್ಲಿಯೂ; ಶ್ರೀ ಪ್ರಭುದೇವರ ವಚನಗಳನ್ನೂ. ಕನಕದಾಸರ ಕೀರ್ತನೆ(ಪದ)ಗಳನ್ನೂ ಎರಡನೆಯ ವಿಭಾಗದಲ್ಲಿಯೂ ಸೇರಿಸಬಹುದೆಂದು ನನಗೆ ಅನಿಸುತ್ತದೆ. ಇದರಂತೆಯೆ ಬಸವರಾಜದೇವರ ರಗಳೆ, ಹರಿಕಥಾಮೃತಸಾರವನ್ನು ಮೊದಲನೆಯ ವಿಭಾಗದಲ್ಲಿಯೂ, ಭರತೇಶವೈಭವ, ಶೂನ್ಯಸಂಪಾದನೆ, ಪ್ರಭುಲಿಂಗಲೀಲೆ ಸುಳಾದಿಗಳು ಹಾಗೂ ಉಗಾಭೋಗಗಳನ್ನು ಎರಡನೆಯ ವಿಭಾಗದಲ್ಲಿಯೂ ಸೇರಿಸಬಹುದೆಂದು ತೋರುತ್ತದೆ. ಸಂಸ್ಕೃತ ಅಧ್ಯಾತ್ಮ ಸಾಹಿತ್ಯದಲ್ಲಿ ವೇದಗಳ ಕವಿತೆ ಬಹಳ ಮೇಲ್ಮಟ್ಟಕ್ಕೆ ಉದಾಹರಣಸ್ವರೂಪವಾಗಿ ನಿಲ್ಲುತ್ತಿರಬಹುದೆಂಬುದಂತೂ ಸ್ಪಷ್ಟವೇ ಇದೆ.

೭

ಶ್ರೀ ಅರವಿಂದರ "ಆರು ಕವಿತೆಗಳು" ಮತ್ತು "ಕವಿತೆಗಳು" ಎಂಬ ಎರಡು ಚಿಕ್ಕ ಹೊತ್ತಿಗೆಗಳಲ್ಲಿ ಆರಾರು ಚಿಕ್ಕ ಕವಿತೆಗಳಿದ್ದು, ಅವು ವೇದಸೂಕ್ತಗಳಂತೆಯೇ– ಸಣ್ಣ ಸಣ್ಣವಾಗಿದ್ದರೂ– ಮಹಾ ಗಹನ ವಿಷಯಗಳಿಂದ ಕೂಡಿದವುಗಳಾಗಿವೆ. ನನಗೆ ವೇದದ ಸೂಕ್ತಗಳನ್ನು (ಅನುವಾದಗಳ ಸಹಾಯದಿಂದ) ತಿಳಿದುಕೊಳ್ಳಲಿಕ್ಕೆ ಎಷ್ಟು ದೀರ್ಘಕಾಲ ಹಿಡಿಯಿತೋ, ಶ್ರೀ ಅರವಿಂದರ ಈ ಚಿಕ್ಕ ಕವಿತೆಗಳನ್ನು ತಿಳಿದುಕೊಳ್ಳಲಿಕ್ಕೂ (ಇವುಗಳಲ್ಲಿ ಮೊದಲಿನ 'ಆರು ಕವಿತೆಗಳು' ಎಂಬುದು ಅನುವಾದ ಸಹಿತವಾಗಿಯೇ ಪ್ರಕಟವಾಗಿದೆ.) ನನಗೆ ಅಷ್ಟೇ ಕಾಲಾವಧಿ ಹಿಡಿಯಿತು. ಇತ್ತೀಚೆಗೆ ಪ್ರಕಟವಾದ ಶ್ರೀ ಅರವಿಂದರ "ನಾಟಕಗಳು ಹಾಗೂ ಕವಿತೆಗಳ ಸಂಗ್ರಹ" (ಕಲೆಕ್ಟೆಡ್

ಪ್ಲೇಜ್ ಆ್ಯಂಡ್ ಪೋಯಮ್ಸ್) ಎಂಬ ಎರಡು ದೊಡ್ಡ ಸಂಪುಟಗಳಲ್ಲಿ ಶ್ರೀ ಅರವಿಂದರು ಪಾಂಡಿಚೇರಿಗೆ ಬಂದ ಬಳಿಕ ಬರೆದ ಕವಿತೆಗಳೆಂದು ಮೇಲ್ಕಾಣಿಸಿದ ೧೨ ಕವಿತೆಗಳನ್ನೇ ಸೇರಿಸಿದ್ದಾರೆ. ಇಷ್ಟೇ ಅಲ್ಲ. "ಶ್ರೀ ಅರವಿಂದರು ಪಾಂಡಿಚೇರಿಗೆ ಬಂದ ಬಳಿಕ ಬರೆದ ಕವಿತೆಗಳು ಈ ಎರಡು ಸಂಪುಟಗಳ ಸಂಗ್ರಹಕ್ಕಿಂತ ಹೆಚ್ಚಿಗಿವೆ. ಆದರೆ ಅವು ಪ್ರಕಟವಾಗುವ ಕಾಲವು ಇನ್ನೂ ಬಂದಿಲ್ಲ" ಎಂದು ಪ್ರಸ್ತಾವನೆಯಲ್ಲಿ ಬರೆದಿದ್ದಾರೆ. ನಿಜವಾಗಿಯೂ ವೇದಸೂಕ್ತಗಳನ್ನು ತಿಳಿದುಕೊಳ್ಳುವದೂ, ಶ್ರೀ ಅರವಿಂದರ ಈ ಕವಿತೆಗಳನ್ನು ತಿಳಿದುಕೊಳ್ಳುವದೂ ಒಂದೇ ಆಗಿರುವದರಿಂದ ಇವರ ಇನ್ನೂ ಪ್ರಕಟವಾಗದಿರುವ ಬಹು ಕವಿತೆಗಳ ವಿಷಯದಲ್ಲಿ ಮೇಲ್ಕಾಣಿಸಿದಂತೆ ಕಾರಣವನ್ನು ಹೇಳಿದ್ದು ಯಥಾರ್ಥವೇ ಆಗಿದೆಯೆಂದು ಸ್ಪಷ್ಟವಾಗಿ ಅನಿಸುತ್ತದೆ.

ಶ್ರೀ ಅರವಿಂದರು ಪಾಂಡಿಚೇರಿಗೆ ಬಂದ ಬಳಿಕ ಅನೇಕ ದಿವಸಗಳಿಂದ ಬರೆಯುತ್ತಿದ್ದ "ಸಾವಿತ್ರಿ" ಮಹಾಕಾವ್ಯವು ಈಗ ಮುಗಿದಿದ್ದು ಅದರ ಮೂರು ಪರ್ವಗಳು ಮಾತ್ರ ಈಗ ಬಿಡಿ ಬಿಡಿ ಅಧ್ಯಾಯಗಳ ರೂಪದಿಂದ ಪ್ರಕಟವಾಗಿವೆ. (ಎರಡನೆಯ ಪರ್ವವು ಮಾತ್ರ ಬಿಡಿ ಬಿಡಿ ಅಧ್ಯಾಯಗಳ ರೂಪದಿಂದ ಪ್ರಕಟವಾಗಿರದೆ ಎರಡೇ ಭಾಗಗಳಲ್ಲಿ ಪ್ರಕಟವಾಗಿದೆ.) ಇದರ ಕೆಲವೇ ಪಂಕ್ತಿಗಳಾದರೂ ನಮಗೆ ನೋಡಲಿಕ್ಕೆ ಸಿಗಬಹುದೇ ಎಂದು ಕೆಲವು ವರುಷಗಳ ಹಿಂದೆ ನಮ್ಮ ಜೀವವು ಹಾತೊರೆಯುತ್ತಿತ್ತು. ಆದರೆ ಇಡೀ ಗ್ರಂಥದ ನಾಲ್ಕಾಂಶದಷ್ಟು ಭಾಗವು ಪ್ರಕಟವಾಗಿದೆಯೆಂಬ ಮಾತು ನಮ್ಮ ಹೃದಯಕ್ಕೆ ಅಷ್ಟು ಆನಂದವನ್ನೀಯಲಾರದು !

ವೇದದ ಸೃಷ್ಟ್ಯುತ್ಪತ್ತಿಯ ಸೂತ್ರಗಳ ಹಾಗೂ ಜಗತ್ತಿನ ಆದಿಗ್ರಂಥಗಳಲ್ಲೊಂದೆಂದು ಥಿಯಾಸಫಿಸ್ಟರು ಹೇಳುತ್ತಿರುವ "ಬುಕ್ ಆಫ್ ಝೋನ್" ಮೊದಲಾದುವನ್ನು ಓದುವಾಗ ಹೇಗೆ ನಾವು ಈ ಲೋಕದಲ್ಲಿಯೇ ಇರದೆ ಎಲ್ಲಿಯೋ ಲೋಕಾತೀತ ಪ್ರದೇಶದಲ್ಲಿ ನಿಂತುಕೊಂಡಿರುವೆವೆಂದು ಅನಿಸುವದೋ, ಶ್ರೀ ಅರವಿಂದರ ಈ "ಸಾವಿತ್ರಿ" ಮಹಾಕಾವ್ಯವನ್ನು ಓದುತ್ತಿರುವಾಗಲೂ ಹಾಗೆಯೇ ಅನಿಸುತ್ತದೆ.

ರಾಮಾಯಣ ಮಹಾಭಾರತಗಳಂತೆ ೧೨ ಪರ್ವಗಳಿಂದ ಕೂಡಿದ ಈ "ಸಾವಿತ್ರಿ" ಮಹಾಕಾವ್ಯವು ಸಂಪೂರ್ಣ ಪ್ರಕಟವಾದಾಗ, ಅವು (ರಾಮಾಯಣ ಮಹಾಭಾರತಗಳು) ಹಿಂದಿನ ಯುಗದ ಮಹಾಕಾವ್ಯಗಳಾದರೆ ಇದು (ಸಾವಿತ್ರಿ ಮಹಾಕಾವ್ಯವು) ಇಂದಿನ ಯುಗದ ಮತ್ತು ಮುಂದಿನ ಯುಗದ ಮಹಾಕಾವ್ಯವಾಗಿದೆಯೆಂದು ಓದಿದವರಿಗೆಲ್ಲ ಸ್ಪಷ್ಟವಾಗಿ ಅನಿಸುವದರಲ್ಲಿ ಸಂದೇಹವಿಲ್ಲ.

ಹೀಗೆಂದ ಬಳಿಕ ನಾಳಿನ ಕಾವ್ಯವು ವೇದದ ಜಾತಿಗೆ ಸೇರಿದಂತಹದು ಬರುವದೆಂದು ಶ್ರೀ ಅರವಿಂದರು ತಮ್ಮ "ನಾಳಿನ ಕಾವ್ಯ" (ಫ್ಯೂಚರ್ ಪೋಯಟ್ರಿ)ದಲ್ಲಿ

ಪ್ರತಿಪಾದಿಸಿದ ಮಾತಿಗೆ ಅವರ ಈ ದಿವ್ಯ ಕಾವ್ಯಗಳೇ ಸಾಕ್ಷಿಯಾಗಿವೆಯೆಂದು ಸ್ಪಷ್ಟವಾಗಿ ಅನಿಸುವದಿಲ್ಲವೆ ?

ಹೀಗೆ ಶ್ರೀ ಅರವಿಂದರು ನಾಳಿನ ಕಾಲದ ಸರ್ವ ಮಹಾವಿಷಯಗಳಿಗೆ ಆದರ್ಶ ಸ್ವರೂಪವಾಗಿರುವದರಿಂದ ಸಾಹಿತ್ಯಕ್ಕೆ ಸಂಬಂಧಿಸಿದ ಅವರ ಗ್ರಂಥಗಳನ್ನೆಲ್ಲ ಸಾಹಿತ್ಯಾಭಿಮಾನಿಗಳಾದ ನಾವು ಓದಿಕೊಂಡು ನಮ್ಮ ಮುಂದಿನ ಸಾಹಿತ್ಯ ನಿರ್ಮಾಣದ ಮಾರ್ಗವನ್ನು ಕಂಡುಕೊಳ್ಳುವದು ಅಗತ್ಯವಾಗಿದೆಯೆಂದು ನಾನಿಲ್ಲಿ ನನ್ನ ಅನಿಸಿಕೆಯನ್ನು ತಮ್ಮೆಲ್ಲರಲ್ಲಿ ವಿನಮ್ರ ಭಾವದಿಂದ ನಿವೇದಿಸುವೆನು.

೮

ಒಟ್ಟಾರೆ, ಇನ್ನೆಲ್ಲ ಹೆಚ್ಚಾಗಿ ಅನುಭಾವ ಕವಿತೆಗಳ ವಿಷಯದಲ್ಲಿಯೇ ಹೇಳಿದ ಹಾಗಾಯಿತು. ಆದರೆ ಲೌಕಿಕ ಕವಿತೆಗಳ ವಿಷಯವು ಎಲ್ಲಿಗೆ ಮುಟ್ಟತಕ್ಕದ್ದು ಎಂಬ ಪ್ರಶ್ನೆಯು ಏಳುವುದು ಸಹಜವೇ ಆಗಿದೆ. ಅನುಭಾವ ಅಥವಾ ಅಧ್ಯಾತ್ಮವೆಂದ ಕೂಡಲೆ ಜಾಗತಿಕ ಜೀವನವನ್ನು ಅಲ್ಲಗಳೆಯುವದೇ ಎಂಬ ಅರ್ಥವು ಮಧ್ಯಕಾಲದಿಂದ ಬಳಕೆಯಲ್ಲಿ ಬಂದಿದ್ದರಿಂದಲೇ ಇಂಥ ಸಂಶಯಕ್ಕೆ ಆಸ್ಪದ ಉಂಟಾಗಿದೆ. ಆದರೆ ಮನುಗಳೂ, ಮುನಿಗಳೂ, ಮಾನವಕೋಟಿಯ ಹಿತಕ್ಕಾಗಿಯೇ ಜೀವಿಸಿದ್ದರೆಂಬುದು ಗೊತ್ತಾಗುತ್ತದೆ. ವೇದಕಾಲದ ಋಷಿಗಳಿಗೆ ಹೆಂಡಿರೂ, ಮಕ್ಕಳೂ ಇದ್ದರೆಂಬುದು ಸರ್ವರಿಗೆ ಗೊತ್ತಿದ್ದ ಮಾತು. ವಶಿಷ್ಠರಿಗೆ ಅರುಂಧತಿಯೂ, ಅತ್ರಿ ಋಷಿಗಳಿಗೆ ಅನಸೂಯೆಯೂ, ಅಗಸ್ತ್ಯರಿಗೆ ಲೋಪಾಮುದ್ರೆಯೂ ಧರ್ಮಪತ್ನಿಯರಾಗಿದ್ದರಲ್ಲವೇ ? ಪರಾಶರರಿಗೆ ವ್ಯಾಸರೂ, ಜಮದಗ್ನಿ ಋಷಿಗಳಿಗೆ ಪರಶುರಾಮರೂ, ವಶಿಷ್ಠರಿಗೆ ಶುಕಮುನಿಗಳೂ ಮಕ್ಕಳಾಗಿ ಜನಿಸಿದ್ದರಲ್ಲವೇ ? ಜನಕರಾಜ, ಅಜಾತಶತ್ರು, ಕಾರ್ತವೀರ್ಯರಂತೂ ಮಹಾಜ್ಞಾನಿಗಳಾಗಿದ್ದರೂ ಕೂಡ ರಾಜ್ಯ ಪರಿಶೀಲನೆಯನ್ನು ಸಹ ಮಾಡುತ್ತಿದ್ದರೆಂಬುದು ಪ್ರಸಿದ್ಧವಾದ ಸಂಗತಿಯಾಗಿದೆ. ಆದ್ದರಿಂದ ವ್ಯವಹಾರವು ಅಧ್ಯಾತ್ಮಕ್ಕೆ ವಿರುದ್ಧವಾದ ವಸ್ತುವಾಗಿದೆಯೆಂದು ತಿಳಿದುಕೊಳ್ಳುವ ಕಾರಣವೇನೂ ಇಲ್ಲ. ಇಷ್ಟೇ ಅಲ್ಲ, ಅಧ್ಯಾತ್ಮಿಯಾದವನು ವ್ಯವಹಾರವನ್ನು ಬಿಡಲೇ ಬಾರದೆಂದು ಭಗವದ್ಗೀತೆಯು ಒತ್ತಿ ಹೇಳುತ್ತದೆ. ಅಲ್ಲದೆ ಶ್ರೀ ಅರವಿಂದರ ಆಧುನಿಕ ಅಧ್ಯಾತ್ಮವಂತೂ ಜಾಗತಿಕ ಜೀವನದ ಮೇಲ್ಮೆಗಾಗಿಯೇ ಅಧ್ಯಾತ್ಮ ಸಿದ್ಧಿಯ ಅವಶ್ಯಕತೆಯಿದೆಯೆಂದು ಸಾರುತ್ತದೆ.

ಭರತಖಂಡವು ಅಧ್ಯಾತ್ಮ ಪ್ರಧಾನ ದೇಶ. ಅದು ಇಂದು ಯುರೋಪದ ಬಾಹ್ಯ ವ್ಯವಹಾರವನ್ನೆಲ್ಲ ಸ್ವೀಕರಿಸಿದ್ದರೂ ತನ್ನ ಆತ್ಮದೊಳಗಿರುವ ಅಧ್ಯಾತ್ಮವನ್ನು ಅದು ಎಂದಿಗೂ ಬಿಟ್ಟುಕೊಡಲಾರದು. ಬಿಡುವದು ಒಳ್ಳೆಯದೂ ಅಲ್ಲ. ಯುರೋಪವು ನಮ್ಮ ಅಧ್ಯಾತ್ಮವನ್ನು ಎಷ್ಟೇ ಸ್ವೀಕರಿಸಿದರೂ ಅದು ತನ್ನ ಬಾಹ್ಯ ವ್ಯವಹಾರವನ್ನು ಪರಿತ್ಯಜಿಸಿದರೆ ಹೇಗೆ ತನ್ನ ಆತ್ಮನಾಶಮಾಡಿಕೊಂಡಂತಾಗುವದೋ

ಹಾಗೆಯೇ ನಾವು ಎಷ್ಟೇ ಯುರೋಪಿಯನ್ನರ ಬಾಹ್ಯ ವ್ಯವಹಾರವನ್ನು ಸ್ವೀಕರಿಸಿ ದರೂ ನಮ್ಮ ಅಧ್ಯಾತ್ಮವನ್ನು ಪರಿತ್ಯಜಿಸಿದೆವಾದರೆ ನಾವು ನಮ್ಮ ಆತ್ಮನಾಶವನ್ನೇ ಮಾಡಿಕೊಂಡಂತಾಗುವದೆಂಬುದು ಸ್ಪಷ್ಟವಾದ ಮಾತಾಗಿದೆ. ಆದ್ದರಿಂದ ನಾವು ವ್ಯವಹಾರವನ್ನು ಆಧ್ಯಾತ್ಮಿಕ ತಳಹದಿಯ ಮೇಲೆಯೇ ಕಟ್ಟಬೇಕಾಗುತ್ತದೆ. ಅದರಂತೆ ನಮ್ಮ ಕವಿತೆ ಮತ್ತು ಸಾಹಿತ್ಯದಲ್ಲಿ ನಾವು ವ್ಯವಹಾರ ಜೀವನದ ಎಲ್ಲ ಮಾತುಗಳನ್ನು ಸ್ವೀಕರಿಸಬಹುದಾದರೂ ಅವುಗಳನ್ನೆಲ್ಲ ನಾವು ಆಧ್ಯಾತ್ಮಿಕ ದೃಷ್ಟಿಕೋನದಿಂದಲೇ ನೋಡಬೇಕು.

"ಕಲೆಗಾಗಿ ಕಲೆ" ಎನ್ನುವಂತೆ "ವ್ಯವಹಾರಕ್ಕಾಗಿ ವ್ಯವಹಾರ" ಎಂಬ ತತ್ತ್ವವನ್ನು ಹಿಡಿದರೆ ಪ್ರಯೋಜನವಿಲ್ಲ. ಅಂದ ಬಳಿಕ ಕೇವಲ ವ್ಯವಹಾರ ಸುಖಕ್ಕಾಗಿ ವ್ಯವಹಾರ ಸುಖವೆಂದು ಪ್ರತಿಪಾದಿಸುವ ಕವಿತೆಗಳನ್ನೂ, ಸಾಹಿತ್ಯವನ್ನೂ ಸೃಷ್ಟಿಸಿ ಪ್ರಯೋಜನ ವಿಲ್ಲವೆಂಬುದು ಸ್ಪಷ್ಟವಾದ ಮಾತಾಗಿದೆ. ಪರಲೋಕಕ್ಕಾಗಿ ಇಹಲೋಕವನ್ನು ಬಲಿಕೊಡಬೇಕೆಂಬ ಮಾತು ಎಷ್ಟು ಅಪ್ರಯೋಜಕವೋ, ಇಹಲೋಕಕ್ಕಾಗಿ ಆಧ್ಯಾತ್ಮ ವನ್ನು ಬಲಿಕೊಡಬೇಕೆಂಬ ಮಾತೂ ಅಷ್ಟೇ ಅಪ್ರಯೋಜಕವೆಂಬುದು ಸುಸ್ಪಷ್ಟ ವಾಗಿದೆ. ಆದ್ದರಿಂದ ಬಾಹ್ಯಜೀವನ, ಅಧ್ಯಾತ್ಮ ಎರಡನ್ನೂ ಮೇಳವಿಸಿ ನಮ್ಮ ಜೀವನದಲ್ಲಿಯೂ ಸಾಹಿತ್ಯದಲ್ಲಿಯೂ ಇಳಿಸಬೇಕೆಂಬುದು ನಿರ್ವಿವಾದದ ಮಾತಾಗಿದೆ. ಆದ್ದರಿಂದ ಆಧ್ಯಾತ್ಮಿಕ ಜೀವನದ ಬೆಳಕಿನಲ್ಲಿ ವ್ಯವಹಾರಿಕ ಜೀವನವನ್ನು ಚಿತ್ರಿಸುವ ಕವಿತೆಗಳು ಹುಟ್ಟತೊಡಗಿದರೆ, ಆಗ ಅನುಭಾವ ಕಾವ್ಯ ಹಾಗೂ ಲೌಕಿಕ ಕಾವ್ಯ, ವ್ಯವಹಾರ ಹಾಗೂ ಅಧ್ಯಾತ್ಮ ಎಂಬ ಭೇದವೇ ಉಳಿಯಲಾರದೆಂಬುದು ಸ್ಪಷ್ಟವಾದ ಮಾತಾಗಿದೆ. ಇದೇ ನಮ್ಮ ಗುರಿಯಾಗಬೇಕು, ಎಲ್ಲಾ ಉಚ್ಚ ಜೀವನಕ್ಕೆ ಒಯ್ದು ಮುಟ್ಟಿಸುವ ಕೈಗಂಬವಾಗಬೇಕು. ಎಲ್ಲಾ ಉಚ್ಚ ಸಾಹಿತ್ಯವಾಗಬೇಕು. ಇದೇ ನಮ್ಮ ಗುರಿ.

ಶ್ರೀ ಅರವಿಂದರು ತಮ್ಮ "ನಾಳಿನ ಕಾವ್ಯ" (ಫ್ಯೂಚರ್ ಪೋಯಟ್ರಿ) ಎಂಬ ಗ್ರಂಥದಲ್ಲಿ— "ಉಚ್ಚ (ಆಧ್ಯಾತ್ಮಿಕ) ಜೀವನವನ್ನು ಪಡೆಯುವದಕ್ಕೆ ಮಾಡಿದ ಪ್ರಯತ್ನದ ವರ್ಣನೆ, ಉಚ್ಚಜೀವನವನ್ನು ಪಡೆದು ಬಾಹ್ಯಜೀವನದಲ್ಲಿ ಅದನ್ನು ಇಳಿಸಿದ್ದರ ವರ್ಣನೆ, ಅರ್ಥಾತ್ ಉಚ್ಚಜೀವನದ ದೃಷ್ಟಿಕೋನದ ಬಾಹ್ಯಿಕ ಸಾಮಾನ್ಯ ಜೀವನದಲ್ಲಿ ಸಹ ಅಸಾಮಾನ್ಯತೆಯನ್ನು ಕಾಣುವ ವರ್ಣನೆ, ಇದೇ ನಾಳಿನ ಕಾಲದ ಸಾಹಿತ್ಯದ ಗುರಿಯಾಗಬೇಕು" ಎಂದು ನಿರೂಪಿಸಿರುವಂತೆ ಇನ್ನು ಮುಂದೆ ನಾವು ನಮ್ಮ ಸಾಹಿತ್ಯ ನಿರ್ಮಾಣವನ್ನು ಮಾಡಬೇಕು.

ಇದೆಲ್ಲ ಸಂಸ್ಕೃತ, ಇಂಗ್ಲೀಷು ಮೊದಲಾದ ಭಾಷೆಗಳೊಳಗಿನ ಕಾವ್ಯಗಳ ವಿಷ ಯವೇ ಆಯಿತು. ನಮ್ಮ ಹೊಸಗನ್ನಡ ಶ್ರೇಷ್ಠಕವಿಗಳ ವಿಷಯವೇನು ? ಎಂಬ ಪ್ರಶ್ನೆಯೂ ಹುಟ್ಟಿಯೇ ಹುಟ್ಟುತ್ತದೆ. "ಬಿತ್ತಿದರೆ ಬಿತ್ತುವದು ಮುಕ್ಕು ಚಿಕ್ಕೆಯ

ಕಾಳು, ಮುತ್ತು-ರತುನವ ಬಿತ್ತಿ ಮಾಡದಿರು ಹೊಲ ಹಾಳು." ಎಂದು ಸಾರಿದ ಅಣ್ಣ ಶ್ರೀ ಬೇಂದ್ರೆಯವರ ವಾಕ್ಯವು ಹೊಸಗನ್ನಡ ಕಾವ್ಯಗಂಗೆಯು ಪ್ರವಾಹದ ದಿಕ್ಕನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಅಣ್ಣಾ ಶ್ರೀ ದ. ರಾ. ಬೇಂದ್ರೆಯವರೂ, ಕೆ. ವಿ. ಪುಟ್ಟಪ್ಪನವರೂ, ದಿವಂಗತರಾದ ಶ್ರೀ ಬಿ. ಎಂ. ಶ್ರೀಕಂಠಯ್ಯನವರೂ, ಅಣ್ಣ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರೂ, ಶ್ರೀ ಜಿ. ಪಿ. ರಾಜರತ್ನಂ ಅವರೂ, ಶ್ರೀ ವಿ. ಸೀತಾರಾಮಯ್ಯನವರೂ, ಶ್ರೀ ಡಿ. ವಿ. ಗುಂಡಪ್ಪನವರೂ, ದಿವಂಗತರಾದ ಶ್ರೀ ಪಂಜೆ ಮಂಗೇಶರಾಯರೂ, ಶ್ರೀ ಗೋವಿಂದ ಪೈ ಅವರೂ, ಶ್ರೀ ಕಡೆಂಗೊಡ್ಲು ಶಂಕರಭಟ್ಟರೂ, ಶ್ರೀ ಪು. ತಿ. ನರಸಿಂಹಾಚಾರ್ಯರೂ, ಶ್ರೀ ಎಲ್. ಗುಂಡಪ್ಪನವರೂ, ರಾಮಚಂದ್ರ ವಿನೀತರೂ, ಶ್ರೀ ವಿ. ಕೃ. ಗೋಕಾಕರೂ, ಶ್ರೀ ರಂ. ಶ್ರೀ. ಮುಗಳಿಯವರೂ, ಶ್ರೀ ಈಶ್ವರ ಸಣಕಲ್ಲರೂ, ಶ್ರೀ ಡಿ. ಎಸ್. ಕರ್ಕಿಯವರೂ, ಶ್ರೀ ಎಸ್. ಡಿ. ಇಂಚಲರವರೂ, ಶ್ರೀ ವಾಲಿಯವರೂ, ಗೆಳೆಯ ಶ್ರೀ ಸಿಂಪಿ ಲಿಂಗಣ್ಣನವರೂ, ಶ್ರೀ ಪ್ರಹ್ಲಾದ ನರೇಗಲ್ಲರೂ, ಶ್ರೀ ದೇಸಾಯಿ ದತ್ತ ಮೂರ್ತಿಯವರೂ, ಶ್ರೀ ಗೀತಾಪ್ರಿಯ ಕುಲಕರ್ಣಿ ಶೇಷಗಿರಿರಾಯರೂ, ಶ್ರೀ ಅರ್ಚಿಕ ವೆಂಕಟೇಶರವರೂ, ಶ್ರೀ ಶ್ರೀಧರರವರೂ, ಶ್ರೀ ಚೆನ್ನವೀರ ಕಣವಿಯವರೂ ಇವರೇ ಮೊದಲಾದ ಕನ್ನಡ ತಾಯಿಯ ಸಣ್ಣ ದೊಡ್ಡ ಮಕ್ಕಳು ಆ ತಾಯಿಯ ಶ್ರೀ ಚರಣಗಳಿಗೆ ಸಲ್ಲಿಸಿದ ಹಾಗೂ ಸಲ್ಲಿಸುತ್ತಿರುವ ಕಾವ್ಯ ಕುಸುಮಗಳ ರಾಶಿಯೇನೂ ಸಣ್ಣದಿಲ್ಲ ಹಾಗೂ ಕಡಿಮೆಯದಿಲ್ಲ. ಇವರೆಲ್ಲರ ಕವಿತೆಗಳು ಇಂಗ್ಲೀಷಿನಲ್ಲಿರುವ "ಗೋಲ್ಡನ್ ಟ್ರೇಝರಿ"ಯನ್ನು ಸಂಪೂರ್ಣವಾಗಿ ನೆನಪಿಗೆ ತಂದುಕೊಡುವವು. ಇಂಗ್ಲಂಡಿನ ಭಾಗ್ಯೋದಯದ ಕಾಲಕ್ಕೆ ಹೇಗೆ ಕೀಟ್ಸ್, ಶೆಲೆ ಮೊದಲಾದ ಹಿರಿ-ಕಿರಿ ಕವಿಗಳೇನಕರು ಅಲ್ಲಿ ಉದಯಿಸಿದರೋ ಹಾಗೆಯೇ ಮೇಲ್ಕಾಣಿಸಿದ ಮಹನೀಯರೂ ನಮ್ಮ ಕನ್ನಡ ತಾಯಿಯ ನವ ಭಾಗ್ಯೋದಯದ ಸೂರ್ಯಕಿರಣ ಸ್ವರೂಪರಾಗಿ ಇದೀಗ ಉದಯಿಸಿರುವರೆಂದು ನನಗೆ ಸ್ಪಷ್ಟವಾಗಿ ಅನಿಸುತ್ತದೆ.

ಇದಕ್ಕಿಂತ ಹೆಚ್ಚಿಗೆ ನಾನು ಏನು ಹೇಳಲಿ ? ಇದೇ ನನ್ನ ಸಂಶೋಧನೆಯ ವಿಷಯ. ಬಲ್ಲವರಾದ ತಮ್ಮೆಲ್ಲರ ಇದಿರಿಗೆ ವರದಿಯ ರೂಪದಿಂದ ನಾನಿದನ್ನು ಇಟ್ಟಿದ್ದೇನೆ. ತಾವು ಇದರಲ್ಲಿಯ ಯೋಗ್ಯವಾದ ಅಂಶವನ್ನು ಸ್ವೀಕರಿಸಿ, ಸಂದಿಗ್ಧವಾಗಿರುವ ವಿಷಯವನ್ನು ಇನ್ನೂ ಹೆಚ್ಚಿನ ಸಂಶೋಧಕರ ಕಡೆಗೆ ಬಿಟ್ಟುಕೊಡಬೇಕೆಂದು ತಮ್ಮೆಲ್ಲರಲ್ಲಿ ನಾನು ವಿನಮ್ರಭಾವದಿಂದ ಪ್ರಾರ್ಥಿಸುತ್ತೇನೆ.

ಕನ್ನಡ ತಾಯಿಯು ನನಗೆ ಬಾಲ್ಯವಯಸ್ಸಿನಲ್ಲಿಯೇ ಕರುಣೆಯ ಕೈಗೊಟ್ಟು ಇಷ್ಟು ಕಾಲದವರೆಗೂ ನನ್ನ ಸ್ವತಃದ ಆತ್ಮತೃಪ್ತಿಗಾಗಿ ಕಾವ್ಯವಿಷಯ ಸಂಶೋಧನ ಮಾಡಿಸಿ, ಆ ಹೂವನ್ನು ಇಂದು ತನ್ನ ಪಾದಗಳಿಗೆ ಅರ್ಪಿಸಿಕೊಂಡದ್ದಕ್ಕೆ ನಾನು ಆ ತಾಯಿಯನ್ನು ಎಷ್ಟು ಸ್ತುತಿಸಿದರೂ ಸ್ವಲ್ಪವೇ ಸರಿ. ಕಾವ್ಯತತ್ತ್ವ ತಿಳಿಸಿದ ಆ

ತಾಯಿಯು ಮುಂದೆಯೂ ತನ್ನೀ ಬಾಲಕನ ಮೇಲೆ ಪೂರ್ಣ ಕೃಪೆಯಿಟ್ಟು, ತಿಳಿದ ತತ್ತ್ವವನ್ನು ಕೃತಿಯಲ್ಲಿಳಿಸುವಂತೆ ಮಾಡಿ, ಆ ಕೃತಿಗಳನ್ನು ಸಹ ತನ್ನ ಶ್ರೀ ಚರಣಗಳಿಗೆ ಅರ್ಪಿಸಿಕೊಳ್ಳಲೆಂದು ನಾನು ಆ ತಾಯಿಯ ಸಿರಿಯಂಡಿಗಳಲ್ಲಿ ಭಕ್ತಿಯಿಂದ ಬೇಡಿಕೊಳ್ಳುವೆನು. ಇದಲ್ಲದೆ ನಿರಾನಂದಕರವಾದ ಇಂತಹ ಜಟಿಲ ಸಂಶೋಧನೆಯ ವಿಷಯವನ್ನು ತಾವೆಲ್ಲ ಹಿರಿಯರೂ ಸೋದರ–ಸೋದರಿಯರೂ ಬೇಸರಿಸದೆ ಆಲಿಸಿದ್ದಕ್ಕೆ ತಮ್ಮೆಲ್ಲರಿಗೆ ಹೃತ್ಪೂರ್ವಕವಾಗಿ ಧನ್ಯವಾದಗಳನ್ನು ಅರ್ಪಿಸುವೆನು.

ಓಂ ಸಿರಿಗನ್ನಡಂ ಗೆಲ್ಗೆ

ಓಂ ಜಗತಃ ಪಿತರೌ ವಂದೇ ಪರಮೇಶ್ವರೀ ಪರಮೇಶ್ವರೌ

(ಜಗತ್ತಿನ ತಾಯಿ–ತಂದೆಗಳಾದ ಶ್ರೀ ಪರಮೇಶ್ವರೀ ಪರಮೇಶ್ವರರ ಶ್ರೀ ಚರಣಗಳಲ್ಲಿ ಅನಂತಾನಂತ ಪ್ರಣಾಮಗಳನ್ನರ್ಪಿಸುವೆನು.)

॥ ಓಂ ಶ್ರೀ ಓಂ ॥

ಸೊಲ್ಲಾಪುರ, ಫೆಬ್ರುವರಿ ೧೯೫೦

41)

# ಬಸವಣ್ಣನ ಭಕ್ತಿ

---

ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬಾ ಅಂಬಾ ಎಂದು ಕರೆವುತ್ತಲಿದ್ದೇನೆ। ಅಂಬಾ ಅಂಬಾ ಎಂದು ಬರಲುತ್ತಲಿದ್ದೇನೆ। ಸಮುದ್ರದೊಳಗಣ ಸಿಂಪಿನಂತೆ ಬಾಯಬಿಡುತ್ತಲಿದ್ದೇನಯ್ಯಾ। ಅಯ್ಯಾ ಅಯ್ಯಾ ಎಂದು ಕರೆಯುತ್ತಲಿದ್ದೇನೆ। ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ। ಓ ಎನ್ನಲಾಗದೆ ಅಯ್ಯಾ! ಆವಾಗಳೂ ನಿಮ್ಮ ಕರೆಯುತ್ತಲಿದ್ದೇನೆ। ಓ ಎನ್ನದೆ ಮೌನವೆ ದೇವಾ। ಯಾತಕ್ಕೆ ನಿಮ್ಮ ದೇವರೆಂದರಿಯೆನು। ನೀವೆನ್ನನರಿಯಿರಲ್ಲಾ। ನಾ ನಿಮ್ಮ ನೆನೆವೆನು ನೀವೆನ್ನನರಿಯಿರಿ। ನಾ ನಿಮ್ಮನೋಲೈಸುವೆ ನೀವೆನ್ನ ಕಾಣಿರಿ। ನಾನೆಂತು ಬದುಕುವೆನು। ನಾನೆಂತು ಜೀವಿಸುವೆನಯ್ಯಾ। ನೀವೆ ಪ್ರಾಣಗತಿಮಂತಿಗಳೆನಗೆ ನೋಡಯ್ಯಾ। ತಂದೆ ತಾಯಿ ನೀನು ಬಂಧುಬಳಗ ನೀನು। ಎನಗೆ ನೀನಲ್ಲದೆ ಮತ್ತಾರು ಇಲ್ಲವಯ್ಯಾ। ಹಾಲಲೆದ್ದು ನೀರಲೆದ್ದು। ಅಕಟಕಟ ನಿನಗಿನಿತು ಕೃಪೆಯಿಲ್ಲ। ಯಾಕೆ ಹುಟ್ಟಿಸಿದಿ ಇಹಲೋಕ ಬಾಹಿರನ। ಯಾಕೆ ಹುಟ್ಟಿಸಿದಿ ಪರಲೋಕ ದೂರನ। ಯಾಕೆ ಹುಟ್ಟಿಸಿದಿ ಎನಗಾಗಿ ತರುಮರಾದಿಗಳಿದ್ದಿಲ್ಲವೆ॥

ಅಯ್ಯಾ, ನಿಮ್ಮನು ದೇವರೆಂದು ನಂಬಿ ಪೂಜಿಸಲಾಗದಯ್ಯಾ। ಮೀನಜ ರೋಮಜ ಮಹಾಮುನಿಗಳ ಲಯವ ಮಾಡಿದುದ ನಾ ಬಲ್ಲೆನಾಗಿ। ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ। ಅನಂತ ಕೋಟಿ ಬ್ರಹ್ಮರಿಗೆ ಪ್ರಳಯವ ಮಾಡಿದುದ ನಾ ಬಲ್ಲೆನಾಗಿ। ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ। ನವಕೋಟಿ ನಾರಾಯಣರಿಗೆ ಮರಣವ ಮಾಡಿದುದ ನಾ ಬಲ್ಲೆನಾಗಿ। ದೇವನೊಳ್ಳಿದನೆಂದು ಹಿಗ್ಗ ಬೇಡೆಲೆ ಮಾನವ। ತರಕಟ ಕಾಡಿದನೊಳ್ಳಿದನೆ। ಅಳಿಸುವ ನಗಿಸುವನೊಳ್ಳಿದನೆ॥ ಭಕ್ತಿಯೆಂಬುದ ಮಾಡಬಾರದಯ್ಯ ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊರೆವುದು। ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದು ಮಾಬುದೆ। ಭಕ್ತಿ ಬಾಳಬಾಯಿ ಧಾರೆ ಕಾಣಯ್ಯಾ॥

ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ ಇನ್ನು ಬಯಸಿದರುಂಟೆ। ಭಕ್ತಿಯುಳ್ಳವರ ಬಯಸಿದರುಂಟೆ। ದೇವರಲ್ಲಿ ಮುನ್ನ ವರವ ಪಡೆಯದನ್ನಕ್ಕರ।

ಲೇಸಕಂಡು ಮನದಲ್ಲಿ ಬಯಸಿ ಆಸೆ ಮಾಡಿದಡಿಲ್ಲ ಕಂಡಯ್ಯಾ। ತಾಳ ಮರಕ್ಕೆ ಕೈಯ ನೀಡಿ ಮೇಲೆ ನೋಡಿ ಗೋಣು ನೊಂದುದಯ್ಯಾ। ನೀನೀವ ಕಾಲಕ್ಕಲ್ಲದೆ ಇಲ್ಲ ಕಂಡಯ್ಯಾ। ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹನೆಂದರೆ ತಪ್ಪದು ನೋಡಯ್ಯಾ। ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ। ಎಂಬ ಶ್ರುತಿ ವಚನ ತಪ್ಪದು ನೋಡಯ್ಯಾ। ಅನುಭವ್ಯಾನಿ ಕರ್ಮಾಣಿ ಕಲ್ಪಾಯುತ ಶತೈರಪಿ ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ। ಎಂದುದಾಗಿ ಕರ್ಮವಶವಾಗಿ ನಡೆವುದಂ। ನಡೆದರೆಯೂ ದೇವ, ನಿನ್ನ ಭಕ್ತಿಯ ಬಿಡಲಾರೆನಯ್ಯಾ ॥

ನಾದಪ್ರಿಯನೆಂಬರು ನಾದಪ್ರಿಯನಲ್ಲ। ವೇದಪ್ರಿಯನೆಂಬರು ವೇದಪ್ರಿಯನಲ್ಲ। ಭಕ್ತಿಪ್ರಿಯನು। ಭಕ್ತಿಲಂಪಟನು। ದೇವ, ನೀನು ಭಕ್ತಿ ಕಂಪಿತನಯ್ಯಾ। ಅಯ್ಯಾ, ಭಕ್ತಿ ಎಂತಹದಯ್ಯಾ. ದಾಸಯ್ಯ ಮಾಡಿದಂಥಾದಯ್ಯಾ। ಭಕ್ತಿ ಎಂತಹದಯ್ಯಾ ಸಿರಿಯಾಳ ಮಾಡಿದಂಥಾದ್ದಯ್ಯಾ। ಭಕ್ತಿ ಎಂತಹದಯ್ಯಾ ಸಿಂಧುಬಲ್ಲಾಳ ಮಾಡಿದಂಥಾದ್ದಯ್ಯಾ। ಭಕ್ತಿ ಎಂಥಾದಯ್ಯಾ ದೇವಾ, ನೀನು ಬಾಣನ ಬಾಗಿಲ ಕಾದಂಥಾದ್ದಯ್ಯಾ। ಮಾತಿನ ಮಾತಿನಲ್ಲಿಪ್ಪುದೇ ಭಕ್ತಿ। ಮಾಡಿ ತನು ಸವೆಯದನ್ನಕ್ಕರ ಮನ ಸವೆಯದನ್ನಕ್ಕರ ಧನ ಸವೆಯದನಕ್ಕರ ಅಪ್ಪುದೇ ಭಕ್ತಿ। ಆಡಿದರೇನು ಹಾಡಿದರೇನು ಓದಿದರೇನು ತ್ರಿವಿಧ ದಾಸೋಹವಿಲ್ಲದನ್ನಕ್ಕರ। ಆಡದೇ ನವಿಲು, ಹಾಡದೇ ತಂತಿ, ಓದದೇ ಗಿಳಿ। ಲೌಕಿಕರ ಕಂಡು ಆಡುವೆ ಹಾಡುವೆ। ತಾರ್ಕಿಕರ ಕಂಡು ಆಡುವೆ ಹಾಡುವೆ। ಸಹಜಗುಣವೆನ್ನಲ್ಲಿಲ್ಲವಯ್ಯಾ। ನಿಜ ಭಕ್ತಿ ಎನಗಿಲ್ಲ ತಂದೇ। ಏಕೋ ಭಾವ ಎನಗುಳ್ಳರೆ ಯಾಕೆ ನೀ ಕರುಣಿಸೆಯಯ್ಯಾ। ಭಕ್ತಿಯೆಳ್ಳನಿತಿಲ್ಲ ಯುಕ್ತಿ ಶೂನ್ಯನಯ್ಯ ನಾನು। ತನುವಂಚಕ ಮನವಂಚಕ ಧನವಂಚಕ ನಾನಯ್ಯಾ। ಎನ್ನಲ್ಲಿ ನಿನ್ನ ಮೇಲಣ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ। ಎನ್ನ ಭಕ್ತನೆಂಬರು। ನಾನಾವ ಪಾಪವ ಮಾಡಿದೆನೋ। ಮಾವಿನಕಾಯಿಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ। ಆನು ಭಕ್ತನೆಂತೆಂಬೆನು ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ। ಆನು ಭಕ್ತನೆಂಬ ನುಡಿ ಸುಡದೇ ದೇವಾ। ಸ್ಥಾವರ ಜಂಗಮ ಒಂದೇ ಎಂದು ಇದಿರು ನುಡಿದು ನಾನೆಡಹುತಿಪ್ಪೆ। ಸಹಜನಲ್ಲಯ್ಯ ನಾನು ಸಮ್ಯಕ್ತನಲ್ಲಯ್ಯಾ। ಈ ನುಡಿದ ನುಡಿ ಸುಡದಿಹುದೇ ತಂದೇ ॥

ತ್ರಿವಿಧ ತ್ರಿವಿಧದಲ್ಲಿ ತಪ್ಪುಕ ನಾನಯ್ಯ। ಒಮ್ಮಿಂಗೆ ಕರುಣಿಸಯ್ಯ ಒಮ್ಮಿಂಗೆ ಕರುಣಿಸಯ್ಯಾ। ಇದನರಿತು ಇನ್ನು ತಪ್ಪಿದೆನಾದರೆ ನೀವು ಮಾಡಿತ್ತೆ ಸಲುವುದು। ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ। ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ। ಮೇರು ಗುಣವನರಸುವದೇ ಕಾಗೆಯಲ್ಲಿ। ಪರುಷ ಗುಣವನರಸುವದೇ ಕಬ್ಬುನದಲ್ಲಿ। ಸಾಧುಗುಣವನರಸುವದೇ ಅವಗುಣಿಯಲ್ಲಿ। ಚಂದನ ಗುಣವನರಸುವದೇ ತರುಗಳಲ್ಲಿ। ಸರ್ವಗುಣಸಂಪನ್ನಾ ನೀವೆನ್ನಲ್ಲಿ ಅವ-ಗುಣವನರಸುವುದೇ। ಅಪ್ರತಿಮ ಮಹಿಮಾ ನಾನು ನಿಮಗೆ ಪ್ರತಿಯೇ ಅಯ್ಯಾ।

ಹಗೆಯಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೇ। ಕೊಳದ ಮೇಲೆ ಸಂಕೋಲೆಯು ನಿಕ್ಕುವರೇ। ಬೆಂದ ಹುಣ್ಣ ಕಂಬಿಯಲಿ ಕೀಸುವರೇ। ನೀ ಕಾಡಂವ ಕಾಟ ಸಿರಿ-ಯಾಳಂಗಲ್ಲದೆ ಸೈರಿಸಬಲ್ಲಂದೇ। ಕರುಣಿಸು ಕರುಣಿಸೆನಗೆ।

ಬ್ರಹ್ಮಪದವಿಯನೊಲ್ಲೆ । ವಿಷ್ಣುಪದವಿಯನೊಲ್ಲೆ । ನಾನು ಮತ್ತಾವ ಪದವಿಯನೊಲ್ಲೆನಯ್ಯಾ। ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ। ದಾಸನಂತೆ ತವನಿಧಿಯ ಬೇಡುವನಲ್ಲ । ಚೋಳನಂತೆ ಹೊನ್ನ ಮಳೆಯ ಕರಿಸೆಂಬವನಲ್ಲ । ಅಂಜದಿರು ಅಂಜದಿರು ಅವರಂಥವನಾನಲ್ಲ। ಎನ್ನ ತಂದೆ। ಸದ್ಭಕ್ತಿಯನೆ ಕರುಣಿಸೆನಗೆ । ಮರಮರ ಮಥನದಿಂದ ಅಗ್ನಿಹುಟ್ಟಿ ಆ ಮರನೆಲ್ಲವ ಸುಡದಿಪ್ಪುದೇ ಅಯ್ಯಾ । ಇದು ಕಾರಣ ಮಹಾನುಭಾವಿಗಳ ತೋರಿ ಬದುಕಿಸಯ್ಯಾ । ಚಂಚಲವಿಲ್ಲದ ಭಕ್ತಿ ವಂಚನೆಯಿಲ್ಲದ ಮಹಂತರ ತೋರಾ। ಇಂತಪ್ಪವರ ತೋರಿ ಬದುಕಿಸಯ್ಯಾ। ಅಯ್ಯಾ, ನಿಮ್ಮ ಶರಣರ ಪಾದಕ್ಕೆನ್ನನು ಚಮ್ಮಾವುಗೆಯಂ ಮಾಡಯ್ಯಾ । ಕರ್ಮಾವಲಂಬನಂ ಕೇಚಿತ್ । ಕೇಚಿತ್ ಜ್ಞಾನಾವಲಂಬನಂ। ವಯಂ ತು ತವಭಕ್ತಾನಾಂ। ಪಾದುಕಸ್ಯಾವಲಂಬನಮ್। ಎಂಬುದಾಗಿ ದೇವಾ, ನಿಮ್ಮ ಸೆರಗೊಡ್ಡಿ ಬೇಡುವದೊಂದೇ ವರವ ಕರುಣಿಸಯ್ಯಾ ॥

ಅಯ್ಯಾ, ನಿಮ್ಮ ಶರಣನು ಮರ್ತ್ಯಲೋಕಕ್ಕೆ ತಂದೆಯಾಗಿ ನೆನೆನೆನೆದು ಸುಖಿಯಾಗಿ ನಾನು ಬದುಕಿದೆನಯ್ಯಾ। ಎನ್ನ ಕಾರಣ ತಂದೆಯಂದರಿದೆನಯ್ಯಾ । ಅರಿದರಿದು ನಿಮ್ಮ ಶರಣರಾಚರಿಸುವ ಆಚರಣೆಯ ಕಂಡು ಕಣ್ದೆರೆದೆನಯ್ಯಾ। ದೇವಾ, ನಿನ್ನ ಚಿಂತೆ ನಿನ್ನ ಜ್ಞಾನವಿಲ್ಲದ ಮನುಜರು ಸೆಗಣಿಯಲಿ ಸಾವಿರ ಹುಳ ಹುಟ್ಟವೇ ದೇವಾ। ಕಾಡ ಮೃಗ ಒಂದಾಗಿ ಇರವೇ ದೇವಾ। ಊರ ಮೃಗ ಒಂದಾಗಿ ಇರವೇ ದೇವಾ। ಸತ್ಯಶರಣರಿಲ್ಲದವರ ದೇಶ ವನವಾಸ ನರವಿಂಧ್ಯ ಕಾಣಿರಣ್ಣಾ। ಭಕ್ತಿಯಿಲ್ಲದ ಬಡವ ನಾನಯ್ಯಾ। ಡೋಹರ ಕಕ್ಕಯ್ಯನ ಮನೆಯಲ್ಲು ಬೇಡಿದೆ। ಮಾದರ ಚೆನ್ನಯ್ಯನ ಮನೆಯಲ್ಲು ಬೇಡಿದೆ। ಎಲ್ಲ ಪುರಾತನರು ನೆನೆದು ಭಕ್ತಿಭಿಕ್ಷವ ನೀಡಿದರೆ ಎನ್ನ ಪಾತ್ರೆ ತುಂಬಿತ್ತಯ್ಯಾ।

ಹೊಲಬುಗೆಟ್ಟ ಶಿಶುವು ತನ್ನ ತಾಯ ಬಯಸುವಂತೆ। ಬಟ್ಟೆದಪ್ಪಿದ ಕರು ತನ್ನ ಹಿಂಡನರಸುವಂತೆ। ಬಯಸುತಿರ್ದೆನಯ್ಯಾ ನಿಮ್ಮ ಶರಣರ ಬರವನು। ದಿನಕರನುದಯಕ್ಕೆ ಕಮಲ ವಿಕಸಿತವಾದಂತೆ ಎನಗೆ ನಿಮ್ಮ ಶರಣರ ಬರವು ನೋಡಾ। ಸೂರ್ಯನುದಯ ತಾವರೆಗೆ ಜೀವಾಳ। ಚಂದ್ರನುದಯ ನೈದಿಲೆಗೆ ಜೀವಾಳ। ಕೂಪರ ಠಾವಿನಲ್ಲಿ ಕೂಟ ಜೀವಾಳ। ನಿಮ್ಮ ಶರಣರ ಬರವೆನಗೆ ಜೀವದ ಜೀವಾಳವಯ್ಯಾ। ಸಾಸಿವೆಯ ಮೇಲೆ ಸಾಗರ ಹರಿಸಿದಂತಾಯಿತ್ತಯ್ಯಾ। ಆನಂದದಿಂದ ನಲಿನಲಿದಾಡುವೆನಯ್ಯಾ। ಆನಂದದಿಂದ ಕುಣಿಕುಣಿದಾಡುವೆನಯ್ಯಾ। ನಿಮ್ಮ ಶರಣರು ಬಂದರೆ ಹರುಷದೊಳು ಓಲಾಡುವೆನಯ್ಯಾ। ಕಂಡರೆ ಮನೋಹರವಯ್ಯಾ

ಕಾಣದಿದ್ದರೆ ಅವಸ್ಥೆ ನೋಡಯ್ಯಾ । ಹಗಲು ಇರುಳಹುದು ಇರುಳು ಹಗಲಹುದು । ನಿಮ್ಮ ಶರಣರನಗಲುವ ಥಾವತಿಯಿಂದ ಮರಣವೇ ಕರಲೇಸು ಕಂಡಯ್ಯಾ । ಬಂದಿಹೆನೆಂದು ಬಾರದೆ ಇರ್ದರೆ ಬಟ್ಟೆಗಳ ನೋಡುತ್ತಲಿರ್ದೆನಯ್ಯಾ । ಇನ್ನಾರ ನಟ್ಟುವೆ । ಇನ್ನಾರ ಪಾದವ ಹಿಡಿವೆನಯ್ಯಾ । ನಿನ್ನ ಶರಣರು ಬಾರದೆ ಇದ್ದರೆ ಅಟ್ಟುವೆನೆನ್ನ ಪ್ರಾಣವನು । ಗಿಳಿಯು ಪಂಜರವನಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ ಬರವ ಹಾರುತ್ತಿದ್ದನೆಲಗವ್ವ । ತರಗೆಲೆ ಗಿರಕೆಂದಡೆ ಹೊರಗೆ ನಾನಾಲಿಸುವೆ । ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲಗವ್ವಾ । ಶರಣರು ಬಂದು ಬಾಗಿಲ ಮುಂದೆ ನಿಂದಿಹರೆಂದರೆ ಸಂತಸಬಟ್ಟೆನೆಲಗವ್ವಾ । ಅಡವಿಯಲ್ಲೊಬ್ಬ ಕಡು ನೀರಡಿಸಿ ಕಡೆಯಲ್ಲಿ ನೀರ ಕಂಡಂತೆ ಆಯಿತ್ತಯ್ಯಾ । ಕುರುಂಡ ಕಣ್ಣ ಹಡೆದಂತೆ । ಬಡವ ನಿಧಾನವ ಕಂಡಂತೆ ಆಯಿತ್ತಯ್ಯಾ । ನಿಮ್ಮ ಶರಣರ ಬರವೆನ್ನ ಪ್ರಾಣ ಕಂಡಯ್ಯಾ । ಎಡದ ಕೈಯ್ಯಲ್ಲಿ ಹಾಲು ಬಟ್ಟಲು । ಬಲದ ಕೈಯ್ಯಲ್ಲಿ ಓಜುಗಟ್ಟಿಗೆ । ಆವಾಗ ಬಂದನೋ ನಮ್ಮಯ್ಯಾ, ಹಾಲು ಕುಡಿಸುವ ತಂದೆ । ಭಕ್ತಿಪಥವ ತಾನೆ ತೋರಿಸುವ ತಂದೆ । ಭಕ್ತಿರತಿಯ ವಿಕಲತೆಯ ಯುಕ್ತಿಯನೇನು ಬೆಸಗೊಂಬರಯ್ಯಾ । ಕಾಮಿಗೆ ಉಂಟೆ ಲಜ್ಜೆ ನಾಚಿಕೆ । ಕಾಮಿಗೆ ಉಂಟೆ ಮಾನಾಪಮಾನ ಶರಣರಿಗೊಲಿದ ಮರುಳನಿಗೇನಂ ಬೆಸಗೊಂಬಿರಯ್ಯಾ ।

ಕಣ್ಣ ಕೂಪಕ್ಕೆ ಮುಂದರಿಯದೆ ನುಡಿದು ಮನಮೆಚ್ಚಿ ಮರುಳಾದೆ ನೋಡವ್ವಾ । ಕೇಳು ಕೇಳವ್ವಾ ಕೆಳದೀ । ಸಖಿಯರಿಲ್ಲದೆ ಸುಖವ ಬಯಸಿದರೆ ದೊರೆಕೊಂಬುವುದೆ ಹೇಳಾ । ಎನ್ನ ಮುನಿಸು ಎನ್ನಲ್ಲೇ ಅಡಗಿತ್ತು । ಇನ್ನಾರೆ ಬಾರೈ ಬಾಯಿ ತೆರೆವೆ । ಪರರ ಚಿಂತೆ ಎನಗೇಕವ್ವಾ । ನಮ್ಮ ಚಿಂತೆ ನಮಗೆ ಸಾಲದೇ । ನಮ್ಮ ನಗೆಮೊಗ ದರಸ ನಮಗೆ ಒಲಿದಾನೋ ಒಲಿಯನೋ ಎಂಬ ಚಿಂತೆ ಹಾಸಲುಂಟುಂ ಮೇಲೆ ಹೊದಿಯಲುಂಟುಂ ನೋಡೇ ಕೆಳದೀ ।

ಪಶ್ಚಿಮ ಪದ್ಮಾಸನದಲ್ಲಿ ಕುಳಿತುಂ । ನಿಟ್ಟೆಲುವ ಮುರಿದುಂ । ತಂಟಿ ಮಿಡುಕದೆ । ಅಟ್ಟೆ ಆಡಿತಲ್ಲಾ । ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಗುಡಿಯ ಕಟ್ಟಲು ಹಿಡಿವಡೆದ ದೇವ । ಪೃಥ್ವಿವ್ಯಾಪ್ತೇಜವಾಯ್ವಾಕಾಶ ನಿರಂಜನ ದೇವಾ । ನಿಮ್ಮ ಮಹಿಮೆಯುಂ ಪ್ರಣವರೂಪಂಗಲ್ಲದೆ ಕಾಣಬಾರದಾರಿಗೆಯೂ । ಜ್ಞಾನ ಜ್ಯೋತಿಯ ಧ್ಯಾನದಿಂದ ನಾಳಶುದ್ಧವಾಗಿ ಆರಾಧಿಸಿ ಕಂಡೆ ದೇವ ದೇವನ ! ಬೆಳಗಿನೊಳಗಿನ ಮಹಾಬೆಳಗು । ದೇವ ದೇವ ಪರಮಾಶ್ರಯಮೇ ತಾನಾಗಿ । ಶತಪತ್ರ ಕಮಲಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪನಲ್ಲಾ । ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯಾ । ದೇವನೆಂಬ ಮಹಾಬೆಳಗಿನೊಳಿರ್ದು ಶಬ್ದ ಮುಗ್ಧನಾದುದನೇನೆಂಬೆನಯ್ಯಾ ।

ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು ! ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು । ನನೆಯೊಳಗಣ ಪರಿಮಳದಂತೆ ಇದ್ದಿತ್ತು । ಎಲ್ಲರ

ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ। ಸುಳಿಯಲಿಲ್ಲ ಸುಳಿದು ಶೃಂಗಾರವ ಮಾಡಲಿಲ್ಲ। ತನ್ನೊಳಗೇ ಎನ್ನ ಬಚ್ಚಿಟ್ಟನಾಗಿ। ಎಲೆ ಗಂಡುಗೂಸೇ ನೀ ಕೇಳಾ ನಿನಗೊಬ್ಬಗೆಂದುಟ್ಟೆ ಗಂಡುಡಿಗೆಯನು। ಒಮ್ಮೆ ನಾನು ಗಂಡಪ್ಪೆನಯ್ಯಾ। ಒಮ್ಮೆ ನಾನು ಹೆಣ್ಣಪ್ಪೆನಯ್ಯಾ। ನಿಮ್ಮಡಿಗೆ ವೀರನಪ್ಪೆನಯ್ಯಾ। ನಿಮ್ಮ ಶರಣರಿಗೆ ವಧುವಪ್ಪೆನಯ್ಯಾ।

ಅಯ್ಯಾ, ನಿಮ್ಮ ಅನುಭಾವದಿಂದೆನ್ನ ತನುವು ಹಾಳಾಯಿತ್ತು। ಅಯ್ಯಾ, ನಿಮ್ಮ ಅನುಭಾವದಿಂದೆನ್ನ ಮನವು ಹಾಳಾಯಿತ್ತು। ಅಯ್ಯಾ, ನಿಮ್ಮ ಅನುಭಾವ ದಿಂದೆನ್ನ ಧನ ಹಾಳಾಯಿತ್ತು। ಅಯ್ಯಾ, ನಿಮ್ಮ ಅನುಭಾವದಿಂದೆನ್ನ ಕರ್ಮ ಛೇದನ ವಾಯಿತ್ತು। ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿಯೆಂಬ ಒಡವೆಯನು ದಿಟಮಾಡಿ ತೋರಿದ ಕಾರಣ। ಇನ್ನು ನೀನಿರಿಸಿದ ಮನದಲ್ಲಿ ನಾನಂಜೆನಯ್ಯಾ ಮನವು ಮಹಾ ಘನಕ್ಕೆ ಶರಣುಹೊಕ್ಕುದಾಗಿ। ಅಯ್ಯಾ, ನೀವಿರಿಸಿದ ಧನದಲ್ಲಿ ನಾನಂಜೆನಯ್ಯಾ ಧನ ದೊಡೆಯ ಜಗದೊಡೆಯ ನೀನಿರುವೆಯಾಗಿ। ಅಯ್ಯಾ, ನೀವಿರಿಸಿದ ತನುವಿನಲ್ಲಿ ನಾನಂಜೆನಯ್ಯಾ ತನುಸರ್ವಾರ್ಪಿತವಾದಲ್ಲಿ ನಿಯತ ಪ್ರಸಾದ ಭೋಗೋಪಭೋಗಿ ಯಾಗಿ। ಇದು ಕಾರಣ ವೀರಧೀರ ಸಮಗ್ರವಾಗಿ ಮನದ ಮೊನೆಯ ಮೇಲೆ ಮನೆ ಮಾಡಿಕೊಂಡಿಪ್ಪ ನಿಮಗೆ ನಾನಂಜೆನಯ್ಯಾ।

ಉಂಬುವ ಬಟ್ಟಲು ಬೇರೆ ಕಂಚಲ್ಲ। ನೋಡುವ ದರ್ಪಣ ಬೇರೆ ಕಂಚಲ್ಲ। ಭಾಂಡಭಾಜನ ಒಂದೇ ! ಬೆಳಗೆ ಕನ್ನಡಿಯೆನಿಸಿತ್ತಯ್ಯಾ। ಅರಿದರೆ ಶರಣ ಮರೆದರೆ ಮಾನವ। ಆದ್ಯರ ವಚನ ಪರುಷ ಕಂಡಯ್ಯಾ। ನಂಬಲೊಡನೆ ನೀ ವಿಜಯ ಕಂಡಯ್ಯಾ। ಅಧರಕ್ಕೆ ಕಹಿ ಉದರಕ್ಕೆ ಸಿಹಿ। ಕೂಡಲಸಂಗನ ಶರಣರ ವಚನ ಬೇವು ಸವಿದಂತೆ ಕಾಣಿರಣ್ಣಾ ॥

**ಜ. ಕ. ೮–೭ ಎಪ್ರಿಲ್ ೧೯೩೦**

# ಪ್ರಕಾಶಮಯ ಜೀವನ

"ನಿಮ್ಮ ಇಚ್ಛೆ ಹಾಗೂ ಪರಮೇಶ್ವರನ ಇಚ್ಛೆ ಇವೆರಡರಲ್ಲಿ ಏಷ್ಟೂ ಭೇದವಿರ ತಕ್ಕದ್ದಲ್ಲ, ನಿಮ್ಮಲ್ಲಿ ಆತನ ಪ್ರೇರಣೆಯ ಹೊರತಾಗಿ ಇನ್ನಾವ ಸಂಕಲ್ಪವೂ ಪ್ರಕಟ ವಾಗಬಾರದು, ಹಾಗೂ ಆತನ ಚಿನ್ಮಯ ಕರ್ಮವಲ್ಲದ ಇನ್ನಾವ ಕರ್ಮವೂ ನಿಮ್ಮೊಳಗೆ ಹಾಗೂ ನಿಮ್ಮಿಂದ ನೆರವೇರಬಾರದು."

–ಶ್ರೀ ಅರವಿಂದರು ("ಮಾತಾ" ಗ್ರಂಥದಲ್ಲಿ)

ಇದಕ್ಕೆ ಸಾಧನವು ಸಮರ್ಪಣ, ಅದು ಹೇಗೆ :–

"ಪ್ರಭೋ, ನನ್ನ ಸಕಲ ವಿಚಾರಗಳೆಲ್ಲ ನಿನ್ನವೇ, ನನ್ನ ಸಕಲ ಊರ್ಮಿಗಳೂ, ನನ್ನ ಹೃದಯದ ಸಕಲ ಭಾವನೆಗಳೂ, ನನ್ನ ಸಮಸ್ತ ಇಂದ್ರಿಯಜನ್ಯ ಅನುಭೂತಿ ಗಳೂ, ನನ್ನ ಪ್ರಾಣದ ಸರ್ವಕ್ರಿಯೆಗಳೂ ನನ್ನ ದೇಹದ ಅಣುಪರಮಾಣುಗಳೂ, ಒಂದೊಂದು ಬಿಂದುವೂ ನಿನ್ನವೇ ಇವೆ. ಸರ್ವಾಂಶದಿಂದಲೂ ಸರ್ವ ಪ್ರಕಾರ ದಿಂದಲೂ ನಾನು ನಿನ್ನವಳು, ಸಂಪೂರ್ಣವಾಗಿ ನಿನ್ನವಳು."

–ಶ್ರೀ ಮಾತಾಜಿಯವರು (ಒಂದು ವಚನದಿಂದ)

ಮೇಲ್ಕಾಣಿಸಿದ ಎರಡು ದಿವ್ಯ ತತ್ತ್ವಗಳಿಂದ ನಮ್ಮ ಆತ್ಮಕಲ್ಯಾಣವನ್ನು ಬೇಕಾದಷ್ಟು ಮಾಡಕೊಳ್ಳಲಿಕ್ಕೆ ಬರುವಂತಿದೆ.

ಪುರಾತನ ಶಾಸ್ತ್ರಗಳಲ್ಲಿ ಇದಕ್ಕೆ ಪೂರಕವಾಗುವ ಮಾತುಗಳು ಎಲ್ಲೆಡೆಯಲ್ಲಿ ಲಭಿಸಬಲ್ಲವಾದುದರಿಂದ ನೂರೊಂದು ಸ್ಥಲದ ತತ್ತ್ವಗಳಲ್ಲಿ ಈ ವಿಷಯವನ್ನು ಕುರಿತು ಎಲ್ಲಿ ಹೇಗೆ ಚರ್ಚಿಸಲಾಗಿದೆಯೆಂಬುದನ್ನು ವಿವರಿಸುವೆನು.

೬೦, ೬೧ ಹಾಗೂ ೬೨ ನೆಯ ಸ್ಥಲಗಳಲ್ಲಿ ಕ್ರಿಯಾ ಪ್ರಕಾಶನ, ಭಾವಪ್ರಕಾಶನ ಗಳು ಹೇಗೆ ಘಟಿಸುವವೆಂಬುದರ ವರ್ಣನೆಯು ಶಿವಶರಣರ ಶಾಸ್ತ್ರಗಳಲ್ಲಿ ಹೀಗೆ ಇದೆ. ಹೇಗೆಂದರೆ :–

"ಶಿವಭಾವದಲ್ಲಿ ಸ್ಥಿರಗೊಂಡ ನಿರ್ಲಿಪ್ತನಾದ ಮಹಾತ್ಮನಲ್ಲಿ ಯಾವ ಯಾವ ಭಾವಗಳು ಉತ್ಪನ್ನವಾಗುವವೋ ಅವೆಲ್ಲವುಗಳು ಶಿವಾತ್ಮಕವಾಗಿರುವವು......ಜ್ಞಾನ ಪ್ರತಿಬಂಧಕಗಳೆಲ್ಲ ಕಳಚಿಹೊದ ಕೇವಲಾತ್ಮಾನುಭಾವಿಗೆ ಎಲ್ಲೆಲ್ಲಿ ಇಂದ್ರಿಯಾಸಕ್ತಿ

ಯುಂಟಾಗುವದೋ ಅಲ್ಲಲ್ಲೆಲ್ಲ ಶಿವಾಸಕ್ತಿಯೇ ತೋರುವದು. ರಾಗದ್ವೇಷಾದಿ ಭಾವನೆಗಳೇ ಸಂಸಾರ ಕ್ಲೇಶಕ್ಕೆ ಕಾರಣಗಳಷ್ಟೆ ? ಅವುಗಳು ಎಲ್ಲಿ ಉಪಶಮನ ಹೊಂದಿರುವವೋ ಅಲ್ಲಿ ಉದಯಿಸುವ ಭಾವಗಳು ಶಿವಾತ್ಮಕವಾಗಿರುತ್ತವೆ."

–ಸಿದ್ಧಾಂತ ಶಿಖಾಮಣಿ

ಇನ್ನು ೬೬, ೬೭ ಮತ್ತು ೬೮ ನೆಯ ಸ್ಥಲಗಳಲ್ಲಿ ಕಾಯಾರ್ಪಿತ, ಕರುಣಾರ್ಪಿತ, ಭಾವಾರ್ಪಿತಗಳನ್ನು ಕುರಿತು ಹೇಗೆ ಬಣ್ಣಿಸಲಾಗಿದೆಯೆಂದರೆ :–

"ಯಾವಾಗ ಯೋಗಿಯು ತನ್ನ ದೇಹವನ್ನು ಪರಮಾತ್ಮನಿಗೆ ಅರ್ಪಿಸುವನೋ ಆಗ ಅವನು ಪ್ರತ್ಯಕ್ಷ ಶಿವರೂಪನೇ ಆಗುವನೆಂಬುದರಲ್ಲಿ ಸಂಶಯವಿಲ್ಲ... ದರ್ಶನ ಸ್ಪರ್ಶನಾದಿಗಳಿಂದಲೂ, ಘ್ರಾಣನ ಶ್ರವಣಾದಿಗಳಿಂದಲೂ ಅನಂಭವಿಸಿದ ಸುಖಗಳನ್ನೆಲ್ಲ ಪರಮೇಶ್ವರನಿಗೆ ಅರ್ಪಿಸಬೇಕು... ಅಹಂಕಾರ ಮದೋದ್ರಿಕ್ತವಾದ ಅಂತಃಕರಣವೆಂಬ ಮದ್ದಾನೆಯನ್ನು ಪರಮಾತ್ಮನೆಂಬ ಗೂಟಕ್ಕೆ ಕಟ್ಟಿಹಾಕಿದವನೇ ಧೀರನು. ಅವನೇ ಕೊನೆ ಮುಟ್ಟತಕ್ಕವನು... ಸಕಲೇಂದ್ರಿಯಂಗಳನ್ನೂ, ಭೋಗ ಸಾಧನವಾದ ಶರೀರವನ್ನೂ ಈಶ್ವರ ಪೂಜಾಭಾವದಿಂದ ಕಾಣುವವನು, ಮುಕ್ತಿಯನ್ನು ಪಡೆಯುವನು... ಚಿತ್ತಸ್ಥವಾದ ಸಕಲಾರ್ಥಗಳನ್ನೂ, ಮನದಲ್ಲಿ ಮೂಡುವ ಸಕಲ ಮನನಗಳನ್ನೂ ಸಾಕ್ಷಾತ್ ಪರಮೇಶ್ವರನಿಗೆ ಅರ್ಪಿಸುವದೇ ಭಾವಾರ್ಪಣವೆನಿಸುವದು... ಸರ್ವ ಕರ್ಮಗಳನ್ನು ಈಶ್ವರಾರ್ಚನವೆಂತಲೂ, ಸರ್ವ ವಚನಗಳನ್ನು ಆತನ ಸ್ತೋತ್ರವೆಂತಲೂ ಸರ್ವದಾ ಭಾವಿಸುವವನಿಗೆ ಕರ್ಮಬಂಧನವೆಲ್ಲಿಯದು ?"

–ಸಿದ್ಧಾಂತ ಶಿಖಾಮಣಿ

ಆದರೆ ಇವೆರಡು ಹಿರಿತತ್ತ್ವಗಳಿಗೆ ಪುಷ್ಟಿಕೊಡುವ ಹಲವು ಮಾತುಗಳುಂಟು, ಅವುಗಳಲ್ಲಿ ಒಂದೆರಡು ಮಾತುಗಳನ್ನು ಇಲ್ಲಿ ಉಲ್ಲೇಖಿಸಲಾಗುವದು. ಅವು ಯಾವವೆಂದರೆ :–

"ಕೆಲವರು ಆಂತರಿಕ ಅನುಭವಕ್ಕೆ ಮಹತ್ವಕೊಟ್ಟು ಬಾಹ್ಯಿಕ ಕರ್ಮಗಳಿಗೆ ಅಲಕ್ಷ ಮಾಡುತ್ತಾರೆ. ಅದರಿಂದ ಅವರು ತೂಕ ತಪ್ಪಿದವರೂ ಏಕಪಕ್ಷಾವಲಂಬಿಗಳೂ ಆಗುತ್ತಾರೆ. ಇನ್ನು ಕೆಲವು ಜನರು ಬಾಹ್ಯಿಕ ಕಾರ್ಯಕಲಾಪಕ್ಕೆ ಮಹತ್ವಕೊಟ್ಟು, ಆಂತರಿಕ ಅನುಭವಗಳನ್ನು ಅಲಕ್ಷಿಸುತ್ತಾರೆ. ಅದರಿಂದ ಇವರೂ ತೂಕತಪ್ಪಿದವರೂ ಏಕಪಕ್ಷಾವಲಂಬಿಗಳೂ ಆಗುತ್ತಾರೆ. ಆಂತರಿಕ ಅನುಭವ ಹಾಗೂ ಬಾಹ್ಯ ಕಾರ್ಯ ಇವೆರಡನ್ನು ಸಮನಾಗಿ ಭಾವಿಸಿ ಈಶ್ವರಾರ್ಪಣ ಬುದ್ಧಿಯಿಂದ ಎರಡನ್ನೂ ಮಾಡಬೇಕು."

–ಶ್ರೀ ಅರವಿಂದರು ("ಯೋಗ ಪ್ರದೀಪ"ದಿಂದ)

ಇದಕ್ಕೆ ಪೂರಕವಾಗುವ ಮಾತುಗಳು ನೂರೊಂದು ಸ್ಥಲಗಳಲ್ಲಿ ಹೇಗೆ ವರ್ಣಿಸಲ್ಪಟ್ಟಿರುವವೆಂದರೆ :– ೫೪, ೫೫ ಹಾಗೂ ೫೬ ನೆಯ ಸ್ಥಲಗಳಾದ

ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಸ್ಥಲಗಳಲ್ಲಿ ಯೋಗಿಗೆ ಕೃತಿ, ಭಾವನೆ, ವಿಚಾರ ಇವೆಲ್ಲವುಗಳ ಅನುಶೀಲನವು ಆವಶ್ಯಕವೆಂದು ವರ್ಣಿಸಿರುವದು ಹೇಗೆಂದರೆ :–

"ಅರಣಿಗಳನ್ನು (ಬನ್ನಿಯ ಕಟ್ಟಿಗೆಗಳನ್ನು) ಒಂದರಮೇಲೊಂದಿಟ್ಟು ಮಥಿಸಿದ ಹೊರತು ಅಗ್ನಿಯು ಹೇಗೆ ಪ್ರಕಾಶಿಸುವದಿಲ್ಲವೋ ಹಾಗೆ ಕ್ರಿಯಾಮಥನವಿಲ್ಲದಿದ್ದರೆ ಒಳಗಿರುವ ಪರಮಾತ್ಮನು ಪ್ರಕಾಶಿಸುವದಿಲ್ಲ. ...(ಆದರಂತೆ) ಕೇವಲ ಕರ್ಮ ಸೂತ್ರದಿಂದ ಶತಕೋಟಿ ಜನ್ಮಗಳಾದರೂ ಆತ್ಮನಿಗೆ ಮೋಕ್ಷಲಾಭವಾಗುವದಿಲ್ಲ. ಆದ್ದರಿಂದ ಮುಕ್ತಿಗೆ ಜ್ಞಾನವು ಕಾರಣವು... ಕುರುಡ ಮತ್ತು ಕುಂಟನ ಹಾಗೆ ಜ್ಞಾನ ಮತ್ತು ಕರ್ಮ ಇವೆರಡೂ ಪರಸ್ಪರ ಸಾಪೇಕ್ಷಿಕಗಳಾಗಿವೆ. ಆದ್ದರಿಂದ ಫಲೋತ್ಪತ್ತಿಯ ವಿಷಯದಲ್ಲಿ ಅನಾಸಕ್ತನಾಗಿ ಅವೆರಡನ್ನು ಆಚರಿಸಲಿಕ್ಕೆ ಬೇಕು* ... ... ... ... ... ... ... ... ... ... ... ... ವಿಧಿಯಿದು; ಪರಮೇಶ್ವರ ನಿರ್ದಿಷ್ಟವಿದು. ಆದ್ದರಿಂದ ವಿಚಕ್ಷಣನಾದವನು ಶಿವಾರಾಧನ ಬುದ್ಧಿಯಿಂದಲೇ ವಿಹಿತ ಕರ್ಮದಲ್ಲಿ ನಿರತನಾಗಿರತಕ್ಕದ್ದು." — ಸಿದ್ಧಾಂತ ಶಿಖಾಮಣಿ

ಇನ್ನು ಸಮತೆ ಇತ್ಯಾದಿಗಳ ವಿಷಯದಲ್ಲಿ ಸ್ವಯಲಿಂಗ, ಚರಲಿಂಗ, ಪರಲಿಂಗ ವೆಂಬ ಸ್ಥಲಗಳಲ್ಲಿ (೫೧–೫೨–೫೩) ವಿವರವಾಗಿ ಹೇಳಿದೆ. ಅದು ಹೇಗೆಂದರೆ :

"ಕಾಮಕ್ರೋಧಾದಿಗಳಿಂದ ಬಿಡಲ್ಪಟ್ಟವನೂ, ಶಾಂತಿದಾಂತಿಗಳಿಂದ ಕೂಡಿದ ವನೂ, ಸರ್ವತ್ರ ಶಿವಬುದ್ಧಿಯುಳ್ಳವನೂ ಆದ ಯೋಗಿಯು ಸಮಬುದ್ಧಿ ಯಿಂದೊಡಗೂಡಿ ಸಂಚರಿಸುವನು. ಇದು ಮುಖ್ಯ, ಇದು ಹೀನವೆಂಬ ಆಲೋಚನೆ ಯಿಲ್ಲದೆ ಸಕಲವೂ ಶಿವಾತ್ಮಕವೆಂದು ಭಾವಿಸುತ್ತ ಯೋಗಿಯು ಸಂಚರಿಸುವನು. ಸನ್ಮಾನದಲ್ಲಿ ಪ್ರೀತಿಯಿಲ್ಲದೆ, ಅವಮಾನದಲ್ಲಿ ವ್ಯಥೆಯಿಲ್ಲದೆ ಸರ್ವೋಚ್ಚ ಪದಾರೂಢ ನಾಗಿ ಯೋಗಿಯು ಸ್ವಾತ್ಮಸ್ಥಿತನಾಗಿ ಸಂಚರಿಸುವನು"

— ಸಿದ್ಧಾಂತ ಶಿಖಾಮಣಿ

## ಕೊನೆಯ ಮಾತು

"ಈ ಸ್ಥಿತಿಯು ಯಾವಾಗ ಪೂರ್ಣವಾಗುವದೋ... ಆಗ ಜ್ಞಾನವೂ ಸಂಕಲ್ಪವೂ ಕರ್ಮವೂ ಪೂರ್ಣಾತಾಪ್ರಾಪ್ತವಾಗುವವು, ಸಹಜವಾಗುವವು, ಜ್ಯೋತಿರ್ಮಯವಾಗುವವು, ಸ್ವತಃ ಸ್ಫೂರ್ತವೂ ದೋಷರಹಿತವೂ ಆಗುವವು. ಪರಮಾತ್ಮನಿಂದಲೇ ಅವುಗಳ ಪ್ರವಾಹವು ಹರಿಯತೊಡಗುವದು. ಸನಾತನ ಪರಮಾತ್ಮನದೇ ಅದು ದಿವ್ಯ ಶಾಶ್ವತ ಕರ್ಮವಾಗುವದು."

— ಯೋಗೀಶ್ವರ ಶ್ರೀ ಅರವಿಂದರು ("ಮಾತಾ" ಗ್ರಂಥದಿಂದ)

---

* "ಅಂಧ ಪಂಗುವದನ್ಯೋನ್ಯ ಸಾಪೇಕ್ಷೇ ಜ್ಞಾನಕರ್ಮಣೋಃ । ಫಲೋತ್ಪತ್ತೌವಿರಕ್ತಸ್ತು ತಸ್ಮಾತ್ತದ್ವಯಮಾಚರೇತ್" — ಸಿದ್ಧಾಂತ ಶಿಖಾಮಣಿ ೧೬-೧೦

"ಸರ್ವವೂ ಸುವರ್ಣ, ಸುವರ್ಣ. ಸುವರ್ಣ, ಸುವರ್ಣಮಯ ಜ್ಯೋತಿಯ ಪ್ರವಾಹವು ಹರಿಗಡಿಯದ ಹೊನಲಾಗಿ ಹರಿದು ಬಂತು. ಅದರೊಡನೆ ಧುಮುಕಿ ಬಂದ ಜ್ಞಾನವಿದು. ದೇವತೆಗಳ ಪಥವು ಸೂರ್ಯಪ್ರಭೆಯಿಂದ ದೈದಿಪ್ಯಮಾನ ವಾದುದು. ಇಲ್ಲಿ ಬಿಕ್ಕಟ್ಟುಗಳ ವಾಸ್ತವಿಕತೆಯೇ ಮಾಯವಾಗಿ ಹೋಗುವದು."

"ಪರಮೇಶ್ವರನ ಇಚ್ಛಾನುಸಾರವಾಗಿ ನಮ್ಮ ಇಚ್ಛೆ ಇರಬೇಕು. ಇದೇ ಪರಮರಹಸ್ಯ". — ಶ್ರೀ ಮಾತಾಜಿಯವರು ("ಮಾತೃವಾಣಿ"ಯಿಂದ)

ನೂರೊಂದು ಸ್ಥಲಗಳ ಅನುಶೀಲನದಿಂದಲೂ ಶ್ರೀ ಅರವಿಂದರ ವಿಜ್ಞಾನಪಥಕ್ಕೆ ನಮ್ಮಲ್ಲಿ ಪ್ರವೃತ್ತಿಯುಂಟಾಗಿ ನವಯುಗದ ಯೋಗಕ್ಕೆ ನಮ್ಮೊಳಗೆ ಕರೆಯುಂಟಾಗ ದಿರಲಾರದೆಂದು ನಂಬಿದ್ದೇನೆ.

[ಟಿಪ್ಪಣಿ :– 'ಸಿದ್ಧಾಂತ ಶಿಖಾಮಣಿ'ಯಲ್ಲಿ ಹೇಳಿದಂತೆ – ಕೇವಲ ಪರಮೇಶ್ವರಾಸಕ್ತನೂ, ಸಮಂತಾಬುದ್ಧಿ ವಿಶಿಷ್ಟನೂ ಆದ ಸ್ವಯಚರಪರನೆಂಬವನು (೫೧, ೫೨, ೫೩), ಕೃತಿ, ಭಾವ, ವಿಚಾರಗಳ ಅಗತ್ಯವನ್ನರಿತು (೫೪, ೫೫, ೫೬). ಸಕಾಯನಾಗಿದ್ದರೂ ಅಕಾಯನೂ, ಪರಕಾಯನೂ ಆಗಿ (೫೭, ೫೮, ೫೯), ಲೋಕ ಸಂಗ್ರಹಕ್ಕಾಗಿ ಅರಿತಂತೆ ಆಚರಿಸತೊಡಗುವನು (೬೦, ೬೧, ೬೨). ಲೋಕದಲ್ಲಿ ಹಾಗೆ ಆಚರಿಸುವದು ಕರ್ತವ್ಯವೆಂದು ಮಾತ್ರ ಹಾಗೆ ವರ್ತಿಸುವನೇ ವಿನಾ ಸ್ವಪ್ರಯೋಜನಕ್ಕಲ್ಲ (೬೩, ೬೪, ೬೫), ಆದ್ದರಿಂದ ಅವನ ಕೃತಿ, ಭಾವ ಮತ್ತು ವಿಚಾರ ಇವೆಲ್ಲ ಪರಮೇಶ್ವರನಿಗೆ ಸಂಪೂರ್ಣವಾಗಿ ಸಮರ್ಪಿತವಾಗುವವು (೬೬, ೬೭, ೬೮). ಅದರಿಂದ ಸದ್ಗುರು ಲಾಭವಾಗುವದು (೬೯, ೭೦, ೭೧) ಹಾಗೂ ತನ್ನೊಳಗಿರುವ ಜೀವಾತ್ಮ, ಅಂತರಾತ್ಮ, ಪರಮಾತ್ಮರ ಅಂದರೆ ಕ್ಷರ, ಅಕ್ಷರ, ಪುರುಷೋತ್ತಮರ ನೆಲೆ ತಿಳಿಯುವದು (೭೨, ೭೩, ೭೪) ಅದರ ಪ್ರಭಾವದಿಂದ ದೇಹ ಪ್ರಾಣ ಮನಗಳೆಲ್ಲ ಶಾಂತದಶಾ ಪ್ರಾಪ್ತವಾಗುವವು. ಇದಕ್ಕೆ ನಿರ್ದೇಹ, ನಿರ್ಭಾವ ಮುಂತಾದುದಾಗಿ ಅಂದಿದ್ದಾರೆ (೭೫, ೭೬, ೭೭). ಈ ಶಾಂತಿಕಲೆಯ ಪರಿಣಾಮದಿಂದ ಸಮಸ್ತ ಬ್ರಹ್ಮಾಂಡದ ಆದಿಯೂ ಅಂತ್ಯವೂ ಆಶ್ರಯವೂ ಪರಮಾತ್ಮನೇ ಎಂಬ ಜ್ಞಾನೋದಯವಾಗುವದು (೭೮, ೭೯, ೮೦). ಆದ್ದರಿಂದ ಪರಮಾತ್ಮನ ಆನಂದ ಕಲೆಯು ಅನುಭವವಾಗಲು (೮೧, ೮೨, ೮೩) ಕ್ರಿಯೆ, ಭಾವ, ವಿಚಾರಗಳು ನಡೆದಿದ್ದರೂ ನಡೆದಿಲ್ಲವೋ ಏನೋ ಅನ್ನುವಷ್ಟು ಅವು ಸಹಜಸ್ಥಿತಿಗೆ ಬರುವವು (೮೪, ೮೫, ೮೬). ಹೀಗೆ ನಿಷ್ಪತ್ತಿ ಲಾಭವಾದುದರ ಫಲದಿಂದ ತನ್ನಲ್ಲಿಯೂ, ಚರಾಚರ ಭೂತ ವಸ್ತುಗಳಲ್ಲಿಯೂ ಹಾಗೂ ಸಮಸ್ತ ವಿಶ್ವದಲ್ಲಿಯೂ ಆಕಾಶದಂತೆ ಸರ್ವವ್ಯಾಪಿಯಾದ ಆತ್ಮನ ಅನುಭವವಾಗುವದು (೮೭ ಪಿಂಡಾಕಾಶ, ೮೮ ಬಿಂದ್ವಾಕಾಶ, ೮೯ ಮಹಾಕಾಶ). ಇದರ ಅನಂತರವೇ ಕೃತಿ ಭಾವ–ವಿಚಾರ

ಗಳೆಲ್ಲ ಶಿವಮಯವಾಗಿ ಪ್ರಕಾಶಮಾನವಾಗುವವು (೯೦ ಕ್ರಿಯಾ ಪ್ರಕಾಶನ, ೯೧ ಭಾವಪ್ರಕಾಶನ. ೯೨ ಜ್ಞಾನಪ್ರಕಾಶನ). ನೂರೊಂದು ಸ್ಥಲದ ಮಾರ್ಗವಿದು (ಹೀಗೆಂದು ನನ್ನ ಕಲ್ಪನೆ). [ಇಂದು ನಾವು ಬೇಡುತ್ತಿರುವದು "ಲಯ"ವಲ್ಲ, "ನಿರ್ವಾಣ"ವಲ್ಲ. "ಜ್ಞಾನಶೂನ್ಯಸ್ಥಲ"ವಲ್ಲ. ನಮಗೆ ಬೇಕಾದುದು ಯಾವುದೆಂದರೆ– "ಕ್ರಿಯಾಪ್ರಕಾಶನ", "ಭಾವಪ್ರಕಾಶನ", "ಜ್ಞಾನಪ್ರಕಾಶನ" ಇದು ತಾನೆ, ಓಂ]

**ಶಿವಾನುಭವ ೧೮–೧ ಅಕ್ಟೋಬರ ೧೯೪೩**

# ಪ್ರಾಣ ಲಿಂಗಾರ್ಚನೆ

"ಪ್ರಕಾಶಮಯ ಜೀವನ" ಎಂಬ ಹೆಸರಿನಿಂದ ನೂರೊಂದು ಸ್ಥಲಗಳಲ್ಲಿ ಕೊನೆಯವುಗಳಾದ ೫೭ ಸ್ಥಲಗಳಿಗೆ ಸಂಬಂಧಿಸಿದ ವಿಷಯವನ್ನು ಹಿಂದೊಮ್ಮೆ ಇದೇ "ಶಿವಾನುಭವ" ಪತ್ರಿಕೆಯಲ್ಲಿ ಪ್ರಕಟಗೊಳಿಸಿದ್ದೇನೆ. ಆದರೆ ಈಗ ಮೊದಲಿನ ೪೪ ಸ್ಥಲಗಳಲ್ಲಿ ಮಹತ್ವದ್ದಾದ ಪ್ರಾಣಲಿಂಗಿ ಮೊದಲಾದವಕ್ಕೆ ಸಂಬಂಧಿಸಿದ ವಿಷಯವನ್ನು ಈಗ ಬರೆಯಲಿದ್ದೇನೆ.

ಶ್ರೀ ಸಿದ್ಧರಾಮೇಶ್ವರರ ಮಕ್ಕಳಾಗಿರಬಹುದಾದ ಶ್ರೀ ಶಿವಯೋಗೀಶ್ವರರೆಂಬವರು ತಮ್ಮ "ಸಿದ್ಧಾಂತ ಶಿಖಾಮಣಿ" ಎಂಬ ಗ್ರಂಥದಲ್ಲಿ ಶ್ರೀ ರೇಣುಕ ಅಗಸ್ತ್ಯ ಸಂವಾದ ರೂಪದಿಂದ ಈ ಬಗೆಗೆ ಹೀಗೆ ಹೇಳಿರುವರು—

ಕರ್ಮ ಪ್ರಧಾನತೆಯಿಂದ ಭಕ್ತ, ಮಾಹೇಶ್ವರ, ಪ್ರಸಾದಿಯೆಂದು ವರ್ಣಿಸಲ್ಪಟ್ಟವನೇ ಈಗ ಜ್ಞಾನ ಪ್ರಧಾನನಾಗುತ್ತಾನೆ. (ಪ್ರಾಣಲಿಂಗಿ, ಶರಣ, ಐಕ್ಯನಾಗುತ್ತಾನೆ.) ಅದನ್ನೀಗ ಹೇಳಲಾಗುತ್ತದೆ. ...ಪ್ರಾಣವಾಯು ಅಪಾನವಾಯುಗಳ ಸಮ್ಮಿಲನದಿಂದ ಕಂದ ಮಧ್ಯದಿಂದ ಯಾವುದು ಜಾಗೃತವಾಗುವದೋ ಅದೇ ಪ್ರಾಣಲಿಂಗವೆಂದು ಯೋಗಿಗಳಿಂದ ಹೇಳಲ್ಪಡುತ್ತದೆ... ಜ್ಞಾನಿಗಳಿಗೂ ಯೋಗಯುಕ್ತರಿಗೂ ಚಿದಾಕಾರವಾದ ಈ ಪರಬ್ರಹ್ಮಲಿಂಗವು ಹೃದಯದಲ್ಲಿ ದೀಪದಂತೆ ಸ್ಫುರಿಸುವದು... ಅಂತರಂಗದಲ್ಲಿರುವ ಜ್ಯೋತಿರೂಪವಾದ ಈ ಶಿವಾತ್ಮಕ ಪರಲಿಂಗವನ್ನು ಬಿಟ್ಟು ಅರಿಯದವರು ಬಾಹ್ಯದಲ್ಲಿ ಲಕ್ಷವನ್ನಿಡುವರು. ಬಾಹ್ಯವಸ್ತು ಪರಾಙ್ಮುಖರಾಗಿ ಚೇತನಾರೂಪವಾದ ಆಂತರಿಕ ಲಿಂಗ ಪರಾಮರ್ಶಿಗಳಾಗಿ ಯಾರು ಸದಾ ವರ್ಣಿಸುವರೋ ಅಂಥ ಯೋಗಿಗಳಿಗೆ ಪ್ರಾಣಲಿಂಗಿಗಳೆಂದು ಅನ್ನುತ್ತಾರೆ... (ಸ್ಥಲ– ೩೨).

ಮೋಕ್ಷಾಕಾಂಕ್ಷಿಗಳಾದಂಥ ಮುನಿಗಳು...... ಲಿಂಗಧಾರಣವು ಬಾಹ್ಯಿಕ ಮತ್ತು ಆಂತರಿಕ ಹೀಗೆ ಎರಡು ವಿಧವೆಂದು ಹೇಳಿದ್ದಾರೆ. ಶಂಕರನ ಸರ್ವಕಾರಣವಾದ ಚಿದ್ರೂಪ ಪರಲಿಂಗವನ್ನು ಚಿತ್ತದಲ್ಲಿ ಧಾರಣ ಮಾಡುವದೇ ಆಂತರಿಕವೆಂದು ಹೇಳಲ್ಪಟ್ಟಿದೆ... ಸದಾನಂದ ಪರಿಸ್ಫೂರ್ತಿ ಸಮುಲ್ಲಾಸ ಕಲಾಮಯವಾದ... ಹಾಗೂ

ಪ್ರಪಂಚಾತೀತವಾದ ಪರಬ್ರಹ್ಮ ಮಹಾಲಿಂಗವು ಸರ್ವ ಪ್ರಾಣಿಗಳ ಅಂತರಂಗದಲ್ಲಿ ಮೂರು ಸ್ಥಾನಗಳಲ್ಲಿ ಗೋಚರಿಸುವದು. ಸರ್ವದೇಹಿಗಳ ಮೂಲಾಧಾರದಲ್ಲಿ, ಹೃದಯದಲ್ಲಿ ಮತ್ತು ಭ್ರೂಮಧ್ಯದಲ್ಲಿ ಜ್ಯೋತಿರ್ಲಿಂಗವು ಸದಾ ಪ್ರಕಾಶಿಸುವದು. ಆಗಮಗಳು ಇವಕ್ಕೆ ಬ್ರಹ್ಮವೆಂದನ್ನುವವು... ಆಧಾರದಲ್ಲಿ ಅಥವಾ ಹೃದಯದಲ್ಲಿ ಇಲ್ಲವೆ ಭ್ರೂಮಧ್ಯದಲ್ಲಿ ನಿರಂತರವಾಗಿ ಜ್ಯೋತಿರ್ಲಿಂಗಾನುಸಂಧಾನ ಮಾಡುವದೇ ಆಂತರಿಕ ಲಿಂಗಧಾರಣವೆಂದನ್ನಿಸುವದು. ಆಧಾರದಲ್ಲಿ ಕನಕವರ್ಣದ್ದಾಗಿಯೂ, ಹೃದಯದಲ್ಲಿ ಹವಳ ಬಣ್ಣದ್ದಾಗಿಯೂ, ಭ್ರೂಮಧ್ಯದಲ್ಲಿ ಸ್ಫಟಿಕಪ್ರಭೆಯುಳ್ಳದ್ದಾಗಿಯೂ ಲಿಂಗವನ್ನು ಯೋಗಿಗಳು ಭಾವಿಸಬೇಕು. ನಿರುಪಾಧಿಕವಾದ ಈ ಆಂತರಿಕ ಲಿಂಗಧಾರಣವು ಬಾಹ್ಯಲಿಂಗಧಾರಣಕ್ಕಿಂತ ಕೋಟಿಪಟ್ಟು ಮೇಲಾಗಿರುತ್ತದೆ... ಆದ್ದರಿಂದ ವಿದ್ವಾಂಸರು ಸರ್ವಪ್ರಯತ್ನದಿಂದ ಈ ಶಾಂಕರ ಲಿಂಗವನ್ನು ಆಂತರ್ಯದಲ್ಲಿ ಭಾವಿಸಿ ಸರ್ವಕ್ಲೇಶಗಳಿಂದ ಮುಕ್ತರಾಗಬೇಕು (ಸ್ಥಲ– ೫).

ಅಂತರ್ಗತವಾದ ಈ ಚಿದಾಚಾರ ಪರಶಿವಲಿಂಗವನ್ನು ಭಾವಪುಷ್ಪಗಳಿಂದ ಪೂಜಿಸುವದೇ ಪ್ರಾಣಲಿಂಗಾರ್ಚನೆಯೆನಿಸುವದು...... ಇಂದ್ರಿಯಗಳನ್ನು ನವದ್ವಾರಗಳನ್ನೂ ಬಂಧಿಸಿರಲಾಗಿ ಜ್ಞಾನದಿಂದ ಪ್ರಜ್ವಲಿಸುವ ಹೃದಯ ಮಂದಿರದಲ್ಲಿ ಪದ್ಮಪೀಠದಲ್ಲಿ ಮಂಡಿಸಿದ ಶಿವ್ಯಸ್ವರೂಪವಾದ ಚೇತನಲಿಂಗವನ್ನು ಭಾವಿಸಿ ಸದಾಕಾಲವೂ ಆತನನ್ನು ಭಾವವಸ್ತುಗಳಿಂದ ಪೂಜಿಸಬೇಕು. ಕ್ಷಮೆಯೇ ಅಭಿಷೇಕ ಜಲವು, ವಿವೇಕವೇ ವಸ್ತ್ರವು, ಸತ್ಯವೇ ಆಭರಣವು, ವೈರಾಗ್ಯವೇ ಹೂಮಾಲೆಯು, ಸಮಾಧಿ ಸಂಪನ್ನತೆಯೇ ಗಂಧವು, ನಿರಹಂಕಾರವೇ ಅಕ್ಷತೆಯು, ಶ್ರದ್ಧೆಯೇ ಧೂಪವು, ಮಹಾಜ್ಞಾನವು ಜಗತ್ತನ್ನು ಬೆಳಗಿಸುವ ದೀಪವು, ಪ್ರಪಂಚ ಭ್ರಾಂತಿಯನ್ನು ನಿವೇದನಗೊಳಿಸುವದೇ ನೈವೇದ್ಯವು, ಮೌನವೇ ಘಂಟಾನಾದವು ವಿಷಯಾರ್ಪಣವೇ ತಾಂಬೂಲವು, ವಿಷಯ ಭ್ರಮಣ ರಹಿತತೆಯೇ ಪ್ರದಕ್ಷಿಣವು, ಬುದ್ಧಿವ್ಯಾಪಾರವೆಲ್ಲಾ ಅದರಲ್ಲೇ ಅಡಗಿ ಹೋಗುವದೇ ನಮಸ್ಕಾರವು. ಈ ಪ್ರಕಾರವಾದ ಭಾವಪುಷ್ಪಗಳಿಂದ ಬಹಿರ್ಮುಖ ಮನಸ್ಕನಾಗದೆ ಆಂತರಿಕ ಲಿಂಗವನ್ನು ಪೂಜಿಸಬೇಕು (ಸ್ಥಲ–೩೩).

ಹೀಗೆ ಪ್ರಾಣಲಿಂಗಾರ್ಚನ ಕ್ರಮದಿಂದ ಅಂತಃಕ್ರಿಯಾರತನಾಗುವದರಿಂದ ಅವನಿಗುಂಟಾಗುವ ಶಿವಾತ್ಮಧ್ಯಾನ ಸಂಪತ್ತಿಗೆ ಶಿವಯೋಗ ಸಮಾಧಿಯೆಂದೆನ್ನುವರು. ಸರ್ವತತ್ತ್ವಗಳಿಗೆ ಮೀರಿದ, ಸಚ್ಚಿದಾನಂದ ಭಾಸುರವಾದ ಸ್ವಪ್ರಕಾಶವೂ ಅನಿರ್ದೇಶ್ಯವೂ ವಾಙ್ಮನಗಳಿಗಗೋಚರವೂ, ಉಮೆಯೆಂಬ ಮಹಾಶಕ್ತಿಯಿಂದ ಚಿದ್ರೂಪವಾಗಿ ಬೆಳಗುವ ಹಂಸರೂಪವಾದ ಪರಮ ಆತ್ಮನನ್ನು ತಾನೇ ಆದೆಂಬ ಭಾವನೆಯಿಂದ ಭಾವಿಸಬೇಕು. ಅದರಲ್ಲೇ ಏಕತಾನತೆಯು ಸಿದ್ಧಿಸಲು ಅದಕ್ಕೆ ಸಮಾಧಿಯೆಂದೆನ್ನುವರು... ಭ್ರೂಮಧ್ಯದ ಮೇಲ್ಗಡೆಯಲ್ಲಿ ಸಹಸ್ರದಳ

ಕಮಲವನ್ನು ಭಾವಿಸಿ ಅದರಲ್ಲಿ ಚಂದ್ರಬಿಂಬವನ್ನು ಭಾವಿಸಬೇಕು. ಅದರಲ್ಲಿ ಸೂಕ್ಷ್ಮರಂಧ್ರವೊಂದುಂಟು. ಅದೇ ಕೈಲಾಸ ಸ್ಥಾನವು. ಅಲ್ಲಿ ಸರ್ವಕಾರಣಕ್ಕೆ ಕಾರಣನಾದ ಶಂಭುವನ್ನು ಭಾವಿಸಬೇಕು. ಬಹಿರ್ವಾಸನಾಮಯ ಚಿತ್ತಕ್ಕೆ ವಿಶ್ವವಿಕಲ್ಪವು ಗೋಚರಿಸಿದರೆ ಹೀಗೆ ಅಂತರ್ವಾಸನಾಮಯ ಚಿತ್ತರಾದವರಿಗೆ ಆತ್ಮಾನಂದವು ಪ್ರಕಟವಾಗುವದು (ಸ್ಥಲ-೩೪).

ಒಳಗಿರುವ ಶಿವಲಿಂಗದ ಪ್ರತ್ಯಕ್ಷಾನುಭವ ಸ್ಥಿತಿಯುಂಟಾದವರಿಗೆ ನಿಜಲಿಂಗ ಸ್ಥಲಕ್ಕೆ ಬಂದವರೆಂದು ಜ್ಞಾನಿಗಳು ಅನ್ನುವರು.... ಪರಮ ಆತ್ಮನೂ, ಜ್ಯೋತಿರ್ಮಯನೂ ಆದ ಮಹಾಲಿಂಗದೆದುರಿಗೆ ಸೂರ್ಯನಾಗಲಿ, ಚಂದ್ರನಾಗಲಿ, ಮಿಂಚಾಗಲಿ, ಅಗ್ನಿಯಾಗಲಿ, ತಾರಕೆಗಳಾಗಲಿ ಥಳಥಳಿಸಲಾರವು. ಜ್ಯೋತಿರ್ಮಯವಾದ ಶಿವಾತ್ಮಕ ಪರಲಿಂಗವನ್ನು "ಆತನ ಬೆಳಕಿನಿಂದ ಇದೆಲ್ಲಾ ಬೆಳಗುತ್ತದೆ" ಎಂದು ಶ್ರುತಿಗಳು ಸಾರುತ್ತವೆ. ಇದರಲ್ಲಿ ಎಷ್ಟೂ ಸಂಶಯವಿಲ್ಲ... ಆದಕಾರಣ ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮಲಿಂಗವೇ ತನ್ನ ಸ್ವರೂಪವೆಂದು ಧ್ಯಾನ ಮಾಡುವದರಿಂದ ನಿಜಲಿಂಗ ಸ್ಥಿತಿಯು ತನ್ನಲ್ಲಿ ಹುಟ್ಟುತ್ತದೆ (ಸ್ಥಲ-೩೫).

...... ತನ್ನೊಳಗಿರುವ ಜ್ಯೋತಿರೂಪವಾದ ಲಿಂಗವನ್ನು ಅರಿತು ಸತತವಾಗಿ ಯಾರು ಪೂಜಿಸುವರೋ ಭಾವಿಸುವರೋ ಅವರಿಗೆ ಅಂಗಲಿಂಗಿಗಳೆಂದು ಹೇಳುವರು. ಲಿಂಗವೇ ಬ್ರಹ್ಮವೆಂದು ವಿಶ್ವಧಾಮವೆಂದು ವಿಮುಕ್ತಿಪದವೆಂದು ಸನಾತನ ಶಾಸ್ತ್ರಗಳಿಂದ ಅರಿತು ಮುಕ್ತಿರೂಪವಿದು ಲಿಂಗವೆಂದು ಯಾರ ಮನಸ್ಥಿತಿಯುಂಟಾಗಿರುವದೋ ಅಂಥವರು ದೇಹದಿಂದೊಡಗೂಡಿ ಇದ್ದರೂ ಅವರು ಮುಕ್ತರು, ಅವರು ಜ್ಞಾನಿಗಳು, ಅವರೇ ಮಹಾಗುರುಗಳು .. ಯಾವಾತನು ಪ್ರಾಣಲಿಂಗಾರ್ಚನಾಭಾವ ಧರ್ಮಿಯಾಗಿ ಶಿವಭಾವನಾ ಭಾವಿತನಾಗಿರುವನೋ ಅವನೇ ಪ್ರಾಣಲಿಂಗಿಯೆನಿಸಿಕೊಳ್ಳುವನು ಮತ್ತು ಆತನೇ ಜ್ಞಾನಪರಿಪಾಕಾವಸ್ಥೆಯಿಂದ ಶರಣನೆಂದು ಅನ್ನಿಸಿಕೊಳ್ಳುವನು (ಸ್ಥಲ- ೩೬).

ಜ್ಞಾನಸ್ವರೂಪನಾದಂಥ ಅಂಗಲಿಂಗಿಯೇ ಸತಿಯೆಂದೂ ಶಿವನೇ ಪತಿಯೆಂದೂ ತಿಳಿಯತಕ್ಕದ್ದು. ಇವರಿಬ್ಬರ ಸಮಾವೇಶದಿಂದ ಲಭಿಸುವ ಸುಖವು ಯಾರಿಗೆ ಪ್ರಾಪ್ತವಾಗಿರುವದೋ ಅವನಿಗೇ ಶರಣನೆಂದು ಹೆಸರು.... ಹೆಂಡತಿಗೆ ಗಂಡನಲ್ಲಿ ಹೇಗೋ ಹಾಗೇ ಶಿವನಲ್ಲಿ ಪ್ರೇಮವನ್ನು ಭಾವಿಸಿ ಆತನ ಹೊರತು ಇನ್ನಾವುದರಲ್ಲಿಯೂ ಅನುರಾಗವಿಲ್ಲದಿರುವವನೇ ಶರಣನೆಂದು ಕರೆಯಲ್ಪಡುವನು. ಪ್ರತ್ಯಕ್ಷ ಶಿವನನ್ನರಿತವನು ಇನ್ನೇನನ್ನು ಬಯಸುವನು ? ನಿಧಾನವೇ ಪ್ರಾಪ್ತವಾಗಿರುವಾಗ ಬೇರೆ ಕಾಜಿನ ಮಣಿಯನ್ನೇಕೆ ಬೇಡುವನು ? ಶಿವಾನಂದವನ್ನು ಪಡೆದವನ ಇದುರಿಗೆ ಇನ್ನೇನು ನಿಲ್ಲುವದು ? ಗಂಗಾಮೃತವನ್ನು ಬಿಟ್ಟು ಮೃಗಜಲಕ್ಕೆ ಏಕೆ ಎಳಿಸುವನು?... ಸಂಸಾರವೆಂಬ ರೋಗದಿಂದ ಪೀಡಿತರಾದವರಿಗೆಲ್ಲ ಸರ್ವಜ್ಞನೂ ಸರ್ವದೋಷನಾಶಿಯೂ ಆದ ಶಿವನೇ ಆಶ್ರಯಸ್ವರೂಪನು. ಇಂಥ ಶಿವನ ಜ್ಞಾನದಿಂದ

ಪರಾ ಆನಂದವು ಪ್ರಕಟವಾಗುವದು. ಇಂಥ ಆನಂದದಲ್ಲಿ ಆಸಕ್ತರಾದಂಥ ಯೋಗಿಗಳು ಇನ್ನಾವುದರಲ್ಲಿಯೂ ಆನಂದಿಸಲಾರರು. ಆದ್ದರಿಂದ ಅಂಥವರು ಸರ್ವ ಪ್ರಯತ್ನಗಳಿಂದಲೂ ಪರಮಾತ್ಮನಿಗೇ ಶರಣಾಗತರಾಗಿ ಆತನ ಅನಂತ ಸುಖವನ್ನು ಪಡೆದು ಮೋದಿಸುವರೇ ಹೊರತು ಅನ್ಯ ಚಿಂತೆಗಳಲ್ಲಿ ಅವರು ಮುಳುಗಲಾರರು (ಸ್ಥಲ- ೩೭).

ಇಂಥ ಶಿವಾಸಕ್ತ ಪರಾ ಆನಂದ ಮೋದಿತನಾದ ಶರಣನಿಂದ ತಮೋಗುಣಗಳೆಲ್ಲ ನಿರಾಕರಿಸಲ್ಪಡುವವು. ತಮೋ ಮಿಶ್ರವಾದ ಜ್ಞಾನವು ಗತಿದಾಯಕವಾಗಲಾರವು. ನಿರ್ಮಲವಾದ ಸತ್ವವೇ ಜ್ಞಾನಯೋಗಕ್ಕೆ ಉತ್ಕೃಷ್ಟವಾದುದು. ಶಮ, ದಮ, ವಿವೇಕ, ವೈರಾಗ್ಯ, ಅಖಂಡಧ್ಯಾನ-ಭಾವನೆ, ಕ್ಷಮ, ಕಾರುಣ್ಯ, ಸತ್ಯ-ಸಂಭೂತ ಶ್ರದ್ಧೆ, ಶಿವಭಕ್ತಿ, ಪರಮಧರ್ಮಗುಣ ಇವು ಶಿವಜ್ಞಾನಕ್ಕೆ ಬಂಧು ಸ್ವರೂಪವಾಗಿವೆ. ಇವುಗಳಿಂದ ಕೂಡಿದ ಮಹಾಯೋಗಿಯೇ ಸಾತ್ವಿಕನೆಂದು ವರ್ಣಿಸಲ್ಪಟ್ಟಿರುವನು. ಕಾಮ, ಕ್ರೋಧ, ಮೋಹ, ಮದ, ಮಾತ್ಸರ್ಯಾದಿ ಮದ್ದಾನೆಗಳು ಶಿವಜ್ಞಾನವೆಂಬ ಸಿಂಹದ ಇದುರಿಗೆ ಹೇಗೆ ನಿಲ್ಲುವವು ? ಶಿವರೂಪವಾದ ಈ ಜಗತ್ತಿನಲ್ಲಿ ಯಾರ ಮೇಲಾದರೂ ರಜಸಾವಿಷ್ಟ ಮನಸ್ಕನಾಗಿ ದ್ವೇಷವನ್ನು ಮಾಡಿದ್ದಾದರೆ ಇದು ಶಿವನನ್ನೇ ದ್ವೇಷಿಸುವ ಹಾಗಾಗುತ್ತದೆ. ಯಾವಾತನೂ ಸಕಲ ಜನರನ್ನು ಸದಾ ದ್ವೇಷಿಸುವನೋ ಹಾಗೂ ಸಕಲರ ಸಲುವಾಗಿ ಅಹಂಕಾರ ಭರಿತನಾಗುವನೋ, ಇಂಥ ಅಸತ್ಯ ಭಾವನೆಯಿಂದ ಮುಕ್ತನಾದವನು ತಾಮಸನೆಂದು ಕರೆಯಲ್ಪಡುವನು. ರಾಗದ್ವೇಷಗಳು ತಮಸ್ಸಿನ ಕಾರಣದಿಂದಲೇ ಹುಟ್ಟುತ್ತವೆ. ಆದರೆ ಈ ಕಾಡುಗಿಡಗಳು ಶಿವಜ್ಞಾನವೆಂಬ ಕುಠಾರದಿಂದ ನಿರಂತರವೂ ಕಡಿದು ಹಾಕಲ್ಪಡುವವು. ಸಹಸ್ರ ಸೂರ್ಯರಿಗೆ ಸಮಾನವಾದ ಶಿವಜ್ಞಾನವು ಪ್ರಾಪ್ತವಾಯಿತೆಂದರೆ ಅಂಥ ಮಹಾಶಿವಯೋಗಿಗಳಲ್ಲಿ ತಮೋವಿಕಾರಗಳು ಎಲ್ಲಿಂದ ಬರಬೇಕು ? (ಸ್ಥಲ- ೩೮).

ಸಂಸಾರಕ್ಕೆಳಸುವ ತಮೋಭಾಗವು ನಿರಾಕೃತವಾಗಲು ಜ್ಞಾನ ನಿರ್ದೇಶವು (ಐಕ್ಯಜ್ಞಾನದ ನಿರ್ದೇಶವು) ಲಭಿಸುವದು... ಇಂಥ ತತ್ತ್ವ ಸಾಕ್ಷಾತ್ಕಾರಿಗಳೂ ಜೀವನ್ಮುಕ್ತ ಸ್ವಭಾವಿಗಳೂ ಆದ ಗುರುಗಳ ಕಟಾಕ್ಷ ಮಾತ್ರದಿಂದ ಜಗತ್ತಿನಲ್ಲಿ ಏನು ಲಭಿಸಲಿಕ್ಕಿಲ್ಲ ? ಶಿವಾದ್ವೈತ ಪರಾಯಣರಾದ, ಇಂಥ ಕರುಣಾಸಾಗರರಾದ ಕೈವಲ್ಯ ಕಲ್ಪತರು ಸಮಾನರಾದ ಗುರುಗಳು ಜಗತ್ತಿನಲ್ಲಿ ದುರ್ಲಭರಾಗಿರುತ್ತಾರೆ... ಪ್ರಾಕೃತ ಗುರುಗಳಿಗಿಂತಲೂ ಶಿವಾದ್ವೈತ ತತ್ಪರರಾದ ಈ ಪರಮ ಗುರುಗಳು ಶ್ರೇಷ್ಠರಾಗಿರುತ್ತಾರೆ (ಸ್ಥಲ- ೩೯).

ಹೀಗೆ ನಿರ್ದೇಶಿತವಾದ (ಐಕ್ಯಜ್ಞಾನರೂಪವಾದ, ಶಿವತತ್ತ್ವ ಜಿಜ್ಞಾಸೆಯೇ ಶೀಲವೆಂದೆನ್ನಿಸಿಕೊಳ್ಳುವದು... ಶೀಲವೆಂದರೆ ಶಿವನೊಬ್ಬನದೇ ಜ್ಞಾನ, ಶಿವನೊಬ್ಬ

ನಲ್ಲಿಯೇ ಏಕಾಗ್ರತೆ, ಆತನ ಪ್ರಾಪ್ತಿಯಲ್ಲಿರುವದೇ ಉತ್ಕಂಠೆ. ಇದನ್ನುಳ್ಳವನೇ ಶೀಲವಂತನು. ಶಿವನ ಹೊರತು ಉಳಿದೆಲ್ಲದರ ಜ್ಞಾನದಲ್ಲಿ ಮನಸ್ಸಿಲ್ಲದವನೂ ಆತನಲ್ಲಿಯೇ ಆಸಕ್ತನಾದ ಮನೋವೃತ್ತಿಯುಳ್ಳವನೂ ಯಾವನೋ ಅವನೇ ಶೀಲಸಂಪನ್ನನು. ಪತಿವ್ರತಿಗೆ ಪತಿಪ್ರೇಮದಿಂದ ಹೇಗೆ ಶೀಲವು ಬರುತ್ತದೆಯೋ ಹಾಗೆಯೇ ಶಿವಾನುರಾಗದಿಂದ ಸುಶೀಲಭಕ್ತಿಯು ಬರುತ್ತದೆ... ಶಿವಾದ್ವೈತ ಜ್ಞಾನ ವೊಂದರಲ್ಲೇ ರತನೂ, ಜಗದೊಡೆಯನಾದ ಶಿವನನ್ನು ಪ್ರಸನ್ನೀಕರಿಸಿಕೊಂಡು ಆತನೊಬ್ಬನನ್ನೆ ತನಗಾಶ್ರಯ ಮಾಡಿಕೊಂಡಾತನೂ ಶಿವನಲ್ಲೇ ಏಕನಿಷ್ಠೆಯೆಂಬ ಶೀಲಗುಣವುಳ್ಳವನೂ ಆದಂಥವನೇ ಕೊನೆಗೆ ಶಿವೈಕ್ಯನೆಂದು ಕರೆಯಿಸಿಕೊಳ್ಳುತ್ತಾನೆ (ಸ್ಥಲ-೪೦).

ಪ್ರಾಣಲಿಂಗಾದಿ ಯೋಗದಿಂದ ಸುಖಾತಿಶಯವನ್ನು ಪಡೆದ ಶರಣನೇ ಮುಂದೆ ಶಿವನೊಡನೆ ಏಕಭಾವನೆಯನ್ನು ಪಡೆಯುವದರಿಂದ ಐಕ್ಯನೆಂದೆನಿಸಿಕೊಳ್ಳುತ್ತಾನೆ... ಕಣಮಾತ್ರ ವಿಷಯಾನಂದ ಆಶೆಯಿಲ್ಲದವನಾಗಿ ಶಿವಾನಂದವೆಂಬ ಮಹಾಸಾಗರದಲ್ಲಿ ಮುಳುಗಿದವನಾಗಿರುವದರಿಂದ ಐಕ್ಯನೆಂದೆನ್ನಲಾಗುತ್ತದೆ... ಭೇದಬುದ್ಧಿಯಿಂದ ಹುಟ್ಟು ಹಿಡಿದು ಮಹಾಸಂಸಾರ ಸಾಗರವನ್ನು ಅದ್ವೈತ ಬುದ್ಧಿಯೆಂಬ ನೌಕೆಯಿಂದ ಇಂಥ ದೇಶಿಕನು ದಾಟುತ್ತಾನೆ.... ಒಂದು ಕ್ಷಣಮಾತ್ರವೇ ಅದ್ವೈತ ಭಾವನೆಯಿಂದ ಯಾವ ಸುಖವು ಲಭಿಸುವದೋ ಅದನ್ನು ಭೋಗಿಗಳು ಒಂದು ಕೋಟಿ ವರ್ಷಗಳಲ್ಲಿ ಯಾದರೂ ಪಡೆಯಲಾರರು. ತನ್ನ ಚಿತ್ತವೃತ್ತಿಯಲ್ಲಿ ಅಡಗಿದ ಜಗತ್ತುಳ್ಳವನಾದ (ಅಂದರೆ ಸರ್ವಜಗತ್ತನ್ನು ತಾದಾತ್ಮ್ಯದಿಂದ ನೋಡುವವನಾದ) ಶಿವಯೋಗಿಗೆ ಯಾವ ಶಿವಾನಂದ ಪರಿಸ್ಫೂರ್ತಿಯುಂಟಾಗುವದೋ ಅದೇ ಮುಕ್ತಿಯೆಂದು ಹೇಳಲ್ಪಡುವದು (ಸ್ಥಲ ೪೧).

......ಶಿವಾದ್ವೈತ ಪರಿಜ್ಞಾನದಲ್ಲಿದ್ದ ಬಳಿಕ ಅಂಥ ಜ್ಞಾನಿಗೆ ಕರ್ಮಗಳನ್ನು ಮಾಡುವದರಿಂದಾಗಲಿ ಬಿಡುವದರಿಂದಾಗಲಿ ಏನು ಭಾಧಕವಿರುವದು? ಶಿವನೊಂದಿಗೆ ಏಕತ್ವಭಾವವನ್ನು ಪಡೆದ ಸರ್ವತ್ರ ಸಮದರ್ಶಿಯಾದವನು ಯಾವ ಹಿರಿ ಕರ್ಮಗಳನ್ನು ಮಾಡಿಯೂ ಅವುಗಳ ಫಲಕ್ಕೆ ಪಾತ್ರನಾಗಲಾರನು. ಸಕರ್ಮಿಗಳೂ, ದುಷ್ಕರ್ಮಿಗಳೂ, ಬ್ರಾಹ್ಮಣರೂ, ಅಂತ್ಯಜರೂ ಶಿವೈಕ್ಯ ಭಾವಯುಕ್ತರಿಗೆ ನಿಶ್ಚಯವಾಗಿ ಸಮಾನರಾಗಿಯೇ ಕಾಣುವರು... ನಿರ್ಮಲ ಜ್ಞಾನದಿಂದ ಕರ್ಮ ಬೀಜವೆಲ್ಲ ದಗ್ಧರಾದವರು ದೇಹಿಗಳಾಗಿ ಕಂಡರೂ ಅವರ ಲೌಕಿಕವು ಕೇವಲ ದೇಹ ಯಾತ್ರೆಯು ಮಾತ್ರವಾಗಿರುತ್ತದೆ. ಶಿವಜ್ಞಾನವನ್ನು ಪಡೆದ ಸ್ಥಿರ ವೈರಾಗ್ಯ ಲಕ್ಷಣವು ನೀರೊಳಗಿನ ಕಮಲದೆಲೆಯಂತೆ ಸ್ವಕರ್ಮದಿಂದ ಲಿಪ್ತರಾಗಿರುವದಿಲ್ಲ. ಇಂಥ ಮಹಾಮಂತಿಗಳು ನಡೆಯುತ್ತಿದ್ದರೂ, ನಿಂತಿದ್ದರೂ, ಮಲಗಿದ್ದರೂ ಎಚ್ಚರಾಗಿದ್ದರೂ, ಶಿವಜ್ಞಾನ ಸಂಪನ್ನತೆಯ ಮೂಲಕ ಸದಾ ಶಿವಪೂಜಾರತರೇ

ಆಗಿರುತ್ತಾರೆ. ಇಂಥವರು ಆನಂದದಿಂದ ಜಗತ್ತಿನಲ್ಲಿ ಏನೇನು ನೋಡುವರೋ ಅದೆಲ್ಲವೂ ಇಂಥ ಮಹಾತ್ಮರಿಗೆ ಶಿವದರ್ಶನಮಯವಾಗಿಯೇ ಕಾಣುವದು. ಯೋಗಿಯು ಮನಸ್ಸಿನಲ್ಲಿ ಶುದ್ಧಭಾವನೆಯಿಂದ ಏನೇನು ಆಲೋಚಿಸುವನೋ ಅದೆಲ್ಲವೂ ಶಿವಮಯತೆಯಿಂದ ಶಿವಧ್ಯಾನವಾಗಿಯೇ ಪರಿಣಮಿಸುವದು. ಶಿವ-ಯೋಗಿಯು ಸ್ವ-ಇಚ್ಛೆಯಿಂದ ಜಗತ್ತಿನಲ್ಲಿ ಏನೇನು ಮಾತನಾಡುವನೋ ಅದೆಲ್ಲವೂ ಶಿವಾತ್ಮಕವೇ ಆದುದರಿಂದ ಶಿವಸ್ತೋತ್ರವೇ ಆಗಿಬಿಡುವದು. ಸರ್ವದಾ ಶಿವಾತ್ಮರಾದ ಶಿವಯೋಗಿಗಳಿಂದ ಯಾವ ಯಾವ ಚಲನವಲನಗಳು ಉತ್ಪನ್ನವಾಗುವವೋ ಅವೆಲ್ಲಾ ಪರಮಾತ್ಮನ ಪೂಜೆಯೇ ಸರಿ (ಸ್ಥಲ-೪೨).

... ತನ್ನ ಹಾಗೂ ಪರರ ಮತ್ತು ಜಗತ್ತಿನ ಅಲ್ಲದೆ ಪರಶಿವನ ಅದ್ವೈತ ದರ್ಶನದಿಂದ ಏಕಭಾಜನವೆಂಬ ಪ್ರಸಾದಬುದ್ಧಿ ಲಭಿಸುತ್ತದೆ. ಶಿವನಲ್ಲಿ ಇದೆಲ್ಲ ವಿಶ್ವವೂ, ಸರ್ವರಲ್ಲಿ ಶಿವನೂ ತೋರುತ್ತಾನೆ... (ಸ್ಥಲ-೪೩).

.. ವಿಶ್ವಗುರುವಾದ ಸಾಕ್ಷಾತ್ ಶಿವನನ್ನು ಸದಾಕಾಲವೂ ತನ್ನ ಆತ್ಮನಲ್ಲಿ ಚಿದಾಕಾರದಿಂದ ಏಕತ್ವರೂಪವಾಗಿ ಪೂಜಿಸುತ್ತಿರುವದರಿಂದ ಇದಕ್ಕೆ ಸಹಭೋಜನವೆನ್ನುತ್ತಾರೆ... ಚಿದ್ರೂಪವೆಂಬ ಅಧಾರಾಗ್ನಿಯಲ್ಲಿ ಭೇದಪ್ರಪಂಚವೆಂಬ ಹವಿಸ್ಸನ್ನು ಜ್ಞಾನಯಜ್ಞರೂಪದಿಂದ ಹೋಮಿಸುವದರಿಂದ ಇಂಥವರನ್ನು ವಿಶ್ವಹವ್ಯ ಭುಂಜಕರೆಂದು ಹೇಳಲಾಗುತ್ತದೆ. ಪರಮಾನಂದ ಭಾಸುರವಾದ ಚಿದಾಕಾರ ಪರಾಕಾಶದಲ್ಲಿ ಚಿತ್ತವೃತ್ತಿಯು ವಿಲೀನವಾಗಿ ಬಿಟ್ಟಂಥವರಿಗೆ ವಿಶ್ವಕ್ರಮಸ್ಥಿತಿಯು ಎಲ್ಲಿರುವದು ? ವಿಶ್ವಬಾಧಾರಹಿತವಾದ ನಿಷ್ಕಳಂಕ ಚಿದಾಕಾರದಲ್ಲಿ. ಸಾಮರಸ್ಯ ಸ್ವಭಾವದಿಂದ ತನ್ನನ್ನು ಲೀನನೆಂದು ಭಾವಿಸಬೇಕು. ಇದುವೆ ಸದಾನಂದ ಪ್ರಕಾಶವಾದ ಪರಾವಿದ್ಯೆಯೆಂದು ತಿಳಿಯಬೇಕು. ಜಗತ್ತಿನ ಮೋಹವನ್ನು ನಿವರ್ತಿಸುವ ಮುಕ್ತಿಯೆಂದೂ ಇದಕ್ಕೆ ಮಹಾತ್ಮರು ಅನ್ನುವರು (ಸ್ಥಲ-೪೪).

ಹೀಗೆ ಆತ್ಮನನ್ನು ಅರಳಿಸಿಕೊಳ್ಳುವದರ ಮೇಲೆಯೇ ನಾಳಿನ ಕಾಲದ ಜಗತ್ತಿನ ಪ್ರಗತಿಯು ಅವಲಂಬಿಸಿದೆಯೆಂದು ಶ್ರೀ ಅರವಿಂದರು ಹೇಳುತ್ತಾರೆ.

ಶಿವಾನುಭವ ೨೧-೨ ನವ್ಹಂಬರ ೧೯೪೬

42)

# ಶಿವಯೋಗೀಶ್ವರರ ಶಿವಪೂಜೆ

'ಪಶ್ಚಿಮ ಪದ್ಮಾಸನದಲ್ಲಿ ಕುಳಿತು, ಸಿಟ್ಟೈಲುವ ಮಂಗಿದಂ, ತುಟಿಮಿಡುಕದೆ, ಅಟ್ಟಿ ಆಡಿತಲ್ಲಾ; ಬಿಟ್ಟ ಕಣ್ಣು, ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟಿಗುಡಿಯು, ಕೂಡಲಸಂಗಮದೇವ ಹಿಡಿವಡೆದ."

"ಬೆಳಗಿನೊಳಗಿನ ಮಹಾಬೆಳಗು, ಶಿವಶಿವ, ಪರಮಾಶ್ರಯವೇ ತಾನಾಗಿ ಶತಪತ್ರ ಕಮಲ (ಸಹಸ್ರದಲ) ಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪ ನಮ್ಮ ಕೂಡಲಸಂಗಮದೇವ."

ಎಂದು ಶ್ರೀ ಬಸವಣ್ಣನವರು ಪ್ರಾಣಲಿಂಗದ ಪರಮಪ್ರಕಾಶದ ಅನುಪಮ ಆನಂದವನ್ನು ಬಣ್ಣಿಸಿರುವರಷ್ಟೆ ? ಇದೇ ಶಿವಯೋಗ; ಇದೇ ಆಂತರಿಕ ಶಿವಪೂಜೆ.

"ಜಗದಗಲ ಮುಗಿಲಗಲ ಮಿಗೆಯಗಲ ... " 

"ಜಗದಗಲ ಮಂಟಪಕ್ಕೆ ಮುಗಿಲಗಲದ ಮೇಲುಕಟ್ಟಿನಲ್ಲಿ ಚಿತ್ರವಿಚಿತ್ರ ನೋಡುತ್ತ ನೋಡುತ್ತ ನೋಡುತ್ತ; ಧ್ಯಾನಿವಿಶ್ರಾಮದಲ್ಲಿ ದಿಟದಿಟವೆಂಬುದೊಂದು ದರುಶನವ ನೋಡುತ್ತ ನೋಡುತ್ತ ನೋಡುತ್ತ; ಗಗನಗಂಭೀರದಲ್ಲಿ ಉದಯ ವಾಯಿತ್ತ ಕಂಡೆನು, ಗುಹೇಶ್ವರನೆಂಬ ಲಿಂಗವು ತಾನೆಯಾಗಿ."

"...ಪರಮಾನಂದದ ಮಠದೊಳಗೆ, ಪರಿಣಾಮ ಪಶ್ಚಿಮ ಜ್ಯೋತಿಯ ಬೆಳಗಿನಲ್ಲಿ, ಪರುಷದ ಸಿಂಹಾಸನವನಿಕ್ಕಿ, ಪ್ರಾಣಲಿಂಗ ಮೂರ್ತಿಗೊಂಡಿರಲು.... ಶ್ರೀಮದ ಖಂಡಪರಿ ಪೂರ್ಣ ಪೂಜೆಯ ಮಾಡುವವರಿಗೆ ನಮೋ ನಮೋ ಎಂಬೆ ಗುಹೇಶ್ವರಾ."

ಎಂದು ಶ್ರೀಮದಲ್ಲಮಪ್ರಭುಗಳು ನಿರೂಪಿಸಿದ ಪರಮಾನಂದ ಪ್ರಾಣಲಿಂಗ ಪೂಜೆಯೇ ಶಿವಯೋಗಿಗಳ ದಿವ್ಯಪೂಜೆಯೆಂದು ಬೇರೆ ಹೇಳುವ ಕಾರಣವಿಲ್ಲ.

"ಪಶ್ಚಿಮ ಕದವ ತೆರೆದು, ಒಚ್ಚಬರಿಯ ಬೆಳಗ ನೋಡಲೊಲ್ಲದೆ. ಕತ್ತಲೆಯ ಬಾಗಿಲಿಗೆ ಮುಗ್ಗಿ, ಕಣ್ಣುಕಾಣುವ ಅಂಧಕರಂತೆ ಜಾರಿ ಜಾರಿ ಎಡವಿಬಿದ್ದು, ಕರ್ಮಕ್ಕೆ ಗುರಿಯಾಗುವ ಮರ್ತ್ಯದ ಮನುಜರಿರಾ ನೀವು ಕೇಳಿರೋ ಹೇಳಿಹೆನು, ನಮ್ಮ ಶರಣರ ನಡೆ ಎಂತೆಂದರೆ; ಕತ್ತಲೆಯ ಬಾಗಿಲಿಗೆ ಕದವನಿಕ್ಕಿ, ಪಶ್ಚಿಮ (ಅಂತರ್ಮುಖ) ಕದವ ತೆರೆದು, ಬಚ್ಚಬರಿಯ ಬೆಳಗಿನೊಳಗೆ ಲೋಲಾಡುವ

ಶರಣರ ಪಾದಕ್ಕೆ ಮತ್ತೊಂದು ಬಾರಿ ಎರಗಿ ಸಂಖಿಯಾದೆನಯ್ಯ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

"ತನುವೆಂಬ ಹುತ್ತದಲ್ಲಿ ಮನವೆಂಬ ಸರ್ಪ ಹೆಡೆಯನಂಡಗಿಕೊಂಡಿರಲು, ಜ್ಞಾನಶಕ್ತಿ ಬಂದು ಎಬ್ಬಿಸಲು, ಉರಿ ಭುಗಿಲೆನುತ್ತ ಹೆಡೆಯನೆತ್ತಿ ಊರ್ಧ್ವಕ್ಕೇರಲು, ಅಷ್ಟಮದವೆಲ್ಲ ಹಿಟ್ಟುಗುಟ್ಟಿದವು. ಕರಣಂಗಳೆಲ್ಲ ಉರಿದು ಹೋದವು. ಇದ್ದ ಶಕ್ತಿಯನೆ ಕಂಡು, ಮನ ನಿಶ್ಚಯವಾಗಿದುದನೆ ಕಂಡು, ಪಶ್ಚಿಮ ಕದವ ತೆರೆಯಲು, ಬಚ್ಚಬರಿಯ ಬೆಳಗಿನೊಳಗೆ ಓಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

ಎಂದು, ಕೇವಲ ಪ್ರಾಣಲಿಂಗಸ್ಥಲದ ಮರ್ಮವನ್ನು ಬಿಚ್ಚಿತೋರಿಸುವ ಮಂತ್ರಿನಂತೆ ಹೊಳೆಯುವ ಒಂದು ನೂರೇ ವಚನಗಳನ್ನು ಬರೆದ ಶಿವಶರಣೆ ಲಿಂಗಮ್ಮ ಶಿವಶರಣರಾದ ಹಡಪದ ಅಪ್ಪಣ್ಣಗಳ ಪತ್ನಿ, ವಿವರಿಸುವ ಬೆಳಗಿನೊಳಗಿನ ಬೆಳಗು ಪ್ರಾಣಲಿಂಗದ ಪರಮಾನಂದ ಪರಂಜ್ಯೋತಿಯೇ ಅಲ್ಲವೆ ?

"ಪ್ರಾಣಲಿಂಗ ಸಂಬಂಧಿಗಳೆಂದು ನುಡಿವರು ಅನೇಕರುಂಟು. ಪ್ರಾಣಲಿಂಗದ ಕಳೆಯನಾರು ಅರಿಯರಲ್ಲ. ಪ್ರಾಣಲಿಂಗದ ಕಳೆ ಎಂದರೆ ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುತಿರ್ಪುದು ನೋಡಾ; ಸ್ವಾಧಿಷ್ಠಾನದಲ್ಲಿ ಪೌರ್ಣಿಮೆಯ ಚಂದ್ರನಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಮಣಿಪೂರಕದಲ್ಲಿ (ನಾಭಿಯಲ್ಲಿ) ಮಿಂಚಿನ ಲತೆಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಅನಾಹತ (ಹೃದಯ)ದಲ್ಲಿ ಸ್ಫಟಿಕದ ಶಲಾಕೆಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ವಿಶುದ್ಧಿಯಲ್ಲಿ (ಕಂಠದಲ್ಲಿ) ಮೌಕ್ತಿಕದ ಗೊಂಚಲಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಆಜ್ಞೆಯಲ್ಲಿ (ಭ್ರೂಮಧ್ಯದಲ್ಲಿ) ರತ್ನದೀಪ್ತಿಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಬ್ರಹ್ಮರಂಧ್ರದಲ್ಲಿ, ಸಹಸ್ರದಳದಲ್ಲಿ ಸ್ವಯಂ ಜ್ಯೋತಿಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಶಿಖೆಯಲ್ಲಿ (ಶಿಖಾಚಕ್ರದಲ್ಲಿ) ಶುದ್ಧ ತಾರೆಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಪಶ್ಚಿಮದಲ್ಲಿ (ಪಶ್ಚಿಮ ಚಕ್ರದಲ್ಲಿ) ಉಳಕ ನಕ್ಷತ್ರದಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು. ಇಂತಪ್ಪ ಪ್ರಾಣಲಿಂಗದ ಕಳೆಯನರಿದು ಪ್ರಾಣವ ಸಂಯೋಗಿಸಿ ಪುಳಪುವ ಗೆಲಲರಿಯದೆ... ಒಡಲ ಹೊರೆವರ ಪ್ರಾಣಲಿಂಗ ಸಂಬಂಧಿಗಳೆಂತೆಂಬೆನಯ್ಯ ಅಖಂಡೇಶ್ವರಾ."

ಹೊರಗಣ ಒಂಬತ್ತು ಬಾಗಿಲ ಮುಚ್ಚಿ. ಒಳಗೆ ಅಂಬರ ಬಾಗಿಲ ಬೀಗವ ತೆಗೆದು, ಒಳಹೊಕ್ಕು ನೋಡಲು,... ರವಿಕೋಟಿ ಪ್ರಭೆಯಂತೆ ರಾಜಿಸುವ ಮಹಾ ಲಿಂಗವನು ಕಂಡು..., ಒಳಗೆ ಪೊಕ್ಕು, ಕಂಗಳಿಗೆ ಮಂಗಳವಾದ ಶಿವನ ಸಭೆಯಂ ಕಂಡು, ಅಲ್ಲಿ ಹೊಡೆವ ಭೇರಿನಾದ, ತುಡುಮು ತಾಳ, ಮದ್ದಳೆ, ಗಡಬಡ ಝುಲ್ಲೆಂಬ ಸಮೇಳ, ಕಂಸಾಳದ ನಾದವ, ನುಡಿಸುವ ವೀಣೆ, ಕಿನ್ನರಿ ಸ್ವರಮಂಡಲ,

ತಂಬೂರಿ, ಕಾಮಾಕ್ಷಿಯ ನಾದ, ಭೋರಿಡುವ ಶಂಖ ಗಂಟೆಯ ನಾದ, ಸ್ವರಗೈವ ನಾಗಸ್ವರ, ಕೋಗಿಲ, ಕೂಗಿಡುವ ಕಹಳೆ, ಹೆಗ್ಗಾಳಿ, ಚಿನಿಕಾಳಿ, ಕರ್ಣೆಯನಾದ, ಇಂತಿವು ಮೊದಲಾದ ನಾನಾ ಪ್ರಮಾಣಂ(ಪ್ರತ್ಯಯಂ)ಗಳ ಕಂಡು... ಪರಶಿವನೊಡ ವೆರೆದು ಪರಿಪೂರ್ಣವಾದ ಮಹಾಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ.

ಎಂದು ಶ್ರೀಷಣ್ಮುಖ ಸ್ವಾಮಿಗಳು ಪ್ರಾಣಲಿಂಗಿ ಸ್ಥಲದ ಅನೇಕ ಪ್ರಕಾರದ ಜ್ಯೋತಿಗಳ ಹಾಗೂ ನಾದಗಳ ಮಹಾವೈಭವವನ್ನು ಚಿತ್ರಿಸಿರುವರು.

ಸುಮಾರು ಒಂದು ನೂರು ವರ್ಷಗಳ ಹಿಂದೆ ಆಗಿ ಹೋದ ಮಹಾಮಹಿಮ ರಾದ ಮುಳುಗುಂದದ ಶ್ರೀಬಾಲಲೀಲಾ ಮಹಾಂತಸ್ವಾಮಿಗಳ "ಕೈವಲ್ಯದರ್ಪಣ" ದಲ್ಲಿ ಆತ್ಮಲಿಂಗವನ್ನು ಪರಮಾತ್ಮನ ಶಿಶುವೆಂದು ವರ್ಣಿಸಿ ಹಾಡಿದ ಲಾಲಿಯು (ಜೋಗುಳವು) ಬಹಳೇ ಆನಂದದಾಯಕವಾಗಿರುವದು. ಅದು ಹೇಗೆಂದರೆ :

ಲಾಲಿ ಲಾಲಿಯು ಪರಬ್ರಹ್ಮದ ಶಿಶುವೆ ।
ಮಾಲೆಯ ಧರಿಸುವೆ ಮಲ್ಲಿಗೆ ಹೂವಿನ ॥ ಪ ॥

ಅಷ್ಟದಳದ ಕಮಲ ತೊಟ್ಟಿಲೊಳಗೆ ಮಲಗಿ
ಶ್ರೇಷ್ಠ ಸದ್ಗುಣ ಹಸ್ತ ಪದಗಳ ಹಾಡುತ
ನೆಟ್ಟಗೆ ನಿಟಿಲ ಭ್ರೂಮಧ್ಯದ ಜ್ಯೋತಿಯ
ದೃಷ್ಟಿಸಿ ನೋಡುತ ಕುಲು ಕುಲು ನಗುತಿಹ ॥ ೧ ॥

ಪ್ರಣವ ಘೋಷವ ನಾಗಸ್ವರ ವೇಣಿ ವಾಸುಕಿ ।
ಝಣ ಝಣಂ ಘಲ್ಗೆಜ್ಜೆ ತಾಳ ಮೃದಂಗ ಭೇರಿ ।
ಢಣ ಢಣೆಂಬುವ ಗಂಟೆ ಜಾಗುಟಿ ನಾದವ ।
ಬಣ್ಣಿಸಲಿವ ಶಿವ ಸುಖಮಯ ಕಂದನೆ ॥ ೨ ॥

ಫಲಪದಗಳ ಮೀರಿ ಶಿವಪದವೆಂಬುವ ।
ಹೊಳೆವ ಮೇಲುಪ್ಪರಿಗೆ ಮೇಲೆ ಕುಳಿತಂ ಮಾಯಾ- ।
ಕಲಿಯುಗ ನರ್ತಕಿಯಾಟವ ನೋಡುತೆ ।
ನಲಿವ ಪರಶಿವ ಮಹಂತಲಿಂಗ ಶ್ರೀಬಾಲಕ ॥ ೩ ॥
ಲಾಲಿ ಲಾಲಿಯು ಪರಬ್ರಹ್ಮ ಶಿಶುವೆ... ॥ "

ಇದೇ ರೀತಿಯಲ್ಲಿ- "ಲಿಂಗಪೂಜೆ ಆಗುತದೆಯಣ್ಣಾ । ಈ ದೇಹವೆಂಬ ಗುಡಿಯ ಒಳಗೆ । ಲಿಂಗಪೂಜೆ ಆಗುತದೆಯಣ್ಣಾ ॥ " ಮುಂತಾದುದಾಗಿ ಅನುಭವ ಪದಗಳನ್ನು ಅನೇಕರು ಹಾಡುತ್ತಿರುವದನ್ನು ನಾವು ಎಲ್ಲೆಲ್ಲಿಯೂ ಕೇಳುತ್ತೇವೆ.

ಇದೆಲ್ಲ ವಾಙ್ಮಯವಾಯಿತು. ಇನ್ನು ಇದರ ಅಗಾಧವಾದ ದೃಶ್ಯಚಿತ್ರವನ್ನು ವಿಜಾಪುರ ಜಿಲ್ಲೆಯ, ಇಂಡಿ ತಾಲೂಕಿನ ಸಾಲೋಟಗಿ ಎಂಬ ಊರಲ್ಲಿರುವ ಶ್ರೀಶಿವಯೋಗೀಶ್ವರರ ದೇವಾಲಯದಲ್ಲಿ ಪ್ರತಿ ಸೋಮವಾರ ರಾತ್ರಿಯ ಕಾಲಕ್ಕೆ ಮೂನ್ನೂರು ನಾನೂರು ವರುಷಗಳಿಂದ ನಡೆದು ಬಂದ "ಶ್ರೀಶಿವಯೋಗೀಶ್ವರರ ಶಿವಪೂಜೆ"ಯ ಸಮಾರಂಭದಲ್ಲಿ ಕಂಡು ಆನಂದಿಸಬಲ್ಲೆವು.

ಶ್ರೀಶಿವಯೋಗೀಶ್ವರರು ಮುನ್ನೂರು ನಾನೂರು ವರುಷಗಳ ಹಿಂದೆ ಬಿಜಾಪುರದ ಬಾದಶಹರ ಕಾಲದಲ್ಲಿ ಆಗಿಹೋದ ಒಬ್ಬ ಮಹಾಪುರುಷರು. ಕೋಡೆಕಲ್ಲಿನ ಬಸವೇಶ್ವರ, ಶಿರಹಟ್ಟಿಯ ಫಕೀರೇಶ್ವರ, ವಿಜಯನಗರದವರ ಕಾಲದಲ್ಲಿ ಮಕ್ಕೆಗೆ ಹೋಗಿ ಏಳುನೂರು ಖಲಿಂದರರಿಗೆ ಗುರುವಾಗಿ ಬಂದ ಮಳೆಯ ಮಲ್ಲೇಶ್ವರ ಇವರಂತೆ, ಮೊಗಲಾಯಿಯಲ್ಲಿ ಜನ್ಮತಾಳಿ ಬಿಜಾಪುರದ ರಾಜ್ಯದಲ್ಲಿ (ಸಾಲೋಟಗಿಯಲ್ಲಿ) ಬಂದು ನೆಲೆಸಿ, ಹಿಂದೂ ಮುಸಲ್ಮಾನರೆಲ್ಲರಿಗೆ ಸಮಾನ ಪ್ರೇಮಿಕರಾಗಿ, ಬಿಜಾಪುರದ ಬಾದಶಹರಿಂದ ವಿಶೇಷ ಮನ್ನಣೆಗೆ ಪಾತ್ರರಾಗಿ, ಹಸರು ಚಲ್ಲಣ ಹಸರು ಬೆತ್ತಗಳನ್ನು ಧರಿಸಿ ಹಿಂದೂ ಮುಸಲ್ಮಾನರ ಐಕ್ಯವನ್ನು ಸಾಧಿಸಿದವರು ಈ ನಮ್ಮ ಶ್ರೀಶಿವಯೋಗೀಶ್ವರರು.

ಬಿಜಾಪುರದ ಬಾದಶಹರು ಇವರಿಗೆ ಪರಮ ಭಕ್ತಿಯಿಂದ "ಅಲಾದೀನ ಪೀರ" ಅಂದರೆ ಅಲ್ಲಾ ಅಥವಾ ಶಿವ, ದೀನ ಅಂದರೆ ಧರ್ಮ ಅಥವಾ ಯೋಗ, ಪೀರ ಅಂದರೆ ಸಾಧು ಅಥವಾ ಗುಡಿಯೊಳಗಿನ ದೇವರು. (ಅಲ್ಲಾ=ಶಿವ, ದೀನ್=ಯೋಗ, ಪೀರ = ಸ್ವಾಮಿ ಅಥವಾ ಶಿವಯೋಗಿ = ಸ್ವಾಮಿ, ಶಿವಯೋಗೀಶ್ವರ) ಎಂದು ಸಂಬೋಧಿಸುತ್ತಿದ್ದರಂತೆ.[೧]

ಲಿಂಗಾಯತ, ಬ್ರಾಹ್ಮಣ, ಮುಸಲ್ಮಾನ ಇವರೆಲ್ಲರಿಗೆ ಪ್ರಿಯಕರರೂ ಪೂಜ್ಯರೂ ಆಗಿದ್ದ ಶ್ರೀ ಶಿವಯೋಗೀಶ್ವರರು ಕಾಲಜ್ಞಾನ ರೂಪವಾದ ಹಾಗೂ ನೀತಿ ಮತ್ತು ಭಕ್ತಿಗೆ ಸಂಬಂಧಿಸಿದ "ಡಂಗುರ ಪದಗಳ"ನ್ನು ರಚಿಸಿ ಲೋಕವನ್ನೆಚ್ಚರಿಸಿರುವರು. ಅವರ ಪದಗಳನ್ನು ಅಲ್ಲಿಯ ಅನೇಕ ಜಂಗಮ ಪ್ರಮುಖರು ಶ್ರೀಶಿವಯೋಗೀಶ್ವರರ

---

೧. **ಟೀಪು**: ಇಂಥ ಮಹಾತ್ಮರು ಆ ಕಾಲದಲ್ಲಿ ಮೊಗಲಾಯಿಯಲ್ಲಿಯೂ, ಉಳಿದ ಕರ್ನಾಟಕದಲ್ಲಿಯೂ ಅನೇಕರು ಆಗಿ ಹೋಗಿರುವರು. ಆ ಕಾಲದಲ್ಲಿ ಮೊಗಲಾಯಿಯಲ್ಲಿ, ಶ್ರೀ ಅನಂತ ಚೈತನ್ಯ, ಕೇಶವ ಚೈತನ್ಯ, ರಾಘವ ಚೈತನ್ಯ, ಬಾಬಾ ಚೈತನ್ಯರೆಂಬ ಬ್ರಾಹ್ಮಣ ಧರ್ಮದ ಮಹಾಪುರುಷರು ಲಾಡ್ಲೇಮಸೇಕ್, ಬಂದೇ ನವಾಜ ಮೊದಲಾದ ಮಹಮ್ಮದೀಯ ನಾಮಗಳನ್ನು ಧಾರಣಮಾಡಿ, ಹಿಂದೂ ಮುಸಲ್ಮಾನರಲ್ಲಿ ಐಕ್ಯವನ್ನು ಹುಟ್ಟಿಸಿರುವರಂತಲೂ, ಶ್ರೀ ಶಿವಯೋಗೀಶ್ವರರೂ ಅವರೊಳಗಿನವರೇ ಒಬ್ಬರು ಆಗಿರಬಹುದೇನೋ ಎಂತಲೂ ಸಾಲೋಟಗಿಯಲ್ಲಿರುವ ನನ್ನೊಬ್ಬ ಗೆಳೆಯರು ಹೇಳುತ್ತಿರುವರು. ಆದರೆ ಇದರಲ್ಲೆಷ್ಟು ತಥ್ಯವಿದೆಯೋ ಇನ್ನೂ ಸ್ಪಷ್ಟವಾಗಿ ತಿಳಿದಿಲ್ಲ.

ಶಿವಪೂಜೆಯು ಕಾಲಕ್ಕೆ (ಹಾಗೂ ಜಾತ್ರೆ ಮೊದಲಾದ ಉತ್ಸವಗಳ ಕಾಲಕ್ಕೆ) ಹಾಡುತ್ತಿರುವರು.

ಶ್ರೀಶಿವಯೋಗೀಶ್ವರರ ಈ ಶಿವಪೂಜೆ ಎಂಬುದೊಂದು ಅಗಾಧವಾದ ಸಂಗತಿಯಾಗಿದೆ. ಪ್ರತಿ ಸೋಮವಾರ ರಾತ್ರಿ (ಊರೊಳಗಿರುವ) ಉಪದೇಶಾಲಯದಲ್ಲಿ ಜರುಗುವದು. ನನ್ನ ಗೆಳೆಯರು 'ಇಲ್ಲಿಯ ವಾದ್ಯಗಳ ಸ್ವರಸಮ್ಮೇಳನವು ಬಹಳೇ ಬೇರೆ ಬಗೆಯಾಗಿದೆ. ಯಾವ ಊರಿನವರು ಬಂದರು ಇಂತಹದನ್ನು ನಾವೆಲ್ಲಿಯೂ ಕೇಳಿಲ್ಲವೆನ್ನುವರು. ಮತ್ತು ಶಿವಪೂಜೆಯ ಕಾಲಕ್ಕೆ ಒಂದರಿಂದ ಮೊದಲು ಮಾಡಿ ನೂರಾ ಎಂಟರವರೆಗೆ ದೀಪಗಳನ್ನು ಗದ್ದುಗೆಗೆ ಬೆಳಗುವರು' ಎಂದು ಹೇಳಿದರು. ಆದರೆ ಮೊದಲಿಗೆ ಇದರಿಂದ ನನಗೇನೂ ಅಗಾಧವೆನಿಸಲಿಲ್ಲ. ಆದರೆ 'ಶಿವಪೂಜೆ'ಯ ಸಂಭ್ರಮವನ್ನು ನೋಡಿದ ಬಳಿಕ ಪ್ರತ್ಯಕ್ಷ ಶಿವಯೋಗ ಸಾಮ್ರಾಜ್ಯವನ್ನೇ ಬಾಹ್ಯ ರೂಪದಲ್ಲಿ ಪ್ರಕಟಗೊಳಿಸಿರುವದಾಗಿ ಕಂಡುಬಂದದ್ದರಿಂದ ನನಗೆ ಅಗಾಧವಾಯಿತು. ಅದರ ವರ್ಣನೆಯನ್ನಿಲ್ಲಿ ಬರೆಯುವೆನು.

ಹಿಂದಿನ ಕಾಲದ ಸಂಸ್ಥಾನಿಕರಂತೆ ಡ್ರೆಸ್ಸು ಮಾಡಿಕೊಂಡು ಪೂಜಿಸುವ ಸ್ವಾಮಿಗಳು ಗದ್ದುಗೆಯ ಇದಿರಿಗೆ ಕುಳಿತುಕೊಳ್ಳುವರು. ಅವರಿಗೊಬ್ಬ "ಪ್ರಧಾನಿ" ಎಂಬವನು ದೀಪಗಳನ್ನು ಅಣಿಮಾಡಿಕೊಡುವನು. ಗರ್ಭಗುಡಿಯಲ್ಲಿಯೇ ಮಾಮೂಲಿಯವರಾದ ಹತ್ತೆಂಟು ಜನರು ನಗಾರಿ, ಕರಡಿ, ದೊಡ್ಡತಾಳ, ಸಣ್ಣತಾಳ, ಜಾಂಗಟೆ, ಗಂಟೆ, ಜೋಡುತುತೂರಿ ಮೊದಲಾದ ಅನೇಕ ವಾದ್ಯಗಳನ್ನು ಬಾರಿಸುವದಕ್ಕೆ ಸಜ್ಜಾಗಿ ನಿಂತಿರುವರು. ಅನೇಕ ಭಕ್ತರು ಇವನ್ನೆಲ್ಲ ನೋಡುವದಕ್ಕೆ ಬಂದಿರುತ್ತಿರುವರು ಇವೆಲ್ಲ ಒಂದೇ ಒಂದಾದ ಗರ್ಭಗುಡಿಯ ಒಳಭಾಗದಲ್ಲಿ.

ಆಗ ಒಂದು ದೀಪದಿಂದ, ಮೂರರಿಂದ, ಐದರಿಂದ, ಏಳು-ಒಂಬತ್ತು ಹನ್ನೊಂದು ಮೊದಲಾಗಿ ದೀಪಗಳಿಂದ ಬೇರೆ ಬೇರೆ ಹಿತ್ತಾಳಿಯ ಧೂಪಾರತಿಗಳಂಥ ವಿವಿಧಾಕಾರದ ಉಪಕರಣಗಳಿಂದ ಗದ್ದುಗೆಗೆ ಬೆಳಗುವರು. ಆಗ ಒಂದೊಂದು ಪ್ರಕಾರದ ಜ್ಯೋತಿಯನ್ನು ಬೆಳಗುವ ಕಾಲಕ್ಕೆ ಸಕಲವಾದ್ಯ ಸಮ್ಮೇಳನದವರು ಒಂದೊಂದು ಪ್ರಕಾರದ ತಾಳಗತ್ತಿನಿಂದ ಏಕಕಾಲಕ್ಕೆ ಎಲ್ಲ ವಾದ್ಯಗಳನ್ನು ನುಡಿಸುವರು.

ದೀಪಗಳನ್ನು ಅರ್ಧಚಂದ್ರಾಕಾರದ ಆಕೃತಿಗಳಲ್ಲಿಯೂ ಚೌಕಾಕೃತಿಗಳಲ್ಲಿಯೂ ಅನೇಕಾನೇಕ ಆಕೃತಿಗಳಲ್ಲಿಯೂ ಹೊಂದಿಸಿ ಆಯಾ ಆಕೃತಿಗಳಾಗುವಂತೆ ಏರ್ಪಡಿಸಿ ಅವುಗಳಿಂದ ಬೆಳಗುವರು. ಕಡೆಕಡೆಗೆ ಒಂದು ದುಂಡಗಿನ ಸಣ್ಣ ತಟ್ಟೆಯಲ್ಲಿ ಸುಮಾರು ೭೦ ಬತ್ತಿಗಳನ್ನು ಬಿಡಿಬಿಡಿಯಾಗಿ ಹೊಂದಿಸಿ ಎಲ್ಲವುಗಳನ್ನು ಒಮ್ಮೆಗೆ ಹೊತ್ತಿಸಿ ಬೆಳಗುವರು. ಆಗ ಕೇವಲ ಚಂದ್ರಬಿಂಬದಂತೆ ಅದು ಕಾಣುವದು. ಕಟ್ಟಕಡೆಗೆ ಒಂದು ದೊಡ್ಡ ತಟ್ಟೆಯಲ್ಲಿ ೧೦೮ ಬತ್ತಿಗಳನ್ನು ಹೊಂದಿಸಿ ಇಡೀ ತಟ್ಟೆಯ

ತುಂಬ ಒಂದೇ ಮಹಾಜ್ವಾಲೆಯಾಗುವಂತೆ ಬೆಳಕು ಭುಗಿಲ್ ಭುಗಿಲ್ ಎಂದು ಪ್ರಜ್ವಲಿಸುವದು. ಅದರ ಜೊತೆಗೆ ಅನೇಕಾನೇಕ ಅದ್ಭುತ ನಾದಗಳೂ (ವಾದ್ಯಗಳೂ) ನಡೆದೇ ಇರುವವು.

"ಚಂದ್ರನ ಕಲೆಯ ಹಾಗೆ, ಸೂರ್ಯನ ಕಿರಣಗಳ ಹಾಗೆ, ಮಿಂಚುಗಳ ಪ್ರಕಾಶದ ಹಾಗೆ, ಮುತ್ತು ಮಾಣಿಕ ನವರತ್ನ ದೀಪ್ತಿಗಳ ಹಾಗೆ ಪ್ರಕಾಶಮಯವಾಗಿರಬಹುದು" ಎಂದು ಶ್ರೀ ತೋಂಟದ ಸಿದ್ಧಲಿಂಗಯತಿಗಳು ತಮ್ಮದೊಂದು ವಚನದಲ್ಲಿ ಹೇಳಿದಂತೆ ಇವೆಲ್ಲಾ ಜ್ಯೋತಿಗಳೂ, ನಾದಗಳೂ ಶಿವಯೋಗದ ಆಂತರಿಕ ಅನುಭವಗಳೆಂಬುದು ಆಗ ಸಹಜವಾಗಿ ಅದನ್ನು ನೋಡುವವರ ಅಂತಃಕರಣಕ್ಕೆ ಅನಿಸುವದು.

ಅಪೇಕ್ಷೆಯುಳ್ಳವರೂ ಶ್ರೀ ಶಿವಯೋಗೀಶ್ವರರ ಈ ದಿವ್ಯ ಶಿವಪೂಜೆಯನ್ನು ಸಾಲೋಟಗಿಗೆ ಹೋಗಿ ಪ್ರತ್ಯಕ್ಷವಾಗಿ ಕಂಡು ಶಿವಯೋಗದಲ್ಲಿ ಪ್ರೀತಿಯನ್ನುಂಟು ಮಾಡಿಕೊಳ್ಳಬೇಕು.

ಭಗವಾನ್ ಶ್ರೀ ಅರವಿಂದರು ಯೋಗದಿಂದಲ್ಲದೆ ಇನ್ನಾವುದರಿಂದಲೂ ಇಂದಿನ ಜಗತ್ತಿನ ಬದಲಾವಣೆಯಾಗಲಾರದೆಂದು ತಮ್ಮ 'ಯೋಗ ಮತ್ತು ಅವರ ಉದ್ದೇಶ" ಎಂಬ ಗ್ರಂಥದಲ್ಲಿ ಹೇಳಿರುವರು. ಬಲ್ಲವರು ಹೀಗೆ ಅನೇಕಾನೇಕ ಪ್ರಕಾರದ ಪಠಣ ಮನನ ನಿರೀಕ್ಷಣಗಳಿಂದ ಯೋಗದಲ್ಲಿ ಅಭಿರುಚಿಯನ್ನು ಹುಟ್ಟಿಸಿಕೊಂಡು ನವಯುಗದ ದಾರಿಯನ್ನು ಅನುಸರಿಸಬೇಕು.

**ಶಿವಾನುಭವ ೨೧-೪ ಜನವರಿ, ೪೭**

# ಸಗುಣ ನಿರ್ಗುಣ ಸಮನ್ವಯ
### ಅಥವಾ
## ‘ಶಿವಯೋಗ’ ರಹಸ್ಯ

---

ಶ್ರೀ ನಿಜಗುಣ ಶಿವಯೋಗಿಗಳ* “ಪಾರಮಾರ್ಥ ಪ್ರಕಾಶಿಕೆ”ಯಲ್ಲಿ ಹೇಳಿದ ಶಿವಯೋಗವು ಶಿವಶರಣರ ಷಟ್‌ಸ್ಥಲ ಮಾರ್ಗವೇ ಆಗಿದೆಯೆಂಬುದು ಸೂಕ್ಷ್ಮರೀತಿ

* ಶ್ರೀ ನಿಜಗುಣ ಶಿವಯೋಗಿಗಳು ಮೈಸೂರ ನಾಡಿನ ದಕ್ಷಿಣ ಭಾಗದಲ್ಲಿ ಒಂದು ಪ್ರದೇಶಕ್ಕೆ ಅರಸರಾಗಿದ್ದುಕೊಂಡು. ಮುಂದೆ ವೈರಾಗ್ಯ ಪ್ರಾಪ್ತವಾದದ್ದರಿಂದ ಕೊಳ್ಳೆಯಗಾಲ ತಾಲೂಕು ಚಿಲುಕವಾಡಿ ಗ್ರಾಮಕ್ಕೆ ಸಮೀಪದಲ್ಲಿರುವ “ಶಂಭುಲಿಂಗ ಬೆಟ್ಟ”ದಲ್ಲಿ ತಪೋನಿರತರಾಗಿದ್ದುಕೊಂಡು ಮಹಾಜ್ಞಾನಿಗಳಾದರು. ಈಗಲೂ ಈ ಬೆಟ್ಟದಲ್ಲಿ ಆವರು ತಪಸ್ಸುಗೈದ ಸ್ಥಳದಲ್ಲಿ ಶ್ರೀ ಶಂಭುಲಿಂಗೇಶ್ವರ ದೇವಾಲಯವೂ, ಒಂದು ಸುಂದರವಾದ ಗುಹೆಯೂ ಇವೆಯಂತೆ. ಇವರು ಬರೆದ "ವಿವೇಕ ಚಿಂತಾಮಣಿ" ಎಂಬ ಪ್ರಖ್ಯಾತ ಗ್ರಂಥದಲ್ಲಿ ಶಿವಭಕ್ತಿ ಪ್ರಾಶಸ್ತ್ಯ ವಿಷಯದಲ್ಲಿ “ವೃಷಭಾದಿ ಪ್ರಮಥರು” ಎಂಬ ಶಬ್ದಗಳಿಂದಲೂ ಶ್ರೀ ಬಸವಣ್ಣನವರ (೧೧೬೦) ಅನಂತರವೂ ಹಾಗೂ ೧೨೬೦ ರ ಸುಮಾರಿನಲ್ಲಿದ್ದ ವಿಮಲಾನಂದರ ಹೆಸರನ್ನು ಹೇಳಿರುವದರಿಂದ ಆತನ ಅನಂತರವೂ ಮತ್ತು ೧೬೫೫ರಲ್ಲಿದ್ದ ಮಹಾಕವಿ ಷಡಕ್ಷರದೇವನ “ರಾಜಶೇಖರ ವಿಳಾಸ” ಎಂಬ ಪ್ರಖ್ಯಾತ ಕಾವ್ಯದ ಪೀಠಿಕಾ ಸಂಧಿಯಲ್ಲಿ “ನಿರುಪಮ ನಿಜಗುಣ ಯೋಗಿಯ ಪದಾಬ್ಜ ಕಾನತನಪ್ಪೆಂ” ಎಂದು ಇವರನ್ನು ಸ್ತುತಿಸಲಾಗಿರುವದರಿಂದ ಷಡಕ್ಷರಿದೇವನಿಗಿಂತ ಮುಂಚೆಯೂ ಅಂದರೆ ಸುಮಾರು ಕ್ರಿ. ಶ. ೧೫೦೦ ರ ಸುಮಾರಿಗೆ ಈ ನಿಜಗುಣ ಶಿವಯೋಗಿಗಳು ಇದ್ದರೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಎಂದು “ವೇದಾಂತ ಗ್ರಂಥಾವಳಿ”ಕಾರರು ಹೇಳಿದ್ದಾರೆ. ಆದರೆ ನನ್ನ ಅಭಿಪ್ರಾಯದಂತೆ— ಪ್ರಖ್ಯಾತ ಜೈನಕವಿಯಾದ ರತ್ನಾಕರನ “ಭರತೇಶ ವೈಭವ”ದಲ್ಲಿ ಪ್ರತಿಯೊಂದು ಸಂಧಿಯ ಕೊನೆಯಲ್ಲಿ ಬರುವ “ಸಂಧಿ ಸುಗಂಧಿ” ಎಂಬ ಪದ್ಯವು ಶ್ರೀ ನಿಜಗುಣ ಶಿವಯೋಗಿಗಳ ಪ್ರಖ್ಯಾತವಾದ “ಪರಮಾನುಭವ ಬೋಧ”ದ ಪ್ರತಿಸಂಧಿಯ ಕೊನೆಯಲ್ಲಿ ಬರುವ “ಸಂಧಿ ಸದಮಳ ಪರಮಾನುಭವಬಂಧಿ” ಎಂಬ ಪದ್ಯದ ಹಾಗೆಯೇ ಇದ್ದು (ರತ್ನಾಕರನು ನಿಜಗುಣ ಗ್ರಂಥಗಳಿಂದ ಪ್ರಚೋದಿತನಾಗಿದ್ದಾನೆ.) ನಿಜಗುಣ ಶಿವಯೋಗಿಗಳ ಈ ಗ್ರಂಥದ ಸಾಂಗತ್ಯದಲ್ಲಿ ವಿಜಯನಗರದ ದೇವಭೂಪನ ಸುವಿಖ್ಯಾತವಾದ “ಸೊಬಗಿನ ಸೋನೆ”ಯ ಸಾಂಗತ್ಯದಲ್ಲಿರುವಂತೆ ಪದ್ಯಾರ್ಥ–ಪದ್ಯದ ಕೊನೆಗೂ ಒಂದೊಂದು ಗುರುಮಾತ್ರೆ ಹೆಚ್ಚಿಗೆ ಇದೆ. ಇದು ‘ಸಾಂಗತ್ಯ’ದ ಹಳೆಯ ರೀತಿ. ಆದ್ದರಿಂದ ಕ್ರಿ ಶ. ೧೩೫೫ (ವಿಜಯನಗರದ ಸ್ಥಾಪನೆಯ ಕಾಲ) ಸುಮಾರಿನಲ್ಲಿದ್ದ ಈ ದೇವಭೂಪನಿಗೆ ಸಮಕಾಲಿಕವಾಗಿಯೂ, ಮುಂದಿನವನಾದ ರತ್ನಾಕರನಿಗಿಂತ ಮುಂಚಿನವರಾಗಿಯೂ, ಶ್ರೀ ನಿಜಗುಣ ಶಿವಯೋಗಿಗಳಿದ್ದರೆಂಬುದು ಸುಸ್ಪಷ್ಟ. ಪ್ರೌಢದೇವರಾಯನ ಕಾಲದಲ್ಲಿದ್ದ ಗುರುಬಸವಾರ್ಯನ ಅನೇಕ ವೇದಾಂತ ಗ್ರಂಥಗಳು ಶ್ರೀ ನಿಜಗುಣರ ಸುಮಾರಿನಲ್ಲಿಯೇ ಹುಟ್ಟಿರುವ ಸಂಭವವಿದೆ. ಬಲ್ಲವರು ಹೆಚ್ಚಿಗೆ ಸಂಶೋಧಿಸಲಿ.

ಯಿಂದ ವಿಚಾರ ಮಾಡಿದರೆ ಗೊತ್ತಾಗುವದು. ಅದು ಹೇಗೆಂದರೆ— ಶ್ರೀ ನಿಜಗುಣ ಶಿವಯೋಗಿಗಳದೇ ಆದ "ಕೈವಲ್ಯ ಪದ್ಧತಿ" ಎಂಬ ಪ್ರಖ್ಯಾತ ಗ್ರಂಥದ "ಯೋಗ ಪ್ರತಿಪಾದನ ಸ್ಥಲ"ದ ಕೊನೆಯ ಭಾಗದಲ್ಲಿ ಹೇಳಿದ "ಶಿವಯೋಗ" ವಿಷಯಕ ಪದ್ಯಗಳಲ್ಲಿ ಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಪೂಜಾ ಕ್ರಮಗಳನ್ನೇ ಮೂರು ಹಾಡುಗಳಲ್ಲಿ ಹೇಳಲಾಗಿದೆ. ಉದಾಹರಣಾರ್ಥವಾಗಿ—

"ಪರತರ ಶಿವಲಿಂಗವೆಳಸಿ ನಿನಗಾಗಿ
ಕರಕಂಜದೊಳು ಕಾಣಿಸಿತು ಯೋಗಿ ಯಜಿಸು" ॥ ೩೧ ॥

× × × ×

"ಪ್ರಾಣಲಿಂಗವಿದನು ಗುರುವಿ।
ನಾಣತಿಯೊಳು ಕೇಳಿ ನೋಡಿ।
ಮಾಣದೇಕ ಚಿತ್ತದಿಂದೆ ಜಾಸಿಪನೆ ಕೃತಾರ್ಥನು" ॥ ೩೨ ॥

"ಭಾವಲಿಂಗವನು ಬಿಡದೆ ನೀನು ಪರಿ।
ಭಾವಿಸು ಭೇದವಿಲ್ಲದೆ ಯೋಗಿ" ॥ ೩೩ ॥

ಮುಂದೆ ೩೮ನೆಯ ಪದ್ಯದಲ್ಲಿ "ಶರಣಸ್ಥಲ"ದ ವರ್ಣನೆಯು ಸ್ಪಷ್ಟವಾಗಿ ಬಂದಿದೆ. ಅದು ಹೇಗೆಂದರೆ—

"ಸತಿಪತಿಗಳಿವರ ಸಮರತಿ ಸುಖದ ಬಾಳುವೆಗೆ।
ಪ್ರತಿಯುಂಟೆ ಲೋಕದೊಳು ನೋಡೆ ಲಲಿತಾಂಗಿ" ॥
... ... ... ... ... ... ... ... ...
"ಬೆರಸಿ ಬೇರೆನಿಸದೆರಡಾಲಿ ಕಲ್ಲುಗಳೇಕ।
ಸುರಸವಾದಂತೆ ಪತಿ ಶಂಭುಲಿಂಗ ॥
ಶರಣಸತಿಯು ಕೂಡಿ ಪರತರಾನಂದದೊಳು।
ಪರವಶನೈದಿಹುದನುಪಮಿಸಲುಬಹುದೆ ?" ॥ ೩೮ ॥

ಇದೆಲ್ಲದರ ಮೇಲಿಂದ ಶ್ರೀ ನಿಜಗುಣ ಶಿವಯೋಗಿಗಳ "ಕೈವಲ್ಯ ಪದ್ಧತಿ" ಎಂಬ ಉದ್ಗ್ರಂಥದಲ್ಲಿ ಹೇಳಿದ 'ಶಿವಯೋಗ'ವು ಶಿವಶರಣರ 'ಷಟ್‌ಸ್ಥಲ' ಮಾರ್ಗವೇ ಅಹುದೆಂದು ಸಿದ್ಧವಾಗುವದು. ಆದರೆ ಶಿವಯೋಗಕ್ಕೂ ಇನ್ನುಳಿದ ಬೇರೆ ಯೋಗಗಳಿಗೂ ಭೇದವೇನು? ಎಂಬ ಪ್ರಶ್ನೆವು ಮನದಲ್ಲೇಳುವುದು ಸಹಜ. ಮಾನವ ದೇಹದೊಳಗಿರುವ ಆತ್ಮನನ್ನು ಒಂದಿಲ್ಲೊಂದು ಬಗೆಯಿಂದ ಪ್ರಕಟಗೊಳಿಸಿಕೊಳ್ಳುವದೇ ಪ್ರತಿಯೊಂದು ಯೋಗದ ಉದ್ದೇಶವಾಗಿದೆ. ಆದರೆ ಆ ಆತ್ಮನು ಪರಮಾತ್ಮನದೇ ಒಂದು ಅಂಶವಾಗಿದ್ದಾನೆಂದು, ಅಥವಾ ಪರಮಾತ್ಮನೇ ಪ್ರಾಣಿಗಳ ಹೃದಯದಲ್ಲಿ ಆತ್ಮರೂಪದಿಂದ ಕುಳಿತಿದ್ದಾನೆಂದು ತಿಳಿದು ಆತ್ಮನಲ್ಲಿ ಪರಮಾತ್ಮನನ್ನು

ಭಾವಿಸಿ ಧ್ಯಾನಿಸುವದೇ 'ಶಿವಯೋಗ'ದ ಮುಖ್ಯ ರಹಸ್ಯವಾಗಿದೆ. ಹೀಗೆ ಶಿವಯೋಗವು ಮುಖ್ಯವಾಗಿ ಸಗುಣ–ನಿರ್ಗುಣ ತತ್ತ್ವಗಳೆರಡರ ಸಮನ್ವಯವನ್ನು ಸಾಧಿಸುತ್ತದೆ. ಇದೇ ಅದರ ಮುಖ್ಯ ಕಾರ್ಯವು.

ಶ್ರೀ ನಿಜಗುಣಶಿವಯೋಗಿಗಳು ತಮ್ಮ "ಪಾರಮಾರ್ಥ ಪ್ರಕಾಶಿಕೆ"ಯೆಂಬ ಶಿವಯೋಗ ಶಾಸ್ತ್ರದಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. ಹೇಗೆಂದರೆ—

"ಶಿವಯೋಗಕ್ಕಂ ರಾಜಯೋಗಕ್ಕಂ ಪರಮಾರ್ಥದಿಂ ಭೇದವಿಲ್ಲದಂತಾದೊಡಂ...... ಪುರುಷ(ಆತ್ಮ)ಸಾಕ್ಷಾತ್ಕಾರವೇ ರಾಜಯೋಗವೆಂದು ಪೇಳ್ವುದರಿಂದ ರಾಜಯೋಗಂ ಶಿವಯೋಗವೆಂದೆನಿಸಲರಿಯದು. ಮತ್ತಾ ಶಿವಯೋಗಮೆನೆ ಶಿವಭಕ್ತ ಸಂಪುಟಾಧಾರಮಾ(ಗಿರ್ಪುದು) ... ... ... ವೃತ್ತಿಜ್ಞಾನವಳಿದು ಸರ್ವತೋಮುಖವಾಗಿ ನಿಂದ ನಿಜ ಶಿವತತ್ತ್ವಾಭಿವ್ಯಕ್ತಿಯೇ ಶಿವಯೋಗವೆನಿಪುದು."

—"ಪರಮಾರ್ಥ ಪ್ರಕಾಶಿಕೆ" ಅಧ್ಯಾಯಂ ೧

"ಶಿವಧ್ಯಾನವು ಸಗುಣವೆಂದು ನಿರ್ಗುಣವೆಂದೆರಡುಂ ಪ್ರಕಾರವವರೊಳಗೆ ಮೊದಲು ಸಗುಣ ಧ್ಯಾನವನಾಶ್ರಯಿಸಿ, ಮೇಲೆ ನಿರ್ಗುಣವನಾಶ್ರಯಿಸುವದೆಂತೆನೆ, ಅನಾದಿ ಜನ್ಮಾಂತರಗಳಲ್ಲಿ ಪಿಂಡಿತವಾದ ಮಾಯಾವಿಷಯ ರಾಶಿಪರ ಅಪರ ಗ್ರಹಣವೇ ಮೈಯ್ಯುಂಡ ಮನಸ್ಸು ತನಗೆ ಮೊದಲೆಂದು ಗೋಚರವಲ್ಲದ ನಿರ್ಗುಣ ವಸ್ತುವಂ ಗ್ರಹಿಸಲರಿಯದಾಗಿ ಸಗುಣಕ್ರಮದಿಂ ಧ್ಯಾನಿಸಲ್ತಕ್ಕುದಂ. ಆ ಸಾಲಂಬ ಧ್ಯಾನಾನುಸಾರದಿಂದುಭಯ ವಿಧಧ್ಯೇಯವಸ್ತು ಸ್ವರೂಪವನರಿಯಬೇಕದೆಂತೆಂದೊಡೆ,......

"ಬಳಿಕಾ ಪೂಜೆಯಾದೊಡೆ ಅಂತಃಪೂಜೆಯೆಂದು ಬಾಹ್ಯಪೂಜೆಯೆಂದೆರಡುಂ ತೆರನಾಗಿಹವವರಲ್ಲಿ ಅಂತಃಪೂಜೆಯೇ ವಿಶಿಷ್ಟವಹುದಾದರೂ ಬಾಹ್ಯಪೂಜೆಯಿಲ್ಲದೆ ಅದು ಘಟಿಸದಾಗಿ ಮೊದಲು ಬಾಹ್ಯದಲ್ಲಿ ಶಿವಲಿಂಗಪೂಜೆಯಂ ಸಾಂಗೀಕಾರವಾಗಿ ಮಾಡಿ, ಮೇಲಂತಃಪೂಜೆಯಂ ಮಾಡಲು ಯೋಗ್ಯಮಕ್ಕುಂ"

— "ಪಾರಮಾರ್ಥ ಪ್ರಕಾಶಿಕೆ" ಅಧ್ಯಾಯಂ ೧.

"ಶಿವಯೋಗ"ವೆಂದರೆ "ಸಗುಣ ನಿರ್ಗುಣ ಸಮನ್ವಯ"ವೆಂಬ ಮಾತಂ ಇದರಿಂದ ಸ್ಪಷ್ಟವಾಯಿತು. ಹಾಗಾದರೆ ಉಳಿದ ಯೋಗಗಳ ಪ್ರಯೋಜನವೇನಂ ? ಎಂಬ ಇನ್ನೊಂದು ಪ್ರಶ್ನವು ಈಗ ತಲೆಯಲ್ಲಿ ಬರುವುದು ಸಹಜವಾಗಿದೆ. ಇದಕ್ಕೆ ಶ್ರೀ ನಿಜಗುಣ ಶಿವಯೋಗಿಗಳು ಹೀಗೆ ಹೇಳಿದ್ದಾರೆ:–

"ಪರಶಿವ ಸಾಮರಸ್ಯದಿಂದಪ್ಪ ಶಿವಯೋಗಕ್ಕೆ ಸಾಧನವಪ್ಪುದರಿಂ ತಾವು ಯೋಗಸಂಜ್ಞೆಯುಳ್ಳವವಾದೊಡೆ, ಮಂತ್ರಯೋಗವೆಂದು, ಲಯಯೋಗವೆಂದು, ಹಠಯೋಗವೆಂದು, ರಾಜಯೋಗವೆಂದುಂ ನಾಲ್ಕು ಪ್ರಕಾರವಾಗಿರ್ಪುವು."*

--"ಪಾರಮಾರ್ಥ ಪ್ರಕಾಶಿಕೆ" ಅಧ್ಯಾಯ ೧.

ಅಲ್ಲದೆ ಶ್ರೀನಿಜಗುಣಶಿವಯೋಗಿಗಳು ಇನ್ನೊಂದು ಕಾರಣವನ್ನೂ ಹೇಳಿದ್ದಾರೆ. ಹೇಗೆಂದರೆ :–

"ಬಳಿಕ ಈ ಚತುರ್ವಿಧ ಯೋಗಂಗಳು ಸರ್ವರಿಗೂ ವಿಧೇಯಂಗಳೇ ? ಎನಲಾ ಯೋಗಾಧಿಕಾರಿಗಳಾದೊಡೆ ಮೃದುವೆಂದು, ಮಧ್ಯವೆಂದುಂ, ಅತಿಮಾತ್ರನೆಂದು, ಅತಿಮಾತ್ರತರನೆಂದು ನಾಲ್ಕು ಪ್ರಕಾರವಾಗಿರ್ಪರವರಲ್ಲಿ...... ಮೃದುವೆನಿಸುವಾತಂಗೆ ಮಂತ್ರಯೋಗವೇ ವೇದ್ಯವಹುದು...... ಮಧ್ಯಮನೆನಿಸುವಾತಂಗೆ ಲಯಯೋಗವೇ ಯೋಗ್ಯವಹುದುಂ...... ಅತಿಮಾತ್ರನೆನಿಪಾತನಿಗೆ ಹಠಯೋಗವೇ ಯೋಗ್ಯವಹುದುಂ...... ಅತಿಮಾತ್ರತರನೆನಿಸುವಾತಂಗೆ ರಾಜಯೋಗವೇ ಯೋಗ್ಯ ಮಕ್ಕು."

—"ಪರಮಾರ್ಥ ಪ್ರಕಾಶಿಕೆ" ಪರಿಚ್ಛೇದ ೧.

ಈ ರೀತಿಯಿಂದ ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಎಂಬ ಈ ನಾಲ್ಕೂ ಯೋಗಗಳು "ಶಿವಯೋಗ"ಕ್ಕೇ ಸಹಾಯಕಗಳೆಂದೂ, ಅಧಿಕಾರಿ ಭೇದದಿಂದ ಒಂದೊಂದು ಬಗೆಯ ಪ್ರಕೃತಿಯವರಿಗೆ ಒಂದೊಂದು ಯೋಗವು ಆವಶ್ಯಕವೆಂದೂ ಶ್ರೀನಿಜಗುಣಶಿವಯೋಗಿಗಳು ಮೇಲ್ಕಾಣಿಸಿದ ತಮ್ಮ ಸುವಿಖ್ಯಾತ ಗ್ರಂಥದಲ್ಲಿ ಹೇಳಿದ್ದಾರೆ.

ಮೇಲೆ ಹೇಳಿದ ನಾಲ್ಕೂ ಪ್ರಕಾರದ ಅಧಿಕಾರಿಗಳ ವರ್ಣನೆಯನ್ನು ಶ್ರೀನಿಜಗುಣಶಿವಯೋಗಿಗಳು ತಮ್ಮ "ಕೈವಲ್ಯ ಪದ್ಧತಿ"ಯಲ್ಲಿ ಹೀಗೆ ಮಾಡಿರುವರು :–

ಜಗದೊಳುನ್ನತವಾದ ಯೋಗಸಾಧಕ ।
ರುಗಳ ನಾಲ್ವರನಿಲ್ಲಿ ವರ್ಣಿಸುವೆನು ॥ ಪಲ್ಲವಿ ॥
ಬಲಹೀನನುರಾಗಿ ಮಂದಮತಿ ನಸು- ।
ಗೆಲಸವಿಡಿದವನನ್ಯವಶವರ್ತಿ ॥

* ಮಂತ್ರೋ ಲಯೋ ಹಠೋ ರಾಜೋ ಯೋಗೋಽಂತರ್ಭೂಮಿಕಾಕ್ರಮಾತ್ ।
ಏಕ ಏವ ಚತುರ್ಧಾಯಂ ಮಹಾಯೋಗೋಽಭಿಧೀಯತೇ ॥

—(ಯೋಗ ಶಿಖೋಪನಿಷತ್ ೧–೧೩೦)

ಯೋಗೋ ಹಿ ಬಹುಧಾ ಬ್ರಹ್ಮನ್ ಭಿದ್ಯತೇ ವ್ಯವಹಾರತಃ ।
ಮಂತ್ರಯೋಗೋ ಲಯಶ್ಚೈವ ಹಠೋಽಸೌ ರಾಜಯೋಗಕಃ ॥

—(ಯೋಗತತ್ತ್ವೋಪನಿಷತ್ ೧೯)

ಸಲೆರೋಗಿ ಗೃಹಕೃತ್ಯದೆಡೆಯೊಳು ಮತಿ ।
ನೆಲಿಸಿದಾತನೆ ಮೃದುವೆನಿಸುವನು ॥

ಸಮಭಾವ ಸುಜನರ ಸಂಗ ಸುಖಿಕಾಯ ।
ಸಮುದಯದೊಳು ಸಾಕ್ಷಿ ದೃಢದೇಹಿ ॥
ವಿಮಲನಿಂದ್ರಿಯವೃತ್ತಿ ಶಾಂತನಭ್ಯಾಸಿ ಭಾಸು ।
ರಮತಿಯುಳ್ಳವನೇ ಮಧ್ಯನೆನಿಸುವನು ॥

ವರನೀತಿ ಕ್ಷಮೆ ಧೈರ್ಯ ಸತ್ಯವಚನ ನಿ- ।
ರ್ಧರಣ ನಿರ್ಮಲಚಿತ್ತ ಸಾರಶೌರ್ಯ ॥
ಪರಿತೋಷ ವಿನಯಾದಿ ಸರ್ವಗುಣವಾ- ।
ವರಿಸಿ ತೋರ್ಪನತಿಮಾತ್ರನಹನು ॥

ಬಹುಶಾಸ್ತ್ರ ಪರಿಣತನಿಹಪರಭೋಗ ವಿ- ।
ರಹಿತನಖಿಳಕರ್ಮದೂರನಧಿಕ- ॥
ವಹ ಶೂರನವಿಕಾರಿ ತತ್ತ್ವಭಾವ ಸಂ- ।
ನ್ನಿಹಿತನೆನಿಪನತಿಮಾತ್ರತರನಂ ॥

ಇನಿಬರೊಲಿದಂ ಮಂತ್ರ, ಲಯ, ಹಠ, ರಾಜ- ।
ವೆನಿಪ ಯೋಗದೊಳೊಂದೊಂದನೈದಿ ॥
ಘನ ಗುರುಶಂಭುಲಿಂಗದಿಂದೆ ನಿಜಸುಖ ।
ವನು ಪಡೆವುದಂ ಮೇಲೆ ಕ್ರಮವಿಡಿದಂ ॥ (೩)

ಇದೇ ರೀತಿಯಿಂದ ಶ್ರೀ ನಿಜಗುಣಶಿವಯೋಗಿಗಳು "ಪಂಚಯೋಗ"ಗಳ ಲಕ್ಷಣಗಳನ್ನು ಅದೇ ಗ್ರಂಥದಲ್ಲಿ ಒಂದೇ ಪದ್ಯದೊಳಗೆ ಅತ್ಯಂತ ಸುಲಭ ಶಬ್ದಗಳಿಂದ ಸುಂದರವಾಗಿ ಹೀಗೆ ವರ್ಣಿಸಿರುವರು—

ಕೇಳಿ ತಿಳಿದು ಪಂಚಯೋಗವಿವನು ಮಾಡ ।
ಲಾಳಲಹುದು ಮುಕ್ತಿಪದವನು ॥ ಪಲ್ಲವಿ ॥

ಒಂದೆರಡಾರೆಂಟು ವರ್ಣದ ಮನುಗಳ ।
ಛಂದವನರಿದೆಳಸಿದುದನು ॥
ಕುಂದದೆ ಜಪಿಸುತಿರಲು ಮಂತ್ರಯೋಗವಿ ।
ದೆಂದು ಪೇಳುವರು ಸಂಯಮಿಗಳು ॥

ನಾದದ ನಿಜದೊಳಾಗಲಿ ಬಿಂದುವಿನ ರಮ್ಯ- ।
ವಾದ ರೂಪಿನೊಳಾಗಲಸುಗೂಡಿ ॥
ಭೇದವಳಿದು ಮನವಿರೆ ಲಯಯೋಗವೆಂ -।
ದೋದಿ ಸೂರಿಗಳು ಸೂಚಿಸುವರು ॥

ಹವಣಿಸಿದಷ್ಟಾಂಗದಿಂದೆ ಕರಣ ಮುದ್ರಾ ।
ನಿವಹದಿಂ ಬರಿಯು ಕುಂಭಕದಿಂದೆ ॥
ಪವನವಿಜಯುವೆ ಪೂರನೆಯು ಸುಯೋಗವೆಂ- ।
ದವಿಚಲ ಮತಿಗಳೂಹಿಸುವರು ॥

ಅರುವಿನಿಂದೊಳಹೊರಗಣ ಪೂರು ಲಕ್ಷ್ಯದಿಂ ।
ದರಿದು ತತ್ತ್ವವನು ಮಾನಸವೃತ್ತಿ ॥
ಕರಿಗೊಂಡು ನಿಂದೊಡದನೆ ರಾಜಯೋಗವೆಂ ।
ದರುಹಿ ತೋರುವರಚ್ಚ ಸುಖಿಗಳು ॥

ಗುರು ಶಂಭುಲಿಂಗದರ್ಶನೆ ಅನುಸಂಧಾನ ।
ವರಭಕ್ತಿ ವಿದ್ಯಾ ಸುವ್ರತವೈದು ॥
ನಿರುತದಿಂದಳವಟ್ಟುದನೆ ಶಿವಯೋಗವೆಂ- ।
ದೊರೆವರೊಲಿದು ವೇದವಿದರುಗಳು ॥ (೪)

ನಾಮ ಜಪವನ್ನಾಗಲಿ, ಓಂಕಾರ ಜಪವನ್ನಾಗಲಿ, ಸೋಹಂ ಜಪವನ್ನಾಗಲಿ ಮಾಡುವುದೇ ಮಂತ್ರಯೋಗ, ಕಿವಿಗಳಲ್ಲಿ ಬೆರಳನ್ನೊತ್ತಿ ಮುಚ್ಚುವದರಿಂದ ಹುಟ್ಟುವ ನಾದದ ಮೇಲಾಗಲಿ, ಕಣ್ಣಿನ ರೆಪ್ಪೆಗಳ ಮೇಲೆ ಮೆಲ್ಲಗೆ ಬೆರಳನ್ನಿಡುವದರಿಂದ ಕಾಣಸುವ ಜ್ಯೋತಿಯ ಮೇಲಾಗಲಿ, ಅಥವಾ ಪರಮಾತ್ಮನ ಮೂರ್ತಿ ಧ್ಯಾನ ದಲ್ಲಾಗಲಿ ಮನವನ್ನು ಲಯಗೊಳಿಸುವುದೇ ಲಯಯೋಗವು. ಮುಖ್ಯವಾಗಿ ಆಸನ ಪ್ರಾಣಾಯಾಮಗಳಿಂದ ನಾಡೀ ಶುದ್ಧಿಯನ್ನು ಸಾಧಿಸುವುದೇ ಹಠಯೋಗವು. ಹೃದಯದಲ್ಲಾಗಲಿ, ಭ್ರೂಮಧ್ಯದಲ್ಲಾಗಲಿ, ಮಸ್ತಕದ ಮೇಲ್ಗಡೆಗಾಗಲಿ ಧ್ಯಾನ ಲಕ್ಷ್ಯವನ್ನಿಟ್ಟು ಆತ್ಮನಗೂಡ ಒಂದಾಗುವದೇ ರಾಜಯೋಗವು. ಆತ್ಮನು ಪರಮಾತ್ಮನ ಅಂಶನೆಂದು ಭಾವಿಸಿ ಹೃದಯದಲ್ಲಿ ಪರಮಾತ್ಮನ ಸ್ವರೂಪವನ್ನು ಧ್ಯಾನಿಸುತ್ತ ಪರಮಾತ್ಮನ ಕೂಡ ಸಾಮರಸ್ಯವನ್ನು ಸಾಧಿಸುವದೇ ಶಿವಯೋಗವು. ಇವೆಲ್ಲ ವಿಷಯಗಳನ್ನು ಶ್ರೀ ನಿಜಗುಣಶಿವಯೋಗಿಗಳು ತಮ್ಮ "ಪಾರಮಾರ್ಥ ಪ್ರಕಾಶಿಕೆ" ಯಲ್ಲಿ ಅತ್ಯಂತ ವಿವರವಾಗಿ ಪ್ರತಿಪಾದಿಸಿದ್ದಾರೆ. ಅದರ ಉಪಯೋಗ ಮಾಡಿಕೊಂಡು ಶ್ರೀ ನಿಜಗುಣಶಿವಯೋಗಿಗಳ ಮೂಲ ಮಹಾಗ್ರಂಥದ ಕಡೆಗೆ ತಮ್ಮ ಲಕ್ಷ್ಯವನ್ನು ಹೊರಳಿಸಿದರೆ ನನ್ನೀ ಪ್ರಯತ್ನವು ಸಾರ್ಥಕವಾಯಿತೆಂದು ನಾನು ಭಾವಿಸುವೆನು.

### ೧. ಮಂತ್ರಯೋಗ

ಇದಕ್ಕೆ ಜಪಯೋಗವೆಂದು ಸಹ ಅನ್ನಬಹುದು. ಇದರಲ್ಲಿಯೂ ಸಗುಣಜಪ, ನಿರ್ಗುಣಜಪ ಎಂದು ಎರಡು ಪ್ರಕಾರಗಳಿರುವವು. ಸಗುಣಪರಮಾತ್ಮನ ನಾಮ ಗಳಿಂದ ಕೂಡಿದ ಮಂತ್ರಗಳನ್ನು ಜಪಿಸುವುದೇ ಸಗುಣಜಪವು. ಆತ್ಮಪರವಾದ

ಸೋಹಂ ಮಂತ್ರವನ್ನಾಗಲಿ, ನಿರ್ಗುಣಪರಮಾತ್ಮನ ದ್ಯೋತಕವಾದ ಓಂಕಾರ ವನ್ನಾಗಲಿ ಜಪಿಸುವುದೇ ನಿರ್ಗುಣಜಪವು.

ಧ್ವನಿಸಹಿತವಾಗಿ ಹೊರಗೆ ಉಚ್ಚರಿಸದೆ, ಮೌನವಾಗಿ ಒಳಗಿಂದೊಳಗೆ ಮಂತ್ರಜಪ ಮಾಡುವುದು ಒಳ್ಳೆಯದೆಂದು ಅನೇಕ ಗ್ರಂಥಗಳಲ್ಲಿ ಹೇಳಲಾಗಿದೆ.

ನಿರ್ಗುಣ ಮಂತ್ರಗಳನ್ನು ಮುಖ್ಯವಾಗಿ ಶ್ವಾಸೋಚ್ಛ್ವಾಸದೊಡನೆ ಕೂಡಿಸಿ ಮಾಡಬೇಕೆಂದು ಅನೇಕ ಗ್ರಂಥಗಳಲ್ಲಿ ಹೇಳಲಾಗಿದೆ. ಸಗುಣ ಮಂತ್ರಗಳನ್ನು ಸಹ ಶ್ವಾಸೋಚ್ಛ್ವಾಸದೊಡನೆ ಕೂಡಿಸುವುದರಿಂದ ಬಹಳ ಪ್ರಯೋಜನವುಂಟೆಂದು ಅನೇಕರ ಅಭಿಪ್ರಾಯವಿರುತ್ತದೆ. ಮಂತ್ರದಲ್ಲಿ ಎರಡು ಭಾಗ ಮಾಡಿ ಒಂದು ಭಾಗವನ್ನು ಶ್ವಾಸವನ್ನು ಒಳಗೆ ಎಳೆದುಕೊಳ್ಳುವಾಗಲೂ, ಇನ್ನೊಂದು ಭಾಗವನ್ನು ಶ್ವಾಸವನ್ನು ಹೊರಗೆ ಬಿಡುವಾಗಲೂ ಜಪಿಸಬೇಕೆಂದು ಕೆಲವರು ಹೇಳುತ್ತಾರೆ. ಹೀಗೆ ಮಾಡುವದರಿಂದ ಕೊನೆಕೊನೆಗೆ, ನೀವು ಇನ್ನಾವ ಕೆಲಸದಲ್ಲಿ ತೊಡಗಿರುವಾಗಲೂ ಸಹ ನಿಮ್ಮ ಶ್ವಾಸವು ನಿಮಗೆ ಗೊತ್ತಿಲ್ಲದೆ ತನ್ನಿಂದ ತಾನೆ ಸದಾ ಜಪಗೈಯುತ್ತಿರುವ ದೆಂದು ಕಂಡುಬರುತ್ತದೆ. ಹೀಗಾಗಿ ನಾಮಜಪವು ನಿಮಗೆ ಸ್ವಾಭಾವಿಕವಾಗಿ ಬಿಡುತ್ತದೆ.

ನಿರ್ಗುಣಜಪದಲ್ಲಂತೂ ಶ್ವಾಸೋಚ್ಛ್ವಾಸವನ್ನೇ ಮಂತ್ರಮಯವಾಗಿ ಭಾವಿಸ ಬೇಕೆಂದು ಹೇಳಲಾಗಿದೆ. ಶ್ವಾಸವು ಒಳಗೆ ಹೋಗುವಾಗ "ಸೋ" ಎಂದೂ ಶ್ವಾಸವು ಹೊರಗೆ ಬರುವಾಗ "ಹಂ" ಎಂದೂ ಸ್ವಾಭಾವಿಕವಾಗಿ ಶಬ್ದವನ್ನುಂಟುಮಾಡುತ್ತದೆ. ಈ ಶ್ವಾಸ ಪ್ರಶ್ವಾಸಗಳ ಮೇಲೆ ಸುಮ್ಮನೆ ಲಕ್ಷ್ಯವನ್ನಿಟ್ಟುಕೊಂಡು, ಮೇಲ್ಕಾಣಿಸಿದ ಅಕ್ಷರಗಳನ್ನು ಆ ಶ್ವಾಸ ಪ್ರಶ್ವಾಸಗಳಲ್ಲಿ ಭಾವಿಸುತ್ತಹೋದರೆ ಇದಕ್ಕೇ ಅಜಪಾಯೋಗವೆಂದೂ, ಅಜಪಾಜಪವೆಂದೂ, ಅಜಪಾಗಾಯತ್ರಿಜಪವೆಂದೂ ಶಾಸ್ತ್ರ ಗಳಲ್ಲಿ ಹೇಳಲಾಗಿದೆ. ಹೀಗೆ ಶ್ವಾಸೋಚ್ಛ್ವಾಸಗಳು ಮಿನಿಟಿಗೆ ೧೫ ಸಾರೆಯಂತೆ ಒಟ್ಟು ೨೪ ತಾಸುಗಳಲ್ಲಿ (ಒಂದು ಇಡಿ ದಿವಸದಲ್ಲಿ) ಇಪ್ಪತ್ತೊಂದು ಸಾವಿರದ ಆರುನೂರು ಸಾರೆ ನಡೆಯುವದೆಂದೂ ಶ್ವಾಸ ಪ್ರಶ್ವಾಸಗಳ ಮೇಲೆ ಸುಮ್ಮನೆ ಸೋಹಂ ಮಂತ್ರ ಭಾವದಿಂದ ಲಕ್ಷ್ಯವನ್ನಿಡುತ್ತ ಹೋಗುವದರಿಂದ ಕೊನೆಗೆ ಶ್ವಾಸೋಚ್ಛ್ವಾಸವು ತನ್ನಿಂದ ತಾನೇ ಸದಾ ಸೋಹಂಭಾವದಿಂದ "ಸೋ" "ಹಂ" ಮಂತ್ರಜಪ ನಡಿಸುವದರಿಂದ ಅನಾಯಾಸವಾಗಿ ನಮಗೆ ಪ್ರತಿದಿನವೂ ೨೧ ಸಾವಿರದ ೬ ನೂರು ಜಪ ಮಾಡಿದ ಫಲವು ಲಭಿಸುವದೆಂದೂ ಅನೇಕಾನೇಕ ಗ್ರಂಥಗಳಲ್ಲಿ ಹೇಳಲಾಗಿದೆ.

ಪರಮಾತ್ಮನು ಹೊರಗೆ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿಕೊಂಡಿದ್ದಾನೆಂದು ಮೊದಲಿಗೆ ಸಗುಣಭಾವದಿಂದ ಆತನ ಉಪಾಸನೆ ಮಾಡುತ್ತಲಿದ್ದುದಾದರೆ, ಮುಂದೆ ಆತನು ಆತ್ಮರೂಪದಿಂದ ನಮ್ಮ ಒಳಗೂ ಇದ್ದಾನೆಂಬುದು ಅನುಭವಕ್ಕೆ ಬರುವದು.

ಆಮೇಲೆ ಕೊನೆಯಲ್ಲಿ ಆ ಆತ್ಮನೇ ತಾನಿದ್ದೇನೆಂಬ ಭಾವನೆಯು ಮೈದಾಳಿ ನೆಲೆಗೊಳ್ಳುವುದು. "ಸೋಹಂ" ಮಂತ್ರದ ಅರ್ಥವು ಇದೇ ಆಗಿದೆ. ನಿಜವಾಗಿ ನೋಡಿದರೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ರಹಸ್ಯವು ಮೇಲ್ಕಾಣಿಸಿದ ಮೂರು ಭಾವಗಳಲ್ಲಿಯೇ ಅಡಕವಾಗಿದೆ. ಷಟ್‌ಸ್ಥಲದ ಮರ್ಮವೆಂದರೂ ಇದೇ.

ಇರಲಿ, ಕೊಟ್ಟಕೊನೆಯಲ್ಲಿ ಶ್ವಾಸ ಪ್ರಶ್ವಾಸಗಳ ಈ ಸ್ವಾಭಾವಿಕ ಉಚ್ಚಾರ ಕ್ರಮಗಳಾದ "ಸೋ" "ಹಂ" ಅಕ್ಷರಗಳೊಳಗಿನ "ಸ" ಮತ್ತು "ಹ" ಇವೆರಡೂ ವ್ಯಂಜನಾಕ್ಷರಗಳನ್ನು ತೆಗೆದುಹಾಕಿದರೆ "ಓ" ಮತ್ತು "ಮ್" ಎಂಬ ಎರಡು ಸ್ವರಾಕ್ಷರಗಳು ಮಾತ್ರ ಉಳಿದು ಅವೆರಡರಿಂದ "ಓಮ್" (ಓಂ) ಎಂಬ ಏಕಾಕ್ಷರ ಪ್ರಣವಮಂತ್ರವು ಸಿದ್ಧವಾಗುತ್ತದೆ. ಈ ಭಾವದಿಂದ ಶ್ವಾಸೋಚ್ಛ್ವಾಸವನ್ನೇ "ಓಂ"ಕಾರ ರೂಪವಾಗಿ ಭಾವಿಸುತ್ತ ಅನುಸಂಧಾನ ಮಾಡಿದರೆ ಅದರಿಂದಲೇ ಮುಂದೆ "ಲಯಯೋಗ"ವುಂಟಾಗುತ್ತದೆ.

## ೨. ಲಯಯೋಗ

ಓಂಕಾರವೆಂದರೆ ಪ್ರಣವನಾದ, ನಾದಬ್ರಹ್ಮವೆಂದು ಶಾಸ್ತ್ರಗಳಲ್ಲಿ ಇದಕ್ಕೆ ಅನ್ನುತ್ತಾರೆ. ಜಗತ್ತು ಈ ನಾದದಿಂದಲೇ ಉತ್ಪನ್ನವಾಗಿದೆಯೆಂದು ಸಕಲಶಾಸ್ತ್ರಗಳಲ್ಲಿ ಹೇಳಲಾಗಿದೆ. ಸತ್‌ಸ್ವರೂಪ ಪರಮಾತ್ಮನಲ್ಲಿ ಉದಯಿಸಿದ ಈ ಚಿತ್ "ನಾದ" ಅಥವಾ "ಪ್ರಣವನಾದ"ದಿಂದಲೇ ಸಮಸ್ತ ಜಗತ್ತಿನ ಉತ್ಪತ್ತಿಯಾಯಿತೆಂಬ ವಿಷಯವು ಶಾಸ್ತ್ರಾಂತರಗಳಲ್ಲಿ "ಕಂಪನವಾದ" (ತರಂಗವಾದ) "ಸ್ಫೋಟವಾದ" ಮೊದಲಾದ ಹೆಸರುಗಳಿಂದ ಪ್ರಖ್ಯಾತವಾಗಿದೆಯಷ್ಟೇ ?

ಈ ಮೂಲನಾದದ ಭಾವನೆಯನ್ನಿಟ್ಟುಕೊಂಡು ಪ್ರಣವ ಮಂತ್ರವಾದ "ಓಂ" ಕಾರದ ಮೇಲೆ ಚಿತ್ತೈಕಾಗ್ರತೆಯನ್ನು ಸಾಧಿಸುವದರಿಂದ ಮುಂದೆ ತನ್ನ ಹೃದಯ ಕಮಲದಲ್ಲಿಯೇ ನಾದೋತ್ಪತ್ತಿಯಾಗುವದೆಂದು ಶಾಸ್ತ್ರಾಂತರಗಳಲ್ಲಿ ಹೇಳಲಾಗಿದೆ.

ವಾಣಿಯ ವಿಷಯದಲ್ಲಿ ಹೇಳುವಾಗ ಪುರಾತನ ಜ್ಞಾನಿಗಳು ಪ್ರೇರಣಾರೂಪವಾದ ಮೂಲ ಪರಾವಾಣಿಯು ಮನುಷ್ಯನ ನಾಭಿಕಮಲದಲ್ಲಿ ಹುಟ್ಟುವದೆಂದು ನಿರ್ಧರಿಸಿದ್ದಾರೆ. ಮುಂದೆ ಅದು ಕಲ್ಪನಾಚಿತ್ರರೂಪವಾದ ಪಶ್ಯಂತೀ ವಾಣಿಯ ಸ್ವರೂಪವನ್ನೂ, ಆಮೇಲೆ ಉಚ್ಚಾರ ರಹಿತವಾದ ಪಿಸುಮಾತಿನ ಮಧ್ಯಮಾ ವಾಣಿಯ ರೂಪವನ್ನೂ, ಕೊನೆಗೆ ಸ್ಪಷ್ಟೋಚ್ಚಾರದಿಂದ ಕೂಡಿದ ವೈಖರೀ ವಾಣಿಯ ರೂಪವನ್ನೂ ತಾಳುವದೆಂದು ಆ ಪೂರ್ವಕಾಲದ ಜ್ಞಾನಿಗಳು ಶಾಸ್ತ್ರಗಳಲ್ಲಿ ಹೇಳಿದ್ದಾರಷ್ಟೇ ?

ಈ ಬಾಹ್ಯವಾಣಿಯು ಮೂಲಸ್ವರೂಪವಾದ ಪ್ರೇರಣಾರೂಪದ ಪರಾವಾಣಿಯೇ ನಮ್ಮ ಪಿಂಡಾಂಡದೊಳಗಿನ ಮೂಲ ಪ್ರಣವನಾದವಾಗಿದೆಯೆಂದು

ನಮಗೆ ಸಹಜವಾಗಿಯೇ ಅನಿಸುವದಿಲ್ಲವೇ ? ಆದ್ದರಿಂದ ನಮ್ಮ ಶ್ವಾಸೋಚ್ಛ್ವಾಸವನ್ನೇ "ಓ–ಮ್" (ಓಂ)ಕಾರ ರೂಪವಾಗಿ ಭಾವಿಸುತ್ತ ಅದರ ಉತ್ಪತ್ತಿ ಸ್ಥಾನವಾದ ನಾಭಿಕಮಲದಲ್ಲಿ ಲಕ್ಷ್ಯವನ್ನಿಟ್ಟು ಚಿತ್ತೈಕಾಗ್ರವನ್ನು ಸಾಧಿಸಿದರೆ ಮುಂದೆ "ಪರಾ" ವಾಣಿಯ ಸುಳಿವು ನಮಗೆ ಹತ್ತಬಹುದೆಂಬುದು ಸ್ವಾಭಾವಿಕವಾಗಿದೆ.

"ಪರಾ"ವಾಣಿಯ ಉತ್ಪತ್ತಿಯು ನಾಭಿಕಮಲದಲ್ಲಾದರೂ, ಅದು ಪ್ರಕಟವಾಗುವ ಸ್ಥಾನವು ಭಾವನಾಮಯವಾದ ಹೃದಯ ಕಮಲದಲ್ಲಿಯೇ ಎಂದು ತೋರುತ್ತದೆ. ಅದಕ್ಕೆಂತಲೇ ಹೃದಯ ಚಕ್ರಕ್ಕೆ ಯೋಗಶಾಸ್ತ್ರ ವಿಷಯಕ ಗ್ರಂಥಗಳಲ್ಲೆಲ್ಲ "ಅನಾಹತ" ಚಕ್ರವೆಂದು ಹೇಳಲಾಗಿದೆ. ಅನಾಹತವೆಂದರೆ ಬಾರಿಸದಿದ್ದರೂ ನಾದಗಳು ಕೇಳಿಸುವ ಸ್ಥಾನವೆಂದು ಅರ್ಥ ಎಂದು ಬೇರೆ ಹೇಳಲಿಕ್ಕೇ ಬೇಡ.

"ಜ್ಞಾನಸಿಂಧು"ವೆಂಬ ಪುರಾತನ ಪ್ರಖ್ಯಾತಗ್ರಂಥದಲ್ಲಿ ಈ ವಿಷಯವು ಹಾಗೂ "ಲಯಯೋಗ"ದ ಸಂಪೂರ್ಣ ವಿಷಯವು ಬಹಳೇ ಹೃದಯಂಗಮವಾಗಿ ವರ್ಣಿಸಲ್ಪಟ್ಟಿದೆ. ಅದು ಹೇಗಂದರೆ :–

ಕಂದ ಕೇಳ್ ಷಣ್ಮುಖನೆ ನಾದಂ- ।
ಬೊಂದುದದುವೆ ಅನಾದಿ ಸಿದ್ಧವು ।
ಎಂದಿಗೂ ಲಯವಿಲ್ಲವದಕೈ ಅದೆ ಪರಂಜ್ಯೋತಿ ॥
ಸಂದಳಿಯ ಬ್ರಹ್ಮಾಂಡತತಿಗಳು ।
ಒಂದೆರಡು ಎನಲಿಲ್ಲನಂತವು ।
ಅಂದು ತೋರತಲಡಗುವವು ಆ ನಾದಮೂಲದಲಿ ॥ ೧ ॥

.... .... .... .... .... .... ... .... .... ....

ಒಂದುವೊಂದರಲಿಂದ ಹೆಚ್ಚಿಯೆ ।
ಅಂದು ಬಹುಲೋಕಗಳು ಆದವು ।
ಒಂದೆ ಓಂಕಾರವದು ನಾದವು ಬಿಂದು, ಕಲೆಯೆನಿಸಿ ॥
ಒಂದು ಓಂಕಾರವನು ಹಿಡಿದೇ ।
ಚಂದದಿಂ ಭಜಿಸುವರು ಭಕ್ತಿಲಿ ।
ಒಂದು ಓಂಕಾರವದೆ ಸತ್ಯವು ಎಂದು ತಾಪಸರು ॥ ೭ ॥

.... .... .... .... .... .... .... .... .... ....

ಓಂಕಾರವೆ ಅದು ನಾಮರೂಪವು ।
ಓಂಕಾರವೆ ಮಂತ್ರಗಳು ನ್ಯಾಸವು ।
ಓಂಕಾರವೆ ಬೀಜಾಕ್ಷರಂಗಳು ಓಂಕಾರವೆ ವಾಕ್ಯ ॥
ಓಂಕಾರವೆ ಗೀತಗಳು ಅರ್ಥವು ।
ಓಂಕಾರವೆ ಪದಭೇದನಂಗಳು ।
ಓಂಕಾರವೆ ಬಹುವಾದ್ಯ ನಾನಾ ಎಲ್ಲ ಓಂ ಎಂದ ॥ ೯ ॥

ನಾದ ಸತ್ಯ ಬ್ರಹ್ಮವದು ಆ ।
ನಾದ ನಿರ್ಗುಣ ನಿರ್ವಿಕಲ್ಪವು ।
ನಾದ ಕ್ರಿಯೆ ನಾಮಾದಿ ಶೂನ್ಯವು ನಾದ ಚ್ಯುತಿರಹಿತ ॥
ನಾದ ಪರಮಾನಂದ ರೂಪವು ।
ನಾದ ಅಚಲ ಅಗಮ್ಯ ಭೇದವು ।
ನಾದ ಸರ್ವವ್ಯಾಪಿ ಸಚ್ಚಿನ್ಮಾತ್ರ ನಾದೆಂದ ॥ ೧೦ ॥

.... .... .... .... .... .... .... .... .... ....
ನಾದಯೋಗವನೊರೆವೆ ಸರ್ವವು ।
ನಾದಮಯವಾಗುವುದು ಜಗವದು ।
ನಾದ ತೋರ್ವುದು ದೇಹದೊಳು ತುಂಬಿಹುದು ಸರ್ವದಲಿ ॥
ನಾದ ಪರವಶ ಮಾಡುತಿರುವುದು ।
ನಾದ ತೂಗಾಡಿಸುತಲಿರುವುದು ।
ನಾದ ಪರಮಾನಂದ ಲೀಲೆಯು ನಾದ ಲಯಯೋಗ ॥ ೧೫ ॥

.... .... .... .... .... .... .... .... .... ....
ಸಪ್ಪುಳಿಲ್ಲದ ಸ್ಥಳದಿ ತಾನೇ ।
ಒಪ್ಪಿ ಆಸನ ಹಾಕಿ ಕುಳಿತೇ ।
ತಪ್ಪದಲೆ ಆ ಮೊದಲೆ ಹೇಳಿದ ಆಸನವ ಬಲಿದು ॥
ಇಪ್ಪವನು ತಾನಾಗಿ ಮನಸಿಗೆ ।
ಬಪ್ಪವಾಸನೆಯುಲ್ಲ ಕಳೆದೇ
ಅಪ್ಪಿಯೋಗಾಭ್ಯಾಸಕೆಯು ಮನ ಮಾಡಬೇಕೆಂದ ॥ ೨೦ ॥

.... .... .... .... .... .... .... .... .... ....
ದ್ವಾರ ನವವನು ಬಿಗಿಯೆ ವಾಯುವು ।
ದ್ವಾರ ದ್ವಾರಕೆ ತುಂಬಿ ನಾಡಿಯು ।
ದ್ವಾರ ದ್ವಾರದಿ ಬೆಳಗಿ ಸರ್ವೇ ನಾಡಿಗಳೊಳೇರಿ ।
ಸಾರಿ ಆಧಾರವನು ಬಳಿಕಲಿ ।
ಮೀರಿ ಸ್ವಾಧಿಷ್ಠಾನವನು ಅದ ।
ಹಾರಿ ಮಣಿಪೂರಕ ಅನಾಹತಕೈದಬೇಕಂದ ॥ ೨೩ ॥

ದಿನಪ್ರತಿಯಂ ಅಭ್ಯಾಸದಿಂದಲಿ ।
ಅನುವರಿತು ಯೋಗವನು ಸಾಧಿಸೆ ।
ತನಗೆ ತೋರ್ವುದು ನಾದ ಆಧಾರದಲಿ ಕಿಂಚಿತ್ತು ॥

ತನಯಂ ಕೇಳ್ ಸ್ವಾಧಿಷ್ಠಕೇ ಬರೆ ।
ಮನವರಿಕೆ ಮಧ್ಯಮವು ನಾದವು ।
ನಿನಗೆ ಅರಿ ಮಣಿಪೂರಕದಿ ಕೆಲ ಉತ್ತಮವು ಎಂದಾ ॥ ೨೪ ॥

ಅನಹತಕೆ ಕಾಲಿಕ್ಕೆ ಅಲ್ಲಿಯೆ ।
ಘನಮಹಾಧ್ವನಿಗದುವೆ ಸ್ಥಾನವು ।
ತನತನಗೆ ಒರಲುವವು ದಶವಿಧ ನಾದವಾಕ್ಷಣದಿ ॥
ಛಿಣಿ ಪ್ರಥಮಂ ಛಿಣಿಛಿಣಿಯಂ ಎರಡದು ।
ಝಣಿತಂಕಾರವು ಮೂರುಂ ತಾಳವು ।
ಎಣಿಸೆ ನಾಲ್ಕದು ಐದನೆಯದೆ ಮೃದಂಗ ನಾದೆಂದಾ ॥ ೨೫ ॥

ಆರನೆಯುದದಂ ವೀಣೆ ಕೇಳೈ ।
ಭೋರೆನಿಪ ಶಂಖವದು ಏಳದಂ ।
ಚಾರು ಘಂಟೆಯು ಎಂಟು, ಭೇರಿಯ ನಾದ ಒಂಬತ್ತು ॥
ಘೋರ ಮೇಘದ ನಾದ ಹತ್ತು ವಿ– ।
ಚಾರಿಸಲಂ ದಶವಿಂತಂ ನಾದವು ।
ತೋರುವವು ಅನಹತದಲಾಗ್ರಹದಿಂದ ಕೇಳೆಂದಾ ॥ ೨೬ ॥

ಕಹಳೆ, ಛಿನ್ನಾ ಕಹಳೆ, ಜಾಗಟೆ ।
ಬಹು ರವವು ನೇಪೇರಿ ಕರ್ಣೆಯು ।
ಮಹಕೊಳಲು ನಾಗಸರ ಪಿಳ್ಳಂಗೋವಿ ಸಾನಾಯಂ ॥
ವಿಹಿತ ಶ್ರುತಿ ಕಾಮಾಕ್ಷಿ ಖೂರುಗ– ।
ಳಿಹ ಸುನಾದಚ್ಚೆಂಗಂ ತುತ್ತುರಿ ।
ಇಹ ಸರಂಗಳು ಸಾರಂಗಿ ಇಂತಿವು ನಾದಗಳು ಎಂದಾ ॥ ೨೭ ॥

.... .... .... .... .... .... .... .... .... ....
ಇಂತು ಬಹುಶಬ್ದಗಳು ಕರ್ಣದಿ ।
ನಿಂತು ಮಾತುಗಳಾಡೆ ಯೋಗಿಗ ।
ದೆಂತು ಎಚ್ಚರವಿರುವುದೈ ಮುಳುಗುವನಂ ನಾದದೊಳು ॥
ಚಿಂತೆ ಮರೆವನು ಬಾಹ್ಯವೃತ್ತಿಯ ।
ಸಂತವಿಸಿ ತೂಗಾಡಿ ಬಹು ಜ– ।
ನ್ಮಾಂತರದ ವಾಸನೆಯ ಕಳೆವನಂ ಸಕಲ ಸಹಿತಾಗಿ ॥ ೩೧ ॥
.... .... .... .... .... .... .... .... .... ....

ತೂಗುತಿರುವುದು ದೇಹ ನಾದದಿ ।
ತೂಗುತಿರುವುದು ಮನವು ಮರೆದೇ ।
ತೂಗುತಿರುವವು ಇಂದ್ರಿಯಂಗಳು ನಾದಮಯವಾಗಿ ॥
ತೂಗುತಿರುವವು ದೃಷ್ಟಿಗಳು ಕಾಲ್- ।
ತೂಗುತಿರುವವು ನಡೆಯಹೋದರೆ ।
ತೂಗುತಿರುವುದು ಅವಯವವು ಲಯಯೋಗಿಗೇ ಎಂದಾ ॥ ೪೬ ॥

ತುಂಬಿಹುದು ಆನಂದ ಸಿಂಧುವು ।
ತುಂಬಿಹುದು ಸರ್ವಾತ್ಮಸುಖವದು ।
ತುಂಬಿಹುದು ತುಳುಕದಲೆ ಪಾರಂಜ್ಯೋತಿ ಪೂರ್ಣದಲಿ ॥
ತುಂಬಿಹುದು ದಿಗ್ದೆಶೆಗೆ ಬ್ರಹ್ಮವು ।
ತುಂಬಿಹುದು ನಾದ ಪ್ರಕಾಶವು ।
ತುಂಬಿಹುದು ಸರ್ವತ್ರದಲಿ ಸಂವಿತ್ತು ಕೇಳೆಂದಾ ॥ ೪೭ ॥

ಜ್ಞಾನಸಿಂಧು, ಅಧ್ಯಾಯ ೧೬

ಈ ಮಹಾನಾದವೇ ಮುಂದೆ ಮಹಾಪ್ರಕಾಶವಾಗುವದು. ಅಲ್ಲದೆ ಇವೇ ಮುಂದೆ ದೂರಶ್ರವಣ, ದೂರದರ್ಶಿಗಳಾಗುವವು.* ನಿಜವಾಗಿ ನೋಡಿದರೆ ಪ್ರಕಾಶವು ಮುಂದಿನ ರಾಜಯೋಗಾಂತರ್ಗತವಾದ "ತಾರಕಯೋಗ"ಕ್ಕೆ ಸಂಬಂಧಿಸಿದ್ದು. ಆದ್ದರಿಂದ ಈ ವಿಷಯವನ್ನು ಅಲ್ಲಿ ಹೇಳುವೆನು.

ಇದೆಲ್ಲಾ ವಿಶ್ವೋತ್ಪತ್ತಿಗೆ ಮೂಲವಾದ ಪ್ರಣವನಾದದ ಮೇಲೆ ಚಿತ್ತವನ್ನು ಏಕಾಗ್ರಗೊಳಿಸಲಿಕ್ಕೆ ಸಮರ್ಥರಾದ ಜ್ಞಾನೀಸಾಧಕರ ಮಾತಾಯಿತು. ಆದರೆ ಅಂಥ ಸ್ಥಿತಿಗೆ ಮುಟ್ಟದ ಸಾಧಕರಿಗೆ ದಾರಿಯೇನು ?

"ಹಠಯೋಗಪ್ರದೀಪಿಕೆ"ಯಲ್ಲಿ—

"ಶ್ರವಣಪುಟ–ನಯನಯುಗಲ- ।
ಘ್ರಾಣ ಮುಖನಾಂ ನಿರೋಧನಂ ಕಾರ್ಯಮ್ ॥
ಶುದ್ಧ ಸುಷುಮ್ನಾಸರಣೌ ।
ಸ್ಫುಟಮಮಲಃ ಶ್ರೂಯತೇ ನಾದಃ ॥ ೪–೬೮ ॥

* ನಾದೇ ಮನೋಲಯಂ ಬ್ರಹ್ಮನ್ ದಹರೇ ಶ್ರವಣಕಾರಣಂ ।
ಬಿಂದೌ ಮನೋಲಯಂ ಕೃತ್ವಾ ದೂರದರ್ಶನಮಾಪ್ನುಯಾತ್ ॥
—ಯೋಗ ಶಿಖೋಪನಿಷತ್ ೫-೭

"ಕರ್ಣೌ ಪಿಧಾಯ ಹಸ್ತಭ್ಯಾಂ
ಯಂ ಶೃಣೋತಿ ಧ್ವನಿಂ ಮುನಿಃ ॥
ತತ್ರ ಚಿತ್ತಂ ಸ್ಥಿರೀ ಕುರ್ಯಾತ್
ಯಾವತ್ ಸ್ಥಿರಪದಂ ವ್ರಜೇತ್ ॥ ೪-೮೨ ॥

"ಎರಡೂ ಕಿವಿ, ಎರಡೂ ಕಣ್ಣು, ಮೂಗಿನ ಹೊರಳೆಗಳು ಇವುಗಳನ್ನೆಲ್ಲ ಮುಚ್ಚಿಕೊಳ್ಳತಕ್ಕದ್ದು. (ಈಗಿನ ಕಾಲದಲ್ಲಿ ಎಲ್ಲರೂ ಮೂಗನ್ನು ಸಡಿಲಾಗಿ ಸುಮ್ಮನೆ ಹಿಡಿದಿರುತ್ತಾರೆ. ಈಗಿನವರಿಗೆ ಇಷ್ಟೇ ಯೋಗ್ಯ.) ಇದರಿಂದ ಶುದ್ಧವಾಗುವ ಸುಷುಮ್ನಾ ಮಾರ್ಗದಲ್ಲಿ ನಾದವು ಸ್ಫುಟವಾಗಿ ಗೋಚರಿಸುತ್ತದೆ.

"ಎರಡೂ ಕೈಗಳಿಂದ ಎರಡೂ ಕಿವಿಗಳನ್ನು ಒತ್ತಿ ಮುಚ್ಚುವದರಿಂದ ಕೇಳಿಸುವ ಧ್ವನಿಯಲ್ಲಿ ಮುನಿಗಳು ಸ್ಥಿರಪದವಿಗೆ ಮುಟ್ಟುವವರೆಗೆ ಚಿತ್ತವನ್ನು ಸ್ಥಿರಗೊಳಿಸ ತಕ್ಕದ್ದು." ಎಂದು ಹೇಳಲಾಗಿದೆ. ಮಂದಾಧಿಕಾರಿಗಳಿಗೆ ಇದೇ ಸರಿಯಾದ ಉಪಾಯ ವೆಂದು ಶ್ರೀ ನಿಜಗುಣಶಿವಯೋಗಿಗಳು ತಮ್ಮ "ಪಾರಮಾರ್ಥ ಪ್ರಕಾಶಿಕೆ"ಯಲ್ಲಿ ಅನೇಕ ಕಡೆಗೆ ಹೇಳಿದ್ದಾರೆ.

"ಜ್ಞಾನಸಿಂಧು"ವಿನೊಳಗಿನ ಇನ್ನೆರಡು ಶ್ಲೋಕಗಳನ್ನು ಉದಾಹರಿಸದೆ ಬಿಡಲಿಕ್ಕೆ ನನ್ನ ಮನಸ್ಸು ಒಪ್ಪಲೊಲ್ಲದು. ಅವು ಲಯಯೋಗದ ವಿಷಯದಲ್ಲಿ ಅಷ್ಟು ಮಹತ್ವದವಾಗಿವೆ—

ಕುಳಿತರೆಯುಂ ಕೂಗುವದು ನಾದವು ।
ಮಲಗಿದರು ಬೊಬ್ಬಿಡುವುದದು ತಾ ।
ಚಲಿಸಿ ಪಾದವನತ್ತಲಿತ್ತಲು ನಡೆಯೆ ಒರಲುವದು ॥
ಒಲಿದು ನಿಲೆ ಧ್ವನಿಗೈವ ಮಾತುಗ- ।
ಳಲಿಯಿರಲು ಬಹುಪದವ ಪಾಡ್ವುದು ।
ತಿಳಿಯೆ ಏಕಾಂತದಲಿರಲು ಶೋಭನವು ಬಹಳೆಂದಾ ॥ ೩೯ ॥

ಕಣ್ಣುಮುಚ್ಚಲಿಕೊಂದೆ ಸಮನದು ।
ಕಣ್ಣು ತೆರೆಯಲಿಕೊಂದೆ ಸಮನೈ ।
ಉಣ್ಣುತಿರ ತಾನೊಂದೆ ಸಮಂ ಉಣ್ಣದಿರೆ ಒಂದೆ ಸಮ ॥
ಹುಣ್ಣಿಮೆಯುಂ ಅಮಾವಾಸೆಯಲಿ ಸಮ ।
ಚಿಣ್ಣ, ತಿಳಿ ದಿವರಾತ್ರೆಯಲಿ ಸಮ ।
ಉನ್ನತದ ಓಂಕಾರ ಸಮದಲಿ ಘೋಷಿಸುವದೆಂದಾ" ॥ ೪೦ ॥

"ಎಲ್ಲರಾ ಕಿವಿಯೊಳಗೆ ನಾದವು ।
ಮೆಲ್ಲಮೆಲ್ಲಗೆ ನುಡಿಯುತಿರುವದು ।
ಸೊಲ್ಲಿಸಲು ನಾದಲ್ಲವದು ಕಿಂಚಿತ್ತು ಶಬ್ದವದು ॥
ಬಲ್ಲವಿಕೆಯಿಂ ನಾಲ್ಕು ಚಕ್ರವ ।
ಮೆಲ್ಲಗೆಯು ಸಾಧಿಸಿಯೆ ಬಿಡಲಿಕೆ !
ಘಲ್ಲಿಪುದು ಓಂಕಾರ ನಿತ್ಯದಿ ಕೂಗುತಿಪುದೆಂದ ॥ ೪೧ ॥

—ಜ್ಞಾನಸಿಂಧು, ಅಧ್ಯಾಯ ೧೬

## ೩. ಹಠಯೋಗ

ಹಠವೆಂದರೆ ಬಲಾತ್ಕಾರ, ಯಾವುದರ ಮೇಲೆ ಬಲಾತ್ಕಾರ ? ಪ್ರಾಣ ವಾಯುವಿನ ಮೇಲೆ, ಅಂದರೆ ಶ್ವಾಸಪ್ರಶ್ವಾಸದ ಮೇಲೆ. ಬಲಾತ್ಕಾರವೆಂದರೆ ಹೇಗೆ ? ಅದರ ಸ್ವಾಭಾವಿಕವಾದ ಗತಿಗೆ ಬದಲಾಗಿ ಬೇರೆ ಬೇರೆ ಗತಿಗಳಿಂದ ಅದನ್ನು ನಡಿಸುವುದು ಹಾಗೂ ತಡೆದು ಹಿಡಿಯುವದು. ಇದರಿಂದ ಏನಾಗುತ್ತದೆ ? ಶ್ವಾಸ ಪ್ರಶ್ವಾಸದಿಂದ ದೇಹದೊಳಗೆ ಪ್ರವೇಶಿಸಿದ ವಾಯುವು ಈಗ ಯಾವ ಯಾವ ಸೂಕ್ಷ್ಮ ನಲಿಕೆಗಳಲ್ಲಿ ಸೇರಿ ಕೆಲಸ ಮಾಡುವದೋ, ಅವುಗಳಿಗಿಂತ ಬೇರೆಯಾದ ಇನ್ನು ಕೆಲವು ಸೂಕ್ಷ್ಮ ನಲಿಕಾ ಮುಖಗಳನ್ನು ತೆರೆದು ಅವುಗಳಲ್ಲಿ ಪ್ರವೇಶಿಸಿ ಈಗಿನಕ್ಕಿಂತ ಹೆಚ್ಚಿನ ಪ್ರಕಾರದ ಕಾರ್ಯವನ್ನು ಮಾಡುತ್ತದೆ. ಆ ಕಾರ್ಯವು ಯಾವುದು ? ಸುಷುಮ್ನಾ ನಾಡಿಯ ಕ್ರಿಯಾರಂಭ ಹಾಗೂ ಸುಪ್ತವಾಗಿರುವ ಕುಂಡಲಿನೀ ಶಕ್ತಿಯನ್ನು ಜಾಗೃತ ಗೊಳಿಸುವುದು.

ಅದು ಹೇಗೆ ? ನೀರಿನ ಪ್ರವಾಹಕ್ಕೆ ಎಲ್ಲ ನಿಟ್ಟಿನಿಂದ ತಡೆಗಟ್ಟುವದರಿಂದ ಅದು ಹೇಗೆ ಎದುರಿಗಿರುವ ಅಡ್ಡಿ-ಆತಂಕಗಳನ್ನು ಕತ್ತರಿಸಿ ಗಿರಿದರಿಗಳಲ್ಲಿ ಕೊರಕಲು ಮಾಡಿ ಕೊಂಡು ಪಾರಾಗಿ ಸಮುದ್ರವನ್ನು ಸೇರುವದೋ ಹಾಗೆ ತಡೆಗಟ್ಟಿದ ಪ್ರಾಣ ವಾಯುವು ಸಪ್ತನಾಡೀ ಮುಖಗಳ ಶ್ಲೇಷ್ಮವನ್ನೆಲ್ಲ ಬೆದರಿಸಿ ಅವುಗಳ ದ್ವಾರಗಳನ್ನು ತೆರೆದು ಆ ದ್ವಾರಮುಖಗಳಲ್ಲಿಯೇ ಹೊರಡುವುದಕ್ಕೆ ದಾರಿಯಿಲ್ಲದ್ದರಿಂದ ಸ್ವಸ್ಥ ವಾಗಿ ಮಲಗಿಕೊಂಡಿದ್ದ ಕುಂಡಲಿನೀ ಶಕ್ತಿಯನ್ನು ಎಚ್ಚರಿಸಿ ಆ ಸೂಕ್ಷ್ಮನಾಡೀ ದ್ವಾರ ಗಳಿಂದ ಮೇಲಕ್ಕೆ ಸಾಗಿರುವಂತೆ ಮಾಡಿ ಅದನ್ನು ದೇಹದೇವಾಲಯದ ಕಳಸದಂತಿರುವ ಬ್ರಹ್ಮರಂಧ್ರ ಪ್ರದೇಶಕ್ಕೆ ತಲುಪಿಸಿ ಅಲ್ಲಿ ಅಪ್ರಕಟ ರೂಪದಿಂದ (ಅವ್ಯಕ್ತ ರೂಪ ದಿಂದ) ಕುಳಿತ ನಿರ್ಗುಣ ಆತ್ಮನೊಂದಿಗೆ ಅದನ್ನು ಕೂಡಿಸುವದು. ಶಿವಜೀವೈಕ್ಯ ವೆಂದರೆ ಇದೇ; ಲಿಂಗಾಂಗ ಸಾಮರಸ್ಯವೆಂದರೂ ಇದೇ ಆಗಿದೆ.

ಈ ಶಿವಜೀವೈಕ್ಯವು ಮುಂದಿನ ರಾಜಯೋಗಾಂತರ್ಗತವಾದ "ಅಮನಸ್ಕ ಯೋಗ"ದ ವಿಷಯವಾಗಿದೆ. ಆದ್ದರಿಂದ ಆ ಬಗೆಗೆ ಅಲ್ಲಿ ವಿಚಾರ ಮಾಡುವಾ.

ಇದೀಗ ಪ್ರಾಣಾಯಾಮದಿಂದ ಸುಷುಮ್ನಾ ನಾಡಿಯ ಜಾಗೃತಿ ಹಾಗೂ ಆ ಮೂಲ ಕುಂಡಲಿನೀ ಶಕ್ತಿಯ ಊರ್ಧ್ವಗಮನ ಈ ಎರಡು ವಿಷಯಗಳನ್ನಿಲ್ಲಿ ಚರ್ಚಿಸುವಾ.

೭೨೦೦೦ ನಾಡಿಗಳಲ್ಲಿ ನೂರಾ ಒಂದೇ ಮುಖ್ಯ. ಅವುಗಳಲ್ಲಿಯೂ ಹತ್ತೇ ಮುಖ್ಯ. ಅವುಗಳಲ್ಲಿಯೂ ಇಡಾ, ಪಿಂಗಳ, ಸುಷುಮ್ನಾ ಎಂಬ ಮೂರೇ ನಾಡಿಗಳು ಅತಿಮುಖ್ಯವೆಂದು ಯೋಗವಿಷಯಕವಾದ ಅನೇಕ ಶಾಸ್ತ್ರಗಳಲ್ಲಿ ಹೇಳಿದೆ.

ಬಲಮೂಗಿನ ಹೊರಳೆಯಲ್ಲಿ ಪಿಂಗಳ ನಾಡಿಯೂ, ಎಡಹೊರಳೆಯಲ್ಲಿ ಇಡಾ ನಾಡಿಯೂ, ಇವೆರಡರ ನಡುವೆ ಬೆನ್ನಹುರಿಗುಂಟ ಸುಷುಮ್ನಾ ನಾಡಿಯೂ ಇವೆಯೆಂದು ಯೋಗಶಾಸ್ತ್ರಕಾರರು ಹೇಳುತ್ತಾರೆ. ಶ್ವಾಸೋಚ್ಛ್ವಾಸವು ಈಗ ಸಾಮಾನ್ಯವಾಗಿ ಕೆಲವು ಗಳಿಗೆ ಬಲಹೊರಳೆಯಿಂದಲೂ, ಕೆಲವು ಗಳಿಗೆ ಎಡಹೊರಳೆಯಿಂದಲೂ, ಕೆಲವೊಂದು ವೇಳೆ ಎರಡೂ ಹೊರಳೆಗಳಿಂದಲೂ ಕ್ರಮವಾಗಿ ಸಂಚರಿಸುತ್ತಿದ್ದು ಪ್ರತಿದಿವಸದಲ್ಲಿ ಈ ಮೂರು ಕ್ರಮಗಳ ಚಕ್ರವು ಹಲವು ಬಾರಿ ನಡೆಯುತ್ತದೆ. ಬಲಕಿನದಕ್ಕೆ ಸೂರ್ಯನಾಡಿಯೆಂದೂ, ಎಡಕಿನದಕ್ಕೆ ಚಂದ್ರನಾಡಿಯೆಂದೂ, ನಡುವಿನದಕ್ಕೆ ಸುಷುಮ್ನಾ ನಾಡಿಯೆಂದೂ "ಶಿವಸ್ವರೋದಯಶಾಸ್ತ್ರ"ವು ಹೇಳುತ್ತದೆ. ಪ್ರಾಣಾಯಾಮದಿಂದ ಈ ಎರಡೂ ನಾಡಿಗಳು ಸಮಸ್ಥಿತಿಗೆ ಬರುತ್ತವೆ. ಇದೇ ಸುಷುಮ್ನಾ ನಾಡಿಯ ಜಾಗೃತಿ. ಆಗ ಮನುಷ್ಯನಲ್ಲಿ ಆಧ್ಯಾತ್ಮಿಕ ಭಾವನೆಯು ಸ್ವಾಭಾವಿಕವಾಗಿಬಿಡುತ್ತದೆ.

ಇನ್ನು ಪ್ರಾಣಾಯಾಮದಲ್ಲಿ ದೀರ್ಘ ಉಚ್ಛ್ವಾಸ ನಿಶ್ವಾಸ ಹಾಗೂ ಮೆಲ್ಲ ಮೆಲ್ಲನೆ ವಾಯುಸ್ತಂಭನ ಅಥವಾ ಕುಂಭಕ ಎಂದು ಎರಡು ಭಾಗಗಳುಂಟೆಂಬುದನ್ನು ಎಲ್ಲರೂ ಬಲ್ಲರು. ದೀರ್ಘಶ್ವಾಸೋಚ್ಛ್ವಾಸ ನಿಶ್ವಾಸದಿಂದ (ಡೀಪ ಬ್ರೀದಿಂಗ್) ದೇಹಾರೋಗ್ಯವು ಹೆಚ್ಚುವದೆಂಬುದನ್ನು ಈಗ ಎಲ್ಲರೂ ಬಲ್ಲರು. ಆದರೆ ಕುಂಭಕ ಅಥವಾ ವಾಯುಸ್ತಂಭನವೆಂಬುದನ್ನು ಬಲ್ಲವರ ಸಲಹೆಯಿಲ್ಲದೆ ಮಾಡುವುದು ಅಪಾಯಕರವೆಂದು ತೋರುತ್ತದೆ. ಏಕೆಂದರೆ ಈಗಿನವರ ಶರೀರಗಳಲ್ಲಿ ಬಲ ಕಡಿಮೆ. ಆದ್ದರಿಂದ ಒಳಗೆ ಹತ್ತಿಕ್ಕಲ್ಪಟ್ಟ ವಾಯುವು ದೇಹದೊಳಗಿನ ಸೂಕ್ಷ್ಮ ಪರೆಗಳನ್ನು ಹರಿದು ಆರೋಗ್ಯವನ್ನು ಕೆಡಿಸುವ ಸಂಭವವಿದೆಯೆಂದು, ಇಷ್ಟೇ ಏಕೆ ಪ್ರಾಣಾಪಾಯವನ್ನು ಸಹ ಮಾಡಬಹುದೆಂದು ಪುರಾತನ ಶಾಸ್ತ್ರಗಳಲ್ಲಿ ಸಹ ಎಚ್ಚರಿಕೆ ಕೊಡಲಾಗಿದೆ.

ಪ್ರಾಣಾಯಾಮ ವಿಧಿಯೆಂದರೆ, ಒಂದು ಹೊರಳೆಯಿಂದ ಸಾವಕಾಶವಾಗಿ* ವಾಯುವನ್ನೆಳೆದು ಹೃದಯದಲ್ಲಿ ಆ ವಾಯುವನ್ನು ಅಷ್ಟೇ ವೇಳೆ ನಿಲ್ಲಿಸಿ, ಪುನಃ

---

* ಯುಕ್ತಂ ಯುಕ್ತಂ ತ್ಯಜೇದ್ವಾಯುಂ ಯುಕ್ತಂ ಯುಕ್ತಂ ಪ್ರಪೂರಯೇತ್ ।
ಯುಕ್ತಂ ಯುಕ್ತಂ ಪ್ರಬಧ್ನೀಯಾತ್ ಏವಂ ಸಿದ್ಧಿಮವಾಪ್ನುಯಾತ್ ॥

—ಯೋಗಚೂಡಾಮಣಿ ಉಪನಿಷತ್, ಶ್ಲೋಕ-೧೧೯

ಇನ್ನೊಂದು ಹೊರಳೆಯಿಂದ ಹಾಗೆಯೇ ಸಾವಕಾಶವಾಗಿ ವಾಯುವನ್ನು ಹೊರಗೆ ಬಿಡುವುದೆಂದು ಸಾಮಾನ್ಯವಾಗಿ ಹೇಳಲಾಗಿದೆ. ಹೀಗೆ ವಾಯುವನ್ನು ಒಳಗೆ ಎಳೆದು ಕೊಳ್ಳುವುದೇ ಪೂರಕ, ಒಳಗೆ ತುಸು ಹೊತ್ತು ನಿಲ್ಲಿಸುವುದೇ ಕುಂಭಕ ಹಾಗೂ ವಾಯುವನ್ನು ತಿರುಗಿ ಹೊರಗೆ ಬಿಡುವುದೇ ರೇಚಕವೆಂದು ಪುರಾತನ ಯೋಗವಿಷ ಯಕ ಗ್ರಂಥಗಳಲ್ಲಿ ಹೇಳಲಾಗಿರುತ್ತದೆ.

ಇವುಗಳಲ್ಲಿ ಬಲಮೂಗಿನಿಂದ ವಾಯುವನ್ನು ತೆಗೆದುಕೊಂಡು, ಹೃದಯದಲ್ಲಿ ತುಸು ತಡೆದು, ಎಡಹೊರಳೆಯಿಂದ ಬಿಡುವುದು ಒಂದು ವಿಧ. ಎಡಮೂಗಿನಿಂದ ತೆಗೆದುಕೊಂಡು, ಹೃದಯದಲ್ಲಿ ಸ್ವಲ್ಪ ನಿಲ್ಲಿಸಿ, ಬಲಮೂಗಿನಿಂದ ಬಿಡುವುದು ಇನ್ನೊಂದು ವಿಧ. ಬಲದಿಂದ ತೆಗೆದುಕೊಂಡು ಸ್ವಲ್ಪ ನಿಲ್ಲಿಸಿ, ಎಡದಿಂದ ಬಿಟ್ಟು, ತಿರುಗಿ ಎಡದಿಂದ ತೆಗೆದುಕೊಂಡು ತುಸು ತಡೆದು, ಬಲದಿಂದ ಬಿಡುವುದು, ಪುನಃ ಪುನಃ ಬಲದಿಂದ ಎಡಕ್ಕೆ ಎಡದಿಂದ ಬಲಕ್ಕೆ ಹೀಗೆ ಮಾಡುವುದು ಬೇರೊಂದು ವಿಧ. ಬಾಯಿಯಿಂದಲೇ ಶ್ವಾಸೋಚ್ಛ್ವಾಸವನ್ನು ತೆಗೆದುಕೊಂಡು, ಹೃದಯದಲ್ಲಿ ಸ್ವಲ್ಪ ನಿಲ್ಲಿಸಿ, ಮೂಗಿನಿಂದ ಬಿಡುವುದು ಮತ್ತೊಂದು ವಿಧ. ಎರಡೂ ಮೂಗುಗಳಿಂದ ವಾಯುವನ್ನು ಒಳಗೆ ಎಳೆದುಕೊಂಡು ಹೃದಯದಲ್ಲಿ ತುಸುಹೊತ್ತು ನಿಲ್ಲಿಸಿ ಪುನಃ ಎರಡೂ ಹೊರಳೆಗಳಿಂದ ಬಿಡುವುದು ಒಂದು ವಿಧ. ಬಹುರಭಸವಾಗಿ ವಾಯು ಗಳನ್ನೆಳೆದುಕೊಳ್ಳುತ್ತಲೂ ಬಿಡುತ್ತಲೂ ಕಮ್ಮಾರನ ತಿದಿಯಂತೆ ಸಪ್ಪಳವನ್ನುಂಟು ಮಾಡುತ್ತ ಹೊಟ್ಟೆಯನ್ನು ಒಳಹೊರಗೆ ಎಳೆದುಬಿಟ್ಟು ಮಾಡುತ್ತ ಮಾಡುವ ಪ್ರಾಣಾಯಾಮ ಬೇರೊಂದು ವಿಧ. ಹೀಗೆ ಬೇರೆ ಬೇರೆ ಕ್ರಮಗಳ ಮೂಲಕ ಪ್ರಾಣಾಯಾಮವು ಅನೇಕ ಪ್ರಕಾರವಾಗಿದೆಯೆಂದು ಯೋಗ ಗ್ರಂಥಗಳಲ್ಲಿ ಹೇಳಿದೆ. ಆದರೆ ಇವೆಲ್ಲವುಗಳಲ್ಲಿ ಮೊಟ್ಟಮೊದಲಿನದಾದ, ಎಂದರೆ ಬಲಮೂಗಿನಿಂದ ಎಳೆದು ಕೊಂಡು, ಎಡಮೂಗಿನಿಂದ ಬಿಡುವ "ಸೂರ್ಯಭೇದನ"ವೆಂಬ ಪದ್ಧತಿಯೇ ಒಳ್ಳೆಯದೆಂದು ಕೆಲವರ ಅಭಿಪ್ರಾಯ. ಅದರಂತೆ ಸುಮ್ಮನೆ ಎರಡು ಹೊರಳೆ ಗಳಿಂದ ವಾಯುವನ್ನೆಳೆದುಕೊಳ್ಳುತ್ತ, ಮತ್ತೆ ಎರಡು ಹೊರಳೆಗಳಿಂದಲೇ ಬಿಡುತ್ತ, ಹೀಗೆ ನಾಲ್ಕೆಂಟುಸಾರೆ, ಹತ್ತೆಂಟುಸಾರೆ ಮಾಡಿದ ಮೇಲೆ ಒಮ್ಮೆ ಹೃದಯದಲ್ಲಿ ಕೆಲಹೊತ್ತು ನಿಲ್ಲಿಸುತ್ತ ಹೀಗೆ ಕೆಲವೊಂದು ಸಲ ಆವರ್ತನೆ ಮಾಡುತ್ತಿದ್ದರೆ ಸಾಕೆಂದು ಇನ್ನು ಕೆಲವು ಅನುಭವಿಕರು ಹೇಳುತ್ತಾರೆ. ಒಟ್ಟಾರೆ ಇದೆಲ್ಲಾ ಬಲ್ಲವರ ಸಲಹೆ ಯಿಂದ ಮಾಡಬೇಕೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಹೀಗೆ ವಾಯುವನ್ನು ಹೊಟ್ಟೆಯಲ್ಲಿ ತುಸು ಹೊತ್ತು ನಿಲ್ಲಿಸುವದರಿಂದ ಅದು ನಮ್ಮೊಳಗಿನ ಸುಪ್ತಶಕ್ತಿಗಳನ್ನು ಎಬ್ಬಿಸುವದೆಂಬುದು ಸಹಜವಾಗಿದೆ. ಇದೇ ಕುಂಡ ಲಿನೀಶಕ್ತಿಯ ಜಾಗರಣ. ಇದರಿಂದಲೇ ಷಟ್‌ಚಕ್ರ ಭೇದನವಾಗುತ್ತದೆ. ಇದೇ ಮುಖ್ಯವಾದ ಕಾರ್ಯ.

ತಡೆಹಿಡಿದ ಒಳಗಿನ ವಾಯುವಿಗೆ ಇನ್ನೂ ಕೆಲವು ಅಡ್ಡಗಲ್ಲುಗಳನ್ನು ಒಡ್ಡುವ ಬಗೆಗೆ ಶಾಸ್ತ್ರಗಳಲ್ಲಿ ಬಹಳ ಪ್ರಾಮುಖ್ಯತೆ ಕೊಟ್ಟಿದೆ. ಇದು ಮೂರು ಪ್ರಕಾರವಾಗಿದೆ. ಆಸನದ ತಳಭಾಗದಲ್ಲಿರುವ ಆಧಾರಚಕ್ರವನ್ನು ಆಕುಂಚನಗೊಳಿಸಿ ಕೆಳಗಿನ ಮಾರ್ಗವನ್ನು ಬಂಧಿಸಲ್ಪಡುವುದು, ಮೇಲಿನ ಕೊರಳನ್ನು ತುಂಬ ಬಾಗಿಸಿ ಗದ್ದವನ್ನು ಎದೆಗೆ ಹಚ್ಚಿ ಮೇಲಿನ ಮಾರ್ಗವನ್ನು ಬಂಧಿಸುವುದು. ಹೊಟ್ಟೆಯೊಳಗಿನ ವಾಯುವನ್ನೆಲ್ಲ ಹೊರಗೆ ಹಾಕಿ ಹೊಟ್ಟೆಯನ್ನು ಒಳಗೆ ಬೆನ್ನಿನವರೆಗೆ ಸೇದಿಕೊಂಡು ನಡುವಿನ ಮಾರ್ಗವನ್ನು ಬಂಧಿಸುವುದು. ಇವುಗಳಿಗೆ ಕ್ರಮವಾಗಿ ಮೂಲಬಂಧ, ಜಾಲಂಧರಬಂಧ, ಉಡ್ಡ್ಯಾನಬಂಧಗಳೆಂದು ಯೋಗಶಾಸ್ತ್ರದ ಗ್ರಂಥಗಳಲ್ಲಿ ಹೇಳಲಾಗಿದೆ. ಈ ಬಂಧತ್ರಯದಿಂದ "ಕೇವಲ ಕುಂಭಕ"ವು ಸಾಧಿಸುವದೆಂದು ಶ್ರೀ ನಿಜಗುಣಶಿವಯೋಗಿಗಳು "ಪಾರಮಾರ್ಥ ಪ್ರಕಾಶಿಕೆ"ಯಲ್ಲಿ ಹೇಳಿದ್ದಾರೆ. ಆದರೆ ಈ ಕೇವಲ ಕುಂಭಕವೆಂಬುದು ಮುಂದಿನ ರಾಜಯೋಗಾಂತರ್ಗತವಾದ "ಅಮನಸ್ಕ ಯೋಗ"ಕ್ಕೆ ಸಂಬಂಧಿಸಿದ್ದಾಗಿದೆ.*

ಇನ್ನೇನು ? ಆಸನ, ಷಟ್ಕರ್ಮ (ಧೌತಿ, ಬಸ್ತಿ ಮೊದಲಾದವುಗಳು) ಇವುಗಳ ವಿಷಯದಲ್ಲಿ ಲೋಣಾವಳದ "ಕೈವಲ್ಯಧಾಮಾಶ್ರಮ"ದ ಗುರುಗಳಾದ ಶ್ರೀ ಕುವಲಯಾನಂದರಿಂದ ಅನೇಕ ವರುಷಗಳಿಂದ ದೇಶದ ತುಂಬೆಲ್ಲ ಜ್ಞಾನವು ಹಬ್ಬಿದೆಯೆಂಬುದನ್ನು ಸರ್ವರೂ ಬಲ್ಲರು. ಇವೆರಡೂ ವಿಷಯಗಳು ಆರೋಗ್ಯ ಹಾಗೂ ದೇಹದೋಷಗಳ ಶುದ್ಧೀಕರಣಕ್ಕೆ ಅತ್ಯಂತ ಅವಶ್ಯಕವಾಗಿದೆಯೆಂದು ಈಗ ಎಲ್ಲರೂ ಅರಿತಿದ್ದಾರೆ. ಆಸನಗಳಲ್ಲಿ ಬ್ರಹ್ಮಚಾರಿಗಳಿಗೆ ಸಿದ್ಧಾಸನ, ಸಂಸಾರಿಗಳಿಗೆ ಪದ್ಮಾಸನ ಇವೆರಡೇ ಸಾಕೆಂದು ಶ್ರೀ ನಿಜಗುಣಶಿವಯೋಗಿಗಳು "ಪಾರಮಾರ್ಥ ಪ್ರಕಾಶಿಕೆ"ಯಲ್ಲಿ ಹೇಳಿದ್ದಾರೆ. "ಜ್ಞಾನಸಿಂಧು"ವಿನಲ್ಲಿ ಸಹ ಸಿದ್ಧಾಸನ, ಪದ್ಮಾಸನ ಸ್ವಸ್ತಿಕಾಸನ ಈ ಮೂರೇ ಸಾತ್ವಿಕ ಆಸನಗಳೆಂದು ಹೇಳಲಾಗಿದೆ. ಇದರಂತೆ ಧೌತಿ, ಬಸ್ತಿ ಮೊದಲಾದ ಷಟ್‌ಕರ್ಮಗಳಲ್ಲಿ ಬಸ್ತಿ ಅಥವಾ ಎನಿಮಾದ ಹೊರತಾಗಿ ಉಳಿದವುಗಳನ್ನು ಎಲ್ಲರೂ ಮಾಡಲೇಬೇಕೆಂದೇನೂ ತೋರುವದಿಲ್ಲ. ಬಸ್ತಿಯನ್ನು (ಎನಿಮಾ) ಸಹ ಅವಶ್ಯವಿದ್ದವರು ಅವಶ್ಯವಿದ್ದಾಗ ಮಾಡಬಹುದೆಂಬುದು ಸಹಜ.

ಇದೇನೇ ಇದ್ದರೂ ಆಸನ, ಪ್ರಾಣಾಯಾಮ ಇವೇ ಹಠಯೋಗದ ಮುಖ್ಯ ಅಂಗಗಳು. ಬಂಧುಗಳು ಅಮನಸ್ಕಯೋಗಕ್ಕೂ, ಮುದ್ರೆಗಳು ತಾರಕಯೋಗಕ್ಕೂ ಸಂಬಂಧಿಸಿದವುಗಳಾಗಿರುವವು. ಮುದ್ರೆಗಳ ವಿಷಯವು ಮುಂದೆ ಹೇಳಲ್ಪಡುವದು.

---

* ಒಂದು ಸಲ ಶ್ವಾಸವನ್ನು ಒಳಗೆ ಎಳೆದುಕೊಂಡ ಮಾತ್ರಕ್ಕೆ ಒಮ್ಮೆಲೆ ವಾಯುವನ್ನು ಒಳಗೆ ತಡೆದುಹಿಡಿದು ಬಿಡುವದೇ "ಕೇವಲ ಕುಂಭಕ"ವು. ಇದು ಇಂದಿನ ಸಾಮಾನ್ಯ ಸಾಧಕರಿಗೆ ಸಾಧ್ಯವೆಂದು ನನಗೆ ತೋರುವದಿಲ್ಲ. ಏಕೆಂದರೆ ಇಂದಿನವರ ಶರೀರಗಳು ಹಿಂದಿನವರಂತೆ ಬಹು ದೃಢತರವಾದವುಗಳಲ್ಲ.

## ೪. ರಾಜಯೋಗ

ಪಾತಂಜಲ ರಾಜಯೋಗಕ್ಕೂ ಈ "ಅಮನಸ್ಕಯೋಗ"ಕ್ಕೂ ತೋರಿಕೆಯಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಅಷ್ಟಾಂಗಯೋಗವೇ ಪಾತಂಜಲ ರಾಜಯೋಗವಾವಾಗಿದೆ. ಆದರೆ ಹಠಯೋಗಾಂತರ್ಗತವಾದ ಈ ರಾಜಯೋಗವು ಮುಖ್ಯವಾಗಿ ಸಾಂಖ್ಯ, ತಾರಕ, ಅಮನಸ್ಕವೆಂಬ ಮೂರು ಅಂಗಗಳಿಂದ ಕೂಡಿದಂತಾಗಿದೆ. ಈ ಮೂರಂಗ ಗಳಿಗೂ ಸ್ವತಂತ್ರವಾಗಿ ಸಾಂಖ್ಯಯೋಗ, ತಾರಕಯೋಗ, ಅಮನಸ್ಕ ಯೋಗವೆಂಬ ಹೆಸರುಗಳನ್ನು ಶಾಸ್ತ್ರಗಳಲ್ಲಿ ಹೇಳಲಾಗಿದೆ.

ಸಾಂಖ್ಯಯೋಗವೆಂದರೆ ೨೫ ತತ್ತ್ವಗಳ ಜ್ಞಾನ, ತಾರಕಯೋಗವೆಂದರೆ ಭ್ರೂಮಧ್ಯ, ಹೃದಯ, ಬ್ರಹ್ಮರಂಧ್ರ ಮೊದಲಾದ ವಿಶಿಷ್ಟ ಸ್ಥಾನಗಳಲ್ಲಿ ಚಿತ್ತೈಕಾಗ್ರತೆಯನ್ನು ಸಾಧಿಸಿ ಪ್ರಕಾಶಾದಿಗಳ ದರ್ಶನ ಮಾಡಿಕೊಳ್ಳುವುದು. ಅಮನಸ್ಕಯೋಗವೆಂದರೆ ಕೇವಲ ತದಾಕಾರ ಸ್ಥಿತಿಯಲ್ಲಿ ಅಂತರ್ಬಾಹ್ಯಗಳನ್ನು ಮರೆತು ಬ್ರಹ್ಮಾನಂದದಲ್ಲಿರುವುದು, ಆತ್ಮಾನಂದದಲ್ಲಿರುವುದು. ಉನ್ಮನೀ ಅವಸ್ಥೆ ಯೆಂಬ ಹೆಸರು ಸಹ ಇದಕ್ಕೇ ಇರುತ್ತದೆ. ಈ ಮೂರೂ ಯೋಗಗಳ ವಿಷಯದಲ್ಲಿ ಸಂಕ್ಷೇಪವಾಗಿ ಇನ್ನು ವಿವೇಚಿಸುವಾ.

**ಸಾಂಖ್ಯಯೋಗ** : ತತ್ತ್ವಜ್ಞಾನವಿಲ್ಲದೆ ಆತ್ಮಧ್ಯಾನ ಅಥವಾ ಆತ್ಮೈಕ್ಯವನ್ನು ಸಾಧಿಸುವುದು ಅಶಕ್ಯವಾಗಿದೆ. ಆದ್ದರಿಂದ ಮುಂದಿನ ತಾರಕಯೋಗ (ಧ್ಯಾನಯೋಗ) ಹಾಗೂ ಅಮನಸ್ಕಯೋಗ (ಆತ್ಮಸಾಮರಸ್ಯಯೋಗ) ಇವುಗಳಿಗೆ ಮೊದಲಿಗೆ ತತ್ತ್ವಜ್ಞಾನದಾಯಕವಾದ ಸಾಂಖ್ಯಯೋಗವು ಅತ್ಯಾವಶ್ಯಕವಾಗಿದೆ.

ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚಭೂತಗಳು, ಪಂಚವಿಷಯಗಳು, ಚಿತ್ತ ಮನ ಬುದ್ಧಿ ಅಹಂಕಾರಾದಿ ನಾಲ್ಕು ಅಂತಃಕರಣಗಳು ಇವೆಲ್ಲವುಗಳು ಪಂಚಭೂತಗಳವೇ ಆದ ಸೂಕ್ಷ್ಮ ಅಂಶಗಳು. ಆತ್ಮನು ಪಂಚಭೂತಾ ತ್ಮಕನಲ್ಲ. ಆತನು ಇವೆಲ್ಲವುಗಳಿಗಿಂತ ಮೇಲೆ ಸಾಕ್ಷೀರೂಪನಾಗಿ ಇದ್ದಾನೆ. ಆತನಿಗೆ ಇವುಗಳ ಸಂಪರ್ಕವಿಲ್ಲ. ಇವುಗಳಿಂದ ಆತನು ಅತೀತನಾಗಿದ್ದಾನೆ. ಅವೆಲ್ಲವು ಗಳ ಮೇಲೆ ಪ್ರಭುವಾಗಿ ಅಧ್ಯಕ್ಷನಾಗಿ ಇದ್ದಾನೆ. ಇವುಗಳ ದಾಸನು ಆತನಲ್ಲ. ಇವುಗಳಿಂದ ಆತನು ಅಲಿಪ್ತನು ಎಂಬ ಜ್ಞಾನವಾಗದೆ ಕೆಳಗಿನ ಇಪ್ಪತ್ನಾಲ್ಕು ತತ್ತ್ವಗಳನ್ನು ಮರೆತು ಕೇವಲ ಆತ್ಮನೊಬ್ಬನಲ್ಲಿಯೇ ಚಿತ್ತವನ್ನಿಟ್ಟು ಧ್ಯಾನಗೈಯುವ ದಕ್ಕೂ ಮತ್ತು ಆ ಆತ್ಮನ ಹೊರತಾಗಿ ಉಳಿದದ್ದನ್ನೆಲ್ಲ ಮರೆತು ಕೇವಲ ಆತ್ಮನೊಬ್ಬನಲ್ಲಿಯೇ ತದಾಕಾರನಾಗಿ ಬೆಳೆಯುವದಕ್ಕೂ ಶಕ್ಯವಾಗುವದಿಲ್ಲ. ಇದರ ಸಲುವಾಗಿ ಈ ಪಂಚೀಕರಣ ತತ್ತ್ವಜ್ಞಾನ ಅಥವಾ ೨೫ ತತ್ತ್ವಗಳ ಜ್ಞಾನವನ್ನು ನಾವು ಮಾಡಿಕೊಳ್ಳುವುದು ಅತ್ಯಾವಶ್ಯಕವಾಗಿದೆ.

ಈ ವಿಷಯುವು ಬಹಳೇ ಜಟಿಲವಾಗಿದ್ದರೂ, ಶ್ರೀ ನಿಜಗುಣಶಿವಯೋಗಿಗಳು ತಮ್ಮ "ಪಾರಮಾರ್ಥಿಕ ಪ್ರಕಾಶಿಕೆ"ಯಲ್ಲಿ ಈ ವಿಷಯುವನ್ನು ಎಷ್ಟು ಹೃದಯಂಗಮ ವಾಗಿ ವರ್ಣಿಸಿರುವರೆಂದರೆ, ಅದನ್ನು ನೋಡಿ ಮನಸ್ಸು ನಿಬ್ಬೆರಗಾಗುತ್ತದೆ. ಎಂಥ ಜಟಿಲ ವಿಷಯುವನ್ನು ಎಷ್ಟು ಸರಸವಾಗಿ ವರ್ಣಿಸಿರುವರಲ್ಲಾ !!! ಎಂದು ಹೃದಯ ದಲ್ಲಿ ಉದ್ಗಾರ ಹೊರಡುವದು !!! ಸ್ವತಃ ದಿವ್ಯಾನುಭವ ಪಡೆದವರ ರೀತಿಯೇ ಇದು. ಇಲ್ಲದಿದ್ದರೆ ಹೀಗೆಲ್ಲ ಬರೆಯುುವದು ಸಾಧ್ಯವೇ ? ಎಂದು ಹೃದಯಂದಲ್ಲಿ ಆನಂದದ ಊರ್ಮಿಯು ಹೊರಹೊಮ್ಮುವದು !!! ಸ್ಥಳಾಭಾವದ ಮೂಲಕ ಅದನ್ನಿಲ್ಲಿ ಕೊಡಲಿಕ್ಕಾಗಲಿಲ್ಲ. ವಾಚಕರು ನನ್ನನ್ನು ಕ್ಷಮಿಸಬೇಕಾಗಿ ಬಿನ್ನಹ. ಮೂಲದಲ್ಲೇ ಅವರು ನೋಡಿ ತಣಿಯುುವರೆಂದು ನಂಬಿರುವೆ.

**ತಾರಕಯೋಗ :** ತಾರೆ, ತಾರಕೆ, ತಾರಕ ಎಂದರೆ "ಚಿಕ್ಕೆ" ಎಂದು ಎಲ್ಲರಿಗೂ ಗೊತ್ತಿದ್ದ ಮಾತು. "ನಯನತಾರೆ" ಕಣ್ಣುಗೊಂಬೆ ಎಂಬ ಮಾತೂ ಸರ್ವವಿದಿತ. ಕಣ್ಣುಗೊಂಬೆಗಳನ್ನು ಅಂದರೆ ದೃಷ್ಟಿಯನ್ನು ಹೃದಯಾದಿ ವಿಶಿಷ್ಟ ಸ್ಥಾನಗಳಲ್ಲಿ ಸ್ಥಿರಗೊಳಿಸುವುದೇ ತಾರಕಯೋಗವೆಂದು ಸರ್ವಸಾಮಾನ್ಯವಾಗಿ ಹೇಳಬಹುದು.

ಹಿಂದೆ "ಲಯಯೋಗ"ದಲ್ಲಿ ಪರಾವಾಣಿಯ ಮೂಲಸ್ಥಾನವಾದ ನಾಭಿಕಮಲ ದಲ್ಲಿ ಲಕ್ಷ್ಯವನ್ನಿಡುವದರಿಂದ ಪರನಾದ ಹೊರಹೊಮ್ಮುವದೆಂದು ಹೇಳಲಾಗಿದೆ ಯಷ್ಟೇ ? ಓಂಕಾರವು ಪರನಾದ, ಪ್ರಣವನಾದವಾಗಿರುವಂತೆ, ಪರಂಜ್ಯೋತಿ, ಪ್ರಣವಜ್ಯೋತಿ ಸ್ವರೂಪವೂ ಆಗಿದೆಯೆಂಬುದು ಶಾಸ್ತ್ರಸಿದ್ಧಾಂತ. ಈ ಮಾತನ್ನು ಅರಿಯದವರಿಲ್ಲ. ಪರಂಜ್ಯೋತಿ ಪ್ರಣವಜ್ಯೋತಿಯ ಸ್ಥಾನವು ಭ್ರೂಮಧ್ಯ ಚಕ್ರವಾಗಿದೆ. ಅದಕ್ಕೆ ಹೊಂದಿ ಇರುವ ಕಣ್ಣುಗಳ ಕಾರ್ಯವೇ ಇದಕ್ಕೆ ಸಾಕ್ಷಿ. ಈ ಭ್ರೂಮಧ್ಯ ದೃಷ್ಟಿಗೇ ತೃತೀಯ ನೇತ್ರವೆಂದು ಸಹ ಅನೇಕ ಕಡೆಗಳಲ್ಲಿ ಹೇಳಿದೆ. ಈ ಭ್ರೂಮಧ್ಯ ಚಕ್ರದಲ್ಲಿ ದೃಷ್ಟಿಯನ್ನು ಸ್ಥಿರಗೊಳಿಸಿ ಧ್ಯಾನಸ್ಥರಾಗಿ ಇರುವುದಕ್ಕೇ "ಶಾಂಭವೀ ಮುದ್ರೆ"ಯೆಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ.

ದೃಷ್ಟಿಯನ್ನು ಸ್ಥಿರಗೊಳಿಸುವ ಸ್ಥಾನಗಳ ಭೇದದಿಂದಲೇ ಮುದ್ರೆಗಳ ಹೆಸರು ಗಳು ಬೇರೆ ಬೇರೆ ಆಗಿವೆ. ಖೇಚರಿ, ಭೂಚರಿ, ಸಾಚರಿ, ಷಣ್ಮುಖಿ, ಶಾಂಭವಿ ಎಂದು ಮುದ್ರೆಗಳು ಅನೇಕ ಪ್ರಕಾರದವುಗಳಾಗಿರುತ್ತವೆ. ಮಸ್ತಕದ ದೃಷ್ಟಿ, ನಾಸಿಕಾಗ್ರದೃಷ್ಟಿ, ಬಹಿರ್ಗತ ಉಚ್ಛ್ವಾಸದ ಮೇಲೆ ದೃಷ್ಟಿ, ಕಣ್ಣು ಕಿವಿ ಮೂಗುಗಳ ಬಂಧನದಿಂದ ನೇತ್ರಗಳ ಒಳಗಿನ ಆಕಾಶದಲ್ಲಿ ದೃಷ್ಟಿ, ಭ್ರೂಮಧ್ಯ ದೃಷ್ಟಿ ಮೊದ ಲಾದವುಗಳಿಗೇ ಬಹುಶಃ ಈ ಎಲ್ಲ ಹೆಸರುಗಳಿವೆಯೆಂದು ಹೇಳಬಹುದು. ಈ ವಿಷಯುದಲ್ಲಿ ಅನೇಕರ ವಿವರಣೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿವೆ. ಗೋರಖಪುರದ ಹಿಂದೀ "ಕಲ್ಯಾಣ" ಮಾಸಪತ್ರಿಕೆಯ ಸುಪ್ರಖ್ಯಾತವಾದ "ಯೋಗಾಂಕ"ದ ೪೪೯ನೆಯ ಪುಟದಲ್ಲಿ ಒಬ್ಬ ಮಹಾನುಭಾವರು, ಅಗೋಚರಿ, ಭೂಚರಿ, ಚಾಚರಿ,

ಶಾಂಭವಿಯೆಂದುಃ ನಾಲ್ಕು ಮುದ್ರೆಗಳನ್ನು ವಿವರಣೆ ಸಹಿತವಾಗಿ ವರ್ಣಿಸಿದ್ದಾರೆ. ಅವರ ಅಭಿಪ್ರಾಯದಂತೆ ಅಗೋಚರಿಯೇ ನಾಸಿಕಾಗ್ರ ದೃಷ್ಟಿ; ಭೂಚರಿಯು ಮೂಗಿನ ತುದಿಯಿಂದ ನಾಲ್ಕಂಗುಲ ದೂರದಲ್ಲಿರುವ ಆಕಾಶದ ಮೇಲೆ ಇಡುವ ದೃಷ್ಟಿ; ಚಾಚರಿಯೇ ಭ್ರೂಮಧ್ಯ ದೃಷ್ಟಿಯು, ಇದಕ್ಕೇ ಖೇಚರಿ ಮುದ್ರೆಯೆಂಬುದೂ ಅವರ ಮತ, ಶಾಂಭವೀ ಮುದ್ರೆಯಲ್ಲಿಯೂ ಮನಸವನ್ನು ಭ್ರೂಮಧ್ಯದಲ್ಲೇ ಇಡಲಾಗುವದಾದರೂ ದೃಷ್ಟಿಯನ್ನು ಸುಮಾರು ಎರಡು ಮೊಳ ದೂರದಲ್ಲಿರುವ ಒಂದು ವಸ್ತುವಿನ ಭಾವನೆಯಲ್ಲಿ ಇಡಲಾಗುವದೆಂದು ಇವರು ಹೇಳಿದ್ದಾರೆ.

ಆದರೆ ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಚಿತ್ತದ ಲಕ್ಷ್ಯವನ್ನು ಹೃದಯ ಕಮಲದಲ್ಲಿಡುವುದೇ ಶಾಂಭವೀ ಮುದ್ರೆಯೆಂದು ಅನೇಕ ಕಡೆಗಳಲ್ಲಿ ಹೇಳಲಾಗಿದೆ. ಶ್ರೀ ನಿಜಗುಣಶಿವಯೋಗಿಗಳಾದರೋ ತಮ್ಮ "ಪಾರಮಾರ್ಥಿಕ ಪ್ರಕಾಶಿಕೆ"ಯಲ್ಲಿ "ಮಸ್ತಕಸ್ಥಿತ ಬ್ರಹ್ಮಜ್ಯೋತಿಯ ಮೇಲೆ ಮನವಂ ನಿಲ್ಲಿಸುವುದೇ ಖೇಚರೀ ಮುದ್ರೆಯು...... ಆಮೇಲೆ ದಿವ್ಯಲಿಂಗಾನುಸಂಧಾನಕ್ಕೆ ಸಾಧನವಾದ ಈ ಖೇಚರೀ ಮುದ್ರೆಯೇ ಸ್ಥಾನಭೇದದಿಂದ ಶಾಂಭವೀ ಮುದ್ರೆಯೆನಿಸುವದು. ಹೇಗೆಂದರೆ, ನಾಸಿಕಾಗ್ರದಲ್ಲಿರಿಸಲ್ಪಟ್ಟ ನಿಮಿಷೋನ್ಮೇಷವಿಲ್ಲದೆ ಲೋಚನಗಳಿಂದ ಲಕ್ಷಿಸಲು ಯೋಗ್ಯವಾದ ಹೃದಯದಲ್ಲಿ ನಿಶ್ಚಲವಾದ ಜ್ಯೋತಿರ್ಮಂಡಲವನ್ನು ಕಾಣುವದೇ ಶಾಂಭವೀ ಮುದ್ರೆಯೆನಿಸುವದು" ಎಂದು ಹೇಳಿದ್ದಾರೆ.

ಏನೇ ಇರಲಿ, ತಾರಕಯೋಗದಲ್ಲಿ ಭ್ರೂಮಧ್ಯ ದೃಷ್ಟಿಯು ಅತಿ ಮುಖ್ಯ ವಾದುದು. ಏಕೆಂದರೆ ಇದು ಪರಂಜ್ಯೋತಿ ಪ್ರಕಾಶದ ಸ್ಥಾನವು. ಆದರೆ ತಾರಕ ಯೋಗವು ಅಂತರ್ಲಕ್ಷ್ಯ ಮಧ್ಯಲಕ್ಷ್ಯವೆಂದು ಮೇಲೆ ಹೇಳಿದ ಅನೇಕ ಮುದ್ರೆಗಳಿಗೆ ಸದೃಶವಾಗಿದೆ. ಒಳಗೆ ಲಕ್ಷ್ಯವನ್ನಿಡುವುದೇ ಅಂತರ್ಲಕ್ಷ್ಯವೆಂದೂ ಹೊರಗಡೆ ಬಾಹ್ಯ ದಲ್ಲಿ ಲಕ್ಷ್ಯವನ್ನು ಸ್ಥಿರೀಕರಿಸುವುದೇ ಬಹಿರ್ಲಕ್ಷ್ಯವೆಂದೂ ಒಳಗೂ ಹೊರಗೂ ಅಂದರೆ ಅಂತರ್ಬಾಹ್ಯದಲ್ಲಿ ಚಿತ್ತವನ್ನು ಸ್ಥಿರಗೊಳಿಸುವದೇ ಮಧ್ಯಲಕ್ಷ್ಯವೆಂದೂ ಸಾಮಾನ್ಯ ವಾಗಿ ಶಬ್ದಾರ್ಥವನ್ನು ಮಾಡಬಹುದಷ್ಟೇ ?

ನಾಭಿಕಂದದಿಂದ ಮೇಲಕ್ಕೆ ಹೊರಡುವ ಸುಷುಮ್ನಾನಾಡಿಯು ಕೋಟಿ ಮಿಂಚುಗಳಿಗೆ ಸಮಾನವಾಗಿ ಹೊಳೆಯುತ್ತ ಕಮಲದೆಳೆಯಂತೆ ಬ್ರಹ್ಮರಂಧ್ರದವರೆಗೆ ಹೋಗಿದೆಯೆಂದು "ಮನಸ್ಸಿನಿಂದ ಲಕ್ಷಿಸುವುದೇ ಅಂತರ್ಲಕ್ಷ್ಯವಕ್ಕುಂ" ಎಂದೂ ಪ್ರಾಣವಾಯುವು ಮೂಗಿನ ಹೊರಳೆಯ ಮುಂದೆ ಹನ್ನೆರಡಂಗುಲ ಪರಿಯಂತವಾಗಿ ಎರಡೆರಡು ಬೆರಳಿನ ಅಂತರಕ್ಕೆ ಒಂದೊಂದು ತತ್ತ್ವದ ಬಣ್ಣದಿಂದ ಗೋಚರಿಸುವ ದೆಂದು ಬಾಹ್ಯದಲ್ಲಿ ಲಕ್ಷಿಸುವುದೇ ಬಹಿರ್ಲಕ್ಷ್ಯವೆನಿಸುವದು. ಎಂದೂ* ಕಣ್ಣುಮುಂದೆ

---

* ೧೨ ತಾಸು ಒಂದೇ ಸ್ವರ ನುಡಿಸಲಿಕ್ಕೆ ಬಂದಮೇಲೆ ತತ್ತ್ವಗಳ ಬಣ್ಣ ಕಾಣಿಸುವದಂತೆ.
— ಹಿಂದೀ "ಯೋಗಾಂಕ" ಪುಟ ೩೯

→

ಕಾಣುವ ಬಯಲಾದ ಆಕಾಶವೇ ತನ್ನೊಳಗೆ ಸ್ಥೂಲಾಕಾಶ, ಮಹದಾಕಾಶ, ತತ್ತ್ವಾಕಾಶ, ಬಿಂದ್ವಾಕಾಶಗಳೆಂಬ ವಿವಿಧ ವರ್ಣದ ಬೇರೆ ನಾಲ್ಕು ಆಕಾಶಗಳನ್ನೊಳಕೊಂಡಿದೆಯೆಂದೂ, ಈ ಪಂಚಾಕಾಶಗಳು ತನ್ನ ಒಳಗೂ ಹೊರಗೂ ವ್ಯಾಪಿಸಿರುವವೆಂದೂ ಕಾಣುವುದೇ ಮಧ್ಯಲಕ್ಷ್ಯವಾಗಿದೆ, ಎಂದೂ ಶ್ರೀ ನಿಜಗುಣಶಿವಯೋಗಿಗಳು ತಮ್ಮ "ಪಾರಮಾರ್ಥ ಪ್ರಕಾಶಿಕೆ"ಯಲ್ಲಿ ಹೇಳಿದ್ದಾರೆ. ಇಲ್ಲೆಲ್ಲ "ಮನಸ್ಸಿನಿಂದ ಲಕ್ಷಿಸಂವದು" ಎಂಬ ಹಿಂದಿನ ಶಬ್ದ ಸಮನ್ವಯಿಸಿಕೊಳ್ಳಬೇಕೆಂದು ತೋರುತ್ತದೆ.

ಇದರಿಂದ ಪರಂಜ್ಯೋತಿಯು ಕಪ್ಪು, ಕೆಂಪು, ಬಿಳುಪು ಎಂಬ ಮುಖ್ಯ ಮೂರು ಪ್ರಕಾರವಾಗಿ ತ್ರಿಗುಣಗಳಿಗೆ ಅನುಸರಿಸಿ ಕಾಣಿಸುವದೆಂದು, ಅವೇ ಒಂದರೊಳಗೊಂದಂ ಮಿಶ್ರವಾಗಿ ನೀಲ ವರ್ಣವೆಂದು, ಮೇಘವರ್ಣವೆಂದಂ, ಪೀತರಕ್ತವೆಂದಂ, ಪೀತವೆಂದುಂ, ಕಪಿಲವೆಂದು, ಧೂಮ್ರವೆಂದು ಸ್ಫಟಿಕವರ್ಣವೆಂದು ಇನ್ನೇಳು ಪ್ರಕಾರವಾಗಿ ಒಟ್ಟಿಗೆ ದಶವಿಧ ಪ್ರಕಾಶಗಳಾಗಿ ಗೋಚರಿಸುವವೆಂದೂ ಶ್ರೀ ನಿಜಗುಣಶಿವಯೋಗಿಗಳು ಹೇಳಿದ್ದಾರೆ.

ಅಲ್ಲದೆ ಖೇಚರೀಮುದ್ರೆಯಿಂದ "ಪೂರ್ಣಚಂದ್ರನಂತೆ, ಮಧ್ಯಾಹ್ನದ ಸೂರ್ಯನಂತೆ, ಅಗ್ನಿಜ್ವಾಲೆಯಂತೆ, ನಕ್ಷತ್ರದಂತೆ, ಮಿಂಚಿನ ಬಳ್ಳಿಯಂತೆ, ರತ್ನದೀಪದಂತೆ, ದಿವ್ಯಲಿಂಗಸ್ವರೂಪಗಳು ...... ಲೋಚನಾಗ್ರದಲ್ಲಿ ಬೆಳಗಂತಿರ್ಕುಂ" ಎಂದು ಹೇಳಿದ್ದಾರೆ.

ಇದೆಲ್ಲ ಆದಿ ಓಂಕಾರವೇ ಪರಂಜ್ಯೋತಿ ಸ್ವರೂಪವಾದದ್ದೆಂಬ ಜ್ಞಾನವುಳ್ಳ ಜ್ಞಾನೀ ಸಾಧಕರ ಮಾತಾಯಿತು. ಆದರೆ ಸಾಮಾನ್ಯ ಸಾಧಕರಿಗೆ ಮಾರ್ಗವೇನಂ ?

"ಬಳಿಕ ಮಂದಾಧಿಕಾರಿಗೆ ..... ... ಮೇಳೈಸಿ ಬಲಿದ ಷಣ್ಮುಖೀಕರಣದಿಂ ನಿಶ್ಚಲಚಿತ್ತರಾದವರ್ಗೆ ಆ ಪ್ರಣವದ ನಾನಾ ನಾದಶ್ರವಣವು, ವಿಚಿತ್ರ ಬಿಂದುಸಾಕ್ಷಾತ್ಕಾರವು ನಿಶ್ಚಿಂತಗಳಕ್ಕುಂ" ಎಂದು ಶ್ರೀ ನಿಜಗುಣಶಿವಯೋಗಿಗಳು, ಎರಡು ಕಿವಿ, ಎರಡು ಕಣ್ಣು. ಮೂಗಿನ ಎರಡು ಹೊರಳೆಗಳು ಇವುಗಳನ್ನು ಎರಡು ಕೈಗಳ ಮೂರು ಮೂರು ಬೆರಳುಗಳಿಂದ ಮುಚ್ಚುವ ಷಣ್ಮುಖೀ ಮುದ್ರೆಯೇ ಸಾಮಾನ್ಯ

---

→ ನಾಲ್ಕು ನಾಲ್ಕು ಅಂಗುಲ ಅಂತರಕ್ಕೆ ಒಂದೊಂದು ತತ್ತ್ವಗೋಚರಿಸುವದೆಂದು "ಸ್ವರ ಚಿಂತಾಮಣಿ"ಯಲ್ಲಿ ಹೇಳಿದೆ (೫ ನೆಯ ಅಧ್ಯಾಯ). ಕಾಲಕಾಲದ ದೇಹಸ್ಥಿತಿಗನುಸರಿಸಿ ಹೀಗೆ ಅಂತರವ್ಯತ್ಯಾಸವಾಗುತ್ತಿರಬಹುದೆಂದು ನಮಗೆ ತೋರುತ್ತದೆ. ಬಲ್ಲವರು ನಿರ್ಧರಿಸಲಿ.

ಶ್ವಾಸೋಚ್ಛ್ವಾಸದ ತತ್ತ್ವವರ್ಣಗಳು ಚಕ್ರದೊಳಗಿನ ಆಕೃತಿ ವರ್ಣನೆಗಳಿಗೆ ಕ್ರಮವಾಗಿ ಹೊಂದಿಕೆಯಲ್ಲಿರುವವು. ಅರ್ಥಾತ್ ಅವೇ ಇರುವವು. ಉದಾ : ಪೃಥ್ವಿ ಹಳದಿ; ಜಲ ಬಿಳಿ; ಅಗ್ನಿ ಕೆಂಪು; ವಾಯು ಧೂಮ್ರ ಅಥವಾ ನೀಲಿ, ಆಕಾಶ ನಿರ್ವರ್ಣ.

— ಸ್ವರಚಿಂತಾಮಣಿ

ಸಾಧಕರಿಗೆ ಸಹಾಯಕವೆಂದು ಹೇಳುವರು. (ಇಲ್ಲಿ ಮೂಗನ್ನು ಸುಮ್ಮನೆ ಹಿಡಿದಿರ ಬೇಕು. ಅಷ್ಟೇ ಎಂಬುದನ್ನು ಮರೆಯುತಕ್ಕದ್ದಲ್ಲ.)

**ಅಮನಸ್ಕಯೋಗ :** ಇದು ತೂರ್ಯಾವಸ್ಥೆ ಅಥವಾ ಉನ್ಮನೀ ಅವಸ್ಥೆ ಅಥವಾ ಸಮಾಧಿ ಅವಸ್ಥೆ. ಆತ್ಮತತ್ತ್ವವೊಂದಲ್ಲದೆ ಇನ್ನಾವುದರ ಭಾಸವೇ ಇಲ್ಲದೆ ತಾನು ಕೂಡ ಇದ್ದೇನೋ ಇಲ್ಲವೋ ಎನ್ನುವಂತೆ ಆತ್ಮತತ್ತ್ವದಲ್ಲಿ ಏಕತಾನತೆಯು ಸಾಧಿಸಿದರೆ ಅದಕ್ಕೆ ಸಮಾಧಿ ಎನ್ನುವರೆಂದು ಪಾಂತಜಲ ಯೋಗಶಾಸ್ತ್ರದಲ್ಲಿ ಹೇಳಿದೆ. ಒಟ್ಟಾರೆ ಈ ರಾಜಯೋಗವೆಂಬುದು ಅಷ್ಟಾಂಗಗಳಲ್ಲಿ ಕೊನೆಯವುಗಳಾದ ಧಾರಣಾ, ಧ್ಯಾನ, ಸಮಾಧಿಗಳೆಂಬ ಮೂರಂಗಗಳಿಗೆ ಸದೃಶವಾಗಿದೆಯೆಂದು ಹಿಂದೆಯೇ ಹೇಳಿದ್ದೇನೆ. ಶ್ರೀ ನಿಜಗುಣಶಿವಯೋಗಿಗಳು ಈ ಅಂಗತ್ರಯದ ಕ್ರಮವನ್ನು ಧ್ಯಾನ-ಧಾರಣ-ಸಮಾಧಿ ಎಂಬುದಾಗಿ ಧಾರಣೆಯನ್ನು ಮಧ್ಯದಲ್ಲಿ ಸೇರಿಸಿ ಹೇಳಿದ್ದಾರೆ. ಇದರ ಮೇಲಿಂದ ನೋಡಿದರೆ ಸಾಂಖ್ಯಯೋಗವೇ ಧ್ಯಾನವೆಂದೂ, ತಾರಕಯೋಗವೇ ಧಾರಣೆಯೆಂದೂ, ಅಮನಸ್ಕವೇ ಸಮಾಧಿಯೆಂದು ಅದರ ಅರ್ಥವಿದ್ದಂತೆ ತೋರುತ್ತದೆ.

ಪಾತಂಜಲ ಕ್ರಮವನ್ನೇ ಹಿಡಿದರೆ ಸಾಂಖ್ಯವು ವಿಚಾರಮೂಲಕ ಚಿತ್ತದ ಧಾರಣೆಯನ್ನುಂಟುಮಾಡುವುದೆಂದೂ, ತಾರಕಯೋಗವು ಧ್ಯಾನವನ್ನು ಸಾಧಿಸಿ ಕೊಡುವುದೆಂದೂ ಅಮನಸ್ಕವು ಸಮಾಧಿಯನ್ನು ತರುವದೆಂದೂ ಊಹಿಸಬಹುದು. ಯಾವುದಾದರೂ ಅರ್ಥವೆಲ್ಲ ಒಂದೇ ಸರಿ.

ಇಲ್ಲಿ ಕೇಳುವವನಿಲ್ಲ, ಕೇಳಿಸುವ ವಸ್ತುವಿಲ್ಲ, ಕೇಳಿಸುವಿಕೆಯಿಲ್ಲ, ನೋಡುವವನಿಲ್ಲ, ಕಾಣಿಸುವ ವಸ್ತುವಿಲ್ಲ, ಕಾಣಿಸುವಿಕೆಯೆಂಬ ಕ್ರಿಯೆಯಿಲ್ಲ. ಅದರಂತೆ ವಿಚಾರ ಮಾಡುವವನಿಲ್ಲ, ವಿಚಾರ ಮಾಡಿಸಿಕೊಳ್ಳುವ ವಸ್ತುವಿಲ್ಲ, ವಿಚಾರವೆಂಬ ಕ್ರಿಯೆಯಿಲ್ಲ. ಓಗೆ ನಾದಗಳಿಲ್ಲ, ಪ್ರಕಾಶಗಳಿಲ್ಲ, ತತ್ತ್ವವಿಚಾರದ ಚರ್ಚೆಯಿಲ್ಲ, ಎಲ್ಲ ಏಕಾಕಾರವೇ ಏಕಾಕಾರ. ಶ್ರೀ ರಾಮಕೃಷ್ಣ ಪರಮಹಂಸರು ಸಿದ್ಧಪುರುಷರ ಸ್ಥಿತಿಯನ್ನು ವರ್ಣಿಸುವಾಗ, ಕೋಟೆಯ ಗೋಡೆಯನ್ನೇರಿ ಅದರೊಳಗಿರುವ ಅಮೃತ ಸರೋವರವನ್ನು ನೋಡಿ, 'ಅಹಾ ! ಅಹಾ !!' ಎಂದು ಅದರ ಒಳಗೇ ಹಾರಿಕೊಂಡುಬಿಟ್ಟರೆಂದು ಹೇಳಿದಂತೆ ಈ ಅವಸ್ಥೆ ಇರುತ್ತದೆ.

ನಾದ, ಬಿಂದು, ಕಲೆಗಳೆಂಬ ತ್ರಯಿಯಲ್ಲಿ ಮೊದಲಿಗೆ ಪ್ರಕಟವಾದ ನಾದದಲ್ಲಿಯೇ ಅಷ್ಟು ಚಿತ್ತಲಯಗೊಳಿಸುವ ಶಕ್ತಿಯಿದ್ದ ಮೇಲೆ, ಹಾಗೂ ಅನಂತರ ಹುಟ್ಟುವ ಬಿಂದು ರೂಪವಾದ ಪ್ರಕಾಶಗಳಲ್ಲಿಯೇ ಅಷ್ಟೊಂದು ದಿವ್ಯಾನಂದವಿದ್ದ ಮೇಲೆ ಕೊನೆಯಲ್ಲಿ ಬರುವ ಈ ಸಹಸ್ರದಳ ಕಮಲದೊಳಗಿನ ಆನಂದಚಂದ್ರನ ಅಮೃತಕಲಾರೂಪವಾದ ಆತ್ಮಾನಂದವು ಎಷ್ಟು ಗಾಢ ಆನಂದದಾಯಕವಾಗಿರುವದೆಂದು ಬೇರೆ ಹೇಳುವದೇ ಬೇಡ. "ಅಮೃತ ಹ್ರದಮಿವ ಅವಗಾಢೋऽಸ್ಮಿ" (ಅಮೃತ ಸರೋವರದಲ್ಲಿ ತುಂಬ ಮುಳುಗಿಕೊಂಡವನಂತಾಗಿದ್ದೇನೆ) ಎಂದು

ಶಾಕುಂತಲ ನಾಟಕದಲ್ಲಿ ಕೊನೆಯ ಅಂಕದಲ್ಲಿ ಮರೀಚಮುನಿಗಳ ಸಿದ್ಧಾಶ್ರಮವನ್ನು ಕಂಡ ದುಷ್ಯಂತನು ಆನಂದ ಉಕ್ಕೇರಿ ಆಡಿದ ಮಾತುಗಳಂತೆ ಈ ವಿಷಯ ವಿವರಿಸುತ್ತದೆ ಎಂದು ಬೇರೆ ಹೇಳುವದೇನಿದೆ ?

ನೂರೊಂದು ಸ್ಥಲಗಳಲ್ಲಿ ಪ್ರಾಣಲಿಂಗಿ ಸ್ಥಲಾಂತರ್ಗತವಾದ 'ಶಿವಯೋಗ ಸಮಾಧಿ" ಸ್ಥಲದ ಅನುಭವದಂತೆ ಈ "ಅಮನಸ್ಕಯೋಗ" ವಿರುತ್ತದೆ.

ಶ್ರೀ ನಿಜಗುಣಶಿವಯೋಗಿಗಳು ತಮ್ಮ "ಪಾರಮಾರ್ಥ ಪ್ರಕಾಶಿಕೆ"ಯಲ್ಲಿ ಈ ಉನ್ಮನೀ ಸ್ವರೂಪವಾದ ಅಮನಸ್ಕ ಮುದ್ರೆಯನ್ನು ಹೀಗೆ ವರ್ಣಿಸಿರುವರು :–

"ಧ್ಯಾನರೂಪನಾದ ತನ್ನನು ನಿರಾಲಂಬನವಾಗಿ ಮಾಡಿ, ಧ್ಯೇಯರೂಪವಾದ ಬಿಂದುವನು ನಿರಾಲಂಬನವಾಗಿ ಮಾಡಿ, ಆ ಧ್ಯಾತೃ–ಧ್ಯೇಯರೂಪವಾದೆರಡನು ಸಾಮರಸ್ಯವಾಗಿ ಮಾಡುವದೇ ಅಮನಸ್ಕ ಕಲೆಯೆನಿಸಿಕೊಳ್ಳುತಿರ್ಕುಂ"

"ಹ್ಯಾಗೆ ದಗ್ಧಕಾಷ್ಠವನ್ನುಳ್ಳ ಅಗ್ನಿ ತಾನೇ ಉಪಶಮನವಹುದೋ ಹಾಗೆ ವಿಷಯಂಗಳ ಅಭಾವದಿಂದಾ ಮನವು ತಾನೇ ಲಯವನ್ನೈದಂವುದಿದೇ ಅಮನಸ್ಕ ರೂಪವದೇ ಉನ್ಮನಿಸಿದ್ಧಿಯಕ್ಕುಂ"

"ಮನವು... ಎಲ್ಲೆಲ್ಲಿ ಚರಿಸಿದರೂ ನಿರಾಲಂಬಸ್ಥಾನದಲ್ಲಿಯೇ ಬಂದಳಿಯುವುದಾಗಿ ಆ ಮನೋಲಯದಿಂ ಶಿವಸಾಮರಸ್ಯರೂಪ ಮೋಕ್ಷವಾಗುತಿರ್ಕುಂ"

—"ಪಾರಮಾರ್ಥ ಪ್ರಕಾಶಿಕೆ" ಪರಿಚ್ಛೇದ–೫

ಇದೇ ವಿಷಯವನ್ನು ನಿಜಗುಣಶಿವಯೋಗಿಗಳು ತಮ್ಮ ಸುವಿಖ್ಯಾತವಾದ "ಕೈವಲ್ಯ ಪದ್ಧತಿ"ಯೆಂಬ ಗ್ರಂಥದಲ್ಲಿ ಬಹು ಸೊಗಸಾಗಿ ಬಣ್ಣಿಸಿದ್ದಾರೆ. ಆ ಹಾಡನ್ನಿಲ್ಲಿ ಬರೆಯದಿರಲಿಕ್ಕೆ ನನ್ನ ಮನಸ್ಸು ಒಪ್ಪುವದಿಲ್ಲ. ಏಕೆಂದರೆ ಆ ಪದ್ಯದಲ್ಲಿ ಮೇಲ್ಕಾಣಿಸಿದ ಉನ್ಮನೀ ಸ್ಥಿತಿಯನ್ನು ಅಷ್ಟೊಂದು ಸುಂದರವಾಗಿ ವರ್ಣಿಸಲಾಗಿರುತ್ತದೆ :–

ಬಹುಕೃತ್ಯವಳಿದಾತ್ಮಯೋಗನಿದ್ರೆಯೊ-
ಳಿಹ ಮುಕ್ತನಿರವ ನೋಡೆ ರಮಣಿ ॥ ಪ ॥

ವರವಜ್ರಾಸನದಿಂದೆ ಸಮವೆನಿಪ ಸಂ- ।
ಸ್ಥಿರವಾದ ತನುವೆಂಬ ಸೆಜ್ಜೆಮನೆಯ ॥
ಕರಣನಿಕರವೆಂಬ ಬಾಗಿಲನೆಲ್ಲವ- ।
ನಿರದೆ ಷಣ್ಮುಖಿಯೆಂಬ ಕದವನಿಕ್ಕಿ ॥

ನಡುನಾಡಿಗಂಭದೊಳು ಮೂಲಶಿಖಿಯೆಂಬ ।
ಸೊಡರ ಬೆಳಗನೆತ್ತಿ ಬ್ರಹ್ಮರಂಧ್ರ ॥
ದೆಡೆಯಣಂಬುಜವೆಂಬ ಸಿರಿಮಂಚವ ।
ನಡರಿ ಪರಮಶಾಂತದೊಡನೊರಗಿ ॥

ಬಳಿಕ ಶಾಂಭವಿಮುದ್ರೆಯಿಂದೆ ಲೋಚನಂ- ।
ಗಳನೊಯ್ಯನರೆಮುಚ್ಚಿ ಮೇಲೆ ಕವಿವ ॥
ಬೆಳಗಿನುನ್ಮನಿಯೆಂಬ ಸುಖಸುಷುಪ್ತಿಯು- ।
ಚ್ಚಳಿಯದೆ ಗುರು ಶಂಭುಲಿಂಗವೆನಿಸಿ ॥ ೨೭ ॥

ಗಗನಮಹಲು, ಪುಷ್ಪಶಯ್ಯೆ, ಸುಖಸುಷುಪ್ತಿ, ಯೋಗನಿದ್ರೆ, ಚಂದ್ರ ಕಲಾಮೃತಪಾನ, ಚೌಕಮಧ್ಯದ ಸಿರಿಮಂಚ ಮುಂತಾದ ಶಬ್ದಗಳೆಲ್ಲಾ ಯೋಗ ಶಾಸ್ತ್ರಗಳಲ್ಲಿ ಮೇಲಿಂದ ಮೇಲೆ ಬರುತ್ತಿರುವವಷ್ಟೇ ? ಅವೆಲ್ಲಾ ಈ ಅಮನಸ್ಕ ಉನ್ಮನೀ ಸಿದ್ಧಿಯ ಮಹದಾನಂದವನ್ನು ಸೂಚಿಸುವ ರೂಪಕ ಶಬ್ದಗಳೇ ಆಗಿವೆ ಯೆಂಬುದನ್ನು ನೆನಸಿದರೆ ಈ ಸ್ಥಿತಿಯು ಎಂಥಾ ಮಹತ್ತರವಾದ ಬ್ರಹ್ಮಾನಂದ ದಾಯಕವಾಗಿದೆಯೆಂಬುದರ ಅರ್ಥವಾಗುವದು !!!

## ೫. ಶಿವಯೋಗ

"ಶಿವಯೋಗ"ದ ವಿಷಯವನ್ನು ಈ ಸುದೀರ್ಘ ಲೇಖನದ ಆರಂಭದಲ್ಲಿಯೇ ಸವಿಸ್ತಾರವಾಗಿ ಬರೆದಿದ್ದೇನೆ. ಆದರೆ ಇಲ್ಲಿ ಒಂದು ವಿಷಯುವನ್ನು ಮಾತ್ರ ಸ್ಪಷ್ಟ ಗೊಳಿಸಬಯಸುತ್ತೇನೆ. ಅದೇನೆಂದರೆ, ಸಹಸ್ರದಳದ ಕಮಲಕ್ಕೆ ಹೋಗಿ ಮುಟ್ಟಿ ದರೆ ಎಲ್ಲಾ ಮುಗಿಯಿತೆಂದಲ್ಲ. ಇನ್ನೂ ಅದರ ಮುಂದೆ ಮಾರ್ಗವುಂಟು. ವೀರಶೈವ "ಸಿದ್ಧಾಂತಶಿಖಾಮಣಿ"ಯೆಂಬ ಪ್ರಖ್ಯಾತವಾದ ನೂರೊಂದು ಸ್ಥಲಕ್ಕೆ ಸಂಬಂಧಿಸಿದ ಸಂಸ್ಕೃತ ಗ್ರಂಥದಲ್ಲಿ "ಶಿವಯೋಗ ಸಮಾಧಿಸ್ಥಲ"ದಲ್ಲಿ ಮುಂದಿನ ಎರಡು ಶ್ಲೋಕಗಳಿವೆ :

ಭ್ರೂಮಧ್ಯಾದೂರ್ಧ್ವಭಾಗೇ ತು ।
ಸಹಸ್ರದಳಮಂಬುಜಂ ॥
ಭಾವಯೇತ್ ತತ್ರ ವಿಮಲಂ ।
ಚಂದ್ರಬಿಂಬಂ ತದಂತರೇ ॥ ೨೬ ॥

ಸೂಕ್ಷ್ಮರಂಧ್ರಂ ವಿಜಾನೀಯತ್ ।
ತತ್ ಕೈಲಾಸಪದಂ ವಿದುಃ ॥
ತತ್ರಸ್ಥಂ ಭಾವಯೇತ್ ಶುಭಂ ।
ಸರ್ವಕಾರಣ ಕಾರಣಂ ॥ ೨೭ ॥

"ಭ್ರೂಮಧ್ಯ ಚಕ್ರದ ಮೇಲ್ಗಡೆಗೆ ಸಹಸ್ರದಳ ಕಮಲವಿದ್ದು ಚಂದ್ರಬಿಂಬ ವಿರುವುದಾಗಿ ಭಾವಿಸಬೇಕು. ಆ ಬಿಂಬದಲ್ಲಿ ಸೂಕ್ಷ್ಮವಾದ ರಂಧ್ರವೊಂದಿದೆಯೆಂದು ತಿಳಿಯಬೇಕು. ಅದೇ ಕೈಲಾಸ ಪದವು. ಸರ್ವಕಾರಣಗಳಿಗೆ ಮೂಲಕಾರಣನಾದ ಶ್ರೀ ಶಂಕರನು ಅಲ್ಲಿಯೇ ವಾಸವಾಗಿದ್ದಾನೆಂದು ಭಾವಿಸಬೇಕು."

ಯೋಗಶಾಸ್ತ್ರಗಳಲ್ಲಿ ಭ್ರೂಮಧ್ಯಚಕ್ರದಲ್ಲಿ ಸಹ ಹೇಗೆ ಒಂದು ಅತಿ ಸೂಕ್ಷ್ಮವಾದ ರಂಧ್ರವಿದೆಯೆಂದು ವರ್ಣಿಸಲಾಗಿದೆಯೋ, ಹಾಗೆಯೇ ಈ ಸಹಸ್ರದಳ ಕಮಲದಲ್ಲಿರುವ ಅಮೃತಮಯ ಚಂದ್ರಬಿಂಬದಲ್ಲಿಯೂ ಒಂದು ಅತಿ ಸೂಕ್ಷ್ಮವಾದ ರಂಧ್ರವಿದೆಯೆಂದು ಮೇಲ್ಕಾಣಿಸಿದ ವರ್ಣನೆಯಿಂದ ಕಂಡುಬರುತ್ತದೆ. ಇದೇ ಬ್ರಹ್ಮರಂಧ್ರವಾಗಿರಬಹುದೆಂದು ತೋರುತ್ತದೆ. ಅದು ಕೈಲಾಸ ಮಹಾದ್ವಾರವಾಗಿದ್ದು ಅದರ ಒಳಗೆ ಸ್ವಯಂ ಶ್ರೀಪರಮಾತ್ಮನಾದ ಪರಶಿವನ ವಾಸಸ್ಥಾನವಿದೆಯೆಂಬುದರ ಮೇಲಿಂದ ಭಗವದ್ಗೀತೆಯಲ್ಲಿ ವರ್ಣಿಸಲ್ಪಟ್ಟ "ಪುರುಷೋತ್ತಮ"ನು ಅಥವಾ ಉತ್ತಮ ಪುರುಷನು ನಿರ್ಗುಣ ಅಕ್ಷರಪುರುಷನಿಗಿಂತ ಸಹ ಮೇಲೆ ಇದ್ದಾನೆಂದು ಹೇಳಲ್ಪಟ್ಟಿರುವಂತೆಯೇ ಈ ವರ್ಣನೆಯಿದೆಯೆಂಬುದರಲ್ಲಿ ಸಂಶಯವಿಲ್ಲ. ಜೀವನದೊಳಗಿನ ಶಿವನು ಈತನೇ ಆಗಿದ್ದಾನೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಈತನೇ ಪ್ರತಿಯೊಂದು ವಸ್ತು, ಪ್ರತಿಯೊಂದು ಪ್ರಾಣಿ, ಪ್ರತಿಯೊಬ್ಬ ಮನುಷ್ಯನೊಳಗೆ ಸೃಷ್ಟಿಯ ಆರಂಭದಲ್ಲಿಯೇ ನೆಲಿಸಿದ ವ್ಯಷ್ಟಿವ್ಯಾಪಿ ಪರಮೇಶ್ವರನು !!! ಈತನನ್ನೇ ನಮ್ಮೊಳಗೆ ಕಂಡು ಉಪಾಸನೆಗೈಯ್ಯಬೇಕಾಗಿದೆ. ಇದೇ "ಶಿವಯೋಗ"ವೆಂದು ಹಿಂದೆಯೇ ಹೇಳಿದ್ದೇನೆ. ಇಷ್ಟಾದಾಗಲೇ ಸಗುಣ ನಿರ್ಗುಣಗಳ ಸಮನ್ವಯವಾಗುವದೆಂಬ ವಿಷಯವನ್ನು ಹಿಂದೆಯೇ ಹೇಳಿದ್ದೇನೆ. ಇದೇ ಶ್ರೀ ನಿಜಗುಣ ಶಿವಯೋಗಿಗಳ "ಪಾರಮಾರ್ಥ ಪ್ರಕಾಶಿಕೆ"ಯ ಹಿರಿದಾದ ಗುರಿಯಾಗಿದೆಯೆಂದು ಬೇರೆ ಹೇಳಲಿಕ್ಕೇ ಬೇಡ. ಶ್ರೀ ಅರವಿಂದರೂ ಕೂಡ ಇದನ್ನೇ ಹೇಳಿದ್ದಾರೆ. ಇದೇ ಇಂದಿನವರಾದ ನಮ್ಮೆಲ್ಲರ ಗುರಿಯೂ ಆಗಬೇಕು !!!

ಶ್ರೀಶೈಲ ಮಹಾತ್ಮ್ಯದಲ್ಲಿ ಈ ವಿಷಯಕ್ಕೆ ಬಂದ ಒಂದು ಸುಂದರ ಕಥೆಯನ್ನು ಹೇಳಿ ಈ ಲೇಖವನ್ನು ಮುಗಿಸುತ್ತೇನೆ—

ಬಹುಶಃ ಪಾಶುಪತ ಧರ್ಮಸ್ಥಾಪಕನೂ ಶೈವಭಕ್ತಿಯ ಪ್ರಚಾರಕನೂ ಆದ ಶ್ರೀ ನಂದಿಕೇಶ್ವರನು ಶ್ರೀಶೈಲ ಮಹಾಪರ್ವತದಲ್ಲಿ ತಪವನ್ನು ಮಾಡುತ್ತಿದ್ದನಷ್ಟೇ ? ಆತನ ತಂದೆಯಾದ ಶಿಲಾದಮುನಿಯೂ, ಅಣ್ಣನಾದ ಪರ್ವತಮುನಿಯೂ ಸಹ ಈ ಮೊದಲು ಅದೇ ಪರ್ವತದಲ್ಲಿಯೇ ಘೋರ ತಪಸ್ಸನ್ನು ಮಾಡಿ ಪರಮೇಶ್ವರನನ್ನು ಒಲಿಸಿಕೊಂಡಿದ್ದರು. ಶಿಲಾದಮುನಿಯು ಬಹುಶಃ ಪರ್ಣಾಹಾರಾದಿಗಳೂ ಸಹ ಸಿಗದಾಗ ಮೃದುಶಿಲೆಗಳನ್ನು ನೀರಲ್ಲಿ ತೆಯಿದು ಅದನ್ನೇ ಕುಡಿದು ತಪವನ್ನಾಚರಿಸಿದಂತೆ ತೋರುತ್ತದೆ. ಹೀಗೆಂತಲೇ ಆತನಿಗೆ ಶಿಲಾದನೆಂದು ಹೆಸರು ಬಂದಿದ್ದರೂ ಬಂದಿರಬಹುದೆಂದು ಮೂಲಕಥೆಯ ಮೇಲಿಂದ ಊಹಿಸಲಿಕ್ಕೆ ಶಕ್ಯವಿದೆ. ಇನ್ನು ಪರ್ವತಮುನಿಯು ಪರ್ವತದಂತೆ ಎಳ್ಳಷ್ಟೂ ಚಲಿಸದೆ ಏಕಾಸನದಲ್ಲಿ ನಿಂತೋ ಅಥವಾ ಕುಳಿತೋ ತಪವನ್ನಾಚರಿಸಿದನೆಂದು ತೋರುತ್ತದೆ. ಆದರೆ ಶ್ರೀ ನಂದೀಶ್ವರನು ಮಾತ್ರ ಹಾಗೆ ಮಾಡದೆ ತನ್ನ ಹೃದಯಕಮಲದಲ್ಲಿ ಪರಮಾತ್ಮನನ್ನು ಧ್ಯಾನಿಸಿ

ಭಕ್ತಿಯೋಗಾಚಾರ್ಯರಲ್ಲಿ ಒಬ್ಬನಾದನೆಂದು ತೋರುತ್ತದೆ. ಏಕೆಂದರೆ, ಶ್ರೀಪರ ಶಿವನು ಶ್ರೀನಂದಿಕೇಶ್ವರನಿಗೆ ಪ್ರಸನ್ನನಾದಾಗ ಹೀಗೆ ಹೇಳಿದ್ದಾನೆ. ಅದೇನೆಂದರೆ— "ಮಗನೇ ನಂದಿಕೇಶ್ವರನೇ, ನಿನ್ನ ತಂದೆಯು ಘೋರ ಮನೋನಿಗ್ರಹವನ್ನು ಮಾಡಿದ್ದರಿಂದ ಆತನಿಗೆ ನಾನು ಒಲಿದೆನು; ಅದರಂತೆ ನಿನ್ನ ಅಣ್ಣ ಘೋರವಾಗಿ ಕಾಯನಿಗ್ರಹ ಮಾಡಿದ್ದರಿಂದ ಆತನಿಗೂ ನಾನು ಪ್ರಸನ್ನನಾದೆನು. ಆದರೆ ಇವರೆಲ್ಲರಿಗಿಂತ ನಾನು ನಿನಗೆ ಹೆಚ್ಚಾಗಿ ಪ್ರಸನ್ನನಾಗಿದ್ದೇನೆ. ಏಕೆಂದರೆ ನೀನು ಸ್ವಯಂ ನನ್ನನ್ನೇ ನಿನ್ನ ಹೃದಯದಲ್ಲಿ ಧ್ಯಾನಿಸಿದಿ. ಅದಕ್ಕಾಗಿ ನಿನ್ನ ಮೇಲೆ ನನ್ನ ಪ್ರೇಮವು ಇವರೆಲ್ಲರಿಗಿಂತಲೂ ಹೆಚ್ಚಾಗಿದೆ."

ಇದೇ ಶಿವಯೋಗ. ಇದೇ ಶರಣಸ್ಥಲ. ಇದರಿಂದಲೇ ಪರಮಾತ್ಮನು ನಮಗೆ ಇಪ್ಪತ್ನಾಲ್ಕು ತಾಸು ದರ್ಶನಕೊಟ್ಟು ಯಾವಾಗಲೂ ನಮ್ಮ ಹತ್ತಿರವೇ ಇದ್ದು ನಮ್ಮನ್ನು ಕೈಹಿಡಿದು ನಡಿಸುತ್ತಾನೆ. ಶ್ರೀ ಬಸವಾದಿ ಶರಣರಿಗೆ ಪರಮಾತ್ಮನು ಹೀಗೆಯೇ ಸದಾ ಸನ್ನಿಹಿತನಾಗಿದ್ದನೆಂಬುದನ್ನು ಮಹಾಕವಿ ಹರಿಹರದೇವನ "ಶ್ರೀ ಬಸವರಾಜದೇವರ ರಗಳೆ"ಯಲ್ಲಿ ಕಪ್ಪಡಿಸಂಗಮದಿಂದ ಮಂಗಳವೇಡೆಗೆ ಶ್ರೀ ಬಸವಣ್ಣನವರು ಪ್ರಯಾಣ ಬೆಳೆಸಬೇಕಾದ ಹೊತ್ತಿನಲ್ಲಿ ಅವರಿಗೆ ಶ್ರೀ ಕೂಡಲ ಸಂಗಮದೇವರು ಕೊಟ್ಟ ಮಹಾ ಅಭಯವಚನದ ಮೇಲಿಂದ ನಾವು ತಿಳಿದುಕೊಳ್ಳ ಬಹುದು !!!

ನೆನೆಯೆ ಮುಂದಿರ್ದಪೆಂ
ಕರೆದಡೋ ಎಂದೆಪೆಂ ।
ಮಾಡಿದುದ ಮಾಳ್ದಪೆಂ
ಬಿಟ್ಟಿದುದ ಬಿಟ್ಟಪೆಂ ॥

ಇದನ್ನೇ ನಾವಿಂದು ಗಳಿಸಬೇಕಾಗಿದೆ!!! ಈ ಅವಸ್ಥೆಯ ಅನಂತರ "ಐಕ್ಯಸ್ಥಲ"ವು ವರರೂಪವಾಗಿ ಬರುತ್ತದೆ. ಅದೇ ಶ್ರೀ ನಿಜಗುಣಶಿವಯೋಗಿಗಳ "ಕೈವಲ್ಯ ಪದ್ಧತಿ" ಯೊಳಗಿನ "ಜ್ಞಾನಪ್ರತಿಪಾದನಸ್ಥಲ"ವಾಗಿದೆ.

ಓಂ ಶ್ರೀ ಓಂ

"ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ"

"ಜಗತ್ತಿನ ದಿವ್ಯ ತಾಯಿ–ತಂದೆಗಳಾದ ಶ್ರೀ ಪಾರ್ವತೀ–ಪರಮೇಶ್ವರರ ಶ್ರೀಚರಣಗಳಿಗೆ ಪ್ರಣಾಮಂಗಳನ್ನರ್ಪಿಸುವೆನು

ಓಂ ಶ್ರೀ ಓಂ

**ಸುಕುಮಾರ ೨-೧ ಅಕ್ಟೋಬರ ೧೯೫೧**

# ಪೂರ್ಣಯೋಗ ವಿಚಾರ

---

## ೧. ಪೂರ್ಣಯೋಗದ ಪೂರ್ವಸೂಚನೆ

ಭರತಖಂಡದ ನೂತನ ಧರ್ಮ ವಿಪ್ಲವಗಳ ಮಂಗಳ ಪದ್ಯವು ನವಶಿಕ್ಷಿತರ ನಿರೀಶ್ವರವಾದದಿಂದ ಮೊದಲಾಯಿತು. ಬಳಿಕ ದಯಾನಂದ, ರಾಮಮೋಹನ, ದೇವೇಂದ್ರನಾಥರು ಬಹುದೇವತಾವಾದ ಮತ್ತು ಮೂರ್ತಿಪೂಜೆಗೆ ಪ್ರತಿಭಟಿಸಿ, ನಿರಾಕಾರ ಏಕೇಶ್ವರವಾದವನ್ನು ಸಮರ್ಥಿಸಿದರಾದರೂ ಅನುಭವಿಕ ಆಸ್ತಿಕತೆಯು ರಾಮಕೃಷ್ಣರ ನಿಜಸಂಪತ್ತಾಗಿದೆ. ವೈಷಮ್ಯದ ವಿಷಮಾಂಧಕಾರದಲ್ಲಿ ಸಮನ್ವಯದ ಸತ್ಯಜ್ಯೋತಿಯನ್ನು ಮೊದಲಿಗೆ ಕಂಡವರು ರಾಮಕೃಷ್ಣರೆ. ಅನಂತರ ನೆಲಹಿಡಿದ ನಿಷ್ಕ್ರಿಯ ವೇದಾಂತವನ್ನು ಪುಟಗೊಳಿಸಿ ಕೋಣೆಯಿಂದ ಬೀದಿಗೆಳೆದವರು ವಿವೇಕಾನಂದ, ರಾಮತೀರ್ಥರು. ಹೀಗೊಮ್ಮೆ ಅಧ್ಯಾತ್ಮರಾಜ್ಯದ ತಳಹದಿಯು ಗಟ್ಟಿಯಾದ ಮೇಲೆ ಅದನ್ನೀಗ ಮುಂದುರಿಸುವವರು ಮುಂದೆಬಂದಿದ್ದಾರೆ. ಅನಿರ್ವಚನೀಯವನ್ನು ವಚನಕ್ಕಿಳಿಸಿ, ಹೃದಯಂಗಮಗೊಳಿಸುತ್ತಿರುವವರು ರವೀಂದ್ರರು. ಏಕಾಂತ ಸುಲಭವಾದದ್ದನ್ನು ಲೋಕಾಂತದಲ್ಲಿ ಆಚರಿಸಿ ತೋರಿಸುತ್ತಿರುವವರು ಮಹಾತ್ಮಾಜಿಯವರು. ರವೀಂದ್ರರ ರಸಾನಂಭೂತಿ, ಮಹಾತ್ಮರ ಸಹಾನುಭೂತಿ ಇವೆರಡರ ಪುಣ್ಯಪ್ರಭಾವದಲ್ಲಿ ಪಾವನವಾಗುತ್ತಿರುವದರಿಂದ ಭಾರತವರ್ಷವು ಅರವಿಂದರ ದಿವ್ಯಾನಂಭೂತಿಯಾಗಿ ಭೂಮಿಕೆಯನ್ನು ಸಿದ್ಧಪಡಿಸಿಕೊಳ್ಳುತ್ತಲಿದೆ.

ಶ್ರದ್ಧೆಯು ಸತ್ವಾನುರೂಪವಾಗಿರುತ್ತಿರುವದರಿಂದ ಸತ್ತ್ವವು ಶುದ್ಧವಾದಂತೆ ಶ್ರದ್ಧೆಯು ಕಳೆಯೇರುವದು. ಸ್ವಭಾವವು ಸತ್ತ್ವದ ದ್ಯೋತಕವಾಗಿರುವದರಿಂದ ಸತ್ತ್ವದ ಪಲ್ಲಟವೆಂದರೆ ಸ್ವಭಾವದ ಮಾರ್ಪಾಡೆ. ಅಂದಿನ ನಿರೀಶ್ವರವಾದದಿಂದ ಇಂದಿನ ತಾತ್ತ್ವಿಕ ಭಾವದವರೆಗೆ ಬೆಳೆಯುತ್ತ ಬಂದ ಶ್ರದ್ಧೆಯು ಭಾರತೀಯರ ಸ್ವಭಾವ ಪರಿವರ್ತನದ ನಿದರ್ಶನವಾಗಿದೆ.

ಮಾನವ ಸತ್ತ್ವವು ಮೂಲತಃ ಎರಡೇ ವಿಧವಾಗಿದೆ. ಒಂದು ಜ್ಞಾನ ಪ್ರಧಾನ, ಇನ್ನೊಂದು ಶಕ್ತಿ ಪ್ರಧಾನ. ಒಂದು ಸಾತ್ತ್ವಿಕ, ಇನ್ನೊಂದು ರಾಜಸಿಕ.

ಇವೆರಡೂ ಇಲ್ಲದ್ದೇ ಅಂಥಂ ತಮಸ್ಸು. ಈ ಮೂರನೇ ಭೂಮಿಕೆಯಲ್ಲಿ ತೋರುವ ಶ್ರದ್ಧೆ ಅಂಧಶ್ರದ್ಧೆ. ತೋರಿಕೆಯಲ್ಲಿ ಅದು ಯಾವ ಮಾರ್ಗದ ಶ್ರದ್ಧೆಯನ್ನಾದರೂ ಅನುಕರಿಸಬಹುದು. ಆದರೂ ನಿಜವಾಗಿ ಅದು ಕಗ್ಗತ್ತಲೆಯೆ. ಇಂದಿಗೊಂದು ಶತಮಾನದ ಹಿಂದೆ ಭರತಖಂಡದ ಜನಜೀವನವು ಈ ಮೆಟ್ಟಲಿಗೆ ಇಳಿದಿತ್ತು. ಅದರಲ್ಲಿ ಶಕ್ತಿಪ್ರಧಾನವಾದ ರಜಃಪ್ರಕೃತಿಯು ಸುಶಿಕ್ಷಿತ ನವಯುವಕರುಂಟಾದಂದಿನಿಂದ ಆ ಜಡತ್ವದಲ್ಲಿ ಚಲನವುಂಟಾಗಿ ನಾಸ್ತಿಕತೆಯೂ ಸಂದೇಹವಾದವೂ ಮೊಳೆತವು. ಬಳಿಕ ಸತ್ತ್ವಪ್ರಧಾನ ಸಾಧಕರಿಂದ ಇಂದಿನ ಪಾರಮಾರ್ಥಿಕ ಶ್ರದ್ಧೆಯು ಕ್ರಮದಿಂದ ಬೆಳೆಯುತ್ತಿರುವದು.

ದೇಶದಲ್ಲಿ ಇನ್ನೂ ಅಸಂಖ್ಯ ಅಂಧಶ್ರದ್ಧಾವಾದಿಗಳಿದ್ದಾರೆ. ಅನೇಕ ನಾಸ್ತಿಕ ಯುವಕರೂ ಇದ್ದಾರೆ. ಇವರ ಜೊತೆಗೆ ತಾತ್ತ್ವಿಕ ಪ್ರಬುದ್ಧರೂ ಹೊರಟಿದ್ದಾರೆ. ಅಂಧಶ್ರದ್ಧೆಯ ದುರ್ಘಟ ಪ್ರತಿಕ್ರಿಯೆಯುಂಟಾಗಿದೆ. ನಾಸ್ತಿಕ ಯುವಕರಿಗೆ ಮಹಾತ್ಮರ ಮತ್ತು ರವೀಂದ್ರರ ಗುಟುಕು ಸಿಗಹತ್ತಿದ್ದರಿಂದ ಅವರ ಪ್ರಕೃತಿಯು ಪಲ್ಲಟಿಸಹತ್ತಿದೆ. ಈ ಸತ್ತ್ವಶುದ್ಧಿಯು ಮುಂದೆ ಬರಲಿರುವ ಉನ್ನತ ಶ್ರದ್ಧೆಯ ಮತ್ತು ಉಚ್ಚಜೀವನದ ಮುಂಗುರುತಾಗಿದೆ.

ರಾಮಕೃಷ್ಣರ ಭಕ್ತಿಯನ್ನು ರವೀಂದ್ರರು ಹಾಡಿ ತೋರಿಸಿದ್ದರೆ, ವಿವೇಕಾನಂದರ ವೇದಾಂತವನ್ನು ಮಹಾತ್ಮರು ಮಾಡಿತೋರಿಸುತ್ತಿರುವ ಕಾಲವಿದು. ಅವರ ಮಾಧುರ್ಯ, ಇವರ ಗಾಂಭೀರ್ಯ ಈ ತ್ಯಾಗ ಭೋಗದ ನಿಧಿಯು ಇಂದಿನ ನವಸಂತಾನಕ್ಕೆ ಅನಾಯಾಸ ಪ್ರಾಪ್ತವಾಗಲಿರುವದು. ಅರವಿಂದರ ಯೋಗವು ಈ ಭೂಮಿಕೆಯಿಂದ ಮುಂದೆ ಮೊದಲಾಗುವದು.

ದೇವರಿದ್ದಾನೋ ಇಲ್ಲವೋ? ಆತ್ಮವು ಅಮರವೋ ಅಲ್ಲವೋ? ಪರಮಾತ್ಮನೂ ಪರಬ್ರಹ್ಮವೂ ಒಂದೆಯೋ ಭಿನ್ನವೋ ? ನಿಜವಾದದ್ದು ದ್ವೈತವೋ ಅದ್ವೈತವೋ ? ಮುಂತಾದ ವಿಷಮ ಪ್ರಶ್ನೆಗಳೊಡನೆ ಗುದ್ದಾಡುವದಕ್ಕೆ ಅರವಿಂದರ ಯೋಗದಲ್ಲಿ ಆಶ್ರಯವಿಲ್ಲ. ಜನನ ಮರಣ ರಾಟಲದಿಂದ ಪಾರಾಗುವದೂ ಭವರೋಗವನ್ನು ನೀಗಿಸಿಕೊಂಡು ಪರಾತ್ಪರದಲ್ಲಿ ಲಯವಾಗಬೇಕೆನ್ನುವದೂ ಅರವಿಂದರ ಯೋಗದ ಸಮೀಪಕ್ಕೆ ಸುಳಿಯವು.

ವಿಶ್ವವು ಅಂಧಚಕ್ರವಾಗಿರದೆ ಸಜ್ಞಸಂಚಲನವಾಗಿದೆ. ಅದು ಏಕಮೇವಾದ್ವಿತೀಯವಾಗಿ ಇದ್ದೂ ಕೂಡ ತಾನೇ ಬಹುತ್ವವನ್ನು ತಾಳಿದೆ. ಮನುಷ್ಯನಿಗೆ ತಾನು ಅಜ್ಞನೂ ಅಸಮರ್ಥನೂ ಇರುವೆನೆಂಬ ಅನಿಸಿಕೆಯು ಅವನ ಪ್ರಕೃತಿಯ ಅಶುದ್ಧಿಗೆ ಅನುರೂಪವಾಗಿದೆ. ಅವನ ಸತ್ತ್ವವು ಸಂಪೂರ್ಣ ಶುದ್ಧವಾದರೆ ಅವನ ಪರಾಪ್ರಕೃತಿಯಲ್ಲಿ ಅಹಂಕಾರರಹಿತವಾದ ಅಕ್ಷಯ ಜ್ಞಾನಶಕ್ತಿಗಳ ಸೆಲೆಯೊಡೆಯು

ವದು. ಆಗ ಅವನು ಅರಿತರಿತು ಬರುವ ಅವ್ಯರ್ಥ ಪ್ರೇರಣೆಯ ಆಗರವಾಗುವನು. ನಿರರ್ಥವೂ ಅನರ್ಥವೂ ಅವನ ರಾಜ್ಯದಲ್ಲಿರಲಾರವು. ಅವನ ಪ್ರೇರಣೆಗೆ ಪ್ರತಿಭಟಿಸಿ ಪ್ರತಿಕೂಲವಾಗುವ ವ್ಯಕ್ತಿಗಳೂ ಶಕ್ತಿಗಳೂ ಉಳಿಯಲಾರವು. ಅವನಿಗೆ ಆನಂದದ ಹೊರತು ಅನ್ಯ ಸಂಪರ್ಕವಿಲ್ಲ. ಒಟ್ಟಿಗೆ ಇವನೊಬ್ಬನು ವಿಶ್ವೇಶ್ವರಿಯ ಅಜೇಯ ಸ್ವಯಂ ಸೇವಕನು. ಇವನೇ ಅರವಿಂದರೆನ್ನುವ ಪೂರ್ಣಯೋಗಿ. ಈ ಅವಸ್ಥೆಗೆ ಬರುವದಕ್ಕೆ ಮನುಷ್ಯನಿಗೆ ಅವನ ಪರಂಪರಾ ಪ್ರಾಪ್ತವಾದ ಪ್ರಕೃತಿಗತ ಅಶುದ್ಧಿಯೇ ಅಂತರಾಯವಾಗಿದೆ. ಇದಕ್ಕೆ ಉಪಾಯವೆಂದರೆ ವಿಶ್ವಸಂಚಾಲಕ ಮಹಾಶಕ್ತಿಗೆ ಅರಿತರಿತು ಆಧೀನವಾಗುವದೊಂದು; ಮತ್ತು ಆ ಶಕ್ತಿಯ ಕುಡಿಯೇ ಆಗಿ, ನಮ್ಮೊಳಗಡಗಿರುವ ಸಂಕಲ್ಪಶಕ್ತಿಯೆಂಬುದನ್ನು ನಮ್ಮ ಪ್ರಾಕೃತಿಕ ಸ್ವಭಾವದ ಪ್ರತಿಪಕ್ಷಿಯನ್ನಾಗಿ ಎಬ್ಬಿಸಿ ನಿಲ್ಲಿಸುವದು ಇನ್ನೊಂದು; ಇವೆರಡರ ಸರ್ವಾಂಗೀಣ ಪ್ರಯೋಗದಿಂದ ತಾನು ಆ ಮಹಾಮಾತೆಯ ದಿವ್ಯಕರ್ಮಿಯಾದ ಅಜೇಯ ಸೇವಕನಾಗುವದೇ ತನ್ನ ಜೀವನೋದ್ದೇಶವೆಂಬ ನಿಜಾಕಾಂಕ್ಷೆ ಮೂರನೆಯದಂ. ಸಮರ್ಪಣ, ಸಂಕಲ್ಪ, ನಿಜಾಕಾಂಕ್ಷೆ ಇವೇ ಈ ಪೂರ್ಣಯೋಗದ ಸಾರ್ವಭೌಮ ಮಹಾವ್ರತಗಳು. ಸಮಸ್ತ ಮಾನವ ಕೋಟಿಯು ದಿವ್ಯಾನಂದದ ಅಧಿಕಾರಿಯಾಗ ಬೇಕೆಂಬುದೇ ಈ ಯೋಗದ ಧ್ಯೇಯವು.*

ಜ. ಕ. ೧೦-೧೦ ಸಪ್ಟಂಬರ ೧೯೩೨

## ೨. ಅರವಿಂದರು ಹೊಸದೇನು ಹೇಳಿದರು ?

( ೧೫ ಆಗಸ್ಟ ೧೯೩೪ )

ಶ್ರೀ ಅರವಿಂದರು ಹೊಸದೇನು ಹೇಳಿದರೆಂಬುದನ್ನು ವಿವರಿಸುವ ಮೊದಲು ಈಗ ದೇಶದಲ್ಲಿ ಅಧ್ಯಾತ್ಮದ ಹೆಸರಿನಿಂದ ಏನೇನಂ ನಡೆದಿರುವದೆಂಬುದನ್ನು ವಿವೇಚಿಸು ವದಂ ಅವಶ್ಯವೆಂದು ನನಗೆ ತೋರುತ್ತದೆ. ಧರ್ಮದ ಹೆಸರಿನಿಂದ ಸರ್ವತ್ರ

---

* ಪೂರ್ಣಯೋಗದ ಸಂಪೂರ್ಣಸಾಧನ ಪದ್ಧತಿಯನ್ನು ಸ್ವಲ್ಪದರಲ್ಲಿ ಅರಿಯಬೇಕೆನ್ನುವವರು ಅರವಿಂದ ಯೋಗಿಗಳು ಬರೆದ ನಾಲ್ಕು ಪುಸ್ತಕಗಳನ್ನು ಅಗತ್ಯವಾಗಿ ಓದಬೇಕು :-

೧. Yoga and its objects ಹಿಂದೀ ಭಾಷಾಂತರ "ಭಗವಾನಕೀ ಲೀಲಾ" ಬಂಗಾಲಿ ಅನುವಾದ "ಲೀಲಾ"

೨. Yogic Sadhana ಬಂಗಾಲಿಯಲ್ಲಿ "ಯೌಗಿಕ ಸಾಧನ"

೩. The Mother ಹಿಂದಿಯಲ್ಲಿ 'ಮಾತಾ'

೪. "ಅರವಿಂದ ಮಂದಿರೇ" (ಬಂಗಾಲಿ) ಇದರ ಹಿಂದಿ ಅನುವಾದ "ಅರವಿಂದ ಮಂದಿರಮೆ"

ಇವುಗಳಲ್ಲಿ ಮೊದಲಿನ ಮೂರು ಪುಸ್ತಕಗಳಲ್ಲಿ ಕ್ರಮವಾಗಿ ಪೂರ್ಣಯೋಗದ ಮೂರು ಮಹಾ ವ್ರತಗಳ ಪೂರ್ಣವಿವರಣೆಯಿದೆ. ನಾಲ್ಕನೆಯದರಲ್ಲಿ ಪ್ರತ್ಯಕ್ಷ ಅರವಿಂದರಿಗೆ ಈ ವಿಷಯದಲ್ಲಿ ಕೇಳಿದ ನಾನಾ ಪ್ರಶ್ನೆಗಳ ವಿಸ್ತಾರವಾದ ಉತ್ತರಗಳಿವೆ.

ವಿಚಾರದ ಸಮಾಧಿಯಾಗಿ ಆಚಾರಕ್ಕೆ ಪಟ್ಟ ಬಂದುದನ್ನು ಬೇರೆ ಹೇಳಬೇಕಾಗಿಲ್ಲ. ಅಧ್ಯಾತ್ಮದ ಹೆಸರಿನಿಂದ ದೇಶದ ತುಂಬಾ ಅಲ್ಲಲ್ಲಿ ಗುರೂಪದೇಶದ ವೇದಾಂತಿಗಳ ಚಿಕ್ಕದೊಡ್ಡ ಸಂಸ್ಥೆಗಳ ಜಾಳಿಗೆಯೇ ಹೆಣೆದು ಬಿಟ್ಟಿದೆ. ಅಲ್ಪ ಶಿಕ್ಷಿತರೂ ಸುಶಿಕ್ಷಿತರೊಳಗಿನ ಹಲಕೆಲವರೂ ಇಂಥ ಸಂಸ್ಥೆಗಳಿಗೆ ತಂಡತಂಡವಾಗಿ ಬಲಿಬೀಳುತ್ತಲಿರುತ್ತಾರೆ. "ಗುರೂಪದೇಶವಿಲ್ಲದೆ ಮೋಕ್ಷವಿಲ್ಲ"... ಎಲ್ಲೆಲ್ಲಿ ನೋಡಿದರೆ ಇದೊಂದು ಗುಲ್ಲು. ಕಾಲೇಜುಗಳಲ್ಲಿ ಕೆಲವರೇನೋ 'ಫಿಲಾಸಫಿ'ಯನ್ನು (ತತ್ತ್ವಜ್ಞಾನವನ್ನು) ಅಭ್ಯಾಸ ಮಾಡುತ್ತಿರುವದುಂಟು. ಇಂಥವರಲ್ಲಿ ಕೆಲವರು ಲಾಜಿಕ್ಕು ಮತ್ತು ಸೈನ್ಸು ಇವೆರಡರ ತಿಕ್ಕಾಟದಲ್ಲಿ ತೊಳಲಾಡುತ್ತಿದ್ದರೆ, ಇನ್ನು ಕೆಲವರು "ಅಧ್ಯಾತ್ಮದ ಅನುಭವಕ್ಕೆ ಯಶಸ್ವಿಯಾದ ಸಾಧನ ಪದ್ಧತಿಯು ಗುರುಮುಖದಿಂದಲೇ ಉಪಲಬ್ಧವಲ್ಲದೆ ಪುಸ್ತಕೀಯ ಪದ್ಧತಿಗಳ ಬೆನ್ನು ಹತ್ತಿದರೆ ಅಕಲ್ಪನೀಯ ಅಪಾಯಗಳಿಗೆ ಬಲಿಬೀಳಬೇಕಾಗುವದೊಂದಲ್ಲದೆ ಕಾಲದ ಅಪವ್ಯಯವೂ ಆಗುತ್ತದೆ" ಎಂಬ ಮನವರಿಕೆಗೆ ಬಂದು, 'ಮಹಾರಾಜ'ರೆಂಬ ವೇದಾಂತಿಗಳ ಮಠದ ಬಾಯಿಗೆ ಬಿದ್ದುಬಿಡುತ್ತಾರೆ. ಒಟ್ಟಾರೆ ನಮ್ಮ ದೇಶದಲ್ಲಿ "ಹೆಂಗಸಿಗೊಬ್ಬ ಗಂಡನಿರುವಂತೆ ಗಂಡಸಿಗೊಬ್ಬ ಗುರುವಿರಲೇಬೇಕು" ಎಂಬ ವಿಚಾರವು ಆಳತೆಗೆಟ್ಟು ಪ್ರಚಾರವಾಗಿದೆ. ಇದು ನಮ್ಮ ನಾಡಿನ ನರನರಗಳಲ್ಲೆಲ್ಲ ವ್ಯಾಪಿಸಿದೆ. ಅಧ್ಯಾತ್ಮವೆಂದ ಕೂಡಲೆ ಮೊಟ್ಟಮೊದಲು ಗುರೂಪದೇಶದ್ದೇ ಪ್ರಸ್ತಾಪ. "ಗುರುಗಳೆಂಬವರು ನಿಮಗೆ ಹೇಳಿಕೊಟ್ಟದ್ದಾದರೂ ಏನು ?" ಎಂದು ಇಂಥವರಿಗೆ ಕೇಳಲು ಅದಕ್ಕೆ ಅವರು ಹೇಳುವದೇನಂದರೆ "ಇಷ್ಟ ಮಂತ್ರವನ್ನು ಶ್ವಾಸದ ಕೂಡ ಜೋಡಿಸುವ ಪದ್ಧತಿಯನ್ನು ಗುರುಗಳು ಹೇಳಿಕೊಡುತ್ತಾರೆ. ಬರೇ ಮಂತ್ರಜಪದಿಂದ ಏನೂ ಅನುಭವ ಬರಲಾರದು. ಮಂತ್ರದ ಜೊತೆಗೆ ಮುದ್ರಾಪದ್ಧತಿಯನ್ನೂ ಕಲಿಸಿಕೊಡುತ್ತಾರೆ. ಅನುಭವದ ನೆಲೆ-ಕಲೆಗಳೆಂದರೆ ಇವೇ. ಇವುಗಳನ್ನು ಬಿಟ್ಟು ಬರೇ ಮಂತ್ರಜಪದಿಂದ ಏನೇನೂ ಲಾಭವಿಲ್ಲ." ಇದೇ ಗುರೂಪದೇಶದ ಗುಟ್ಟು. "ಶ್ವಾಸಗೀಸಗಳಿಂದ ನಿಮಗೆ ಬಂದ ಅಂಥ ಅನುಭವವಾದರೂ ಏನು ?" ಎಂದು ಕೇಳಿದರೆ "ವಿವಿಧ ವರ್ಣದ ಪ್ರಕಾಶಗಳು ಕಾಣಿಸುತ್ತವೆ. ಮತ್ತು ಬೇರೆ ಬೇರೆ ಬಗೆಯ ನಾದಗಳು ಕೇಳಿಸುತ್ತವೆ. ಈ ನಾದ ಮತ್ತು ಪ್ರಕಾಶಗಳ ಮೇಲೆ ಚಿತ್ತವನ್ನು ಏಕಾಗ್ರಗೊಳಿಸುತ್ತ ಹೋದರೆ ಮುಂದೆ ಜ್ಞಾನವೂ ಮೋಕ್ಷವೂ ಲಭಿಸುವವು" ಎಂಬ ಉತ್ತರವು ಬರುತ್ತದೆ. ಗುರೂಪದೇಶದ ಮೇಲೆ ಆಶೆ ಹುಟ್ಟುವದರ ನಿಜವಾದ ಕಾರಣವು ಇದೇ.

ಏನೇ ಇರಲಿ, ಗುರುವೆಂಬವನು ನಿಜವಾದ ಸಾಧಕನಿದ್ದುದಾದರೆ ಅವನ ಬೆನ್ನು ಹತ್ತಿದವನಿಗ ಇಷ್ಟಾದರೂ ಲಾಭವಾಗಬಹುದು. ಆದರೆ ಗುರುಗಳೆಂಬವರ ಸುತ್ತುಮುತ್ತು ಅಂತರಂಗ ಶಿಷ್ಯರದೊಂದು ತಂಡವಿರುತ್ತಿದ್ದು, ಅವರೂ ಇವರೂ ಕೂಡಿ ಜನರಿಗೆ ಮರುಳು ಮಾತು ಹೇಳಿ, ಮನವೊಲಿಸಿ ತಮ್ಮದೊಂದು ಸಂಪ್ರದಾಯವನ್ನು ಬೆಳಸಿ, ಬಂದ ದುಡ್ಡಿನಿಂದ ವಿಲಾಸೋಪಭೋಗದಲ್ಲಿ ಮಗ್ನರಾಗಿರುತ್ತಿರುವ

ಉದಾಹರಣೆಗಳೇ ಹೆಚ್ಚು. ಇಂಥವರ ಮಾತು ಒತ್ತಟ್ಟಿಗುಳಿಯಲಿ, ಯಾಕೆಂದರೆ ಅಸತ್ಯಕ್ಕೆ ಒಂದಿಲ್ಲೊಂದು ದಿನ ಅಳಿಗಾಲವು ಇದ್ದೇ ಇದೆ. ಇಂಥ ಪಂಥಗಳು ತಮ್ಮ ಪಾಪದಿಂದ ತಾವಾಗಿ ಅಳಿಯುವವರಿರುವದರಿಂದ ನಾವೇನೂ ಇವುಗಳ ಉತ್ಪಾಟನದ ಸಲುವಾಗಿ ಬಹಳವಾಗಿ ಮನಸ್ಸಿನ ಮೇಲೆ ತೆಗೆದುಕೊಳ್ಳಬೇಕಾಗಿಲ್ಲ.

ಇನ್ನು ನಿಜ ಸಾಧಕರಾದ ಗುರುಗಳ ಕಡೆಗೆ ಹೊರಳುವಾ. ನಾವು ಯಾವುದೇ ಒಂದು ವಿಷಯವನ್ನು ಸಾಧಿಸಿಕೊಳ್ಳ ಹೊರಟರೆ ಆ ಹಾದಿಯಲ್ಲಿ ನಮಗೆ ಆ ವಿಷಯ ದೊಳಗಿನ ತಜ್ಞರ ಸಹಾಯವು ಸಿಕ್ಕರೆ ನಮ್ಮ ಕೆಲಸವು ಬಹಳ ಹಗುರಾಗುವದೇನೋ ತುಂಬಾ ನಿಜ. ಆದರೆ ಈಗ ಲೋಕದಲ್ಲಿ ಯಾವ ವಿಷಯದಲ್ಲಿಯೂ "ಕೇವಲ ಪ್ರಾಮಾಣಿಕ"ರೆಂಬವರು ಸಿಗುವದೇ ದುಸ್ತರವಾಗಿದೆ. ಎಲ್ಲಿ ನೋಡಿದರಲ್ಲಿ ಸ್ವಾರ್ಥ ಸಾಧನೆಯ ಕಪಟಯಜ್ಞವೇ ಯಜ್ಞ. ಹೀಗಿರುವದರಿಂದ ಇಂಥವರನ್ನು ಒರೆಗೆ ಹಚ್ಚಿ ಹಚ್ಚಿ ನೋಡುತ್ತ ಹೋಗುವದರಲ್ಲಿ ಕಾಲದ ಅಪವ್ಯಯ ಮತ್ತು ನೈರಾಶ್ಯ ಇವೇ ನಮ್ಮ ಪಾಲಿಗೆ ಬರುತ್ತವೆ. ಅಥವಾ ಗುರುಗಳ ವಾಕ್ಚಾತುರ್ಯದಲ್ಲಿ ನಮ್ಮ ವ್ಯಕ್ತಿತ್ವವೇ ಲೋಪವಾಗಿ "ಹೀಜ್ ಮಾಸ್ಟರ್ಸ ವ್ಹಾಯಿಸ್" ಆಗುವ ಪ್ರಸಂಗ ಬರುತ್ತದೆ. ಗುರುಮಾರ್ಗದಲ್ಲಿ ಇಂಥದೊಂದು ದೊಡ್ಡ ಉತ್ಪಾತವಿದೆ. ಆದುದರಿಂದ ಒಮ್ಮೊಮ್ಮೆ ನಮ್ಮ ಮನಸ್ಸಿನಲ್ಲಿ "ಗುರುವಿಲ್ಲದೆ ಕೇವಲ ಗ್ರಂಥ ಸಹಾಯದಿಂದಾಗಲಿ ಭಗವದಾಶ್ರಯದಿಂದಾಗಲಿ ನಮಗೆ ಸಿದ್ಧಿಯು ಯಾಕೆ ಲಭಿಸಲಾರದು ?" ಎಂಬ ಪ್ರಶ್ನವು ಬರುತ್ತದೆ. ಆದರೆ ಆದರ ಜೊತೆಗೇ ಇನ್ನೊಂದು ಸಂದೇಹವೂ ತೋರುವದು. ಅದೇನೆಂದರೆ "ನಮ್ಮ ತರ್ಕಕ್ಕೆಲ್ಲಾ ಬೇಕಾದ್ದು ಸರಿಯೆನಿಸುತ್ತದೆ. ಆದರೆ ವಾಸ್ತವ ಸ್ಥಿತಿಯು ಏನಿದಿಯೋ ಯಾರು ಬಲ್ಲರು ? ಮಾನವರು ಯಾವಾಗಲೂ ಸಂಘಬದ್ಧರಾಗಿರಬೇಕೆಂಬುದೇ ಸೃಷ್ಟಿಯ ನಿಯಮವಿದ್ದಂತೆ ಕಾಣುತ್ತದೆ. ಈ ನಿಯಮವನ್ನು ಉಳಿಸುವದಕ್ಕಾಗಿ ಅಧ್ಯಾತ್ಮ ಸಿದ್ಧಿಯು ಅನ್ಯ ವ್ಯಕ್ತಿಯಿಂದಲೇ ಲಭಿಸಬೇಕೆಂಬ ಯೋಜನೆಯೇನಾದರೂ ಸೃಷ್ಟಿಯ ಉದ್ದೇಶದಲ್ಲಿರ ಬಹುದೇ ?" ಎಂಬ ಸಂದೇಹವೊಂದು ನಮ್ಮನ್ನು ಪೀಡಿಸಿಯೇ ಪೀಡಿಸುವದು. ಆದರೆ ಲೋಕೋತ್ತರ ಪುರುಷರಾದ ಮೊಸೆಸ್, ಸತ್ಯಕಾಮ, ಬುದ್ಧದೇವ, ಮಹಮ್ಮದ ಪೈಗಂಬರ ಮತ್ತು ರಾಮಕೃಷ್ಣ ಪರಮಹಂಸ ಇವರಾರಿಗೂ ಸಾಕ್ಷಾತ್ಕಾರಕ್ಕೆ ಗುರುಗಳು ಕಾರಣವಾಗಲಿಲ್ಲವೆಂಬುದನ್ನು ನೆನೆಸಿದರೆ ಈ ಸಂದೇಹದ ನಿರಸನವಾಗುವದು. ಒಟ್ಟಿಗೇನು ? ಸಹಾಯವು ಸಿಕ್ಕರೇನು ನಷ್ಟವೆ ? ಆದರೆ ಸಿಗದಿದ್ದರೂ ಕಷ್ಟನಷ್ಟದಿಂದಲೇ ಆಗವೊಲ್ಲದೇಕೆ. ಸಿದ್ಧಿಯು ಲಭಿಸುವದರಲ್ಲಿ ಸಂದೇಹವಿಲ್ಲವೆಂದಂತಾಯಿತು. ಜೈನಶಾಸ್ತ್ರದಲ್ಲಿಯಂತೂ "ತತ್ತ್ವಾರ್ಥ ಶ್ರದ್ಧಾನಂ ಸಮ್ಯಗ್ದರ್ಶನಂ, ತನ್ನಿಸರ್ಗಾದಧಿಮಾಧ್ವಾ" ಎಂಬ ಸೂತ್ರಗಳಲ್ಲಿ "ಸಮ್ಯಗ್ದರ್ಶನವು ನೈಸರ್ಗಿಕವಾಗಿಯಾಗಲಿ ಪರೋಪದೇಶದಿಂದಾಗಲಿ ಲಭಿಸುತ್ತದೆ" ಎಂದು ಎರಡೂ ವಿಧಗಳನ್ನು ಸ್ಪಷ್ಟವಾಗಿ ಕಾಣುವೆವು.

ಮತ್ತೊಂದು ಮಾತೇನೆಂದರೆ, "ಶ್ವಾಸ, ಮುದ್ರಾ" ಮುಂತಾದವುಗಳ ಹೊರತು ಮತ್ತೆ ಬೇರೆ ಮಾರ್ಗವು ನಿಜವಾಗಿಯೇ ಇಲ್ಲವೇ? ಎಂಬ ಪ್ರಶ್ನದ ಉತ್ತರವೂ ಮೇಲಿನ ಮಾತಿನಲ್ಲಿ ಬಂದಂತೆಯೇ ಆಗಿದೆ. ಯೋಗಶಾಸ್ತ್ರದ ಅತ್ಯಂತ ಪ್ರಮುಖ ಗ್ರಂಥವಾದ "ಪಾತಂಜಲ ದರ್ಶನ"ದಲ್ಲಿಯೇ ಪ್ರಾಣಾಯಾಮದ ಹೊರತು ಬಹುವಿಧದ ಬೇರೆ ಸಾಧನಗಳ ಸಫಲತೆಯ ವಿಷಯದಲ್ಲಿ ಸ್ಪಷ್ಟಾಭಿಪ್ರಾಯಗಳಿರು ವಾಗ, ಕಾಲಕ್ರಮದಲ್ಲಿ ಇಂಥ ಏಕದೇಶೀಯ ವಿಚಾರಗಳು ಹೇಗೆ ಪ್ರಚಾರವಾದವೊ ಏನೋ।

ಇದೆಲ್ಲ ಸದ್ಯಃಸ್ಥಿತಿಯ ವಿವರಣೆಯಾಯಿತು. ಇನ್ನು ಅರವಿಂದರ ಸಿದ್ಧಾಂತ ವನ್ನು ನೋಡುವಾ. "ದೇವನು ಸರ್ವಸಮರ್ಥನಿದ್ದಾನೆ; ಆತನನ್ನು ಆಶ್ರಯಿಸಿದರೆ ಸರ್ವಸಿದ್ಧಿಯು ಅಂಗೈಯಲ್ಲಿ ಎಂದು ಧಾರಾಳವಾಗಿ ವಾದಿಸುವವರು ವಿಪುಲವಾಗಿ ಸಿಗುವರು. ಆದರೆ ಸ್ವಾನುಭವದಿಂದ ಹೀಗೆ ನಿರ್ಧಾರವಾಗಿ ಹೇಳುವವರಾರು? ನಾನು ಹೇಳಿದ್ದೇ ಶಾಸ್ತ್ರ, ಅದರಂತೆ ನಡೆಯಿರಿ. ನಿಮಗೆ ಸಿದ್ಧಿಯು ಕಟ್ಟೇ ಇಟ್ಟಿದೆ. ಎಂದು ಸಾಧಕರಿಗೆ ಕೈಗೊಡುವ ಧೈರ್ಯಶಾಲಿಗಳು ಎಲ್ಲಿ ಸಿಗುವರು? ಬಾಯಿ ಮಾತಿನ ರಾಜ್ಯಕ್ಕೂ ಕಾರ್ಯರಂಗದ ಕ್ಷೇತ್ರಕ್ಕೂ ಬಹಳ ಅಂತರವಿದೆ. "ಯಾವ ಗುರುವೂ ಬೇಡ, ಜಗದೀಶ್ವರನ ಗುರುಹಸ್ತವು ನಿನ್ನ ತಲೆಯ ಮೇಲೆ ಸದಾಸರ್ವದಾ ಕಂಗೊಳಿಸುತ್ತದೆ. ಹೊರಡು, ಆ ಮಹಾಗುರುವನ್ನು ಆಶ್ರಯಿಸು. ನಿನಗೆ ಸಿದ್ಧಿಯು ತಪ್ಪದೆ ಲಭಿಸುವದು" ಎಂದು ಅಭಯಕೊಡುವವರು ಯಾರು? ಹೊಣೆಗಾರಿಕೆಯಿಲ್ಲದ ಮಾತುಗಳನ್ನು ಬಹು ಸುಲಭವಾಗಿ ಆಡಬಹುದು. ಆದರೆ ಗದ್ದರಿಸಿ ಗಂಡುದನಿಯಿಂದ ಚೇತರಿಸುವವರು ಸಿಗುವರೇನು?

ಅರವಿಂದರ ಗಂಭೀರ ಗರ್ಜನೆಯು ಇಲ್ಲಿ ಮೊಳಗುತ್ತಿದೆ: "ಸಮಸ್ತ ಜಗತ್ತನಾಳುವ ಮಹಾಶಕ್ತಿಗೆ ಕನಿಷ್ಠಪಕ್ಷಕ್ಕೆ ನಿನ್ನಷ್ಟಾದರೂ ಬುದ್ಧಿಯಿದೆ. ಆ ದೇವ ದೇವನೇ ನಿನಗೆ ಗುರುವು. ಆತನಲ್ಲದೆ ಅನ್ಯ ಮಾನವನಾವನಿಗಾಗಲಿ ಅಥವಾ ಬೇರೆ ಲೋಕದ ದೇವತೆಗಳಿಗಾರಿಗಾಗಲಿ, ಆಧೀನನಾಗಬೇಡ. ಆತನನ್ನು ಆಶ್ರಯಿಸುವದರ ಹೊರತು ನಿನಗೆ ಯಾವ ಕೃತ್ರಿಯ ಸಾಧನೆಯೂ ಬೇಡ, ರೇಚಕ ಬೇಡ, ಕುಂಭಕ ಬೇಡ, ಜಪತಪಗಳಾವವೂ ಬೇಡ, ಕೇವಲ ಆತನ ಮೇಲೆ ನಿರ್ಭರತೆಯೊಂದಿರಲಿ. ಸರ್ವಯೋಗಿಗಳ ಫಲವು ಇದರ ಮುಂದೆ ಕ್ಷುಪದಾರ್ಥ, ಮಾನವನು ತನ್ನ ಅಲ್ಪಶಕ್ತಿ ಯನ್ನು ಅವಲಂಬಿಸಿರುವ ಸಾಧನಗಳಿಗೆ ಶರಣಾಗಿ ಅತಿಯತ್ನದಿಂದ ಕ್ವಚಿತ್ತಾಗಿ ಅವುಗಳ ಪರಿಮಿತ ಫಲವನ್ನು ಪಡೆಯಬಹುದು. ಆದರೆ ದೇವದೇವನ ದಿವ್ಯ ಶಕ್ತಿಗೆ ಒಪ್ಪಿಸಿದ ಸಾಧನದ ಪರಿಣಾಮವು ಅಪರಿಮಿತವಾಗಿರುತ್ತದೆ.

"ನನಗೆ ಲಕ್ಷ ಲಕ್ಷ ಶಿಷ್ಯರು ಬೇಕಾಗಿಲ್ಲ. ಸಂಪೂರ್ಣ ಸರ್ವಸಮರ್ಪಣ ಮಾಡಿದ ಆಧ್ಯಾತ್ಮ ಯೋಗಿಗಳ ಒಂದು ನೂರು ಜನರಾದರೆ ಅಂದಿಗೆ ಜಗತ್ತಿನ

ಅಗಾಧವಾದ ಬದಲಾವಣೆಯಾಗುವದು. ಪ್ರಚಲಿತ ಗುರುಪದ್ಧತಿಯ ಮೇಲೆ ನನಗೆ ವಿಶ್ವಾಸವಿಲ್ಲ. ಅದು ನಿರ್ನಾಮವಾಗಿ ಹೋಗಬೇಕಾಗಿದೆ."

"ಹೀಗೆಂದೊಡನೆ : "ಅರವಿಂದರು ಹೊಸದೇನು ಹೇಳಿದರು ? ಎಲ್ಲಾ ಹಿಂದಿನವರು ಹೇಳಿದ್ದೇ ಇದೆ. ಈಶ್ವರನು ಸರ್ವಸಮರ್ಥನೆಂದು ಹಿಂದೆ ಯಾರೂ ಹೇಳಿಯೇ ಇಲ್ಲವೇನು ? "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾಂ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥" ಎಂದು ಗೀತೆಯಲ್ಲೇ ಹೇಳಿದೆಯಲ್ಲ । ಇದರಲ್ಲಿ ಅರವಿಂದರದೇನು ಹೊಸದು ಎಂಬ ಪ್ರಶ್ನವು ಇದ್ದೇ ಇದೆ.

ಹೌದು, ಅರವಿಂದರ ಮಾತು ಹಳೆಯದೂ ಹೌದು, ಹಾಗೆಯೇ ಅದು ಹೊಸದೂ ಹೌದು. ರಾಮಾಯಣದಲ್ಲಿ ವಿಮಾನದ ಕಥೆಯು ಇದ್ದೇ ಇತ್ತು. ಆದರೆ ಅದನ್ನು ಈ ಕಾಲದಲ್ಲಿ ನಿರ್ಮಿಸಿದವರ ಬೆಲೆಯೆಷ್ಟು ? ಭಾಸ್ಕರಾಚಾರ್ಯನ ಸಿದ್ಧಾಂತ ಶಿರೋಮಣಿಯಲ್ಲಿ ಗುರುತ್ವಾಕರ್ಷಣ ಶಕ್ತಿಯ ಬಗೆಗೆ ಹೇಳಿದ್ದು ಆ ಗ್ರಂಥದಲ್ಲಿ ಇಂದಿಗೂ ಬಿದ್ದುಕೊಂಡೇ ಇದೆ. ಆದರೆ ಅದನ್ನೇ ಕಂಡು ಬಳಸಿದ ನ್ಯೂಟನ್ನನ ಬೆಲೆಯೆಷ್ಟು ?" ಎಂಬ ತತ್ತ್ವವು ಇಂದಿಗೂ ಪುರಾಣಿಕ ಹಾಗೂ ಕೀರ್ತನಕಾರ ಬಾಯಿಯಲ್ಲಿ ಧಾರಾಳವಾಗಿ ಹೊರಸೂಸುತ್ತಲಿದೆ. ಆದರೆ ಅದನ್ನು ಕಂಡುಂಡು ಎದೆಗೆ ಕೈಹಚ್ಚಿ ಹೇಳುವವರ ಬೆಲೆಯು ಬಹಳ ಕಡಿಮೆಯಲ್ಲವೆ !!! ಅರವಿಂದರ ಮಾತು ಹೀಗೆ ಹಳೆಯದೇ ಹೌದು. ಆದರೆ ಇನ್ನು ಅದರಲ್ಲಿ ಹೊಸದೇನು ?

ಹಿಂದಿನ ಭಕ್ತಿಯೋಗವು ಬರಿ ಆವೇಶ ವ್ಯಾಕುಲತೆಗಳ ರಂಗಭೂಮಿಯಾಗಿತ್ತು. ದೇವದೇವನಿಗಾಗಿ ಕಣ್ಣೀರು ಸುರಿದಷ್ಟೂ ಪ್ರಗತಿಯು ಮುಂದುವರಿದ ಲಕ್ಷಣ ವಾಗಿತ್ತು. ಸ್ಮೃತಿಗೆಟ್ಟು ಬೀಳುವುದು ಕೊನೆಯ ಸ್ಥಿತಿಯಾಗಿತ್ತು. ಈ ಉದ್ರೇಕ ರಾಜ್ಯಕ್ಕೆ ಅರವಿಂದರ ಮಾರ್ಗದಲ್ಲಿ ಸ್ಥಳವಿಲ್ಲ. ಕೇವಲ ಧೀರ ನಿರೀಕ್ಷೆ ಬೇಕು. ಸರ್ವಪತನಗಳಲ್ಲಿಯೂ ಕಲ್ಯಾಣ ಶ್ರದ್ಧೆಯಿರಬೇಕು. ವಿಗತಿ ಕೂಡ ಪ್ರಗತಿಪರವೇ ಎಂಬ ಮನವರಿಕೆಯೇ ಕಲ್ಯಾಣಶ್ರದ್ಧೆ. ಈ ಆತ್ಮವಿಶ್ವಾಸ, ಆ ಸರ್ವಸಮರ್ಪಣ ಇವೆರಡರ ಸಮನ್ವಯವು ಅರವಿಂದರ ಯೋಗದ ಮುಖ್ಯ ಮಂತ್ರವು. ಭಕ್ತಿ ವೇದಾಂತಗಳ ಏಕರಸವಿದರಲ್ಲಿದೆ, ಅಲ್ಲದೆ ಹಿಂದಿನ ಯೋಗಗಳಲ್ಲಿ ವೈಯಕ್ತಿಕ ಆನಂದ ಮೋಕ್ಷಗಳ ಮೋಹಿನೀ ಮಂತ್ರವಿತ್ತು. ಆದರೆ ಅರವಿಂದರ ಯೋಗವು ಸಮಸ್ತ ಮಾನವಕೋಟಿಯ ಉದ್ಧಾರ ಮತ್ತು ಸುಖಶಾಂತಿಗಳ ಸಲುವಾಗಿ ಇದೆ.

ಇದನ್ನು ಕೇಳಿ ಹಲವರು ಹೀಗೆನ್ನಬಹುದು : "ತೀರ ಪೂರ್ವಕಾಲದ ಋಷಿ ಗಳೂ ಕೂಡ ಆವೇಶ ವ್ಯಾಕುಲತೆಗಳ ಸ್ಪರ್ಶವಿಲ್ಲದ ಧೀರರಾಗಿದ್ದರು 'ಇತಿ ಶುಶ್ರುಮ

ಧೀರಾಣಾಂ' ಎಂದು ಶ್ರುತಿಗಳು ಸಾರುತ್ತವೆ. ವಸುಧೈವ ಕುಟುಂಬಕರಾಗಿದ್ದರು. ಅಂದಮೇಲೆ ಈ ಮಾತೂ ಅರವಿಂದರಲ್ಲೇನೂ ಹೊಸದಲ್ಲ.

ಹಾಗಾದರೆ ಇವರೊಡನೆ ನಾವೂ ಅದೇ ಅನ್ನೋಣ– "ಅರವಿಂದರು ವೇದೋಪ ನಿಷತ್ತಿನ ಕಾಲದ ಒಬ್ಬ ಹಳೆಯ ಋಷಿಗಳೇ ಸರಿ" The power that governs the world is at least as wise as you, God himself is Guru. ಜಗತ್ತನ್ನಾಳುವ ಶಕ್ತಿಯು, ನಿಕೃಷ್ಟ ಪಕ್ಷಕ್ಕೆ ನಿನ್ನಷ್ಟಾದರೂ ಬುದ್ಧಿಯುಳ್ಳದ್ದಿದೆ. ದೇವದೇವನೇ ಗುರು. "ಸ ಪೂರ್ವೇಷಾಮಪಿ ಗುರುಃ" ಪಾತಂಜಲ. ಆತನೇ ಸರ್ವ ಪೂರ್ವಿಕರ ಗುರುವು.

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ

ಜ. ಕ. ೧೨-೯ ಅಗಸ್ಟ ೧೯೩೪

## ೩. ಅರವಿಂದ ಯೋಗದಲ್ಲಿ ಹೊಸ ಮಾತಾವುದು ?

ಒಂದು ಮಾತು ಅನುಭವಕ್ಕೆ ಬಂದು ಅದು ಆಚರಣೆಯಲ್ಲಿ ಇಳಿದಾಗ ಅದರ ಮುಂದಿನ ಮಾತು ಕಲ್ಪನೆಗೆ ನಿಲುಕುತ್ತದೆ; ನಾವು ನಿಂತಲ್ಲಿಗಿಂತ ಮುಂದಿನ ಪ್ರಕಾಶವು ನಮ್ಮ ದೃಷ್ಟಿಗೆ ಗೋಚರಿಸುತ್ತದೆ...... ಈ ಮುಂತಾದ ಮಾತುಗಳಲ್ಲೆಲ್ಲ ಒಂದು ಮಹತ್ತರವಾದ ವಿಶ್ವ ನಿಯಮವು ಅಡಕವಾಗಿದೆ. ಅದೇನಂದರೆ– ಜೀವನ ಮತ್ತು ಜ್ಞಾನ ಇವೆರಡರ ಸಂಬಂಧವು ದೀಪ ಮತ್ತು ಅದರ ಬೆಳಕು ಇವುಗಳಂತೆ ಇದೆ. ದೀಪವು ಇನ್ನೂ ಹಿಂದೆ ಇದೆಯೆಂದರೆ ಬೆಳಕು ಅದಕ್ಕಿಂತ ಮುಂದೆಯೇ ಓಡಿರುತ್ತದೆ. ಇದು ತೀರ ಸಾಮಾನ್ಯ ವಿಷಯಗಳಿಗಷ್ಟೇ ಸಂಬಂಧಿಸಿರದೆ ಅತ್ಯಂತ ಮಹತ್ತರವಾದ ಅಧ್ಯಾತ್ಮದಲ್ಲಿ ಕೂಡ ಇದರ ಸತ್ಯತೆಯು ಅಷ್ಟೇ ಕಂಡುಬರುವಂತಹದಾಗಿದೆ.

ವೇದದ ಋಷಿಗಳು ಉಂಡದ್ದಕ್ಕಿಂತ ಇನ್ನೂ ಎಷ್ಟೋ ಹೆಚ್ಚಿಗೆ ಕಂಡದ್ದುಂಟು. ಅವರು ಅಂದು ಕಂಡದ್ದನ್ನು ಉಂಡು ತೀರಿಸಲಿಕ್ಕೆ ಲೋಕಕ್ಕೆ ಇಷ್ಟು ಸಾವಿರ ವರುಷ ಗಳಲ್ಲಿಯೂ ಆಗದೆ ಇದ್ದು, ಇಂದು ಅದರ ಸುಮುಹೂರ್ತವು ಬಂದಿದೆಯೆಂದು ಅರವಿಂದರ ಅಮರವಾಣಿಯು ಉದ್ಘೋಷಿಸುತ್ತದೆ. "The teaching of Sri Aurobindo starts from that of the sages of India"* "ಶ್ರೀ ಅರವಿಂದರ ಬೋಧನವು ಭರತಖಂಡದ ಋಷಿಗಳ ಬೋಧನದಿಂದಲೇ ಆರಂಭ ವಾಗುತ್ತದೆ."

---

* ಈ ಲೇಖನದೊಳಗಿನ ಇಂಗ್ಲೀಷ್ ವಾಕ್ಯಗಳೆಲ್ಲ ಸ್ವತಃ ಶ್ರೀ ಅರವಿಂದರೇ ಇತ್ತೀಚೆಗೆ ಬರೆದ ಪುಸ್ತಕಗಳೊಳಗಿನವು, ಬಂಗಾಲದಲ್ಲಿ ತಮ್ಮ ಹೆಸರಿನ ಹಿಂದೆ ಶ್ರೀ ಎಂದು ಬರೆಯುವ ವಾಡಿಕೆಯಿದೆ. —ಮಧುರಚೆನ್ನ

ವೇದೋಪನಿಷತ್ತುಗಳಲ್ಲಿ 'ವಿಜ್ಞಾನ' ಮತ್ತು 'ಸೂರ್ಯ' ಎಂಬ ಶಬ್ದಗಳಿಂದ ಉಲ್ಲೇಖಿಸಲ್ಪಟ್ಟ ಜ್ಞಾನಕ್ಕೆ ಮುಟ್ಟುವದಿಷ್ಟೇ ಮಾತ್ರ ಇಂದಿನ ಕಾರ್ಯವಾಗಿರದೆ ಅದನ್ನು ಹೊರ ಎಚ್ಚರದವರೆಗೆ ಇಳಿಸುವುದು ಬೇಕಾಗಿದೆಯೆಂದು ಅವರು ಅನ್ನುತ್ತಿದ್ದಾರೆ. "To bring it down is the aim of our yoga."

ವೇದದ ಋಷಿಗಳು ತಮ್ಮ ತಮ್ಮ ಮಟ್ಟಿಗೆ ಒಂದಾನೊಂದು ಮೇಲಿನ ಅವಸ್ಥೆಗೆ ಏರಿ ವಿಜ್ಞಾನಕ್ಕೆ ತಲುಪುದವಕ್ಕೆ ಯತ್ನಿಸಿದರಾದರೂ ಅದನ್ನು ಹೊರ ಎಚ್ಚರದ (Earth consciousness) ವರೆಗೆ ಇಳಿಸಲು ಪ್ರಯತ್ನಿಸಲಿಲ್ಲ. "The Vedic Rishi never attained to super mind for the earth or perhaps did not even make the attempt." ಹೀಗಾಗಿ ಭರತವರ್ಷದ ಅಧ್ಯಾತ್ಮ ಪ್ರಯತ್ನವು ಜಗನ್ಮಿಥ್ಯೆಯೆಂದು ಸಾರುವ ಮಾಯಾವಾದದಲ್ಲಿ ಮುಗಿತಾಯವನ್ನು ಹೊಂದಿಬಿಟ್ಟಿತು. "It was because of this failure that the spiritual effort of India culminated in Mayavada."

ಜೀವನಕ್ಕೂ ಜಗತ್ತಿಗೂ ವಿಮುಖರಾಗಿ ನಿರ್ಲಿಪ್ತ ಅಂತರಾತ್ಮನಲ್ಲಿ ಲಯವಾಗುವದಕ್ಕೆ ಪ್ರಯತ್ನಿಸುವ ಪ್ರಾಚೀನರ ಬೋಧನಕ್ಕಿಂತ ಅರವಿಂದರ ಬೋಧನವು ಎಲ್ಲಿ ಭಿನ್ನವಾಗಿದೆಯೆಂದರೆ ಅಂಥ ಮುಕ್ತತೆಯು ಜಗದ್ಬಾಹ್ಯರಾದಾಗಲೇ ಮಾತ್ರ ಲಭಿಸತಕ್ಕದ್ದಾಗಿರದೆ ಜಗದಂತರ್ವರ್ತಿಯಾಗಿಯೂ ಕೂಡ ಅದನ್ನು ದೊರಕಿಸಿಕೊಡಬಲ್ಲ ಊರ್ಧ್ವತರ ತತ್ತ್ವವೊಂದು ಮಾನವನ ಹೊರ ಎಚ್ಚರದವರೆಗೆ ಇಳಿಯಬಲ್ಲದು. "In the past it has been attempted by a drawing away from the world and a disappearance into the height of the self or spirit, Sri Aurobindo teaches that a descent of the higher principle is possible which will not merely release the spiritual self out of the world but release it in the world."

ಆದರೆ ಇದುವರೆಗಿನ ವಿವರಣೆಯಿಂದ ಪ್ರಾಚೀನ ಕರ್ಮಯೋಗವೇ ಅರವಿಂದರ ಯೋಗವೆಂದು ಅನಿಸಬಹುದು. ಆದರೆ ಇದು ಅದಕ್ಕಿಂತಲೂ ಭಿನ್ನವಾಗಿದೆ. ಪುರಾತನ ಸರ್ವಯೋಗಗಳ ಮೂಲ ತತ್ತ್ವಗಳು ಇದರಲ್ಲಿ ಸಮಾವಿಷ್ಟವಾಗಿದ್ದರೂ ಅವೆಲ್ಲವುಗಳನ್ನು ಮೀರಿದ ತನ್ನದೊಂದು ಸ್ವತಂತ್ರ ವೈಶಿಷ್ಟ್ಯವಿದೆ. ಅರವಿಂದರು ಇದಕ್ಕೆ "ಪೂರ್ಣಯೋಗ"ವೆಂದು ಹೆಸರಿಟ್ಟಿದ್ದಾರೆ. (ಆಗಸ್ಟ ೧೫, ೧೯೩೫)

ಜ. ಕ. ೧೫-೯ ಆಗಸ್ಟ ೧೯೩೫

## ೪. ಶ್ರೀ ಅರವಿಂದರ ಯೋಗದ ನಿಜಸ್ವರೂಪ

"ಹಾ ತಂದೇ, ಹಾ ತಂದೇ !!!" ಎಂದು ಗೋಳಿಡುವ ಉದ್ರೇಕದ ಭಕ್ತಿ ಮತ್ತು "ಸಂಸಾರವು ಸುಳ್ಳಿನ ಸಂತೆ"ಯೆಂದೆನ್ನುವ ಮಾಯಾವಾದದ ವೇದಾಂತ ಇವೆರಡೂ ಅರವಿಂದರಿಗೆ ಮಾನ್ಯವಿಲ್ಲ. ಹೀಗೆಂದ ಬಳಿಕ "ಕರ್ಮಣ್ಯೇವಾಧಿಕಾರಸ್ತೇ" ಎನ್ನುವ ಕರ್ಮಯೋಗವೇ ಅವರು ಪ್ರತಿಪಾದಿಸುತ್ತಿರುವ ನೂತನಯೋಗವಾಗಿರ ಬಹುದೇ ? ಎಂದು ನಮಗೆ ಅನಿಸುವದುಂಟು.

ಕೆಲಮಟ್ಟಿಗೆ ಈ ಮಾತು ನಿಜ; ಆದರೆ ಅವರ ಯೋಗವು ಕೇವಲ ಪ್ರಾಚೀನ ಕರ್ಮಯೋಗವೇ ಅಲ್ಲ. ಅದನ್ನು ಅವರು ಯೋಗಲಬ್ಧಜ್ಞಾನದಿಂದ ಯುಗೋಚಿತ ವಾಗಿ ವಿಸ್ತರಿಸಿದ್ದಾರೆ. "This is the Karma yoga laid down in the Gita as I have developed it for the integral spiritual life" "ಸರ್ವಾಂಗೀಣ ಆಧ್ಯಾತ್ಮಿಕ ಜೀವನದ ಸಲುವಾಗಿ ನಾನು ವಿಸ್ತರಿಸಿದ ಗೀತೋಕ್ತ ಕರ್ಮಯೋಗವಿದು" ಎಂದು ಅವರೇ ಇತ್ತೀಚಿನ ತಮ್ಮ ಪುಸ್ತಕದಲ್ಲಿ ಹೇಳಿದ್ದಾರೆ. ಇದಲ್ಲದೆ–

"It is founded not on speculation and reasoning but on experience" "ಅನುಭವದ ತಳಹದಿಯ ಮೇಲೆ ಇದನ್ನು ಕಟ್ಟಲಾಗಿದೆಯೇ ವಿನಾ ಊಹೆ ಕಲ್ಪನೆಗಳ ಮೇಲೆ ಅಲ್ಲ." ಎಂದೂ ಅವರು ಉದ್ಘೋಷಿಸಿದ್ದಾರೆ.

ಶ್ರೀ ಅರವಿಂದರು ಸರ್ವಯೋಗಗಳ ಅತಿರೇಕಾಂಶಗಳನ್ನು ವರ್ಜಿಸಿ, ಆಯಾ ಯೋಗಗಳ ಸಮುಚಿತ ಅಂಶಗಳನ್ನು ಶೇಖರಿಸಿ, ತಮ್ಮ ಯೋಗಕ್ಕೆ ಮೆರಗು ಹಾಕಿ ದ್ದಾರೆ. ಎಂತಲೇ ಅವರು ತಮ್ಮ ಯೋಗಕ್ಕೆ "ಪೂರ್ಣಯೋಗ" ಎಂದು ಹೆಸರಿಟ್ಟಿ ದ್ದಾರೆ. ಈ ವಿಷಯದಲ್ಲಿ ಅವರು "Synthesis of Yoga" (ಯೋಗ-ಸಮನ್ವಯ) ಎಂಬ ಪ್ರಕಾಂಡ ಗ್ರಂಥವನ್ನೇ ಬರೆದಿದ್ದಾರೆ.

"I have never put any ban on Bhakti. Also I am not conscious of having banned meditation either at any time. I have stressed both bhakti and knowledge in my yoga as well as works, even if I have not given any of them an exclusive importance like Shankara or Chaitanya" "ನಾನು ಭಕ್ತಿಯನ್ನು ಎಂದೂ ಬಹಿಷ್ಕರಿಸಿಲ್ಲ; ಹಾಗೆಯೇ (ಜ್ಞಾನ ಮಾರ್ಗದ) ಧ್ಯಾನವನ್ನು ನಾನು ಎಂದೂ ಬಹಿಷ್ಕರಿಸಿರುವದಾಗಿ ನನಗೆ ಎನಿಸುವದಿಲ್ಲ. ನನ್ನ ಯೋಗದಲ್ಲಿ ಕರ್ಮದಂತೆಯೆ ಭಕ್ತಿ ಮತ್ತು ಜ್ಞಾನಗಳಿಗೂ ಬೆಲೆಯನ್ನಿತ್ತಿದ್ದೇನೆ. ಆದರೆ ಶಂಕರ–ಚೈತನ್ಯರಂತೆ ಅವುಗಳಿಗೆ ನಾನು ಅತಿ ಮಹತ್ವವನ್ನು ಮಾತ್ರ ಕೊಟ್ಟಿಲ್ಲ.

ಭಕ್ತಿಯೋಗದಲ್ಲಿ ಮನುಷ್ಯನಿಗೆ ಕಾಸಿನಷ್ಟೂ ಸಹ ಬೆಲೆಯಿಲ್ಲ; ವೇದಾಂತದಲ್ಲಿ ದೇವನ ಹಣೆಯುಬರೆಹವು ಇದಕ್ಕಿಂತ ಕಿಗ್ಗುಳಕ್ಕೆ ಇಳಿದಿದೆ. ಭಕ್ತಿಮಾರ್ಗದಲ್ಲಿ ಮನುಷ್ಯನು ಈಶನ ಕೈಯೊಳಗಿನ ಹುಲ್ಲುಂಕಡ್ಡಿಯಾದರೆ, ಜ್ಞಾನಮಾರ್ಗದಲ್ಲಿ ಈಶ್ವರನ ಅಗತ್ಯವು ಸಹ ಉಳಿದಿಲ್ಲ. ಇವೆರಡೂ ಮಾರ್ಗಗಳು ಒಂದೊಂದಕ್ಕೆ ಅತಿಮಾತ್ರ ಮಹತ್ವವನ್ನು ಕೊಟ್ಟು, ಇನ್ನುಳಿದುದನ್ನು ಕಃಪದಾರ್ಥವಾಗಿ ಎಣಿಸುತ್ತದೆ. ಈ ಕುಂದು ಕೊರತೆಗಳನ್ನು ತಿದ್ದಿದ್ದು ಅದೆಲ್ಲಿಯಾದರೂ ನಮಗೆ ಪುರಾತನ ಶಾಸ್ತ್ರಗಳಲ್ಲಿ ಲಭಿಸುತ್ತಿದ್ದರೆ ಅದು ಭಗವದ್ಗೀತೆಯಲ್ಲಿಯೇ ಸರಿ, ಅದರಲ್ಲಿ ಜೀವನಿಗೂ ದೇವನಿಗೂ ತಕ್ಕ ಪ್ರತಿಷ್ಠೆಯನ್ನು ಕೊಟ್ಟಿದೆ. "ಯತ್ರ ಯೋಗೀಶ್ವರಃ ಯತ್ರ ಪಾರ್ಥೋಧನುರ್ಧರಃ" ಇವರಿಬ್ಬರೂ ಕೂಡಿದಲ್ಲಿಯೇ ಸಕಲಸಿದ್ಧಿಗಳೆಂದು ಅದು ಸಮರ್ಥಿಸುತ್ತದೆ. ''You are individual God and He is universal God,'' "ನೀನು ವ್ಯಕ್ತಿಗತ ದೇವನಾಗಿರುವೆ; ಆತನು ವಿಶ್ವಗತ ದೇವನಾಗಿರುವನು." ಎಂದು ಶ್ರೀ ಅರವಿಂದಯೋಗಿಗಳು ಪುರಾತನದ ಸಮನ್ವಯ ಸೂತ್ರವನ್ನು ಮಗುದೊಮ್ಮೆ ಲೋಕದ ನಿದರ್ಶನಕ್ಕೆ ತಂದುಕೊಡಲು ಉಜ್ಜುಗಿಸುತ್ತಿರುವರು. ಇಷ್ಟೇ ಅಲ್ಲ, ಆತ್ಮ ಸಂಕಲ್ಪ ಮತ್ತು ಪರಮಾತ್ಮ ಸಂಕಲ್ಪ ಇವೆರಡರ ಅನಿವಾರ್ಯ ಸಾಪೇಕ್ಷ ಸಂಬಂಧವನ್ನು ಅವರು ಒತ್ತಿ ಪ್ರತಿಪಾದಿಸತೊಡಗಿದ್ದಾರೆ. ''Two things are needed, two that go always together, the Grace of the Divine Mother and your unfailing aspiration'' "ಎರಡು ವಸ್ತುಗಳು ಅಗತ್ಯವಾಗಿ ಬೇಕು. ಸರ್ವದಾ ಅವೆರಡೂ ಜೊತೆಜೊತೆಯಾಗಿಯೇ ಸಾಗುವಂಥವುಗಳು. ಒಂದು ಜಗದೀಶ್ವರಿಯ ಕೃಪೆ; ಇನ್ನೊಂದು ನಿನ್ನ ಅವ್ಯರ್ಥ ಮಹದಾಕಾಂಕ್ಷೆ".

ಪುರಾತನ ಕಾಲದಲ್ಲಿ ಮೈದಾಳಿದ ವೇದಾಂತ ಮತ್ತು ಭಕ್ತಿಮಾರ್ಗಗಳಂತೆ ಆಧುನಿಕ ಕಾಲದಲ್ಲಿಯೂ ಇಂಥವೇ ಎರಡು ಅತಿರೇಕ ಪ್ರಧಾನವಾದ ವಿಚಾರ ಪದ್ಧತಿಗಳು ಬೆಳೆಯಹತ್ತಿವೆ. ಈಗೊಂದು ನೂರು ವರುಷಗಳಿಂದ ಪಾಶ್ಚಾತ್ಯರಲ್ಲಿ ಮೈದಾಳಿದ ಶಕ್ತಿಯ ಅಭಿಲಾಷೆ, ಮತ್ತು ಇದೇ ಕಾಲಾವಧಿಯಲ್ಲಿ ನಮ್ಮವರಲ್ಲಿ–ಸ್ವಸಂಸ್ಕೃತಿಯ ಸಮಾಲೋಚನೆಯ ಮೂಲಕ–ಮೈದಾಳಿದ ಜ್ಞಾನಾಭಿಲಾಷೆ ಅವರು ಶಕ್ತಿ ಬೇಕೆನ್ನುತ್ತಿದ್ದಾರೆ, ಇವರು ಭಕ್ತಿ ಸಾಕೆನ್ನುತ್ತಿದ್ದಾರೆ. ಅವರು (will power) (ವುಯಿಲ್ ಪಾವರ್) ಎಂಬ ಸಂಕಲ್ಪಶಕ್ತಿಯನ್ನು ಬೆಳೆಸುವ ಮಾರ್ಗಗಳನ್ನು ಕಂಡು ಹಿಡಿಯುತ್ತಲಿದ್ದಾರೆ. ನಮ್ಮವರು ವೈರಾಗ್ಯ ಮತ್ತು ದೈವವಾದ ಇವುಗಳಿಂದ ಕೂಡಿದ ಭಕ್ತಿಯನ್ನು ಸಾಧಿಸಲು ಹವಣಿಸುತ್ತಿದ್ದಾರೆ. ಆದರೆ ಈ ಶಕ್ತಿ ಮತ್ತು ಭಕ್ತಿ ಇವೆರಡೂ ಒಗೆತನವನ್ನು ಮಾಡದಿದ್ದರೆ ಎಂದಿಗೂ ಪರಿಪೂರ್ಣತೆಯು ಉಂಟಾಗಲಾರದೆಂದು ಈಚೆಗೆ ಕೆಲವರು ಮಹಾಪುರುಷರು ಕಂಡುಕೊಳ್ಳುತ್ತಲಿದ್ದಾರೆ.

ಐರ್ಲಂಡಿನ ಕವೀಂದ್ರರೂ ದ್ರಷ್ಟಾಪುರುಷರೂ ಆದ ದಿವಂಗತರಾದ "ಏ. ಈ" ಯವರು ತಮ್ಮ "ದರ್ಶನದೀಪ" (Candle of vision) ಎಂಬ ಗ್ರಂಥ ದಲ್ಲಿ 'ಧ್ಯಾನ'ದ ಪ್ರಕರಣದಲ್ಲಿ ಈ (will) ವುಯಿಲ್ ಅಥವಾ ಸಂಕಲ್ಪಶಕ್ತಿ ಎಂಬುದನ್ನು ಅನಂತಶಾಶ್ವತನ ಸಂಕಲ್ಪದೊಡನೆ ಸಮನ್ವಯಿಸದಿದ್ದರೆ, ಮಾನವನು ಈಗಿನ ತನ್ನ ವ್ಯಕ್ತಿತ್ವವನ್ನೇ ಒಂದಿಷ್ಟು ವಿಸ್ತರಿಸಿಕೊಳ್ಳುವನಲ್ಲದೆ ದಿವ್ಯ ಸ್ಥಿತಿಗೆ ಮುಟ್ಟಲಾರನೆಂದು ಸ್ಪಷ್ಟವಾಗಿ ಹೇಳಿ, ಉತ್ತರ ಸಾಧನದ ಪದ್ಧತಿಯನ್ನು ಮಾಡಿಸಿದ್ದಾರೆ. ಆದರೂ ಅವರು ಅನಂತನನ್ನು ಪುರಷ್ಕರಿಸುವದರಲ್ಲಿ ಮಾನವನನ್ನು ಪಾತಾಳಕ್ಕೆ ಮೆಟ್ಟುವುದಿಲ್ಲ. "ನಾವು ಅನಂತವನ್ನು ಅರಿತು, ಅನಂತವೇ ಆಗಿ, ನಮ್ಮನ್ನು ಅದರ ಸಮಾನಗೊಳಿಸುತ್ತೇವೆ. ನಾವು ಅನಂತದ ಎದುರಿಗೆ ಗುಲಾಮರಂತೆ ಮೊಣಕಾಲೂರದೆ, ರಾಜನ ಕುಮಾರನಂತೆ ಅದರ ತೇಜದ ಅಂತಸ್ತಿಗೆ ನಮ್ಮನ್ನು ನಾವು ಎತ್ತರಿಸುತ್ತೇವೆ." ಎಂಬುದು ಏ.ಈ. ಯವರ ಭಕ್ತಿ-ಶಕ್ತಿಗಳ ಸಮನ್ವಯ ಮಾತ್ರ.

ಆದರೆ ಈ ಪಾಶ್ಚಾತ್ಯ ಸಮನ್ವಯದ ಅಗ್ರಶ್ರೇಯಸ್ಸು ಸಲ್ಲಬೇಕಾದದ್ದು "ಇನ್ ಟ್ಯೂನ್ ವುಯಿಥ ದಿ ಇನ್‌ಫಿನಿಟ್" (In tune with the infinite ಅಥವಾ 'ಅನಂತದೊಡನೆ ಸಮಸ್ವರದಲ್ಲಿ') ಎಂಬ ವಿಖ್ಯಾತ ಗ್ರಂಥವನ್ನು ಬರೆದಿರುವ ರಾಲ್ಫ್ ವಾಲ್ಡೋ ಟ್ರಾಯಿನ್ (Ralph Waldo Trine) ಎಂಬವರಿಗೆ. ಶ್ರೀ ಅರವಿಂದರ ಯೋಗದ ಮುಖ್ಯ ಪಾರಿಭಾಷಿಕ ಶಬ್ದಗಳು ಸಹ ಈ ಗ್ರಂಥ ದೊಳಗಿನವಾಗಿವೆಯೆಂದು ಹೇಳಬಹುದು.

ಒಟ್ಟಾರೆ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಶ್ರೀ ಅರವಿಂದರ ತತ್ವವು ಅರ್ವಾಚೀನ ಕಾಲದ ಸರ್ವ ಶ್ರೇಷ್ಠ ವಿಚಾರಿಗಳೆಲ್ಲರ ತತ್ತ್ವಗಳನ್ನೊಳಗೊಂಡು ಅವೆಲ್ಲವುಗಳಿಗೆ ಕಳಸವನ್ನಿಡುತ್ತದೆ. ಹೀಗೊಂದು ವಿಧದ ಶ್ರೀ ಅರವಿಂದರ ಯೋಗವು ಪುರಾತನ ಮಾರ್ಗಗಳ ಸಮನ್ವಯವನ್ನು ಮಾಡಿದೆ.

ನೀಟ್ಸೆಯ ('ಸುಪರಮನ್ ಹುಡ್') 'ಅತಿಮಾನವ ಕಲ್ಪನೆ' ಇಮರ್ಸನ್ನರ 'ಸರ್ಕಲ್ಸ್' ಎಂಬ ಪ್ರಬಂಧದೊಳಗಿನ 'ವಿಶಾಲತೆ' ಟ್ರೈಯಿನ್' ಎಂಬವರ 'ಓಪನ್‌ನೆಸ್' ಮುಂತಾದವುಗಳನ್ನೆಲ್ಲ ಶ್ರೀ ಅರವಿಂದರ ತತ್ತ್ವವು ಪರಿಷ್ಕರಿಸಿ ಸ್ವೀಕರಿಸಿದೆಯೆಂದು ಹೇಳಿದರೆ ತಪ್ಪಾಗಲಾರದೆಂದು ಭಾವಿಸುತ್ತೇನೆ.

ಇನ್ನು ನಮ್ಮ ಪುರಾತನ ತತ್ತ್ವಗಳಲ್ಲಿ "ಈಶಾವಾಸ್ಯ"ದ "ವಿದ್ಯಾವಿದ್ಯಗಳ ಸಮನ್ವಯ "ಭಗವದ್ಗೀತೆಯ" "ಕರ್ಮಸಮರ್ಥನ" ಇವುಗಳಿಗೂ ಅವರ ತತ್ತ್ವವು ಋಣಿಯಾಗದೆ ಇಲ್ಲ. ಆದರೂ ಅವುಗಳನ್ನು ಇದ್ದಕ್ಕಿದ್ದಂತೆ ತನ್ನೊಳಗೆ ಬೆರೆಸಿ ಕೊಳ್ಳದೆ, ಅವುಗಳನ್ನು ಸಂಸ್ಕರಿಸಿ ವಿಸ್ತರಿಸಿ ತೆಗೆದುಕೊಂಡಿದೆ. ತಮ್ಮ ತತ್ತ್ವವು ಹಿಂದೂ ಋಷಿಗಳ ಸನಾತನ ತತ್ತ್ವದಿಂದಲೇ ಮೊದಲಾಗಿ ಮುಂದುವರಿಯುತ್ತಿದೆ ಯೆಂದು ಅವರು ತಾವೇ ಬರೆದ ತಮ್ಮ ಆಶ್ರಯದ ಸ್ಟೇಟಮೆಂಟಿನಲ್ಲಿ ಹೇಳಿದ್ದಾರೆ.

ಕರ್ಮದ ಅಗತ್ಯ, ಕರ್ಮದ ಸ್ವರೂಪ, ಕರ್ಮದ ಅಧ್ಯಾತ್ಮಿಕ ಪ್ರಯೋಜನ ಮುಂತಾದ ವಿಷಯಗಳಲ್ಲಿ– ಶ್ರೀ ಅರವಿಂದರೇ ತೀರ ಇತ್ತೀಚೆಗೆ ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಉಲ್ಲೇಖಿಸಿ ಈ ಚಿಕ್ಕ ಲೇಖನವನ್ನು ಮುಗಿಸುವೆನು :

"ಅನುಭವಗಳನ್ನು ಪಡೆಯುವದಕ್ಕೆಂದು ಕರ್ಮವನ್ನು, ಬಾಹ್ಯಪ್ರಜ್ಞೆಯನ್ನು ಅಲಕ್ಷಿಸಿ, ಸಂಪೂರ್ಣವಾಗಿ ಅಂತರ್ಮುಖನಾಗುವದೆಂದರೆ ಸಾಧಕನು ತೂಕತಪ್ಪಿದವನೂ ಸಾಧನದಲ್ಲಿ ಒಂದೇ ಮಗ್ಗಲನ್ನು ಹಿಡಿದವನೂ ಆಗಿಬಿಟ್ಟಂತೆಯೇ ಸರಿ. ಯಾಕೆಂದರೆ ನಮ್ಮ ಯೋಗವು ಸರ್ವಾಂಗೀಣವು. ಅದರಂತೆಯೇ ಒಬ್ಬನು ತನ್ನನ್ನು ಬಾಹ್ಯಕ್ಕೆ ನೂಕಿ, ಕೇವಲ ಬಾಹ್ಯಪ್ರಜ್ಞೆಯಲ್ಲಿಯೇ ತಾನು ಮಗ್ನನಾಗುವದೆಂದರೆ ಅವನು ಕೂಡ ತೂಕ ತಪ್ಪಿದವನೂ ಸಾಧನದಲ್ಲಿ ಏಕದೇಶೀಯತೆಗೆ ಬಲಿಬಿದ್ದವನೂ ಆಗಿಬಿಟ್ಟ ಹಾಗೆಯೆ. ಒಳಗಿನ ಅನುಭವ ಮತ್ತು ಹೊರಗಿನ ಕರ್ಮ (ಕೃತಿ) ಇವೆರಡರಲ್ಲಿಯೂ ಒಂದೇ ಭಾವನೆಯುಳ್ಳವನಾಗಿ, ಇವೆರಡನ್ನೂ ಮಹಾಮಾತೆಯಿಂದ ತುಂಬಿದವುಗಳನ್ನಾಗಿ ಮಾಡಲಿಕ್ಕೇ ಬೇಕು."

ಲೋಕೋಪಕಾರಕ ಬುದ್ಧಿ ಅಥವಾ ಮಾನವಕೋಟಿಯ ಸೇವೆ ಮತ್ತು ನೈತಿಕವೆಂದೂ ತಾತ್ವಿಕವೆಂದೂ ಮಾನವ ಮನವು ಕರ್ಮದ ಆಳವಾದ ಸತ್ಯಕ್ಕೆ ಪ್ರತಿಯಾಗಿ ಸ್ಥಾಪಿಸುವ ಇನ್ನುಳಿದ ಸರ್ವಸಂಗತಿಗಳು– ಇವುಗಳಿಗೆ ಕರ್ಮವೆಂದು ನಾನು ಅರ್ಥಮಾಡುವದಿಲ್ಲ. ಕೇವಲ ದೇವನ ಸಲುವಾಗಿ, ಮತ್ತು ದೇವನೊಡನೆ ಯುಕ್ತವಾಗಿ, ದೇವನ ಹೊರತು ಇನ್ನಾವುದಕ್ಕೊಂದೂ ಅಲ್ಲದೆ ಮಾಡುವ ಕೃತಿಯೇ ಕರ್ಮವೆಂದು ನನ್ನ ಅರ್ಥ.

"ಸಂಪೂರ್ಣ ಯಥೋಚಿತವಾಗಿ ಯಾರು ಮಹಾಮಾತೆಗೆಂದು ಕರ್ಮವನ್ನು ಮಾಡುವರೋ, ಅವರು ಧ್ಯಾನಕ್ಕೆ ಕೂಡದೆಯೂ ಯಾವ ವಿಶಿಷ್ಟ ಯೋಗಸಾಧನವನ್ನು ಅನುಸರಿಸದೆಯೂ, ಕರ್ಮದ ಮೂಲಕವಾಗಿಯೆ ಯೋಗಪ್ರಜ್ಞೆಗೆ (ಮುಟ್ಟುವ) ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ.

"ಸಾಧನದಲ್ಲಿ ಕರ್ಮವು ಅಶಕ್ಯವೆನ್ನುವಂಥ ಸ್ಥಳವು ಇಲ್ಲವೇ ಇಲ್ಲ."

ಓಂ ಶ್ರೀ ಓಂ

**ಜ. ಕ. ೧೪–೧೦ ಸಪ್ಟೆಂಬರ ೧೯೩೬**

# ಗುರು ಅರವಿಂದರ ಗೀತಾ ಪ್ರಬಂಧ

ಯೋಗೀಶ್ವರ ಅರವಿಂದರು ಭರತಖಂಡದ ಪುರಾತನ ಜ್ಞಾನದ ಗುಡಿಯ ಮೇಲೆ ಹೊಸ ಕಳಸವನ್ನು ಹೇಗೆ ಏರಿಸಿರುವರೆಂಬ ವಿಷಯವನ್ನು ಅವರ ಗ್ರಂಥಗಳಲ್ಲಿ ಗುರುತಿಸುವುದು ಒಳ್ಳೊಳ್ಳೆಯ ಬುದ್ಧಿಶಾಲಿಗಳಿಗೆ ಕೂಡ ಒಮ್ಮೆಮ್ಮೆ ಅಸಾಧ್ಯವಾಗಿ ಬಿಡುತ್ತಿರುವದುಂಟು.

'ಎಲ್ಲಾ ಹಿಂದಿನವರು ಹೇಳಿಯೇ ಬಿಟ್ಟಿರುವರಲ್ಲಾ ಇವರು ಹೊಸದಾಗಿ ಹೇಳುವುದು ಇನ್ನೇನು ?' ಎಂದು ಹೇಳುವದಕ್ಕೂ 'ನಮ್ಮ ರಾಮಾಯಣದಲ್ಲಿ ಪುಷ್ಪಕ ವಿಮಾನದ ಬಗ್ಗೆ ಉಲ್ಲೇಖವಿದೆಯಲ್ಲಾ !' ಎಂದು ಅಭಿಮಾನ ತಾಳುವುದಕ್ಕೂ ಒಂದಿಷ್ಟು ಹೋಲಿಕೆಯಿದೆಯೆಂದನ್ನಬಹುದು.

ಉಪನಿಷತ್ಕಾಲವಲ್ಲಿ ಉದ್ದಾಲಕ ಅರುಣಿಗಳ ಸಂವಾದದಲ್ಲಿ ಈಗಿನಂತೆ ಪಂಚ-ಭೂತಗಳ ಪ್ರಸ್ತಾಪವಿರದೆ ಕೇವಲ ತ್ರಿಭೂತಗಳ ಮೂಲಕವೇ ಸಮಸ್ತ ವಸ್ತು ಪ್ರಪಂಚದ ವಿಸ್ತಾರವನ್ನು ಹೇಳಲಾಗಿದೆಯಷ್ಟೆ ? ಆದರೆ ಮುಂದೆ ಜೈನ ಬೌದ್ಧರ ಕಾಲದಲ್ಲಿ ಚತುರ್ಭೂತಗಳ ಸಾಮ್ರಾಜ್ಯವು ಹಣಿಕೆ ಹಾಕಿದಾಗ ಹಿಂದಿನ ಜ್ಞಾನದ ಅಭಿಮಾನಿಗಳಿಗೆ ತ್ರಿಭೂತಗಳಿಂದಲೇ ಸಮಸ್ತ ಉಪಪತ್ತಿಯು ಬಗೆಹರಿಯುವಾಗ ಚತುರ್ಥಭೂತದ ಅಸ್ತಿತ್ವವು ಅಮೂಲಕವೂ ಅಪ್ರಯೋಜಕವೂ ಆಗಿ ತೋರಿರಲಿಕ್ಕೆ ಅಡ್ಡಿಯಿಲ್ಲ.

ಆದರೆ ಜೈನ ಬೌದ್ಧರು ಒಪ್ಪಿಕೊಳ್ಳದ ಐದನೆಯದೊಂದು ಭೂತವು ಕೂಡ ಮುಂದೆ ತನ್ನ ಲೀಲೆಯನ್ನು ಆರಂಭಿಸಿ ವೇದಾಂತಿಗಳ ಪಂಚೀಕರಣಕ್ಕೆ ಜನ್ಮ ಕೊಟ್ಟಿತೆಂಬುದಿಷ್ಟೇ ಅಲ್ಲ; ಭಾಗವತದಲ್ಲಿ ಸಪ್ತ ತತ್ತ್ವಗಳ ಸಪ್ತೀಕರಣವು ಸಹ ತಲೆದೋರಿತು.

ಇದರಂತೆ ಮೊದಮೊದಲಿಗೆ ಹೃದಯನಾಡಿ ಅಥವಾ ದಹರಪುಂಡಲೀಕವೆಂಬ ಒಂದು ಚಕ್ರವು ಮಾತ್ರವೇ ಅಂಗುಷ್ಠ ಮಾತ್ರ ಆತ್ಮನ ಅಧಿಷ್ಠಾನವೂ ನಾಡೀ ಮೂಲವೂ ಆಗಿ ಇದ್ದದ್ದು ಮುಂದೆ ನಾಭಿಚಕ್ರ ಆಮೇಲೆ ಬ್ರಹ್ಮರಂಧ್ರ ಹೀಗೆ

ಚಕ್ರಗಳ ಸಂಖ್ಯೆ ಬೆಳೆಬೆಳೆಯುತ್ತ ಷಟ್ಚಕ್ರಕ್ಕೆ ಬಂದು, ತಿರುಗಿ ಕೇಳಿದರೆ ಮುಂದು ಮುಂದಿನ ಅನುಭಾವಿಗಳಿಂದ ನವಚಕ್ರದವರೆಗೆ ಸಂಖ್ಯೆ ಏರಿತು.

ಇದೇ ರೀತಿಯಲ್ಲಿ ತೂರ್ಯವೇ ಕೊನೆಯ ಅವಸ್ಥೆಯಾಗಿ ಇದ್ದದ್ದು ಮುಂದೆ ತೂರ್ಯಾತೀತ, ಹಾಗೆಯೇ ಮುಂದಕ್ಕೆ ಸಹಜಾವಸ್ಥೆ ಇತ್ಯಾದಿಯಾಗಿ ಒಂದರ ಮುಂದೊಂದು ಬೆಳೆಯುತ್ತಲೇ ಬಂದವು. ಇವಲ್ಲದೆ ಸ್ಥೂಲ, ಸೂಕ್ಷ್ಮ, ಕಾರಣ ಗಳೆಂದಿದ್ದುದ್ದು ಮುಂದೆ ಮಹಾಕಾರಣವೊಂದು ಮೈದಾಳದೆ ಬಿಡಲಿಲ್ಲವೆಂಬುದನ್ನು ಅರಿಯವೆ ?

ಹೀಗೆಯೇ ಇನ್ನೆಷ್ಟು ಹೇಳುತ್ತ ಹೋದರೂ ಅಷ್ಟಷ್ಟು ಸುಮ್ಮನೆ ದೀರ್ಘ ಪ್ರಸ್ತಾಪ !

ಒಟ್ಟಿಗೆ ನನ್ನ ಅಭಿಪ್ರಾಯವಿಷ್ಟೇ; ಅದೇನಂದರೆ ಜ್ಞಾನರಾಜ್ಯಕ್ಕೂ ಉಳಿದೆಲ್ಲ ಮಾತುಗಳಿಗಿರುವಂತೆ, ನವನವ ಆವಿಷ್ಕರಣದ 'ಭರತಿ'ಯು ತಪ್ಪಿದ್ದಲ್ಲವೆಂಬುದೇ. ಗುರು ಅರವಿಂದರು ಹೊಸದೇನು ಹೇಳಿದರೆಂಬುದನ್ನು ಆಲೋಚಿಸುವದಕ್ಕಿಂತ ಮೊದಲು–ಹೊಸದೇನಾದರೂ ಹೇಳಲಿಕ್ಕೆ ಆಸ್ಪದವಾದರೂ ಇದೆಯೇ ಇಲ್ಲವೇ, ಎಂಬುದನ್ನಾಲೋಚಿಸುವದೇ ಮುಖ್ಯವಾದ ಕೆಲಸವೆಂದು ಬಗೆದು ನಾನು ಇದು ವರೆಗಿನ ವಿವರಗಳನ್ನೆಲ್ಲ ಹೇಳಬೇಕಾಯಿತು.

ಇನ್ನು ಮೇಲೆ ನಾನು ಹೇಳಬೇಕಾಗಿರುವ ಮಾತು ತೀರ ತುಸುವೆಂದರೂ ಅಡ್ಡಿಯಿಲ್ಲ. ಯಾಕೆಂದರೆ ಶ್ರೀ ಅರವಿಂದರು ಹೊಸದಾಗಿ ಹೇಳಿದ್ದನ್ನೆಲ್ಲ ಇದೀಗ ಹೇಳಬೇಕಾದರೆ, ಅವರು ಹಾಗೆ ಹೇಳಿರುವ ಮಾತುಗಳಾವವೆಂಬುದರ ಪಲ್ಲವಿ ಯನ್ನಷ್ಟೇ ಇಲ್ಲಿ ಸೂಚಿಸಿದರೆ ಸಾಕಾಗಿದೆ. ಗೀತೆಯಲ್ಲಿ ಅತ್ಯಂತ ಸೂಚಕವಾಗಿ ಮಾತ್ರವೆ ಬರುವ 'ಪರಾಪ್ರಕೃತಿ' ಮತ್ತು 'ಪರಮಪುರುಷ' ಇವರಿಬ್ಬರ ವಿಷಯವೇ ಮಹರ್ಷಿ ಅರವಿಂದರ ಗೀತಾಪ್ರಬಂಧವೆಂಬ ಬೃಹದ್ಗ್ರಂಥದಲ್ಲಿ ವಿಸ್ತಾರವಾಗಿಯೂ, ಪುನರುಕ್ತಿ ದೋಷದ ಕೊನೆಯ ಮಟ್ಟಕ್ಕೆ ಮುಟ್ಟುವಷ್ಟು ತಿರುತಿರುಗಿಯೂ ವಿವರಿಸಲ್ಪಟ್ಟಿದೆ.

ಯಾವ ಅಧ್ಯಾಯದಲ್ಲಿ ಮೂಲದೊಳಗೆ ಇವುಗಳ ಉಲ್ಲೇಖ ಸಹ ಇಲ್ಲವೋ ಅಂಥಲ್ಲಿ ಕೂಡ ತಮ್ಮೀ ನವಾವಿಷ್ಕರಣಗಳ ಪ್ರಸ್ತಾಪವನ್ನು ಮಾಡದೆ ಇವರಿಗೆ ಮುಂದುವರಿಯುವದಕ್ಕೇ ಸಾಧ್ಯವಿಲ್ಲ. ಯಾಕೆಂದರೆ ಇವೆರಡರ ನೆನಪನ್ನು ಪುನಃ ಪುನಃ ಮಾಡಿಕೊಡದೆ ಇವರ ತತ್ತ್ವರಥಕ್ಕೆ ಮುಂದುವರಿಯಲು ಮಾರ್ಗವೇ ಇಲ್ಲ.

'ನಾನ್ಯಃ ಪಂಥಾ ವಿದ್ಯತೇ ಅಯನಾಯ'
'ಜಗತಃ ಪಿತರೌ ವಂದೇ' ಓಂ–ಶ್ರೀ–ಓಂ

ಜೀವನ ೧–೨ ಡಿಶಂಬರ ೧೯೩೭

# ಶ್ರೀ ಅರವಿಂದಯೋಗಿಗಳ ಸಾಧನಸೂತ್ರ

---

ನಿಜವಾದ ಸಾಧನ ಪದ್ಧತಿಯು ಲೋಕದಲ್ಲಿ ಎಲ್ಲರೂ ಮಾಡುತ್ತಿರುವ ಮತ್ತು ನೀವು ಸಹ ಮಾಡಿದ್ದುದರಕಿಂತ ತೀರ ವಿಪರೀತವಾಗಿದೆ. ಜನಗಳು ದೇಹ ಮತ್ತು ಪ್ರಾಣದಿಂದ ಮೊದಲು ಮಾಡಿ ಚಿತ್ತ ಮತ್ತು ಮನಸ್ಸುಗಳ ಕಡೆಗೆ ಸಾಗುವರು. ಕೊನೆಗೆ ಬುದ್ಧಿ ಮತ್ತು ಸಂಕಲ್ಪ ಶಕ್ತಿಯಿಂದ ದೇಹದೊಡನೆ ಮುಗಿತಾಯ ಮಾಡುವರು. ಆಸನ, ಪ್ರಾಣಾಯಾಮ, ಕುಂಭಕ ಮತ್ತು ಚಿತ್ತಶುದ್ಧಿ ಮೊದಲಾದ ಸಾಧನಗಳು ಸಂಕಲ್ಪ ಶಕ್ತಿಯಿಂದ ಹೊರಡುವ ಸಾಧಕನಿಗೆ ಅಗತ್ಯವಿಲ್ಲ. ಯೋಗದ ವಿಷಯದಲ್ಲಿ ರಾಮಕೃಷ್ಣರು ಇದನ್ನೇ ತೋರಿಸಿಕೊಡುವದಕ್ಕೆ ಬಂದರು. ಯೋಗಿಗೆ ಕೃತು ಶಕ್ತಿಯೂ ವಿಶ್ವ (ಈಶು ಶಕ್ತಿಯೂ ಅತ್ಯಗತ್ಯದ ವಸ್ತುಗಳಾಗಿವೆ. ಅಂತಲೇ ರಾಮಕೃಷ್ಣರು "ನೀನು ಬ್ರಹ್ಮನಿದ್ದೀ ಎಂಬುದನ್ನು ನೆನೆಸಿಕೋ" ಎಂದು ಯಾವಾಗಲೂ ಸ್ವಾಮಿ ವಿವೇಕಾನಂದರಿಗೆ ಕಟಿಯುತ್ತಿದ್ದರು. (ಸ್ವಾಮಿಗಳಿಗೆ ಪರಮಹಂಸರು) ಇದನ್ನೇ ಮುಖ್ಯ ಸಂದೇಶವಾಗಿ ಕೊಟ್ಟು ಹೋದರು. ನೀನು ಈಶ್ವರನಿರುವಿ. ನೀನು ಸಂಕಲ್ಪಿಸಿದರೆ ಶುದ್ಧನಾಗಬಲ್ಲಿ. ಏನು ಬೇಕಾದದ್ದು ಆಗಬಲ್ಲಿ. ಎಲ್ಲಕ್ಕೂ ಮೊದಲನೇ ಅಗತ್ಯವೆಂದರೆ ನಿನ್ನ ಮೇಲೆ ನಿನಗೆ ವಿಶ್ವಾಸವಿರಬೇಕಾದುದು. ಎರಡನೇ ಮಾತೆಂದರೆ ದೇವನಲ್ಲಿ. ಮೂರನೇ ಮಾತೆಂದರೆ ಕಾಯದಲ್ಲಿ ವಿಶ್ವಾಸ. ಯಾಕೆಂದರೆ ಈ ಮೂರರಿಂದಲೇ ಜಗತ್ತು ಆಗಿದೆ. ಎಲ್ಲಕ್ಕೂ ಮೊದಲು ಸಂಕಲ್ಪ ಶಕ್ತಿಯನ್ನು ಎಬ್ಬಿಸು. ಆ ಮೇಲೆ ಆ ಸಂಕಲ್ಪ ಶಕ್ತಿಯಿಂದ ಜ್ಞಾನವನ್ನು ಎಚ್ಚರಿಸು. ಆ ಜ್ಞಾನದ ಮುಖಾಂತರವಾಗಿ ಚಿತ್ತವನ್ನು ಶುದ್ಧಗೊಳಿಸು. ಆ ಮೇಲೆ ಯಂತ್ರಗಳ ಮೂಲಕ ವಾಗಿ ಶರೀರವನ್ನು ಅಮರಗೊಳಿಸು, ಇದೇ ನಿಜವಾದ ಯೋಗವು. ಇದೇ ಮಹಾಪಂಥವು. ಇದೇ ಸತ್ಯವಾದ ಮತ್ತು ಏಕಮಾತ್ರವಾದ ತಂತ್ರವು. ವೇದಾಂತವು ಬುದ್ಧಿಯನ್ನು ಮೊದಲು ಮಾಡಿಕೊಂಡು ಹೊರಡುತ್ತದೆ. ಸಂಕಲ್ಪಶಕ್ತಿಯೆಂದರೆ ಏನೆಂಬುದನ್ನು ನೀವು ಕೇಳಿದ್ದೀರಿ. ಅದು ಶಕ್ತಿಯಿದೆ ವಾಸನೆಯಲ್ಲ, ಪ್ರಯತ್ನವೂ ಅಲ್ಲ. ವಾಸನೆ ಮತ್ತು ಪ್ರಯತ್ನ ಇವುಗಳಿದ್ದಲ್ಲಿ ಸಂಕಲ್ಪಶಕ್ತಿಯು ಅಭಾವವಿರುತ್ತದೆ. ನಿನ್ನಲ್ಲಿ ವಾಸನೆ ಇದ್ದುದಾದರೆ ನೀನು ನಿನ್ನ ಸಂಕಲ್ಪಶಕ್ತಿಯ ಸಾಮರ್ಥ್ಯದ ಬಗ್ಗೆ ಸಂದೇಹ ಪಡುತ್ತಿರುವಿಯೆಂದು ಅರ್ಥವಾಗುತ್ತದೆ. ಪರಬ್ರಹ್ಮನಿಗೆ ವಾಸನೆಯಿಲ್ಲ.

ಆತನು ಸಂಕಲ್ಪಿಸುತ್ತಾನೆ. ಆ ಸಂಕಲ್ಪದೊಡನೆ ಸರ್ವವೂ ಆಗಿ ಬಿಡುತ್ತದೆ. ನಿನ್ನಲ್ಲಿ ಪ್ರಯತ್ನವಿದ್ದುದಾದರೆ ನೀನು ನಿನ್ನ ಕೃತುಶಕ್ತಿಯ ವಿಷಯದಲ್ಲಿ ಸಂದೇಹಪಡುತ್ತಿರುವಿ ಯೆಂದು ಅರ್ಥವಾಗುತ್ತದೆ. ಯಾರಿಗೆ ತಾವು ಬಲವುಳ್ಳವರಲ್ಲವೆಂದು ಅನ್ನಿಸು ತ್ತದೆಯೋ ಅಥವಾ ಯಾರು ಹಾಗೆ ವಿಚಾರ ಮಾಡುವರೋ ಅವರು ಮಾತ್ರ ಫಲ ವನ್ನು ಹುಟ್ಟಿಸುವದಕ್ಕಾಗಿ ಪ್ರಯತ್ನಿಸುತ್ತಾರೆ. ಮತ್ತು ಕಷ್ಟಪಡುತ್ತಾರೆ. ಆದರೆ ಪರಬ್ರಹ್ಮದಲ್ಲಿ ಪ್ರಯತ್ನವಿಲ್ಲ. ಆತನು ಸಂಕಲ್ಪಿಸುತ್ತಾನೆ, ಆತನ ಆ ಸಂಕಲ್ಪ ಶಕ್ತಿಯು ತನ್ನಿಂದ ತಾನೆ ಪರಿಣಾಮ ಫಲವನ್ನು ಹುಟ್ಟಿಸಿಬಿಡುತ್ತದೆ. ಆದರೆ ಅದು ಸ್ಥಾನ ಕಾಲ ನಿಮಿತ್ತಗಳನ್ನು ನೋಡಿಕೊಂಡು ಮಾತ್ರ ಹುಟ್ಟಿಸುತ್ತದೆ. ಪ್ರತಿಯೊಂದು ಘಟನೆಯ ಹಾಗು ಅದರ ವಿಕಾಸದ ಸ್ಥಾನ-ಕಾಲ-ನಿಮಿತ್ತಗಳು ಬಹು ಯುಗಗಳ ಹಿಂದೆ ಕಲ್ಪಾರಂಭದಲ್ಲಿಯೇ ನಿನ್ನಿಂದಲೂ ಪರಮೇಶ್ವರನಿಂದಲೂ ನಿರ್ಧರಿಸಲ್ಪಟ್ಟಿವೆ. ನೀನೇ ನಿರ್ಧರಿಸುವದನ್ನು ನೀನೇ ಬಲಗೊಳಿಸುವದಕ್ಕೆ ಶ್ರಮ ಪಡುವದು ಅಜ್ಞಾನವಾಗಿದೆ. ಸ್ಥಾನ ಕಾಲ ಪರಿಸ್ಥಿತಿಗಳ ಯೋಚನೆ ನಿನಗೆ ಬೇಡ. ಆದರೆ ಸಂಕಲ್ಪಿಸು ಮತ್ತು ಪರಿಣಾಮವನ್ನು ನಿನ್ನ ಸರ್ವಸಮರ್ಥನೂ ಸರ್ವಾಂತರ್ಯಾಮಿಯೂ ಸರ್ವಜ್ಞನೂ ಆದ ಪರಮಾತ್ಮನ ಕಡೆಗೆ ಬಿಟ್ಟುಬಿಡು. ನೀನು ವ್ಯಕ್ತಿಗತ ದೇವನಿದ್ದೀ; ಆತನು ವಿಶ್ವದ ದೇವನಿದ್ದಾನೆ. ದೇವನ ಹೊರತು ಮತ್ತೇನೂ ಇಲ್ಲ. "ಏಕಮೇವಾದ್ವಿತೀಯಂ" ಸಂಕಲ್ಪ ಶಕ್ತಿಯು ಸಮತೆಯನ್ನು ಹುಟ್ಟಿಸುತ್ತದೆ. ಅರ್ಥಾತ್ ವಾಸನೆ ಮತ್ತು ಪ್ರಯತ್ನಗಳ ಅಭಾವವನ್ನು ಹುಟ್ಟಿಸುತ್ತದೆ; ಈ ವಾಸನೆ ಮತ್ತು ಪ್ರಯತ್ನಗಳ ಅಭಾವವು ಜ್ಞಾನವನ್ನು ಹುಟ್ಟಿಸುತ್ತದೆ. ಜ್ಞಾನವು ಬರುವವರೆಗೆ ನೀನು ವಾಸನೆ ಮತ್ತು ಪ್ರಯತ್ನಗಳ ಪುನರಾಗಮನವನ್ನು ತಪ್ಪಿಸಿಕೊಳ್ಳಲಾರಿ. ಇನ್ನೇನು ? ಹೇಗೆ ಹೊರಡಬೇಕೆಂಬ ಪ್ರಶ್ನವು ಮಾತ್ರ ಉಳಿಯಿತು. ನಿನ್ನಲ್ಲಿ ಶಕ್ತಿ ಇದ್ದಾಳೆ. ನಿನ್ನೊಳಗೆ ಕೆಲಸ ಮಾಡುವದಕ್ಕೆ ಅವಳಿಗೆ ನೆರವಾಗುವಂತೆ ನಿನ್ನ ಸರಿಯಾದ ವರ್ತಮಾನವನ್ನು ಮಾತ್ರ ಇಟ್ಟುಕೋ; ನೀನು ಸಾಕ್ಷಿ, ಅನುಮಂತಾ, ಭೋಕ್ತಾ ಮತ್ತು ಭರ್ತಾ ಇರುವಿ." (ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ॥ ಪರಮಾತ್ಮೇತಿ ಚಾಪ್ಯುಕ್ತೋ ದೇಹೇಸ್ಮಿನ್ ಪುರುಷಃ ಪರಃ ॥ ಗೀತಾ ೧೩॥೨೨]

ನೀನು ಅನುಮಂತನಾಗಿ ನಿನ್ನ (ಸಂಕಲ್ಪಶಕ್ತಿಗೆ) ಆಜ್ಞೆಯನ್ನು ಮಾಡು. ಸಾಕ್ಷಿಯಾಗಿ ಫಲದ ಕಡೆಗೆ ನೋಡದೆ ಅವಳ ಕಾರ್ಯವನ್ನು ಲಕ್ಷಿಸು. ಭೋಕ್ತೃವಾಗಿ ಬಂದ ಫಲವನ್ನು ಭೋಗಿಸು. ಭರ್ತನಾಗಿ ಆಧಾರವನ್ನು (ಪಂಚಕೋಶಗಳ ಸಮುದಾಯವನ್ನು) ಅಳತೆಗೆ ತಂದು ಅವಳಿಗೆ ಸಹಾಯಕನಾಗು. ತಾಮಸಿಕ ಉದಾಸೀನತೆಯಿಂದಲೂ, ರಾಜಸಿಕ ಉದ್ಧಾಮತನದಿಂದಲೂ ಅದನ್ನು ಹಾಳುಮಾಡ

ಬೇಡ. ನಿನ್ನ ಸಂಕಲ್ಪಶಕ್ತಿಯು ತನ್ನ ಕಾರ್ಯವನ್ನು ನೆರವೇರಿಸುವದರಲ್ಲಿ ಎಂದೂ ಬಿದ್ದುಹೋಗಲಾರದೆಂಬುದರ ಮನವರಿಕೆ ನಿನಗಿರಲಿ. ನೀನು ಜ್ಞಾತಾ ಇರುವಿ. ಆ ಶಕ್ತಿಯು ತಾನಾಗಿ ನಿನ್ನೆಡೆಗೆ ತರುವ ಸರ್ವಜ್ಞಾನವನ್ನು ಸ್ವೀಕರಿಸು. ನಾನು ಇಲ್ಲಿ ಹೇಳಿದ ವರ್ತನವನ್ನು ನಿನ್ನಲ್ಲಿ ಚೆನ್ನಾಗಿ ಅಳವಡಿಸಿಕೋ; ಮತ್ತು ನಿನ್ನ ಜೀವನದ ಅಥವಾ ಸಾಧನದ ಪ್ರತಿಯೊಂದು ವೈಯುಕ್ತಿಕ ಕಾರ್ಯಕ್ಕೆ ಅದನ್ನು ಪ್ರಯೋಗಿಸು. ನೀನು ಇನ್ನೇನೂ ಮಾಡಬೇಕಾಗಿಲ್ಲ, ಕಾಲಿಯು ಉಳಿದದ್ದನ್ನೆಲ್ಲ ಮಾಡುವಳು. ತೊಂದರೆಗೊಳಗಾಗಬೇಡ ಆತುರತೆಗೆ ಬಲಿ ಬೀಳಬೇಡ: ಗಡಬಿಡಿ ಮಾಡಬೇಡ. ನಿನ್ನ ಇದುರಿಗೆ ಅನಂತಕಾಲವು ಬಿದ್ದುಕೊಂಡಿದೆ. ಓಗೆಂದ ಬಳಿಕ ಅವಸರವೇಕೆ ? ಆದರೆ ತಾಮಸಿಕನಾಗಿ ಆಲಸ್ಯದಲ್ಲಿ ನಿನ್ನ ಕಾಲವನ್ನು ಮಾತ್ರ ಹಾಳುಮಾಡಬೇಡ......

ನನ್ನ ಬರಹದಲ್ಲೆಲ್ಲ ಬಹುಜನರಿಗೆ ಅಭ್ಯಾಸವಿಲ್ಲದ ಒಂದು ವಿಷಯವನ್ನೇ ತೆಗೆದುಕೊಂಡಿದ್ದೇನೆ. ನೀವು ವೈರಾಗ್ಯವೇ ಸಮಸ್ತ ಜ್ಞಾನದ ತಳಹದಿಯೆಂದು ಭಾವಿಸುವಿರಾದರೆ ನಿಮಗೆ ನನ್ನೊಡನೆ ತೃಪ್ತಿಯಿಲ್ಲ. ವೈರಾಗ್ಯವು ನನ್ನ ದೃಷ್ಟಿಯಿಂದ ಕೇವಲ ತಾತ್ಪೂರ್ತಿಕ ಉಪಯೋಗದ ಒಂದು ಮನಸ್ಥಿತಿಯಾಗಿದೆ. ಹಳೆಯ ಸಂಸ್ಕಾರಗಳು ಮಾನಸ ಕ್ಷೇತ್ರದಿಂದ ಕಿತ್ತಿ ಹೋಗುವದಕ್ಕೆ ಅತಿಶಯವಾಗಿ ಮೊಂಡತನವನ್ನು ಹಚ್ಚಿದಾಗ ಅಂದರೆ ಅವು ಅಭ್ಯಾಸ ಮಾತ್ರಕ್ಕೆ ಹಣಿಯದೆ ಹೋದಾಗ ದೇವನು ಅವುಗಳನ್ನು ಹೊಡೆದೋಡಿಸಲಿಕ್ಕೆಂದು ವೈರಾಗ್ಯವನ್ನು ಉಪಯೋಗಿಸುತ್ತಾನೆ. ಆದರೆ ಮಾನಸ ಕ್ಷೇತ್ರವು ಶಾಂತವಾಗುವವರೆಗೆ ಮತ್ತು ಜ್ಞಾನವು ಸ್ವತಃದ ಕಾರ್ಯವನ್ನು ಮಾಡುವವರೆಗೆ ಆ ಜ್ಞಾನಕ್ಕೆ ಅಭ್ಯಾಸ ಮತ್ತು ವೈರಾಗ್ಯಗಳಿಂದ ನೆರವು ಸಿಗುತ್ತದೆ. ಮಾನಸ ಕ್ಷೇತ್ರವು ಯಾವಾಗ ಹೊರಗಿನ ಕಾರಣಗಳಿಂದ ತನ್ನ ಹಳೆಯ ರೀತಿಗಳ ಪುನರುಜ್ಜೀವನಕ್ಕೆ ಅನುವುಗೊಡಲಾರದಂತೆ ಸ್ತಬ್ಧರಾಗಿ ಬಿಡುವದೋ ಆ ಕ್ಷಣದಲ್ಲಿ ಜ್ಞಾನವು ವಿಕಾಸ ಹೊಂದುವದು. ಮತ್ತು ಶಕ್ತಿಯು ತನ್ನ ಅಬಾಧಿತ ನಿಶ್ಚಿತ ಗತಿಯನ್ನು ಅನುಸರಿಸುವದು. ಆಗ ನಿನಗೆ ಸಾಧನವೆಂಬುದೇನೂ ಉಳಿಯುವದಿಲ್ಲ. ಆಗ ಕ್ರಮ ಪ್ರಗತಿಯ ಸಿದ್ಧಿಯು ಮಾತ್ರ, ಹಿಂದು ಮುಂದೆ ನೋಡಿ ಸ್ವೀಕರಿಸಿದ ಯಾವ ಪದ್ಧತಿಗೂ ಬದ್ಧವಾಗದೆ ಸುಲಭವೂ ಸ್ವಾಭಾವಿಕವೂ ಆದ ನಿಸರ್ಗ ಕ್ರಮದಿಂದಲೇ, ಸಂಚಾರ ಮತ್ತು ಶ್ವಾಸೋಚ್ಛ್ವಾಸಗಳಂತೆ ವೃದ್ಧಿಂಗತವಾಗುತ್ತ ಬರುವದು. ಆಗ ಅಭ್ಯಾಸ ಮತ್ತು ವೈರಾಗ್ಯಗಳ ಅವಶ್ಯಕತೆಯು ಸಂಪೂರ್ಣವಾಗಿ ತಪ್ಪಿಹೋಗುವದು. ಲೋಭದ ಮೇಲಿನ ಆಸಕ್ತಿಯಂತೆ ವೈರಾಗ್ಯದ ಮೇಲಿನ ಆಸಕ್ತಿಯೂ ಕೂಡ ಭಯಾವಹವಾಗಿದೆ.

ಇದಲ್ಲದೆ ನೀವು ಬೌದ್ಧರಂತೆ ಜೀವನವೆಂಬುದೆಲ್ಲ ದುಃಖಮಯವೇದೂ, ಇದಲ್ಲದೆ ಅದು ಅಮಂಗಳಕರವಾದ ಒಂದು ವಿಧದ ಸರ್ವನಾಶವೆಂದೂ ತಿಳಿದು

ಕೊಂಡಿದ್ದರೆ ಅಥವಾ ಮಾಯಾವಾದಿಗಳಂತೆ ಈ ಜಗತ್ತಿನಲ್ಲಿ ನಾವು ಬಂದಿರುವದು ಶಕ್ಯವಿದ್ದಷ್ಟು ಶೀಘ್ರವಾಗಿ ಓಡಿ ಹೋಗುವದಕ್ಕಾಗಿಯೇ ಹೊರತು ಇನ್ನಾವುದಕ್ಕೂ ಅಲ್ಲವೆಂದೂ ಭಾವಿಸಿದ್ದರೆ, ನೀವು ನನ್ನಿಂದ ದೂರ ಹಾಯ್ದು ಹೋಗುವದೇ ಮೇಲು. ಸೇನಾಪತಿಯು ತನ್ನ ಸೈನ್ಯಕ್ಕೆ ಹಿಂದಿರುಗಿ ಬರುವದರ ಹೊರತು ಇನ್ನಾವುದೂ ಉದ್ದೇಶವಿಲ್ಲದ, ಗುಡ್ಡವನ್ನು ಏರುವದಕ್ಕೆ ಅಪ್ಪಣೆ ಕೊಟ್ಟಂತೆ ನಿಮ್ಮ ಈ ವಿಚಾರವಿದೆ. ಹೀಗಿದ್ದರೆ ನನ್ನಿಂದ ನಿಮಗೆ ಉಪಯೋಗವಿಲ್ಲ. ನಾನು ಒಬ್ಬ ತಾಂತ್ರಿಕನಿದ್ದೇನೆ. ಜಗತ್ತು ಆನಂದದಲ್ಲಿ ಹುಟ್ಟಿ, ಆನಂದದಲ್ಲಿ ಬಾಳಿ, ಆನಂದದಲ್ಲಿ ಚಲಿಸಿ, ಆನಂದಕ್ಕೆ ಹೋಗುತ್ತಿದೆಯೆಂದು ನನಗೆ ಗೋಚರಿಸುತ್ತದೆ. ಆನಂದ ಮತ್ತು ಶಕ್ತಿ ಇವು ಮೂಲ ಸತ್ತೆಯ ನಿಜವಾದ ಎರಡು ಮುಖಗಳಾಗಿರುತ್ತವೆ. ದುಃಖವೂ ದೌರ್ಬಲ್ಯವೂ ಅಜ್ಞಾನದಿಂದ ಹುಟ್ಟಿದ ವಿಕಾರಗಳಾಗಿವೆ. ಅಜ್ಞಾನವೆಂದರೆ ತನ್ನ ಉನ್ನತವಾದ ಮತ್ತು ಸತ್ಯವಾದ ಸ್ವರೂಪವನ್ನು ಮರೆತು ಬಿಡುವುದೇ. ಈ ದುಃಖವೂ, ದೌರ್ಬಲ್ಯವೂ, ಸಾರ್ವತ್ರಿಕವಾದವುಗಳೂ, ಶಾಶ್ವತವಾದವುಗಳೂ ಆಗಿರದೆ ಅವು ಪ್ರಾದೇಶಿಕ ಮತ್ತು ಸಾಮಾಯಿಕಗಳಾಗಿವೆ. ಪ್ರಾದೇಶಿಕವೆಂದರೆ ಮುಖ್ಯವಾಗಿ ಈ ಪೃಥ್ವಿಯಲ್ಲಿ ಮಾತ್ರ ಅವುಗಳ ಅಸ್ತಿತ್ವವದೆ. ಸಾಮಾಯಿಕವೆಂದರೆ ಚಿಕ್ಕ ಕಾಲವಾದ ಈ ಕಲಿಯುಗದಲ್ಲಿ ಮಾತ್ರ ಅವುಗಳ ಅಸ್ತಿತ್ವವಿರುತ್ತದೆ ಎಂದು ಅದರ ಅರ್ಥ. ನಮಗಾಗಿಯೂ ಮಾನವ ಕೋಟಿಗಾಗಿಯೂ ಭೂಮಂಡಲದ ಮೇಲೆ ಸ್ವರ್ಗವನ್ನು ಇಳಿಸಿ ತರುವುದೂ, ದುಃಖ ದೌರ್ಬಲ್ಯಗಳನ್ನು ಅವುಗಳಿಗೆ ಈಗ ಇರಲಿಕ್ಕೆ ಅಪ್ಪಣೆ ಸಿಕ್ಕಂತಹ ಸ್ಥಾನ-ಕಾಲಗಳ ಮೂಲೆಯೊಳಗಿಂದ ಎಬ್ಬಿಸಿ ಹೊಡಿದೋಡಿಸುವದೂ ನಮ್ಮ ಉದ್ಯೋಗವಾಗಿದೆ. ಈ ಜಗತ್ತನ್ನು ದುಃಖ ಮತ್ತು ನೈಷ್ಕರ್ಮದ ನಿಧಿಯೆಂದೂ, ಆನಂದ ಮತ್ತು ಸ್ವಾತಂತ್ರ್ಯದ ಸಲುವಾಗಿ ಅದರಿಂದ ಹಿಂದೆಗೆಯಬೇಕೆಂತಲೂ ಬೋಧಿಸುವವರ ತತ್ತ್ವವು ನನಗೆ ಎಷ್ಟೂ ಒಪ್ಪಿಗೆಯಿಲ್ಲ. ಯಾಕೆಂದರೆ ಇವರು ಸಮಸ್ತ ತರ್ಕಕ್ಕೂ ಜ್ಞಾನಕ್ಕೂ ವಿರೋಧಕರವಾದ ವಿಚಾರವನ್ನು ಮಾಡುತ್ತಾರೆ. ಹೇಗೆಂದರೆ ಸ್ವಯಂ ದೇವನು ಮಂಗಲಾತ್ಮಕನಾಗಿದ್ದು ಆತನು ತನ್ನ ಪ್ರಕಟರೂಪವಾದ ವಿಕಾಸದಲ್ಲಿ ಮಾತ್ರ ಅಮಂಗಲಕರನಾಗಿರುವಂತೆ. ಪರಬ್ರಹ್ಮನು ಮೂಢನಾಗಿದ್ದಾನೆಂದಾಗಲಿ ದುಃಸ್ವಪ್ನಗಳನ್ನು ಕಾಣುತ್ತಿರುವ ಕುಡುಕನಾಗಿದ್ದಾನೆಂದಾಗಲಿ ನಾನು ಒಪ್ಪಲಾರೆನು. ಅಂದರೆ ಆತನು ಬಡಭ್ರಮೆಗಳಲ್ಲಿ ಭ್ರಾಂತನಾಗಿದ್ದಾನೆಂದು ಹೇಳುವದಕ್ಕೆ ನಾನು ಸಮ್ಮತಿಸಲಾರೆನು. ವೇದದಲ್ಲಿ ಈ ಬೋಧನೆಯನ್ನು ನಾನು ಕಂಡಿಲ್ಲ. ಅಲ್ಲದೆ ಇದು ನನ್ನ ಅನುಭವಗಳಿಗೂ ಸರಿಹೊಂದುವದಿಲ್ಲ. ನನ್ನ ಆ ಅನುಭವಗಳು ವಾಸನಾಶೂನ್ಯ ಸ್ಥಿತಿಯಲ್ಲಿ ಕಂಡಂಥ ಅವಿಕೃತವಾದ ಆನಂದ ಮತ್ತು ಜ್ಞಾನದ ಪ್ರತ್ಯಕ್ಷ ರೂಪಗಳಾಗಿವೆ. ನಾನು ಮಹಾಭಾರತದೊಳಗಿನ ಕೃಷ್ಣನಂಥ ವಿಚಾರಗಳುಳ್ಳವನಾಗಿದ್ದೇನೆ. ಅಲ್ಲಿ ಅವನು ಹೇಳಿದ್ದೇನೆಂದರೆ :– "ಈ ಜಗತ್ತಿನಲ್ಲಿ ಕೆಲವರು ಕರ್ಮವನ್ನು ಬೋಧಿಸು

ವರು; ಇನ್ನು ಕೆಲವರು ನೈಷ್ಕರ್ಮ್ಯವನ್ನು ಬೋಧಿಸುವರು. ನಾನು ಇವರಿಬ್ಬರಲ್ಲಿ ನೈಷ್ಕರ್ಮ್ಯವನ್ನು ಬೋಧಿಸುವ ದುರ್ಬಲರ ಅಭಿಪ್ರಾಯದವನಲ್ಲ. 'ನಮೋ ಮತಂತಸ್ಯ ದುರ್ಬಲಸ್ಯ' ಗಟೇನು ಹೇಳುವ ಮಹತ್ತರವಾದ ನಿಸರ್ಗಶಕ್ತಿಗಳ ಕಾರ್ಯ ದಂತೆ ಅವನ (ಸಿದ್ಧಪುರುಷನ) ಕಾರ್ಯವು ನಿಸ್ವಾರ್ಥವಾದದ್ದು, ಶ್ರಮರಹಿತವಾದದ್ದು. ಆನಂದಕ್ಕೆ ತಕ್ಕಂತೆ ಹಗುರವಾದದ್ದು. ಸಾತ್ವಿಕ ಅಹಂಕಾರಕ್ಕೂ ಕೂಡ ಬದ್ಧವಾಗ ಲಾರದ್ದು, ಇಂತಹದಾಗಿರುತ್ತದೆ. ಪುರುಷೋತ್ತಮನೊಡನೆ ಈತನಿಗೆ ಅಭಿನ್ನತೆ ಯುಂಟಾಗುವದರಿಂದ ಆಗ ಅವನು ಹೀಗೆ ಅನ್ನುತ್ತಾನೆ : "ನನ್ನ ಜೀವನವು ಆತನ ಜೀವನದಲ್ಲಿದೆ. ನನ್ನ ಶಕ್ತಿಯು ಆತನ ಅನಂತ ಶಕ್ತಿಯಾದ ಕಾಲಿಯದೇ ಒಂದು ವಿಶೇಷ ಕ್ರಿಯೆಯಾಗಿದೆ. ನಾನು ಅಜ್ಞನಲ್ಲ. ನಾನು ಬದ್ಧನಲ್ಲ. ನಾನು ದುಃಖಿಯಲ್ಲ, ಆದರೆ ನಾನು ಅಜ್ಞನ ಪಾತ್ರವನ್ನು ಮಾತ್ರ ವಹಿಸಿದ್ದೇನೆ. ಬದ್ಧನ ಸೋಗು ಮಾತ್ರ ಮಾಡುತ್ತಿದ್ದೇನೆ. ಅಭಿನಯಕಾರನಂತೆ ಹಾಗೂ ಪ್ರೇಕ್ಷಕನಂತೆ ನಾನು ದುಃಖದ ರಸ ವನ್ನು ಮಾತ್ರ ತೆಗೆದುಕೊಳ್ಳುತ್ತಿದ್ದೇನೆ. ನನಗೆ ಬೇಕಾದಾಗ ನಾನು ಅದನ್ನು ನೂಕ ಬಲ್ಲೆನು. ನನ್ನನ್ನು ಅಧೋಗತಿಗೆ ಹೋದವನೆಂದೂ, ಪಾಪಿಷ್ಠನೆಂದೂ, ಉಳಿದ ಹುಳಗಳೊಡನೆ ಹರಿದಾಡುವ ಹುಳವೆಂದೂ, ಯಾವನು ಹೇಳುವನು ? ನಾನು ಬ್ರಹ್ಮನಿದ್ದೇನೆ. ನಾನು ಆತನೇ ಇದ್ದೇನೆ. (ಅಹಂ ಬ್ರಹ್ಮಾಸ್ಮಿ ! ಸೋಽಹಮಸ್ಮಿ) ನನಗೆ ಪಾಪವು ಮುಟ್ಟಲಾರದು. ನನ್ನನ್ನು ದುರ್ಬಲನೆಂದು ಯಾವನು ಕರೆಯು ವನು ? ನಾನು ಸರ್ವಸಮರ್ಥನೊಡನೆ ಏಕನಿದ್ದೇನೆ. ಆತನು ಏಕಮಾತ್ರನಿದ್ದರೂ ಆತನೇ ಬಹುವಾಗುವದಕ್ಕೆ ಇಷ್ಟಪಟ್ಟಿದ್ದಾನೆ. ಆತನು ಅನಂತವಾಗಿದ್ದರೂ ಬಹು ಕೇಂದ್ರಗಳಲ್ಲಿ ತನ್ನನ್ನು ತಾನು ಪ್ರದೇಶಿಕತೆಯಲ್ಲಿ ಬದ್ಧಗೊಳಿಸಿದ್ದಾನೆ. ಹೀಗಿದ್ದರೂ ಆ ಪ್ರತಿಯೊಂದು ಕೇಂದ್ರದಲ್ಲಿಯೂ ಮತ್ತೆ ಅನಂತನೇ ಆಗಿದ್ದಾನೆ. ಇದು ಅವನ ದಿವ್ಯ ಸತ್ಯದ ಪರಮ ರಹಸ್ಯವಾಗಿದೆ. "ಉತ್ತಮಂ ರಹಸ್ಯಂ" ದೇವನ ಮಹಾ ಆಶ್ಚರ್ಯಕರವಾದ ಮಂಗಳಕರವಾದ ರಹಸ್ಯವಾಗಿದೆ. ಈ ರಹಸ್ಯವನ್ನು ತರ್ಕವು ದೂಡುತ್ತದೆ. ಆದರೆ ಜ್ಞಾನವು ಗ್ರಹಿಸುತ್ತದೆ. ಅಂಥ ಜ್ಞಾನವು ಸಿದ್ಧಮಾಡಿ ಕೊಡಲಿಕ್ಕೆ ಬರುವಂತಹದಲ್ಲ, ಅನುಭವಿಸಲಿಕ್ಕೆ ಮಾತ್ರ ಬರುವಂತಹದು. ಶುದ್ಧವೂ, ಮುಕ್ತವೂ, ಸರ್ವಾನಂದಿಯೂ ಮತ್ತು ಸರ್ವಸಂಪೂರ್ಣವೂ ಆದ ಆತ್ಮ ದಿಂದ ಅದು ಅನುಭವ ಮೂಲಕವಾಗಿ ಪ್ರಮಾಣಿಸಲ್ಪಡುವದು.

ಶಿವಾನುಭವ ೧೧-೧ ಆಗಸ್ಟ ೧೯೩೬

# ನನಗೆ ಶ್ರೀ ಅರವಿಂದಯೋಗಿಗಳ ದರ್ಶನ

---

ಶ್ರೀ ಗುರು ಅರವಿಂದಯೋಗಿಗಳ ದರ್ಶನ ಲಾಭವನ್ನು ನಾನು ಪಡೆದು ಕೊಂಡು ಬಂದು ಎಂಟೊಂಬತ್ತು ತಿಂಗಳುಗಳಾಗಿ ಹೋದರೂ ಈ ವರೆಗೆ ನಾನು ಆ ಬಗೆಗೆ ಯಾವ ಪತ್ರಿಕೆಯಲ್ಲಿಯೂ ಬರೆಯದೆ ಬಿಟ್ಟಿರುವದಕ್ಕೆ ಕಾರಣವೇನೆಂಬುದನ್ನು ಸ್ವಲ್ಪದರಲ್ಲಿ ವಿವರಿಸುವದು ಅನುಚಿತವಾಗಲಿಕ್ಕಿಲ್ಲೆಂದು ನನಗೆ ತೋರುತ್ತದೆ.

ನಾನು ಹೆಣ್ಣುಗರುಳಿನ ನಾಚಬುರುಕ ಸ್ವಭಾವದವನಾಗಿರುವುದೊಂದೇ ಇದಕ್ಕೆಲ್ಲ ಏಕಮಾತ್ರ ಕಾರಣವಾಗಿದೆಯೆಂಬುದನ್ನು ಸಹ ನನ್ನ ಈ ಸ್ವಭಾವಾನುಸಾರವಾಗಿ ನಾಚುತ್ತಲೇ ಒಪ್ಪಿಕೊಳ್ಳುತ್ತೇನೆ. “ಗಂಡುಗುಣ ನನ್ನಲ್ಲಿ ಅದಿಯಲ್ಲೇ ಇಲ್ಲ! ಬಾಲೆಯರ ಜೊತೆ ಎನಗೆ ಬಾಲ್ಯದಲ್ಲೇ ॥” ಎಂಬುದನ್ನು ನನ್ನ ಕವಿತೆಗಳನ್ನೋದಿದವರೆಲ್ಲ ಬಲ್ಲರು. ನನ್ನೀ ನಾಚಿಕೆಗೆ ಒತ್ತಾಯಪಡಿಸಿ ಇದನ್ನೆಲ್ಲ ಬರೆಯಿಸಿದವರು ನನ್ನ ಪ್ರಿಯ ಸ್ನೇಹಿತರಾದ ಶ್ರೀ ಎನ್. ಕೆ. ಕುಲಕರ್ಣಿ, ಎಂ.ಎ. (ವಸಂತದ ಸಂಪಾದಕರು) ಅವರೇ.

ಸಾಕು, ಕಾರಣ ನಿರ್ದೇಶದ ವಿಷಯವು ಇಷ್ಟು ಸಾಕು. ನಾನು ಹದಿನಾಲ್ಕು ವರುಷಗಳಿಂದಲೂ ನನ್ನ ಗುರುದೇವರ ಆಶೀರ್ವಾದಕ್ಕೆ ಹಸಿದು ಹಲಬುತ್ತಿದ್ದೆನು. ಈ ಸುದೀರ್ಘ ಕಾಲದಲ್ಲಿ ನನ್ನ ಅಧ್ಯಾತ್ಮಿಕ ಜೀವನದಲ್ಲಾದ ವಿವಿಧ ಪ್ರಗತಿಗೆ ನನ್ನ ಈ ಘೋರ ಕಾತರತೆಯ ಫಲವಾಗಿ ಅವರಿಂದ ಕಳುಹಿಸಲ್ಪಟ್ಟಿರಬಹುದಾದ ನಿಶ್ಶಬ್ಧ ಸಂದೇಶಗಳೇ ಕಾರಣವಾಗಿರುವುದಾಗಿ ನನ್ನ ನಂಬುಗೆ.

ಅದಿರಲಿ; ಈ ಹದಿನಾಲ್ಕು ವರ್ಷಗಳಲ್ಲಿಯೂ ಕೊನೆಯ ಒಂದೆರಡು ವರುಷಗಳಂತೂ ಬಹಳ ಪ್ರಖರವಾದವುಗಳು. ಇಡೀ ಇರುಳೆಲ್ಲ ಪುಣ್ಯಧಾಮ ಪಾಂಡೀಚೇರಿಯ ಕಡೆಗೆ ದೈನ್ಯದಿಂದ ನಿರುಕಿಸುತ್ತ ಆಶೆಬಟ್ಟು ಅಲಪರಿದುದಕ್ಕೆ ಲೆಕ್ಕವಿಲ್ಲ.

ಇದೇ ಸಮಯದಲ್ಲಿ ಅವರ ಸೇವೆಗೆಂದು ಹೊರಡಿಸಿದ ‘ಅರವಿಂದ ಗ್ರಂಥ-ಮಾಲೆ’ಯ ಪುಣ್ಯದಿಂದ ನನಗೆ ಅವರ ದರ್ಶನಲಾಭವಾಗುವ ಮಹಾಪರ್ವವು ಒದಗಿ ಬಂತು.

ದಾರಿಯಲ್ಲೆಲ್ಲ ಏನೇನು ಘಟಿಸಿತೆಂಬುದನ್ನು ಹೇಳಿ ರಗಳೆಯನ್ನೆಬ್ಬಿಸುವುದಕ್ಕೆ ನನಗೆ ಇಷ್ಟವಿಲ್ಲ. ಆದರೆ ಒಂದು ಮಾತನ್ನು ಮಾತ್ರ ಹೇಳಿದರೆ ತಪ್ಪಾಗಲಿಕ್ಕಿಲ್ಲ ವೆಂದು ಭಾವಿಸುತ್ತೇನೆ. ಅದೇನೆಂದರೆ ಹತ್ತು ವರುಷಗಳಿಂದ ದೈಹಿಕ ದೌರ್ಬಲ್ಯ ದಿಂದ ಒದ್ದಾಡುತ್ತಿರುವ ನಾನು ಒಂಟಿಗನಾಗಿಯೇ ಇಷ್ಟೊಂದು ದೀರ್ಘವಾದ ಪ್ರವಾಸವನ್ನು ಅತ್ಯಂತ ನಿರಾಯಾಸದಿಂದ ಮುಗಿಸಿಕೊಂಡು ಬಂದುದು ಸಹ ಗುರು ದೇವರ ಅಗಾಧ ಕೃಪೆಯಿಂದಲೇ ಎಂದು ಭಾವಿಸದೆ ಇರುವುದಕ್ಕೆ ನನ್ನಿಂದಾಗದು.

"ಶ್ರೀ ಅರವಿಂದ ಆಶ್ರಮ"ವು ಪಾಂಡಿಚೇರಿಯಲ್ಲಿ ಊರಬಿಟ್ಟು ಹೊರಗೆ ಎಲ್ಲಿಯೋ ದೂರ ಅಡವಿಯಲ್ಲಿದೆಯೆಂತಲ್ಲ. ಊರಿನದೇ ಒಂದು ಕೊನೆಯ ಭಾಗ. ಸಮುದ್ರಕ್ಕೆ ಹೊಂದಿ ಹತ್ತು, ಹನ್ನೆರಡು ದೊಡ್ಡ ದೊಡ್ಡ ಬಿಲ್ಡಿಂಗುಗಳಿಂದ ಕೂಡಿದ್ದೇ ಆಶ್ರಮ. ಒಂದೊಂದು ಬಿಲ್ಡಿಂಗಿಗೂ ಒಮ್ಮಶಃ ಒಂದೊಂದು ದೊಡ್ಡ ಹೆಬ್ಬಾಗಿಲು, ಅವು ಯಾವಾಗಲೂ ಮುಚ್ಚಿಕೊಂಡೇ ಇರುತ್ತವೆ. ಅಲ್ಲಿರುವ ಐರೋಪ್ಯ ಹಾಗೂ ಭಾರತೀಯ ಸಾಧಕ ನರನಾರಿಯರು ತಮ್ಮ ನಿಶ್ಚಿತ ಸಮಯ ಗಳಲ್ಲಿ ಒಬ್ಬೊಬ್ಬರೇ ತಮ್ಮ ದೊಡ್ಡ ಕಟ್ಟಡದ ಹೆಬ್ಬಾಗಿಲನ್ನು ಕಿಂಚಿತ್ತಾಗಿ ತೆರೆದು ಕೊಂಡು ಹೊರಬಿದ್ದು ಗುರುದೇವರಿದ್ದ ಬಿಲ್ಡಿಂಗಿನ ಕಡೆಗೆ ಧೀರಗತಿಯಿಂದ ಹೋಗು ತ್ತಿರುತ್ತಾರೆ.

ಶ್ರೀ ಗುರುದೇವರೂ ಬಹುಶಃ ಅವರ ಪ್ರಮುಖ ಶಿಷ್ಯರೂ ಇರುವ ಬಿಲ್ಡಿಂಗು ಆ ಎಲ್ಲ ಕಟ್ಟಡಗಳ ನಟ್ಟನಡುವೆ ಇದೆ. ಪ್ರತಿಯೊಂದು ಬಿಲ್ಡಿಂಗಿನ ನಾಲ್ಕೂ ಮಗ್ಗುಲಿಗೆ ದೊಡ್ಡ ರಾಜಬೀದಿಗಳು ಇರುವವಾದರೂ ನಗರವಾಸಿಗಳಿಗೆ ಅಲ್ಲಿ ಅಡ್ಡಾಡುವದಕ್ಕೆ ಕಾರಣವೇ ಇಲ್ಲ.

ದರ್ಶನಾರ್ಥಿಗಳಿಗೆಲ್ಲ ದರ್ಶನದ ಮುನ್ನಾದಿನವೇ ಅವರವರ ನಂಬರು ಮತ್ತು ದರ್ಶನ ಸಮಯವನ್ನು ಆಶ್ರಮದಲ್ಲಿ ತಿಳಿಸಿರುತ್ತಾರೆ. ಹನ್ನೆರಡುನೂರು ಜನ ದರ್ಶನಾರ್ಥಿಗಳಲ್ಲಿ ನನಗೆ ಮಧ್ಯಾಹ್ನದಲ್ಲಿ ದರ್ಶನ ಲಭಿಸುವುದಾಗಿ ತಿಳಿಸಿದರು. ಆದರೂ ನಾನು ಮುಂಜಾನೆ ಆಶ್ರಮದ ಬಳಿಯಲ್ಲಿ ನಿಂತುಕೊಂಡು, ಒಳಗೆ ಹೋಗಿ ಬರುವವರನ್ನು ನಿರೀಕ್ಷಿಸುತ್ತಿದ್ದೆನು. ಮೊದಲಿಗೆ ಆಶ್ರಮದ ಶಿಷ್ಯರಿಗೆ ದರ್ಶನ ಲಾಭವಾಗುವದು. ಅವರು ಒಬ್ಬೊಬ್ಬರಾಗಿಯೇ ತಮ್ಮ ತಮ್ಮ ಹೊತ್ತಿಗೆ ಸರಿಯಾಗಿ ತಮ್ಮ ತಮ್ಮ ಕಟ್ಟಡದಿಂದ ಹೊರಬಿದ್ದು ಭಕ್ತಿಭರದಿಂದ ಬಾಗಿದವರಾಗಿ, ಬಾಹ್ಯದೃಷ್ಟಿಶೂನ್ಯರಾಗಿ, ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತ ಪೂಜಾಸಾಹಿತ್ಯದೊಂದಿಗೆ ದರ್ಶನಕ್ಕೆ ಹೋಗುತ್ತಿದ್ದರು. ಹಿಂದಿರುಗಿದಾಗ ಅವರಲ್ಲೆಷ್ಟೋ ಜನರಿಗೆ ನೆಲವು ಕಾಣಿಸುವದೊ ಇಲ್ಲವೊ ಅನ್ನುವಷ್ಟು ಅವರ ಕಣ್ಣುಗಳು ಅಂತರ್ಮುಖವಾಗಿರು ತ್ತಿದ್ದವು.

ಮಧ್ಯಾಹ್ನದಲ್ಲಿ ನಾನು ಪುನಃ ಸ್ನಾನ ಮಾಡಿ ಹೂಮಾಲೆಗಳನ್ನು ತೆಗೆದು ಕೊಂಡು ಅತ್ಯಂತ ಉತ್ಸುಕತೆಯಿಂದ ಆಶ್ರಮವನ್ನು ಪ್ರವೇಶಿಸಿದೆನು. ಮಧ್ಯಾಹ್ನಕ್ಕಿಂತ ಮೊದಲಿನ ದರ್ಶನಾರ್ಥಿಗಳಿಗೆ ಒಬ್ಬೊಬ್ಬರಿಗೇ ಪ್ರತ್ಯೇಕ ಪ್ರತ್ಯೇಕವಾಗಿ ದರ್ಶನ ಹಾಗೂ ಪಾದಸ್ಪರ್ಶನ ಲಾಭವಾಗುವುದು. ಹತ್ತು ಜನರಿಗೆ ಕೂಡಿ ಒಮ್ಮೆ ದರ್ಶನಲಾಭವಷ್ಟೇ ಆಗುತ್ತದೆ. ಸ್ಪರ್ಶನವು ಅವರಿಗಿಲ್ಲ, ನನಗೂ ಅಷ್ಟೇ.

ಅಟ್ಟದ ಮೇಲೆ ಒಂದು ಉದ್ದಕಿನ ಹಾಲಿನ ಕೊನೆಯಿರುವ ಚಿಕ್ಕ ಕೋಣೆಯಲ್ಲಿ ಶೃಂಗರಿಸಿದ ಮಂಚದ ಮೇಲೆ ಗುರುದೇವರು ವಿರಾಜಮಾನರಾಗಿರುತ್ತಾರೆ. ಅವರ ಬಲಗಡೆಗೇ ಮರೆಯಲ್ಲಿ ಯೋಗಸಿದ್ಧಿಯಲ್ಲಿ ಅವರ ಬಲಗೈಯ್ಯಂತಿರುವ ಶ್ರೀ ಮಾತೆಯವರು ಮಂಡಿಸಿರುತ್ತಾರೆ. ಅವರು ಐರೋಪ್ಯ ವಿದುಷಿಯರಾದರೂ ಹಿಂದೂ ಪದ್ಧತಿಯಂತೆ ನೀಲವರ್ಣದ ಜರದ ಪೀತಾಂಬರವನ್ನು ಉಟ್ಟುಕೊಂಡಿರುವರು. ಗುರುಅರವಿಂದಯೋಗಿಗಳು ಶುಭ್ರವಾದ ದೋತರವನ್ನು ಮಾತ್ರ ಉಟ್ಟುಕೊಂಡು ಬರಿಮೈಯಿಂದ ತಮ್ಮ ಅಜಾನುಬಾಹು ಮೂರ್ತಿಯನ್ನು ಭಕ್ತರಿದಿರಿಗೆ ಪ್ರದರ್ಶಿಸುತ್ತಿರುವರು.

ಈ ವರೆಗೆ ನಾವು ನೋಡಿದ ಅವರ ಯಾವ ಚಿತ್ರದಂತೆಯೂ ಈಗ ಅವರಿಲ್ಲ. ಆ ಸ್ಥಳದಲ್ಲಿ ವಿರಾಜಿಸುತ್ತಾರೆಂತಲೇ ಅವರನ್ನು ನಾವು ಗುರುತಿಸಬೇಕಾಗುವದು. ಅವರ ದೇಹದ ವಿಶಾಲತೆಯು ವಿಸ್ಮಯಕರವಾಗಿದೆ. ಫೋಟೋಗಳಲ್ಲಿ ನಾವು ನೋಡಿದ ಅವರ ತೆಳುವಾದ ಉದ್ದಕಿನ ದೇಹವೂ ಮುಖವೂ ಈ ಪರಿ ಅಗಲವೂ ಗಡುತರವೂ ಆಗಲಿಕ್ಕೆ ಶಕ್ಯವಿದೆಯೆಂದು ಯಾವ ಶಾಸ್ತ್ರಜ್ಞನೂ ಕಲ್ಪಿಸಲಾರನು. ಈ ವರೆಗೆ ಪ್ರಚಲಿತವಾಗಿರುವ ಅವರ ಎಲ್ಲ ಚಿತ್ರಗಳೂ ಇಪ್ಪತ್ತು ವರುಷಗಳಿಗಿಂತ ಮುಂಚಿನವೇ ಸರಿ. ಶ್ರೀ ಮಾತೃದೇವಿಯವರೂ ಕೂಡ ಈಗಿನ ಇಪ್ಪತ್ತು ವರುಷಗಳಲ್ಲಿ ತಮ್ಮ ಫೋಟೋವನ್ನೇ ಕೊಟ್ಟಿಲ್ಲವೆಂದು ಅಲ್ಲಿರುವ ಶಿಷ್ಯರ ಬಾಯಿಯಿಂದಲೇ ನಾನು ಕೇಳಿರುವೆನು.

ಗುರು ಅರವಿಂದಮಹರ್ಷಿಗಳು ವಯೋಮಾನದಿಂದ ಮಹಾತ್ಮಾಜಿಯವರಿಗಿಂತ ೩ ವರುಷಕ್ಕೆ ಕಿರಿಯರಷ್ಟೇ ? ಇದೀಗ ಅವರ ಮೈ ಮೊಗಗಳ ಮೇಲೆ ಅಷ್ಟು ವಯಸ್ಸು ಕಾಣುತ್ತದೆ. ಮುಪ್ಪು ಬರತೊಡಗಿದುದು ಕಣ್ಣಿಗೆ ಕಾಣುತ್ತದೆ. ಗಡ್ಡದ ಕೂದಲುಗಳು ನಸುಬಿಳುಪಾಗಿವೆ. ಇನ್ನೂ ಬೆಳ್ಳಗೆ ಬೆಳ್ಳಿಯಂತಾಗಿಲ್ಲ. ಸ್ವಲ್ಪ ಅರಿಷಿಣ ಮೂಡಿಯು ಮೇಲಿವೆ. ದೇಹದ ವರ್ಣವೂ ಸ್ವಾಭಾವಿಕವಾದುದೇ ಆಗಿದೆ.

ಆದರೆ ಇಷ್ಟೆಲ್ಲ ಅಲ್ಲಿ ಸ್ಪಷ್ಟವಾಗಿ ನೋಡುವದಕ್ಕೆ ಆಗುವದಿಲ್ಲ. ಸೂರ್ಯನ ಬೆಳಕಿನಲ್ಲಿ ಹಿಡಿದ ದೀವಿಗೆಯಂತೆ ಆಗ ದರ್ಶನಾರ್ಥಿಗಳ ತೇಜೋಭಂಗವಾಗು

ತ್ತಿರುವದರಿಂದ ಜೀವದ ಅಂತರಾಳದಲ್ಲಿ ಅತೀವವಾದ ನಾಚಿಕೆಯೊಂದು ತಲೆದೋರಿ ನಮ್ಮ ಕಣ್ಣುಗಳನ್ನೇ ಮೇಲಕ್ಕೆ ಎತ್ತುಗೊಡುವದಿಲ್ಲ. ಕುತೂಹಲವೇನೋ ಅತಿಶಯುವಾಗಿಯೇ ಇರು ಪ ದಾ ದ ರೂ ಲಜ್ಜೆಯು ಇದಿರಿಗೆ ಅದರ ಆಟವೇ ನಡೆಯುವದಿಲ್ಲ.

ನಾಲ್ಕು ಸಾರೆ ಸಾಷ್ಟಾಂಗ ನಮಸ್ಕಾರ ಹಾಕುವುದಕ್ಕೆ ನಮಗೆ ಹೇಳಿರುತ್ತಿರು ವರು. ನಮಸ್ಕಾರಕ್ಕೆ ಮಾತ್ರ ಜೀವವು ಬಹಳ ಉತ್ಸುಕವಾಗಿರುತ್ತದೆ. ಕಣ್ಣೆತ್ತಿ ನೋಡುವದೆಂದರೆ ಮಾತ್ರ ಸಂಕಟಕ್ಕೇ ಬರುತ್ತದ. ಆದರೂ ಕುತೂಹಲವು ಬಹಳ ಕಷ್ಟಬಟ್ಟು ಒಂದಿಷ್ಟಾದರೂ ಕಳ್ಳದೃಷ್ಟಿಯಿಂದಲೇ ಆಗಲೊಲ್ಲದೇಕೆ ನೋಡಹಚ್ಚು ತ್ತದೆ. ಇಷ್ಟಾದರೆ ಹಿಂದಿರುಗುವುದೇ ಸರಿ.

ಹತ್ತು ಜನರ ದರ್ಶನ ಮುಗಿಯುವವರೆಗೂ ಎಷ್ಟೋ ಹೊತ್ತು ಕೆಲವರಿಗೆ ಅಲ್ಲಿ ನಿಲ್ಲುವ ಸುಸಂಧಿ ಲಭಿಸಿದರೂ ಗುರುದೇವರ ಕಡೆಗೆ ಕಣ್ಣೆತ್ತಿ ನೋಡುವುದಕ್ಕೆ ಯಾರಿಂದಾದೀತು. ಗುರುದೇವರಾದರೋ ದಿಂಬಕ್ಕೆ ಆತುಕೊಂಡು ಕಣ್ಣು ತೆಗೆದು ಭಕ್ತರನ್ನು ನೋಡುತ್ತ ಬಹಳ ಸ್ವಾಭಾವಿಕ ರೀತಿಯಲ್ಲಿ ಕೂತುಕೊಂಡಿರುತ್ತಾರೆ.

ನಾನು ಸಾಷ್ಟಾಂಗ ಹಾಕುತ್ತಿರುವಾಗ ಶ್ರೀ ಗುರುದೇವರೂ ಶ್ರೀ ಮಾತೃದೇವಿ ಯವರೂ ನನ್ನನ್ನು ಹೆಚ್ಚು ಅಕ್ಕರತೆಯಿಂದ ಕಂಡರೆಂದು ಆಗಿನ ಅವರ ವಿಶಿಷ್ಟ ಅಂಗಚಲನದಿಂದ ನನಗೆ ಅನಿಸಿತು !!! ಅದರಿಂದ ನನಗೆ ಹೆಚ್ಚು ಹರುಷವಾಯಿತು !!! ನನ್ನ ಬಹುವರ್ಷದ ಅಪಾರ ಕಾತರವು ನನ್ನ ಜನನೀ ಜನಕರ ಗಮನಕ್ಕೆ ಬಂತೆಂದರಿತು ನಾನು ಬಹು ಬಹುವಾಗಿ ಹಿಗ್ಗಿದೆನು.

"ನಾನು ಹದಿನಾಲ್ಕು ವರುಷ ಏಕಲವ್ಯನಂತೆ ತಮ್ಮನ್ನು ಭಜಿಸುತ್ತಲೂ, ನನ್ನ ಪ್ರಗತಿಗೆಲ್ಲ ತಮ್ಮ ಗುಪ್ತ ಆಶೀರ್ವಾದವೇ ಕಾರಣವೆಂದು ನಂಬುತ್ತಲೂ ಇರುವುದರ ಅರಿಕೆ ತಮಗಿದೆಯೆಂಬುದರ ಬಗೆಗೆ ಯಾವ ವಿಧದಿಂದಲಾದರೂ ನನಗೆ ತಾವು ಪ್ರತ್ಯಕ್ಷವಾಗಿ ಪ್ರಮಾಣಿಸಿಕೊಡಲಿಕ್ಕೇಬೇಕು. ಇಲ್ಲದಿದ್ದರೆ ನನ್ನ ಆಳವಾದ ಆಂತರಿಕ ವಿಶ್ವಾಸವು ಅಂಧಶ್ರದ್ಧೆಯಾಗಿ ಬಿಡುವದಲ್ಲಾ ! ! !" ಎಂದು ನನ್ನ ಜೀವವು ನನ್ನ ಈ ದೇವ ದೇವಿಯರಲ್ಲಿ ಯಾವಾಗಲೂ ಒಳಗೊಳಗೆ ಮೊರೆಯಿಡುತ್ತಲಿದ್ದಿತು.

ಇಷ್ಟೆಲ್ಲ ಹೇಳಿದರೂ ವಾಚಕರ ಒಂದು ಕೌತುಕದ ಪ್ರಶ್ನಕ್ಕೆ ಇನ್ನೂ ಉತ್ತರವೇ ಸಿಕ್ಕಂತಾಗಲಿಲ್ಲ. ಅದೇನೆಂದರೆ ದರ್ಶನಾರ್ಥಿಗಳಿಗೆ ಅಲ್ಲಿ ಅಲೌಕಿಕ ಚಮತ್ಕೃತಿ ಗಳೇನಾದರೂ ಘಟಿಸುವವೇ ಹೇಗೆ ???—

ಎಷ್ಟೋ ಆಗಲೊಲ್ಲದೇಕೆ, ಅಲ್ಲಿ ಅವರವರ ಇಚ್ಛಾಪೂರ್ತಿಯು ಆಗದೆ ಹೋಗುವದಿಲ್ಲವೆಂದು ಮಾತ್ರ ನನ್ನ ಅನುಭವವು ಹೇಳುತ್ತದೆ. ನಾನು ಅಂತಹ ದೇನನ್ನು ಅಪೇಕ್ಷಿಸದೆ ಕೇವಲವೆಂದರೆ ಕೇವಲ ದರ್ಶನದ ಆಶೆಯೊಂದನ್ನೇ ಇಟ್ಟು

ಕೊಂಡು ಹೋಗಿದ್ದೆನಾದರೂ ನನ್ನ ಸಾಧನ ಜೀವನದ ಕಂಟಕಗಳೆಷ್ಟೋ ಆಗಿನಿಂದ ಮಾಯವಾಗಿ ಹೋದವು. ಧನ್ಯೋಽಹಂ! ಧನ್ಯೋಽಹಂ!! ಧನ್ಯೋ ಧನ್ಯಃ ಪುನಃ ಪುನಃ ಧನ್ಯಃ !!!

ಕೊನೆಯಲ್ಲಿ ಒಂದು ಮಾತನ್ನು ನಿವೇದಿಸಿಕೊಳ್ಳದೆ ನನ್ನ ಜೀವಕ್ಕೆ ಸಮಾಧಾನ ವಾಗದು. ಅದೇನಂದರೆ ಶ್ರೀ ಗುರುದೇವರೂ ಮಾತಾಜಿಯವರೂ ನನ್ನನ್ನು ವಿಶೇಷವಾದ ಅಕ್ಕರತೆಯಿಂದ ಕಂಡರೆಂಬ ವಿಷಯವನ್ನು ನಾನು ಇಲ್ಲಿ ಬರೆಯುವಾಗ ನನಗಾದ ಸಂಕಟಕ್ಕೆ ಲೆಕ್ಕವಿಲ್ಲ. ಮೊದಲೇ ನಾಚುಬುರಕನಾದ ನಾನು ಇಂಥ ಸ್ವಕೀಯವಾದ ಒಳಮಾತನ್ನು ಬಿಚ್ಚಿ ಹೇಳುವದೆಂದರೆ ಎಂಥ ಅಪಾರವಾದ ಕಳವಳವು ನನ್ನಲ್ಲುಂಟಾಗಿರಬಹುದೆಂಬುದನ್ನು ಊಹಿಸುವದಕ್ಕೆ ವಾಚಕರಿಗೇ ಬಿಟ್ಟು ಗೊಡುವೆನು.

ಓಂ ಶ್ರೀ ಓಂ

'ವಸಂತ' ಜೂನ ೧೯೩೯

# ಸತ್-ಚಿತ್ ಅಥವಾ ಶಿವ-ಶಕ್ತಿಯರು

ಸತ್, ಚಿತ್, ಆನಂದ, ವಿಜ್ಞಾನ, ಮನ, ಪ್ರಾಣ, ಅನ್ನ ಎಂಬ ಏಳು ಮಹಾತತ್ತ್ವಗಳು ಬ್ರಹ್ಮಾಂಡದಲ್ಲಿಯೂ, ಪಿಂಡಾಂಡದಲ್ಲಿಯೂ ಇವೆಯೆಂದು ಅನಾದಿಕಾಲದಿಂದಲೂ ಹೇಳಲಾಗುತ್ತಿದೆಯಷ್ಟೆ? ಪರಮಾತ್ಮನಿಗೆ ಸಚ್ಚಿದಾನಂದ ನೆಂದು ಹೇಳುತ್ತಿರುವ ವಿಷಯವೂ ನಮಗೆಲ್ಲ ಗೊತ್ತಿದ್ದ ವಿಷಯವೇ ಆಗಿದೆ.

ಸತ್-ಚಿತ್-ಆನಂದ, ಇವುಗಳಲ್ಲಿ ಸತ್ ಎಂಬುದೇ ಪರಶಿವಸ್ವರೂಪವು. ಅದು ಪರಮಶಾಂತಿಮಯ ಸ್ವರೂಪವು. ಚಿತ್ ಎಂಬುದೇ ಜಗನ್ಮಾತೆಯ ಸ್ವರೂಪವು, ಅದು ಪರಮ ಸಕ್ರಿಯ ಸ್ವರೂಪವು, ಪರಮ ಶಕ್ತಿಮಯ ಸ್ವರೂಪವು.

ಶ್ರೀಅರವಿಂದರು ತಮ್ಮೊಬ್ಬ ಶಿಷ್ಯರಿಗೆ ಬರೆದ ಒಂದು ಪತ್ರದಲ್ಲಿ ("ಅನಾಮಿ" ಎಂಬ ಬಂಗಾಲೀ ಕವಿತಾಗ್ರಂಥದ ಸುದೀರ್ಘ ಪರಿಶಿಷ್ಟದಲ್ಲಿ) ಹೀಗೆ ಹೇಳಿದ್ದಾರೆ :

"ನಿಮಗೆ ಶಾಂತಿಯು ಅನುಭವಕ್ಕೆ ಬಂದಾಗ ನಿಮ್ಮ ಇದಿರಿಗೆ ಶಿವನು ಬಂದಿದ್ದಾನೆಂದು ತಿಳಿಯಿರಿ; ನಿಮಗೆ ಶಕ್ತಿಯು ಅನುಭವಕ್ಕೆ ಬಂದಾಗ ಜಗನ್ಮಾತೆಯು ನಿಮ್ಮ ಇದಿರಿಗೆ ಬಂದಿರುವಳೆಂದು ತಿಳಿಯಿರಿ.

ಹೀಗೆ ಪರಮ ಶಾಂತಿಮಯನೂ, ಪರಮ ಶಕ್ತಿಮಯಿಯೂ ಕೂಡಿಯೇ ಅರ್ಧನಾರೀ ನಟೇಶ್ವರನು, ಇವರೇ ಶಿವಶಕ್ತಿಯರು.

ಶಾಂತಿಮಯ ಶಿವನ ಸಂಕಲ್ಪ ಹಾಗೂ ಶಕ್ತಿಮಯಿಯಾದ ಜಗನ್ಮಾತೆಯ ಕಾರ್ಯಕಾರಿತೆ, ಇವೆರಡೂ ಕೂಡಿದ್ದೇ ವಿಶ್ವ ಲೀಲೆಯು.

ನಮ್ಮ ಕನ್ನಡ ನಾಡಿನ ಒಂದು ಮಂಗಳಾರತಿಯ ಪದ್ಯದಲ್ಲಿ ಕೂಡ ಮೇಲ್ಕಂಡ ಈ ತತ್ತ್ವವು ಸಹಜವಾಗಿ ಪರಿಸ್ಫುರಣಗೊಂಡದ್ದನ್ನು ನೋಡಿದರೆ ಆಶ್ಚರ್ಯ ವೆನಿಸುವದು. ಅದು ಹೀಗಿದೆ :-

"ಶ್ರೀ ಶಿವರಾಯನ ಚಿಚ್ಛಕ್ತೇ
ಬ್ರಹ್ಮಾಂಡದೊಳು ಭರಿತೇ ।
ಕಾರ್ಯರೂಪ ಪ್ರಖ್ಯಾತೇ ।
ಅನಿಸಿದೆ ಪಾರ್ವತೇ ॥"

ಕಾರಣರೂಪನು ಪರಶಿವನು, ಕಾರ್ಯರೂಪಳು ಜಗನ್ಮಾತೆಯು, ಈ ಮಹಾ ತಾಯಿತಂದೆಗಳ ಸ್ವರೂಪವನ್ನು ಶ್ರೀ ಅರವಿಂದರು ತಮ್ಮ ಅಗಾಧವಾದ "ಸಾವಿತ್ರಿ" ಮಹಾಕಾವ್ಯದಲ್ಲಿ ಅತ್ಯಂತ ಹೃದಯಂಗಮವಾಗಿ ವರ್ಣಿಸಿರುವರು, ಅದಂ ಹೇಗೆಂದರೆ :

"A pure existence safe from
thought and mood.
A consciousness of unshared
immortal bliss,
It dwelt aloof in its
bare infinite,
One and unique,
unutterably sole.
A being formless, featureless
and mute
That knew itself by its own
timeless self,
Aware forever in its
motionless depths
... ... ... ... ... ... ...
A silent cause occult,
impenetrable
Infinite, eternal,
unthinkable, alone."

Savitri, Book III canto I.

* * * * * *

"In absolute silence sleeps
an absolute power
... ... ... ... .... ... ...

She is the golden bridge,
the wonderful fire,
The luminous heart of
the unknown is she,
A power of silence in the
depths of God;
She is the Force, the
inevitable word.
The Formless and the Formed
were joined in her"

Savitri, Book III canto II

"ಶುದ್ಧ ಸತ್ತೆಯು, ಭಾವ-ವಿಚಾರಗಳ ಸ್ಪರ್ಶವಿಲ್ಲದ್ದು, ಯಾವುದರ ಮಿಶ್ರಣವೂ ಇಲ್ಲದ ಅಮರ ಆನಂದಮಯ ಪ್ರಜ್ಞೆಯು. ಅದು ತನ್ನ ಬಿಚ್ಚು ಅನಂತತೆಯಲ್ಲಿ ತನ್ನೊಳಗೆ ತಾನಿಹುದು. ಒಂದು, ಅದ್ವಿತೀಯವು, ಅನಿರ್ವಚನೀಯವಾಗಿ ಏಕಾಂಗಿಯು. ಆತನೊಬ್ಬ ಪುರುಷನು, ಆಕಾರವಿರಹಿತನು, ಕುರುಹಿಲ್ಲದವನು. ತನ್ನ ಕಾಲಾತೀತ ಸ್ವಾತ್ಮದಲ್ಲಿ ತನ್ನ ತಾನರಿವವನು. ತನ್ನ ನಿಶ್ಚಲ ಗಂಭೀರತೆಯಲ್ಲಿ ಸದಾ ಸ್ವಯಂ ಪ್ರಜ್ಞನು...... ಸ್ತಬ್ಧ ರಹಸ್ಯಮಯ ಕಾರಣನು, ಅನಂತನು, ಶಾಶ್ವತನು, ಅನಿರ್ವಚನೀಯನು, ಏಕಮೇವಾದ್ವಿತೀಯನು."

—"ಸಾವಿತ್ರಿ" ಕಾಂಡ ೩, ಸರ್ಗ–೧

"ಸಾರ್ವಭೌಮಿಕ ನಿಶ್ಶಬ್ದತೆಯಲ್ಲಿ ಸಾರ್ವಭೌಮಿಕ ಶಕ್ತಿಯು ಸುಪ್ತವಾಗಿಹುದು...... ಅವಳು ಸುವರ್ಣ ಸೇತುವೆಯಾಗಿಹಳು, ಆಶ್ಚರ್ಯಮಯ ಅಗ್ನಿಯಾಗಿಹಳು, ಅವಳು ಅಜ್ಞೇಯನ ದೇದೀಪ್ಯಮಾನವಾದ ಹೃದಯವಾಗಿಹಳು. ದೇವನ ಆಳದಲ್ಲಿರುವ ನಿಶ್ಶಬ್ದತೆಯ ಶಕ್ತಿಯಾಗಿಹಳು. ಅಪರಿಹಾರ್ಯವಾದ ಶಬ್ದವಾಗಿಹಳು...... ನಿರಾಕಾರ ಸಾಕಾರಗಳು ಅವಳಲ್ಲಿ ಒಂದಾಗಿಹವು."

— "ಸಾವಿತ್ರಿ" ಕಾಂಡ ೩ ಸರ್ಗ–೨

ಶ್ರೀ ಮಾತಾಜಿಯವರು ತಮ್ಮ ದಿವ್ಯ ವಾರ್ತಾಲಾಪಗಳ ಗ್ರಂಥದಲ್ಲಿ ("ಮಾತೃವಾಣಿ") ಈ ವಿಷಯವನ್ನು ಇನ್ನೊಂದು ಪ್ರಕಾರದಿಂದ ಬಹಳ ಸ್ಪಷ್ಟವಾಗಿ ನಿರೂಪಿಸಿರುವರು. ಅದು ಹೇಗೆಂದರೆ :–

"All is from the Divine, but the One Consciousness, the Supreme has not created the world directly out of itself; a Power has gone out from it and has descended

through many gradation of its workings and passed through many agents."

Words of the Mother, Chapter XIII

"ಎಲ್ಲವೂ ಪರಮಾತ್ಮನಿಂದಲೇ ಬರುವದು. ಆದರೆ ಆ ಏಕಮೇವಾದ್ವಿತೀಯ ಪ್ರಜ್ಞೆಯು, ಅಂದರೆ ಪರಾತ್ಪರನು ಜಗತ್ತನ್ನು ನೇರವಾಗಿ ತನ್ನೊಳಗಿಂದ ಹೊರ ಬೀಳುವದು. ಹಾಗೂ ಅದು ತನ್ನ ಕಾರ್ಯದ ಅನೇಕ ಸ್ತರಗಳನ್ನು ರಚಿಸಿ ಅವುಗಳ ಮುಖಾಂತರವಾಗಿ ಹಾಗೂ (ತನ್ನಿಂದಲೇ ರಚಿತವಾದ) ಅನೇಕ ಪ್ರತಿನಿಧಿಗಳ (ದೇವತೆಗಳ) ಮುಖಾಂತರವಾಗಿ ಅವತರಣಗೊಳ್ಳುವದು".

— ಮಾತೃವಾಣಿ, ಅಧ್ಯಾಯ ೧೩.

ರಾಜನಿಗೆ ಮಂತ್ರಿ ಹೇಗೋ, ಪರಮಾತ್ಮನಿಗೆ ಪರಮೇಶ್ವರಿಯು ಹಾಗೆ ಎಂದು ಊಹಿಸಿಕೊಳ್ಳಬಹುದು. ರಾಜನ ಸಂಕಲ್ಪವನ್ನೆಲ್ಲ ಕಾರ್ಯರೂಪಕ್ಕೆ ತರು ವವನು ಮಂತ್ರಿ, ಸಂಕಲ್ಪವೆಲ್ಲಾ ರಾಜನದೇ. ಆದರೆ ಅದರ ಕಾರ್ಯನಿರ್ವಹಣ ವೆಲ್ಲಾ ಮಂತ್ರಿಯದು. ಅಂತಲೇ ಶ್ರೀ ಅರವಿಂದರು "ಮಾತಾ" ಗ್ರಂಥದ ಕೊಟ್ಟ ಕೊನೆಯ ವಾಕ್ಯಖಂಡದಲ್ಲಿ ಹೀಗೆ ನಿರೂಪಿಸಿದ್ದಾರೆ :–

"There is needed the call from below... and there is needed the sanction of the Supreme from above. The power that mediates between the sanction and the call is the presence and power of the divine Mother".

The Mother, page 89

"ಕೆಳಗಿನಿಂದ ಕರೆಯು ಅವಶ್ಯವಾಗಿ ಬೇಕು; ಹಾಗೂ ಮೇಲಿನಿಂದ ಪರಾತ್ಪರನ ಅನುಮತಿಯು ಬೇಕು. ಈ ಅನುಮಂತಿ ಹಾಗೂ ಕರೆಗಳ ನಡುವೆ ಮಧ್ಯಸ್ಥಿಕೆ ಮಾಡುವ ಶಕ್ತಿ ಯಾವುದೆಂದರೆ ಭಗವತೀಮಾತೆಯು ಸಾನಿಧ್ಯ ಹಾಗೂ ಶಕ್ತಿ.

— "ಮಾತಾ" ಪುಟ ೮೯.

ಇದೇ ವಿಷಯವನ್ನು ಶ್ರೀ ಅರವಿಂದರು ತಮ್ಮ ದಿವ್ಯ ಮಹಾಕಾವ್ಯವಾದ "ಸಾವಿತ್ರಿ"ಯಲ್ಲಿ ಅತಿ ಮನೋಹರವಾಗಿ ವರ್ಣಿಸಿದ್ದಾರೆ. ಅದು ಹೇಗೆಂದರೆ :–

"Heaven is too high for
out-stretched hands to seize
This Light comes not by
struggle or by thought;
In the mind's silence the
Transcendent acts

And the hushed heart hears
 the unuttered Word.
A vast surrender was
 his only strength
A power that lives upon
 the heights must act
Bring into the life's closed room
 the immortal's air
And fill the finite with
 the Infinite''

''Savitri'' Book III Canto II

"ಸ್ವರ್ಗವು ನಮ್ಮ ಚಾಚಿದ ಕೈಗಳಿಗೆ ನಿಲುಕಲಾರದಷ್ಟು ಬಹು ಮೇಲೆ ಇದೆ. ಈ ಜ್ಯೋತಿ ನಮ್ಮ ಪ್ರಯತ್ನದಿಂದಾಗಲಿ ವಿಚಾರದಿಂದಾಗಲಿ ಲಭಿಸದು. ಮನವು ಮೌನಗೊಂಡಾಗ ಸರ್ವಾತೀತನ ಕ್ರಿಯೆ ನಮ್ಮೊಳಗೆ ಆರಂಭವಾಗುವದು, ಸ್ತಬ್ಧ ಹೃದಯವು ಅನುಚ್ಚಾರಿತ ವಾಣಿಯನ್ನು ಕೇಳುವದು. ವಿಶಾಲವಾದ ಸಮರ್ಪಣವೇ ಮಾನವನ ಏಕಮಾತ್ರವಾದ ಸಾಮರ್ಥ್ಯವಾಗಿಹುದು. ಔನ್ನತ್ಯದ ಮೇಲೆ ವಾಸವಾಗಿರುವ ಒಂದು ಶಕ್ತಿಯು ಕಾರ್ಯಕಾರಿಯಾಗಲಿಕ್ಕೆ ಬೇಕು. ಜೀವನದ ಮುಚ್ಚಿದ ಕೋಣೆಯಲ್ಲಿ ಅಮರತೆಯ ವಾತಾವರಣವನ್ನದು ತಂದು ಸಾಂತದೊಳಗೆ ಅನಂತವನ್ನು ತುಂಬಲು ಬೇಕು."

—"ಸಾವಿತ್ರಿ" ಕಾಂಡ ೩, ಸರ್ಗ ೨.

ಆ ಪರಾತ್ಪರ ಮೌನಸ್ವರೂಪನೇ ಮಹಾತಂದೆ, ಈ ಮಹಾಶಕ್ತಿಯೇ ಮಹಾತಾಯಿ. ಆತನೇ ಸತ್, ಇವಳೇ ಚಿತ್, ಓಂ ಸಚ್ಚಿದಾನಂದ. ಜಗತಃಪಿತರೌ ವಂದೇ ಪಾರ್ವತೀ ಪರಮೇಶ್ವರೌ!!

ಓಂ ಶ್ರೀ ಓಂ

ಉದಯ (ವಿಶೇಷ ಸಂಚಿಕೆ) ೧೫-೮-೪೮

ಬಾಳು

---

| | | |
|---|---|---|
| (ಅ) | ಆಯುರ್ಮರ್ಯಾದೆ : | ೧. ಮನುಷ್ಯನ ಜನ್ಮಸಿದ್ಧವಾದ ಆಯುಷ್ಯವು ೧೦೦ ವರ್ಷ |
| | | ೨. ಸದಾಚರಣೆಯ ಮನುಷ್ಯನ ಆಯುಷ್ಯವು ೧೦೦ ಕ್ಕಿಂತ ಹೆಚ್ಚು |
| | | ೩. ದುರಾಚರಣೆಯ ಮನುಷ್ಯನ ಆಯುಷ್ಯವು ೧೦೦ ಕ್ಕಿಂತ ಕಡಿಮೆ |
| (ಆ) | ಗ್ರೀಕ ಇತಿಹಾಸಕಾರನಾದ ಆರಾಸನ ಹೇಳಿಕೆ | ೧. (ನನ್ನ ಕಾಲದಲ್ಲಿ) ಹಿಂದೂಗಳ ಸರ್ವಸಾಧಾರಣ ಆಯುಷ್ಯವು ೧೦೦ ಕ್ಕಿಂತ ಹೆಚ್ಚು ವರ್ಷ |
| | | ೨. ನಾನು ಈ (೧೪೦) ವಯಸ್ಸಿನವರಾದ ಎಷ್ಟೋ ಜನರನ್ನು ಕಣ್ಣಾರೆ ಕಂಡಿದ್ದೇನೆ. |

(ಇ) ಮಹಾಭಾರತದ ಯುದ್ಧದ ಕಾಲಕ್ಕೆ ಜೀವಿಸಿದ ವೀರರ ವಯೋಮಾನವು

| | | |
|---|---|---|
| ೧. | ಭೀಷ್ಮಾಚಾರ್ಯ | ೧೭೦ ವರ್ಷ |
| ೨. | ಧೃತರಾಷ್ಟ್ರ | ೧೫೦ ,, |
| ೩. | ಧರ್ಮರಾಜ | ೭೦ ,, |
| ೪. | ಭೀಮ, ಅರ್ಜುನ ನಕುಲ, ಸಹದೇವ | ೭೦ ರಿಂದ ೬೬ ವರ್ಷ |
| ೫. | ದುರ್ಯೋಧನ | ೬೯ ವರ್ಷ |
| ೬. | ಕೃಪಾಚಾರ್ಯ | ೯೫ ,, |
| ೭. | ಶ್ರೀಕೃಷ್ಣ | ೮೩ ,, |
| ೮. | ದ್ರೋಣಾಚಾರ್ಯ | ೮೦ ,, |
| ೯. | ಕರ್ಣ | ೮೨ ,, |
| ೧೦. | ಶಕುನಿ | ೮೫ ,, |
| ೧೧. | ವಿದುರ | ೧೦೫ ,, |
| ೧೨. | ವ್ಯಾಸಮಹರ್ಷಿ | ೧೫೫ ,, |

ಭಾರತ ಯುದ್ಧದ ತರುವಾಯ ಪಾಂಡವರು ೩೬ ವರ್ಷ ರಾಜ್ಯಭಾರವನ್ನು ವಹಿಸಿದ್ದರು.

(ಈ) ಅವರ ಶಕ್ತಿ : ೧. ಧೃತರಾಷ್ಟ್ರ ತನ್ನ ೧೦೬ ನೆಯ ವರ್ಷ ವಯಸ್ಸಿನಲ್ಲಿ ಭೀಮಸೇನನ ಉಕ್ಕಿನಮೂರ್ತಿಯನ್ನಪ್ಪಿ ಒತ್ತಿ ಪುಡಿಪುಡಿ ಮಾಡಿದನು.

೨. ಗದಾಯುದ್ಧದ ವೇಳೆಗೆ ಭೀಮ–ದುರ್ಯೋಧನರ ವಯಸ್ಸು ೭೦ ರ ಮನೆಯಲ್ಲಿದ್ದಿತು.

(ಉ) ಮತ್ತೆ ಕೆಲವರ ಪೂರ್ಣ ಆಯುಷ್ಯ : ೧. ಶ್ರೀಕೃಷ್ಣ ೧೨೫, ೨. ವಸುದೇವ ೧೫೦, ೩. ದೇವಕಿ ೧೪೦, ೪. ಸಾದಿಕವಿ (ಇರಾಣ) ೧೦೨, ೫. ಅತ್ತರಕವಿ (ಇರಾಣ) ೧೧೪.

(ಊ) ಭೀಷ್ಮರ ಕಾಲದಲ್ಲಿ ನಡೆದುದು : ೧. ಭೀಷ್ಮರ ಜನ್ಮ ೧ನೆಯ ವರ್ಷ,

೨. ಭೀಷ್ಮರ ಗುರುಕುಲವಾಸ ಮತ್ತು ಯುವ-ರಾಜ್ಯಾಭಿಷೇಕ ೨೦ ನೆಯ ವರ್ಷ

೩. ಶಂತನು ಚಕ್ರವರ್ತಿಯ ದ್ವಿತೀಯ ವಿವಾಹವೂ, ಭೀಷ್ಮನ ಆಜನ್ಮ ಬ್ರಹ್ಮಚರ್ಯ ಪಾಲನ ಪ್ರತಿಜ್ಞೆಯೂ– ೨೨ ನೆಯ ವರ್ಷ

೪. ಮಲತಮ್ಮನಾದ ಚಿತ್ರಾಂಗದನು ಪ್ರಬುದ್ಧನಾಗಿ ೮ ವರ್ಷ ರಾಜ್ಯವನ್ನಾಳಿ ಸತ್ತನು– ೫೦ ನೆಯ ವ.

೫. ಎರಡನೆಯ ಮಲತಮ್ಮನಾದ ವಿಚಿತ್ರವೀರ್ಯನು ೮ ವರ್ಷ ರಾಜ್ಯವನ್ನಾಳಿ ಸತ್ತನು –೬೩ ನೆಯ ವ.

೬. ಧೃತರಾಷ್ಟ್ರ, ಪಾಂಡು, ವಿದುರರ ಜನ್ಮ –೬೫ ನೆಯ ವರ್ಷ

೭. ಪಾಂಡುರಾಜನ ಪಟ್ಟಾಭಿಷೇಕ –೮೩ ನೆಯ ವರ್ಷ

೮. ಪಾಂಡು ೧೨ ವರ್ಷ ರಾಜ್ಯವನ್ನಾಳಿ ರೋಗಿ-ಯಾದನು –೯೫ ನೆಯ ವರ್ಷ

೯. ದುರ್ಯೋಧನಾದಿಗಳ ಜನ್ಮ –೧೦೦ ನೆಯ ವರ್ಷ

೧೦. ಪಾಂಡವರ ವಿದ್ಯಾಭ್ಯಾಸ ಸಮಾಪ್ತಿಯೂ ಕಲಹಾರಂಭವೂ –೧೨೦ ನೆಯ ವರ್ಷ

೧೧. ಪಾಂಡವರು ಇಂದ್ರಪ್ರಸ್ಥದಲ್ಲಿ ಹೊಸರಾಜ್ಯವನ್ನು ಸ್ಥಾಪಿಸಿದರು. –೧೨೦ ನೆಯ ವರ್ಷ
೧೨. ಪಾಂಡವರು ೨೫ ವರ್ಷ ಆಳಿ ರಾಜಸೂಯಯಾಗ ವನ್ನೆಸಗಿದರು. –೧೫೭ ನೆಯ ವರ್ಷ
೧೩. ಪಾಂಡವರ ಆರಣ್ಯವಾಸ, ಅಜ್ಞಾತವಾಸ, ಭಾರತಯುದ್ಧ ಇತ್ಯಾದಿ –೧೭೦ ನೆಯ ವರ್ಷ

(ಎ) ಆಧುನಿಕರು
೧. ಮಲ್ಲಾರಿ ಧನಗರ (ಅಂಬೋಲಿ ಘಾಟ) ೧೧೫ ವರ್ಷ
೨. ರಾಮಸೇನ ಭುರಕ್ಕ ಸೋನಾರ (ಸಾತಾರಾ) ೧೦೮ ವರ್ಷ
೩. ಮಹಮ್ಮದಖಾನ (ಸಂ. ಕೊಲ್ಲಾಪುರ) ೧೦೮ ವರ್ಷ
೪. ಜಾಫರಖಾನ (ಸಂ. ಕೊಲ್ಲಾಪುರ) ೧೦೮ ವರ್ಷ
೫. ಸಿಡೆನ್‌ಕೂಪರ್ ಚಿತ್ರಕಾರ (ಇಂಗ್ಲಂಡ) ೧೦೧ ವರ್ಷ
೬. ನಿಜಾಮ ಉಲ್ಮುಲ್ಕ (ಹೈದರಾಬಾದ) ೧೦೪ ವರ್ಷ
೭. ರಾಮಲಾಲ (ಹರಿದ್ವಾರದ ಹತ್ತಿರ ಕಾಂಗಡಿ ಬಿಜನೋರಲ್ಲಿ) ಸದ್ಯದ ವಯಸ್ಸು ೧೦೪ ವರ್ಷ
೮. ಪಂಡಿತ ಪ್ರಭಾಕರಶಾಸ್ತ್ರಿ ೧೦೮ ವರ್ಷ

(ಏ) ಯುರೋಪದಲ್ಲಿ
೧. ಥಾಮಸ್‌ಪಾರ್ ೧೫೨ ವರ್ಷ
೨. ಹೆನ್ರಿ ಜೋಕಿನ್ಸ್ ೧೬೯ ವರ್ಷ
೩. ಮೇರಿ ಬಿಲಿಂಜ್ ೧೧೨ ವರ್ಷ
೪. ಕೌಂಟಸ್ ಡೆಸ್ಮಾಂಡ್ ೧೪೦ ವರ್ಷ
೫. ಕ್ಯಾಥೆರಾಯಿನ್ ಏಡನ್ ೧೦೧ ವರ್ಷ (ರೋಮಾನಿಯಾ, ಬಲ್ಗೇರಿಯಾ ಮುಂತಾದ ದೇಶಗಳಲ್ಲಿ ೧೨೫ ವರ್ಷ ವಯಸ್ಸಿನವರು ಈಗಲೂ ಇರುವರು.)

(ಐ) ಬಾಯ್ಬಲ್ಲಿನಲ್ಲಿ ಹೇಳಿದುದು
೧. ಅಬ್ರಾಹಿಮನು ೧೭೫ ವರ್ಷ
೨. ಐರಸ್ಯಾಕನ್ ೧೮೦ ವರ್ಷ

(ಒ) ಈಗಲೂ
೧. ನರಸಪ್ಪ ಕುಲಕರ್ಣಿ (ಮಸಳಿ, ಇಂಡಿ ತಾಲೂಕು) ಇವನು ೧೦೨ ವರ್ಷದವನಾಗಿ ಸತ್ತನು. ಇವನು ಹರೆಯದವನಿದ್ದಾಗ ಒಂದು ದಿನ ಇವರವ್ವನು "ಮಳೆ ಹತ್ತಿದೆ, ಹೇಗೆ ಹಿಂಡಿಕೊಳ್ಳಬೇಕು?" ಎಂದೆನ್ನುವದೇ ತಡ, ಎಮ್ಮೆಯನ್ನೆತ್ತಿ ನಡುಮನೆಯಲ್ಲಿ ತಂದಿಳಿಸಿದನು.

೨. ಪರಸಿದ್ದಯ್ಯ (ಹಲಸಂಗಿ, ಇಂಡಿ ತಾಲೂಕು) ಇವನು ೧೦೦ ರ ವರೆಗೆ ಬಂದು ಮೊನ್ನೆ ಮೊನ್ನೆ ಸತ್ತನು. ಸಾಯುವವರೆಗೂ ಹರೆಯದವನಂತೆಯೇ ಇದ್ದನು. ಕಡ್ಲೆ ಮುಂತಾದ ಬಿರುಸು ಪದಾರ್ಥಗಳನ್ನು ಈ ವಯಸ್ಸಿನಲ್ಲಿಯೂ ತಿಂದು ನುರಿಸುತ್ತಿದ್ದನು. ಹಲ್ಲುಗಳು ಉದುರಿರಲಿಲ್ಲ, ಕಣ್ಣು ಹೋಗಿರಲಿಲ್ಲ, ಕಿವಿಗಳು ಕಿವುಡುಗಟ್ಟಿರಲಿಲ್ಲ, ಸೊಂಟವೇನೂ ಬಾಗಿರಲಿಲ್ಲ, ಮೋರೆಯ ಮೇಲೆ ಮುದುಕರ ಕಳೆಯಿರಲಿಲ್ಲ.

೩. ಗುರುಸಿದ್ದಪ್ಪ ತೆಲಸಂಗ (ತಿಕೋಟಾ, ಕುರಂದವಾಡ ಸಂಸ್ಥಾನ) ಈಗ ಇವನ ವಯಸ್ಸು ತೊಂಬತ್ತಕ್ಕೆ ಬಂದಿದೆ. ಈಗಲೂ ೩೦–೪೦ ಹರದಾರಿ ದೂರದ ಪ್ರವಾಸವನ್ನು ಕಾಲುನಡಿಗೆಯಿಂದಲೇ ಮುಗಿಸುವ ಪ್ರಸಂಗಗಳು ಪ್ರತಿ ವರ್ಷದಲ್ಲಿಯೂ ೮–೧೦ ವೇಳೆ ಬರುವವಂತೆ.

(೬) ರಾಷ್ಟ್ರ ಸೇವಕರ ವಯೋಮಾನ

೧. ವೇದಕಾಲದ ಹಿಂದುಸ್ಥಾನದಲ್ಲಿ ೧೦೦ ವರ್ಷ (ಶತಾಯುರ್ವೈ ಪುರುಷಃ)

೨. ಅಮೇರಿಕೆಯಲ್ಲಿ (ಈಗ) ೫೫ ವರ್ಷ

೩. ಯುರೋಪದಲ್ಲಿ ೫೫ ವರ್ಷ

೪. ಜಪಾನದಲ್ಲಿ ೫೮ ವರ್ಷ

೫. ಚೀನದಲ್ಲಿ ೪೦ ವರ್ಷ

೬. ಇರಾಣದಲ್ಲಿ ೪೨ ವರ್ಷ

೭. ಈಗಿನ ಹಿಂದುಸ್ಥಾನದಲ್ಲಿ ೨೫ ವರ್ಷ

ವಿಶೇಷ :– ಮಹಾಭಾರತದ ಕಾಲದಲ್ಲಿದ್ದ ನಮ್ಮವರ ವಯೋಮಾನವು (ಸು. ೧೭೫) ಕಡಿಮೆ ಕಡಿಮೆಯಾಗುತ್ತ ಆರಾಸನ ಕಾಲಕ್ಕೆ ೧೫೦ ಕ್ಕೆ ಬಂದಿತು. ನಮಗಿಂತ ಮೂರು ನಾಲ್ಕು ತಲೆಗಳವರೆಗೆ ಮೊದಲಿನವರು ನೂರರ ಮನೆಯನ್ನು ಮೀರುತ್ತಿದ್ದರು. ಆದರೆ ಈಗಿನ ನಮ್ಮ ಹೊಸ ಪೀಳಿಗೆಯು ಇಷ್ಟೊಂದು ಹೀನ ಸ್ಥಿತಿಗೆ ಹುಟ್ಟಿ ಹುಡುಗಾಟಿಕೆಯನ್ನಾಡುವದರೊಳಗಾಗಿಯೇ ಸತ್ತು ಹೋಗುವಂಥ ದುರ್ಗತಿಗೆ ಬಂದು ಮುಟ್ಟಿರುವದರಲ್ಲಿ ಯಾವದೋ ಒಂದು ವಿಶೇಷವಾದ ಕಾರಣ ವಿರಬಹುದಲ್ಲವೆ ?

**ಜ. ಕ. ೨-೮ ಜೂನ, ೧೯೨೪**

# ಬ್ರಾಹ್ಮಣರು

---

ಮುನ್ನುಡಿ

"ಭಾರತೀಯರಾದ ನಾವು ಆರ್ಯಜಾತಿಯ ವಂಶದವರು, ಆರ್ಯಶಿಕ್ಷೆ ಮತ್ತು ಆರ್ಯನೀತಿಯ ಸ್ವತ್ವಾಧಿಕಾರಿಗಳು. ಈ ಆರ್ಯಭಾವವೇ ನಮ್ಮ ಕುಲ ಧರ್ಮ, ಜಾತಿಧರ್ಮ. ಸನಾತನಧರ್ಮ ಪ್ರಚಾರವೂ ಅದನ್ನಾಶ್ರಯಿಸುವ ಜಾತಿ ಧರ್ಮ ಯುಗಧರ್ಮಗಳ ಅನುಷ್ಠಾನವೂ ನಮ್ಮ ಉದ್ದೇಶಕ್ಕಿದೀಗ ನೆಲೆ."

— ಗುರು ಅರವಿಂದರ ಶ್ರೀವಚನ.

ಇದೀಗ ಭರತಖಂಡದುದ್ದಕ್ಕೂ ಒಂದೇ ಒಂದು ಸೊಲ್ಲು ಕೇಳಿಬರುತ್ತಿದೆ. ಎಲ್ಲೆಲ್ಲೂ "ಅವನತಿ, ಅವನತಿ". ಭರತಖಂಡವಿದೀಗ ಇಂಥಾ ಅವನತಿಯ ಮಬ್ಬು ಗತ್ತಲಲ್ಲಿ ಕಂಗೆಟ್ಟು ನಿಂತಿದೆಯಾದರೂ ಮುಂದುಗಾಣದೆಯೇನೂ ಇಲ್ಲ. ತನ್ನ ಭಾವೀ ಸೌಂದರ್ಯದ ಸವಿಗನಸುಗಳ ಸುರಿಮಳೆಯಲ್ಲಿ ಅದು ಅಭಿಷಕ್ತವಾಗಲಿದೆ. ಮೋಡಗಟ್ಟಿದ ಮುಗಿಲಲ್ಲಿ ಹೊಳಹಿನ ಮಿಂಚುಗಳು ಮೂಡಿ ದಾರಿ ತೋರಿ ಸುತ್ತಲಿವೆ. ಭಾರತೀಯರೀಗ ತಮ್ಮ ತಾಯಿಯ ಅಂತರಾಳದಿಂದ ಜಿಗಿದು ಬರುತ್ತ ಲಿರುವ ಜೀವಾಳದ ಸೆಲೆಗಳಲ್ಲಿ ಮಿಂದು ಮಡಿವಂತರಾಗುತ್ತಲಿದ್ದಾರೆ. ಅವರ ಮನದಲ್ಲಿ ಮನೆಮಾಡಿಕೊಂಡಿದ್ದ "ಪತಿತರೆಂಬ ಭಾವನೆಯು–ಮನದ ಮೈಲಿಗೆಯು– ಮಾಯವಾಗುತ್ತಲಿದೆ. ಇದೆಲ್ಲಾ ನಮ್ಮ ಮುಂದಿನ ಮಾಂಗಲ್ಯದ ಮುಂಬೆಳಗಿ ನಂತಿದೆ. ಸತ್ಯ-ನಾರಾಯಣನ ಅಭಯಹಸ್ತವಿದೀಗ ನಮ್ಮ ತಲೆಯ ಮೇಲೆ ಕಂಗೊಳಿಸುವಂತಿದೆ. ಗುರು ಅರವಿಂದರಾದರೋ ಈ ಮಂಗಳ ಪ್ರಸಂಗವನ್ನು ನಮ್ಮ ಹೃತ್ಪಟಲದ ಮೇಲೆ ಬಹು ಸುಂದರವಾಗಿ ಚಿತ್ರಿಸುತ್ತಿದ್ದಾರೆ. ಅವರು ಕಾಣುತ್ತಲಿರುವ ಕಣಸಿದು :—

ಇದೀಗ ಭಾರತವರ್ಷದಲ್ಲಿ ಮೊದಲಿನ ತಮೋಭಿಭೂತ ಜಾತಿಯಲ್ಲಿಯೇ ಒಂದು ಹೊಸ ಜಾತಿ ಹುಟ್ಟುತ್ತಿರುವುದನ್ನು ನಾವು ಇದೀಚೆಗೆ ಕೆಲವು ದಿನಗಳಿಂದಲೂ ಕಣ್ಣಾರೆ–ಮನಸಾರೆ ನೋಡುತ್ತಲಿದ್ದೇವೆ......

"ಚಿರ ನವೀನಳಾದ ಉಷಾದೇವಿಯು ತನ್ನ ಕಿರಣಗಳಿಂದ ನಾಲ್ಕು ದಿಕ್ಕುಗಳನ್ನು ಅಲಂಕರಿಸಿದ್ದಾಳೆ. ಭಾರತ ಜನನಿಯು ಈ ಹೊಸಮಕ್ಕಳು ಹಡೆದವರ ಗುಣಗಳನ್ನೇ ಪಡೆದವರಲ್ಲ. ನಿಗೂಢ ಶಕ್ತಿ ಪ್ರೇರಿತರಾಗಿ ಉಚ್ಚವಾದ ಆಕಾಂಕ್ಷೆಯುಳ್ಳವರಾಗಿದ್ದಾರೆ. ಈ ದೇವಾಂಶ ಸಂಭೂತರಾದ, ಸತ್ಯಯುಗ ಪ್ರವರ್ತಕರಾದ ತರುಣರಿಗೆ ಅಡ್ಡಿಯಾಗಿ ಮುಂದುಕರು ತಿಳಿಯದಲೆ ಕಲಿಗೆ ನೆರವಾಗುತ್ತಿದ್ದಾರೆ". "ಈ ಹೊಸಬರಲ್ಲಿ ಸತ್ಯಯುಗದ ಬರುವಿಕೆಯದೊಂದು ಅಪೂರ್ವ ಲಕ್ಷಣವು ಒಡೆದು ಕಾಣುತ್ತಿದೆ. ಇವರಿಗೆ ಧರ್ಮದಲ್ಲಿ ಮತಿಯಿದೆ; ಇವರಲ್ಲನೇಕರ ಹೃದಯದಲ್ಲಿ ಯೋಗದ ಆಶೆಯೊಂದಲ್ಲದೆ ಅರ್ಧವಿಕಸಿತವಾದ ಯೋಗಶಕ್ತಿಯೂ ಕಂಗೊಳಿಸುತ್ತಿದೆ". ಇದೇನು ಮುಗಿಲ ಮಲ್ಲಿಗೆಯಲ್ಲ; ಕನ್ನಡಿಯ ಗಂಟಲ್ಲ; ಅಳಿಸಿಹೋಗುವ ಕನಸೂ ಅಲ್ಲ. ಇದು ನಿಚ್ಚಳವಾಗಿ ಕಾಣುವ ಕನಸು. ಉದ್ಧಾರದ ಕಾಲವು ಕ್ಷಣ ಕ್ಷಣಕ್ಕೂ ಸಮೀಪಿಸುತ್ತಲಿದೆ. ಇದೀಗ ನಾವು ಅವನತಿಯ ಎಲ್ಲೆಯ ವರೆಗೂ ಕೆಳಕ್ಕಿಳಿದಿದ್ದೇವೆ. ಅಂತೇ ನಾವು ಉನ್ನತಿಯ ಮೊದಲನೆಯ ಮೆಟ್ಟಲನ್ನು ಮೆಟ್ಟುವದಕ್ಕೆಂದು ಇಷ್ಟೊಂದು ಆವೇಶದೊಡನೆ-ಜಯಘೋಷದೊಡನೆ-ಹೆಜ್ಜೆಯನ್ನೆತ್ತುತ್ತಿದ್ದೇವೆ; ಕಿತ್ತುತ್ತಿದ್ದೇವೆ!!!

ಭಾರತದ ಉದ್ಧಾರವು ಜಗತ್ತಿಗೊಂದು ಹಬ್ಬ. ಅಂದಿಗೆ ಮಾನವಕೋಟಿಯ ಕಲ್ಯಾಣಕ್ಕೆ ಆರಂಭ. ಮಾನವ ಕೋಟಿಯ ಮೇಲ್ಮೆಗೂ ಕೀಳ್ಮೆಗೂ ಬ್ರಾಹ್ಮಣರೇ ಕಾರಣರಾದುದರಿಂದ ಈ "ಭೂ-ಸೂರ"ರ ವಿಷಯವನ್ನು ವಿಸ್ತರಿಸುವುದಕ್ಕೆ ಮೊದಲು ಮಾನವಕೋಟಿಯ ಕೆಲವು ವೈಶಿಷ್ಟ್ಯಗಳನ್ನು ತೋರಿಸಿಕೊಡುವುದು ಅತ್ಯವಶ್ಯಕ. ಇಂತಿದಿಲ್ಲಿಗೆ ಮುನ್ನುಡಿ.

## ೧. ಮಾನವಕೋಟಿ

ಉಸುರುಳ್ಳದು ಪ್ರಾಣಿ. ಪ್ರಾಣಿಗಳಲ್ಲಾದರೋ ಇದೀಗ ನಾವು ಕಾಣುತ್ತಿರೋದು ಮೂರು ಜಾತಿ. ಗಿಡ-ಬಳ್ಳಿ, ಖಗ-ಮೃಗ, ಮಾನವಕೋಟಿ. ಈ ಮೂರರಕ್ಕೂ ಮೂರು ವೈಲಕ್ಷಣ್ಯಗಳುಂಟು. ಇರುವು, ಹರಿವು, ಅರಿವು ಅಥವಾ ಸ್ಥಿತಿ, ಗತಿ, ಮತಿ. ಗಿಡ-ಬಳ್ಳಿಗಳಿಗೆ ಸ್ಥಿತಿ ಮಾತ್ರವಿದ್ದರೆ ಖಗ-ಮೃಗಗಳಿಗೆ ಸ್ಥಿತಿಗತಿಗಳೆರಡುಂಟು, ಮಾನವನಿಗೆ ಇವೆಲ್ಲವುಗಳಿಗಿಂತ ಹೆಚ್ಚಿನದಿನ್ನೊಂದುಂಟು. ಅದುವೆ ಮತಿ. ಇದೊಂದಿಲ್ಲದಿದ್ದರೆ ಮಾನವರದೊಂದು ಬೇರೆ ವರ್ಗವಾಗಲು ಕಾರಣವೇ ಇರಲಿಲ್ಲ. ಇದು ಅವನಿಗೆ ದೇವರಿಂದ ಸಿಕ್ಕ ಬಹುಮಾನದ ಕತ್ತಿಯಂತಿದೆ. ಮಾನವನು ಇದರಿಂದ ಪತಿತನಾಗಲೂಬಹುದು; ಪಾವನನಾಗಲೂಬಹುದು. ಅಂತೇ ಅವನು ಸದಾ ಏರಿಳಿತಗಳ ತಾಕಲಾಟದಲ್ಲಿ ಸುಳಿದಾಡುತ್ತಿರುತ್ತಾನೆ. ಇದಿಲ್ಲದ ಪಶುಗಳ ಬಾಳ್ವೆ ಹೀಗುಂಟೇ ? ಇದರೊಡನೆ ಇನ್ನೊಂದು ಮಾತನ್ನು ನಾವು ನೆನಪಿನಲ್ಲಿಟ್ಟಿರೋದು ಅಗತ್ಯ. ಅದಾವುದೆಂದರೆ ಮಾನವನು ಮತಿವಂತನೆಂಬುದೇನೋ

ನಿಜವಾದರೂ ಅನ್ಯ ಪ್ರಾಣಿಗಳಲ್ಲಿರುವುದೆಲ್ಲವೂ ಇವನಲ್ಲಿದೆ, ಆದರೆ ಅವನು ತನಗಿರುವ ಮತಿಬಲದಿಂದ ಅದನ್ನೆಲ್ಲಾ ಮಾರ್ಪಡಿಸಿಕೊಂಡು ದೇವಕೋಟಿಯಲ್ಲಿ ಸೇರಲೂ ಬಲ್ಲನೆಂಬುದನ್ನು ಮರೆಯುವಂತಿಲ್ಲ. ಜೈನ-ಧರ್ಮಾಚಾರ್ಯರು ಈ ಮಾತನ್ನು ಲೋಕಪ್ರತೀತಿಗೆ ತಂದಿರು. ಅವರ ತೀರ್ಥಂಕರರೆಲ್ಲರೂ ಮೊದಲು ಮಾನವರೇ ಆಗಿದ್ದುದು ಅವರ ಪುರಾಣಗಳಲ್ಲಿ ಪ್ರಸಿದ್ಧ. ರಾಮಾಯಣವನ್ನು ಕುರಿತು ಹೇಳುವಾಗ ಒಮ್ಮೆ ರವೀಂದ್ರರು ನುಡಿದುದೂ ಹೀಗೆಯೇ:– "ರಾಮಾಯಣ ದಲ್ಲಿ ದೇವನು ಮಾನವತನಕ್ಕಿಳಿದು ಲೀಲೆ ಮಾಡಲಿಲ್ಲ. ಮಾನವನೇ ದೇವನಾಗಿ ಮೆರೆದಿರುವನು." ಮಾನವನ ಮತಿಯಲ್ಲಿ ಇಂಥದೊಂದು ದಿವ್ಯಶಕ್ತಿಯಿದೆಯೆಂತಲೇ ಅವನಿಗೆ ನರನೆಂದೆನ್ನೋದು. ನರನೆಂದರೆ "ಪಡೆಯಬಲ್ಲವ" "ಕಾಣಬಲ್ಲವ". ಮಾನವೇತರ ಪ್ರಾಣಿಗಳಿಗೆ ಇದು ಶಕ್ಯವಿಲ್ಲ. ಏತಕ್ಕೆಂದರೆ ಅವುಗಳಲ್ಲಿ ಮತಿಯಿಲ್ಲ. ಮಾನವಕೋಟಿಯು ಮನುವಿನ ಸಂತತಿಯೆಂಬಲ್ಲಿಯೂ ಇದೇ ರಹಸ್ಯವಿದೆ. ಮನು ವೆಂದರೆ 'ಎಲ್ಲ ಬಲ್ಲವ'. ಅಂತೇ ಮಾನವರು ಅರಿವಿನ ಮಕ್ಕಳು, ಮತಿವಂತರು.

ಇದೀಗ ಎಲ್ಲೆಲ್ಲೂ ಮನುಷ್ಯತ್ವದ ವಿಪರೀತ ವ್ಯಾಖ್ಯೆಯೂ ಕೇಳಿಬರುತ್ತಿದೆ. "ಮನುಷ್ಯನೆಂದರೆ ಶರೀರವಲ್ಲ, ಅದು ಅವನಿರುವ ಸ್ಥಳ. ಅವನು ಸತ್ಯ, ಉಳಿದು ದೆಲ್ಲ ಮಿಥ್ಯ." ಎಂದು ಹೇಳುತ್ತ ಶರೀರವನ್ನು ಹೆಣದಂತೆ ಭಾವಿಸಿ ಎಲ್ಲದರ ಮೇಲೂ ಉಪೇಕ್ಷೆಯನ್ನು ಪ್ರಕಟಿಸುವ ವಿಲಕ್ಷಣ ವೈರಾಗ್ಯಶಾಲಿಗಳ ಸಂಖ್ಯೆಯು ಇದೀಗ ಹೆಚ್ಚಾಗುತ್ತಿದೆ. ಬರೀ ಶರೀರವೇ ಮನುಷ್ಯನಲ್ಲವೆಂಬುದನ್ನು ನಾವೂ ಒಪ್ಪುವೆವಾದರೂ ಬರೀ ಅದರಲ್ಲಿರುವವನೇ ಮನುಷ್ಯನೆಂದು ಮಾತ್ರ ಒಡಂಬಡ ಲಾರೆವು. ಯಾತಕ್ಕೆಂದರೆ ಈ ಶರೀರದಲ್ಲಿ ಯಾವನು ಮನೆಮಾಡಿಕೊಂಡಿದ್ದಾನೆಯೋ ಅವನೇ ಪಶು-ಪಕ್ಷಿಗಳ ಶರೀರದಲ್ಲಿಯೂ, ಗಿಡ–ಬಳ್ಳಿಗಳಲ್ಲಿಯೂ ಕೂಡ ಇದ್ದಾನೆ. ಅವನನ್ನೇ ಮನುಷ್ಯನೆನ್ನುವದಾದರೆ ಪ್ರಾಣಿಕೋಟಿಯಲ್ಲಿ ಈಗಿರುವ ತಾರತಮ್ಯಕ್ಕೆ ಆಸ್ಪದವಿಲ್ಲ. ಎಲ್ಲದರ ಅಂತರಾಳದಲ್ಲಿರುವವನು ಮನುಷ್ಯನಲ್ಲ; ಪರಬ್ರಹ್ಮ. ಅವನಿಂದಲೇ ಈಗ ಕಾಣುವದೆಲ್ಲದರ ವೃದ್ಧಿ. ಬೃಹತ್ತಾಗಿರೋದೆಲ್ಲಾ ಆ ಬ್ರಹ್ಮನ ಬಾಹ್ಯರೂಪವು.

ಹಾಗಾದರೆ ಮನುಷ್ಯತ್ವವೇತರಲ್ಲಿದೆ? ಒಂದೊಂದು ಪ್ರಾಣಿಗೂ ಅದರದರ "ಸ್ವ-ಭಾವ"ವುಂಟು. ಅದರದರ ಇರುವಿನಲ್ಲಿಯೇ ಅದರದರ ವಿಶೇಷ ಗುಣಗಳುಂಟು. ಈ ಇರುವಿನ ರಂಗಭೂಮಿಯಾದರೋ ಅದರದರ ಮೈ. ಆದುದರಿಂದ ಅದರದರ ಶರೀರವೂ ಸ್ವಭಾವವೂ ಸೇರಿ ಆಯಾ ಪ್ರಾಣಿಯ ಅಸ್ತಿತ್ವ. ಆದುದರಿಂದ ಮನುಷ್ಯತ್ವವು ಅವನ ಮತಿ, ಸ್ವಭಾವ, ಶರೀರಗಳ ಸಮಷ್ಟಿಯಲ್ಲಿದೆಯೆಂಬುದು ಸುಸ್ಪಷ್ಟ. ಇವುಗಳಲ್ಲಿ ಯಾವುದನ್ನು ಉಪೇಕ್ಷಿಸುವದೂ ಕಲ್ಯಾಣಕರವಲ್ಲ. ಕಾಣುವದೆಲ್ಲದರಲ್ಲಿಯೂ ಇಂಥದೊಂದು ನಿಗೂಢ ಸತ್ಯದ "ಸಂ-ಬಂಧ"ವಿದೆ

ಯೆಂತಲೇ ಪ್ರಾಣಿಕೋಟಿಯೆಲ್ಲಾ ಈ ಜಗವನ್ನು ಇಷ್ಟೊಂದು ಪ್ರೀತಿಸುತ್ತದೆ. ಇಲ್ಲಿರೋದೇ ಅವುಗಳ ಬಯಕೆ. ಅಂತೆಯೇ ಗುರು ಅರವಿಂದರು:- "ಈ ಜಗದಲ್ಲಿನ ಯಾವುದನ್ನೂ ನಾವು ಕೆತ್ತಿಹಾಕಲಾಗದು." ಎಂದು ಸಾರಿ ಹೇಳಿದ್ದಾರೆ. ಇಷ್ಟೆಲ್ಲಾ ಹೇಳಿರುವದರ ಉದ್ದೇಶವೇನು ? ಮನುಷ್ಯನಲ್ಲಿ ಮತಿಯೊಂದಲ್ಲದೆ ಉಳಿದ ಪ್ರಾಣಿಗಳಲ್ಲಿರುವ ಗುಣದೋಷಗಳೆಲ್ಲವೂ ಉಂಟು. ಮತ್ತು ಅವನ ಎಳೆತವೆಲ್ಲಾ ಜಾಗತಿಕ (ಐಹಿಕ) ಸುಖಗಳ ಕಡೆಗಿದೆ. ಆದರೆ ಅವನು ತನ್ನ ಮತಿಬಲದಿಂದ ಪಶುವೃತ್ತಿಗಳನ್ನೆಲ್ಲಾ ಮಾರ್ಪಡಿಸಿಕೊಳ್ಳಲೂ ಬಹುದೆಂದು ಇದು ಮೊದಲೇ ವಿವರಿಸಿದೆ.

ಇದೀಗಿನವರು ಹೇಳುತ್ತಿರೋದಿನ್ನೊಂದು ಮಾತು, "ದಿನದಿನಕ್ಕೂ ಮಾನವ ಕೋಟಿಯು ಉನ್ನತಿಯನ್ನು ಹೊಂದುತ್ತಿದೆ. ಹಿಂದಿನವರು ಹೀನ ಸ್ಥಿತಿಯಲ್ಲಿದ್ದರು." ಎಂಬುದಿವರ ಮತ. ಮೇಲ್ಮೆ ಕೀಳ್ಮೆಗಳಿಗೆ ಇವರು ಹೇಳುವ ವ್ಯಾಖ್ಯೆಯಿನ್ನೇನೋ ನಾವರಿಯೆವು. ಹಾಗಿದ್ದುದಾದರೆ ಇಂದಿಗೆ ಜಗತ್ತು ದೇವರಾಯನ ಸ್ವರ್ಗವಾಗಿ ಬಹುದಿನಗಳಾಗುತ್ತಿದ್ದವು. ಆದರೆ ಸ್ಥಿತಿಯು ಇದಕ್ಕೆ ವಿಪರೀತವಾಗಿದೆ. ಸಾಮಾನ್ಯ ವಾಗಿ ಮಾನವರ ಮನೋಭೂಮಿಕೆಯು ದಿನದಿನಕ್ಕೆ ಕಂಟಕಮಯವಾಗುತ್ತಲೂ "ಸರ್ವಗುಹ್ಯತಮಂ" ಸತ್ಯವನ್ನವರು ಮರೆತು ಮನುಷ್ಯತ್ವಕ್ಕೆ ಜಲಾಂಜಲಿಯನ್ನು ಕೊಡುತ್ತಲೂ ಬಂದುದರಿಂದ ದಿನದಿನಕ್ಕೂ ಅವರು ಅವನತಿಯನ್ನು ಸಾಧಿಸಿದರೆಂಬು ದಕ್ಕೆ ತಕ್ಕ ಪ್ರಮಾಣಗಳುಂಟು. ಆರ್ಯರು ಕಲ್ಪಿಸಿರುವ ಚತುರ್ಯುಗಗಳ ಕ್ರಮವು ಮಾನವಕೋಟಿಯ ಇರುವನ್ನೇ ಅವಲಂಬಿಸಿದೆ. ಮೊದಲನೆಯದು ಸತ್ಯಯುಗ. ಕೊನೆಯದು ತ್ರಿಪಾದ ಪಾಪಯುಕ್ತವಾದ ಕಲಿಯುಗ. ಮಾನವರು ಸತ್ಯಯುಗದ ಸತ್ಯನಾರಾಯಣನನ್ನು ಮರೆತು ಕಲಿಯಲ್ಲಿ ಅರಿವಿನ ಮಕ್ಕಳು ಮರೆವಿನ ಮಕ್ಕಳಾಗಿ ಅಧೋಗತಿಗೆ ಇಳಿದರಲ್ಲವೇ ? ಈ ಏರಿಳಿತಗಳ ಪುನರಾವೃತ್ತಿಗಳಾಗುತ್ತಲೇ ಇರೋದಕ್ಕೆ ಇದುವರೆಗಿನ ಅವತಾರ ಪುರುಷರೇ ಸಾಕ್ಷಿ.

ಜೈನ ಪುರಾಣದಲ್ಲಿಯೂ ನಮ್ಮೀ ಅಭಿಪ್ರಾಯವುಂಟು. ಅವರಲ್ಲಿ ಆದಿ ಕುಲಧರರು ಪದಿನಾಲ್ವರಲ್ಲದೆ ಅನಂತರದ ಚಕ್ರವರ್ತಿಯಾದ ಭರತೇಶ್ವರರೂ ಮನುಗಳೇ, ಎಂದರೆ ಈ ಹದಿನಾರ್ವರೂ ಅವರಲ್ಲಿ ಮನುಗಳು ಅಥವಾ ಕುಲಧರರು. ಈ ಹದಿನಾರ್ವರ ಕಾಲದ ಶಾಸನವನ್ನು ನೋಡಿದರೆ ಮಾನವ ಕೋಟಿಯು ಗತಿಯನ್ನು ನಿರ್ಣಯಿಸಬಹುದು. "ಮುನ್ನಮಯ್ವರ್ ಮನುಗಳ್ ಹಾಕಾರ ಲಕ್ಷಣಮಪ್ಪ ದಂಡಮಂ ಮಾಡಿದರ್, ಬಳಿಯುಮಯ್ವರ್ ಮನುಗಳ್ ಹಾಮಾಕಾರ ದಂಡಮಂ ಮಾಡಿದರ್, ಮತ್ತಮಯ್ವರ್ ಮನುಗಳ್ ಹಾಮಾಧಿಕ್ಕಾರ ದಂಡಮಂ ಮಾಡಿದರ್, ಭರತಂ ಶರೀರ ದಂಡಮಂ ಮಾಡಿದಂ."

— ಚಾವುಂಡರಾಯ ಪುರಾಣ

ಇದರಲ್ಲಿ ದಂಡನೆಯು ನಾಲ್ಕು ಪ್ರಕಾರಗಳಿವೆ. ಅವು :— ೧. 'ಹಾ' ! (ಈಗಲೂ ಈ ಶಬ್ದದಿಂದ ನಿಷೇಧಿಸುವದುಂಟು), ೨. 'ಹಾ ! ಮಾ !!' (ಹಾಂ-ಬೇಡ), ೩. 'ಹಾ–ಮಾ–ದಿಗ್ !!!' (ಹಾಂ–ಬೇಡ–ಛೀ), ೪. 'ಶರೀರ ದಂಡ' (ಕೊಲೆ, ಗಲ್ಲಿನ ಶಿಕ್ಷೆಯುಂತಹದು.) ಪ್ರಥಮ ಕುಲಧರನ ಕಾಲದಲ್ಲಿ 'ಹಾ' ಎಂದ ಮಾತ್ರಕ್ಕೆ ಪಶ್ಚಾತ್ತಾಪ ಹೊಂದುವ ಮಾನವರು, ಮುಂದೆ 'ಛಿ' ಹಾಕಿಸಿಕೊಂಡೂ, ಕಡೆಗೆ ಶರೀರ ದಂಡನೆಯವರೆಗೂ ಬಂದರು. ಇದರಿಂದ ಮಾನವಕೋಟಿಯ ಅವನತಿಕ್ರಮವು ಸುಸ್ಪಷ್ಟವಾಗುವದಿಲ್ಲವೇ ?

ಇನ್ನು ಬಳಿಕ ನಾವು ಐತಿಹಾಸಿಕ ಸಾಧನಗಳಿಂದಲೂ ಈ ಮಾತನ್ನು ಸಪ್ರಮಾಣಗೊಳಿಸಬಹುದು.

ಇದೀಗ ದೇಶದಲ್ಲಿ ತಾಮ್ರಲಿಪಿಗಳೂ, ಶಿಲಾಲಿಪಿಗಳೂ ಹೇರಳವಾಗಿ ಕಣ್ಣಿಗೆ ಬೀಳುತ್ತಿವೆ. ಅವುಗಳಲ್ಲೆಷ್ಟೋ ದಾನಪತ್ರ (ಸನದು) ಗಳೂ ದಾನಕೊಟ್ಟ ಆಯಾ ಅರಸರು, ಆ ಪ್ರದತ್ತವಸ್ತುವನ್ನಾಗಲಿ, ಭೂಮಿಯನ್ನಾಗಲಿ ಮುಂದಿನವರು ಅಪಹರಿಸಬಾರದೆಂದು ಆಯಾ ದಾನಪತ್ರಗಳ ಕೊನೆಗೆ ಆಣೆಯಿಡುವ ಪದ್ಧತಿ. ಈ ಆಣೆಗಳು ದಿನದಿನಕ್ಕೂ ಕಠಿಣವಾಗಿರುವದನ್ನು ನೋಡಿದರೆ ಮಾನವಕೋಟಿಯ ಮನೋದಾರ್ಢ್ಯದ ಅವನತಿ ಕ್ರಮವೇ ಒಡೆದು ಕಾಣಿಸುವದು. ಒಂದೊಂದು ಆಣೆಯನ್ನು ಅಲಕ್ಷಿಸುವ ಕಾಲವು ಬಂದ ಹಾಗೆಲ್ಲಾ ಅದಕ್ಕಿಂತ ಕಟುತರಗಳಾದ ಆಣೆಗಳು ಮೈದೋರಿರೋದು ಸಹಜ. ಕಾಲಕ್ರಮವಾಗಿ ಮುಂದೆ ಹೇಳಿರೋ ಆಣೆಗಳನ್ನು ಆಲೋಚಿಸುವ ಭಾರವು ವಾಚಕರ ಮೇಲಿರಲಿ. (ಶಾಸನ ಪಾಠಗಳನ್ನು ತಿದ್ದದೆ ಇದ್ದುದಕ್ಕಿದ್ದಂತೆಯೇ ಬರೆಯಲಾಗಿದೆ.)

೧. ಕ್ರಿ. ಶ. ೪೫೫ ( ದೊಡ್ಡಬಳ್ಳಾಪುರದ ಶಾಸನ ನಂ. ೬೭ ) "ಸ್ವದತ್ತಾಂ ಪರದತ್ತಾಂ ವಾಯೋ ಹರೇತ ವಸುಂಧರಾಂ। ಗವಾಂ ಶತಸಹಸ್ರಸ್ಯ ಹನ್ತು ಭವತಿ ದುಷ್ಕೃತಂ ॥

೨. ಕ್ರಿ. ಶ. ೫೧೭ ( ದೊ. ಬ. ೬೮ ) "ಸ್ವದತ್ತಾಂ... ಷಷ್ಟಿರ್ ವರಿಷ ಸಹಸ್ರಾಣಿ ಘೋರೇತಮನಿವರ್ತತೇ ॥"

೩. ಕ್ರಿ. ಶ. ೭೨೦ (ಹೊಸಕೋಟೆ ೮೬) "ಇದಳಿವೋನ್ ವಾರಾಣಾಸಿಯುಳ್ ಸಾಸಿರ್ವ ಪಾರ್ವರುಂ ಸಾಸಿರ ಕವಿಲೆಯುಂ ಕೊನ್ದನ್ ಅಲ್ಲೋಕಕ್ಕೆ ಸನ್ದೊ ನಕ್ಕುಂ")

೪. ಕ್ರಿ. ಶ. ೭೫೦ (ಹೊಸಕೋಟೆ ೮೩) "ಅಳಿಪ್ಪೊನ್ ಪಞ್ಚಮಹಾಪಾತಕ ನಕ್ಕುಂ"

೫. ಕ್ರಿ. ಶ. ೮೦೨ (ನೆಲಮಂಗಲ, ೬೧) "ಸ್ವದತ್ತಾಂ... ಷಷ್ಟಿರ್ ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥ ದೇವಸ್ವಂತು ವಿಷಂ ಘೋರಂ ನವಿಷಂ ವಿಷಮುಚ್ಯತೇ । ವಿ ಷ ಮೇ ಕಾ ಕಿ ನಂ ಹನ್ತಿ ದೇವಸ್ವಂ ಪುತ್ರಪೌತ್ರಿಕಮ್ ॥

೬. ಕ್ರಿ. ಶ. ೯೫೦ (ಹೊಸಕೋಟೆ, ೩೭) ಕೊಡದಾತ ಭರನಾಸಿಯುಂ ಕವಿಲೆಯುಂ । ಅಳಿದ ಪಂಚಮಂ(ಹಾ)ಪತನಕ್ಕುಂ ॥

೭. ಕ್ರಿ. ಶ. ೧೧೯೬ (ನೆಲಮಂಗಲ ೮೨) "ಈ ಧರ್ಮಕೆ ಅಳಹಿದವನು ಗಂಗೆಯು ತಡೆಯಲು ತಂಗೇಳು ಕವಿಲೆಯ ಕೊಂದ ದೋಷದಲಿ ಹೋಹನು. ಷಷ್ಟಿ ರ್ವಷ ಸಹಸ್ರಾಣಿ ಸ್ವಾನಯೋನಿ ಸತಂಗತಾ । ಚಂದ್ರ ದಿವಾಕರಂ ನರಕಂ ಯಂಜತಿ ॥

೮. ಕ್ರಿ. ಶ. ೧೨೭೮ (ಚೆನ್ನಪಟ್ಟಣ ೬೫) "ಯೀ ಧರ್ಮಕೆ ಯಾರು ಅಳಿಪಿದವರಿಗೆ ಕವಿಲೆಯಂ ಕೋಟಿ ಮುನೀಂದ್ರ ವೇದಾಢ್ಯರಂ ಕೊಂದುದೊಂದು ದೋಷಂ ಪೊರ್ದುಗುಂ ॥

೯. ಕ್ರಿ. ಶ. ೧೩೦೬ (ಕಾನಕಾನಹಳ್ಳಿ ೭೬) "ಈ ಧರ್ಮದ ಕೆಡೆಯೆ ಜಡವನ ಬಾಯಲು ಹುಳು ಸುರಿಗು ಅವನ ಮನೆ ಕತ್ತೆ ಹೊರಗು ನಿಸ್ಸಂತಾನವಪ್ಪತ್"

೧೦. ಕ್ರಿ. ಶ. ೧೩೧೪ (ಕಾನಕಾನಹಳ್ಳಿ ೭೦) ಆರೊಬ್ಬ ಅಳುಹಿದವ ಗಂಗೆಯ ತಡಿಯ ಕವಿಲೆಯ ಕೊಂದ ಪಾಪದಲ್ಲಿ ಹೋಹನು. ತಮ್ಮ ತಂಗಿಯ ಕಯಿ (ಹಿಡಿದ ಪಾತಕದಲ್ಲಿ ಹೋಹನು)

೧೧. ಕ್ರಿ. ಶ. ೧೩೩೬ (ಮಾಗಡಿ ೩೮) "ತಪ್ಪಿದರೆ ವಾರಣಾಸಿಯಲ್ಲಿ ಕವಿಲೆಯ ಕೊಂದ ಪಾತಕಕ್ಕೆ ಹೋದವರ ಕತ್ತೆಯನೇರಿ ಕೊಟ್ಟಕೊಟವ ಕೂಡುವವರೂ। ಸುರಾಪಾನ ಮಾಡಿದವರೂ ಇಂತಪ್ಪುದು"

೧೨. ಕ್ರಿ. ಶ. ೧೩೪೭ (ಬೆಂಗಳೂರು ೯೭) ಹರಿಹರನ ಶಾಸನ "ಗಂಗೆಯ ತಡಿಯಲು ತಂಗೇಳು ಕವಿಲೆಯ ಕೊಂದ ಪಾಪದಲಿ ಹೋಹರು"

೧೩. ಕ್ರಿ. ಶ. ೧೪೧೨ (ಹೊಸಕೋಟೆ ೬೩) ದೇವರಾಯನ ಶಾಸನ "ಯಿ ಧರ್ಮಕೆ ಆರು ತಪ್ಪಿದರು 'ಖಂಡಿತ' ಕಪಿಲೆಯ ಕೊಂದ ಪಾಪದಲ್ಲಿ ಹೋಹರು."

೧೪. ಕ್ರಿ. ಶ. ೧೫೧೬ (ಮಾಗಡಿ ೬೮) ಕೃಷ್ಣರಾಯನ ಶಾಸನ "ಆರೊಬ್ಬರು ತಪ್ಪಿದರೂ ವಾರಣಾಸಿಯಲಿ ಗೋವ ಕೊಂದ ಪಾಪಕ್ಕೆ ಹೋಹರು. ಬ್ರಾಹ್ಮಣರ ಕೊಂದ ಪಾಪಕ್ಕೆ ಹೋಹರು. ತಮ್ಮ ತಾಯಿತಂದೆಯ ಕೊಂದ ಪಾಪಕ್ಕೆ ಹೋಹರು.

೧೫. ಕ್ರಿ. ಶ. ೧೬೦೦ (ಆನೆಕಲ್ ೭೧) ಯಿದಕ್ಕೆ ತಪ್ಪಿದರೆ ಬಲಗಯಡಗನ ಯಂಜಲಿಗೆ ಆಶೆ ಮಾಡಿಧಾಗೆ"

೧೬. ಕ್ರಿ. ಶ. ೧೬೫೦ (ಬೆಂಗಳೂರು ೧೦೫) "ಮಾತೃಗಮನವ ಮಾಡಿದ ದೋಷಕೆ ಹೋಹರಂ."

೧೭. ಕ್ರಿ. ಶ. ೧೬೫೭ (ನೆಲಮಂಗಲ ೬೯) "ಆರಾದರಂ ಅಳುಪಿದವರು ಕತ್ತೆ ಒಸುರಲ್ಲಿ ಬಂದರು."

೧೮. ಕ್ರಿ. ಶ. ೧೭೦೦ (ಆನೆಕಲ್ ೧೪) "ಯೀ ಮಾನ್ಯಕೆ ತಪ್ಪಿದವರು ಮೊಮ್ಮಗನ ತಿಂಬರು."

೧೯. ಕ್ರಿ. ಶ. ೧೭೧೨ (ಮಾಗಡಿ ೪) "ದ್ರೋಹಗಳು ಎಣಿಸ್ತರೆ ತ್ರಿಮೂರ್ತಿಗಳಿಗೆ ಹೊರಗಂ ಯಿಹ ಪರಕ್ಕೆ ಸಲ್ಲದವರಂ."

೨೦. ಕ್ರಿ. ಶ. ೧೮೩೦ (ಬೆಂಗಳೂರು ೪) "ವೃಪಲೀ ಮೈಥುನಾದಿ ಪಾಪಮುಕ್ಕುಂ"

ಇದೀಗ ನಾವು ಒಂದೇ ಪ್ರದೇಶದೊಳಗಿರುವ (ಬೆಂಗಳೂರ ಡಿಸ್ಟ್ರಿಕ್ಟ್) ೧೮೦೦ ವರ್ಷಗಳ ವಿದ್ಯಾಮಾನಗಳನ್ನು ತಿಳಿಸುವ ೨೦ ಲಿಪಿಗಳನ್ನು ಉಲ್ಲೇಖಿಸಿ ಆಯಿತು. ಈ ಇಪ್ಪತ್ತು ಒಂದೇ ಸವನೆ ಸಾಗದೆ ಸಂಗೀತದಲ್ಲಿರೋ ಆರೋಹಾವರೋಹ ಕ್ರಮದಂತೆ ಸಾಗಿರುವುದನ್ನು ವಾಚಕರು ಈ ಮೊದಲೇ ಕಂಡುಹಿಡಿದಿರಬಹುದಂ. ವಿಜಯನಗರದವರ ಆಳ್ವಿಕೆಯ ವರೆಗೆ ಸಾಗಿ ಬಂದ ರೀತಿಯೇ ಬೇರೆ, ಆ ಬಳಿಕ ಒಮ್ಮೆಗೇ ಮಾರ್ಪಾಡಾದ ವಿಧವೇ ಬೇರೆ. ಆಗ ಜನಜೀವನದಲ್ಲಿ ಮತ್ತೆ ಹಿಂದಿನ ಕಳೆ ಬಂದಿದೆ. ಅವರ ಮನೋಭೂಮಿಕೆಯು ಮತ್ತೆ ಉದಾರವಾದಂತಿದೆ. ಇದಕ್ಕೆಲ್ಲಾ ಶ್ರೀ ಶ್ರೀ ವಿದ್ಯಾರಣ್ಯ ಸ್ವಾಮಿಗಳ ಧರ್ಮಾವತಾರವೇ ಕಾರಣವೆಂಬುದನ್ನು ಎಲ್ಲರೂ ಒಪ್ಪಬೇಕು !!! ಈ ಉದಾರ ಭಾವವು ವಿದ್ಯಾರಣ್ಯರ ಅವತಾರ ಸಮಾಪ್ತಿಯ ಬಳಿಕ ಮತ್ತೆ ನೀಚಗತಿಗೆ ಬಂದಿರೋದನ್ನೂ, ಆನಂತರ ಆ ಅಧೋಗತಿಯು ಒತ್ತರದಿಂದ ಸಾಗಿತೆಂಬುದನ್ನು ತದನಂತರದ ಲಿಪಿಗಳಿಂದ ಸುಸ್ಪಷ್ಟವಾಗಿ ಭಾವಿಸಬಹುದಂ. ೧೮೩೦ ರಿಂದ ಮುಂದಿನ ಈ ನೂರು ವರುಷಗಳಲ್ಲಿ ನಾವು ಎಷ್ಟರ ಮಟ್ಟಿಗೆ ಹೆಚ್ಚಾಗಿ ಕೆಳಗಿಳಿದಿರುವೆವೆಂಬುದಕ್ಕೆ ಇದೀಗ ಮೂರ್ತಿಮಂತಾಗಿ ಕುಳಿತಿರುವ ನಾವೇ ಸಾಕ್ಷಿ. ಇಷ್ಟೊಂದು ಅನುದಾರತೆಯು ಪ್ರಬಲವಾಗಿರುವದರಿಂದಲೇ ಅರವಿಂದ ಮಹರ್ಷಿಗಳು:– "ಇದೀಗ ನಾವು ಸತ್ಯಯುಗದ ಬೆಳಗಿನ ಜಾವದ ನಸುಕಿನಲ್ಲಿದ್ದೇವೆ" ಎಂದಂ ಗಟ್ಟಿಸಿ ಹೇಳುತ್ತಿರುವರು. ಏತಕ್ಕೆಂದರೆ ಅವನತಿಯು ಉನ್ನತಿಯನ್ನು ಹಡೆಯುವತಾಯಿ. ಈ ಬಗೆಯಾಗಿ ಮಾನವ ಜೀವನವು ಅಧೋಗತಿಗಿಳಿಯುತ್ತ ಉನ್ನತಿಗೇರುತ್ತ, ಏರಿಳಿತಗಳ ಏಕತಾನತೆಯಲ್ಲಿ ಲೀಲಾ ಸೂತ್ರಧಾರಿಯ ಲೀಲಾ ಸಂಗೀತಕ್ಕೆ ಕಳೆಯೇರುವಂತೆ ಮಾಡುತ್ತಲಿದೆ.

## ೨. ಸನಾತನ ಧರ್ಮ

ಈ ಜಗದಲ್ಲಿ ಏನೇನಿದೆಯೋ ಅದಕ್ಕೆಲ್ಲಾ ಆದರದ ಧರ್ಮವೇ ಜೀವಾಳ. ಅದರಿಂದಲೇ ಅವುಗಳ ವ್ಯಕ್ತಿತ್ವದ ಅಸ್ತಿತ್ವ, ಅದೊಂದಿರದಿದ್ದರೆ ಪೃಥಗ್ಭಾವಕ್ಕೆ

ಆಸ್ಪದವಿಲ್ಲ. ಅವರದರ "ತನ"ವನ್ನು ಅದರವರ ಧರ್ಮವೇ ಕಾಪಾಡುವದು; ಎತ್ತಿ ಹಿಡಿಯುವದು, ಅದರವರ ಸ್ವಭಾವದ ಗದ್ದುಗೆಯ ಮೇಲೆ ವೀರಾಸನದಿಂದ ಮಂಡಿಸಿರುವಳೀ ಧರ್ಮಶ್ರೀಯು, ಗುರು ಅರವಿಂದರೆನ್ನೋ ಮಾತೂ ಇದುವೆ.

"ಸರ್ವಧರ್ಮಕರ್ಮಗಳ ಸ್ವಭಾವ ಸ್ಪಷ್ಟವಾಗಿದೆ." ಈ ಸ್ವಭಾವ ವೆಂಬೋದು ಧರ್ಮಕ್ಕೆ ಆಧಾರವಷ್ಟೇ. ಸನಾತನ ಮಾನವ ಕೋಟಿಯ ಸ್ವಭಾವವೇ ಸನಾತನ ಧರ್ಮದ ಆಧಾರವೆಂಬುದು ಇದೀಗ ತಿಳಿದ ಅಂಶ, ಆ ಕಾಲದ ಅವರ ಮಹೋನ್ನತ ಸ್ವಭಾವದ ಮೂಲಕವೇ ಈ ಸನಾತನ ಧರ್ಮವು ದೇಶಾತೀತವೂ ಕಾಲಾತೀತವೂ ಆದ ಮಹಾತತ್ತ್ವವಾಯಿತು.

ಗುರು ಅರವಿಂದರು ಈ ಸನಾತನ ಧರ್ಮವನ್ನು ಕುರಿತು ಹೀಗೆ ಹೇಳುತ್ತಾರೆ– "ನಮ್ಮದು ಸನಾತನ ಧರ್ಮ. ಇದು ತ್ರಿವಿಧ; ತ್ರಿಮಾರ್ಗಗಾಮಿ; ತ್ರಿಕರ್ಮರತ."

"ಭಗವಂತನು ಅಂತರಾತ್ಮನಲ್ಲಿಯೂ, ಮನೋ ಜಗತ್ತಿನಲ್ಲಿಯೂ, ಸ್ಥೂಲ ಜಗತ್ತಿನಲ್ಲಿಯೂ ಇದ್ದು, ಪ್ರಕೃತಿ ಸೃಷ್ಟ ಮಹಾಶಕ್ತಿ ಚಾಲಿತವಾದ ವಿಶ್ವರೂಪದಲ್ಲಿ ಆತ್ಮ ಪ್ರಕಾಶಗೊಳಿಸಿದ್ದಾನೆ! ಈ ತ್ರಿಧಾಮಗಳಲ್ಲಿ ಅವನೊಡನೆ ಕೂಡಿಕೊಳ್ಳುವ ಚೇಷ್ಟೆಯೇ ಸನಾತನ ಧರ್ಮದ ತ್ರಿವಿಧಿತ್ವ."

"ಈ ಕೂಟಕ್ಕೆ ಮೂರು ಉಪಾಯುಗಳು ಜ್ಞಾನ, ಭಕ್ತಿ, ಕರ್ಮ. ಈ ಮೂರೂ ಸೇರುವೆಯಾಗಲೂಬಹುದು; ಒಂಟೊಂಟಿಯಾಗಿರಲೂಬಹುದು. ಈ ಮೂರು ಉಪಾಯಗಳಿಂದ ಆತ್ಮಶುದ್ಧಿಯಾಗಿ ಅವನ ಕೂಡಲದ ಕಡೆಗೆ ಸಾಗುವದೇ ಸನಾತನ ಧರ್ಮದ ತ್ರಿಮಾರ್ಗಗಾಮೀ ಗತಿ."

"ಮಾನವ ಪ್ರಧಾನ ವೃತ್ತಿಗಳು ಮೂರು, ಸತ್ಯ, ಪ್ರೇಮ, ಶಕ್ತಿ. ಈ ಮೂರು ವೃತ್ತಿಗಳ ಬೆಳವಣಿಗೆಯಲ್ಲಿಯೇ ಮಾನವಕೋಟಿಯ ಕ್ರಮೋನ್ನತಿ."

"ಈ ಸತ್ಯ, ಪ್ರೇಮ, ಶಕ್ತಿಗಳಿಂದ ತ್ರಿಮಾರ್ಗಗಾಮಿಯಾಗುವುದೇ ಸನಾತನ ಧರ್ಮದ ತ್ರಿಕರ್ಮ !!"

ಯಾವುದು ಸನಾತನ ಮಾನವ ಜಾತಿಯೋ ಅದುವೆ ಆರ್ಯ-ಜನಾಂಗ. ಆದುದರಿಂದ ಈ ಸನಾತನವಾದ ಆರ್ಯಧರ್ಮವು ಆ ಜನಾಂಗದ ಉಚ್ಚಾದರ್ಶ ವನ್ನು ತೋರಿಸುವ ಕೈಬೆರಳಾಗಿದೆ. ಇದೀಗ ನಾವು ಆಲೋಚಿಸುತ್ತಿರುವ "ಬ್ರಾಹ್ಮಣ"ರೂ ಈ "ಆರ್ಯಜಾತಿಯ ವಂಶಧರರು." ಆದುದರಿಂದ ಆರ್ಯ ಜನಾಂಗದ ಆದರ್ಶವೇ ಇವರ ಆದರ್ಶ. ಆರ್ಯೋಕ್ತ ಶಿಕ್ಷಾತಂತ್ರವೇ ಇವರ ಶಿಕ್ಷಾತಂತ್ರ. ಅವರದೇನೇನೋ ಅದಕ್ಕೆಲ್ಲ ಇವರು ಬಾಧ್ಯಸ್ಥರು. (ಇದೀಗಿನ ಸ್ಥಿತಿಯು ಇದಕ್ಕೆ ವಿಪರೀತವಾಗಿದ್ದರೂ ಇದ್ದುಕೊಳ್ಳಲಿ. ಆ ಬಗೆಗೆ ಮುಂದೆ ಆಲೋಚಿಸೋಣ.) ಈ ಆರ್ಯಜಾತಿಯ ಆದರ್ಶವನ್ನು ಕುರಿತು ಗುರು ಅರವಿಂದರು ಹೀಗೆ ಹೇಳುವರು:–

"ಜ್ಞಾನವೂ, ಭಕ್ತಿಯೂ, ನಿಷ್ಕಾಮಕರ್ಮವೂ ಆರ್ಯ ಶಿಕ್ಷೆಗೆ ತಳಹದಿ. ಉದಾರತೆಯೂ, ಜ್ಞಾನವೂ, ಸಾಹಸವೂ, ಶಕ್ತಿಯೂ, ಪ್ರೇಮವೂ, ವಿನಯವೂ ಆರ್ಯ ಚರಿತ್ರೆಯ ಹೆಗ್ಗುರುತುಗಳು."

"ಮಾನವಕೋಟಿಗೆ ಅರಿವನ್ನುಂಟುಮಾಡಿಕೊಡುವುದೂ ಜಗತ್ತಿಗೆ ಉದಾರೋನ್ನತ ಚರಿತ್ರೆಯ ನಿಷ್ಕಲಂಕವಾದ ಉದಾಹರಣೆಯನ್ನು ತೋರಿಸಿ ಕೊಡುವುದೂ, ದುರ್ಬಲರನ್ನು ರಕ್ಷಿಸಿ, ಅತ್ಯಾಚಾರಿಗಳಾದ ಪ್ರಬಲರನ್ನು ದಂಡಿಸುವುದೂ ಆರ್ಯಜಾತಿಯ ಜೀವನೋದ್ದೇಶವು. ಈ ಉದ್ದೇಶ ಸಾಧನೆಯಲ್ಲಿಯೇ ಆರ್ಯಧರ್ಮದ ಚರಿತಾರ್ಥತೆಯುಂಟು."

## ೩. ವರ್ಣವಿಭಾಗ

"ಅವನಾ ನಮ್ಮಾ ಕೂಟವೇ ಯೋಗ, ನಮ್ಮ ಬಾಳ್ವೆಯೇ ಯೋಗಕ್ಷೇತ್ರ" ಎಂದು ಹೇಳುವ ಗುರು ಅರವಿಂದರ ಅಭಿಪ್ರಾಯದಲ್ಲಿ ನಾವು ತಿಳಿಯದೆ ಆಗಲಿ ಸಾಗುತ್ತಿರೋದು ಅವನೆಡೆಗೇ. ಅಂತೇ ಚಂದ್ರನಗರದ ಪ್ರವರ್ತಕ ಸಂಘಾಧ್ಯಕ್ಷರಾದ ಶ್ರೀ ಮತಿಲಾಲರಾಯರು "ನಮ್ಮ ಬಾಳುವೆಯ ಒಂದೊಂದು ಘಟನೆಯೂ ನಮ್ಮ ಸಾಧನೆಯ ಒಂದೊಂದು ಅಂಶ" ಎಂದು ಹೇಳುತ್ತಿದ್ದಾರೆ. ಅಂತೇ ಮಾನವನ ಅಂತರಾಳದ ನಿಗೂಢ ಪ್ರದೇಶದಲ್ಲಿ ಒಂದು ಮೌನ ಸಂಗೀತವು ಕೇಳಬರುತ್ತಿದೆ. ಅದು "ನಾನಾರು ? ? ?"

"ಆನಾರ್ಹೇನಪ್ಪೆನೆಲ್ಲಿಂದೊಗೆದೆನೆನಗೆ ನಂಟರ್ಕಳಾರೆನ್ನ ಪೋಪ। ಸ್ಥಾನಂ ತಾನಾವುದೆನ್ನಂ ಪಿಡಿದು ತಿರಿಪುತಿರ್ದಪ್ಪರಾರೆನ್ನ ಜನ್ಮಂ ॥ ತಾನೇತಕ್ಕಾದುದೊ ...... ???"

— (ಅರ್ಧೇಂದುಮೌಳಿ ಶತಕ)

"ತನ್ನ ಅರಿವು ಅವನ ಬೆರಿಕೆಗೆ ದಾರಿ. ತಾನಾರು ? ತನ್ನ ಸುತ್ತಮುತ್ತಲಿನದಿದೆಲ್ಲಾ ಏನು ? ಅವರೊಡನೆ ತನ್ನ ಸಂಬಂಧವೇನು ? ಇಲ್ಲಿ ತನ್ನಿಂದಾಗ ಬೇಕಾದುದೇನು ? ಎಂಬುದರ ಅರಿವಿನಲ್ಲಿಯೇ ಮಾನವನ ಬಾಳುವೆಯ ಗುಟ್ಟು. ಅಂತು ಆತ್ಮದರ್ಶನವು ಮಾನವನ ಮುಖ್ಯೇಚ್ಛೆಗಳಲ್ಲೊಂದು. ಅಲ್ಲದೆ ಅವನಿಗೆ ಇನ್ನೂ ಎರಡು ಅನಿವಾರ್ಯ ಅಪೇಕ್ಷೆಗಳುಂಟು. ಅವು ಪ್ರಾಣರಕ್ಷಣೆ, ಶರೀರ ಪೋಷಣೆ. ಈ ಮೂರು ಸುಸೂತ್ರವಾಗಿದ್ದರೆಯೇ ಮಾನವಕೋಟಿಯ ಕಲ್ಯಾಣ. ಒಂದು ಬಳ್ಳಿಯ ಬೇರು, ಕೊಂಬೆ, ಎಲೆಗಳಲ್ಲಿ ಎಂಥಾ ಸಂಬಂಧವಿದೆಯೋ, ಸೂತ್ರವಿದೆಯೋ ಅಂತಹುದೇ ಈ ಆಕಾಂಕ್ಷಾತ್ರಯದಲ್ಲಿಯೂ ಉಂಟು. ಇವುಗಳಲ್ಲಿ ಯಾವುದೊಂದರ ಅಗಲಿಕೆಯು ಮಂಗಳಕರವಲ್ಲ, ಹಾಗೆ ಆಗೋದು ಸಾಧ್ಯವೂ ಇಲ್ಲ. ಈ ಮೂರೂ ಮಾನವನ ಗುಣಧರ್ಮಗಳು. ಇವುಗಳಲ್ಲಿ ಆತ್ಮದರ್ಶನಕ್ಕೆ

ಜ್ಞಾನವೂ, ಪ್ರಾಣರಕ್ಷಣೆಗೆ ಶಕ್ತಿಯೂ, ಶರೀರ ಪೋಷಣೆಗೆ ಅನ್ನವೂ ಅತ್ಯಾವಶ್ಯಕ. ಜ್ಞಾನ, ಶಕ್ತಿ, ಅನ್ನಗಳ ವಿನಾ ಆತ್ಮದರ್ಶನ, ಪ್ರಾಣರಕ್ಷಣ, ಶರೀರ ಪೋಷಣೆಗಳು ಅಸಾಧ್ಯ. ಆದುದರಿಂದ ಮಾನವಕೋಟಿಯ ಬಾಳುವೆಗೆ ಈ ಮೂರೂ ಬಗೆಯ ಅನ್ನಗಳು ಅಗತ್ಯ.

ಮಾನವಕೋಟಿಯ ಈ ಮೂರು ಗುಣಧರ್ಮಗಳಿಂದಲೇ, ಈ ಮೂರು ಅಗತ್ಯಗಳಿಂದಲೇ ಮೂರು ವರ್ಣಗಳ ಉತ್ಪತ್ತಿ. ಜ್ಞಾನಾನ್ನದಾತರು ಬ್ರಾಹ್ಮಣರು, ಶಕ್ತಿಯನ್ನು ಪೂರೈಸುವವರು ಕ್ಷತ್ರಿಯರು, ಶರೀರೋಪಜೀವನ ಸಾಹಿತ್ಯವನ್ನೊದಗಿಸುವವರು ವೈಶ್ಯರು. ಮಾನವಕೋಟಿಯ ಸೇವೆಗಾಗಿ ಮೂರು ವರ್ಣಗಳು ಹುಟ್ಟಿದವು. ಹೀಗೊಂದು ಪರ್ಯಾಯದಿಂದ ಶೂದ್ರ ತತ್ತ್ವದ ಮೇಲೆ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರ ಉತ್ಪತ್ತಿಯಾಯಿತು.

ಮಾನವರಲ್ಲಿ ಇನ್ನೊಂದು ಬಗೆಯ ಜನರನ್ನು ಕಾಣುವೆವು. ಅವರು ತಮ್ಮ ಸ್ವ-ತ್ವವನ್ನೇ ಅರಿಯರು. ತಮ್ಮ ಕಾಲಮೇಲೆ ತಾವು ನಿಲ್ಲೋದನ್ನು ಅವರು ಎಷ್ಟಕ್ಕೂ ಅರಿಯರು. ಆದುದರಿಂದ ಇಂಥವರು ಮೇಲೆ ಹೇಳಿದ ಮೂರು ವರ್ಣಗಳ ಸೇವೆ ಮಾಡಿ ಬಾಳುವ ಶೂದ್ರರಾದರು.

ಈ ವರ್ಣೋತ್ಪತ್ತಿಯನ್ನು ಕುರಿತು ಶ್ರೀ ಸುಖಸಂಪತ್ತಿರಾಯ್ ಭಂಡಾರಿಗಳು ಹೀಗೆ ಹೇಳುತ್ತಿದ್ದಾರೆ:- “ಆರ್ಯರು ನಿರ್ಮಿಸಿದ ಈ ವರ್ಣವಿಭಾಗಕ್ಕೆ ಆತ್ಮಿಕ ಐಕ್ಯವೇ ತಳಹದಿಯಾಗಿದ್ದಿತು.”

ಈ ವರ್ಣವಿಭಾಗವನ್ನು ಕುರಿತು ಶ್ರೀ ಸುರೇಶಚಂದ್ರ ಚಕ್ರವರ್ತಿಗಳು ಬೆಲೆಯುಳ್ಳ ಮಾತನೊಂದನ್ನು ಹೇಳುತ್ತಿದ್ದಾರೆ. ಇದನ್ನಿಲ್ಲಿ ಹೇಳದೆ ಇರಲಿಕ್ಕಾಗುವಂತಿಲ್ಲ-

“ಚಾತುರ್ವರ್ಣ್ಯಂ ಮಯಾ ಸೃಷ್ಟಂ” ಎಂದು ಪೂರ್ಣಾವತಾರ ಶ್ರೀಕೃಷ್ಣ ಭಗವಂತನು ಒಡನುಡಿದಿರುವನಷ್ಟೆ. ಹೀಗಿದ್ದೂ ಈ ಚತುರ್ವರ್ಣಗಳ ಅಸ್ತಿತ್ವವು ಭಾರತವರ್ಷದಲ್ಲಿಯೇ ಈ ಹಿಂದುಗಳಲ್ಲಿಯೇ- “ಓಂ ಭೂರ್ಭುವಸ್ವಃ ತತ್ಸವಿತುರ್ವರೇಣ್ಯಂ” ಎಂದು ಗಾಯತ್ರಿ ಮಂತ್ರವನ್ನು ಜಪಿಸುವವರಲ್ಲಿಯೇ- ಎಂದು ನಾವು ಭಾವಿಸುವದಾದರೆ, ನಾವು ಶ್ರೀಕೃಷ್ಣನನ್ನೂ ಅರಿತವರಲ್ಲ, ಅವನ ಗೀತೆಯನ್ನೂ ಅರಿತವರಲ್ಲವೆಂಬ ಮಾತು ಸುಸ್ಪಷ್ಟ.

“ಸತ್ಯವಾಗಿಯೂ ಈ ವರ್ಣ ವಿಭಾಗವು ಜಗತ್ತಿನ ಸಕಲ ಸಮಾಜಗಳಲ್ಲಿ ಸರ್ವಕಾಲವೂ ಕಣ್ಗೊಳಿಸುತ್ತದೆ. ಒಂದೊಂದು ವರ್ಣಕ್ಕೂ ಒಂದೊಂದು ವಿಶೇಷ ಲಕ್ಷಣವುಂಟಷ್ಟೇ? ಆ ಲಕ್ಷಣಗಳ ಮರ್ಯಾದೆಯು ಯಾವ ಸಮಾಜವನ್ನು ತನ್ನ ಹೊರಕ್ಕೆ ಬಿಟ್ಟಿಲ್ಲ. ಹೀಗಿರದಿದ್ದರೆ ಯಾವ ಸಮಾಜವೂ ಸ್ವಸ್ಥವಾಗಿ ಬಾಳುವಂತಿಲ್ಲ......”

"ಕ್ಷತ್ರಿಯನ ಪರಿಚಯವು ಅವನ ಕ್ಷಾತ್ರಧರ್ಮದಲ್ಲಿ. ಅವನು ಧನುರ್ಧಾರಿಯಾಗಿ ಯುದ್ಧಮಾಡಲೂ ಬಹುದು, ಟಾರ್ಪೇಡೊ ಮುಂತಾದ ಅಗ್ನ್ಯಸ್ತ್ರಗಳಿಂದಲೂ ಯುದ್ಧ ಮಾಡಬಹುದು. ಏನಾದರೂ ಅವನು ಕ್ಷತ್ರಿಯನೇ. ಹೀಗೇ ಉಳಿದುದೆಲ್ಲಾ."

ಇಲ್ಲಿ ಇನ್ನೊಂದು ಮಾತು ಆಲೋಚಿಸಬೇಕಾಗಿ ಬಂದಿದೆ. ಮುನ್ನುಡಿಯನ್ನು ಹೇಳುತ್ತಿರುವಾಗಲೇ ಬ್ರಾಹ್ಮಣೇತರ ಬಂಧುಗಳ ಮನದಲ್ಲೊಂದು ಜುಗುಪ್ಸೆ ಮನೆ ಮಾಡಿದಂತಿದೆ, ಏತಕ್ಕೆಂದರೆ ಆಗ ನಾವು "ಮಾನವಕೋಟಿಯ ಮೇಲ್ಮೆ ಕೀಳ್ಮೆಗಳಿಗೆ ಬ್ರಾಹ್ಮಣರೇ ಕಾರಣ"ರೆಂದು ಒತ್ತಿ ಹೇಳಿದ್ದೆವು.

ಇದೀಗ ವಿವೇಚಿಸುವ ವರ್ಣ ವಿವೇಕವನ್ನು ಮನದಂದು ಅವರು ಸಮಾಧಾನ ಪಟ್ಟಿರಬಹುದಾದರೂ ಆ ಮಾತಿನ ಸತ್ಯತೆಯನ್ನು ಇನ್ನಿಷ್ಟು ಸ್ಪಷ್ಟಪಡಿಸುವದು ಅಪ್ರಾಸಂಗಿಕವೇನೂ ಅಲ್ಲ.

ಮಾನವಕೋಟಿಯ ಒಂದೊಂದು ಪ್ರಯೋಜನಕ್ಕಾಗಿ ಒಂದೊಂದು ವರ್ಣದ ಉತ್ಪತ್ತಿಯಷ್ಟೆ. ಈ ವಿಧದಲ್ಲಿ ಯಾರೂ ಒಬ್ಬರಿಗಿಂತೊಬ್ಬರು ಶ್ರೇಷ್ಠರಲ್ಲ ಮತ್ತು ಕನಿಷ್ಠರಲ್ಲ. ಇಲ್ಲಿ ಸಮಾನತೆಯೇ ನೆಲೆಗಟ್ಟು. ಇದೀಗ ನಾವು ಆಲೋಚಿಸಿದ್ದು ಈ ತಾರತಮ್ಯಭಾವದ ಈಚೆಗಿನ ವಿಷಯವಲ್ಲ, ಆಚೆಗಿನದು.

ನಾವು ಹಿಂದೆ ಮೂರು ಮಾತುಗಳನ್ನು ಆಲೋಚಿಸಿ ಆಗಿದೆ. ೧. ಅರಿಯೋದು, ೨. ಬದುಕೋದು, ೩. ತಿನ್ನೋದು. ಇಲ್ಲಿ ಬದುಕಬೇಕಾದದ್ದು ಸಾಮಾನ್ಯ-ಸಾಧಾರಣವಾಗಿದೆ. ನಾವು ಬದುಕೋದು ತಿನ್ನೋದಕ್ಕೋ, ಅರಿಯೋದಕ್ಕೋ? ಎಂದು ನಮ್ಮನ್ನೇ ಕೇಳಿಕೊಂಡರೆ, ಏನು ತಾನೆ ಉತ್ತರ ಸಿಕ್ಕೀತು? ಬೆರಿಯೊ ದಾರಿಯಾದ ಅರಿಯೋದಕ್ಕೆಂದೇ ಎಲ್ಲರ ಉತ್ತರ. ಆದುದರಿಂದ ಇದೀಗ ಜ್ಞಾನ ಮತ್ತು ಶಕ್ತಿ ಇವೆರಡೇ ನಮ್ಮ ಆಲೋಚ್ಯ ವಿಷಯಗಳೆಂದಂತಾಯಿತು. ಜ್ಞಾನಬಲವು ಎಲ್ಲಾ ಬಲಗಳ ತಾಯಿಯೆಂಬೋದಕ್ಕೆ ಒಂದೇ ಉದಾಹರಣೆಯನ್ನು ತೋರಿಸಿಕೊಟ್ಟರೆ ಇದಕ್ಕೆ ಸಾಕು. ಹೆಚ್ಚಿಗೆ ಹೇಳೋದೇನೂ ಅಗತ್ಯವಿಲ್ಲ. ಅರ್ಜುನನ ಕ್ಷಾತ್ರವೃತ್ತಿಯನ್ನು ಉದ್ದೀಪಿಸಿದ್ದು ಯಾವ ಶಕ್ತಿಯೆಂಬುದನ್ನು ಗೀತೆಯು ಈಗಲೂ ಸಾರಿ ಹೇಳುತ್ತಿದ್ದಾಳೆ. ಶ್ರೀಕೃಷ್ಣನ ಜ್ಞಾನೋಪದೇಶವಿಲ್ಲದಿದ್ದರೆ ಆ ರಣಕ್ಷೇತ್ರದಲ್ಲಿ ಅರ್ಜುನನ ಕ್ಷಾತ್ರತೇಜವು ಬೆಳಗಬಹುದಾಗಿದ್ದಿತೇ ? ಅಂತೇ ನಾವು 'ಜಗದ ಅಳಿವು, ಉಳಿವು, ಬೆಳವೆ'ಗಳು ಬ್ರಾಹ್ಮಣರನ್ನವಲಂಬಿಸಿರುವವೆಂದು ಹೇಳೋದು. ಈ ವಿಷಯದಲ್ಲಿ ಗುರು ಅರವಿಂದರು ಹೇಳೋದೂ ಇದೇ ಮಾತನ್ನೇ :

"ಸಾತ್ವಿಕ ಭಾವವೇ ಆರ್ಯಶಿಕ್ಷೆಯ ಮೂಲಮಂತ್ರ......... ಬ್ರಹ್ಮತೇಜವೇ ಸತ್ವಗುಣದ ಮುಖ್ಯ ಫಲವು, ಕ್ಷಾತ್ರತೇಜವು ಬ್ರಹ್ಮತೇಜದ ಭಿತ್ತಿ. ಆಘಾತವನ್ನು

ಹೊಂದಿದರೆ ಶಾಂತವಾದ ಬ್ರಹ್ಮತೇಜದಿಂದಲೇ ಕ್ಷಾತ್ರತೇಜದ ಉರಿಯೆದ್ದು ನಾಲ್ಕೂ ನಿಟ್ಟನ್ನು ಸುಟ್ಟು ಬೂದಿ ಮಾಡುವುದು...... ದೇಶದಲ್ಲಿ ಒಬ್ಬ ಬ್ರಾಹ್ಮಣನಿದ್ದರೆ, ನೂರು ಜನ ಕ್ಷತ್ರಿಯರ ಸೃಷ್ಟಿಯಾಗಬಲ್ಲುದು.

ಶ್ರೀ ಅರವಿಂದ ಮಹರ್ಷಿಗಳೇ ಇನ್ನೊಂದು ಸಲ ತಮ್ಮ ಧರ್ಮಪತ್ನಿಯವರಿಗೆ ಬರೆದ ಪತ್ರದಲ್ಲಿ ಈ ಬ್ರಹ್ಮತೇಜವನ್ನು ನಿಗೂಢವಾದ – ಗಂಭೀರವಾದ – ಆತ್ಮ ವಿಶ್ವಾಸದಿಂದ ಹೊಗಳಿದ್ದಾರೆ. ಆ ಅಮರವಾಣಿಯಿದು :–

"ಈ ಪತಿತ ಜಾತಿಯನ್ನು ಉದ್ಧಾರಗೊಳಿಸುವ ಸಾಮರ್ಥ್ಯವು ನನ್ನಲ್ಲಿದೆ ಯೆಂಬುದನ್ನು ನಾನು ತುಂಬಾ ಬಲ್ಲೆನು. ಅದು ಶಾರೀರಿಕ ಬಲವಲ್ಲ; ಕತ್ತಿ, ಬಿಲ್ಲುಗಳನ್ನು ಹಿಡಿದು ಕಾದುವ ಬಲವಲ್ಲ; ಅದು ಜ್ಞಾನಬಲವು!!!"

## ೪. ಅವನತಿ

ಇದೀಗ ಎಲ್ಲೆಲ್ಲೂ ಅವನತಿಯ ಕೂಗು ಕೀಸರಿಟ್ಟಿದೆಯೆಂದು ಹೇಳಿ ಆಗಿದೆ ಯಷ್ಟೆ? ಇದೇನು ಇಂದಿನ ಕೂಗಲ್ಲ. ಸುರುವಾಗಿ ಬಹು ದಿನಗಳಾದವು. ಏನೇ ಇದ್ದರೂ ಇದಕ್ಕೆಲ್ಲಾ ಬ್ರಾಹ್ಮಣ ಜಾತಿಯ ಅವನತಿಯೇ ಮೂಲಕಾರಣವೆಂಬುದನ್ನು ಬೇರೆ ತಿಳಿಸುವ ಅವಶ್ಯಕತೆಯಿಲ್ಲ. ಈ ಅವನತಿಯ ಕೋಲಾಹಲವು ಜನಸಾಮಾನ್ಯ ರಲ್ಲಲ್ಲದೆ ಕವಿಯ ರಸಮಂತಿಯಲ್ಲೂ ಕೂಡ ದಾಳಿಯನ್ನೆಬ್ಬಿಸುವಷ್ಟು ಪ್ರಬಲಿಸಿದೆ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಸೀತಾ ಪರಿತ್ಯಾಗದ ಕರುಣಾಸಿಂಧುವಿನಲ್ಲಿ ಓಲಾಡುತ್ತಿರುವಾಗಲೇ ಈ ಬಿರುಗಾಳಿಯ ಕೋಲಾಹಲವೇಳುತ್ತದೆ :–

ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ
ಪಲವು ಮಾತೇನಿನ್ನು ಸೀತೆಯಂ ಬಿಟ್ಟೆನೆನೆ
ಬಲುಗರಮಿದೆತ್ತಣದೊ ಕಾರುಣ್ಯನಿಧಿಗೆನುತ ನಡುನಡುಗಿ
ಭೀತಿಯಿಂದ ।
ನೆಲೆಗೊಂಡ ವೇದಮಂ ಧರೆಯ ಪಾಷಂಡಿಗಳ್
ಸಲೆ ನಿಂದಿಸಿದೊಡಂ ಮಾಣ್ದಪರೆ ದ್ವಿಜರಕಟ
ಕುಲವರ್ಧಿನಿಯನೆಂತು ಬಿಡುವೆ ನೀಂ ಪೇಳೆಂದರನುಜಾತರಗ್ರಜಂಗೆ ॥

ಇದನ್ನು ನೋಡಿದರೆ, ಇನ್ನೂರು ವರುಷಗಳಿಗೆ ಮೊದಲೇ ಬ್ರಾಹ್ಮಣರಿಗೆ ಆಚಾರಗಳಲ್ಲಿ ಅನಾಸಕ್ತಿಯುಂಟಾಗಿದ್ದಿತೆಂದೂ, ಅಂತೆಯೇ ಬ್ರಾಹ್ಮಣೇತರರಲ್ಲಿ ವೇದ ನಿಂದೆಗೆ ಆರಂಭವಾಗಿದ್ದಿತೆಂತಲೂ ಸ್ಪಷ್ಟವಾಗುತ್ತದೆ. ಈ ವಿಷಯವನ್ನು ಸುಮಾರು ಅದೇ ಸಂಧಿಗಿದ್ದ ವೆಂಕಟಾಧ್ವರಿಯೂ ತನ್ನ 'ವಿಶ್ವಗುಣಾದರ್ಶ'ದಲ್ಲಿ ಉಲ್ಲೇಖಿಸಿದ್ದಾನೆ. ಅವನು ಮಹಾರಾಷ್ಟ್ರ ದೇಶವನ್ನು ವರ್ಣಿಸುವಾಗ ಛಿದ್ರಾನ್ವೇಷಣ ಪಟುವಾದ ಕೃಶಾನುವಿನ ಬಾಯಲ್ಲಿ ಹೀಗೆ ಹೇಳಿಸಿದ್ದಾನೆ :–

"ಆಯಾ ಸಂಧ್ಯಾವಂದನೆಯನ್ನು ಆಯಾ ಕಾಲದಲ್ಲಿ ಎಂದಿಗೂ ಮಾಡುವದಿಲ್ಲ ......ಯಜನಾದ್ಯಾಪನ ಪ್ರತಿಗ್ರಹಾತ್ಮಕವಾದ ಸ್ವವೃತ್ತಿಯನ್ನು ಬಿಟ್ಟು ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರಾದರೂ ಕರಣಿಕರಾಗಿ ನೀಚವೃತ್ತಿಯಿಂದ ಜೀವಿಸುವರು......

"ಗೃಹಸ್ಥರೆಂಬೀ ಬ್ರಾಹ್ಮಣರು ಮಂತ್ರಗಳನ್ನುಚ್ಚರಿಸುವ ರೀತಿಯನ್ನರಿಯದೆ ಸಂಧ್ಯಾವಂದನಾದಿ ಕರ್ಮಗಳನ್ನು ಮೌನದಿಂದಲೇ ಮಾಡುವರು. ವಂಶ ಪಾರಂಪರ್ಯದಿಂದ ಗ್ರಾಮಗಣಿಕರಾದ, ಶೂದ್ರ ಸಮಾನರಾದ ಈ ಮಹಾರಾಷ್ಟ್ರ ದೇಶೀಯರಿಗೆ ಬ್ರಾಹ್ಮಣ್ಯವೆಲ್ಲಿಯದು ?"

ವೆಂಕಟಾಧ್ವರಿಯು ಹೇಳುವಂತೆ ಧರ್ಮಗೇಡಾಗಿದೆಯೆಂದು ಎಲ್ಲರೂ ಒಪ್ಪ ಬಹುದಾದರೂ ಕಾರಣವನ್ನು ಯಾರೂ ಹೇಳಲಿಲ್ಲ. 'ಶಾಪಾದಪಿ ಶರಾದಪಿ'ಗಳಾದ ಬ್ರಾಹ್ಮಣರೀಗ 'ಭಕ್ಷ್ಯಾದಪಿ ಭಿಕ್ಷಾದಪಿ'ಗಳಾಗಿರುವರಾಗಿ ಎಲ್ಲರೂ ಬಲ್ಲರಾದರೂ ಇದಕ್ಕೆಲ್ಲಾ ಕಾರಣವೇನೆಂದು ಕೇಳಿದರೆ, ಸಮಾಧಾನಕರವಾದ ಉತ್ತರದ ಕೊರತೆ. ನೋಡಿದ ಕೂಡಲೇ ಬ್ರಾಹ್ಮಣನಿರಬೇಕೆಂಬಂತೆ ಕಾಣುವ ಒಬ್ಬ ಆಚಾರ್ಯನಿಗೆ ಇದೇ ಮಾತನ್ನು ಕೇಳಿದರೆ ಅವನು ಹೀಗೆ ಹೇಳಬಹುದು :– "ಏನಯ್ಯಾ ! ಇದು ಕಲಿಕಾಲ !! ತ್ರಿಪಾದ ಪಾಪ !!! ಆ ಹಿಂದಿನ ಆಚಾರವೀಗೆಲ್ಲಿ ? ಎಲ್ಲದರ ಮೇಲೂ ಅನಾದರ. ಮಧ್ಯಾಹ್ನಕ್ಕೆ ಆಶನ ಕತ್ತರಿಸೋದೊಂದೇ ಗೊತ್ತು. ಎಲ್ಲೆಲ್ಲೂ ಅನಾಚಾರ. ಈಗಳೇ ಬ್ರಾಹ್ಮಣರಲ್ಲಿ ಎರಡು ವರ್ಗಗಳಾಗಿ ಹೋಗಿವೆ :– ಗೃಹಸ್ಥ ರಂತೆ, ವೈದಿಕರಂತೆ; 'ವೈದಿಕರಲ್ಲೂ ಮತ್ತೆರಡಾಗುವ ಚಿಹ್ನೆಗಳಿಗೇನೂ ಕೊರತೆಯಿಲ್ಲ. ಆಚಾರೀ ವೈದಿಕರು, ಸಾಮಾನ್ಯ ವೈದಿಕರು ಅಂತ ಎರಡು ವಿಧವಾಗೋದರಲ್ಲಿದ. ಆಚಾರವೇ ಲೋಪವಾಗಿಬಿಟ್ಟರೆ, ತಾನೆ ಧರ್ಮಗೇಡಾಗದೆ ಏನು ಮಾಡೀತು ?"

ಹೀಗೆ ಒಬ್ಬರಿಗೆ ಕೇಳಿದರೆ- ಆಚಾರಲೋಪವೇ ಕಾರಣವೆಂದು ಹೇಳಿದರೆ, ಇನ್ನೊಬ್ಬರು ಇನ್ನೊಂದು ವಿಧದಲ್ಲಿ ಮೊರೆಯಿಡುತ್ತಾರೆ :– "ಬ್ರಾಹ್ಮಣರ ಮೇಲಿದ್ದ ಹಿಂದಿನ ಶ್ರದ್ಧಾಭಕ್ತಿಗಳೀಗೆಲ್ಲಿ ? ಮನೆಗೆ ಹೋದರೆ ನೋಡೀ ನೋಡದ ಹಾಗೆ ಮೋರೆದಿರುವುತ್ತಾರೆ. ಹೀಗಾದರೆ ತಾನೆ ಧರ್ಮಗೇಡಾಗದೆ ಇದ್ದೀತೇ ?"

ಇವರು ಹೀಗೆ ಹೇಳಿದರೆ ಇನ್ನೊಬ್ಬರು ಇನ್ನೊಂದು ವಿಧದಲ್ಲಿ ಗೋಳಿಡು ತ್ತಾರೆ :– "ಏನಯ್ಯಾ ! ಈ ಕಾಲದಲ್ಲಿ ತಿಳಿಸಿ ಹೇಳೋದೇ ಕಷ್ಟ. ಸಂಧ್ಯಾವಂದನೆ ಯನ್ನು ಯಾಕೆ ಮಾಡಬೇಕು ? ಜನ್ನಿವಾರದ ಅಗತ್ಯವೇನು ? ವೇದದಲ್ಲೇನು ಹುರುಳಿದೆ ? ಮಡಿಮೈಲಿಗೆಯನ್ನು ಪಾಲಿಸದಿದ್ದರೆ ಆಗೋದೇನು ? -ಎಂಬುದಾಗಿ ಒಂದೇ, ಎರಡೇ, ಅನೇಕ ಪ್ರಶ್ನೆಗಳನ್ನು ಕೇಳುತ್ತಾರೆ. ಹೀಗೆ ಕೇಳೋ ಅಧಿಕಾರ ವಿಲ್ಲವೆಂದು ಗದ್ದರಿಸಿದರೆ ಗೇಲೀ ಮಾಡುತ್ತ ಹೋಗಿಬಿಡುತ್ತಾರೆ. ಧರ್ಮಶಾಸ್ತ್ರ ಗಳಲ್ಲಿ ಹೇಳಿರೋದನ್ನು ಮಾಡದೆ ಸುಮ್ಮ ಸುಮ್ಮನೆ ಇಲ್ಲದ ಸಲ್ಲದ ಗುದುಮುರಿಗೆ

ಯನ್ನೆಬ್ಬಿಸಿದರೆ ಏನು ಮಾಡೋದು ? ಓೀಗಾದರೆ ತಾನೆ ಧರ್ಮಗೇಡಾಗದೆ ಹೇಗೆ ಇದ್ದೀತು ?"

ಇದೀಗ ಮೂರು ಕಾರಣಗಳು ಹೊರಬಿದ್ದವು. - (೧) ಆಚಾರ ತಪ್ಪಿದ್ದು, (೨) ಬ್ರಾಹ್ಮಣರ ಮೇಲಿನ ಶ್ರದ್ಧಾಭಕ್ತಿಗಳು ಕಡಿಮೆಯಾದದ್ದು, (೩) ಶಾಸ್ತ್ರೋಕ್ತ ಗಳಾದ ಆಚಾರಗಳ ವಿಷಯದಲ್ಲಿ ಸಂಶಯವೆದ್ದದ್ದು. ನಾವಾದರೋ ಈ ಮೂರು ಕಾರಣಗಳನ್ನೂ ಒಪ್ಪಲಾರೆವು. ಆಚಾರ ತಪ್ಪಿದರೆ ಧರ್ಮಗೇಡಾಗುವುದಿಲ್ಲ; ಧರ್ಮಗೇಡಾದರೆ ಮಾತ್ರ ಆಚಾರ ತಪ್ಪುತ್ತದೆ. ಆಚಾರವು ಧರ್ಮದ ಸ್ಥಿತಿಯನ್ನು ಸೂಚಿಸುವ ಬಾಹ್ಯಿಕ ಚಲನವಲನ ಮಾತ್ರ. ಇದು ಎಂದಿಗೂ ಲೋಪವಾಗ ಲಾರದು. ಯಾಕೆಂದರೆ ಧರ್ಮವೇ ಇದರ ಜೀವ. ಧರ್ಮವಾದರೋ ತ್ರಿಕಾಲಾ-ಬಾಧಿತ ಸತ್ಯ. ಆದುದರಿಂದ ಆಚಾರವೂ ಚಿರಜೀವಿ, ಆಚಾರವು ಲೋಪವಾಗಲೇ ಆರದು. ಧರ್ಮದ ಪರಿವರ್ತನವನ್ನನುಸರಿಸಿ ಬದಲಾಗಬಲ್ಲದು ಮಾತ್ರ.

ಇನ್ನೇನು ? ವೇದಪಠನಪಟುಗಳ ಮೇಲೆ ಅಶ್ರದ್ಧೆ. ಇವರಲ್ಲಿ 'ಗುರುತ್ವ'ವಿದ್ದರೆ ಮಾತ್ರ ಗೌರವವು. ಅದಿಲ್ಲದಿದ್ದರೆ ಅಗೌರವವು ಅನಿವಾರ್ಯ. ಇವರ ವೇದ ಪಠನವು ಬರೀ ಅರ್ಥರಹಸ್ಯ-ಜ್ಞಾನವಿಲ್ಲದ- `ಪಠನ`ವೇ ಆಗಿಬಿಟ್ಟರೆ ಚಿಕ್ಕಮಕ್ಕಳ ಮೂಲಾಕ್ಷರ ಪಠನಕ್ಕೂ ಇದಕ್ಕೂ ವ್ಯತ್ಯಾಸವನ್ನು ಕಲ್ಪಿಸುವದೇ ಅಸಾಧ್ಯ. ವೈದಿಕರು ತಮ್ಮ 'ಗುರುತ್ವ'ವನ್ನು ಕಳಕೊಂಡು ಶ್ರದ್ಧಾಭಕ್ತಿಗಳಿಗೆ ಎರವಾದರೇ ಹೊರತು, ಶ್ರದ್ಧಾಭಕ್ತಿಗಳ ಲೋಪವೇ ಧರ್ಮಗೇಡಾಗೋದಕ್ಕೆ ಕಾರಣವಾಗಲಿಲ್ಲ.

ಇನ್ನುಳಿದದ್ದು ಸಂಶಯ ವೃತ್ತಿ, ಇದರಿಂದ ಧರ್ಮಗೇಡಾಗದು. ಧರ್ಮ ಗ್ರಂಥಗಳ ರಹಸ್ಯವು ಮರೆಯಾದ ಹಾಗೆಲ್ಲಾ ಇದು ತಲೆಯೆತ್ತುವದುಂಟು. ಧರ್ಮ ಗ್ರಂಥಗಳ ರಹಸ್ಯವು ಮರೆಯಾಗೋದೆಂದರೆ ಆ ಜಾತಿಯ "ಅಡ್ಡ ಕಸಬುತನ"ದ ಹೆಗ್ಗುರುತು, ಎಂದರೆ ನಿಜವಾದ ಅಧ್ಯಯನದ ಲೋಪ. ಆದುದರಿಂದಲೇ ಸಂಶಯವೃತ್ತಿಯ ವಿಕಾಸ. ಈ ಸಂಶಯ ವೃತ್ತಿಯು ತಲೆಯನ್ನೆತ್ತುವದು ಒಂದು ರೀತಿಯಿಂದ ಅಧೋಗತಿಯಿಂದ ಉನ್ನತಿಗೆ ಹೋಗುವದರ ಪೂರ್ವಲಕ್ಷಣವೇ ಸರಿ.

ಹಾಗಾದರೆ ದಿಟವಾದ ಕಾರಣವೇನಿದ್ದೀತು ? ನಮ್ಮ ಅಭಿಪ್ರಾಯದಲ್ಲಾದರೋ ಜಗವೇ ತನ್ನ ಸ್ವ-ತ್ವವನ್ನು ಕಳಕೊಂಡಿದೆ. ಬ್ರಾಹ್ಮಣರು ತಮ್ಮ ಸ್ವ-ತ್ವಕ್ಕೆ ಜಲಾಂಜಲಿಯನ್ನು ಕೊಟ್ಟಾಗಳೇ ಅಧೋಗತಿಗಿಳಿದಿದ್ದಾರೆ. ಈಗ ಎಲ್ಲಿ ನೋಡಿದರೂ ಮೊದಲಿನ ವರ್ಣವಿಭಾಗ ತತ್ತ್ವವು ಲೋಪವಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜಾತಿಗಳು ಸಮಾಜದ ಶೂದ್ರ ತತ್ತ್ವದ ಮೇಲೆ ಮನೆಮಾಡಿಕೊಂಡಿದ್ದ-ವೆಂಬುದನ್ನು ಮೊದಲೇ ಆಲೋಚಿಸಿರುವೆವಷ್ಟೆ. ಈ ಉದಾರವಾದ ಶೂದ್ರ ಭಾವವೀಗ ಲೋಪವಾಗಿದೆ. ತಾವು ಎಲ್ಲರ ಸೇವಕರೆಂಬುದನ್ನು ಮೆಟ್ಟಿ ಎಲ್ಲರೂ

ತಮ್ಮ ಪ್ರತಿಷ್ಠೆಯನ್ನು ಬೆಳಸಿಕೊಂಡು ಮೆರೆಯುವದರಲ್ಲಿದ್ದಾರೆ. ಕ್ಷತ್ರಿಯರು (ಬಲಶಾಲಿಗಳು) ಒಂದರ ಹಿಂದೊಂದು ದುರ್ಬಲ ಜಾತಿಗಳನ್ನು ಕಾಲಕೆಳಗೆ ತುಳಿದು, ತಮ್ಮ ಬಾಯಿಂದ ಹೊರಟಿದ್ದೇ ಶಾಸನವಾಗಿ ಭಾವಿಸುತ್ತ ರಾಜಾಧಿರಾಜರಾಗುವ ದರಲ್ಲಿದ್ದಾರೆ. ಹೀಗಾಗಿ ಎಲ್ಲೆಲ್ಲೂ ಸ್ವ-ತ್ವ ನಾಶವಾಗುತ್ತಿದೆ. ಇದುವೆ ಅವರವರ ಅಧೋಗತಿಗೆ ಮೂಲಕಾರಣ. ಬ್ರಾಹ್ಮಣರಾದರೋ ತಮ್ಮ ಸ್ವ-ತ್ವವನ್ನು ನೌಕರಿಗೆ ಮಾರಿಕೊಂಡರೆಂಬೋದಕ್ಕೆ ಬೇಕಾದುದಕ್ಕಿಂತಲೂ ಹೆಚ್ಚಿಗೆ ಪ್ರಮಾಣಗಳುಂಟು. ಗುರು ಅರವಿಂದರೂ ಕವಿ ರವೀಂದ್ರರೂ ಈ ವಿಷಯದಲ್ಲಿ ಹೀಗೆ ಅಭಿಪ್ರಾಯ ಪಡುತ್ತಾರೆ :–

ರವಿ ಬಾಬುಗಳ ಮತವಿದು :—

"ಇದೀಗಿನ ಬ್ರಾಹ್ಮಣರಲ್ಲಿ ಹಿಂದಿನ ವಿಶೇಷತೆಯಿಲ್ಲ. ಅಧ್ಯಯನ, ಅಧ್ಯಾಪನ, ಧರ್ಮಚರ್ಚಾಕಾರ್ಯಗಳೀಗ ಅವರನ್ನು ಬಿಟ್ಟು ತೊಲಗಿವೆ. ಇವರಲ್ಲಿ ನೌಕರಿಗೆ ಸೇರಿದವರೇ ಹೆಚ್ಚು. ತಪಶ್ಚರ್ಯವನ್ನು ಮಾಡುವವರನ್ನು ಕಾಣುವುದು ದುರ್ಲಭ. ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ವಿಶೇಷ ವ್ಯತ್ಯಾಸಗಳೀಗ ಉಳಿದಿಲ್ಲ. ಇಷ್ಟಾಗಿಯೂ ಬ್ರಾಹ್ಮಣರೆಂದು ಹೇಳಿಸಿಕೊಳ್ಳುವಷ್ಟು ಹತ್ತೆತನದಲ್ಲಿ ಬಾಳುವದರಲ್ಲಿ ಸಾರ್ಥಕತೆಯಿಲ್ಲ."

ಗುರು ಅರವಿಂದರ ಅಮರವಾಣಿಯಿದು :

"ನಾವು ಧರ್ಮಭ್ರಷ್ಟರಾಗಿಯೂ, ಲಕ್ಷ್ಯಹೀನರಾಗಿಯೂ ಭ್ರಾಂತಿಮೂಲಕ ವಾದ ತಾಮಸಿಕ ಮೋಹದಲ್ಲಿ ಬಿದ್ದು ಆರ್ಯ ಶಿಕ್ಷೆಗೂ, ಆರ್ಯ ನೀತಿಗೂ ಎರ ವಾದೆವು. ನಾವು ಆರ್ಯ ಜಾತಿಯವರಾದರೂ ಶೂದ್ರತ್ವವನ್ನು ಶೂದ್ರ ಧರ್ಮ ರೂಪ ದಾಸತ್ವವನ್ನು ಅಂಗೀಕರಿಸಿ ಪ್ರಬಲ ಪದದಲಿತರೂ, ದುಃಖ ಪರಂಪರಾ ಪೀಡಿತರೂ ಆಗಿದ್ದೇವೆ."

## ೫. ಉಪಾಯ ಚಿಂತನೆ

ಈ ಬಗೆಗೀಗ ಎಲ್ಲೆಲ್ಲೂ ಆಲೋಚನೆಗಳು ನಡೆದಿವೆ. . ಆದರೂ ನಿಚ್ಚಳವಾದ ನಿರ್ಣಯವು ಎಲ್ಲಿಯೂ ಹೊರಬಿದ್ದಿಲ್ಲ. ಕಾಶಿಯ "ಅಖಿಲ ಭಾರತ ವರ್ಣೀಯ-ಬ್ರಾಹ್ಮಣರಕ್ಷಾ ಮಹಾಸಭೆ"ಯವರು ಸಮ್ಮೇಲನಗಳನ್ನು ಸೇರಿಸಿದರಾಗಲಿ, ಮಾಸ ಪತ್ರಿಕೆಗಳನ್ನೂ ಚಿಕ್ಕಪುಟ್ಟ ಪುಸ್ತಕಗಳನ್ನೂ ಪ್ರಕಟಿಸಿದರಾಗಲಿ, ಸಂಘೋಪಸಂಘ ಗಳನ್ನೇರ್ಪಡಿಸಿ ಬಾಯಲ್ಲಿದ್ದುದನ್ನು ಕೈಯಲ್ಲಿ ತಂದ ಹಾಗಿಲ್ಲ.

ಇದೀಗ ಧಾರವಾಡದ "ಬ್ರಾಹ್ಮಣ ಸಭೆ"ಯವರು ನಡೆಯಿಸಿರುವ ಎತ್ನುಗಡೆ ಗಳು ಸರ್ವಾಂಗ ಪರಿಪೂರ್ಣವಾಗಿಲ್ಲವಾದರೂ ಕೆಲಮಟ್ಟಿಗಾದರೂ ಸಂತೋಷ ಕರವಾಗಿದೆ. ಅವರ ಆಲೋಚನೆಯಲ್ಲಿ ಬಾಹಿರಂಗಿಕ ಜೀವನವನ್ನು ನಿರ್ವಿಘ್ನವಾಗಿ ಸಾಗಿಸುವದಕ್ಕಾಗಿ ಬಹಳ ಮಟ್ಟಿಗೆ ಸ್ಥಳ ಸಿಕ್ಕಿದೆ, ಅಷ್ಟೆ.

ನಮಗಿದೀಗ ಬೇಕಾದುದು ಕಳೆದು ಹೋಗಿರುವ ನಮ್ಮ ಸ್ವ-ತ್ವ. ಅದಿಲ್ಲದೆ ನಮ್ಮ ಮೇಲ್ಮೆಯಿಲ್ಲ. ಇದನ್ನು ದೊರಕಿಸುವ ಉಪಾಯವನ್ನು ಗುರು ಅರವಿಂದರು ಒತ್ತಿ ಹೇಳುತ್ತಿದ್ದಾರೆ. ಅದನ್ನೇ ಇಲ್ಲಿ ವಿವರಿಸಿ, ಬೆಳೆದು ಬಂದಿರುವ ನಮ್ಮ ಪ್ರಬಂಧಕ್ಕೆ ವಿರಾಮವನ್ನು ಕೊಡುವೆವು.

"ಇದೀಗ ಬದುಕುವ ಆಶೆಯಿದ್ದಾಗಲಿ, ಅನಂತವಾದ ನರಕದಿಂದೇಳಬೇಕೆಂದು ಎಳ್ಳಷ್ಟೇ ಆದರೂ ಬಯಸುತ್ತಿದ್ದರಾಗಲಿ, ನಮ್ಮ ಸ್ವ-ತ್ವ ರಕ್ಷಣೆಯು-ಜಾತಿ ರಕ್ಷಣೆಯು ಮೊದಲನೆಯ ಕರ್ತವ್ಯ. ಆರ್ಯ ಚರಿತ್ರೆಯ ಪುನರ್ಘಟನಕ್ಕಾಗಿ ಈ ಜಾತಿಯ ರಕ್ಷಣೆ ಅಗತ್ಯ. ಯಾವುದರಿಂದ ಜನನೀ ಜನ್ಮಭೂಮಿಯ ಭಾವೀ ಸಂತಾನವು ಜ್ಞಾನ, ಸತ್ಯನಿಷ್ಠೆ, ಮಾನವ ಪ್ರೀತಿ, ಭ್ರಾತೃಭಾವ, ಸಾಹಸ, ಶಕ್ತಿ, ವಿನಯಾದಿ ಸದ್ಗುಣಗಳನ್ನು ಹೊಂದುವುದು ಅಂಥಾ ಉಪಯುಕ್ತ ಶಿಕ್ಷೆಯನ್ನೂ, ಉಚ್ಚವಾದ ಆದರ್ಶವನ್ನೂ, ಆರ್ಯಭಾವೋದ್ದೀಪಕ ಕರ್ಮ ಪ್ರಣಾಲಿಯನ್ನೂ ಸಮಸ್ತ ಜಾತಿಗೆ ಅದರಲ್ಲಿಯೂ ಯುವಕ ಸಂಪ್ರದಾಯಕ್ಕೆ ಒದಗಿಸಿ ಕೊಡುವುದು ನಮ್ಮ ಪ್ರಥಮೋದ್ದೇಶ. ಈ ಕಾರ್ಯದಲ್ಲಿ ಕೃತಾರ್ಥರಾಗುವವರೆಗೂ ನಮ್ಮ ಸನಾತನ ಧರ್ಮಪ್ರಚಾರವೆಂಬೋದು ಮಳಲಲ್ಲಿ ಬೀಜಗಳನ್ನು ಬಿತ್ತಿದಂತೆಯೇ ಸರಿ.

ಜ.ಕ. ೪-೪ ಜನೆವರಿ ೧೯೨೬

# ಗುರುಪೂಜೆ

---

ಪೂಜೆಯೆಂದರೆ ವಾತ್ಸಲ್ಯ-ಮಮತೆಗಳ ಆಲಿಂಗನ. ಪೂಜ್ಯನಲ್ಲಿ ವಾತ್ಸಲ್ಯ ಪೂಜಾರಿಯಲ್ಲಿ "ಮಮತೆ." ಹೀರುವುದು ವಾತ್ಸಲ್ಯದ ಸ್ವಭಾವ, ಹರಿಯುವುದು ಮಮತೆಯ ಸ್ವಭಾವ. ಅದು ಹೀರಿದತ್ತ ಇದು ಹರಿದೀತು; ಇದು ಹರಿದು ಬಂದರೆ ಅದು ಹೀರೀತು. ಮಮತೆಯ ಮಹಾಪೂರ ಬಂದು, ಅದು ವಿಶ್ವವನ್ನೆಲ್ಲ ತುಂಬಿ ತುಳುಕಬಹುದು. ಆಗ ವಾತ್ಸಲ್ಯವು ಅದನ್ನೆಲ್ಲ ಹಿಗ್ಗಿ ಹೀರಬಹುದು. ಹೀಗೊಮ್ಮೆ ವಾತ್ಸಲ್ಯ ಮಮತೆಗಳಲ್ಲಿ ಐಕ್ಯವು ಒಡಮೂಡುವುದು. ಆಗ ಎಲ್ಲೆಲ್ಲಿಯೂ ವಾತ್ಸಲ್ಯ !!!

ಇಂಥ ವಾತ್ಸಲ್ಯದಿಂದ ತುಂಬಿರುವುದಾ ಭಕ್ತವತ್ಸಲನ ಅಂತರಂಗವು. ಇವನು ಗುರುವಿಗೆ ಗುರುವು; ಎಂದರೆ ಅನಂತನು. ಗುರುವೆಂಬ ಬಿರುದು ಈ ಅನಂತನಿಗಲ್ಲದೆ ಇನ್ನಾರಿಗೆ ತಾನೆ ಸಲ್ಲಬಲ್ಲುದು ? ಈ ವತ್ಸಲನೊಡನೆ ವತ್ಸನಾಡುವ ಆಟವೇ ಪೂಜೆ.

ಈ ಪೂಜಾತತ್ತ್ವದಲ್ಲಿ ಕಂಡುಬರುವ ಒಂದು ವಿಶೇಷವೇನೆಂದರೆ "ಮೀಸಲು". ಇದನ್ನು ಕಷ್ಟಪಟ್ಟು ಕಲಿಯಬೇಕಾದುದೇನೂ ಇಲ್ಲ. ಮಮತೆಯು ಇದನ್ನು ತಾನಾಗಿಯೇ ಮಾಡಿಸುವದು. ಮಲ್ಲಿಗೆಯ ಮಕರಂದವನ್ನು ಮೂಸದೆ ಮೀಸಲಿಡುವವನು ಪ್ರೇಮಮನಗಳನ್ನು ಮೀಸಲಿಡುವುದಕ್ಕೆ ಹವಣಿಸುವನು. ಮಡಿಯು ಮೀಸಲಿನ ಒಂದಂಗ, ಮುಟ್ಟಿ ಮಾಸಬಾರದೆಂಬುದೇ ಇದರ ಗುಟ್ಟು. ಇಂಥ ಪಾವಿತ್ರ್ಯಪೂರಿತ ಪ್ರೇಮವಿಲ್ಲದುದು ಸಮರ್ಪಣೆಗೆ ಸಲ್ಲುವದೇ ?

ಗುರೂಪಾಸನೆಯಲ್ಲಿ ಸಾಗುವ ಗುರುಪೂಜೆಯಿಂದ ಅವನ ಸಲಿಗೆಗೆ ಇವನು ಸಲ್ಲುವನು. ಸಂದೊಡನೆಯೇ ಸಂದು ಹೊಂದುವುದು; ಎಂದರೆ ಎಲ್ಲವೂ ಒಂದಾಗುವುದು. ಮುಗಿಲಲ್ಲಿ ಮೊಳಗಿದ ದನಿಯು ಮುಗಿಲಲ್ಲಿಯೇ ಮುಳುಗಿದಂತೆ. ಜಲದಲ್ಲಿ ಜನಿಸಿದ ಅಲೆಯು ಜಲದಲ್ಲಿಯೇ ಕಲೆಯುವಂತೆ ನೋಡೀ ದೇವಜೀವರ ಭಾವಸಾಮರಸ್ಯವು !!

ಸ್ವಧರ್ಮ ೩-೮; ೧೯೨೭

# ಲೀಲೆ

---

ಮಗು– "ಅವ್ವಾ ! ಇದೆಲ್ಲಾ ನೋಡೇ ಎಷ್ಟು ಸೊಗಸಾಗಿದೆ ! ಎಷ್ಟೆಷ್ಟು ಮೃಗ ಪಕ್ಷಿಜಾತಿಗಳೂ ತರುಲತಾ ಜಾತಿಗಳೂ ನಾನಾಬಗೆಯ ಚರಾಚರ ವಸ್ತುಗಳ ವಿವಿಧ ವಿಸ್ತಾರ ವೈಚಿತ್ರ್ಯವೂ ಕಣ್ಣಮುಂದೆ ಅಖಂಡವಾಗಿ ತೋರುತ್ತದೆ !"

ತಾಯಿ– "ಅಪ್ಪಾ ಮಗೂ ! ಇದೆಲ್ಲಾ ಸುಳ್ಳು ಸಂಸಾರ. ಇದೊಂದೂ ಸತ್ಯ ವಲ್ಲ. ಈ ಸುಳ್ಳಿನ ಸಾಗರದಲ್ಲಿ ಬಿದ್ದು ಕೈಸೋತು ಗತಿಗಾಣದೆ ಹೋಗುತ್ತಿರುವ ಈ ಹುಲುಮಾನವರನ್ನೂ ಏನೆಂಬೆನೊ ! ಮಗೂ, ನೀನು ಮಾತ್ರ ಇದನ್ನು ನೆಚ್ಚಿ ಕೇಳಬೇಡಪ್ಪಾ ! ಇಷ್ಟೇ ನಿನಗೆ ಹರಕೆ !"

ಮಗು- "ಅವ್ವಾ ! ನಿನ್ನ ಮಾತಿನ ಅರ್ಥವೇ ಇದು ! 'ಇದೆಲ್ಲಾ ಸುಳ್ಳು' ಅನ್ನುತ್ತೀ. ಇದೆಲ್ಲ ಅಂದರೇನು ?

ತಾಯಿ– "ಇದೆಲ್ಲ ಅಂದರೆ ಈ ದೃಶ್ಯ ಜಗತ್ತೆಲ್ಲ."

ಮಗು- "ಜಗತ್ತೆಂದರೆ ಎಷ್ಟು ? ನಮ್ಮನ್ನು ಬಿಟ್ಟು ಜಗವುಂಟೆ ? ಚರಾಚರ ಕೋಟಿಯನ್ನೆಲ್ಲ ಕೂಡಿದ್ದೇ ಜಗವಲ್ಲವೇ ? ನೀನೂ ಸುಳ್ಳಾದರೆ ನಿನ್ನ ಮಾತೂ ಸುಳ್ಳು. ನಾನು ಸುಳ್ಳಾದರೆ ನೀನು ನನಗೆ ಹೇಳುವದೂ ವ್ಯರ್ಥ. ಸತ್ಯವೆಂದರೆ ಇದ್ದದ್ದು. ಅಸತ್ಯವೆಂದರೆ ಇಲ್ಲದ್ದು. ನಾನು ಸುಳ್ಳಾದರೆ– ಏನೂ ಇಲ್ಲದಂತಾದ ದ್ದಾದರೆ– ಏನೂ ಇಲ್ಲದಲ್ಲಿ ಬರಿಬಯಲಲ್ಲಿ ನೀನು ಎಷ್ಟು ಕಷ್ಟಪಟ್ಟು ಹೇಳಿ ದರೂ ವ್ಯರ್ಥ. ಏನೂ ಇಲ್ಲದ್ದು ಇಲ್ಲವೇ ಇಲ್ಲ. ಇಲ್ಲದ್ದು ಇರುವುದು ಶಕ್ಯವೇ ಇಲ್ಲ. ಇಲ್ಲದ್ದು ಕೆಡಲೂ ಆರದು. ಒಳ್ಳೆಯದಾಗಲೂ ಆರದು. ಇದ್ದದ್ದೇ ಕೆಟ್ಟೀತು. ಇದ್ದದ್ದೇ ಒಳ್ಳೆಯದಾದೀತು. ಇಲ್ಲದ್ದು ಇಲ್ಲೇ ಇಲ್ಲ. ಇದ್ದದ್ದೇ ಸ್ಥಿತ್ಯಂತರ ಗಳನ್ನು ಹೊಂದೀತು. ಆದ್ದರಿಂದ ಏನೂ ಇಲ್ಲದ ಈ ಜಗದ ಜನರು ಗತಿಗಾಣದೆ ಬಳಲುತ್ತಿರುವರೆಂದು ಚಿಂತಿಸುವದು ಯಾತಕ್ಕೆ ? ಜಗವೇ ಸುಳ್ಳಾದರೆ ಅದು ಕೆಡು ವುದೂ ಸುಳ್ಳು. ದಾರಿ ತಪ್ಪುವದೂ ಸುಳ್ಳು. ನೀನು ಹೇಳುವದೂ ಸುಳ್ಳು. ಕೇಳುವದೂ ಸುಳ್ಳು."

ತಾಯಿ– "ಮಗೂ! ನಿನಗೀ ಕನಸಿನ ಜಗವಿನ್ನೂ ದಿಟವಾಗಿಯೇ ತೋರು ವದು ನಿನ್ನ ತಪ್ಪಲ್ಲ, ಮಾಯಾಜಾಲ."

ಮಗು– "ಅಮ್ಮಾ, ಹೀಗೆಂದರೇನು? ಕನಸು ಸುಳ್ಳೆಂಬುದನ್ನು ಎಲ್ಲರೂ ಕಂಡದ್ದುಂಟು. ನಿನ್ನಂತೆ ಜಗ ಸುಳ್ಳೆಂದು ಕಂಡವರು ಎಷ್ಟು ಜನರೋ? ಕನಸು ಸುಳ್ಳಾಗಿ ಕಾಣಲಿಕ್ಕೆ ಇನ್ನೊಬ್ಬರ ಹೇಳಿಕೆಯು ಅಗತ್ಯವಿಲ್ಲವಷ್ಟೇ? ಜಗವು ಸುಳ್ಳಾಗಲಿಕ್ಕೆ ಮಾತ್ರ ಇನ್ನೊಬ್ಬರ ಹೇಳಿಕೆಯು ಅಗತ್ಯವೇಕೆ? ಕನಸು ಸುಳ್ಳಾಗಿರುವದನ್ನು ಮನ ಗಂಡಂತೆ ಜಗವು ಸುಳ್ಳಾಗಿರುವುದನ್ನು ಮನಗಾಣುವದಾದರೆ ನಾನು ನಿನ್ನಂತೆ ಹೇಳೇನು. ನೀನು ಹೇಳುವದೆಲ್ಲ ಯಾತರ ಮೇಲಿಂದ?

ತಾಯಿ– "ಸ್ವತಃದ ಅನುಭವದ ಮೇಲಿಂದ."

ಮಗು– "ಅನುಭವವೆಂಬುದು ನಿನ್ನೊಬ್ಬಳಿಗೆ ಮಾತ್ರವೇ ಇದೆಯಂತಲ್ಲ ನಿನಗಿರುವಂತೆ ನನಗೂ ಇರಬೇಕಷ್ಟೇ? ನಿನ್ನ ಅನುಭವವು ನಿನಗೆ ಎಷ್ಟು ಸತ್ಯವೋ ನನ್ನ ಅನುಭವವೂ ನನಗೆ ಅಷ್ಟೇ ಸತ್ಯ."

ತಾಯಿ– "ನನ್ನ ಅನುಭವಕ್ಕೆ ಶಾಸ್ತ್ರಗಳ ಒಪ್ಪಿಗೆ ಅದೆ. ನಿನ್ನ ಅನುಭವಕ್ಕೆ ಎಲ್ಲಿಯ ನೆಲೆ?"

ಮಗು– "ಇದೇನೇ ಅವ್ವಾ! ತುದಿಮೊದಲಿಲ್ಲದ ಇಂಥಾ ಅಘಾತ ವಿಶ್ವವನ್ನೆಲ್ಲ ಸುಳ್ಳೆಂದು ಸ್ವಾನುಭವದಿಂದ ಹೇಳುವವಳು, ಶಾಸ್ತ್ರಗಳನ್ನು ಸತ್ಯವೆಂದು ಹೇಗೆ ಹೇಳುತ್ತೀಯೆ? ನಿನ್ನ ಶಾಸ್ತ್ರಗಳನ್ನು ಹೇಳಿದವರೂ ನಮ್ಮಂಥ ಮಾನವರೇ. ಅವರು ನಮಗಿಂತ ಸಾವಿರಾರು ಮಡಿ ದೊಡ್ಡವರಿರಬಹುದಾದರೂ ನಿನ್ನ ಅಭಿಪ್ರಾಯದಂತೆ ಅವರೂ ಈ ಜಗದಲ್ಲಿ ಹುಟ್ಟಿ ಬೆಳೆದ ಮಿಥ್ಯಾಮಾನವರೇ ಎಂಬುದು ನಿಸ್ಸಂಶಯ. ಎಲ್ಲಾ ಸುಳ್ಳೇ ಆಗಿರುವಾಗ ಅವರ ನುಡಿಗಳಷ್ಟೇ ಹೇಗೆ ಸತ್ಯವಾದಾವು? ಮಗಿಲುದ್ದದ ಜಗವನ್ನು–ಇಲ್ಲೇಇಲ್ಲವೆಂದು ಹೇಳುವ ಕಣ್ಣಿಗೆ ಗೇಣುದ್ದದ ಗ್ರಂಥವು ಹೇಗೆ ಕಾಣಿಸೀತೇ?"

ತಾಯಿ– "ಹೌದು! ನಿಜವಾಗಿ ನೋಡಿದರೆ ಅವೂ ಸುಳ್ಳೇ."

ಮಗು– "ನಿಜವಾಗಿ ನೋಡುವದೊಂದು ಬೇರೆ, ಸುಳ್ಳಾಗಿ ಸುಮ್ಮ ಸುಮ್ಮನೆ ನೋಡುವುದೊಂದು ಬೇರೆ. ನೀನು ನೋಡುವುದಾದರೂ ಎಷ್ಟು ಬಗೆಯಿಂದ?"

ತಾಯಿ– "ತಮ್ಮಾ! ತತ್ತ್ವದ ಮಾತು ಬಹಳ ಗಹನ. ನಿನ್ನ ಚಿಕ್ಕ ಬುದ್ಧಿಗೆ ಅದು ಹೇಗೆ ನಿಲುಕೀತು?"

ಮಗು– "ಅವ್ವಾ! ಹೀಗೆ ಹೇಳಿದರೇನು? ಅದು ಸರಿಯಾದ ಸಮಾಧಾನವಲ್ಲ. ನೀನೇ ನೋಡು. ಎಲ್ಲಾ ಸುಳ್ಳಾದರೆ ಉಣ್ಣುವದೇಕೆ? ತಿನ್ನುವದೇಕೆ? ಉಸು ರಾಡಿಸುವದೇಕೆ? ಗುರುವೇಕೆ ಶಿಷ್ಯನೇಕೆ ಹೇಳುವದೇಕೆ ಕೇಳುವುದೇಕೆ?"

ತಾಯಿ "ಇದೆಲ್ಲಾ ಶರೀರಧರ್ಮ ಅದು ನಡೆಯಲೇಬೇಕು."

ಮಗು- ಇದೇನಪ್ಪಾ ! ಶರೀರವೇ ಮೊದಲು ಸುಳ್ಳು. ಅದು ಇಲ್ಲೇ ಇಲ್ಲ. ಅಂದ ಬಳಿಕ ಇಲ್ಲದ್ದಕ್ಕೆ ಧರ್ಮವೆಲ್ಲಿಯದು ? ಕರ್ಮವೆಲ್ಲಿಯದು? ಇಲ್ಲದ್ದು ಇಲ್ಲೇ ಇಲ್ಲ. ಶರೀರಕ್ಕೆ ಶರೀರಧರ್ಮವು ಅದನ್ನಗಲದ ನೆರಳಿನಂತೆ ಸರಿ. ಶರೀರವೇ ಇಲ್ಲದಿರುವಾಗ ಅದಕ್ಕೆ ನೆರಳೆಲ್ಲಿಯದು ? ಇದ್ದುದಕ್ಕೆ ನೆರಳಿದ್ದೀತು. ಇಲ್ಲದ್ದಕ್ಕೆ ಇರುವುದುಂಟೇ ? ಇದಿರಲಿ ಬಿಡು. ನೀನು ಹೇಳುವ ಮಾತು ಹಿಂದೆ ಎಷ್ಟೋ ಜನರು ಹೇಳಿರಬೇಕಷ್ಟೇ ? ನಿನ್ನಂತೆ ಹೇಳುವ ಶಾಸ್ತ್ರಗಳೆಷ್ಟೋ ಉಂಟೆಂದು ಹೇಳಿದೆಯಷ್ಟೇ?"

ತಾಯಿ- "ಹೌದು ! ಆರು ಶಾಸ್ತ್ರಗಳಲ್ಲಿ ವೇದಾಂತವೆಂಬುದೊಂದು ಶಾಸ್ತ್ರವುಂಟು. ಶಂಕರಾಚಾರ್ಯರು ಮಾಯವಾದವನ್ನೂ ಅದ್ವೈತ ತತ್ತ್ವವನ್ನೂ ಜಗಕ್ಕೆಲ್ಲ ತಿಳಿಯಪಡಿಸಿದರು. ಇದಕ್ಕಾಗಿಯೇ ಶ್ರೀ ವಿದ್ಯಾರಣ್ಯಸ್ವಾಮಿಗಳು ಪಂಚದಶೀ ಗ್ರಂಥವನ್ನು ಬರೆದರು. ನಿಜಗುಣಶಿವಯೋಗಿಗಳೂ ಸಪ್ಪಣ್ಣಪ್ಪನವರೂ ಕೈವಲ್ಯ ವನ್ನು ಹಾಡಿದರು. ಇಂಥವರೆಲ್ಲಾ ಹೀಗೆಯೇ ಹೇಳಿದ್ದಾರೆ. ಆದರೆ ನಿನಗೆ ಮಾತ್ರ ಎಷ್ಟು ಹೇಳಿದರೂ ತಿಳಿಯಲೊಲ್ಲದು !"

ಮಗು- "ತಾಯೀ ! ಯಾಕೆ ಇವರೆಲ್ಲಾ ಗ್ರಂಥಾದಿಗಳನ್ನು ಬರೆದರು ?"

ತಾಯಿ- "ಮಾಯಾಪ್ರಪಂಚದಲ್ಲಿ ಮುಳುಗಿ ನರಳುವ ಪಾಮರರ ಗೋಳನ್ನು ಕಂಡು ಮರುಗಿ, ಇಂಥ ಅಜ್ಞಾನಿಗಳೆಲ್ಲ ಜ್ಞಾನವನ್ನು ಪಡೆದು ಉದ್ಧಾರವಾಗಲೆಂದೇ ಅಂಥ ಮಹಾತ್ಮರೆಲ್ಲಾ ತಮ್ಮ ದಿವ್ಯ ವಚನಾಮೃತವನ್ನು ಗ್ರಂಥವೆಂಬ ಪಾತ್ರೆಯಲ್ಲಿ ತುಂಬಿ ಬಿಟ್ಟರು. ಲೋಕೋದ್ಧಾರಕ್ಕಲ್ಲದೆ ಇನ್ಯಾತಕ್ಕದನ್ನು ಬರೆದಾರು ?"

ಮಗ- "ಲೋಕವೇ ಮೊದಲು ಸುಳ್ಳು, ಸುಳ್ಳು ಲೋಕದ ಹಂಗು ಇವರಿಗೇನು ? ತನ್ನ ತಾ ತಿಳಿದರೆ ಸಾಕೆನ್ನುವವರಿಗೆ ಇವರದೆಲ್ಲಾ ಹೊಣೆಯೇನು ? ತನ್ನ ತಾ ತಿಳಿದು ತಾನೇ ಬ್ರಹ್ಮನೆಂದು "ಅಹಂ ಬ್ರಹ್ಮಾಸ್ಮಿ" ಎಂದು ಎದೆಯ ಮೇಲೆ ಕೈತಟ್ಟಿ ಹೇಳುವವನು ತನ್ನನ್ನು ಸತ್ಯವೆಂದು ತಿಳಿದಿರಲಾರನೇ ? ತನ್ನನ್ನು ತಾ ಸತ್ಯವೆಂದು ತಿಳಿದಿರುವಂತೆ ಎಲ್ಲರೂ ತಮ್ಮ ಮಟ್ಟಿಗೆ ತಾವು ಸತ್ಯವಾಗಿಯೇ ಇರಬೇಕಷ್ಟೇ ? ಅಂದಬಳಿಕ ತನ್ನಂತೆ ಎಲ್ಲರೂ ಸತ್ಯ; ಎಲ್ಲವೂ ಸತ್ಯ. ಅಂತೆಯೇ ವಚನಕಾರರು "ತಾ ಸತ್ಯವಾದಡೆ ಜಗವೆಲ್ಲ ಸತ್ಯ. ತಾ ಮಿಥ್ಯವಾದಡೆ ಜಗವೆಲ್ಲ ಮಿಥ್ಯ" ಎಂದರು. ಎಲ್ಲಾ ಸುಳ್ಳೇ ಆದರೆ ಪಂಚದಶೀ ಮಹಾಗ್ರಂಥವನ್ನು ಬರೆದ ಶ್ರೀ ವಿದ್ಯಾರಣ್ಯಸ್ವಾಮಿಗಳು ತುರುಕರಿಂದ ಹಿಂದೂ ಧರ್ಮವನ್ನು ರಕ್ಷಿಸುವದಕ್ಕಾಗಿ ಹೊಸ ರಾಜ್ಯವನ್ನು ಸ್ಥಾಪಿಸಿ, ಸನ್ಯಾಸಿಗಳಾದ ತಾವು ಮಂತ್ರಿಗಳಾದದ್ದೇಕೆ ? ಬೌದ್ಧ ಧರ್ಮದ ಪ್ರಾಬಲ್ಯದಿಂದ ಮುಳುಗಿ ಮಣ್ಣುಗೂಡಿ ಹೋಗಲಿಕ್ಕಿದ್ದ ವೈದಿಕಧರ್ಮ ವನ್ನು ಪುನರುಜ್ಜೀವನಗೊಳಿಸುವದಕ್ಕಾಗಿ ಶ್ರೀ ಶಂಕರಾಚಾರ್ಯರು ಅಷ್ಟೊಂದು

ಚಿಕ್ಕವಯಸ್ಸಿನಲ್ಲಿ ಭರತಖಂಡವನ್ನೆಲ್ಲ ಸುತ್ತುವರಿದು ದಿಗ್ವಿಜಯವನ್ನು ಮಾಡಿದುದೇ ತಕ್ಕೆ ? ಮಿಥ್ಯಾ ಜಗತ್ತು ಯಾವ ತಿಪ್ಪೆಯಲ್ಲಿ ಹಾಳಾದ ಭಾಗ್ಯ ಇವರಿಗೇನು ?"

ತಾಯಿ– "ಅವರು ಹಾಗೆ ಮಾಡಿದರೆಂಬುದೂ ಮಾಯೆಯಿಂದ ದಿಟವಂತೆ ಕಾಣುವ ಮಾಟವೇ ಸರಿ. ನಿಜವಾಗಿಯೂ ಅವರು ಅದನ್ನೇನೂ ಮಾಡಲೇ ಇಲ್ಲ. ಎಲ್ಲಾ ಮಾಯಾಜಾಲ !"

ಮಗು– "ಇದೀಗ ಒಳ್ಳೇ ಮಾತು ! ಅವರು ಮಾಡಿದ್ದು ಸುಳ್ಳು. ಹೇಳಿದ್ದು ಸುಳ್ಳು. ಇದ್ದದ್ದಾದರೂ ಸುಳ್ಳೇ ಆಗಿರಲಾರದೇಕೆ ? ಎಲ್ಲಾ ಸುಳ್ಳೇ ಸುಳ್ಳಾದರೆ ಇಲ್ಲಿ ಸುಳ್ಳರ ಬೆನ್ನು ಹತ್ತುವದೇಕೆ ? ಎಲ್ಲಾ ಸುಳ್ಳಾದರೆ ನಾವು ಕೆಡುವುದೂ ಸುಳ್ಳು ಅಲ್ಲವೇನೇ ಅವ್ವಾ !"

ತಾಯಿ– "ಹೌದು, ನೀನು ಕೆಡುವುದೂ ಸುಳ್ಳು."

ಮಗು - "ಹಾಗಾದರೆ, ನೀನು ನನಗೆ ಇಷ್ಟೊಂದು ಏಕೆ ಉಲಿಯುತ್ತೀ ?

ತಾಯಿ– "ಮಾಯೆಯಿಂದ ನಿನಗೆ ಹಾಗೆ ಅನಿಸುತ್ತದೆ. ನಾನು ಉಲಿಯುವದೂ ಸುಳ್ಳು."

ಮಗು– "ನಿನ್ನ ಮಾಯೆ ಮಾಯೆಯೆನ್ನುವ ಮಾತಿಗೆ ಮೆಚ್ಚಿ ನಾನು ನಿನ್ನ ಪ್ರೀತಿಯಿಂದ ಒತ್ತಿ ಕಡಿಯುತ್ತೇನೆ. ಇಸ್ ಎನಬೇಡ ಯಾಕೆಂದರೆ ಅದೂ ಸುಳ್ಳು.

ತಾಯಿ– "ನಾನು ಇಸ್ ಅಂದಂತೆ ನಿನಗೆ ಮಾಯೆಯಿಂದ ಭಾಸವಾಗುವದು. ನಾನು ನೆರಳಿದರೂ ದಿಟವಲ್ಲ. ಕೇವಲ ಶರೀರ ಧರ್ಮ."

ಮಗು– "ಆ ನಿಜವಾದ ಮಾಯೆ ಇದುರಿಗೆ ಬಂದರೆ ಪಾರಾಗಬಹುದು. ಈ ನಿನ್ನ ಮಾತಿನ ಮಾಯೆ ಮಾತ್ರ ನನಗೆ ಅಗಾಧವಾಗಿದೆ !"

ತಾಯಿ– "ಅಲ್ಲೋ ನೀನೆನ್ನುವದೇನು !"

ಮಗು– "ನಾನೇನು ಮಾಡಲಿ ! ನಿನ್ನ ಶಾಸ್ತ್ರಕಾರರೇ ಹೇಳಿದ್ದಾರೆ !"

ತಾಯಿ– "ಏನು ?"

ಮಗು - "ಶಂಕರಾಚಾರ್ಯ ಸ್ವಾಮಿಗಳು ಹೇಳಿದ್ದೇನಂದರೆ :

'ಯದ್ಯತ್ಕರ್ಮ ಕರೋಮಿ ತತ್ತದಖಿಲಂ । ಶಂಭೋ ತವಾರಾಧನಂ !...
ಅರ್ಥವೇನೆಂದರೆ— ಶಂಭೋ, ನಾನು ಮಾಡುತ್ತಿದ್ದುದೆಲ್ಲಾ ನಿನ್ನ ಸೇವೆಯೇ ಸರಿ. ಅಲ್ಲದೆ ಶ್ರೀ ವಿದ್ಯಾರಣ್ಯರವರು ತಮ್ಮ ಮಹಾ ಗ್ರಂಥವಾದ ಪಂಚದಶಿಯ ಕೊಟ್ಟ ಕೊನೆಗೆ ಹೇಳಿರುವದೇನೆಂದರೆ— 'ಅನೇನ ಬ್ರಹ್ಮಾನಂದ ಹರಿಹರಃ ಸರ್ವದಾ ಪ್ರಿಯಾತ್ ಚ ಸ್ವಾಶ್ರಿತಾನ್ ಶುದ್ಧ ಮಾನವ ಸರ್ವಾನ್ ಪ್ರಾಣಿನಾಂ ಪಾಯಾತ್' ಇದರ ಅರ್ಥವೇನಂದದರೆ— 'ಈ ಬ್ರಹ್ಮಾನಂದದಿಂದ ಹರಿಹರ

(ರಾಜನು) ಯಾವಾಗಲೂ ಪ್ರೀತಿಯುಳ್ಳವನಾಗಿರುವವನು ಹಾಗೂ ಆಶ್ರಿತರನ್ನೂ ಮಹಾತ್ಮರನ್ನೂ ಎಲ್ಲ ಪ್ರಾಣಿಗಳನ್ನೂ ಕಾಪಾಡಿರಲಿ."

ಜಗವೆಲ್ಲ ಸುಳ್ಳೇ ಆದರೆ ರಾಜನು ಪ್ರಸನ್ನನಾಗಿ ಪ್ರಜೆಗಳನ್ನು ಚೆನ್ನಾಗಿ ಪಾಲಿಸಿಕೊಂಡಿರಬೇಕೇತಕ್ಕೆ ? ಇಲ್ಲಿ ಪರಿಪರನೆಂದರೆ ಪರಮಾತ್ಮನೆಂದು ಒಂದೇ ಅರ್ಥವಾದರೂ ಸರಿ ? ಪರಮಾತ್ಮನಿಗಾದರೂ ಇಷ್ಟೊಂದು ಜಗವನ್ನು ಸೃಷ್ಟಿಸಿ ಕೊಂಡಿರಬೇಕಾದ ಅಗತ್ಯವೇನೋ ? ಅಥವಾ ಈ ಮಹಾಸ್ವಾಮಿವರ್ಯರಿಗೆ ತಾವು ಹೇಳಿದ ಗ್ರಂಥಗಳಿಗೆ ಅರ್ಥವೇ ತಿಳಿದಿರಲಿಲ್ಲವೇ ?"

ತಾಯಿ– "ಒಂದೇ ಮಾತಿಗೆ ಎಷ್ಟೆಷ್ಟೋ ಅರ್ಥವಾಗುವದುಂಟು. ಅಂಥವರ ದಿವ್ಯ ವಾಕ್ಯಗಳಿಗೆ ನಿನಗೆಲ್ಲಾ ಅರ್ಥವಾಗಬಹುದೇ ? ನಿನಗೆ ತಿಳಿದಂತೆ ನೀನೇನೋ ಅರ್ಥ ಹೇಳುತ್ತೀ."

ಮಗು– "ಸರಿ ! ನಿನ್ನ ಮಾತು ಬಹಳ ಚೆನ್ನಾಗಿದೆ. ನೋಡವ್ವಾ ಅಂಥಾ ಮಹಾತ್ಮರ ಮಹಾವಾಕ್ಯಗಳಿಗೆ ನನ್ನಂಥ ಪಾಮರನಿಗೆ ಸರಿಯಾಗಿ ಅವರ ಮನಸ್ಸಿ ನಲ್ಲಿದ್ದಂತೆ ಅರ್ಥವಾಗಲಿಕ್ಕಿಲ್ಲ. ಇದಕ್ಕೆ ನಾನೇನೋ ಒಪ್ಪುತ್ತೇನೆ. ಆದರೆ ನಿನಗಾದರೂ ಆ ಮಹಾವಾಕ್ಯಗಳಿಗೆ ಸರಿಯಾಗಿ ಅರ್ಥವಾಗಿರುವದಕ್ಕೆ ಪ್ರಮಾಣ ವೇನು ? ನನಗೂ ತಿಳಿಯದು. ಯಾರಿಗೂ ತಿಳಿಯದಂತೆ ಬರೆದು ಹೋದ ಆ ಪುಣ್ಯಾತ್ಮರು ತಿರುಗಿ ನಮ್ಮ ತಂಟೆ ಬಿಡಿಸುವದಕ್ಕಾಗಿ ಈ ಭವಕ್ಕೆ ಬರಬೇಕಲ್ಲವೇ ? ಅಯ್ಯೋ ಇದೆಂಥಾ ಅನಾಹುತ !"

ತಾಯಿ– "ಏನೋ ನಮ್ಮಪ್ಪಾ ! ನೀನೇನು ಹೇಳಿದರೂ ನನಗೆ ನನ್ನದೇ ಸರಿಯಾಗಿ ತೋರುವುದು."

ಮಗು– "ನನ್ನವ್ವಾ ! ನಿನ್ನ ತೊಡೆಯ ಮೇಲೆ ಎಷ್ಟು ಉರುಳಾಡಲೇ ? ನಿನ್ನ ಮಾತು ನನಗೆ ಜೇನು ತಿಂದಂತಾಯಿತು ನೋಡೇ ? ಏನು ಹೇಳಿದರೂ ನಿನಗೆ ನಿನ್ನದೇ ಬಗೆ ಸರಿದೋರುವದೋ ಹಾಗೆಯೇ ನನಗೂ ನೀನೇನು ಹೇಳಿದರೂ ನನ್ನದೇ ಸರಿದೋರುವದು. ನಿನ್ನದು ನಿನಗೆ ಸರಿ. ನನ್ನದು ನನಗೆ ಸರಿ. ಹೀಗಿದ್ದುದ ರಿಂದೇ ಈ ಲೋಕದಲ್ಲೆಲ್ಲಾ ಅನೇಕ ಪಂಥ(ವರ್ಗ)ಗಳು ಮೈದೋರಿವೆ. ಯಾರ ಸ್ವಭಾವಕ್ಕೆ ಯಾವುದೂ ಸರಿಹೋಗುವುದೋ ಅದನ್ನು ಅವರು ನಂಬಿಕೊಂಡಿದ್ದರೆ ಪ್ರಗತಿ. ಒಂದೊಂದು ಬಗೆಯ ಹವೆ, ಅನ್ನ, ಭೂಮಿ ಇರುವ ನಾಡುಗಳಲ್ಲೆಲ್ಲಾ ಅಲ್ಲಿ ಬಾಳಲಿಕ್ಕೆ ತಕ್ಕವುಗಳಾದ ತನುಮನ, ರಚನೆಯುಳ್ಳ ಪ್ರಾಣಿಗಳು ಹೇಗೆ ಹುಟ್ಟುತ್ತಿರುವುದುಂಟೋ ಹಾಗೆಯೇ ಒಂದೊಂದು ವಿಧದ ಸ್ವಭಾವವುಳ್ಳವರು ತಮಗೆ ತಕ್ಕುದೊಂದು ಪಂಥದಲ್ಲಿರುವುದುಂಟು. ಅವರವರಿಗೆ ಅವರವರದೇ ಒಳಿತು. ಇನ್ನೊಂದು ಕೆಡಕಾಗಿ ಕಾಣಬಹುದು. ಆದರೆ ಅದು ತಮ್ಮ ಮಟ್ಟಿಗಲ್ಲದೆ ಆ

ಇನ್ನೊಂದರಲ್ಲಿರುವದಲ್ಲ. ಮುಂಬೈಯ ಹವೆಯು ವಿಜಾಪುರದವರಿಗೆ ಬಹಳ ಕೆಟ್ಟದಾಗಿರಬಹುದು. ಆದರೆ ಮುಂಬೈಯವರಿಗೆ ವಿಜಾಪುರದ ಹವೆಗಿಂತಲೂ ತಮ್ಮದೇ ಒಳಿತಾಗಿ ಕಾಣುವದು ಸಹಜ. ವಿಜಾಪುರಕ್ಕೆ ಬಂದು ಎಷ್ಟು ಗತಿಗಾಣ ಬಹುದೋ ? ಶ್ರೀ ಮಹಮ್ಮದ ಪೈಗಂಬರರು ಕೂಡ ತಾವು ಒಡನುಡಿದ ಕುರಾನಿನಲ್ಲಿ– "ಧರ್ಮವೆಲ್ಲಾ ಒಂದೇ ಆದರೆ, ಮತ (ಅಭಿಪ್ರಾಯ) ಭೇದದಿಂದ ಮತಗಳೆಷ್ಟೋ ಮೈದೋರಿದವು" ಎಂದಿರುವರು. ಭಗವಾನ್ ಶ್ರೀ ರಾಮಕೃಷ್ಣ ಪರಮಹಂಸರು ಜಗಕ್ಕೆ ಇದನ್ನೇ ತೋರಿಸಿಕೊಟ್ಟರಲ್ಲವೇ ?

ಅಪ್ಪಾ, ನಿನ್ನದು ನಿನಗೇ, ನನ್ನದು ನನಗೇ !!!

'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್'। ಜಗದಲ್ಲಿರುವದೆಷ್ಟೆಷ್ಟೋ ಅಷ್ಟೂ ಈಶನ ಮುಖವೆಂದು ಈಶಾವಾಸ್ಯೋಪನಿಷತ್ತಿನ ಶ್ರೀವಚನವುಂಟು. 'ಯತ್ಕರೋಷಿ...... ಕೌಂತೇಯ ತತ್ಕುರುಷ್ವಮದರ್ಪಣಮ್। (ಭ.ಗೀ.) ಮಾಡುವದನ್ನೆಲ್ಲಾ ನನಗೇ ನೀಡೆಂದು ಭಗವಾನ್ ಶ್ರೀ ರಾಮಕೃಷ್ಣ ಪರಮಹಂಸರು ಪರಮಾತ್ಮಗೆಂದರು.

"ಅಪ್ಪಾ ! ಇದೆಲ್ಲಾ ಅಪೂರ್ವಲೀಲೆ."

**ಸ್ವಧರ್ಮ ೩-೭, ೧೯೨೬**

# ಸತ್ಯ

‘ತನ್ನ ತಾ ಅರಿತರೆ, ತನ್ನರಿವೇ ಗುರು’. ‘ಉದ್ಧರೇದಾತ್ಮನಾತ್ಮಾನಂ’.

ನಮ್ಮ ಬಾಯಿಯು ನಮ್ಮ ಸ್ವತಂತ್ರವಿದ್ದದ್ದರಿಂದ ನಮಗೆ ಸುಳ್ಳಾಡುವದಕ್ಕೆ ಅನುಕೂಲವಾಗಿರುತ್ತದೆ. ನಮ್ಮ ಮನಸ್ಸಿನಲ್ಲಿ ಇದ್ದ ಮಾತನ್ನು ಮುಚ್ಚಿಟ್ಟು ಕೊಂಡು ಬೇರೆ ಮತ್ತೊಂದೇನಾದರೂ ಹುಟ್ಟಿಸಿ ಹೇಳಲಿಕ್ಕೆ ನಮಗೆ ಬರುತ್ತದೆ. ಆದರೆ ಕನಸಿನಲ್ಲಿ ಒಮ್ಮೊಮ್ಮೆ ಮನಸಿನಲ್ಲಿ ಇದ್ದದ್ದೆಲ್ಲಾ ಬಡಬಡಿಸಿಬಿಡುತ್ತಿರುತ್ತೇವೆ. ಆಗ ನಮ್ಮ ಬದಿಯಲ್ಲಿ ಮಲಗಿದವರು ಎಚ್ಚರಿದ್ದರೆ ನಮ್ಮ ಮನಸ್ಸಿನೊಳಗಿನ ಮಾತೆಲ್ಲಾ ಅವರಿಗೆ ಗೊತ್ತಾಗಿಬಿಡುತ್ತದೆ. ಒಮ್ಮೊಮ್ಮೆ ನಾವು ನಮ್ಮ ಮನಸ್ಸಿನಲ್ಲಿ ಒಳ್ಳೊಳ್ಳೇ ಗುಪ್ತಸಂಗತಿಗಳನ್ನು ಮುಚ್ಚಿಟ್ಟುಕೊಂಡು ಯಾರ್‍ಯಾರಿಗೂ ಹೇಳಬಾರ ದೆಂದು ನಿಶ್ಚಯಿಸಿರುವದುಂಟು. ಆದರೆ ಇಂಥ ನಿದ್ದೆಯಲ್ಲಿ ಬಡಬಡಿಸಿ ಬೈಲಿಗೆಬಿದ್ದರೆ ಏನುಗತಿಯಾದೀತು ! ಕನಸಿನಲ್ಲಿ ನಾವು ನಮ್ಮ ಮನಸಿನಲ್ಲೇ ಮಂಡಿಗೆಮಾಡುತ್ತಿರು ತ್ತೇವೆ. ಆದರೆ ನಮ್ಮ ಶರೀರ ನಮ್ಮ ಬಾಯಿ ಇವು ನಮ್ಮ ಸ್ವತಂತ್ರವಿರುವದಿಲ್ಲ. ಆದ್ದರಿಂದಲೇ ಕನಸಿನಲ್ಲಿ ಮನದೊಳಗೆ ಆಳಾಪಮಾಡುತ್ತಿರುವಾಗ ಇತ್ತ ಹೊರಗೆ ಬಾಯಿ ಅದನ್ನೆಲ್ಲಾ ಬಡಬಡಿಸಿಬಿಡುತ್ತದೆ. ನಮ್ಮನ್ನು ಹುಟ್ಟಿಸಿದ ದೇವರು ಎಚ್ಚರ ದಲ್ಲಿ ಕೂಡ ನಮ್ಮ ಬಾಯಿ ನಮಗೆ ಸ್ವತಂತ್ರವಾಗಿರುವಂತೆ ಮಾಡಿ ಮನದೊಳಗಿನ ಮಂಡಿಗೆಯನ್ನೆಲ್ಲಾ ಹೊರಗೆಡಹುವಂತೆ ಮಾಡಿಬಿಟ್ಟಿದ್ದರೆ ನಮಗೆ ಸುಳ್ಳನ್ನೇ ನುಡಿಯಲಿಕ್ಕೆ ಬರುತ್ತಿದ್ದಿಲ್ಲ. ಯಾಕೆಂದರೆ ನಾವು ಏನು ಹೇಳಬೇಕಾದರೂ ಮನಸ್ಸಿ ನಲ್ಲಿ ಒಳಗೆ ಯೋಚಿಸುವದೆಲ್ಲಾ ಹೊರಗೆ ಬಾಯಿ ಒಂದೇಸವನೆ ಬಡಬಡಿಸಹತ್ತಿದರೆ ನಮ್ಮ ಒಳಗಿನ ಹೂರಣವೆಲ್ಲಾ ಹೊರಬಿದ್ದೇ ಬಿಡುತ್ತದೆ. ಹತ್ತರಿದ್ದವರಿಗೆಲ್ಲಾ ತಿಳಿದೇ ಹೋಗುತ್ತದೆ. ಅಂದಬಳಿಕ ಸುಳ್ಳು ಹೇಳುವ ಹಾದಿಯೇ ಉಳಿಯಲಿಲ್ಲ.

ಆದರೆ ನಮ್ಮನ್ನು ಹುಟ್ಟಿಸಿದ ದೇವರು ನಮ್ಮ ಬಾಯಿಯನ್ನು ಹೀಗೆ ಅಸ್ವತಂತ್ರ ಮಾಡದೆ ನಮ್ಮ ಸ್ವತಂತ್ರದಲ್ಲಿ ಇಟ್ಟಿದ್ದಾನೆ. ಆದರಿಂದ ನಮಗೆ ಬೇಕಾದದ್ದನ್ನು ಹೇಳಲಿಕ್ಕೆ ಬರುತ್ತದೆ; ಬೇಡಾದದ್ದನ್ನು ಹೇಳದೆ ಬಿಲಿಡಕ್ಕೆ ಬರುತ್ತದೆ. ಹೀಗೆ ದೇವರು ನಮಗೆ ಸುಳ್ಳಾಡುವದಕ್ಕೆ ಅನುಕೂಲವನ್ನು ಮಾಡಿಬಿಟ್ಟಿದ್ದಾನೆ.

ದೇವರೇನೋ ಹೀಗೆ ಸುಳ್ಳಾಡುವದಕ್ಕೆ ಹಾದಿ ಮಾಡಿಬಿಟ್ಟಿದ್ದಾನೆ. ಆದರೆ ಋಷಿಗಳೂ ಸಾಧುಸತ್ಪುರುಷರೂ ರಾಜರೂ ಇದಕ್ಕೆ ಅಡ್ಡಿ ಮಾಡಲಿಕ್ಕೆ ಬರುತ್ತಾರೆ. ಸುಳ್ಳೆಂಬುದು ಮಹಾಪಾಪವೆಂದು ಋಷಿಗಳ ಶಾಸ್ತ್ರ; ಮಹಾ ಅನೀತಿಯೆಂದು ಸತ್ಪುರುಷರ ವಚನ; ಮಹದಪರಾಧವೆಂಬುದು ರಾಜರ ಕಾನೂನು. ಹೀಗಂದ ಮೇಲೆ ಇದರ ಅರ್ಥವೇನು ? ಇವರೆಲ್ಲರೂ ದೇವರಿಗೆ ವಿರುದ್ಧವಾಗಿ ನಿಂತಿರುವರೇನು ? ದೇವರ ಮನಸ್ಸಿನಲ್ಲಿ ಮನುಷ್ಯರು ಸುಳ್ಳಾಡಬಾರದೆಂದು ಇದ್ದರೆ ಅವನು ಮೊದಲೇ ಇವರ ಬಾಯಿಯನ್ನು ಸುಳ್ಳಾಡದ ಹಾಗೆ ನಿರ್ಮಿಸುತ್ತಿದ್ದನು. ಅಥವಾ ಇವರ ಮನಸ್ಸನ್ನೇ ಸುಳ್ಳಾಡದಂತೆ ಗಟ್ಟಿಮುಟ್ಟಾಗಿ ನಿರ್ಮಿಸುತ್ತಿದ್ದನು. ಆದರೆ ದೇವರು ಹೀಗೆ ಮಾಡಿಲ್ಲ. ನಮ್ಮ ಬಾಯಿ ನಮ್ಮ ಕೈಯಲ್ಲಿ ಇರುವಂತೆ ಮಾಡಿದ್ದಾನೆ. ಅಲ್ಲದೆ ಹೀನ ಮನಸ್ಸನ್ನು ಕೊಟ್ಟಿದ್ದಾನೆ. ಇದರಲ್ಲಿ ದೇವರ ಉದ್ದೇಶವೇನು ಇರಬಹುದು? ನಾವು ಸದಾ ಸುಳ್ಳಾಡಿ ಒಬ್ಬರಿಗೊಬ್ಬರು ಮೋಸಮಾಡುತ್ತಲೇ ಇರಬೇಕೆಂದು ದೇವರ ಮನಸ್ಸಿನಲ್ಲಿ ಇದ್ದೀತೇ ?

ದೇವರ ಮನಸ್ಸಿನಲ್ಲಿ ಏನಿದೆಯೋ ಎಂತಿದೆಯೋ ನಮಗೆ ಗೊತ್ತಿಲ್ಲ. ಯಾಕೆಂದರೆ ನಾವು ಅವನನ್ನು ಎಂದೂ ಕಂಡು ಮಾತಾಡಿಸಿ ಕೇಳಿಲ್ಲ.

ಹಾಗಾದರೆ ದೇವರ ರಚನೆಗೂ ಋಷಿಗಳ, ಸಾಧುಸತ್ಪುರುಷರ ಮತ್ತು ರಾಜರ ಆಜ್ಞೆಗೂ ಯಾಕೆ ಮೇಳವಿಲ್ಲ ?

ಸುಳ್ಳಾಡುವದರಿಂದ ಹೆರವರಿಗೆ ಮೋಸವಾಗಿ ಕಷ್ಟವಾಗುವದರಿಂದ ರಾಜರು ತಮ್ಮ ಪ್ರಜೆಗಳಿಗೆ ಕಷ್ಟವಾಗಬಾರದೆಂದು ಸುಳ್ಳು ಹೇಳುವವರನ್ನು ಶಿಕ್ಷಿಸುವರು. ಸುಳ್ಳಾಡಿ ಒಬ್ಬರನ್ನೊಬ್ಬರು ವಂಚಿಸಿ ರಾಜ್ಯದಲ್ಲಿ ಸುಖವಿಲ್ಲದಂತೆ ಮಾಡಬಾರದೆಂದು ರಾಜರು ತಮ್ಮ ರಾಜ್ಯರಕ್ಷಣೆಗಾಗಿ ಹೀಗೆ ಸುಳ್ಳಿಗೆ ಶಿಕ್ಷೆಯನ್ನಿಟ್ಟರು. ಅವರೇನೂ ದೇವರನ್ನು ಮಾತಾಡಿಸಿ ಅವನ ಮನಸಿನಲ್ಲಿ ಇದ್ದದ್ದನ್ನೆಲ್ಲಾ ತಿಳಿದುಕೊಂಡು ಹೀಗೆ ಮಾಡಿಲ್ಲ. ಇವರೂ ನಮ್ಮಂತೆ ದೇವರನ್ನು ಕಾಣದವರೇ.

ಸತ್ಪುರುಷರಂತೂ ಸರ್ವರ ಹಿತಚಿಂತಕರು. ಆದ್ದರಿಂದ ಅಹಿತವನ್ನು ಬೆಳಿಸುವ ಸುಳ್ಳು ಅನ್ಯಾಯವೆಂಬುದು ಅವರಿಗೆ ಸಹಜವಾಗಿಯೇ ತಿಳಿಯದು.

ಋಷಿಗಳಂತೂ ಸುಳ್ಳು ಹೇಳುವದು ಪಾಪವೆಂದು ಹೇಳಿದ್ದಾರೆ. ಅವರೂ ಮನುಷ್ಯರೇ. ಆದರೆ ಹೆಚ್ಚು ತಿಳುವಳಿಕೆಯನ್ನು ಮಾತ್ರ ಅವರು ಮಾಡಿಕೊಂಡಿದ್ದರು. ಸದಾ ತಿಳುವಳಿಕೆಯ ವಿಚಾರಗಳನ್ನೇ ಅವರು ಮಾಡುತ್ತಿದ್ದರು. ಅದೇ ಅವರ ವ್ಯವಸಾಯವಾಗಿತ್ತು. ಅಂದಮೇಲೆ ಜನರಿಗೆ ತಿಳಿದಷ್ಟು ಋಷಿಗಳಿಗೆ ತಿಳಿಯಲಿಕ್ಕಿಲ್ಲವೇನು ? ಜನರು ಸುಳ್ಳಾಡುವ ಸವಿಗೆ ಬಿದ್ದರೆ ಮೋಸ ಹೆಚ್ಚಾಗಿ ಜನರಲ್ಲಿ ಅವಿಶ್ವಾಸ ಬೆಳೆದು ಯಾರೂ ಯಾರನ್ನೂ ನಂಬದಂತಾದರೆ ಲೋಕದ ಬಾಳುವೆಯೇ

ಸಾಗಲಿಕ್ಕಿಲ್ಲೆಂಬ ಮಾತು ಋಷಿಗಳಿಗೆ ತಿಳಿಯಲಾರದೇ? ಇದಲ್ಲದೇ ಆ ಕಾಲದಲ್ಲಿ ರಾಜರೆಲ್ಲಾ ಋಷಿಗಳ ಆಜ್ಞೆಯನ್ನು ಪಾಲಿಸುತ್ತಿದ್ದರು. ರಾಜರಿಗೆ ಕಾಯಿದೆಗಳನ್ನೆಲ್ಲಾ ಋಷಿಗಳೇ ಮಾಡುತ್ತಿದ್ದರು. ಅಂದಬಳಿಕ ರಾಜರಿಗೆ ಸುಳ್ಳಿನ ಶಿಕ್ಷೆಯನ್ನು ಕಲಿಸಿಕೊಟ್ಟವರು ಋಷಿಗಳೇ. ಇದಲ್ಲದೆ ಋಷಿಗಳು ವನವನ್ನು ಸೇರಿ ಬರೇ ಮೂಗು ಹಿಡಕೊಂಡು, ಯಾರ ಹಂಗೂ ಇಲ್ಲದೆ ಮೂಲೆ ಹಿಡಿದು ಕೂಡುತ್ತಿದ್ದಿಲ್ಲ. ಅವರು ತಾಪ ತಡಿಯಿಲ್ಲದಂತೆ ಅರಣ್ಯದಲ್ಲಿ ಆನಂದದಿಂದ ಇದ್ದುಕೊಂಡು ಲೋಕ ಕಲ್ಯಾಣ ಹ್ಯಾಗಾದೀತೆಂದು ಯೋಚಿಸುತ್ತಿದ್ದರು. ಆದ್ದರಿಂದಲೇ ಅವರು ಲೋಕದಲ್ಲಿ ಸುಳ್ಳಿನಿಂದ ಕಷ್ಟ ಬೆಳೆಯಬಾರದೆಂದು ಸುಳ್ಳನ್ನು ಪಾಪವೆಂದು ಹೇಳಿದರು. ಇನ್ನೊಂದು ಕಾರಣವೆಂದರೆ ಸುಳ್ಳಾಡುವದರಿಂದ ಹೆರವರಿಗೆ ನಷ್ಟವಾಗುವದಿಷ್ಟೇಯಲ್ಲ; ತನ್ನ ಜೀವಕ್ಕೂ ಸಮಾಧಾನ ಸಿಗುವದಿಲ್ಲ. ವಂಚಿಸಿ ಮೋಸ ಮಾಡಿದವನ ಮನಸ್ಸಿಗೆ ಸಮಾಧಾನವಿದ್ದೀತೇ? ಯಾವಾಗಲೂ ಎದೆಗುದಿ ಇದ್ದೇ ಇರುವದು. ಎದೆಗುದಿ ಇದ್ದವನಿಗೆ ಸುಖವುಂಟೇ? ಮನುಷ್ಯನು ಏನು ಮಾಡುವದೆಲ್ಲಾ ಸುಖಕ್ಕಾಗಿಯೇ. ಅಂದ ಮೇಲೆ ಸುಳ್ಳಾಡಿ ಪರರನ್ನು ವಂಚಿಸಿ ತನ್ನ ಜೀವನಕ್ಕೂ ಎದೆಗುದಿ ಮಾಡಿಕೊಂಡರೆ ಸುಖವನ್ನು ದೊರಕಿಸಿದಂತಾಯಿತೇ? ಇಲ್ಲ. ಶಾಂತವೃತ್ತಿಯಲ್ಲಿಯೇ ಸುಖವುಂಟೆಂದು ಋಷಿಗಳಿಗೆ ತಿಳಿದಿತು, ಆದ್ದರಿಂದಲೇ ಅವರು ಶಾಂತವಾದ ವನದಲ್ಲಿ ಇರುತ್ತಿದ್ದರು. ಕೆಟ್ಟಕೆಲಸ ಮಾಡುವದರಿಂದ ಮನದಲ್ಲಿ ಶಾಂತಿ ಸಮಾಧಾನವು ಉಳಿಯಲಾರದು. ಆದ್ದರಿಂದ ತನ್ನ ಶಾಂತಿಯನ್ನು ಪರರ ಸುಖವನ್ನು ಹಾಳು ಮಾಡುವಂಥಾ ಕೆಟ್ಟ ಕೆಲಸಗಳಿಗೆಲ್ಲಾ ಅವರು ಪಾಪವೆಂದು ಹೇಳಿದರು. ಶಾಂತಿ ಶಾಂತಿಯೆಂದು ಸದಾ ಶಾಂತಿಯನ್ನೇ ಬಯಸುವ ಋಷಿಗಳು ಮನುಷ್ಯನ ಅಶಾಂತಿಗೆ ಕಾರಣವಾದ ಈ ಸುಳ್ಳನ್ನು ಪಾಪವೆಂದು ಹೇಳಿದ್ದು ಸಹಜ, ಸದಾ ಸುಖದ ಸಲುವಾಗಿಯೇ ಒಡಿದಾಡುತ್ತಿರುವ ನಾವು ಕೆಟ್ಟಕೆಲಸಮಾಡಿ ಎದೆಗುದಿ ಹಚ್ಚಿಕೊಳ್ಳುವದು ಜಾಣತನವಲ್ಲವೆಂಬುದು ಯಾರಿಗಾದರೂ ತಿಳಿಯುತ್ತಿದೆ. ಋಷಿಗಳಾದರೂ ಇಷ್ಟು ಮಾತನ್ನು ತಿಳಿದುಕೊಳ್ಳಲಿಕ್ಕೆ ದೇವರ ತನಕಾ ಹೋಗಿದ್ದಾರೆಂದು ಕಾಣುವದಿಲ್ಲ. ಇದಲ್ಲದೆ ಋಷಿಗಳು ಪಾಪದ ಫಲದಿಂದ ನರಕ ಪ್ರಾಪ್ತಿಯಾಗುವದೆಂದೂ ಹೇಳಿದ್ದಾರೆ. ಇದನ್ನು ಅಂಜಿಕೆಗಾಗಿ ಹೇಳಿರುವರೋ ಹ್ಯಾಗೆ ಹೇಳಿರುವರೋ ತಿಳಿಯುವದಕ್ಕೆ ನಮಗೆ ಮಾರ್ಗವಿಲ್ಲ. ಕೆಟ್ಟಕರ್ಮ ಮಾಡಿದರೆ ಜೀವಕ್ಕೆ ಶಾಂತಿ ಸಿಗುವದಿಲ್ಲ. ಇದಂತೂ ಇರುವಾಗಲೇ ಭೋಗಿಸಬೇಕಾದ ಫಲವು. ಆದರೆ ಸತ್ತಮೇಲೆ ನರಕವಿದೆಯೋ ಇಲ್ಲವೋ ಅಥವಾ ಮುಂದೆ ಮತ್ತೆ ಜನ್ಮವಿದೆಯೋ ಇಲ್ಲವೋ ಇದ್ಯಾವುದನ್ನು ತಿಳಿದುಕೊಳ್ಳುವದಕ್ಕೆ ನಮ್ಮೆಲ್ಲರ ಬುದ್ಧಿಗೆ ಅಷ್ಟೊಂದು ಶಕ್ತಿಯಿಲ್ಲ.

ಹಾಗಾದರೆ ಋಷಿಗಳೂ ಉಳಿದವರಂತೆ ತಮ್ಮ ಬುದ್ಧಿಗೆ ತಿಳಿದೇ ಸುಳ್ಳಿಗೆ ಅಡ್ಡ ಬಂದ ಹಾಗಾಯಿತು. ಆದರೆ ದೇವರ ಮನಸ್ಸಿನಲ್ಲಿ ಏನಿದ್ದರಬಹುದೋ ಅದು ಬೇರೆಯೇ ಉಳಿಯಿತು. ರಾಜರು ತಮ್ಮ ರಾಜ್ಯದ ಸುರಕ್ಷಿತಕ್ಕಾಗಿ, ಸಾಧುಗಳು

ಲೋಕಹಿತಕ್ಕಾಗಿ, ಋಷಿಗಳು ಮಾನವನ ಉನ್ನತಿಗಾಗಿ ಹೀಗೆ ಇವರೆಲ್ಲರೂ ತಮ್ಮ ತಮ್ಮ ಸ್ವಭಾವಾನುಸಾರವಾಗಿಯೇ ಹಾಗೇ ಹೇಳಿರುವರು.

ಪಾಪದಿಂದ ನಾವು ನರಕಕ್ಕೆ ಹೋಗುವಂತೆಯೂ, ಮುಂದಿನ ಜನ್ಮದಲ್ಲಿ ಕಷ್ಟಕ್ಕೆ ಗುರಿಯಾಗುವಂತೆಯೂ ದೇವರು ನಮಗೆ ಪಾಪ ಮಾಡುವದಕ್ಕೆ ಯಾಕೆ ಅನುವು ಮಾಡಿಕೊಟ್ಟನು ? ಸುಳ್ಳು ಹೇಳುವದಕ್ಕೆ ನಮಗೆ ಬಾರದೆ ಹೋಗಿದ್ದರೆ ಯಾವ ಕೆಟ್ಟಕರ್ಮವನ್ನೂ ಮಾಡಲಿಕ್ಕೆ ನಮಗೆ ಸಾಧ್ಯವೇ ಇರುತ್ತಿದ್ದಿಲ್ಲ. ಸುಳ್ಳೇ ಸರ್ವ ಪಾಪಗಳ ತಾಯಿ. ಅಂದಬಳಿಕ ನಮ್ಮ ತಲೆಯೊಳಗಿನ ವಿಚಾರ ತಲೆಯೊಳಗೇ ಮುಚ್ಚಿಟ್ಟು ಹೊರಗೆ ಬಾಯಿಂದ ಬೇಕಾದ್ದನ್ನು ಹೇಳಲಿಕ್ಕೆ ಬರುವಂತೆ ಮಾಡಿದ್ದರಲ್ಲಿ ದೇವರ ಉದ್ದೇಶವೇನು ಇರಬಹುದು ?

ಈಗ ಶಾಲೆಯ ಮಕ್ಕಳದೊಂದು ಉದಾಹರಣವನ್ನು ತೆಗೆದುಕೊಳ್ಳೋಣ. ಶಿಕ್ಷಕನು ಯಾವಾಗಲೂ ಮಗುವಿನ ಕೈಯನ್ನು ತಾನೇ ಹಿಡಿದು ಬರೆಸುತ್ತ ಇದ್ದರೆ ಆ ಮಗುವಿಗೆ ತುಸು ಹೊತ್ತಿನಲ್ಲೇ ಬೇಸರವಾಗಿ ಬಿಡುತ್ತದೆ. ಯಾಕೆಂದರೆ ಆ ಮಗುವಿಗೆ ತನ್ನ ಮನಸ್ಸಿಗೆ ಬಂದಂತೆ ಗೀಚಲಿಕ್ಕೂ ಚಿತ್ರ ತೆಗೆಯಲಿಕ್ಕೂ ಸಿಕ್ಕ ಸಿಕ್ಕ ಅಕ್ಷರಗಳನ್ನು ಬರೆಯಲಿಕ್ಕೂ ಅವಕಾಶ ಕೊಡದೆ ಶಿಕ್ಷಕನು ಸದಾ ಸರ್ವಕಾಲಕ್ಕೆ ಹಿಡಕೊಂಡೇ ಕುಳಿತು ತನ್ನ ಮನಸ್ಸಿಗೆ ಬಂದದ್ದನ್ನೇ ಬರೆಯಿಸಹತ್ತಿದ್ದನೆಂದರೆ ಆ ಹುಡುಗನ ಪಾಲಿಗೆ ಶಾಲೆಯೆಂದರೆ ಅದೊಂದು ಸೆರೆಮನೆಯೇ ಆದೀತು. ಸ್ವತಂತ್ರ ವಿಲ್ಲದೆ ಯಾವಾಗಲೂ ಇನ್ನೊಬ್ಬರ ಕೈಕೆಳಗೇ ಪರತಂತ್ರದಿಂದ ಇರುವದು ಬಲು ಬೇಸರದ ಕೆಲಸವಾಗಿದೆ. ಅದರಲ್ಲಿ ಆನಂದವೇ ಇಲ್ಲ. ಇದರಂತೆಯೇ ನಮ್ಮ ಮನಸ್ಸೊಂದು ಕಡೆ ಮಾತೊಂದು ಕಡೆ ಆದರೆ ನಮಗೆ ಪ್ರಶಸ್ತವೆನಿಸುವಂತಿಲ್ಲ. ಈಗ ನಮ್ಮ ಕಾಲು ನಮ್ಮ ಸ್ವತಂತ್ರದಲ್ಲಿ ಇಲ್ಲವೆಂದು ತಿಳಿಯೋಣ. ನಮ್ಮ ವೈರಿಗಳು ನಮ್ಮನ್ನು ಕೊಲ್ಲಬೇಕೆಂದು ಯೋಚಿಸಿ ಹಾಗೆ ಓಡುವದಕ್ಕೆ ಆರಂಭಿಸಲು ಕಾಲುಗಳು ನಮಗೆ ಬೇಕಾದ ದಿಕ್ಕಿಗೆ ಹೋಗದೆ ನಮ್ಮ ವೈರಿಗಳ ಕಡೆಗೇ ಎಳಕೊಂಡು ಹೋದರೆ ನಮ್ಮ ಗತಿಯು ಏನಾದೀತು ? ನಮ್ಮ ಬಾಯಿಯು ಸ್ವತಂತ್ರತೆ ತಪ್ಪಿದರೂ ನಮ್ಮ ಹಾಡು ಹೀಗೇ ಆಗುತ್ತದೆ. ಒಂದೇ ಸವನೆ ಹೀಗೆ ಆಗ ಹತ್ತಿದರೆ ನಮ್ಮ ಬಾಳುವೆಯೇ ನಮಗೆ ಬೇಸರವಾಗುತ್ತದೆ. ಆಟದಲ್ಲಿ ಒಂದೇ ಸವನೆ ಮೇಲಿಂದ ಮೇಲೆ ಕಡೆಯತನಕ ಸೋಲುವದೇ ಆದರೆ ಬೇಸರಿಟ್ಟು ಹುರುಪು ಕುಗ್ಗಿ ಆಟವೇ ಸಾಕಾಗುತ್ತದೆ. ಹೀಗೆ ಅಸ್ವತಂತ್ರತೆಯಿಂದ ಆನಂದವಿಲ್ಲದಂತೆ ಆಗ ಬಾರದೆಂದು ದೇವರು ನಮಗೆ ನಮ್ಮ ಬಾಯಿಯನ್ನು ನಮ್ಮ ಸ್ವತಂತ್ರದಲ್ಲಿ ಇಟ್ಟಂತೆ ಕಾಣುತ್ತದೆ. ಈಗ ನಾವು ಒಬ್ಬರಿಗೆ ಒಂದು ಒಳ್ಳೆಯ ಬಿಗಿಯಾದ ಲೆಕ್ಕವನ್ನೇ ಹೇಳಿ ಅದರ ಉತ್ತರ ಹೇಳೆಂದು ಹೇಳುತ್ತಿರುತ್ತೇವೆ. ಒಂದು ಒಗಟನ್ನು ಹೇಳಿ ಒಡೆಯೆಂದು ಹೇಳುತ್ತಿರುತ್ತೇವೆ. ಆ ಲೆಕ್ಕದ ಉತ್ತರವನ್ನು, ಒಗಟಿನ ಒಡಪನ್ನು ನಾವು ಬಿಚ್ಚಿ ಹೇಳದೆ ಮುಚ್ಚಿ ಇಡುವದರಲ್ಲಿಯೇ ಆನಂದವಿದೆ. ನಾವು ಯಾವನಿಗೆ

ಕೇಳಿರುವೆವೋ ಅವನಿಗೂ ಕೂಡ ತಾನೇ ಎಣಿಕೆ ಹಾಕಿ ತಾನೇ ಯೋಚಿಸಿ ಗೊತ್ತು ಹಚ್ಚಿ ಹೇಳುವದರಲ್ಲಿ ಆನಂದವಿದೆ. ನಡುವೆ ಯಾರಾದರೂ ಗೊತ್ತಿದ್ದವರು ಬಾಯಿಹಾಕಿ ಹೇಳಿಕೊಡಲಿಕ್ಕೆ ಬಂದರೆ ಇವರಿಬ್ಬರಿಗೂ ಸಿಟ್ಟು ಬರುತ್ತದೆ. ಯಾಕೆಂದರೆ ನಡುವೇ ಉತ್ತರ ಹೇಳಿಬಿಟ್ಟರೆ ಇಬ್ಬರದೂ ಭರವು ಅಳಿದು ಆನಂದವು ತಪ್ಪಿಹೋಗುತ್ತದೆ. ಈ ನಮ್ಮ ಆನಂದಕ್ಕಾಗಿಯೇ ದೇವರು ನಮ್ಮ ಅವಯವಗಳನ್ನು ನಮ್ಮ ಸ್ವತಂತ್ರದಲ್ಲಿ ಇಟ್ಟಿದ್ದಾನೆಂದು ತೋರುತ್ತದೆ. ಇವಲ್ಲದೆ ಇನ್ನೊಂದು ರೀತಿಯಿಂದಲೂ ತರ್ಕಿಸಬಹುದು. ಅದೇನೆಂದರೆ– ನಾವು ಆಟದಲ್ಲಿ ಒಬ್ಬನಿಗೆ ಕಣ್ಣು ಮುಚ್ಚಿ ಗೊತ್ತುಪಡಿಸಿದ ಒಂದು ಘಾಜೆಯನ್ನು ಮುಟ್ಟಬೇಕೆಂದು ಹೇಳಿ, ಮೊದಲು ಅವನನ್ನು ಗರಗರ ತಿರುಗಿಸಿ ತಪ್ಪುದಾರಿಗೆ ಹಚ್ಚಿಬಿಡುತ್ತೇವೆ. ಅವನು ಇಂಥ ಪ್ರಸಂಗದಲ್ಲಿ ತನ್ನ ಬುದ್ಧಿಯನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ತನ್ನ ಘಾಜೆಗೆ ಮುಟ್ಟುವದಿಲ್ಲ. ಅಲ್ಲದೆ ತನ್ನ ಘಾಜೆಯನ್ನು ತಾನೇ ಹುಡುಕಿ ಕೊಳ್ಳುವದರಲ್ಲೇ ಆಟದ ಆನಂದವಿದೆ. ಮೊದಲೇ ತಪ್ಪುದಾರಿಗೆ ಹಚ್ಚದೆ ನೆಟ್ಟಗೆ ಘಾಜೆಯ ಕಡೆಗೇ ಮೋರೆ ಮಾಡಿ ನಿಲ್ಲಿಸಿಬಿಟ್ಟರೆ ಇದರಲ್ಲಿ ಅವನ ಬುದ್ಧಿಯ ಕೌಶಲ್ಯವೇನೂ ಕಂಡುಬರುವಂತೆ ಇಲ್ಲ, ಅಲ್ಲದೆ ಆನಂದವೂ ಇಲ್ಲ. ಮೈಚಳಿ ಬಿಟ್ಟು ಸಹಜವಾಗಿ ಘಾಜೆ ಮುಟ್ಟಿಬಿಡಬಹುದು. ಇದರಲ್ಲೇನು ಹುರುಳಿದೆ? ದೇವರೂ ಕೂಡ ನಮಗೆ ಈ ಲೋಕದ ಆಟದಲ್ಲಿ ನಮಗೆ ತಪ್ಪುದಾರಿ ಹಿಡಿಯುವದಕ್ಕೆ ಅನುಕೂಲ ಮಾಡಿ ನಮ್ಮ ಬುದ್ಧಿವಂತಿಕೆಯನ್ನು ಪರೀಕ್ಷಿಸುತ್ತಿರಬಹುದೆಂದು ತೋರುತ್ತದೆ. ನಮ್ಮಿಂದ ನಾವೇ ಬುದ್ಧಿವಂತರಾಗಿ ತಪ್ಪು ಯಾವುದು ಒಪ್ಪು ಯಾವುದು ಎಂಬುದನ್ನು ನಾವೇ ಗೊತ್ತು ಹಚ್ಚಿಕೊಂಡು ನಮ್ಮ ಘಾಜೆಯನ್ನು ನಾವೇ ಹುಡುಕಿಕೊಳ್ಳುವ ಆನಂದ ನಮಗುಳಿಯಲೆಂದು ಅವನು ಹೀಗೆ ಮಾಡಿದಂತೆ ಕಾಣುತ್ತದೆ. ಇದಲ್ಲದೆ ಇನ್ನೊಂದು ಕಾರಣವನ್ನು ಕಲ್ಪಿಸಬಹುದು. ಸದಾಚಾರದಿಂದ ನುಡಿದಂತೆ ನಡೆದರೆ ಮುಕ್ತಿಯಾಗುವದೆಂದು ಋಷಿಗಳು ಹೇಳುತ್ತಾರೆ, ಮುಕ್ತಿ ಎಂದರೆ ಹುಟ್ಟು ಸಾವುಗಳ ಕೈಯೊಳಗಿಂದ ದಾಟುವದು. ತಿರುಗಿ ಜನ್ಮಕ್ಕೆ ಬಾರದಂತೆ ಆಗುವದೇ ಮುಕ್ತಿ. ಈ ಲೋಕದ ಕಷ್ಟ ತಪ್ಪುವುದೇ ಮುಕ್ತಿ. ಒಟ್ಟಿನ ಮೇಲೆ ಒಬ್ಬನಿಗೆ ಮುಕ್ತಿಯಾಯಿತೆಂದರೆ ಅವನು ಈ ಭವದಿಂದ ಪಾರಾಗಿ ಬಿಟ್ಟಂತಾಯಿತು. ಋಷಿಗಳ ಹೇಳಿಕೆಯಂತೆ ಮುಕ್ತಿಯೆಂದರೆ ಇದೇ, ಲೋಕದ ಮಾನವರೆಲ್ಲಾ ಸದಾಚಾರದಿಂದಲೇ ನಡೆದು ಎಲ್ಲರೂ ಮುಕ್ತರೇ ಆಗಿಬಿಟ್ಟರೆ ತಿರುಗಿ ಈ ಲೋಕದಲ್ಲಿ ಯಾರು ಹುಟ್ಟಿ ಬರಬೇಕು? ಈ ಲೋಕವು ಹ್ಯಾಗೆ ನಡೆಯಬೇಕು? ಈ ಲೋಕವನ್ನು ಹುಟ್ಟಿಸಿದ ದೇವರು ಇದನ್ನು ಹಾಳುಬೀಳಗೊಡಬಾರದೆಂದು ಜನರು ಮುಕ್ತರಾಗದಂತೆ ಅವರಿಗೆ ಪಾಪ ಮಾಡುವುದಕ್ಕೆ ಅನುವು ಮಾಡಿ ಮಾಯಾ ಬದ್ಧರನ್ನಾಗಿಸಿ ಬಿಟ್ಟಿದ್ದಾನೆಂದು ತೋರುತ್ತದೆ. ಕೋಟಿ ಜನರಲ್ಲಿ ಒಬ್ಬಿಬ್ಬರು ಮಾತ್ರ ಪೂರ್ಣವಿಚಾರಮಾಡಿ ಬಲೆಗೆ ಬೀಳದೆ ಬಿಡಬಹುದು. ಇಂಥ ಒಬ್ಬಿಬ್ಬರು

ಮುಕ್ತರಾದರೆ ಆಗಲಿ, ಅಷ್ಟರಿಂದ ಲೋಕವೇನೂ ಹಾಳಾಗುವಂತೆ ಇಲ್ಲ. ಹೀಗೂ ಅವನ ಹಂಚಿಕೆಯಿದ್ದೀತು.

ಇದೆಲ್ಲಾ ಇರಲಿ, ದೇವರು ಇದ್ದದ್ದೇ ನಿಜವಿದ್ದರೆ ಈ ಕಾರಣಗಳು ನಿಜವಾಗುವವು. ಆದರೆ ಅವನು ಇದ್ದಾನೋ ಇಲ್ಲವೋ ನಿಶ್ಚಯವಾಗಿ ಗೊತ್ತಾಗುವಂತಿಲ್ಲ. ಋಷಿಗಳಿಗೂ ಕೂಡ ಅವನಿದ್ದುದು ಪೂರ್ಣಗೊತ್ತಾದಂತೆ ಕಾಣುವುದಿಲ್ಲ. ಯಾಕೆಂದರೆ ಒಂದು ದೇಶದ ಋಷಿಗಳು ದೇವರಿದ್ದಾನೆಂದು ಎದೆಯ ಮೇಲೆ ಕೈಯಿಟ್ಟು ಹೇಳಿದರೆ ಇನ್ನೊಂದು ದೇಶದ ಋಷಿಗಳು ಅವನು ಇಲ್ಲೇ ಇಲ್ಲವೆಂದು ಗಟ್ಟಿಯಾಗಿ ಹೇಳುತ್ತಾರೆ. ಹೀಗೊಂದು ಕಾಲದಲ್ಲಿದ್ದ ಋಷಿಗಳು ಹೇಳಿದರೆ ಇನ್ನೊಂದು ಕಾಲದ ಋಷಿಗಳು ಏನೂ ಹೇಳಲಿಕ್ಕೆ ಸಾಧ್ಯವಿಲ್ಲವೆಂದು ಕಿವಿಯ ಮೇಲೆ ಕೈಯಿಟ್ಟುಕೊಳ್ಳುತ್ತಾರೆ. ಅಂದ ಬಳಿಕ ನಾವು ಯಾವ ಮಾತು ನಿಜವೆನ್ನಬೇಕು. ದೇವರು ಇದ್ದದ್ದೇ ಆದರೆ ಇದುವರೆಗೆ ತರ್ಕಿಸಿದ ಕಾರಣಗಳಲ್ಲಿ ಯಾವದಾದರೂ ಒಂದು ಕಾರಣವು ಸತ್ಯವಿದ್ದೀತು. ಆದರೆ ದೇವರೇ ಇಲ್ಲವೆಂದರೂ ಬೇರೆ ಕಾರಣವನ್ನು ಕಲ್ಪಿಸಲಿಕ್ಕೆ ಬರುತ್ತದೆ. ಅದೇನೆಂದರೆ, ಈ ಲೋಕದಲ್ಲಿ ಗಿಡಬಳ್ಳಿಗಳು ಬೀಜದಿಂದ ಹಸಿಮಣ್ಣಿನಿಂದ ಮೊಳೆತು ಬೆಳೆದು ಕೆಲದಿನ ಬಾಳಿ ಬದುಕಿ ಕೊನೆಗೊಮ್ಮೆ ಮರಬಿದ್ದಂತೆ ಬಿದ್ದುಹೋಗಿ ಬಿಡುತ್ತವೆಂದು ತಿಳಿಯಬೇಕಾಗುವದು. ಇಷ್ಟು ತಿಳಿದುಕೊಳ್ಳಲಿಕ್ಕೆ ನಾವು ಇನ್ನೊಬ್ಬರನ್ನು ಕೇಳುವ ಕಾರಣವೇನೂ ಇಲ್ಲ. ಯಾಕೆಂದರೆ ಕಣ್ಣಿಗೆ ಇದು ಸ್ಪಷ್ಟವಾಗಿ ಕಾಣುತ್ತದೆ. ದೇವರಿಲ್ಲೇ ಇಲ್ಲವೆಂದೂ. ಜನ್ಮಾಂತರ ಸುಳ್ಳೆಂದೂ ಹಿಡಿದರೆ ಲೋಕದ ಆಟವೆಲ್ಲಾ ಇಷ್ಟೇ ಸರಿ. ಹೀಗೆ ಇದ್ದದ್ದಾದರೆ ಒಂದು ಹಣ್ಣಿನ ಉದಾಹರಣೆಯಿಂದ ನಮ್ಮ ಪ್ರಶ್ನೆ ತೀರುವದು. ಮೊದಲು ಹೂವಾದಾಗ ಸುವಾಸನೆ, ಆಮೇಲೆ ಮಿಡಿಯಾದಾಗ ಒಗರು, ಬಳಿಕ ಕಾಯಿಗೆ ಬಂದಾಗ ಹುಳಿ, ಅಲ್ಲಿಂದ ಹಣ್ಣಾದಾಗ ಸವಿ, ಇಷ್ಟಾದರೆ ತೀರಿತು. ಕೊನೆಗೇನು ಕೊಳೆತು ಮಣ್ಣುಪಾಲಾಗಿ ಬಿಡುವದು. ಮನುಷ್ಯರದಾದರೂ ಇದೇ ಹಾಡು. ಮೊದಲಿಗೆ ಕೆಟ್ಟ ಮನಸ್ಸಿದ್ದು ಮುಂದೆ ವಯಸ್ಸು ಇಳಿದಿಳಿದಂತೆಯೂ ಒಳ್ಳೇ ಸಹವಾಸ ಬೆಳೆಬೆಳೆದಂತೆಯೂ ಬುದ್ಧಿವಂತಿಕೆ ಹೆಚ್ಚಾಗಿ ಒಳ್ಳೆ ಮನಸ್ಸುಂಟಾಗುವದು. ಹ್ಯಾಗಿದ್ದರೂ ಕೊನೆಗೆ ಸಾಯುವದು. ಹಿಂಗಟವಿದ್ದರೂ ಮುಂಗಟವಿದ್ದರೂ ಅಷ್ಟೇ. ರಾಶಿಯ ಕಾಲಕ್ಕೆ ಹಸಿಬಿಸಿ ಎಂಬ ಭೇದವಿಲ್ಲದೆ ಎಲ್ಲಾ ನೆಲಕ್ಕೆ ಬೀಳಲೇಬೇಕು. ಇದು ಲೋಕದ ನಿಯಮವೇ ಇದೆ. ದೇವರು ಇದ್ದಿದ್ದರೆ ನಮ್ಮ ಸುಖದುಃಖಗಳನ್ನು ಲೆಕ್ಕಿಸದೆ ಅವನ ಮನಸ್ಸಿನಲ್ಲಿದ್ದುದಕ್ಕೆ ಮಹತ್ವ ಕೊಡಬೇಕಾಗುತ್ತಿತ್ತು. ಆದರೆ ಅವನು ಇಲ್ಲದ್ದೇ ನಿಜವಾದರೆ ಆ ಬಳಿಕ ನಮ್ಮ ಸುಖದ ಕಡೆಗೆ ಲಕ್ಷ್ಯವಿಡಬೇಕಾಗುವದು. ನಮಗೆ ಸುಖವಾಗಬೇಕೇ ಆದರೆ ನಾವು ಸತ್ಯವಂತರಾಗಿಯೇ ಇರಬೇಕಾಗುವದು. ಯಾಕೆಂದರೆ ನಾವು ಅಸತ್ಯವಂತರೆಂದು ಜನರಿಗೆ ತಿಳಿದು ಹೋದರೆ ನಮ್ಮನ್ನು ಯಾರೂ ನಂಬುವದಿಲ್ಲ. ಆದ್ದರಿಂದ ಇನ್ನೊಬ್ಬರು ನಮ್ಮ

ಕಷ್ಟಕ್ಕೆ ಆಗಲಾರರು. ಇದಲ್ಲದೆ ನಮ್ಮ ನಮ್ಮ ಸುಳ್ಳುತನದಿಂದ ಯಾರಿಗಾದರೂ ಮೋಸವಾಗಿ ನಷ್ಟವಾಗಿದ್ದರೆ ಅವರು ತಿರುಗಿ ನಮ್ಮನ್ನು ಕಷ್ಟಕ್ಕೆ ಗುರಿಮಾಡಿ ಸೇಡು ತೀರಿಸಿಕೊಳ್ಳಬೇಕೆನ್ನುತ್ತಾರೆ. ಹೀಗಾದರೆ ವ್ಯವಹಾರದಲ್ಲಿ ನಮಗೆ ಸುಖವೇ ಸಿಗದಂತೆ ಆಗುತ್ತದೆ. ಒಂದು ವೇಳೆ ನಾವು ದರ್ಪವುಳ್ಳವರಿದ್ದರೆ ನಮಗೆ ಸುಖವೇ ಇಲ್ಲ. ಸುಳ್ಳಾಡುವವರಿಗೆ ಸದಾ ಮನದಲ್ಲಿ ಒಂದು ಸುಳ್ಳು ಮುಚ್ಚುವದಕ್ಕೆ ಸಾವಿರ ಸುಳ್ಳು ಗಳನ್ನು ಹುಡುಕುವ ಚಿಂತೆಯೇ ತುಂಬಿಕೊಳ್ಳುತ್ತದೆ. ಚಿಂತೆ ಹತ್ತಿದ ಮೇಲೆ ಸುಖವೆಲ್ಲಿಯದು ? ದೇವರಿಲ್ಲದಿದ್ದರೂ, ಪರಲೋಕವಿಲ್ಲದಿದ್ದರೂ ಪೂರ್ವಜನ್ಮ ವಿಲ್ಲದಿದ್ದರೂ ಈ ಲೋಕದಲ್ಲಿ ಬದುಕಿರುವಷ್ಟು ದಿನವಾದರೂ ತನಗೂ ತನ್ನವರಿಗೂ ಸುಖವು ಸಿಗಬೇಕೆಂದೆನಿಸುವದರಿಂದ ಸತ್ಯವಂತಿಕೆಯು ಅಗತ್ಯವಾಗಿ ಬೇಕಾಗುವದು. ಸುಳ್ಳೊಂದೇ ಸರ್ವ ಕುಕರ್ಮಗಳನ್ನು ದಕ್ಕಿಸುವದು. ಇಂಥಾ ಸುಳ್ಳೇ ಮೊದಲು ಕಿತ್ತಿಹೋದರೆ ನಮಗೆ ಇನ್ನಾವ ಕೆಟ್ಟ ಕೆಲಸ ಮಾಡುವದಕ್ಕೂ ಆಸ್ಪದವೇ ಸಿಗುವದಿಲ್ಲ. ಇದರಿಂದ ನಮಗೆ ಅನ್ಯರಿಂದ ಕಷ್ಟ ಬರಲಿಕ್ಕಂತೂ ಕಾರಣವೇ ಇಲ್ಲ. ಅಲ್ಲದೆ ಮನಸ್ಸಿ ನಲ್ಲಿ ಮಳಮಳವಿಲ್ಲದ್ದರಿಂದ ಕಿಡಿಗೇಡಿ ಜನರ ಉಪದ್ರವಗಳಿಗೂ ಮನಸ್ಸು ಒದ್ದಾಡು ವದಿಲ್ಲ. ಯಾಕೆಂದರೆ ಬಹುದಿನಗಳಿಂದ ಶಾಂತವಾಗುತ್ತ ಬಂದು ಗಟ್ಟಿಯಾಗಿದ್ದ ಮನಸ್ಸಿನಲ್ಲಿ ಶಾಂತವೃತ್ತಿಯು ಸ್ಥಿರವಾಗಿ ಉಳಿಯುತ್ತದೆ. ಶಾಂತಚಿತ್ತರಿಗೆ ಸಹಜ ಶಕ್ತಿಯ ಸಂಪತ್ತು ವಿಪುಲವಾಗಿರುತ್ತದೆ. ಆದ್ದರಿಂದ ಅಂಥವರಿಗೆ ಎಂಥ ಕಷ್ಟವೂ ಅಷ್ಟೊಂದು ಬಾಧಿಸಲಾರದು.

ಇನ್ನು ಈ ಲೋಕದಲ್ಲಿ ಈ ಸತ್ಯವಂತಿಕೆ ಎಂಬುದೊಂದೇ ಇಲ್ಲದ್ದರಿಂದ ನಡೆ ಯುವ ಕಷ್ಟಗಳು ಎಷ್ಟೆಂದು ಹೇಳಲಿ ! ವ್ಯವಹಾರದಲ್ಲಿ ಒಬ್ಬರಿಂದೊಬ್ಬರಿಗೆ ಮೋಸವಾಗುತ್ತಿದ್ದರಂತೂ ಸರಿಯೇ ಸರಿ. ಆದರೆ ಪಾರಮಾರ್ಥಿಕ ಕ್ಷೇತ್ರದಲ್ಲಿಯೂ ಇದರಿಂದ ತುಂಬಾ ನಷ್ಟವುಂಟಾಗಿದೆ. ಹೇಗೆಂದರೆ ಈವತ್ತಿಗೂ ಆತ್ಮಜ್ಞಾನಿಗಳೆನಿಸಿ ಕೊಳ್ಳುವ ಸಾಧು ಸತ್ಪುರುಷರೂ, ಮೈತುಂಬಿ ದೇವರ ನುಡಿ ಹೇಳುವ ಪೂಜಾರಿ ಗಳೂ, ಬೇಕಾದ್ದು ಮಾಡಬಲ್ಲೆವೆನ್ನುವ ಮಂತ್ರಗಾರರೂ ಊರೂರಿಗೂ ಹೇರಳ ವಾಗಿ ಇದ್ದಾರೆ. ಇವರ ಚೆಲ್ಲಾಟವಿಲ್ಲದ ಸ್ಥಳವೇ ಇಲ್ಲ. ಮೈಯಲ್ಲಿ ದೆವ್ವ ಬಂದು ಕುಣಿದಾಡುವವರಿಗಂತೂ ಲೆಕ್ಕವಿಲ್ಲ. ಅಲ್ಲದೆ ಶಾಸ್ತ್ರ ವಿಷಯದಲ್ಲಿ ಬರೆಯುವ ಗ್ರಂಥಕಾರರೇನು ಕಡಿಮೆಯೇ ? ಇಷ್ಟೊಂದು ಗಲಾಟೆಯಿದ್ದರೂ ದೇವರಿದ್ದಾನೋ ಇಲ್ಲವೋ ಸ್ಪಷ್ಟವಾಗಿ ನಂಬುವದಕ್ಕೇ ಇಂದು ದಾರಿಯಿಲ್ಲದಾಗಿದೆ.

ಮರಣದ ಅನಂತರ ಯಾವದೇ ರೂಪದಲ್ಲಿ ಉಳಿಯುವೆಯೋ ಇಲ್ಲವೋ ಹೇಳಿಕೊಡುವದಕ್ಕೆ ಸಾಧ್ಯವಿಲ್ಲದಾಗಿದೆ. ಮಂತ್ರಶಕ್ತಿ ಸತ್ಯವೋ ಅಸತ್ಯವೋ ಒಪ್ಪಿ ಕೊಳ್ಳುವದಕ್ಕೆ ಮನಸ್ಸು ಒಡಂಬಡದಂತಾಗಿದೆ. ಅಯ್ಯೋ ಇದು ಯಾತರ ಫಲವು ? ಈ ಪುಣ್ಯಾತ್ಮರೆಂಬುವರು ತಮ್ಮ ತಮ್ಮ ವೃತ್ತಾಂತವನ್ನೆಲ್ಲಾ ಸತ್ಯಸತ್ಯವಾಗಿ ಲೋಕಕ್ಕೆ ಪ್ರಮಾಣಿಸಿ ಕೊಡಲಾರದ್ದೇ ಇಂಥ ಕಷ್ಟಕ್ಕೆ ಕಾರಣವಲ್ಲವೇ ? ಸಾಧು

ಸತ್ಪುರುಷರೆಂಬುವರು ತಮಗಾದ ಸ್ವಾನುಭವದ ವೃತ್ತಾಂತವನ್ನು ಎಷ್ಟೂ ಹೇಳುವ ದಿಲ್ಲ. ಬರೇ ಭಕ್ತಮಂಡಳವನ್ನು ಬೆಳೆಸಿಕೊಂಡು ತಿರುತಿರುಗಿ ಹಳೇ ಶಾಸ್ತ್ರಗಳನ್ನೇ ಬಿಚ್ಚಿಕೊಂಡು ಕುಳಿತು ಮೆರೆಯುತ್ತಾರೆ. ಅಯ್ಯೋ ಜ್ಞಾನಿಗಳೆನಿಸಿಕೊಂಬವರೇ ನಿಮ್ಮ ಶಾಸ್ತ್ರ ಕೇಳಿದರೆ ಆಗುವದಕ್ಕಿಂತ ಹೆಚ್ಚಿಗೆ ನಿಮ್ಮ ಸ್ವತಃದ ಸತ್ಯಚರಿತ್ರ ಶ್ರವಣ ದಿಂದ ಲೋಕಕ್ಕೆ ಲಾಭವಾಗುವಂತೆ ಇದೆ. ಇಂಥ ಆತ್ಮಜ್ಞಾನಿಗಳೆಂಬವರು ಹೆಚ್ಚಾಗಿ ಅಜ್ಞ ಜನಾಂಗವನ್ನೆಲ್ಲಾ ತಮ್ಮ ಬಲೆಗೆ ಎಳೆದುಕೊಂಡು ಬಿಡುತ್ತಲಿರುವದರಿಂದ ವಿಚಾರವಂತರಿಗೆ ಶಾಸ್ತ್ರ ವಿಷಯವೆಲ್ಲಾ ತಲೆಯಮೇಲೆ ಕಲ್ಲು ಹೊರಿಸಿದಂತೆ ಆಗುತ್ತ ಲಿದೆ. ಶಾಸ್ತ್ರಗಳಲ್ಲಿ ಹೇಳಿದ್ದು ಸತ್ಯವೆಂದು ನಂಬುವದಕ್ಕೆ ಪ್ರಮಾಣವಿಲ್ಲ. ಅಸತ್ಯ ವೆಂದು ಸ್ಪಷ್ಟವಾಗಿ ಹೇಳುವದಕ್ಕೆ ಶಕ್ತಿಯಿಲ್ಲ. ಹೀಗಾಗಿ ಇಂದು ಧರ್ಮವೆಂದರೆ ಅದೊಂದು ಬಿಡಲಾರದ ಕರ್ಮವಾದಂತಾಗಿದೆ. ಹೀಗೆ ಲೋಕದಲ್ಲಿ ಅಸತ್ಯವು ಎಲ್ಲಾ ಕಡೆಯಲ್ಲೂ ತನ್ನ ಆಟವನ್ನು ನಿರಾತಂಕವಾಗಿ ಸಾಗಿಸಿದೆ. ವ್ಯವಹಾರದಲ್ಲಿಯೂ ಅಸತ್ಯ, ಆಧ್ಯಾತ್ಮದಲ್ಲಿಯೂ ಅಸತ್ಯ, ಈ ಅಸತ್ಯವು ಕಾಲು ತೆಗೆಯುವ ತನಕ ಲೋಕದ ಸ್ಥಿತಿಯು ಸಮಕ್ಕೆ ಬರುವುದು ಅಶಕ್ಯವೇ ಸರಿ. ಎಲ್ಲಿಯವರೆಗೆ ನಮ್ಮಲ್ಲಿ ಅಸತ್ಯವು ವಾಸಮಾಡಿಕೊಂಡಿರುವುದೋ ಅಷ್ಟುಕಾಲವೂ ನಮ್ಮಲ್ಲಿ ಸತ್ಯ ಜ್ಞಾನವೂ, ಸತ್ಯ ಸ್ಥಿತಿಯೂ, ಸತ್ಯಶಕ್ತಿಯೂ ಹಣಿಕಿ ಹಾಕುವದಿಲ್ಲ. ನಮ್ಮಲ್ಲೇ ಸತ್ಯವಿಲ್ಲದಿದ್ದರೆ ನಮಗೆ ಹ್ಯಾಗೆ ಜಗದ ಸತ್ಯರಹಸ್ಯವು ಸಾಕ್ಷಾತ್ಕಾರವಾದೀತು ? ನಮ್ಮಲ್ಲಿ ಸತ್ಯ ವೆಂಬುದೇ ಇಲ್ಲವಾದರೆ ಇನ್ನೊಂದು ಜೀವವು ನಮ್ಮನ್ನು ಹ್ಯಾಗೆ ಹೊಂದಿಕೊಂಡೀತು? ಹೊಂದಿಕೊಳ್ಳುವುದಕ್ಕೆ ಆಗದ ಜೀವಿಯನ್ನು ಹಚ್ಚಿಕೊಳ್ಳುವದಕ್ಕಾದರೂ ಹೇಗೆ ಆದೀತು ? ಇದ್ದುದ್ದನ್ನು ಇದ್ದಕ್ಕಿದ್ದಂತೆ ಮಾತಾಡುವದಕ್ಕೇ ಶಕ್ತಿಯಿಲ್ಲದ ಅಸತ್ಯ ವನ್ನಾಶ್ರಯಿಸಿದವನಿಂದ ಇನ್ನೇನು ತಾನೇ ಮಾಡುವದಕ್ಕೆ ಆದೀತು ? ಸತ್ಯವೊಂದಿ ಲ್ಲದೆ ಹೋದರೆ ಅಂಥ ಪ್ರಾಣಿಗೆ ಇನ್ನೇನೂ ಇಲ್ಲ.

ಸದ್ಯದ ಕಾಲದಲ್ಲಿ ವ್ಯವಹಾರದಲ್ಲಿ, ಆಧ್ಯಾತ್ಮದಲ್ಲಿ, ಸಂಸಾರದಲ್ಲಿ, ಸಂಘದಲ್ಲಿ ಎಲ್ಲೆಲ್ಲಿಯೂ ಗಲಭೆಯುಂಟಾಗುವದಕ್ಕೆ ಈ ಅಸತ್ಯದ ಹೆಚ್ಚಳವೇ ಕಾರಣವಾಗಿದೆ. ಆಧ್ಯಾತ್ಮದಲ್ಲಿ ಒಲವಿದ್ದವರು ತಮಗೆ ಹಳೇ ಶಾಸ್ತ್ರವನ್ನು ನಂಬಿಕೊಂಡು ಹೊರಡುವ ದಕ್ಕೆ ಸಾಧ್ಯವಿದ್ದರೆ ಸಾಗಲಿ. ಅದರಿಂದ ನಷ್ಟವೇನೂ ಇಲ್ಲ. ಏನೋ, ಸಾಧನೆಯು ಬೆಳೆದು ಬಂದರೆ ಏನಾದರೂ ಕಲ್ಯಾಣವಾದೀತು. ಆದರೆ ನಂಬುವುದಕ್ಕೆ ಹಚ್ಚ ಬೇಕೆನ್ನುವದು ಹುಚ್ಚುತನ. ಇಲ್ಲದ್ದನ್ನು ಇದೆಯೆಂದು ನಂಬುವದಕ್ಕೆ ಜೀವವು ಒಪ್ಪುವದಿಲ್ಲ. ಅದು ಒಲ್ಲೆ ಒಲ್ಲೆನೆನ್ನುತ್ತದೆ. ಈಗಿನ ಕಾಲದಲ್ಲಿ ಹೆಚ್ಚು ಕಲಿತವ ರಲ್ಲಿ ಇಂಥವರೆ ಹೆಚ್ಚಾಗಿ ಇದ್ದಾರೆ. ಮತ್ತು ದೇಶದ ಕಲ್ಯಾಣವೂ ಕೂಡ ಇಂಥವ ರನ್ನೇ ಅವಲಂಬಿಸಿಕೊಂಡು ಇರುತ್ತದೆ. ಹೀಗೆಂದ ಬಳಿಕ ಜೊಳ್ಳು ಶಾಸ್ತ್ರಿಗಳೂ ಸ್ವಾಮಿಗಳೂ ಸೇರಿ ಅಜ್ಞರನ್ನು ಮಾತಿನ ಬಲೆಯಲ್ಲೆಳೆಕೊಂಡು ಆ ಬಲದಿಂದ ಇಂಥ ಸುಶಿಕ್ಷಿತರೆಂಬವರನ್ನು ನಂಬಿಸುವದಕ್ಕೆ ಯತ್ನಪಡುವುದು ಅನ್ಯಾಯವೂ ಅಸಾಧ್ಯವೂ

ವಿಫಲಕಾರಿಯೂ ಆಗಿದೆ. ಇಂಥವರು ತಮಗೆ ನಂಬುವದಕ್ಕೆ ಆಗದೆ ಹೋದರೆ ಆ ಹಾದಿಯನ್ನು ಬಿಟ್ಟು ಬಿಡಲಿ. ಆದರೆ ಇದ್ದುದ್ದನ್ನು ಇದ್ದಕ್ಕಿದ್ದಂತೆ ನುಡಿಯುವ ದಕ್ಕಾಕರೂ ಸಿದ್ಧರಾದರೆ ಈ ನಂಬಿ ನಡೆಯುವವರಿಗಿಂತ ಇವರಿಂದ ಹೆಚ್ಚಿನ ಪ್ರಯೋಜನವಾಗುವಂತಿದೆ. ಇಲ್ಲದ್ದನ್ನು ಜುಲುಮೆಯಿಂದ ನಂಬುವದು ಕಷ್ಟ. ಆದರೆ ಇದ್ದಕ್ಕಿದ್ದಂತೆ ಸತ್ಯವನ್ನಾಡುವುದು ಅಷ್ಟೇನೂ ಕಷ್ಟದ್ದಲ್ಲ. ದಿವ್ಯಜ್ಞಾನ ವನ್ನು ಬಯಸುವವರು ಇಷ್ಟಾದರೂ ಮಾಡದೆ ಗತಿಯಿಲ್ಲ. ಸತ್ಯವಂತಿಕೆಯಿಂದ ನಿರಭಿಮಾನತೆಯೂ ನಿಸ್ವಾರ್ಥತೆಯೂ ಉದಯಿಸುವುದಕ್ಕೆ ಮಾರ್ಗವಾಗುವದು. ಇವೆರಡೂ ಜೊತೆಯಾದ ಬಳಿಕ ನಿರಹಂಕಾರವುಂಟಾಗದಿರದು. ಇಷ್ಟೊಂದು ಸಿದ್ಧಿ ಸಿದರೆ ನಮ್ಮ ತಪವು ಅರ್ಧದ ಮಟ್ಟಿಗಾದರೂ ಫಲಿಸಿದಂತಾಯಿತು. ಅಹಂಕಾರ ಮಮಕಾರಗಳು ಕಡಿಮೆಯಾದ ಹಾಗೆಲ್ಲಾ ಶಾಂತ ವೃತ್ತಿಯು ಸಹಜವಾಗುತ್ತ ಬರುವದು. ಅಲ್ಲದೆ ಸರ್ವ ಪಾಪಗಳ ಆಧಾರವಾದ ಅಸತ್ಯವೇ ಲೋಪಿಸುತ್ತ ಬಂದ ಬಳಿಕ ಹೊಸಪಾಪದ ಅಂಜಿಕೆಯಂತೂ ಉಳಿಯಲಿಲ್ಲ. ಹೀಗಾಗಿ ಜಪವಿಲ್ಲದೆ, ತಪವಿಲ್ಲದೆ, ದಾನವಿಲ್ಲದೆ, ಧರ್ಮವಿಲ್ಲದೆ ಕೂಡ ಸತ್ಯವೊಂದರಿಂದಲೇ ಮನುಷ್ಯನು ನಿರಹಂಕಾರ ನಿರ್ಮಮತ್ವ ನಿಷ್ಪಾಪ ಜೀವನವನ್ನು ಸಮೀಪಿಸಿ ಉನ್ನತಿಗೆ ಬರುವನು. ಈ ತಪಸ್ಸು ಕೂಡ ಇನ್ನಾವ ತಪಸ್ಸಿಗಿಂತ ಕಡಿಮೆಯದಲ್ಲ. ನಾವು ಬರೇ ಸತ್ತು ಬೈಲಾಗುವ ದೇಹಿಗಳಾಗಿರದೆ ಅಮರವಾದ ಆತ್ಮವಿದ್ದದ್ದೇ ಸತ್ಯವಾದರೆ, ಅಥವಾ ವಿಶ್ವವು ಬರೇ ಅನಾಥವಾಗಿರದೆ ಅದರೊಡೆಯನಾದ ದೇವರೆಂಬವನೇನಾದರೂ ಇದ್ದುದ್ದಾದರೆ ಇಂಥ ಸತ್ಯ ತಪಸ್ಸು ಫಲಿಸದೆ ಇರಲಾರರು. ನಂಬಿಗೆಯೊಂದಿಲ್ಲದ ಮಟ್ಟಿಗೆ ಇವನು ಮಹಾಪರಾಧಿಯೇನೂ ಅಲ್ಲ. ಉಳಿದ ಸಾಧಕರಿಗಿಂತ ಇವನದೇನೂ ಕಡಿಮೆಯದಲ್ಲ. ಇಂದು ನಮ್ಮಿಂದ ಏನು ಮಾಡುವದಕ್ಕಾಗ ದಿದ್ದರೂ ಬಿಡಲಿ, ಈ ಸತ್ಯವೊಂದನ್ನಾದರೂ ಹಿಡಿದು ಕೊಳ್ಳುವದಕ್ಕೆ ಸಿದ್ಧರಾದರೆ ನಮ್ಮ ಜನ್ಮದಲ್ಲಿ ಏನಾದರೂ ಕಲ್ಯಾಣದ ಬೀಜವು ಫಲಿಸೀತೆಂಬ ಆಶೆಯಿದೆ. ಈವತ್ತಿನ ಕಾಲದಲ್ಲಿ ಹೊರಗೆಲ್ಲಾ ಬೊಬ್ಬಾಟ ನಡೆದಿದೆ; ಒಳಗೆ ನೋಡಿದರೆ ಬೆಂಕಿ ಬಿದ್ದಿದೆ. ಸಾಮಾನ್ಯವಾಗಿ ಎಲ್ಲೆಲ್ಲೂ ವಿವಿಧ ವೈಷಮ್ಯಗಳ ಕೋಲಾಹಲವೆದ್ದಿದೆ. ಈ ಕೋಲಾಹಲದ ಮೂಲವೇನೆಂದು ನೋಡಿದರೆ ಬರೇ ಅಜ್ಞಾನ. ಸತ್ಯವೇನೆಂಬುದು ಗೊತ್ತಾಗದೆ ಇರೋಣವೇ ಅಜ್ಞಾನ. ಹೊರಗಿನ ಬೊಬ್ಬಾಟ ಕೇಳಿ ಅದನ್ನು ಅಡಗಿಸುವುದಕ್ಕೆ ಯತ್ನಿಸಬೇಕೇ ? ಮೇಲಾಗಿ ಯಾವದೇ ಮಾಡಿದರೂ ಮಾಡಲಿ; ಆದರೆ ಹ್ಯಾಗೆ ಏನು ಮಾಡಬೇಕೆಂಬುದು ತಿಳಿಯದಂತಾಗಿದೆ. ಹೊರಗೆ ರಾಜಕಾರಣದ ಮುಖ್ಯತ್ವವಿದ್ದಷ್ಟೇ ಒಳಗೆ ಧರ್ಮಕಾರಣದ ಮುಖ್ಯತ್ವ ವಿದೆ. ಲವಲೇಶವೂ ಹೆಚ್ಚುಕಡಿಮೆಯಿಲ್ಲ. ಹೊರಗಿನ ಕಾರಣದಿಂದ ಎಷ್ಟು ನಷ್ಟವೋ ಒಳಗಿನ ಕಾರಣದಿಂದ ಅದಕ್ಕೂ ಹೆಚ್ಚಿನ ನಷ್ಟವಿದೆ. ಇಂದು ನಾವು ಏನು ಮಾಡಿಯೂ ಬಾಹ್ಯ ಕೋಲಾಹಲದಲ್ಲಿ ಸಾಮ್ಯವನ್ನುಂಟು ಮಾಡುವದು

ಅಸಾಧ್ಯವಾಗಿದೆ. ಕಂಡುಂಡು ಮನಗಂಡ ಧರ್ಮ ಜ್ಞಾನವು ಮನೆ ಮನೆಗೆ ಬಂದು ನಿಲ್ಲುವತನಕ ಸಾಮ್ಯವೆಂಬುದು ಕಲ್ಪನೆಯ ಕಥೆಯೇ ಸರಿ. ರಾಜಶಾಸನದ ಕಲ್ಪನೆಗಿಂತ ಧರ್ಮಶಾಸನದ ಕಲ್ಪನೆಯು ಜನಾಂಗದಲ್ಲಿ ಹೆಚ್ಚು ಬೇರು ಬಿಟ್ಟಿದೆ. ಆದ್ದರಿಂದ ಹೊರಗಿನ ಬೊಬ್ಬಾಟಕ್ಕಾಗಿ ಟೊಂಕ ಕಟ್ಟುವಂತೆ ಒಳಗಿನ ತೊಡಕು ಬಿಡಿಸುವದಕ್ಕೂ ಇಂದು ಜನರು ಸಿದ್ಧರಾಗಬೇಕು.

ಹೊರಗೆ ತಮಗೆ ತೋಚಿದಷ್ಟುಸಾಗುವ ವೀರರು ಎಲ್ಲಿಗೆ ಮುಟ್ಟುವರೋ ಮುಟ್ಟಲಿ, ಇತ್ತ ಕಣ್ಣುಮುಚ್ಚಿ ಒಳಗೆ ಹೆಜ್ಜೆಹಾಕುವ ಧೀರರೂ ಬೇಕು. ಇಂದು ಜಗತ್ತು ಏನು ಮಾಡಬೇಕೆಂಬುದನ್ನು ತಿಳಿಯದೆ ಕಿಂಕರ್ತವ್ಯತಾಮೂಢವಾಗಿದೆ. ಹೊರಗೆ ಹಾರುವವರು ಹಾರಲಿ. ಒಳಗೆ ಮುಳುಗಿ ಕರ್ತವ್ಯ ಜ್ಞಾನವನ್ನು ಪಡೆಯುವವರೂ ಇಂದು ಬೇಕು. ತನಗೇ ಆಗಲೀ, ಲೋಕಕ್ಕೇ ಆಗಲಿ ಇಂದು ಹಿತವಾಗಬೇಕಾದ ರೀತಿಯೇ ತಿಳಿಯದಂತಾಗಿದೆ, ತಿಳಿಯದೆಯೇ ಹಿತಮಾಡಿಕೊಳ್ಳುವುದೆಂದರೆ ಅರ್ಥವೇ ಇಲ್ಲದ ಮಾತು. ಆಧ್ಯಾತ್ಮದಲ್ಲಿ ಮುಂದುವರಿಯುವದಕ್ಕೆ ನಮಗೆ ವಿಶ್ವಾಸದ ಆಧಾರವಿಲ್ಲ. ಆದರೆ ಸತ್ಯವನ್ನು ಕಂಡುಕೊಳ್ಳುವದಕ್ಕಾಗಿ ಸತ್ಯವನ್ನು ಆಶ್ರಯಿಸುವದಕ್ಕೆ ಮಾತ್ರ ನಮಗೆ ಅಡ್ಡಿಯಿಲ್ಲ.

For me, truth is the Sovereign principle, which includes numerous other principles. This truth is...... the Absolute Truth, the Eternal Principle, that is God. My uniform experience has convinced me, that there is no other God than Truth.

(ನನ್ನ ಮಟ್ಟಿಗೆ ಸತ್ಯವೊಂದೇ ಸಾರ್ವಭೌಮ ತತ್ತ್ವ, ಉಳಿದ ಹಲವು ತತ್ತ್ವಗಳನ್ನು ಇದು ಒಳಕೊಂಡಿದೆ. ಇದು ತುರೀಯ ಸತ್ಯ, ಸನಾತನ ತತ್ತ್ವ, ಇದು ದೇವರು. ಸತ್ಯವಿಲ್ಲದೆ ಬೇರೆ ದೇವರಿಲ್ಲ, ಇದು ನನ್ನ ಅಖಂಡ ಅನುಭವ.)

— ಮಹಾತ್ಮಾ ಗಾಂಧಿ

ಹಿಂದಿನವರು ಕಂಡಿದ್ದೇವೆಂದು ಹೇಳಿರುವ ಆ ದಿವ್ಯ ಸತ್ಯವನ್ನು ಇಂದಿನವರು ಈಗ ಪುನಃ ಕಂಡು ಪ್ರಮಾಣಿಸಬೇಕಾಗಿದೆ. ಅದುವರೆಗೂ ಹಿಂದಿನ ಶಾಸ್ತ್ರವೆಲ್ಲಾ ಬರೇ ರಗಳೆಯಲ್ಲದೆ ಅದನ್ನು ಅಂತಃಕರಣಪೂರ್ವಕವಾಗಿ ನಂಬುವದಕ್ಕೆ ಇಂದಿನವರಿಗೆ ಸಾಧ್ಯವಿಲ್ಲ. ಆದರೆ ಅದನ್ನು ಕಂಡುಕೊಳ್ಳುವ ಬಗೆ ಹೇಗೆ ? ಹಿಂದಿನವರು ಹೇಳಿದ ರೀತಿಯಂತೆ ಹೊರಡುವದಕ್ಕೆ ಇಂದಿನವರಿಗೆ ಸಾಧ್ಯವಿಲ್ಲ. ಯಾಕೆಂದರೆ ಭಕ್ತಿಯಿಂದ ಕಂಡುಕೊಳ್ಳಬೇಕೇ ವಿಶ್ವಾಸವಿಲ್ಲ. ಯೋಗದಿಂದ ಕಂಡುಕೊಳ್ಳಬೇಕೇ ಬಲವಿಲ್ಲ. ಲೋಕಹಿತಚಿಂತನೆಯಿಂದ ಕಂಡುಕೊಳ್ಳಬೇಕೇ ತನ್ನ ಚಿಂತೆಯೇ ತನಗೆ ಹೆಚ್ಚಾಗಿದೆ. ಸಂಶಯ, ದೌರ್ಬಲ್ಯ, ದಾರಿದ್ರ್ಯ ಮೊದಲಾದವು ಮನೆಮಾಡಿಕೊಂಡಿರುವ ಈಗಿನ ಕಾಲದಲ್ಲಿ ಅವೆಲ್ಲಾ ಬರೇ ಓದುವ ಮಾತುಗಳೇ ಸರಿ.

ಇಂದು ಕೂಡ ಯಾರಿಗಾದರೂ ವಿಶ್ವಾಸದ ಸಂಪತ್ತಿದ್ದರೆ ಅವರು ಭಕ್ತರಾಗಲಿ. ಬಲವೂ, ನಿಶ್ಚಯವೂ, ಪ್ರಸನ್ನಚಿತ್ತವೂ ಇದ್ದವರು ಯೋಗವನ್ನು ಅವಲಂಬಿಸಲಿ, ಧನಸಂಪತ್ತಿಯುಳ್ಳವರು ದಾನಿಗಳಾಗಲಿ, ಕರುಣವುಳ್ಳವರು ಪರಹಿತ ಮಾಡಲಿ, ಮಮಕಾರವಿಲ್ಲದಿದ್ದರೆ ಸನ್ಯಾಸಿಗಳಾಗಿ ಕಾಡು ಸೇರಲಿ. ಹುರುಪುಳ್ಳವರು ಹೊರಗೆ ಏನೇನು ನಡೆದಿದೆಯೆಂಬುದನ್ನು ಕಣ್ಣು ತೆರೆದು ನೋಡಲಿ. ಆದರೆ ಇವೊಂದೂ ಇಲ್ಲದೆ ಹೋದರೆ ವೆಚ್ಚವಿಲ್ಲದ ಸತ್ಯವೊಂದನ್ನಾದರೂ ಹಿಡಿದುಕೊಳ್ಳಲಿಕ್ಕೆ ಅಗದೆ ಹೋದೀತೇ? ಸತ್ಯವನ್ನು ಹಿಡಿದುಕೊಳ್ಳುವದಕ್ಕೆ ನಮಗೆ ಇನ್ನೇನಾದರೂ ಹೆಚ್ಚಿನದು ಬೇಕೇ ? ಇದು ಅಕ್ಕಾಬಾಯಿ. ಅಪ್ಪಾಗಳಿಗೂ ಕೂಡ ಬಿಗಿಯಲ್ಲದ ಹಾದಿ. ಈ ಹಾದಿಯಲ್ಲಿ ನಡೆಯಲಿಕ್ಕಾಗದವರಿಂದ ಇನ್ನೇನೂ ಸಾಧ್ಯವಿಲ್ಲ. ಎಲ್ಲ ವಿಧದ ಅಬಲರಿಗೂ ಇದು ಸುಖವಾದ ಹಾದಿ. ಮತ್ತು ಅದ್ಭುತ ಫಲ ಸಿಗುವ ಆಶೆ ಬೇರೆ ಇದೆ. ಕರುಣೆಯ ಲವಲೇಶವೂ ಇಲ್ಲದೆ, ಬರೇ ಪರಂಪರಾ ಮೂಢರಾಗಿ, ಆಪತ್ತುಳ್ಳವರನ್ನು ಲೆಕ್ಕಿಸದೆ, ಉಂಡಾಡಿಗರಿಗೆ ಸಮಾರಾಧನೆ ಮಾಡಿಸಿ, ಪುಣ್ಯ ಪಡೆಯುವವರಿಗಿಂತಾ ಇದು ಶ್ರೇಷ್ಠವಾದ ಹಾಗೂ ಸುಲಭವಾದ ಹಾದಿ. ಆಶೆಬುರುಕತನವನ್ನು ಎಳ್ಳಷ್ಟೂ ಬಿಡದೆ ಬರೇ ಹೊಳೆ ಹಳ್ಳಗಳಲ್ಲಿ ಮುಳುಗಿ ದಿಕ್ಕು ದೇಶ ತಿರುಗಿ ಕಾಲದಂಡ ಮಾಡಿಕೊಳ್ಳುವ ಯಾತ್ರಿಕರಿಗಿಂತ ಇದು ಶ್ರೇಷ್ಠವಾದ ಹಾಗೂ ಸುಲಭವಾದ ಹಾದಿ. ಯಾಕೆಂದರೆ ಸತ್ಯದಿಂದ ಹೆಚ್ಚು ಕಷ್ಟವಿಲ್ಲದೆ ಅಂತರಂಗವು ಶುದ್ಧವಾಗುವದು. ಇದಲ್ಲದೆ ಪ್ರಾಚೀನ ಸಾಧನ ತತ್ತ್ವಗಳೆಲ್ಲಾ ಇದರಲ್ಲಿ ಸಹಜವಾಗಿಯೇ ಅಡಕವಾಗುತ್ತವೆ. ಮೇಲಾಗಿ ದೇವರ ಮೇಲೆ. ಪರಲೋಕದ ಮೇಲೆ, ಪುನರ್ಜನ್ಮದ ಮೇಲೆ ಇಂಥ ಇನ್ನಾವ ಶಾಸ್ತ್ರದ ಮೇಲೆಯೂ ವಿಶ್ವಾಸವಿಲ್ಲದೆ ಕೂಡ ಈ ಹಾದಿಯ ಮೇಲೆ ನಡೆಯಲಿಕ್ಕಾಗುತ್ತದೆ. ಇಂದಿನ ಸಂಶಯ ವೃತ್ತಿಯ ಜಗಕ್ಕೆ ಇದರ ಹೊರತು ಗತಿಯಿಲ್ಲ. ಇಂದು ವಿಶ್ವಾಸವಿಲ್ಲದ ಮಾತ್ರಕ್ಕೆ ಏನಾಯಿತು ? ಇಲ್ಲದ್ದನ್ನು ನಟಿಸುವದಕ್ಕೆ ಯತ್ನಿಸಿ ಫಲವಿಲ್ಲ. ಇಲ್ಲದ್ದು ಹೋಗಲಿ, ಅದನ್ನು ಬಿಟ್ಟು ಇದ್ದದ್ದರ ಮೇಲೆ ಕೈಯಾಡಿ ದಾರಿ ಹಿಡಿದರೆ ಇಂದಿಲ್ಲದ್ದು ನಾಳೆ ಸಿಕ್ಕೀತು. ಅಥವಾ ಅದು ಇಲ್ಲವೇ ಇಲ್ಲವಾದರೆ ಬಿಟ್ಟೀತು. ಅದರಿಂದ ಯಾರಿಗಾದ ನಷ್ಟವೇನು ? ಸತ್ಯವೇನೆಂಬುದನ್ನರಿತುಕೊಳ್ಳುವದಕ್ಕೆ ಸತ್ಯವೆನಿಸದ್ದನ್ನು ಕೊರಳಿಗೆ ಕಟ್ಟಿಕೊಂಡು ಹೊರಡುವದೇಕೆ ? ಇಂದು ಯಾರಿಗಾದ ನಷ್ಟವೇನು ? ಇಂದು ಕೈಯಲ್ಲೆಷ್ಟಿದೆಯೋ ಅಷ್ಟೇ ಸತ್ಯ. ನಾಳೆ ಮತ್ತೆ ಹೆಚ್ಚಿನದು ಕೈಗೆ ಬಿದ್ದರೆ ಅಂದಿಗೆ ಅದು ತಾನಾಗಿಯೇ ಸತ್ಯವಾಗಿ ಇದ್ದೇ ಇರುತ್ತದೆ. ಯಾವುದೇ ಆಗಲಿ ಅದು ಇದ್ದದ್ದೇ ಆದರೆ ನಮ್ಮ ಅಪನಂಬಿಗೆಯಿಂದೇನೂ ಅದು ಇಲ್ಲದಂತೆ ಆಗುವದಿಲ್ಲ. ಅಥವಾ ಅದು ಇಲ್ಲವೇ ಇಲ್ಲವಾದರೆ ನಾವು ಎಷ್ಟು ಕೋಟಿ ಜನಗಳು ಕೂಡಿ ಮಹಾಪ್ರಯಾಸದಿಂದ ನಂಬುತ್ತೇವೆಂದ ಮಾತ್ರಕ್ಕೂ ಹೊಸದಾಗಿಯೇನೂ ಅದು ಹುಟ್ಟಲಾರದು.

ಹೀಗೆಂದ ಬಳಿಕ ನಮ್ಮ ಅವಿಶ್ವಾಸವಾಗಲಿ, ವಿಶ್ವಾಸವಾಗಲಿ ಅದರದೇನೂ ಕೊಂಕು ಮಾಡಲಾರದು. ಆದರೆ ಇದ್ದಕ್ಕಿದಂತೆ ನಾವು ಇಂಥಾದ್ದೇನೂ ನಂಬಂವ ದಿಲ್ಲವೆಂದು ಹೇಳಿಕೊಂಡು ಸತ್ಯಮಾರ್ಗವನ್ನು ಹಿಡಿದರೆ ನಮಗೆ ಹಿತವಾದೀತೇ ಹೊರತು ನಷ್ಟವೇನೂ ಆಗಲಾರದು. ನಂಬುಗೆಯಿಲ್ಲದವರಿಗೆ ಸತ್ತವರ ಸಾಕ್ಷಿಯಿಂದ ಪ್ರಯೋಜನವಾಗುವಂತಿದೆ. ಇಂಥವರಿಗೆ ಕಿವೀ ಹಿಡಿದು ನೀರು ತೋರಿಸುವವರು ಬೇಕು. ಇಷ್ಟಾಗದಿದ್ದರೆ ತಾನಾಗಿ ನೀರು ಭೆಟ್ಟಿಯಾದಾಗಲೇ ಇವರಿಗೆ ನೀರಿನ ಪರಿಚಯ. ಅದುವರೆಗೂ ಒಣಾ ಹೇಳಿಕೆಯಲ್ಲಾ ವ್ಯರ್ಥವೇ ವ್ಯರ್ಥ. ಇಂಥವರಿಗೆ ಹಳೇಹಾದಿ ಹಿಡಿದು ಹೋಗಲಿಕ್ಕೆ ಬಾರದ್ದೊಂದು, ಹೊಸಹಾದಿ ಹಾಕಿ ಕೊಡುವವರು ಇಲ್ಲದ್ದೊಂದು, ಸ್ವತಃ ದಾರೀ ಮಾಡಿಕೊಳ್ಳುವ ಶಕ್ತಿ ಇಲ್ಲದ್ದೊಂದು. ಹೀಗೆ ನಾನಾ ಕಷ್ಟಗಳಿರುವಾಗ ಒಣಾ ಒತ್ತಾಯದೇಟುಗಳಿಂದ ಏನು ಪ್ರಯೋಜನ ? ಅಲ್ಲದೆ ಏಟು ಕೊಡುವವರೆಲ್ಲಾ ತುಂಬಾ ಉಂಡಾಡಿಗಳು. ಬರೇ ಸಮಾರಾಧನೆಯ ಊಟಾ ಹೊಡೆದು ಪರನಿಂದೆಯಲ್ಲೇ ಜನ್ಮ ಕಳೆಯುವದಕ್ಕೆ ಮೆಚ್ಚಿದ ಇವರು ತಾವು ಇನ್ನೊಬ್ಬರಿಗೆ ಬುದ್ಧೀ ಹೇಳುವ ಗುದ್ದಾಟಕ್ಕೆ ಹೋಗಿ ಉಭಯತರ ಕಾಲಹರಣ ಗೊಳಿಸುವದಕ್ಕಿಂತ ತಾವು ಹೇಳುವ ಹಳೇ ಮಾರ್ಗಗಳ ಮೇಲೆಯೇ ವಿಶ್ವಾಸದಿಂದ ಸಾಗಿ ದಿವ್ಯ ಸತ್ಯವನ್ನು ಕಂಡು ನಮ್ಮನ್ನು ಕರೆಯಲಿಕ್ಕೆ ಬಂದರೆ ನಾವೇನು ಒಲ್ಲೆನ್ನುವೆವೇ ? ನಮಗೆ ಬೇಕಾದದ್ದೇನು ? ರೊಟ್ಟಿ ! ಅವ್ವ ಕೊಟ್ಟರೂ ಅಷ್ಟೇ; ಅಪ್ಪ ಕೊಟ್ಟರೂ ಅಷ್ಟೆ. ಆದರೆ ಕೊಡುವವರೇ ಈಗ ಇಲ್ಲ. ಬರೇ ಎಲ್ಲರೂ ವಿಚಾರ ಹೇಳಲಿಕ್ಕೇ ಬರುತ್ತಾರೆ. ನಮಗೇನೂ ಅವಿಶ್ವಾಸದಿಂದಲೇ ಹೊರಡಬೇಕೆಂಬ ಹಟವಿಲ್ಲ. ವಿಶ್ವಾಸವಿದ್ದವರು ಮೊದಲು ತಮಗಿದ್ದ ವಿಶ್ವಾಸವನ್ನೆಲ್ಲ ಕಳಕೊಂಡು ಆಮೇಲೆ ಸತ್ಯದ ಕಡೆಗೆ ಹೊರಳಬೇಕೆಂಬ ಅರ್ಥವೇನೂ ಇಲ್ಲ. ಆದರೆ ವಿಶ್ವಾಸ ವೆಂಬುದು ಇಲ್ಲವೇ ಇಲ್ಲವೆನ್ನುವವರಿಗೆ ಬರೇ ಒತ್ತಾಯ ಪಡಿಸಿ ನಂಬಿಸುವದಕ್ಕಾಗುವ ದಿಲ್ಲವೆಂಬುದಿಷ್ಟೇ ಇದರ ತಾತ್ಪರ್ಯ. ವಿಶ್ವಾಸವಿಲ್ಲದ್ದು ಮೊದಲೇ ಕೇಡು. ಆಮೇಲೆ ಸುಳ್ಳೇ ನಂಬುತ್ತೇವೆನ್ನುವುದು ಹೆಚ್ಚಿನ ಕೇಡು. ಹೀಗಾಗಿ ಕೇಡಿಗೆ ಕೇಡು ಹೆಚ್ಚು ಗುಣಿಸುತ್ತ ಹೋದರೆ ಆತ್ಮೋನ್ನತಿಯಾದೀತೇ ? ನಮ್ಮಲ್ಲಿ ಇಲ್ಲದ ಗುಣ ವನ್ನು ಇಲ್ಲವೆಂದು ಒಪ್ಪಿಕೊಳ್ಳುವಷ್ಟು ನಮ್ಮ ಮನಸ್ಸು ಉದಾರವಾದರೆ ಅಷ್ಟೇ ಎಷ್ಟೋ ಸಿದ್ಧಿಸಿದಂತಾಯಿತು. ಇಂಥ ಉದಾರತನವೇ ಸತ್ಯಮಾರ್ಗದ ಆರಂಭದ ಸ್ಥಳವು.

ಈ ಸತ್ಯವನ್ನು ಆಶ್ರಯಿಸುವದರಿಂದ ಸ್ವತಃ ತನಗೆ ಸತ್ಯಜ್ಞಾನವಾಗುವದಕ್ಕೂ ಶಾಂತಿ ಸಿಗುವದಕ್ಕೂ ಆಶೆಯಿದೆ. ಅಲ್ಲದೆ ಎಲ್ಲ ಮೋಸಗಳಿಗೂ ಅಸತ್ಯವೇ ಮೂಲ ವಾದದ್ದರಿಂದ ಅಂಥಾ ಮೂಲವೇ ಕಡಿದು ಹೋಗುವದರಿಂದ ಇಂಥಾ ಸತ್ಯವಂತಿಕೆ ಯಿಂದ ಇನ್ನೊಬ್ಬರಿಗೆ ಮೋಸದ ಕಾಟ ತಪ್ಪುವದು. ಹೆಚ್ಚಿನ ಉಪಕಾರ ಮಾಡುವ ದಾಗದವರು ಅಪಕಾರ ಮಾಡುವದನ್ನಾದರೂ ಬಿಟ್ಟರೆ ಎಷ್ಟೋ ಕ್ಷೇಮವಲ್ಲವೆ ?

ಬರೇ ತಮ್ಮ ಪೂರ್ತಿ ತಾವು ಸತ್ಯಸತ್ಯವೆಂದು ಹೇಳಿಕೊಳ್ಳುತ್ತ ಮೂಲೆಗುಂಪಾದರೆ ಪರರಿಗೇನು ಫಲವೆನ್ನಬಹುದು. ಮನುಷ್ಯ ಸುಲಭವಾದ ಪರಪೀಡಕ ಗುಣವೊಂದು ಇಲ್ಲದಂತಾದದ್ದೇ ಫಲವೆನ್ನಬೇಕು. ಇಂಥವರಿಂದ ಲೋಕಕ್ಕೆ ತೋರಿಕೆಯ ಉಪ ಕಾರವಾಗದಿದ್ದರೂ ಅಪಕಾರವಾದರೂ ಆಗುವಂತಿಲ್ಲ, ಇದು ಸತ್ಯ. ಆದರೆ ಇವರ ಸತ್ಯದ ಸಾಧನೆಯು ಸಿದ್ಧಿಸಿ ಇವರಿಗೆ ದಿವ್ಯಸತ್ಯದ ದರ್ಶನವಾದರೆ ಅಥವಾ ಸ್ವಕರ್ತವ್ಯವು ಸೂಚಿತವಾದರೆ ಆಗ ಇಂಥವರಿಂದ ಲೋಕಕ್ಕೆ ಮತ್ತಾರಿಂದಲೂ ಆಗದಷ್ಟು ಉಪಕಾರವಾಗಬಹುದು. ಇದಿರಲಿ.

ಇನ್ನು ಈ ಸತ್ಯದ ಸಾಧನ ರೀತಿಯನ್ನು ವಿಚಾರಿಸುವದಕ್ಕೆ ಮುಂಚೆ ಅಸತ್ಯ ವಂತಿಕೆಗೆ ಕಾರಣವೇನೆಂಬುದನ್ನು ವಿಚಾರಿಸುವಾ.

ದುಡಿಯದೆ ದುಃಖಪಡದೆ ಕೂತು ಉಣ್ಣುವ ಮೈಗಳ್ಳತನವು ಮನುಷ್ಯ ಜಾತಿಯ ಮನಸ್ಸಿನಲ್ಲೆಲ್ಲಾ ಹಣಿಕೆ ಹಾಕುತ್ತಿರುತ್ತದೆ. ಅಲ್ಲದೆ ತಾನೆಂಥವನಿದ್ದರೂ ಅನ್ಯರು ತನ್ನನ್ನು ದೂಷಿಸಬಾರದೆಂದೂ ಆಶಿಸುತ್ತಾನೆ. ಅಲ್ಲದೆ ಏನಾದರೂ ತನ್ನ ಜೀವ ಉಳಿಸಿಕೊಳ್ಳಬೇಕೆಂಬುದು ಅವನ ಸ್ವಭಾವವಾಗಿದೆ. ಯಾವನೂ ತನಗೆ ಕೇಡಾಗಲೆಂದು ಬಯಸಲಾರನು. ಹೇಗಾದರೂ ಆಗಲಿ. ಆದರೆ ತನ್ನ ಹಿತವಾಗ ಬೇಕೆಂದು ಎಣಿಸುತ್ತಾನೆ. ಮೈಗಳ್ಳತನ, ಮಾನ, ಜೀವದಾಶೆ, ಶುಭದಾಶೆ ಮುಂತಾದ ಜಾತಿ ಸ್ವಭಾವಗಳೇ ಮಾನವನ ಎಲ್ಲಾ ಓಡಾಟಗಳಿಗೂ ಮೂಲವಾಗಿವೆ. ಇನ್ನೊಬ್ಬ ರನ್ನು ವಂಚಿಸಿ ತನ್ನ ಕೆಲಸ ಸಾಧಿಸಬೇಕೆಂದೊಮ್ಮೆ ಸುಳ್ಳಾಡಿದರೆ ಇನ್ನೊಮ್ಮೆ ಜೀವದ ಭಯದಿಂದ ಸುಳ್ಳಾಡುತ್ತಾನೆ. ಭಲೇ ಎನಿಸಿಕೊಳ್ಳುವದಕ್ಕೆ ಒಮ್ಮೆ ಸುಳ್ಳಾಡು ತ್ತಿದ್ದರೆ, ನಗಚಾಟಿಕೆಗೆಂದು ಇನ್ನೊಮ್ಮೆ ಸುಳ್ಳಾಡುತ್ತಿರುತ್ತಾನೆ. ತನ್ನಲ್ಲಿದ್ದ ವಸ್ತು ವನ್ನು ಕಳಕೊಳ್ಳಬಾರದೆಂದೊಮ್ಮೆ ಸುಳ್ಳಾಡಿದರೆ ಇನ್ನಾವ ಕಾರಣವೂ ಇಲ್ಲದೆ ಒಮ್ಮೊಮ್ಮೆ ಸುಮ್ಮ ಸುಮ್ಮನೆ ಸುಳ್ಳು ಕೊಚ್ಚಿ ಬಿಡುತ್ತಾನೆ. ಹೀಗೆ ನಾವು ಸುಳ್ಳಾಡು ವದಕ್ಕೆ ನಮ್ಮ ಮನಸ್ಸಿನ ಎಷ್ಟೋ ದೌರ್ಬಲ್ಯಗಳೂ ದುರ್ಗುಣಗಳೂ ಕಾರಣವಾಗಿವೆ. ಮೋಸಕ್ಕಾಗಿ, ಮಾನಕ್ಕಾಗಿ, ಭಯಕ್ಕಾಗಿ, ವಿನೋದಕ್ಕಾಗಿ, ರಕ್ಷಣೆಗಾಗಿ, ವಿನಾ ಕಾರಣವಾಗಿ, ಸ್ವಾಭಾವಿಕವಾಗಿ ಹೀಗೆ ಸುಳ್ಳು ಹೇಳುವ ರೀತಿಗಳು ಭಿನ್ನ ಭಿನ್ನ ವಾಗಿವೆ. ಇವುಗಳಲ್ಲಿ ಅನ್ಯರಿಗೆ ಮೋಸ ಮಾಡುವ ಸುಳ್ಳಂತೂ ಮಹಾಘಾತಕ ವೆಂದು ಸ್ವಲ್ಪ ಬುದ್ಧಿಯುಳ್ಳವರಿಗೂ ಕೂಡ ತಿಳಿಯುತ್ತದೆ. ಇನ್ನು ಒಣಾ ಜಂಬ ಬೆಳಿಸಿಕೊಳ್ಳುವದಕ್ಕಾಗಿ ಸುಳ್ಳು ಹೇಳುವದು ಸ್ವಲ್ಪ ವಿಚಾರ ಬಂದವರಿಗೆ ಅನುಚಿತ ವಾಗಿ ತೋರುತ್ತದೆ. ಆದರೆ ಜೀವಭಯದಿಂದ ಆಡುವ ಸುಳ್ಳನ್ನು ತಪ್ಪಿಸುವದಕ್ಕೆ ಜ್ಞಾನಿಯ ಹೊರತು ಇನ್ನಾರಿಗೂ ಸಾಧ್ಯವಿಲ್ಲ. ಇನ್ನು ವ್ಯವಹಾರದಲ್ಲಿ ಸಣ್ಣ ಪುಟ್ಟ ಕಡಕಟ್ಟುಗಳ ಸಲುವಾಗಿ ಸುಳ್ಳಾಡತಕ್ಕದ್ದನ್ನು ಬಿಡುವದಕ್ಕೆ ನಿಸ್ಸಂಗಿಯಾದ ಬೈರಾಗಿಯ ಹೊರತು ಸಂಸಾರಿಕರೆಂಬವರಿಗೆ ಸಾಧ್ಯವಿಲ್ಲ. ಫಲವಿಲ್ಲದೆ ಪ್ರಾಪ್ತಿ

ಯಿಲ್ಲದೆ ಹೊತ್ತು ಕಳೆಯುವದಕ್ಕೆ ವಿನಾಕಾರಣವಾಗಿ ಏನಾದರೊಂದು ಹಾಳು ಸಂಗತಿಯನ್ನು ಕಲ್ಪಿಸಿ ಹರಟೆ ಹೊಡೆಯುವವರೂ ಹಲಕೆಲವರಿರುತ್ತಿರುತ್ತಾರೆ. ಆದರೆ ವಿಚಾರವಂತರಿಗದು ದೂರದಲ್ಲಿರುತ್ತದೆ. ಇನ್ನೇನು ? ಹೀಗೆ ನಾನಾ ಕಾರಣಗಳಿಂದ ಸುಳ್ಳಾಡಿ ಸುಳ್ಳಾಡಿ ಸುಳ್ಳು ಹೇಳುವದೊಂದು ಸ್ವಭಾವವೇ ಆಗಿಬಿಡುವ ಸಂಭವವು ಹೆಚ್ಚು. ಎಲ್ಲಾ ತರದ ಸುಳ್ಳುಗಳನ್ನು ಬಿಟ್ಟರೂ ಈ ಸ್ವಭಾವದ ಸುಳ್ಳು ಎಷ್ಟೋ ದಿನ ನಮ್ಮ ಬೆನ್ನು ಬಿಡುವದಿಲ್ಲ. ಒಮ್ಮೊಮ್ಮೆ ಹೆರವರ ಕಲ್ಯಾಣಕ್ಕೂ ಜೀವ ಉಳಿಸುವದಕ್ಕೂ ಮನುಷ್ಯನು ಸುಳ್ಳಾಡುವದುಂಟು. ಕರುಣದಿಂದಾಡುವ ಇಂಥ ಸುಳ್ಳು ಒಳ್ಳೆಯದೇ ಎಂದು ಬಾಳುವೆವಂತರಿಗೆಲ್ಲಾ ತಿಳಿದ ಮಾತಾಗಿದೆ. ಆದರೆ ಒಂದಾನೊಂದು ವಿಧದ ವ್ರತಿಗಳೂ ಶಾಸ್ತ್ರಜ್ಞರೂ ಯಾವ ಬಗೆಯಿಂದಲೂ ಸುಳ್ಳನ್ನೇ ಆಡ ಕೂಡದೆಂದು ಹೇಳುತ್ತಾರೆ. ಆದರೆ ಇಂಥ ನಿಯಮವನ್ನು ಪಾಲಿಸುವುದು ಸರ್ವಸಂಗ ಪರಿತ್ಯಾಗಿಗಳಾದ ಯತಿಗಳಿಗೆ ಸಾಧ್ಯವೇ ಹೊರತು, ಬಾಳುವೆವಂತರಿಗೆ ಇದು ಸಾಧ್ಯವಲ್ಲ. ಇನ್ನೊಂದು ಬಗೆಯಿಂದ ಹೇಳುವ ಭಗವದ್ಭಕ್ತರೂ ಇದ್ದಾರೆ. ಅವರು ಹೇಳುವದೇನೆಂದರೆ ನಮಗೆ ಸುಳ್ಳಿಗೂ ಮಹತ್ವವಿಲ್ಲ; ಸತ್ಯಕ್ಕೂ ಮಹತ್ವವಿಲ್ಲ. ನಮ್ಮ ಹಿತಾಹಿತಗಳ ಚಿಂತೆಯೂ ಇಲ್ಲ; ಪರರ ಹಿತಾಹಿತಗಳ ಹಂಗೂ ಇಲ್ಲ. ಏನಾದರೇನು, ಏನು ಹೋದರೇನು, ನಮ್ಮ ತಂದೆ ಜಗದೊಡೆಯನಿಟ್ಟಂತೆ ಇರುವೆವು. ಕುಣಿಸಿದಂತೆ ಕುಣಿಯುವೆವು. ನಮಗೆ ಸ್ವಬುದ್ಧಿವಂತಿಕೆಯ ಕಾರಣವಿಲ್ಲವೆಂದು ಘಂಟಾಘೋಷವಾಗಿ ಹೇಳುವರು. ಲೌಕಿಕರಿಗೆ ಇದು ಮಹಾ ಅನೀತಿಯೆಂದು ಕಾಣಬಹುದು. ಆದರೆ ದೇವರಿದ್ದದ್ದೇ ಆದರೆ ಇಂಥವರೂ ಕೂಡ ಧನ್ಯರೇ ಸರಿ. ಇದೇನೇ ಇರಲಿ. ಈ ಸತ್ಯ ಅಸತ್ಯ ಮುಂತಾದ ತೊಡಕೆಲ್ಲಾ ಯಾರಿಗೆ? ಇನ್ನೊಬ್ಬರ ಸಂಚಾರ ಸಹವಾಸವುಳ್ಳ ನಮ್ಮಂಥಾ ಬಾಳುವೆವಂತರಿಗೇ ಸರಿ. ಆದರೆ ಗಿರಿಕಾನನದಲ್ಲಿ ತಪೋನಿರತರಾದ ಏಕಾಂತಿಗಳಿಗೆ ಇದೆಲ್ಲಾ ತೊಡಕು ಯಾತಕ್ಕೆ ಇದ್ದೀತು ? ಇನ್ನೊಬ್ಬರ ಕೂಡ ಬಳಕೆಯೇ ಇಲ್ಲದಿದ್ದರೆ ಸತ್ಯವೇ ಆಗಲೊಲ್ಲದೇಕೆ ಅಸತ್ಯವೇ ಆಗಲೊಲ್ಲದೇಕೆ ಅವರಿಗೆ ಇವುಗಳ ಪ್ರಸಂಗವೇ ಇಲ್ಲ. ಆದ್ದರಿಂದಲೇ ಲೌಕಿಕದ ನಡಾವಳಿಗೂ ಯತಿಗಳ ನಡಾವಳಿಗೂ ಹೀಗೆ ಮಹದಂತರವುಂಟಾಗುತ್ತದೆ. ಲೌಕಿಕದಲ್ಲಿದ್ದು ಯತಿಧರ್ಮವನ್ನು ಪಾಲಿಸುವುದಕ್ಕೆ ನಿಂತರೆ ಬಹಳೇ ಗಲಭೆಯುಂಟಾಗುತ್ತದೆ. ಬಾಳುವೆವಂತನು ಯತಿಧರ್ಮವನ್ನು ಆಶ್ರಯಿಸಿದರೆ ಅಂತರಂಗದಲ್ಲೇ ಅದನ್ನಾಶ್ರಯಿಸಿ ಹೊರಗೆ ಎಲ್ಲಾ ಲೌಕಿಕರಂತೆಯೇ ಇರಬೇಕಾಗುತ್ತದೆ. ಇಲ್ಲದಿದ್ದರೆ ಗಲಭೆಗೆ ಕಾರಣವಾಗಿ ಒಣಾ ಉಪಟಳಗಳು ಏಳುವದರಿಂದ ಇಂಥವರು ಲೌಕಿಕರ ಸಂಚಾರ ಸಹವಾಸವಿಲ್ಲದಂತೆ ವಾಸಮಾಡಬೇಕಾಗುವದು. ಇದೇನೇ ಇರಲಿ, ಸುಳ್ಳಿನಿಂದ ಅನ್ಯರಿಗೆ ಕಷ್ಟನಷ್ಟಗಳುಂಟಾಗುವವಲ್ಲದೆ ಸ್ವತಃ ತನ್ನ ಮನಸ್ಸಿಗೆ ಅಶಾಂತಿಯುಂಟಾಗುತ್ತದೆ. ಆದ್ದರಿಂದಲೇ ಇದನ್ನು ಲೌಕಿಕ ದೃಷ್ಟಿಯಲ್ಲಿ ಅನೀತಿಯೆಂದೂ ಪಾರಮಾರ್ಥಿಕ ದೃಷ್ಟಿಯಲ್ಲಿ ಅಧರ್ಮವೆಂದೂ ಹೇಳುವರು. ಆದರೆ ಧರ್ಮಾ

ಧರ್ಮ, ಶುಭಾಶುಭ, ಪಾಪಪುಣ್ಯ ಮುಂತಾದ ದ್ವಂದ್ವಗಳನ್ನೇನೂ ಲೆಕ್ಕಿಸದ ಯತಿಗಳ ರೀತಿ ಎಂತಿದ್ದರೂ ಇರಲಿ. ಅದರಲ್ಲಿ ಕೈ ಹಾಕುವದಕ್ಕೆ ನಮಗೆ ಕಾರಣ ವಿಲ್ಲ. ನಮ್ಮದನ್ನು ನಾವು ತೊಳಕೊಂಡರೆ ಸಾಕು.

ಇನ್ನೂ ಸತ್ಯದ ಪರಿಗಳನ್ನು ಯೋಚಿಸುವಾ, ನಾವು ಎಂದೆಂದಿಗೂ ಯಾವ್ಯಾವ ರೀತಿಯಲ್ಲಿಯೂ ಸುಳ್ಳನ್ನೇ ಆಡಲಾರೆವೆಂದು ಪ್ರತಿಜ್ಞೆಮಾಡಿ ನಿಷ್ಠೆಯಿಂದ ಇರು ವುದು ಸತ್ಯದ ವ್ರತವಾಗಿದೆ. ಆದರೆ ಇದು ಬಳ್ಳೇ ಕಠೋರವಾದ ಕೆಲಸ, ಎಲ್ಲರಿಗೂ ಇದು ಸಾಧ್ಯವಿಲ್ಲ. ನಮ್ಮ ಮನಸ್ಸಿನಲ್ಲಿ ಅಸತ್ಯದ ಬಗೆಗೆ ಒಲವಿಲ್ಲದಂತಾದರೆ ತೀರಿತೆಂದೂ, ಅಪ್ಪೀ ತಪ್ಪೀ ಒಮ್ಮೊಮ್ಮೆ ಸುಳ್ಳಾಡುವ ಪ್ರಸಂಗ ಬಂದರೆ ಆಗ ಸತ್ಯದ ಮಹತ್ವವನ್ನು ಮರೆಯದೆ ಅತಃಕರಣ ಶುದ್ಧಿಗೆ ಭಂಗಬಾರದಂತೆ ನೋಡಿ, ಅನ್ಯರಿಗೆ ಅಹಿತವಾಗದಂತೆಯೂ ತಾನು ಪೇಚಿನಿಂದ ಉಳಿದುಕೊಳ್ಳುವಂತೆಯೂ ಸತ್ಯವನ್ನು ಮರೆಮಾಚಿ ಮಾತಾಡಿದರೆ ತಪ್ಪೇನೆಂದೂ ಕೇಳಬಹುದು. ಹೌದು, ನಮ್ಮ ಶಕ್ತಿ ತುಸುವಾಗಿದ್ದಾಗ ಬಹಳ ಭಾರವನ್ನು ಎತ್ತಲಿಕ್ಕಾಗುವದಿಲ್ಲ. ಇದು ಸರಿ. ಹೊರಲಿಕ್ಕಾಗದ್ದನ್ನು ಹೊರಬೇಕೆಂದು ನಿಂತರೆ ನಾಶಕ್ಕೆ ಕಾರಣವಾಗುವದು. ನಮ್ಮ ಶಕ್ತಿಯನ್ನು ಅರಿತು ನಮ್ಮ ಕೈಯಿಂದಾಗುವಷ್ಟರಲ್ಲಿ ಮಾತ್ರ ಕೊರತೆ ಬೀಳ ಗೊಡಬಾರದು. ಎಷ್ಟೋ ಜನ ಉಪದೇಶಕರು ಅಳತೆ ಮೀರಿ ಸಾಧನೆಗಳನ್ನು ಹೊರಿಸಿಯೇ ಕೈಗೆ ಸಿಕ್ಕವರನ್ನು ಕೆಲಸಕ್ಕೆ ಬಾರದಂತೆ ಮಾಡುತ್ತಾರೆ. ಸಣ್ಣವರು ದೊಡ್ಡ ತುತ್ತುಗಳಿಗೆ ಬಾಯಿಹಾಕಿ ಫಲವಿಲ್ಲ. ಬೆಳೆಬೆಳೆದಂತೆ ದೊಡ್ಡದೊಡ್ಡ ಮಾತಿಗೆ ಕೈಹಾಕುತ್ತ ಹೋಗಬೇಕು. ಇದಲ್ಲದೆ ನಮ್ಮ ಬೆಲೆಯು ನಮ್ಮ ಹೊರಗಿನ ಕೃತಿಗಳನ್ನು ಅವಲಂಬಿಸಿ ಕೂತಿರಬಾರದು. ಹೊರಗೆ ಒಮ್ಮೊಮ್ಮೆ ಕಾರಣಾಂತರ ಗಳಿಂದಲೂ ದುರ್ಬಲತೆಯಿಂದಲೂ ಹಲಕೆಲವು ಪ್ರಮಾದಗಳುಂಟಾಗಬಹುದು. ಆದರೆ ಒಳಗೆ ಮನಸ್ಸೇ ಮೂಲತತ್ತ್ವದಿಂದ ಭಿನ್ನವಾಗಿರಬಾರದು, ಮನದಲ್ಲಿ ನಿಷ್ಠೆ ಅಚ್ಚಳಿಯದೆ ಅಚ್ಚೊತ್ತಿರಬೇಕು. ಆದರೆ ಹೊರಗೆ ಕಾರಣಾಂತರದಿಂದ ನಿಷ್ಠೆ ಒಂದೊಂದು ಸಲ ಮುರಿದರೂ ಅಡ್ಡಿಯಿಲ್ಲ. ಅದು ಅವನ ಅಂತಃಕರಣದ ದೋಷ ವಲ್ಲ; ಅವನ ಹೇಡಿತನದ ದೋಷವು. ಇನ್ನು ಕೆಲವರು ತಾವು ಸತ್ಯವಂತರಾಗಿ ಇರುವುದಲ್ಲದೆ ತಮ್ಮ ಇದಿರಿಗೆ ನಡೆಯುವ ಅಸತ್ಯ ಅನ್ಯಾಯಗಳನ್ನೆಲ್ಲಾ ನಿರ್ಭಯ ದಿಂದ ಖಂಡಿಸುವರು. ಇದು ಎಲ್ಲಕ್ಕೂ ಮೇಲಿನ ಅವಸ್ಥೆ. ಇದು ಮೊದಮೊದಲಿಗೆ ಸತ್ಯವನ್ನು ಆಶ್ರಯಿಸಿದವರಿಗೆ ಸಾಧ್ಯವಿಲ್ಲ. ಇದು ಸತ್ಯಾಗ್ರಹವು, ಸತ್ಯದ ವ್ರತ ವಿಲ್ಲದವರಿಗೆ ಇದು ಸಾಧ್ಯವಿಲ್ಲ, ಆದರೆ ಅಟ್ಟದ ತುದಿಗೆ ಹೋಗಿ ನಿಂತವನನ್ನು ಕಂಡು ಅಯ್ಯೋ ಇದೆಂಥಾ ಅಸಾಧ್ಯವಪ್ಪಾ ! ಇಷ್ಟು ಎತ್ತರ ಹೇಗೆ ಹೆಜ್ಜೆಯೆತ್ತಿ ಇಡಲಿಕ್ಕಾದೀತು ! ಎಂದು ಎದೆಗೆಡುವ ಕಾರಣವಿಲ್ಲ. ಎಷ್ಟೆತ್ತರಾದರೂ ಅದಕ್ಕೆ ಸೋಪಾನವಿಲ್ಲದೆ ಇಲ್ಲ. ಕೆಳಗೇ ನಿಂತಾಗ ಮೊದಲನೇ ಮೆಟ್ಟಲು ಹತ್ತುವ

ದಕ್ಕೆ ಎಷ್ಟು ಬಿಗಿಯಾಗಿ ಕಾಣುವದೋ ಅದನ್ನೇರಿದ ಮೇಲೆ ಅದರ ಮುಂದಿನ ಮೆಟ್ಟಲೂ ಅದರಷ್ಟೇ ಎತ್ತರವಾಗಿ ಕಾಣುವದು. ಹೀಗೆ ಎಷ್ಟು ಮೆಟ್ಟಲುಗಳಿದ್ದರೇನು ? ಒಂದನ್ನೇರಿದ ಬಳಿಕ ಮುಂದಿನದು ತಾನೇ ಸುಲಭವಾಗುವದು. ನಮಗೀಗ ಸತ್ಯದ ವ್ರತವಾಗಲಿ ಸತ್ಯದ ಆಗ್ರಹವಾಗಲಿ ಯೋಚಿಸಬೇಕಾಗಿಲ್ಲ. ಮೊದಲಿಗೆ ನಮಗೆ ಸತ್ಯನಿಷ್ಠೆಯುಂಟಾದರೆ ಸಾಕು. ಸತ್ಯದ ಮಹತ್ವವು ಗೊತ್ತಾಗಿ ಅದು ನಮಗೆ ಅಗತ್ಯದ್ದೆಂದು ಎನಿಸಹತ್ತಿ ತಪ್ಪಹೆಜ್ಜೆ ಇಡುವದಕ್ಕಾದರೂ ನಾವು ಮೊದಲಿಗೆ ಸಿದ್ಧರಾಗುವಂತಾದರೆ ಸಾಕು.

ಸತ್ಯದ ಮಹತ್ವವನ್ನು ಚೆನ್ನಾಗಿ ಯೋಚಿಸಿ ಅರಿತುಕೊಳ್ಳುವದೇ ನಮ್ಮ ಮೊದಲಿನ ಕೆಲಸ. ಆಮೇಲೆ ನಮ್ಮ ಆಳವು ಎಷ್ಟೆಂಬುದನ್ನು ಈ ಅಳವಿಗೆ ಸತ್ಯವನ್ನು ಎಷ್ಟರಮಟ್ಟಿಗೆ ಪಾಲಿಸಲಿಕ್ಕೆ ಶಕ್ಯವಿದೆಯೆಂಬುದನ್ನು ನಿಶ್ಚಯಿಸಿಕೊಳ್ಳುವುದು ಎರಡನೆಯ ಕೆಲಸ. ಆಮೇಲೆ ತಪ್ಪುತಡೆಯಾಗಿ ನಾವು ನಿಶ್ಚಯಿಸಿದ್ದರಲ್ಲೇ ಕೊರತೆಯಾದರೆ ನಿರಾಶೆಪಡದೆ ಮುಂದೆ ಮತ್ತೆ ಹೀಗಾಗದಂತೆ ಎಚ್ಚರಪಡಬೇಕೆಂಬುದು ಮೊದಲನೇ ಹಂಚಿಕೆ ಹಾಕಿಟ್ಟುಕೊಂಡಿರುವುದು ಮೂರನೆಯ ಕೆಲಸ. ಇಷ್ಟಿಲ್ಲದೆ ಈ ಹಾದಿಗೆ ಹೆಜ್ಜೆಯಿಡಬಾರದು. ಆಮೇಲೆ ನಾವು ಮುಂದೆ ಮಾಡಬೇಕಾದದ್ದೇನಂದರೆ ಸದಾ ನಾವು ಸತ್ಯವಂತರಾಗುವೆವೆಂದು ನೆನಪಿನಲ್ಲಿಡುವುದು; ಮತ್ತು ವ್ಯರ್ಥವಾಗಿ ಹೋಗುವ ಜನ್ಮದಲ್ಲಿ ಇಷ್ಟಾದರೂ ಸಾರ್ಥಕವಾಯಿತಲ್ಲಾ ಎಂದು ಹಿಗ್ಗು ಹಚ್ಚಿಕೊಳ್ಳುವದು, ಹಿಗ್ಗಿನ ಬಲವಿಲ್ಲದೆ ಸಾಮಾನ್ಯರಿಗೆ ಏನೂ ಮಾಡುವದಕ್ಕೆ ಆಗುವಂತೆ ಇಲ್ಲ. ಇಷ್ಟು ಅನುಸರಿಸುವುದು ನಮ್ಮ ಕೆಲಸ. ಇದರ ಮುಂದಿನದೆಲ್ಲಾ ಈ ಸಾಧನವು ಯಶಸ್ವಿಯಾದಂತೆ ಸಾಧ್ಯವಾಗುತ್ತ ಬರುತ್ತದೆ.

ಮುಖ್ಯವಾಗಿ ನಾವು ಯಾವಾಗಲೂ ಸತ್ಯಕ್ಕೆ ಪೋಷಕವಾದ ಪ್ರಸಂಗಗಳನ್ನು ತಪ್ಪಿಸಿಕೊಳ್ಳಬಾರದು. ಹೇಗೆಂದರೆ ನಾವು ಏನೋ ಒಮ್ಮೆ ಅಪ್ಪೀ ತಪ್ಪೀ ಯೋಗ್ಯ ಕಾರಣವಿಲ್ಲದೆ ಸ್ವಭಾವದೋಷದಿಂದ ಸುಳ್ಳಾಡಿದ್ದೇವೆಂದು ತಿಳಿಯುವಾ. ಆಗ ಅದು ನಮ್ಮ ಲಕ್ಷ್ಯಕ್ಕೆ ಬಂದರೆ ಆ ಕ್ಷಣದಲ್ಲಿಯೇ ಅಲ್ಲಿದ್ದವರ ಮುಂದೆ ನಮ್ಮ ತಪ್ಪನ್ನು ಒಪ್ಪಿಕೊಂಡು ಸತ್ಯವಾಗಿದ್ದುದನ್ನು ಹೇಳಿಬಿಡಬೇಕು. ಆದರೆ ಆಗ ಜೀವನವು ನಾಚಿ ಮತ್ತೊಮ್ಮೆ ಸುಳ್ಳಾಡದಂತೆ ಎಚ್ಚರಿದ್ದರಾಯಿತು. ಈಗ ನಗೆಗೇಡಿ ಮಾಡಿಕೊಳ್ಳುವುದು ಹೇಗೆ ಎಂದೆನ್ನಬಹುದು. ಆದರೆ ಇಂಥ ಪ್ರಸಂಗಗಳಲ್ಲೆಲ್ಲಾ ಇಂಥ ವಿಚಾರಕ್ಕೆ ಎಡೆಗೊಡದ ತಪ್ಪೊಪ್ಪಿಕೊಂಡೇ ಬಿಡಬೇಕು. ಅಂದರೆ ಬೇಗನೆ ಸಾಧ್ಯವಾಗುವದು. ಕೆಲವರಿಗೆ ಈ ರೀತಿಯು ಪ್ರಶಸ್ತವಿಲ್ಲದೆಯೂ ಇರುವ ಸಂಭವವಿದೆ. ಅಂಥವರು ಜೀವನದಲ್ಲಿ ಒಮ್ಮೆ ನಾಚಿಕೆ ಪಟ್ಟಿದ್ದನ್ನೇ ಚೆನ್ನಾಗಿ ನೆನಪಿನಲ್ಲಿ ಹಿಡಿದು ಪುನಃ ಅಂಥ ತಪ್ಪಾಗದಂತೆ ಹೆಚ್ಚು ಎಚ್ಚರ ಹಿಡಿಯಬೇಕಾಗುವದು. ಇದೇ ಸತ್ಯಮಾರ್ಗದ ಕೈಕೋಲು.

ಇಂಥ ಸತ್ಯ ಪಾಲನೆಗಿಂತ ಹೆಚ್ಚಿನ ಧರ್ಮಾಚರಣೆ ಇನ್ನೇನು ? ಸತ್ಯನಿಷ್ಠನ ನಾಸ್ತಿಕತನವು ಪರಂಪರಾ ಮೂಢರಾದ ಬಾಹ್ಯಾಚಾರಿಗಳ ಆಸ್ತಿಕತನಕ್ಕಿಂತ ಶ್ರೇಷ್ಠ ತರದ್ದಾಗಿದೆ. ಇಂಥ ನಾಸ್ತಿಕರು ಧರ್ಮವನ್ನು ಬಾಯಿಯಿಂದ ಒಪ್ಪಿಕೊಳ್ಳದಿದ್ದರೂ ಕೈಯಿಂದ ಅದು ತಾನಾಗಿಯೇ ಆಚರಿಸಲ್ಪಡುತ್ತದೆ. ಆದರೆ ಪರಂಪರಾ ಮೂಢ ರಾದ ಆಸ್ತಿಕರು ಎಷ್ಟೇ ಧರ್ಮ ಮಹಾತ್ಮ್ಯವನ್ನು ಹೇಳಿಕೊಂಡರೂ ಅಂತಃಕರಣದ ಕೃತಿಗಳಲ್ಲಿ ಅವರು ಕಗ್ಗನಾಸ್ತಿಕರೇ ಇದ್ದಾರೆ. ಇಲ್ಲಿ ಸತ್ಯಾಸತ್ಯವಾಗಿ ನಡೆದ ಒಂದು ವಿದ್ಯಮಾನವನ್ನು ಹೇಳುತ್ತೇನೆ. ಹೆಸರು, ಸ್ಥಳ ಮುಂತಾದ್ದರ ಕಾರಣವೇನೂ ಇಲ್ಲ. ಸಂಗತಿಯನ್ನು ಮಾತ್ರ ಇದ್ದಕ್ಕಿದ್ದಂತೆ ಹೇಳುತ್ತೇನೆ.

ಒಬ್ಬ ಬ್ರಾಹ್ಮಣರವನು ತನ್ನ ಗೆಳೆಯನಾದಂಥ ಒಬ್ಬ ಜೈನರವನ ಮನೆಯಲ್ಲಿ ಊಟಕ್ಕೆ ಕುಳಿತಿದ್ದಾಗ ಒಬ್ಬ ತೋರುನಾಮದ ಆಚಾರಿಯು ಅಲ್ಲಿಗೆ ಬಂದನು. ಆಗ ಅವನು ಇದನ್ನು ನೋಡಿ ಕಿವಿಯ ಮೇಲೆ ಕೈಯಿಟ್ಟುಕೊಂಡು, ಅಯ್ಯೋ ಇದೆಂಥಾ ಭ್ರಷ್ಟಾಚಾರ ! ಎಂದುಕೊಳ್ಳುತ್ತಲಿದ್ದಾಗ ಊಟಕ್ಕೆ ಕುಳಿತವನು – ಏನರೀ ಸ್ವಾಮೀ ಈತ ನನ್ನ ಗೆಳೆಯ; ಮೇಲಾಗಿ ಸಾತ್ವಿಕ; ಅಲ್ಲದೆ ಸುಶೀಲ. ಪ್ರೇಮದ ಆಗ್ರಹಕ್ಕಾಗಿ ಏನೋ ನಾನು ಉಂಡೆ. ಇದು ನಿಮ್ಮಂಥವರ ದೃಷ್ಟಿಯಲ್ಲಿ ತಪ್ಪಾದರಾಗಲಿ, ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ನನ್ನದು ಭ್ರಷ್ಟಾಚಾರವಿರಲಿ, ಆದರೆ ಸ್ವತಃ ತಮ್ಮಂಥವರು ಆ ದುರಾಚಾರಿಗಳಾದ ಬಾಜಾರ ಬಸವಿಯಲ್ಲಿ ಹೋಗಿ...... ಬರುತ್ತಿರುವುದು ಮಾತ್ರ ಶಿಷ್ಟಾಚಾರ. ನಮ್ಮ ಕೃತಿಯಿಂದ ಕುಲವು ಕೆಡುತ್ತದೆ. ನಿಮ್ಮವರಿಂದ ಅಚುತಾ ಉಳಿಯುತ್ತದೆ. ಹೌದಲ್ರೀ ? ! ಎಂದಾಗ ಪಾಪ ಅವರೇನು ಉತ್ತರ ಕೊಡಬೇಕು ! ಲೋಕದಲ್ಲಿ ಈಗ ಇಂಥ ಉದಾಹರಣೆಗಳು ಹೇರಳ, ತಾನು ಮಾಡೋದು ಹಾದರ; ಆದರೆ ದೇವರ ನೈವೇದ್ಯಕ್ಕಿಂತ ಮುಂಚೆ ಮಿಸಲು ಮುರಿದ ಮಗನಿಗೆ ಪಾಪದ ಪುರಾಣ ಹೇಳುವ ತಾಯಂದಿರನ್ನು ನೋಡಿದ್ದೇನೆ. ಗಂಟಗಳ್ಳ ತನದಿಂದ ಪರರ ಕುತ್ತಿಗೆ ಕೊಯ್ಯುವವರು ತಾವಿದ್ದರೂ ಮಡಿಯಲ್ಲಿದ್ದಾಗ ಅನ್ಯರ ಧಕ್ಕೆ ಹತ್ತಿದರೆ ಕಿಡಿಕಿಡಿಯಾಗುವ ಮೂಢರಿಗೇನೂ ಕೊರತೆಯಿಲ್ಲ.

ಕಾಯದ ಆಚಾರಗಳಿಗೆ ಅಳತೆಗೆಟ್ಟು ಮಹತ್ವಕೊಟ್ಟು ವಾಚಾಮನಸ್ಸುಗಳ ಆಚರಣೆಗೆ ಏನೇನೂ ಲಕ್ಷ್ಯವನ್ನೇ ಹಾಕದ ಇಂದಿನ ಧಾರ್ಮಿಕತನವು ಅಪಹಾಸ್ಯಕರ ವಾಗಿದೆ. ಹಾದರಿಗರನ್ನು ಕೇಳುವವರಿಲ್ಲ. ಕುತ್ತಿಗೆಗೊಯ್ಕರನ್ನು ಕೈಹಿಡಿಯು ವವರಿಲ್ಲ. ಇಂಥದೇನಿದ್ದರೂ ಇಂದು ಮುಕ್ತದ್ವಾರ. ಆದರೆ ನೈಮಿತ್ತಿಕ ಆಚರಣೆ ಗಳಿಗೆ ತಪ್ಪಿದ ಕೂಡಲೆ ಮಾತ್ರ ನಾಮುಂದೆ ನೀಮುಂದೆಂದು ಕೆಲಸಕ್ಕೆ ಬಾರ ದವರೆಲ್ಲಾ ಆಚಾರ ಹೇಳಲಿಕ್ಕೆ ಬರುತ್ತಾರೆ. ಅಯ್ಯೋ, ಇದೆಂಥಾ ಅವಿಚಾರ ! ಎಂಥಾ ಅಜ್ಞಾನ ! ಎಂಥಾ ಮೂಢತನ ! ಹೊಲೆಯರನ್ನು ಮುಟ್ಟಿಸಿಕೊಂಡು ಹಾಗೇ ಮನೆಯಲ್ಲಿ ಹೋದರೆ ತೀರಿತು, ಎಲ್ಲೆಲ್ಲಿಯೂ ಗಲಭೆಯೇ ಗಲಭೆ, ಇದರಲ್ಲಿ

ಯಾರದೇನು ನಷ್ಟವಾಯಿತೋ, ದೇವರ ಮನೆಯೇನು ಹಾಳಾಯಿತೋ ತಿಳಿಯದು, ಆದರೆ ಪ್ರತ್ಯಕ್ಷ ಹೊಲೆಗೆಲಸಮಾಡಿದವರಿಗೆ ಕೇಳುವವರಿಲ್ಲ. ಇಷ್ಟಾದರೂ ಅವನು ತೊಳಕೋ ಬಳಕೋ ಮಾಡಿದರೆ ತೀರಿತು, ಮೇಲೆ ಮತ್ತೆ ಅವನೇ ಮಹಾಧಾರ್ಮಿಕ ಶಿರೋಮಣಿ !

ಇಂದಿನ ಇಂಥಾ ವಿಪರೀತ ಕಾಲದಲ್ಲಿ ಆತ್ಮೋನ್ನತಿಯನ್ನು ಬಯಸುವವರು, ಸಮಾಜೋನ್ನತಿಯನ್ನು ಬಯಸುವವರು, ದೇಶೋನ್ನತಿಯನ್ನು ಬಯಸುವವರು, ಲೋಕಕಲ್ಯಾಣವನ್ನು ಆಶಿಸುವವರು ಸತ್ಯಾಶ್ರಯರಾಗಿ ಮುಂದುವರಿದಲ್ಲದೆ ಮಾರ್ಗವಿಲ್ಲ. ಒಳಗೆ ಸತ್ಯ ಅಚ್ಚೊತ್ತಬೇಕು. ಹೊರಗಿನ ಕೃತಿಗಳೆಲ್ಲ ಈ ಸತ್ಯ ನಿಷ್ಠೆಗೆ ಅನುಗುಣವಾಗಿ ಅನುಸರಿಸುವುದು ಕಾಣಬೇಕು. ಇಷ್ಟಿಲ್ಲದೆಹೋದರೆ ಸ್ವೋನ್ನತಿಯೂ ಇಲ್ಲ. ಪರೋನ್ನತಿಯೂ ಇಲ್ಲ. ಎಲ್ಲಾ ಬರೇ ಮಾತಿನ ಮೆರವಣಿಗೆಯಾಗಿ ಹೋಗುವದು. ತನ್ನನ್ನೇ ತಾನು ನೋಡಿಕೊಳ್ಳದೆ ಒಣಾ ಜಂಬ ಕೊಚ್ಚುತ್ತ ಸ್ವಸ್ವರೂಪಜ್ಞಾನವಿಲ್ಲದೆ ಮಬ್ಬಿನಿಂದ ಮೆರೆದಾಡಿ ಏನು ಫಲ? ಇಂಥವರು ಹೂಡಿದ್ದೆಲ್ಲಾ ಹುಡುಗರ ಆಟದಂತೆ ವ್ಯರ್ಥ ಶ್ರಮವೇ ಸರಿ. ತನ್ನ ಹಾಡೇ ತನಗೆ ಗೊತ್ತಿಲ್ಲದ ಪ್ರಾಣಿ ಇನ್ನೊಬ್ಬರ ಪಾಡಿಗೆ ಕೈಹಾಕುವದರಿಂದ ಏನು ಪ್ರಯೋಜನವಾದೀತು ? ತಾನು ಹೇಗಿದ್ದೇನೆಂಬುದನ್ನು ತನ್ನನ್ನು ಅನ್ಯರು ಹೇಗೆ ತಿಳಕೊಂಡಿದ್ದಾರೆಂಬುದನ್ನು ಯೋಚಿಸಿ ಅವೆರಡರಲ್ಲೂ ತಾಳುಮೇಳು ಉಳಿಯುವುದರ ಕಡೆಗೆ ಲಕ್ಷ್ಯವಿಲ್ಲದೆ ಬರೇ ಬಾಯಿಗೆ ಬಂದಂತೆ ಬಡಬಡಿಸುತ್ತ ಕಂಡಂತೆ ಕುಣಿದರೆ ಲೋಕೋಪಕಾರವೂ ಇಲ್ಲ; ಸ್ವೋಪಕಾರವೂ ಇಲ್ಲ. ಇಂಥವರು ಏನು ಮಾಡಬೇಕೆಂಬುದನ್ನು ಇನ್ನೊಬ್ಬರಾರೂ ಹೇಳಿಕೊಡಬೇಕಾದ ಅಗತ್ಯವಿಲ್ಲ. ತಮ್ಮ ಸ್ಥಿತಿಗೂ ತಮ್ಮ ಕೃತಿಗೂ ಲಕ್ಷ್ಯಗೊಟ್ಟರೆ ಮುಂದೆ ಏನು ಮಾಡಬೇಕೆಂಬುದು ತನ್ನಿಂದ ತಾನೇ ಗೊತ್ತಾಗುವದು.

ತನ್ನ ತಾ ಅರಿತರೆ
ತನ್ನ ಅರಿವೇ ಗುರು.

ಸತ್ಯವನ್ನು ಬಿಟ್ಟರೆ ಎಲ್ಲಾ ಅಸತ್ಯವೇ ಸರಿ.

ಉದ್ಧರೇದಾತ್ಮಾನಾತ್ಮನಮ್

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ.

ಜ. ಕ. ೮-೯, ಜುಲೈ ೧೯೩೦

# ಸತ್ಯವನ್ನು ಕುರಿತು

---

## ೧. ಸತ್ಯವೂ ಸಿದ್ಧಿಯೂ

ಓ ಪರಾತ್ಪರ ಸತ್ಯವೇ, ಬಯಲು ನಿನ್ನ ರೂಪವು. ಕಾಲ ನಿನ್ನ ಚಿತ್ತವು. ಶಕ್ತಿ ನಿನ್ನ ಮಿಸುಕು. ನಾದ ನಿನ್ನ ನುಡಿಯು. ಅಕ್ಷರವು ನಿನ್ನ ನಾಮವು. ಇದನರಿತವರೇ "ಅಮರಸ್ಯ ಪುತ್ರರು". ಯ ಏತದ್ವಿದುರಮೃತಾಸ್ತೇ ಭವಂತಿ.

ತುದಿಯಿಲ್ಲ ಮೊದಲಿಲ್ಲ ನಿನ್ನ ರೂಪಕ್ಕೆ, ಕೊನೆಯಿಲ್ಲ ಕಡೆಯಿಲ್ಲ ನಿನ್ನ ರೂಪಕ್ಕೆ. "ಜಗದಗಲ ಮುಗಿಲಗಲ, ಮಿಗೆಯಗಲ, ನಿಮ್ಮಗಲ" ಅಪರಂಪಾರ ಅನಂತಾ ನೀನಿಂಥ ಬಯಲ ಘನವು. "ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಂ."

ಕಾಲಪಥದಲ್ಲಿ ಕ್ರಮಗೊಳ್ಳುವದು ಜಗವು. ಚರಾಚರವೆಲ್ಲ ಕಾಲಾಧೀನವು. ಆಗುಹೋಗೆಲ್ಲ ಕಾಲನಿಯಮಿತವು. ಅಜಾತ ಅಕ್ಷಯ ನಿಧಿ ನಿನ್ನ ಕಾಲವು. ಕಾಲಾಯ ತಸ್ಮೈನಮಃ.

ನೀ ಮಿಸುಕಿದರೆ ಗಗನ ಗಟ್ಟಿಗೊಳ್ಳುವದಯ್ಯಾ. ನೀ ನೋಡಿದರೆ ಕತ್ತಲೆಗೆ ಕಣ್ಣೊಡೆವುದಯ್ಯಾ. ಅಪ್ರತಿಮ ಮಹಿಮಾ, ನಿನ್ನ ಶಕ್ತಿ ಅತಿಶಯ ಅಗಾಧವು. "ಪಂಗುಂ ಲಂಘಯತೇ ಗಿರಿಂ."

ನೋಟದಲ್ಲಿ ಭಾವ, ನಿಜದಲ್ಲಿ ನಿರ್ಭಾವ, ನಿನ್ನಾಟ ನೀ ನೋಡಿ ನಲಿದಲ್ಲಿ ನಾದೋತ್ಪತ್ತಿ. ಅದು ನಿನ್ನ ಉಕ್ಕಿದ ಉದ್ಗಾರ. ನಿನ್ನ ಈ ನುಡಿ ನಮ್ಮ ಮಾತಿನ ಮುಖ.

ಅಪಾರ ನಿಶ್ಶಬ್ದದಲ್ಲಿ ಅಗಾಧ ನಿನ್ನ ನಾಮವು ಓಗುಡುತ್ತದೆ. ಅಂತರ್ಯಾಮವು ಅಚ್ಚರಿಗೊಂಡು ಹೂಂಗುಡುತ್ತದೆ. ಇಂಥ ಮಧುರಮಿಲನದಲ್ಲಿ ಮೈದೋರಿತು ನಿನ್ನ ನಾಮ. "ಓಂ ಓಂ" ಇದರಾಚೆಗೆ ಶಬ್ದವಿಲ್ಲ ಶಬ್ದವಿಲ್ಲ "ಓಂ ತದ್ವಾಚಕಃ ಪ್ರಣವಃ."

ರವೀಂದ್ರ ನಿನ್ನ ಸುಳುವು ಹಿಡಿದು ಹಾಡುವ ಹಕ್ಕಿಯಾದ. ಗಾಂಧಿ ನಿನ್ನ ಗುರುತು ಹಿಡಿದು ನ ಭೂತೋ ನ ಭವಿಷ್ಯತಿ ಬಂಟನಾದ. ಅರವಿಂದ ನಿನ್ನ ನೆಲೆಯರಿತು ತಳ ಸೋಸುವದಕ್ಕೆ ಒಳ ಸೇರಿದ.

"ನಾನೊಬ್ಬ ಕವಿಯು ಮಾತ್ರ. ಜೊತೆಗಾರರನ್ನು ಉಲ್ಹಾಸಗೊಳಿಸಂತ್ತ, ಕಾಣದಿದ್ದರೂ ನೆಚ್ಚಿದ ಗುರಿಯನ್ನು ಬಣ್ಣಿಸಿ ಹಾಡುತ್ತ, ವಿರಾಮ ಸ್ಥಲಗಳ ಸೊಗಸು ಸೊಬಗಂಗಳನ್ನು ಎದೆಗೊಳಿಸುತ್ತ ಹೊರಟಿರುವ ದಾರಿಕಾರರಲ್ಲಿ ನಾನೂ ಒಬ್ಬ ಪಾಂತಸ್ಥನು. ನಾವು ದಾರಿಯ ದಣಿವು ಧೂಳಿಗಳನ್ನು ಮರೆಯಂದಿದ್ದರೂ ನಮ್ಮ ಯಾತ್ರೆಯ ಪೂರ್ಣತೆಗೆ ಅವುಗಳ ಅಗತ್ಯವನ್ನರಿತ ಮಾರ್ಗಸ್ಥರು ನಾವು."

— ರವೀಂದ್ರರು

"ನನ್ನಲ್ಲಿ ಅಜ್ಞೇಯವಾದವೂ ಇತ್ತು. ನಾಸ್ತಿಕತೆಯೂ ಇತ್ತು. ಸಂಶಯವಾದವೂ ಇತ್ತು. ದೇವರಿದ್ದ ಬಗೆಗೆ ಎಷ್ಟೂ ವಿಶ್ವಾಸವಿದ್ದಿಲ್ಲ. ಅವನ ಸಾನ್ನಿಧ್ಯವು ನನಗೆ ಏನೂ ಅನಿಸಿರಲಿಲ್ಲ. ಆದರೆ ಈಚಿಗೆ ದಿನದಿನಕ್ಕೆ ನನ್ನ ಬುದ್ಧಿಯಲ್ಲಿ ಮಂತ್ರೆ ಹೃದಯದಲ್ಲಿ, ಮೈಮನಗಳಲ್ಲೆಲ್ಲ ಹಿಂದೂಧರ್ಮದ ವಿವಿಧ ಸತ್ಯಗಳು ಅನುಭವಕ್ಕೆ ಬಂದವು. ಅವು ನನ್ನ ಜ್ವಲಂತ ಸ್ವಾನುಭವದ ವಿಷಯಗಳಾಗಿ ಬಿಟ್ಟವು. ವಸ್ತು ಮಾತ್ರದಲ್ಲೆಲ್ಲಾ ಭೌತಿಕ ವಿಜ್ಞಾನಕ್ಕೆ ನಿಲುಕದ ಪರಮರಹಸ್ಯಗಳು ಒಡಮೂಡಿದವು."

— ಅರವಿಂದರು

"ನಾನು ಅವನನ್ನು ಕಂಡೂ ಇಲ್ಲ; ಅರಿತೂ ಇಲ್ಲ. ದೇವನಲ್ಲಿ ಲೋಕಕ್ಕಿರುವ ನಂಬುಗೆಯನ್ನೇ ನನ್ನದಾಗಿ ಮಾಡಿಕೊಂಡಿರುವೆನು. ಆದರೆ ನನ್ನ ಈ ಶ್ರದ್ಧೆಯು ಅಳುಕಲಾರದ್ದು. ಆದರೂ ಇದು ಇನ್ನೂ ಸ್ವಾನುಭವಕ್ಕೆ ಮುಟ್ಟಲಿರುವದು. ಶ್ರದ್ಧೆಯನ್ನು ಸ್ವಾನುಭವದಂತೆ ಬಣ್ಣಿಸಿದರೆ ಸತ್ಯಕ್ಕೆ ಮೋಸಮಾಡಿದಂತಾಗುವದು. ದೇವನ ಮೇಲಿರುವ ನನ್ನ ಶ್ರದ್ಧೆಯೆಂಥದೆಂದು ಹೇಳುವದಕ್ಕೆ ನನಗೆ ಬಾಯಿಯಿಲ್ಲವೆಂದು ಹೇಳಿದರೆ ಹೆಚ್ಚು ಸರಿಯಾದೀತೆಂದು ನನಗೆನಿಸುವದು. ನಾನು ಬರೆಯುವಾಗ ಅಂತರಾತ್ಮನು ಹೇಗೆ ಪ್ರೇರಿಸುವನೋ ಹಾಗೆ ಬರೆಯುವೆನು. ನಾನು ಬುದ್ಧಿಪೂರ್ವಕವಾಗಿ ಮಾಡುತ್ತಲಿರುವ ವಿಚಾರಗಳನ್ನೂ ಕಾರ್ಯಗಳನ್ನೂ ಆತನೇ ಮಾಡಿಸುತ್ತಿರುವಂತೆ ನನಗಾಗ ನಿಚ್ಚಳವಾಗಿ ಅನಿಸುತ್ತಿದ್ದರೂ ನನ್ನ ಜೀವನದಲ್ಲಿ ನಾನು ಕೈಕೊಂಡ ಅತಿ ಮಹತ್ವದ ಪ್ರಸಂಗಗಳನ್ನೂ ಹಾಗೆಯೇ ಅತಿಕ್ಷುಲ್ಲಕ ಘಟನೆಗಳನ್ನೂ ಕೂಡ ಯೋಚಿಸಿ ನೋಡಿದಾಗ ಪರೀಕ್ಷಾಂತ್ಯದಲ್ಲಿ ಅವೆಲ್ಲವುಗಳೂ ಆತನಿಂದಲೇ ಪರಿವರ್ತಿತವಾದವೆಂದು ನನಗೆನಿಸುವದಾಗಿ ಹೇಳಿದರೆ ಅನುಚಿತವಾಗದು."

— ಮಹಾತ್ಮಾಜಿಯವರು

"ಓ ದಿವ್ಯಸತ್ಯವೇ ನಿನ್ನನ್ನು ತತ್ತ್ವತಃ ಅರಿತವನೇ ಅರಿತವನು. ಅವನಿಗೆ ಅಳಿವಿಲ್ಲ. ನ ಮೇ ಭಕ್ತಃ ಪ್ರಣಸ್ಯತಿ ಎಂದು ನನ್ನ ಅಭಯ ವಚನ"

— ಜೀಸಸ್ ಕ್ರೈಸ್ತ

"ಅವನನ್ನು ಒಲ್ಲೆ, ಒಲ್ಲೆ. ಇಲ್ಲೆಂದರೆ ನಾನೊಬ್ಬ ಸಟಿಗಾರ." ಎಂದು ಕ್ರಿಸ್ತ ಗರ್ಜಿಸಿದ್ದೂ ದಿವ್ಯಸತ್ಯದ ಪ್ರಸಾದದಿಂದ.' ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ" ಇದೇ ಎಂದು ಮಾತ್ರ ಮನವರಿಕೆಯಾದರೆ ಅವನಿಗೆ ತತ್ತ್ವಭಾವದ ಒಲುಮೆ ಕಟ್ಟಿಟ್ಟಿದೆಯೆಂದು ಶ್ರುತಿ ಸಾರುತ್ತಿದೆ.

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ

**ಶಿವಾನುಭವ, ೬-೪, ಅಕ್ಟೋಬರ ೧೯೩೧**

## ೨. ಸತ್ಯದೃಷ್ಟಿ

### ಸೂತ್ರ

"ನಿನ್ನ ಆತ್ಮನನ್ನು ಅನುಸರಿಸು, ಮನವನ್ನು ಅನುಸರಿಸಬೇಡ. ಸತ್ಯವನ್ನು ವ್ಯಕ್ತಪಡಿಸುವ ಆತ್ಮನನ್ನು ಬಿಟ್ಟು ಹೊರಮಾಟಕ್ಕೆ ಹಾರುವ ಮನಸ್ಸಿನ ಬೆನ್ನ ಹತ್ತದಿರು. ಹತ್ತಿದರೆ ನಿನ್ನ ಮಹಾಮಾತೆಯು ಪ್ರತ್ಯಕ್ಷವಾದರೂ ಮನವು ಅವಳನ್ನು ಗುರುತಿಸದು."

–ಶ್ರೀ ಅರವಿಂದಯೋಗಿಗಳು

ದಿವ್ಯಸತ್ಯವು ತ್ರಿಕಾಲಾಬಾಧಿತವು. ಬದಲಾಗಬೇಕಾದದು ಸೃಷ್ಟಿಯಲ್ಲ, ನಮ್ಮ ದೃಷ್ಟಿ. ದೃಷ್ಟಿ ಬದಲಾಗದಿರುವಾಗ ನಮಗೆ ಸೃಷ್ಟಿಯೊಂದು ಅಪ್ರಿಯಂಕರವಾದ ಅಗ್ನಿಕುಂಡ. ಆದರೆ ಅದೇ ಸೃಷ್ಟಿಯು ನಮ್ಮ ದೃಷ್ಟಿ ಅರಳಿಸಿದಾಗ ಮಧುರ ಮಧುಮಯವೆನಿಸುವುದು. ಸತ್ಯದ ಅಸ್ತಿತ್ವವು ಹೊಸದಾಗಿ ಹುಟ್ಟಬೇಕಾಗಿರದೆ ನಮ್ಮಲ್ಲಿ ಸತ್ಯದೃಷ್ಟಿ ಮಾತ್ರ ಉದಯಿಸಬೇಕಾಗುವುದು. ಈ ದೃಷ್ಟಿಯ ಹುಟ್ಟೇ ಹೊಸಹುಟ್ಟು. ಮಾನವನು ದ್ವಿಜನಾಗದೆ ದೇವನನ್ನು ಕಾಣಲಾರನೆಂಬುದರ ಗುಟ್ಟು ಇದೇ.

ಈಗಿನ ನಮ್ಮ ದೃಷ್ಟಿಯೆಂದರೆ ನಾವು ಮುಂಚಿನಿಂದ ಹೌದೆಂದು ಒಪ್ಪಿಕೊಳ್ಳುತ್ತ ಬಂದ ಗ್ರಹಿಕೆಗಳದೊಂದು ಬಣ್ಣಬಳಿದ ಕನ್ನಡಕ. ನಮ್ಮ ಈ ಕನ್ನಡಕದ ಬಣ್ಣದೊಡನೆ ನಾವು ಹೊಂದಿದ ತಾದಾತ್ಮ್ಯವು ನಮಗೀಗ ಸ್ವಭಾವಜಾತವಾಗಿ ಬಿಟ್ಟಿರುವದರಿಂದ ನೈಜಸತ್ವವು ಅಸಹಜವೆನಿಸಿ ಸಾಮಯಿಕ ಸತ್ಯವೇ ನೈಸರ್ಗಿಕವಾಗಿ ತೋರುತ್ತದೆ. ಈ ತಿರುವು ಮುರುವು ಸರಿಪಡುವುದೇ ಸತ್ಯದೃಷ್ಟಿ, ಸಹಜದೃಷ್ಟಿ, ಸಮನ್ವಯದೃಷ್ಟಿ, ಆತ್ಮದೃಷ್ಟಿ.

ಸತ್ಯದೃಷ್ಟಿಯು ಮುಂದೆಯೇ ದಿವ್ಯದೃಷ್ಟಿ. ನಮ್ಮ ಜಡದೃಷ್ಟಿಯು ದಿವ್ಯ ದೃಷ್ಟಿಯಾಗುವ ಮುಂಚೆ ಹೊಂದುವ ಪ್ರಥಮ ರೂಪಾಂತರವೇ ಸತ್ಯದೃಷ್ಟಿ, ಶುದ್ಧದೃಷ್ಟಿ, ಪ್ರಾತಿಭಚಕ್ಷು. ಚಿತ್ತಶುದ್ಧಿಗೆ ಸಾಕ್ಷಿಯಾಗಿ ಬುದ್ಧಿ ಪರಿಪಾಕಕ್ಕೆ ನಿದರ್ಶನರೂಪವಾಗಿ ಜನ್ಮಿಸುವುದೇ ಈ ಸತ್ಯದೃಷ್ಟಿ. ಸತ್ಯದೃಷ್ಟಿ ಗಂಭೀರವಾಗಿರುವಷ್ಟೇ ಸೂಕ್ಷ್ಮವೂ ಆಗಿದೆಯಾದರೂ ಸೂಕ್ಷ್ಮದೃಷ್ಟಿಯೆಂದು ಇದುವರೆಗೆ ನಾವು ಕೇಳುತ್ತ ಬಂದದ್ದು ಇದಲ್ಲ. ದೈಹಿಕ ವ್ಯಾಯಾಮಕ್ಕೆ ಪ್ರತಿಫಲವಾಗಿ ಬರುವ ದೇಹದಾರ್ಢ್ಯದಂತೆ ಸೂಕ್ಷ್ಮದೃಷ್ಟಿಯು ಪ್ರಾಣಶಕ್ತಿಯ ನಿರೋಧದಿಂದಲೂ ಮನಶ್ಶಕ್ತಿಯ ಏಕಾಗ್ರತೆಯಿಂದಲೂ ಮಾನಸ ವ್ಯಾಯಾಮಕ್ಕೆ ಫಲರೂಪವಾಗಿ ಒಡಮೂಡುವದು. ಇದು ಸತ್ಯದೃಷ್ಟಿಯ ಅನಂತರದಲ್ಲಿ ತಾನಾಗಿಬರುವದು. ಆದರೆ ಅದು ಮಾನಸ ವ್ಯಾಯಾಮದಿಂದ ಮೊದಲೇ ಬಂದರೂ ಸತ್ಯದೃಷ್ಟಿಯುಂಟಾಗುವವರೆಗೆ ಅದಕ್ಕೆ ಸಾರ್ಥಕತೆಯಿಲ್ಲ. ಸೂಕ್ಷ್ಮದೃಷ್ಟಿಯು ಚಾಕ್ಷುಷ ಶಕ್ತಿಯ ಸೂಕ್ಷ್ಮ ರೂಪವು. ಆದರೆ ಸತ್ಯದೃಷ್ಟಿಯ ಪ್ರಾತಿಭಶಕ್ತಿಯ ಪ್ರಥಮರೂಪವು. ದಿವ್ಯ ದೃಷ್ಟಿಯು ದೇವನದೃಷ್ಟಿಯು, ಮಾನವನ ಮಾನವತನದ ಹಿಂದೆ ಮರೆಯಲ್ಲಿ ಮೆರೆಯುವ ತೃತೀಯ ನೇತ್ರವಿದು. ಜಡದೃಷ್ಟಿಗೂ ದಿವ್ಯದೃಷ್ಟಿಗೂ ನಡುವಿನ ಗಡಿನಾಡಿನ ಸಂಧಿಪ್ರಕಾಶವೇ ಸತ್ಯದೃಷ್ಟಿಯು. ಅಪರಾಪ್ರಕೃತಿಯು ಸಡಿಲಾಗಿ ಪರಾಪ್ರಕೃತಿಯು ಮೊಳಕೆಯೊತ್ತುವದರ ಕುರುಹೇ ಸತ್ಯದೃಷ್ಟಿ, ಶುದ್ಧದೃಷ್ಟಿ. ಇದೇ ದ್ವಿಜಾವಸ್ಥೆ.

ನಮ್ಮ ನಿತ್ಯ ವ್ಯವಹಾರದ ಸಂಸ್ಕಾರವೇ ನಮ್ಮ ಸದ್ಯದ ದೃಷ್ಟಿ, ಜಡದೃಷ್ಟಿ. ನಮ್ಮೊಡನೆ ಸಂಬಂಧಬರುವ ವಿಷಯಗಳ ವ್ಯವಹಾರವೇ ನಮ್ಮ ದೃಷ್ಟಿಕೋನವೇರ್ಪಡುವದಕ್ಕೆ ಕಾರಣವು. ಈವರೆಗೆ ನಾವು ಬಳಸಿರುವ ವಸ್ತು ವಿಷಯಗಳೆಲ್ಲವೂ ಮರ್ಯಾದಿತವಾಗಿರುವದರಿಂದ ತದನುಸಾರಿಯಾದ ನಮ್ಮ ದೃಷ್ಟಿಯೂ ಮರ್ಯಾದಿತವಾಗಿಯೇ ಇರುವುದು ಸಹಜ. ಈ ಮರ್ಯಾದೆಯಿಂದ ದಾಟಿ ಪಾರಾಗುವದೇ ದೃಷ್ಟಿಶುದ್ಧಿ. ಇದೇ ಜ್ಞಾನಸಾಧನದ ಪ್ರಥಮಸಿದ್ಧಿ. ಇದೇ ಪೂರ್ಣಸಿದ್ಧಿಯ ಪ್ರಥಮಾವತಾರ. ಇಲ್ಲಿಗೇ ಉತ್ತರ ಸಾಧನದ ಆರಂಭ. ಉತ್ತರ ಸಾಧಕನ ಕುರುಹೇ ಸತ್ಯದೃಷ್ಟಿ, ಶುದ್ಧದೃಷ್ಟಿ, ನಿರ್ಮಾಯಿಕ ದೃಷ್ಟಿ.

ನಾವು ನಿತ್ಯವೂ ವ್ಯವಹರಿಸುವ ವಸ್ತು ವಿಷಯಗಳೆಲ್ಲವೂ ತ್ರಿಲಕ್ಷಣಯುಕ್ತವಾದ ಒಂದು ಮರ್ಯಾದೆಯಿಂದ ಬದ್ಧವಾಗಿವೆ. ನಾವು ವ್ಯವಹರಿಸುವ ವಿಷಯಗಳಿಗೆಲ್ಲ ದಿಕ್ಕಾಲ ಮಾತ್ರ ಮರ್ಯಾದೆ ಇಲ್ಲದೆಯಿಲ್ಲ. ಯಾವುದೊಂದು ವಸ್ತುವನ್ನು ನೋಡಿದರೂ ಅದು ಒಂದಾನೊಂದು ಕಾಲದಲ್ಲಿ ಒಂದಾನೊಂದು ಪರಿಣಾಮಯುಕ್ತವಾಗಿ ಒಂದಾನೊಂದು ವ್ಯಕ್ತಿಯಿಂದಾಗಲಿ ಶಕ್ತಿಯಿಂದಾಗಲಿ ನಿರ್ಮಿತವಾದದ್ದು ಕಂಡುಬರುವದು. ನಮಗೆ ಗೊತ್ತಿರುವ ಇಂಥ ಆದ್ಯಂತವಾದ ವಸ್ತು ಮಾತ್ರವಲ್ಲವೂ

ಈ ತ್ರಿಮರ್ಯಾದೆಯಿಂದ ಯುಕ್ತವಾಗಿಯೇ ಇರುವವರಿಂದ ನಮಗೆ ಯಾವ ವಸ್ತುವನ್ನು ಕುರಿತು ಆಲೋಚಿಸಬೇಕಾದರೂ ಆ ವಸ್ತುವಿನಲ್ಲಿ ಈ ತ್ರಿಲಕ್ಷಣಗಳನ್ನು ಹುಡುಕ ಹೊರಡುವೆವು. ಇದೇ ನಮ್ಮ ಈಗಿನ ಜಡದೃಷ್ಟಿ ಅಥವಾ ತರ್ಕಶಕ್ತಿ. ಇದೇ ಜಡಬುದ್ಧಿ, ಇದರ ಮುಕ್ತತೆಯೇ ಶುದ್ಧಿ. ಅದೇ ನಮಗೆ ಬೇಕಾದ ಸಿದ್ಧಿ.

ಅಪರಾ ದೃಷ್ಟಿಯು ಪರಾತ್ಪರ ಸತ್ಯವನ್ನು ತನ್ನ ಈ ಜಡವಾದ ಮರ್ಯಾದಿತ ಮಾನದಿಂದ ಅಳೆಯ ಹೊರಟು, ಅಳತೆ ಹತ್ತದಂತಾಗಿ "ಅಸಾಧ್ಯ" "ಅಶಕ್ಯ"ಗಳ ದಾಳಿಯನ್ನೆಬಿಸುವದು. ಈಗ ವಿಶ್ವನಿಧಿಯ ಪರಸ್ಪರ ವಿರೋಧ ದರ್ಶಕ ಅಸಂಖ್ಯ ಸತ್ಯ ಮುಖಗಳ ಭೀಷಣ ರೌದ್ರ ಸ್ವರೂಪವು ಮಾನವನನ್ನು ದಂಗಬಡಿಸುತ್ತದೆ. ಇದೇ ಸಾಧನ ಸಮರ. ಈ ದಿಙ್ಮೂಢತೆಯಿಂದ ಮೈದೋರುವ ನಾಸ್ತಿಕ್ಯವು ಸಾಧಕನ ಜಿಜ್ಞಾಸೆಯ ಪ್ರಖರತೆಯ ಕುರುಹು. ಇಂಥ ಪ್ರಖರ ನಾಸ್ತಿಕ್ಯ ಬಿಡದವನು ಇನ್ನು ಸಾಧಕನೇ ಅಲ್ಲ. ಜಿಜ್ಞಾಸೆಯು ಸಾಧನದ ಆರಂಭ. ನೈರಾಸ್ಯವು ಅದರ ಮಧ್ಯ.

ವಿಶ್ವದ ಪ್ರತಿವಸ್ತುವು ಕ್ರಮಪರಿಣತಿಯ ತಪಸ್ಸಿನಲ್ಲಿ ತಪ್ತವಾಗಿಯೇ ತನ್ನ ಸ್ವರೂಪಕ್ಕೆ ಬಂದಿರವಾಗ, ನಮ್ಮ ಸ್ವರೂಪವು ನಮಗೆ ಒಡಮೂಡುವದಕ್ಕೂ ಈ ಕ್ರಮವಿಕಾಸದ ತಪಸ್ಸಿನ ತಾಪವು ತಪ್ಪಿದ್ದಲ್ಲವೆಂಬುದು ಸ್ಪಷ್ಟ. ಇಂದಿನ ತಪಸ್ಸು ನಾಳಿನ ಸಿದ್ಧಿ. ಇಂದಿನ ತಾಪ ನಾಳಿನ ಶಾಂತಿ. ಇಂದಿನ ಮೊಗ್ಗೆ ನಾಳಿನ ಹೂ. ಇಂದಿನ ಹೊಯ್ದಾಟ ನಾಳಿನ ಸ್ಥೈರ್ಯ.

ಸಾಧನ ಪ್ರವೃತ್ತಿಯು ಸಿದ್ಧಿಯ ಉನ್ಮೇಷ. ಉನ್ಮೇಷ ಮಾತ್ರದಲ್ಲಿದ್ದದ್ದು ವ್ಯಕ್ತರೂಪಕ್ಕೆ ಬಂದದ್ದೇ ಸಿದ್ಧಿ. ಇದೇ ತುದಿತಳಗಳ ಐಕ್ಯ. ಹಿಗ್ಗುತಗ್ಗುಗಳ ಐಕ್ಯ. ಸಬಲ ನಿರ್ಬಲತೆಗಳ ಸಖ್ಯ. ಇಂದಿನ ಆಭಾಸ ನಾಳಿನ ನಿಚ್ಚಳ; ಇದು ನಿಶ್ಚಿತ.

ನಾಸ್ತಿಕತೆಯ ನೈರಾಸ್ಯದಲ್ಲಿ ನಮ್ಮ ಅಧೋದೃಷ್ಟಿಯು ಊರ್ಧ್ವಮುಖವಾಗುವದು. ಆವರೆಗೆ ಲಕ್ಷಿಸದ ವಸ್ತುವಿಶೇಷಗಳು ನಮ್ಮ ಲಕ್ಷ್ಯಪಥಕ್ಕೆ ಆಗ ಬರಹತ್ತುವವು. ನಮ್ಮ ಚಿತ್ತಕ್ಕೆ ಅವುಗಳ ಸಂಪರ್ಕವು ಬೆಳೆದಂತೆ ನಮ್ಮ ಬುದ್ಧಿಗೆ ಅವುಗಳ ವಿಶೇಷ ಲಕ್ಷಣಗಳ ಕಡೆಗ ಲಕ್ಷ್ಯವೆಳೆಯಹತ್ತುವದು. ಯದ್ಯದ್ವಿಭೂತಿಮತ್ಸತ್ವಮ್ ಮಮತೇಜೊಂಶ ಸಂಭವಂ।

ಆಕಾಶಕ್ಕೆ ಅಂತ್ಯವಿಲ್ಲ; ಕಾಲಕ್ಕೆ ಆದಿಯಿಲ್ಲ. ಆದಿಯಿಲ್ಲದ ಅಂತ್ಯವಿಲ್ಲದ ಅಕ್ಷಯ ಅನಾದ್ಯನಂತ ನಿರಾಲಂಬ ಸ್ವರೂಪವು ಅಜಾತವಾಗಿರಲೇ ಬೇಕು. ದಿಕ್ಕಾಲ ಪಾತ್ರ ಮರ್ಯಾದೆಗಳಿಂದ ಅತೀತವಾದ ಈ ವಸ್ತು ವಿಶೇಷದ ದರ್ಶನವು ನಮ್ಮ ಬುದ್ಧಿಯಲ್ಲಿ ಅಪೂರ್ವವಾದೊಂದು ಅಸಾಧಾರಣ ಗ್ರಹಿಕೆಯನ್ನುಂಟು ಮಾಡದಿರದು. ಇದೇ ಅಪರೋಕ್ಷ ಶ್ರದ್ಧೆ. ಅನಂತ ಅಜಾತ ಸ್ವಯಂಭೂ ಪರಾತ್ಪರ ಸತ್ಯದ

ಅಸ್ತಿತ್ವವು ಈ ಶುದ್ಧ ಸತ್ಯದೃಷ್ಟಿಗೆ ಸಹಜ ಸಂಭವನೀಯವೆನಿಸುವದು. ಪರಸ್ಪರ ವಿರೋಧವಾಗಿ ಕಾಣುವ ಬಹು ಸತ್ಯಗಳ ಏಕತಾನತೆಯು ಈ ದೃಷ್ಟಿಗೆ ಸಹಜವಾಗಿ ಹೊಳೆಯುವದು. ಅವಿಭಕ್ತಂ ವಿಭಕ್ತೇಷು.

ತ್ರಿಲಕ್ಷಣಾತೀತವಾದ ಪರವಸ್ತುವಿನ ಈ ಚತುರ್ಥ ಲಕ್ಷಣದ ಅಪರೋಕ್ಷ ದರ್ಶನವೇ ಸಿದ್ಧಿಯ ಆರಂಭ. ಪರವಸ್ತುವಿನ ಅಸ್ತಿತ್ವವು ಒಪ್ಪಿಗೆಗೆ ಬಂದರೆ ಅದರ ಮುಂದಿನ ಅವಸ್ಥೆಯು ಅದಕ್ಕೆ ಒಮ್ಮಿಲ್ಲದೊಮ್ಮೆ ಕಟ್ಟಿಟ್ಟದ್ದೇ. ಅಸ್ತಿತ್ಯೇವೋಪ-ಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ. ಸಂಶಯ ಪಿಶಾಚದ ಉಚ್ಚಾಟನವು ಸಾಧಕನ ಸಿದ್ಧಿಗೆ ನಿಶ್ಚಿತತೆಯನ್ನುಂಟುಮಾಡದೇ ? ಪೂರ್ವಪಕ್ಷಿಯದಂಥ ವೈಷಮ್ಯವು ಸಾಮ್ಯಕ್ಕೆ ಬಂದಾಗ ಸಿದ್ಧಿಯ ಭರವಸವಿಲ್ಲದೆ ಹೋದೀತೆ ? ಆಗ ಅಡ್ಡದಾರಿ ಗೆಳೆಯುವ ಅಡ್ಡಬುದ್ಧಿಯು ಮಾರ್ಪಟ್ಟು ಪರಸತ್ಯವನ್ನು ಗುರುತಿಸುವದು. ಸದಸತ್ತತ್ಪರಂ ಯತ್ ನಸತ್ತನ್ನಾಸದುಚ್ಯತೆ; ಸರ್ವಾಶ್ಚರ್ಯಮಯಂ ದೇವಂ; ಅಂಚಿತ್ಯ ರೂಪಂ ।.

ಇದರ ಮುಂದಿನದೇ ಉತ್ತರ ಸಾಧನೆ. ಪೂರ್ವ ಸಾಧನದಲ್ಲಿ ಜೀವವು ಅನಾಥ ವಾಗಿದ್ದುಕೊಂಡು ಆಶ್ರಯವನ್ನರಸುತ್ತ ಅಲೆದಲೆದು ನೆಲೆಗಾಣದೆ ಬಳಲಿ ಬೆಂಡಾಗಿ ಅಧೈರ್ಯ ಅಸ್ಥೈರ್ಯಗಳಲ್ಲಿ ಮುಳುಮುಳುಗೆದ್ದು ಕೊನೆಗೆ ವಸ್ತು ದೃಷ್ಟಿಯನ್ನು ದಾಟಿ ತತ್ತ್ವದೃಷ್ಟಿಗೆ ಬಂದ ಬಳಿಕ ಸತ್ಯದ ಅಸ್ತಿತ್ವವು ಪ್ರಮಾಣಿತವಾಗುವದರಿಂದ ಶಾಶ್ವತ ವಾದ ಆಶ್ರಯವು ಅದಕ್ಕೆ ಕೈಸಾರಿದ್ದು ನಿಶ್ಚಯವಾಗುತ್ತದೆ. ನಿಜವಾದ ಸಮರ್ಪಣದ ಆರಂಭವು ಇಲ್ಲಿಯೇ ಆಗುವುದು. ಒಳಿಕ ಸಂಚಿತ ಕರ್ಮದ ಮೂಲಕ ಕಾಲದ ಅಂತರಾಯವೊಂದುಳಿದು ಇನ್ನಾವ ಬಂಧನವೂ ತನಗಿಲ್ಲವೆಂದೆನಿಸಿ ಒಂದು ನಿಶ್ಚಿತ ಕಾಲದಲ್ಲಿನ್ನು ತನ್ನ ಪರಿಪೂರ್ಣತೆಯು ಕಟ್ಟಿಟ್ಟದ್ದೇ ಎಂಬ ದೃಢವಿಶ್ವಾಸವು ಬೆಳೆಯುವದರಿಂದ ಜೀವವು ಆ ಕಾಲ ಪ್ರಮಾಣವನ್ನು ಪ್ರತೀಕ್ಷಿಸುತ್ತ ನಿಲ್ಲುವದು. ಆಗಲೂ ಆತ್ಮಶೈಶವದ ಕಾಲದಲ್ಲಿ ಮಾನಸಕ್ಷೇತ್ರದೊಳಗೆ ಏರಿಳಿತದ ಹಗಲಿರುಳುಗಳು ಬರುವವಾದರೂ ಮುಂಚಿನ ಅಧೈರ್ಯ ಅಸ್ಥೈರ್ಯಗಳಿಗೆ ಅಷ್ಟು ಇಂಬಿಲ್ಲ. ತನ್ನ ಶ್ರದ್ಧೆಯ ಕಾರಣಗಳನ್ನೇ ನೆನೆ ನೆನೆಸಿಕೊಳ್ಳುತ್ತ ಶ್ರದ್ಧಾವಸ್ಥಿತಚೇತಸನಾಗಿ ಇರುಳನ್ನು ನುಗಿಸುವನು. ತಚ್ಚ ಸಂಸ್ಮೃತ್ಯ ಭಿದ್ಯತೇ ಹೃದಯ ಗ್ರಂಥಿಶ್ಛಿದ್ಯಂತೇ ಸರ್ವ ಸಂಶಯಾಃ ।

ಶಿವಾನುಭವ ೭-೨, ಜೂನ ೧೯೩೨

# ವಿಜಯೀ ವಿಶ್ವಾಮಿತ್ರ

---

ಭಕ್ತಿಯೋಗಕ್ಕೆ ಧ್ರುವ, ಜ್ಞಾನಯೋಗಕ್ಕೆ ಶುಕ, ಕರ್ಮಯೋಗಕ್ಕೆ ಜನಕ ಮುಂತಾದ ಮಹಾಪುರುಷರು ಉದಾಹರಣ ಸ್ವರೂಪರೆಂಬುದು ನಮಗೆ ತುಂಬಾ ತಿಳಿದ ವಿಷಯ. "ದೇವನು ಹೇಗೆ ಸಿಕ್ಕಾನು?" ಎಂಬ ಹೃದಯದ ವ್ಯಾಕುಲತೆಯು ಭಕ್ತಿಯೋಗದ ಪಲ್ಲವಿಯಾದರೆ "ಕೇವಲ ಸತ್ಯವು ಯಾವುದು ?" ಎಂಬ ಬುದ್ಧಿಯ ಕೂಟ ಪ್ರಶ್ನವು ಜ್ಞಾನಯೋಗದ ಮೂಲಸೂತ್ರವಾಗಿದೆ. ಆದರೆ ಕರ್ಮಯೋಗದ ವ್ಯಾಖ್ಯೆಯು ಇಷ್ಟು ಸುಲಭವಾಗಿದೆಯೆಂದು ನನಗೆನಿಸುವದಿಲ್ಲ. "ಪ್ರಪಂಚದಲ್ಲಿದ್ದು ಪರಮಾರ್ಥವನ್ನು ಸಾಧಿಸುವವ" ಎಂಬ ಜನಜನಿತವಾಗಿರುವ ಹಳಿಯ ಮಾತು ಈ ಯೋಗದ ವಾಖ್ಯೆಯಾಗಬಹುದು. ಇಲ್ಲಿ 'ಪ್ರಪಂಚ'ವೆಂಬುದು ಕುಟುಂಬವಾದರೂ ಆಗಿರಬಲ್ಲದು. ಅಥವಾ ಜನತೆಯಾದರೂ ಆಗಿರಬಲ್ಲದು. ಕಾರ್ಯಾಸಕ್ತ ಜೀವಿಗೆ ಪಾರಮಾರ್ಥಿಕ ಬುದ್ಧಿಯುಂಟಾದರೆ ಈ ಯೋಗವು ರೂಪುಗೊಳ್ಳುವದು. ಒಟ್ಟಿಗೆ- ಕರ್ತವ್ಯ ಕರ್ಮನಿರತನಾಗಿ ವರಮಾನುಗ್ರಹವನ್ನು ಪಡೆಯಲೆಳಸುವದೇ ಒಂದು ಬಗೆಯಿಂದ ಕರ್ಮಯೋಗವೆಂದು ಹೇಳಬಹುದು.

ಈ ಮೂರರಲ್ಲಿ ವಿಶ್ವಾಮಿತ್ರನ ಯೋಗವು ಯಾವುದು ? ಆಲೋಚಿಸಿ ನೋಡಿದರೆ ಈತನಿಗೆ ಇವು ಮೂರು ಸರಿಹೋಗುವಂತಿಲ್ಲವೆಂದು ಸ್ಪಷ್ಟವಾಗಿ ತೋರುತ್ತದೆ. ಹೃದಯ, ಬುದ್ಧಿ, ಕರ್ಮಪ್ರವೃತ್ತಿ ಈ ಮೂರನ್ನವಲಂಬಿಸಿದ ಮೂರು ಯೋಗಗಳಿಗಿಂತ ಭಿನ್ನಜಾತಿಯ ಯೋಗವು ಈತನದು.

ಮಾನವನಲ್ಲಿ ಅಭಿಮಾನ, ಅಹಂಕಾರ ಮುಂತಾದ ಕೀಳು ಅರ್ಥಕ್ಕೆ ಬಂದಿಳಿದ ಒಂದು ಮಹತ್ತರವಾದ ಶಕ್ತಿಯಿದೆ. ಅದನ್ನುಳ್ಳವರಲ್ಲಿ ನೂರಕ್ಕೆ ತೊಂಬತ್ತೊಂಬತ್ತು ವ್ಯಕ್ತಿಗಳು ಅಸುರರಾಗಿರುವದೂ ನಿಜವೇ. ಹುಂಕಾರ ಮಾತ್ರದಿಂದ ಸಹಸ್ರ ಸಹಸ್ರ ಜನರನ್ನು ನಡುಗಿಸಬಿಡಬಲ್ಲ ಅಜೇಯ ಶಕ್ತಿಯು ಇಂಥವರ ಸಹಜ ಸಂಪತ್ತಾಗಿರುತ್ತದೆ. ಇಂಥವರೊಳಗಿನ, ಉದಾರ ಚರಿತರೇ ಸ್ವಬಲದಿಂದಾದ ಸಾಮ್ರಾಟರು. ಇವರಿಗೆ ಯೋಗದ ಅಗತ್ಯವುಂಟಾದರೆ ಅದು ತಮ್ಮ ಅಜೇಯ ಶಕ್ತಿಗೆ ನೂರ್ಮಡಿ ತೇಜವನ್ನು ತಂದುಕೊಳ್ಳುವದಕ್ಕೆ ಹೊರತು ಮೋಕ್ಷಗೀಕ್ಷಗಳ ಭಿಕ್ಷಾಟನಕ್ಕಲ್ಲ. ಈ

ಯೋಗಕ್ಕೆ ನಾವು ಶಾಸ್ತ್ರೀಯವಾಗಿ ಶಕ್ತಿಯೋಗವೆಂದೂ, ಲಾಕ್ಷಣಿಕವಾಗಿ ಸಾಮ್ರಾಟ ಯೋಗವೆಂದೂ ನಾಮಕರಣವನ್ನು ಮಾಡಬಹುದು. ಪ್ರಚಲಿತ ಹಠಯೋಗ ರಾಜಯೋಗಗಳು ಈ ಶಕ್ತಿಯೋಗದ ಅಂಗೋಪಾಂಗಗಳೆಂದೇ ಹೇಳಬಹುದು. ಇವೆರಡು ಯೋಗಗಳ ಉದ್ದೇಶವಾದರೊ ಶಕ್ತಿ ಸಂಪಾದನೆಯೇ. ಋಗ್ವೇದದಲ್ಲಿ ವಿಶ್ವಾಮಿತ್ರನೆಂದು ಪ್ರಸಿದ್ಧವಾಗಿರುವ ಸರ್ವಶಕ್ತಿ ಪ್ರದವಾದ ಗಾಯತ್ರಿ ಮಂತ್ರದ ಮಹತ್ವವು ಕೊನೆಯ ಎರಡು ಯೋಗದವರಿಗಿದ್ದಷ್ಟು ಮೊದಲಿನ ಮೂರು ಬಗೆಯ ವರಿಗಿಲ್ಲದುದೂ ಒಂದು ವಿಚಾರಣೀಯವಾದ ಸಂಗತಿಯಾಗಿದೆ.

ಕೇವಲ ಪರಲೋಕಲೋಭವರಿಗೆ ಇಹಲೋಕದ ಸಲುವಾಗಿ ಪ್ರಯತ್ನಿಸುವ ವಿಶ್ವಾಮಿತ್ರನಂಥ ಶಕ್ತಿಯೋಗಗಳ ವಿಚಾರವು ತುಚ್ಛವಾಗಿ ಕಾಣುಸುತ್ತಿರಬಹುದು. ರಾಮಾಯಣದಲ್ಲಿ ಪರಲೋಕ ಪರಾಯಣತೆಯನ್ನು ಕಟುವಾಗಿ ನಿಂದಿಸಿದ ಜಾಬಾಲಿಗೆ ಬೈಸಿಕೊಳ್ಳದೆ ಗತ್ಯಂತರವಿರಲಿಲ್ಲ. ಶಕ್ತಿವಿಚಾರದಲ್ಲಿ ಉದಾಸೀನರಾದ ಪರಲೋಕಾ ಪೇಕ್ಷೆಯ ಸನಾತನಿಗಳ ಜಂಗುಳಿಯಿಂದ ತುಂಬಿದ ವಿಶ್ವಜಗತ್ತಿನೊಡನೆ ಸಹಮತವಿಲ್ಲದ್ದ ರಿಂದ ನಮ್ಮ ಕಥಾ ನಾಯಕನು ವಿಶ್ವದ ಅಮಿತ್ರನಾದ ಬಿಂಕಗಾರ ವಿಶ್ವಾಮಿತ್ರನಾಗಿರ ಬೇಕೇ ವಿನಾ ಸಪ್ಪಗಿನ ಪುರಾಣಿಕರು ಹೇಳುವಂತೆ ಆತನ ಹೆಸರಿನ ಅರ್ಥವು ವಿಶ್ವದ ಮಿತ್ರನೆಂದು ಎಂದಿಗೂ ಆಗಲಾರದೆಂದು ನನ್ನ ಬಲವಾದ ಅನಿಸಿಕೆ.

ವಿಶ್ವಾಮಿತ್ರನು ಮೊದಲಿಗೆ ರಾಜನು. ಆತನ ರಾಜ್ಯದಲ್ಲಿ ವ್ಯಾಪಿಸಿದ ಸರ್ವತ್ರ ಶಾಂತಿಯು ಅವನ ವೀರೋತ್ಸಾಹಕ್ಕೆ ನೀರಸವೆನಿಸಿದ್ದರಿಂದ ಸೇನಾಸಮೇತನಾಗಿ ಪರಚಕ್ರಗಳ ಕೊಡ ಕಾಲು ಕೆದರಿ ಕದನ ಹೂಡಬೇಕೆಂದು ದಿಗ್ವಿಜಯಕ್ಕೆ ಹೊರಟನು. ಮಾರ್ಗದಲ್ಲಿ ಜ್ಞಾನನಿಧಿಗಳಾದ ವಸಿಷ್ಠ ಮಹರ್ಷಿಗಳ ಆಶ್ರಮ. ಅಲ್ಲಿ ಆತನು ಕೆಲ ದಿನಗಳ ಮಟ್ಟಿಗೆಂದು ಬೀಡುಬಿಟ್ಟನು. ವಸಿಷ್ಠರು ತಮ್ಮಲ್ಲಿದ್ದ ದೇವಧೇನುವಿನ ದಯೆಯಿಂದ ಸರ್ವಪರಿವಾರಯುಕ್ತನಾದ ರಾಜನಿಗೆ ಮನಸು ತಣಿಯುವಂತೆ ಆತಿಥ್ಯವನ್ನು ಮಾಡಿದರು. ಕಾನನವಾಸಿಯಾಗಿದ್ದರೂ ಈ ಋಷಿಯು ತನಗೆ ಸಕಲ ವೈಭವಯುಕ್ತವಾದ ಸತ್ಕಾರವನ್ನು ಮಾಡುವದಕ್ಕೆ ಸಮರ್ಥನಾದದ್ದು ಈ ಧೇನುವಿನಿಂದಲೇ ಎಂದರಿತು ಅದು ತನಗೆ ಬೇಕೆಂದು ಆಶೆಪಟ್ಟನು. ಆದರೆ ಅದು ಋಷಿಗಳನ್ನು ಬಿಟ್ಟು ರಾಜರನ್ನು ಸೇರತಕ್ಕ ವಸ್ತುವೇ ಅಲ್ಲದ್ದರಿಂದ ವಸಿಷ್ಠರು ಆ ಬೇಡಿಕೆಗೆ ಸಮ್ಮತಿಸಲಿಲ್ಲ. ಆದುದರಿಂದಲೇ ವಿಶ್ವಾಮಿತ್ರನು ಬಲಪೂರ್ವಕವಾಗಿ ಅದನ್ನು ಸೆಳೆಯಲೆಳಿಸಿದನು.

ಆಗ ವಸಿಷ್ಠರು ಆ ಧೇನುವಿನ ಕೃಪೆಯಿಂದಲೇ ಮಾಟದ ಸೇನೆಯನ್ನು ನಿರ್ಮಿಸಿದ್ದರಿಂದ ಉಭಯ ಸೇನೆಗಳಿಗೆ ಅಲ್ಲಿಯೇ ಯುದ್ಧಾರಂಭವಾಯಿತು. ಅಂತೂ ಕಾಳಗವನ್ನು ಹುಡುಕುತ್ತಿದ್ದ ವಿಶ್ವಾಮಿತ್ರನಿಗೆ ಇಲ್ಲಿ ಅದು ಅನಾಯಾಸವಾಗಿಯೇ

ಪ್ರಾಪ್ತವಾಯಿತು. ಯುದ್ಧವೇನೋ ಸಿಕ್ಕಿತು. ಆದರೆ ಜಯವು ಮಾತ್ರ ವಿಶ್ವಾಮಿತ್ರನ ಸಮೀಪಕ್ಕೆ ಸುಳಿಯಲಿಲ್ಲ. ಆಗ ಆತನ ಅಹಂಕಾರವು ಇನ್ನಿಷ್ಟು ಕೆರಳಿ ಜಯದ ಮೂಲಲಕ್ಷುರಿಯನ್ನೇ ಹಸ್ತಗತವಾಗಿ ಮಾಡಿಕೊಳ್ಳಲಿಕ್ಕೆ ಆತನನ್ನು ಹುರಿದುಂಬಿಸಿತು.

ಬಳಿಕ ವಿಶ್ವಾಮಿತ್ರನು ಬಹುಕಾಲ ತಪವನ್ನು ಆಚರಿಸಿ, ಅಮೋಘ ಶಕ್ತಿಯ ಶಸ್ತ್ರಾಸ್ತ್ರಗಳನ್ನು ಸಂಪಾದಿಸಿಕೊಂಡು ಪುನಃ ವಸಿಷ್ಠರ ಮೇಲೆ ಏರಿಬಂದನು. ಇವನು ತನ್ನ ಸರ್ವ ಅಸ್ತ್ರಗಳನ್ನೆಲ್ಲ ಶರಸೂರೆ ಮಾಡಿದನು. ಆದರೆ ವಸಿಷ್ಠರು ಒಂದು ಎವೆ ಎರಡು ಮಾಡದೆ ನಿರ್ವಿಕಾರ ಚಿತ್ತದಿಂದ ಆತ್ಮಸ್ಥರಾಗಿ ಕುಳಿತುಬಿಟ್ಟಿದ್ದರಿಂದ ಅವರ ಒಂದು ಕೂದಲು ಕೂಡ ಕೊಂಕಲಿಲ್ಲ. ಋಷಿಬಲದ ಮುಂದೆ ರಾಜತೇಜವು ಹುಲ್ಲುಕಡ್ಡಿಗೂ ಕೀಳೆಂದು ಕಂಡಾಗಲೇ ಕಡುಹೆಮ್ಮೆಯ ವಿಶ್ವಾಮಿತ್ರನು "ಬ್ರಹ್ಮ ತೇಜವನ್ನು ಗಳಿಸಿಯೇ ಇವನ ಪಾರುಪತ್ಯವನ್ನು ಮಾಡುವೆನು" ಎಂದು ಘೋರ ಪ್ರತಿಜ್ಞೆಯನ್ನು ಮಾಡಿ ಅಂದಿನಿಂದ ಮಹೋಗ್ರ ತಪವನ್ನು ಆಚರಿಸಹತ್ತಿದನು.

ಅತ್ತ ವನಾಂತರದಲ್ಲಿ ವಿಶ್ವಾಮಿತ್ರನ ತಪಸ್ಸು ಬಲಿಯುತ್ತಾ ಇದೆ. ಇತ್ತ ವಸಿಷ್ಠರ ಆಶ್ರಮದಲ್ಲಿ ಒಂದು ಸಂಗತಿಯು ನಡೆಯಿತು. ಅಯೋಧ್ಯೆಯ ಅರಸನಾದ ತ್ರಿಶಂಕು ಮೃತ್ಯುವನ್ನು ಗೆದ್ದು ದೇಹಸಹಿತ ಸ್ವರ್ಗಕ್ಕೆ ಹೋಗುವದಕ್ಕೆ ಆಶೆಪಟ್ಟು ಅದಕ್ಕನುಕೂಲವಾದ ಒಂದು ಯಜ್ಞವನ್ನು ಮಾಡಬೇಕೆಂದು ವಶಿಷ್ಠರನ್ನು ಕೇಳುವದಕ್ಕೆ ಬಂದನು. ಅದಕ್ಕೆ ಅವರು ನಕ್ಕು – ಇದು ಮರ್ತ್ಯಲೋಕದ ನಿಯಮಕ್ಕೆ ವಿರುದ್ಧವಾದ್ದರಿಂದ ಇಂಥ ಸಾಹಸಕ್ಕೆ ತಾವು ಕೈಹಾಕಲಾರೆವೆಂದು ಹೇಳಿ ಅರಸನನ್ನು ತಿರುಗಿ ಕಳಿಸಿದರು. ಅವನು ವಸಿಷ್ಠರನ್ನು ಬಿಟ್ಟು ಅವರ ಮಕ್ಕಳನ್ನು ಮೊರೆಹೊಕ್ಕನು. ಅವರೂ ಹಾಗೆಯೇ ಹೇಳಲು ಅವನಿಗೆ ಇವರ ಕಡುವೈರಿಯಾದ ವಿಶ್ವಾಮಿತ್ರನ ಹೆಸರು ನೆನಪಿಗೆ ಬಂದು ಆತನಿರುವ ವನಾಂತರಕ್ಕೆ ಪಯಣ ಬೆಳಸಿ ನಡೆದ ಸಮಾಚಾರವನ್ನೆಲ್ಲ ಕಥೆಮಾಡಿ ಹೇಳಿದನು. ವಿಶ್ವಾಮಿತ್ರನು ಕಣ್ಣು ಕೆರಳಿಸಿ ತನ್ನ ವೈರಿಯು ಕೈಲಾಗದವನೆಂಬ ಮಾತನ್ನು ಈ ಪ್ರಸಂಗದಿಂದ ಮನಗಾಣಿಸಿ ಕೊಡುವೆನೆಂದು ಪ್ರಣಿಕೆ ಮಾಡಿ, ಯಜ್ಞವನ್ನು ಹೂಡಿ ತನ್ನ ಸಂಕಲ್ಪಶಕ್ತಿಯಿಂದ ತ್ರಿಶಂಕುವನ್ನು ದೇಹಸಹಿತ ಸ್ವರ್ಗಕ್ಕೆ ಜಿಗಿಸಿದನು. ಆದರೆ ಸ್ವರ್ಗದ ದೇವತೆಗಳು ಅವನನ್ನು ಮರ್ತ್ಯಕ್ಕೆ ನೂಕಿದರು. ಆಗ ವಿಶ್ವಾಮಿತ್ರನು ರೊಚ್ಚಿನಿಂದ– "ಎಲಾ, ನಿಮ್ಮ ಸ್ವರ್ಗವನ್ನು ಹಾಳುಗೆಡವಿ ಪ್ರತಿಸ್ವರ್ಗವನ್ನು ನಿರ್ಮಿಸದಿದ್ದರೆ ನನ್ನನ್ನು ವಿಶ್ವಾಮಿತ್ರನೆಂದು ಕರೆಯಬೇಡಿರಿ!" ಎಂದು ಜಡೆಯನ್ನು ಅಪ್ಪಳಿಸಿ ಪ್ರಲಯ ಜ್ವಾಲೆಯಂತೆ ಕಿತ್ತಿಕೊಂಡೇಳುತ್ತಲೇ ದೇವತೆಗಳು ಗಡಗಡನೆ ನಡುಗಿ ಒಪ್ಪಂದವನ್ನು ಮಾಡಿಕೊಳ್ಳುವದಕ್ಕೆ ಸಿದ್ಧರಾದರು. "ನಮ್ಮ ಸ್ವರ್ಗಕ್ಕೂ ನಿಮ್ಮ ಮರ್ತ್ಯಕ್ಕೂ ನಡುವೆ ಆತನ ಮಟ್ಟಿಗೆ ಮಾತ್ರ ಒಂದು ನೆಲೆಯನ್ನು ಕಲ್ಪಿಸು. ಆದರೆ ಪ್ರತಿಸ್ವರ್ಗ

ವನ್ನು ಮಾಡಿ ನಮ್ಮನ್ನು ಹತಭಾಗ್ಯರನ್ನಾಗಿ ಮಾಡಬೇಡ. ದೇಹ ಸಹಿತ ಆತನನ್ನು ನಮ್ಮ ಬಳಿಗೆ ತೆಗೆದುಕೊಳ್ಳುವದಕ್ಕೆ ನಮಗಿಂತ ಮೇಲಿನ ವಿಧಿಯು ನಮಗೆ ಪ್ರತಿ ಕೂಲಿಸುತ್ತಿದೆಯಾದುದರಿಂದ ನಮ್ಮನ್ನು ಕ್ಷಮಿಸು." ಹೀಗೆಂದು ಬಿನ್ನವಿಸಿಕೊಂಡ ದೇವತೆಗಳ ಇಷ್ಟವನ್ನು ವಿಶ್ವಾಮಿತ್ರನು ನೆರವೇರಿಸಿದನು.

ದೇಹಸಹಿತ ಸ್ವರ್ಗಕ್ಕೇರುವದು ಎಂಬ ಮಾತಿನ ಅರ್ಥವು ಏನಿದ್ದಿದ್ದಿತು ? ದೇಹಪ್ರಜ್ಞೆಯಲ್ಲಿದ್ದುಕೊಂಡು ಪರಲೋಕಜ್ಞಾನವನ್ನು ಪಡೆಯುವ ವಿದ್ಯೆ ಇದಾಗಿರ ಬೇಕು. ಒಟ್ಟಾರೆ ವಿಶ್ವಾಮಿತ್ರ ಮುನಿಯು ಅಘಟಿತ ವಿದ್ಯೆಗಳ ಉತ್ಪಾದಕ ನೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಮಾನವನೊಳಗಿನ ಸಂಕಲ್ಪ ಶಕ್ತಿಯನ್ನು ಪ್ರಖರಗೊಳಿಸಿ ಸೃಷ್ಟಿ ನಿಯಮಗಳನ್ನು ಗೆಲ್ಲುವ ವಿದ್ಯೆಯ ಆದಿ ಪ್ರವರ್ತಕನು ಆತನೇ ಆಗಿರಬಲ್ಲನು. ಆತನ ಪವಾಡಗಳು ಕಾಲಕ್ರಮದಲ್ಲಿ ಅತಿಶಯೋಕ್ತಿಗೆ ಬಂದು ಮುಟ್ಟಿರಬಹುದಾದರೂ ಆತನು ಅಘಟಿತ ಘಟನೆಗಳನ್ನು ನಡಿಸಿಯೇ ಇರಲಿಕ್ಕಿಲ್ಲ ವೆಂದು ಸರ್ವಥಾ ಅನ್ನಲಿಕ್ಕೆ ಬರುವಂತಿಲ್ಲ. ಇದಿರಲಿ. ತ್ರಿಶಂಕುವಿಗೆ ಜೀವಂತನಿರು ವಾಗಲೇ ಪರಲೋಕ ದರ್ಶನವನ್ನು ಮಾಡಿಸುವದರಲ್ಲಿ, ವಿಶ್ವಾಮಿತ್ರ ಮುನಿಯ ತಪೋಬಲವೆಲ್ಲ ವ್ಯಯವಾದ್ದರಿಂದ ಆತನು ಎದೆಗುಂದದೆ ಪುನಃ ದೀರ್ಘ ತಪ ವನ್ನಾಚರಿಸುವದನ್ನು ನಿರ್ಧರಿಸಿದನು.

ತಿರುಗಿ ಆತನ ತಪಸ್ಸು ಬಹುಕಾಲದ ಮೇಲೆ ಪಕ್ವದೆಶೆಗೆ ಬರುವ ಹೊತ್ತಿಗೆ ದೈವವು ಮತ್ತೊಂದು ಆಟವನ್ನು ಅವನ ಎದುರಿಗೆ ಹೂಡಿತು. ತ್ರಿಶಂಕುವಿನ ಮಗನಾದ ಹರಿಶ್ಚಂದ್ರನು "ನರಮೇಧ"ವೆಂಬ ಯಜ್ಞದ ಸಲುವಾಗಿ ಶುನಸ್ಸೇಫನೆಂಬ ಮುನಿಕುಮಾರನನ್ನು ಕ್ರಯಕ್ಕೆ ತೆಗೆದುಕೊಂಡು ಹೊರಟಿದ್ದನು. ಮಾರ್ಗದಲ್ಲೇ ವಿಶ್ವಾಮಿತ್ರ ಮುನಿಯ ಆಶ್ರಮ. ಅವನ ಕೀರ್ತಿಯನ್ನು ಕೇಳಿದ್ದ ಶುನಸ್ಸೇಫನು ಓಡಿಬಂದು ಮೊರೆಹೊಕ್ಕು ಹೇಳಿಕೊಂಡದ್ದೇನಂದರೆ– "ನನ್ನ ತಾಯಿ ತಂದೆಗಳಿಗಿರುವ ಮೂವರು ಮಕ್ಕಳಲ್ಲಿ ನಾನು ನಡುವಿನವನು. ನರಮೇಧದಲ್ಲಿ ವಧಿಸುವದಕ್ಕೆಂದು ಹರಿಶ್ಚಂದ್ರ ರಾಜನು ತನ್ನ ತಂದೆಗೆ ಒಬ್ಬ ಕುಮಾರನನ್ನು ಕೇಳಲು, ತಂದೆಯ ಪ್ರೀತಿ ಯವನಾದ ಹಿರಿಮಗನನ್ನೂ ತಾಯಿಯ ಅಕ್ಕರತೆಯವನಾದ ಕಿರಿಮಗನನ್ನೂ ಬಿಟ್ಟು, ದಿಕ್ಕುಗೇಡಿಯಾದ ನನ್ನನ್ನು ಅವರು ಕೊಟ್ಟುಬಿಟ್ಟರು. ಅಯ್ಯೋ ! ದಿಕ್ಕಿಲ್ಲದವರಿಗೆ ನೀವೇ ದಿಕ್ಕೆಂದು ದಶದಿಕ್ಕುಗಳಲ್ಲಿ ನಿಮ್ಮ ಕೀರ್ತಿ ಹಬ್ಬಿದುದನ್ನು ಕೇಳಿ ನಾನೀಗ ಭರವಸದಿಂದ ತಮ್ಮಲ್ಲಿ ಮೊರೆಹೊಕ್ಕಿರುವೆನು. ಸಲಹುವದೂ ಕೊಲ್ಲುವದೂ ತಮ್ಮ ಕೈಯಲ್ಲಿದೆ." ಅನಾಥನಾದ ಶುನಸ್ಸೇಫನ ಮೇಲೆ ಕನಿಕರ ಹುಟ್ಟಿ ವಿಶ್ವಾಮಿತ್ರ ಮುನಿಯು ಅವನಿಗೊಂದು ಗೂಢ ಮಂತ್ರವನ್ನು ಹೇಳಿಕೊಟ್ಟು "ನಿನ್ನನ್ನು ವಧಿಸ ಲಿಕ್ಕೆ ಬಂದಾಗ ನೀನು ಈ ಮಂತ್ರವನ್ನು ಜಪಿಸಿದರೆ ನಿನ್ನ ಮೈಮೇಲೆ ಶಸ್ತ್ರಗಳೇ ನಾಟಲಾರವು." ಎಂದು ಅಭಯವನ್ನು ಕೊಟ್ಟನು.

ಮಂತ್ರಬಲದಿಂದ ಶುನಸ್ಸೇಫನೇನೋ ಉಳಿದುಕೊಂಡನು, ಇದರಿಂದ ಹರಿಶ್ಚಂದ್ರನಿಗೂ ವಿಶ್ವಾಮಿತ್ರನಿಗೂ ಘನ ವಿರೋಧ ಬೆಳೆಯಿತು. ಮುಂದೆ ಮುನಿವರನು ಆ ರಾಜಶಿಖಾಮಣಿಯನ್ನು ಪರಿಪರಿಯಿಂದ ಕಾಡಿದ ಕಥೆಯು ಸರ್ವಶ್ರುತವೇ ಇದೆಯಷ್ಟೇ? ಶುನಸ್ಸೇಫನನ್ನು ಉಳಿಸುವದರಲ್ಲಿಯೂ, ಹರಿಶ್ಚಂದ್ರನನ್ನು ಕಾಡುವದರಲ್ಲಿಯೂ ಪುನಃ ವಿಶ್ವಾಮಿತ್ರ ಮುನಿಯ ತಪಶ್ಶಕ್ತಿಯೆಲ್ಲ ವ್ಯರ್ಥವಾಯಿತು. ಆದರೂ ಆ ಕಡುಂಗಲಿಯು ಹಿಂದೆಗೆಯಲಿಲ್ಲ. ಮತ್ತೆ ದೃಢ ಪ್ರತಿಜ್ಞೆ ಮಾಡಿ ತಪಸ್ಸನ್ನು ಆರಂಭಿಸಿದ್ದೇನು ಸಾಮಾನ್ಯವಾದ ಮಾತೇ? ಇಂಥ ಅಪ್ರತಿಹತವಾದ ಉತ್ಸಾಹವಿರುತ್ತದೆಂತಲೇ ಇಂಥವರು ಜಗತ್ತಿನ ಶತ್ರುಗಳಾಗಿ ಬಾಳುವರು.

ಈ ಸಾರೆ ನೂರ್ಮಡಿ ಉತ್ಸಾಹದಿಂದ ಹೂಡಿದ ತಪೋ ಯಜ್ಞಕ್ಕೆ ದೇವದೇವರು ಮನಮೆಚ್ಚಿ– "ನಿನಗೆ ರಾಜಋಷಿಯ ಪದವಿಯನ್ನಿತ್ತಿದ್ದೇನೆ. ತಪಸ್ಸನ್ನು ಪರಿಸಮಾಪ್ತಿಗೊಳಿಸು ಎಂದು ಆಶೀರ್ವದಿಸಿದನು. ಇದಕ್ಕೆ ಮುನಿವರನು ಸಮ್ಮತಿಸಲಿಲ್ಲ. "ನನಗೆ ಬೇಕಾದದ್ದು ಅದಲ್ಲ. ಬ್ರಹ್ಮರ್ಷಿಪದಕ್ಕಾಗಿ ನನ್ನ ಅಂತರಂಗವು ಹಸಿದಿದೆ" ಎಂದನು. ಆದರೆ ಇದಕ್ಕೆ ಭಯಭೀತರಾದ ದೇವತೆಗಳು ಅಡ್ಡಬಂದು ದೇವದೇವನಲ್ಲಿ ಮೊರೆಯಿಟ್ಟು. ಬರತಕ್ಕ ವರವನ್ನು ಹಿಂದಿರುಗಿಸಿ ಬಿಟ್ಟರು. ಆದರೆ ಇಂತಹದಕ್ಕೆಲ್ಲಿಯಾದರೂ ವಿಶ್ವಾಮಿತ್ರ ಸಿಂಹವು ಧೈರ್ಯಗೆಟ್ಟು ಕುಗ್ಗುವಂತಹದೇ ?

ಹತ್ತು ಮೊಳ ಜಿಗಿಯುವದಕ್ಕೆ ಎತ್ತುಗಡೆ ಮಾಡುತ್ತಿದ್ದ ವಿಶ್ವಾಮಿತ್ರ ಮುನಿಯು ಇಷ್ಟೊತ್ತಿಗೆ ಯಾವುದೇ ಆಗಲೊಲ್ಲದೇಕೆ– ಒಂದು ಋಷಿತ್ವವನ್ನು ಪಡೆದನು. ಇಂದು ಸುಶಿಕ್ಷಿತರ 'ಥಿಯರಿ' 'ಪ್ರ್ಯಾಕ್ಟಿಸ್' ಎಂದೆನ್ನುತ್ತಿರುವ ಮಾತು ಇದೇ. ಕಣ್ಣಿಗೆ ಕಾಣುವದು ಹೆಚ್ಚು, ಕೈಗೆ ನಿಲುಕುವದು ಸ್ವಲ್ಪ. ಬುದ್ಧಿಗೂ ಆಶೆಗೂ ತೋರುವದು ಹೆಚ್ಚು, ಜೀವನಕ್ಕೆ ಲಭಿಸುವದು ತುಸು. ಆದರೆ ಹೀಗೆಯೇ ತುಸು ತುಸು ಅನ್ನುತ್ತ ಮುಂದುವರಿದ ಹಾಗೆಲ್ಲ ಅದೇ ದೊಡ್ಡದಾಗುತ್ತ ಬರುವದು. ರಾಜರ್ಷಿ ಪದವನ್ನು ಪಡೆದುಕೊಂಡ ಬಗ್ಗೆ ವಿಶ್ವಾಮಿತ್ರ ಮುನಿಯು ತಪೋಜೀವನದ ಪೂರ್ವರಂಗವು ಮುಗಿಯಿತು. ಆದುದರಿಂದ ಮತ್ತೆ ತಪಸ್ಸಿಗೆ ಆರಂಭ, ಇಲ್ಲಿಂದ ಮುನಿಯು ಉತ್ತರ ಸಾಧಕನು.

ಪೂರ್ವರಂಗದಲ್ಲಿ ಸಾಧಕನ ಸದ್ವೃತ್ತಿಗಳೇ ಆತನ ತಪೋವಿಲಂಬಕ್ಕೆ ಕಾರಣವಾಗುವವು. ಆದರೆ ಎತ್ತರ ಸಾಧನದಲ್ಲಿ ದೇವತಾಕೋಟಿಯವರ ವಿರೋಧವು. ಅಂತರಂಗದ ಸುಪ್ತ ಕಲುಷಿತ ವೃತ್ತಿಗಳ ಚಲ್ಲಾಟವೂ, ಸಾಧಕನ ತಪೋಭಂಗಗೊಳಿಸಲು ಹೆಣಗಾಡುವವರಿಂದ ಈಗ ಅಪಖ್ಯಾತಿಯೂ ಅಧಃಪತನವೂ ಅವನನ್ನು ಮುತ್ತಿಕೊಳ್ಳುವವು. ಆದರೆ ವಿಶ್ವಾಮಿತ್ರ ಮುನಿಯಂಥ ದೃಢಪ್ರತಿಜ್ಞ ಜೀವಗಳು ಇಂಥದರೊಳಗಿಂದಲೂ ಕಿತ್ತುಕೊಂಡು ಜಿಗಿದು ಗಮ್ಯಕ್ಕೆ ಹೋಗಿ ಮುಟ್ಟಿಬಿಡುವವು.

ಇದೀಗ ಬ್ರಹ್ಮರ್ಷಿಪದಕ್ಕಾಗಿ ಉಗ್ರತಪಸ್ಸು ನಡೆದಿದೆ. ಇತ್ತ ದೇವತೆಗಳು ಗಾಬರಿಗೊಂಡು ತಪಸ್ಸನ್ನು ಕೆಡಿಸಲಿಕ್ಕೆಂಬು ಮೇನಕೆಯೆಂಬ ಸುರವೇಶ್ಯೆಯನ್ನು ವನಕ್ಕೆ ಕಳಿಸಿ ಅವಳ ಬೆಂಬಲಕ್ಕೆ ತಾವೂ ಹೋದರು. ಮುನಿಯು ತೇಜಕ್ಕೆ ಆಹುತಿಯಾದೇನೆಂಬ ಹೆದರಿಕೆಯಿಂದ ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಅವಳು ಆತನ ಸಮೀಪದಲ್ಲಿ ಸುಳಿದಾಡಹತ್ತಿದಳು. ಮುನಿಯೇನೋ ಕಂಡು ಕಾಣದವರಂತೆ ಸ್ಥಿರನಾಗಿಯೇ ಇದ್ದನು. ಇಷ್ಟರಲ್ಲಿ ವಾಯುವು ಮೊದಲೇ ಗೊತ್ತುಪಡಿಸಿದ ಮೇರೆಗೆ ಅವಳ ಹೊಳೆವ ದುಕೂಲವನ್ನು ಹಾರಿಸಿಕೊಂಡು ಹೋಗಿಬಿಟ್ಟನು. ವಿಶ್ವಾಮಿತ್ರಮುನಿಯಲ್ಲಿ ಎಂದಿನಿಂದಲೂ ಮನೆಮಾಡಿಕೊಂಡಿದ್ದ ಕಾರುಣ್ಯವು ಈಗಲೂ ಕೆರಳದೆ ಇರಲಿಲ್ಲ; 'ಅಯ್ಯೋ ಪಾಪ ! ಬಾಲೆ ! ಅಸಹಾಯಕಳು !' ಎಂದುಕೊಂಡು ಅವಳ ದುಕೂಲವನ್ನು ಅವಳಿಗೆ ಒದಗಿಸಿಕೊಡಲೆಳಿಸಿ ಆಸನದಿಂದ ಎದ್ದನು. ಅವಳ ಸಮೀಪಕ್ಕೆ ಹೋದ ಹಾಗೆ ಅವಳ ದೇವಕಾಂತಿಯಿಂದೊಪ್ಪುವ ಅಂಗಸಿರಿಯು ಮಹೇಂದ್ರಜಾಲವು ಅವನ ಚಿತ್ತವನ್ನು ಮುಸುಕಿ ಸೆರೆಹಿಡಿದು ಬಿಟ್ಟದ್ದರಿಂದ ಮೋಹಪರವಶನಾಗಿ ಅವಳೊಡನೆ ಬೆರೆದುಬಿಟ್ಟನು; ಮುಗಿಯಿತು. ಬಂದ ಕಾರ್ಯವೂ ನಿರ್ವಿಘ್ನವಾಗಿ ನೆರವೇರಿದ್ದರಿಂದ ದೇವತೆಗಳು ಹರುಷಬಡುತ್ತ ಹಿಂದಿರುಗಿದರು. ಕೆಲಕಾಲದ ಅನಂತರ ಮೋಹವಿಳಿದ ಮೇಲೆ ಮುನಿಗೆ ಬುದ್ಧಿ ಬಂತು ! "ಓ ಹೋ" ಎಂದನು, ಆದರೆ ಇಷ್ಟರಲ್ಲಿ ಮೇನಕೆಯು ಒಂದು ಮಗುವನ್ನು ಹೆತ್ತು 'ನಿನ್ನ ಶಿಶುವನ್ನು ನೀನು ನೋಡಿಕೋ !' ಎಂದು ಅದನ್ನು ಅವನ ಮುಂದಿರಿಸಿ ಹಾರಿಹೋದಳು. ಈಗ ಅವನ ತಪಸ್ಸೆಲ್ಲ ಅಳಿದದ್ದರಿಂದ ಶಾಪಕೋಪಗಳೇನೂ ನಡೆಯುವ ಹಾಗಿರಲಿಲ್ಲ. ಆದರೆ ಮುಂಚಿನ ಬಿಂಕಕ್ಕೇನು ಕೊರತೆ ? ಆ ಬಿಂಕಗಾರನು ಇದಕ್ಕೆ ಹಣಿಯುವನೇ ? ಇದೆಲ್ಲಾ ದೇವತೆಗಳ ಕಪಟವೆಂದು ಗೊತ್ತಾಗಲು ಕಡು ಹೆಮ್ಮೆಯಿಂದ "ನಿಮ್ಮ ಶಿರವನ್ನು ನೀವು ನೋಡಿಕೊಳ್ಳಿರಿ, ನಿಮ್ಮ ಕಪಟದ ಫಲವನ್ನು ನೀವು ಉಂಡು ತೀರಿಸಿರಿ !" ಎಂದು ಹೀಯಾಳಿಸಿ, ಇದ್ದ ಕೂಸನ್ನು ಇದ್ದಲ್ಲಿಯೇ ಬಿಟ್ಟು ಮದ್ದಾನೆಯಂತೆ ಮತ್ತೆ ತಪಶ್ಚರ್ಯಕ್ಕೆ ನಡೆದನು. ಅರಣ್ಯ ಪ್ರದೇಶದಲ್ಲಿ ಆ ಹಾಲುಹಸುಳೆಯನ್ನು ತಿರುಗಿ ನೆಲೆಗೆ ಹಚ್ಚಬೇಕಾದರೆ ದೇವತೆಗಳ ಶತಕೀರ್ತಿಯೆಲ್ಲಾ ತಿಳಿದು ಹೋದಂತಾಯಿತು.

ಗಂಡುಗೆಚ್ಚಿನ ವಿಶ್ವಾಮಿತ್ರ ಮುನಿಯು ಪುನಃ ಇಮ್ಮಡಿ ಹುರುಪಿನಿಂದ ತಪವನ್ನು ಸಾಧಿಸಹತ್ತಿದನು. ಅವನ ತಪಸ್ಸಿನ ಝಳಕ್ಕೆ ದೇವತೆಗಳ ಕಿರೀಟಗಳು ಕರಗಿ ಕಳಚಹತ್ತಿದವು. ಆಗ ಅವರು ಇನ್ನೇನು ಮಾಡೋಣವೆಂದು ಕಕ್ಕಾವಿಕ್ಕಿಯಾದರು. ಅವರಲ್ಲಿಯ ಬುದ್ಧಿವಂತರೆಲ್ಲಾ ತಲೆಗೂಡಿಸಿ ಇನ್ನೊಮ್ಮೆ ಪ್ರಯತ್ನ ಮಾಡುವದನ್ನು ನಿಶ್ಚಯಿಸಿ, ಮನ್ಮಥನ ಮದ್ದಾನೆಯಂತಿರುವ ರಂಭೆಯನ್ನು ಕರೆದು ಅವಳಿಗೆ ಈ ಕೆಲಸವನ್ನು ಒಪ್ಪಿಸಿ, ತಾವೆಲ್ಲರೂ ಸರ್ವಸನ್ನಾಹದೊಂದಿಗೆ ಅವಳ ಹಿಂದೆ ಹೊರಟರು. ಅವಳ ರೂಪಲಾವಣ್ಯವಂತೂ ಒತ್ತಟ್ಟಿಗಿರಲಿ, ಅವಳ ಅಂಗಸೌರಭವು

ಮೂಗಿಗೆ ತಾಕಿದರೆ ಉನ್ಮಾದವೇರದ ಜೀವಜಂತುವು ಭುವನ ಬ್ರಹ್ಮಾಂಡದಲ್ಲಿ ಸಿಗುವದು ಅಪರೂಪವೆಂದೇ ಹೇಳಬೇಕು.

"ಬದುಕಿದರೆ ಸ್ವರ್ಗ, ಸತ್ತರೆ ಸಮಾಧಾನ" ಎಂದು ಗಟ್ಟಿ ಮನಸ್ಸು ಮಾಡಿದ ಸಮಸ್ತ ದೇವಗಣವು ಹೆಣ್ಣುಗಂಡೆಂಬ ಭೇದವಿಲ್ಲದೆ ಸಮೂಹಗಟ್ಟಿ ನೆರೆಯಿತು.

ವಿಶ್ವಾಮಿತ್ರ ಮುನಿಯ ಚರಮ ಪರೀಕ್ಷೆಯ ಹೊತ್ತು ಬಂತು, ರಂಭೆ ತನ್ನ ಅನಂಗವೈಭವವನ್ನು ಬೀರುತ್ತ ವನಪ್ರಾಂತದಲ್ಲಿ ಹೆಜ್ಜೆ ಹಾಕುವದೇ ತಡ, ಹಕ್ಕಿ ಪಕ್ಕಿಗಳೆಲ್ಲ ಮದವದ್ದು ಕುಣಿಯಹತ್ತಿದವು. ತರುಲತೆಗಳೆಲ್ಲ ಬಿಗಿದಪ್ಪಿ ಬಾಹ್ಯ ಪ್ರಜ್ಞೆದಪ್ಪಿದವು. ಸಮಸ್ತ ವನ ಪ್ರದೇಶದಲ್ಲೆಲ್ಲ ಕಾಮಗಂಧವಿಡುಗಿಬಿಟ್ಟಿತು. ಈ ವಾಸನೆಯು ಬಡಿಯುತ್ತಲೇ ವಿಶ್ವಾಮಿತ್ರ ಮುನಿಯು ದೇವತೆಗಳ ನೀಚಕೃತಿಗೆ ಉರಿದೆದ್ದು ಮಹೋಗ್ರ ಕೋಪವಶನಾಗಿ ಶಾಪ ವೃಷ್ಟಿಯನ್ನು ಸೂರೆ ಮಾಡಿದನು. ದೇವತೆಗಳು ದಿಕ್ಕೆಟ್ಟು ಹೌಹಾರಿ ಓಡಲಾರಂಭಿಸಿದರು. ರಂಭೆಯ ಒನವು ಒಯ್ಯಾರ ಗಳು ದೆಸೆಗೆಟ್ಟು ಹೋದವು. ಇಷ್ಟೆಲ್ಲಾ ಆಯಿತಾದರೂ ದೇವತೆಗಳು ಪಲಾಯನ ಹೇಳಹೇಳುತ್ತಲೇ ಹರುಷಪಡಹತ್ತಿದರು. ಯಾಕಂದರೆ ಬ್ರಹ್ಮರ್ಷಿ ಪದಕ್ಕೇರು ವವನು ಕೋಪಾವಿಷ್ಟನಾದರೆ ಅಷ್ಟೇ ಅವನ ಅಧಃಪತನಕ್ಕೆ ಸಾಕು, ಆಯಿತು. ಎಷ್ಟೇ ಗೋಳಾಡಿದರೂ ದೇವತೆಗಳ ಕೈಯೇ ಕಡೆಗೆ ಸಾಧಿಸಿಬಿಟ್ಟಿತು. ವಿಶ್ವಾಮಿತ್ರನು ಟೊಂಗೆ ಕಳಚಿದ ಮೋಟು ಮರದಂತೆ ಮತ್ತೆ ಮೊಂಡವಾಗಿ ನಿಂತನು. ಆದರೇನು? ಅವನು ಅಳುಕುವವನೇ ? ಛೀ, ಆ ಮಾತು ಅವನ ಪರಿಚಯದ್ದೇ ಅಲ್ಲ. "ಪುನಶ್ಚ ಹರಿಃ ಓಂ" ಎಂದು ಮತ್ತೆ ಕಟ್ಟುಗ್ರದ ಕಟ್ಟಳೆಗಳನ್ನು ಮಾಡಿಕೊಂಡು ಕೊನೆಯ ಆಸನವನ್ನು ಮಂಡಿಸಿದನು.

ಈ ಸಾರೆ ದೇವತೆಗಳು ಕೈಸೋತು ನಿಂತರು. ದೇವದೇವನು ದಿವ್ಯಪ್ರಭೆ ಯಿಂದ ಝಗಝಗಿಸುತ್ತ ಪ್ರಕಟಮಾನನಾಗಿ ವಿಶ್ವಾಮಿತ್ರ ಮುನಿಯನ್ನು ಹರಿಸಿ "ಬ್ರಹರ್ಷಿಯಾದಿ" ಏಳು ಎಂದು ಸಂತೈಸಿದನು.

ಓಂ ಓಂ ಓಂ । ಓಂ ಓಂ ಓಂ । ಓಂ ಓಂ ಓಂ ॥

ಓಂ ಭೂರ್ಭುವಸ್ವಃ ॥ ತತ್ ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ॥ ಧಿಯೋಯೋನಃ ಪ್ರಚೋದಯಾತ್ ॥ ಓಂ ಓಂ ಓಂ ॥

ಉತ್ತಿಷ್ಠತ । ಜಾಗ್ರತ । ಪ್ರಾಪ್ಯವರನ್ನಿ ಬೋಧತ ॥ ಎಂದು ಶ್ರುತಿಯು ಸಾರುತ್ತದೆ. ಏಳು । ಎಚ್ಚರಾಗು ॥ ಬಯಸಿದ್ದನ್ನು ಪಡೆದುಕೊಂಡೇ ಹೊರಳು ॥ ಎಂಬ ಆ ಅಮರವಾಣಿಯ ಮೂರ್ತಿಮಂತ ರೂಪವೆಂದರೆ ನಮ್ಮ ಈ ಮಹಾದೃಢ ಸಂಕಲ್ಪಶಾಲಿಯಾದ ವಿಶ್ವಾಮಿತ್ರ ಮುನಿಯೇ ಸರಿ.

ಇತ್ತ ಜ್ಞಾನನಿಧಿಗಳಾದ ವಸಿಷ್ಠರಿಗೆ ಅಂತರ್ಜ್ಞಾನದಲ್ಲಿ ಇದೆಲ್ಲಾ ಮಾತು ಅವಗತವಾಗುತ್ತಲೆ ಅವರು ಪರಮ ಹರ್ಷದಿಂದ "ಭಳಿರೆ ವಿಶ್ವಾಮಿತ್ರಾ ! ನಾನು ಜನ್ಮಸಿದ್ಧ ಬ್ರಹ್ಮರ್ಷಿಯಾದರೆ ನೀನು ತಪಃಸಿದ್ಧ ಬ್ರಹ್ಮರ್ಷಿಯಾಗಿ ನನ್ನನ್ನು ಹಿಂದಟ್ಟಿಬಿಟ್ಟೆ !! ನಿನ್ನ ಕೀರ್ತಿಯು ಅಜರಾಮರವಾಗಿ ಉಳಿಯುವದು ! ಇದ್ದರೆ ಇಂಥ ಗಂಡುಗಾರಿಕೆ ಇರಬೇಕು !! ಭಾಪು ಭಾಪು !!" ಹೀಗೆಂದು ಧನ್ಯೋದ್ಗಾರವನ್ನು ತೆಗೆಯುವ ಹೊತ್ತಿಗೆ ಸರಿಯಾಗಿ ವಿಶ್ವಾಮಿತ್ರ ಮಹರ್ಷಿಯು ಇದುರಿಗೇ ನಿಂತಿದ್ದಾನೆ. ಒಬ್ಬರನ್ನೊಬ್ಬರು ಅರಿತು ಅವರಿಬ್ಬರೂ ಆನಂದದಿಂದ ಅಪ್ಪಿಕೊಂಡರು ! ದೇವತೆಗಳೂ ಕೂಡ ಮತ್ಸರವನ್ನು ತೊರೆದು ಹೂವಂಳೆಗರೆದರು !!

ಓಂ ಶ್ರೀ ಓಂ

ಜ. ಕ. ೧೪-೫ ಮೇ ೧೯೩೬

# ಆಶ್ರಯ

(ಒಂದು ದೃಷ್ಟಾಂತ)

---

ನಿನ್ನೆ ೫ ತಾಸು ರಾತ್ರಿಯಾದ ಬಳಿಕ ಒಂದು ಬಗೆಯ ಭಾವಾವೇಶವುಂಟಾಗಿ ಒಳಗೊಳಗೇ ಒಂದು ಬಗೆಯ ಪ್ರಶ್ನೋತ್ತರಗಳಿಂದ ಕೂಡಿದ ಭಾವರಾಜ್ಯದ ಸಂವಾದಕ್ಕೆ ಮೊದಲಾಯಿತು.

ಅದು ಹೀಗೆ :

ಒಳಗಿನವನು :– ಈಗ ಎಲ್ಲಿಗೆ ಬಂದಂತಾಯಿತು ?

ನಾನು :– ನನ್ನ ಬಲವೆಲ್ಲಾ ಮುಗಿದುಹೋಯಿತು. ಗುರುಕೃಪೆಯಾಗಲಿ. ನನ್ನನ್ನು ಉದ್ಧರಿಸದ ಹೊರತು ನನಗಿನ್ನು ಗತ್ಯಂತರವಿಲ್ಲ. ನನಗಿನ್ನು ಸ್ವಂತ ಸಾಮರ್ಥ್ಯವು ಎಳ್ಳಷ್ಟೂ ಉಳಿಯಲಿಲ್ಲ.

ಒಳಗಿನ :– ನಿನ್ನ ಇಷ್ಟಸಿದ್ಧಿಯು ಇನ್ನೂ ಆಗಿಯೇ ಇಲ್ಲವೇನು ?

ನಾನು :– ಸಂಪೂರ್ಣವಾಗಿ ಇಲ್ಲ.

ಒಳಗಿನ :– ಬಹು ವರ್ಷಗಳ ಹಿಂದಿನ ನಿನ್ನ ಉದ್ದೇಶವನ್ನು ನೆನೆಸಿಕೋ. ನೀನು ಆಧ್ಯಾತ್ಮಕ್ಕೆ ಧುಮುಕುತ್ತಿದ್ದುದು ಯಾವ ಕಾರಣಕ್ಕೆ ಎಂದು ನಿನ್ನ 'ಪೂರ್ವ ರಂಗ'ದಲ್ಲಿ ಬರೆದಿರುವಿ.

ನಾನು :– ಎಲ್ಲೆಲ್ಲಿ ಮಾನವ ವಸತಿಯಿದೆಯೋ ಅಲ್ಲೆಲ್ಲಾ ಒಂದಿಲ್ಲೊಂದು ಬಗೆಯ ಧರ್ಮವು ಇದ್ದೇ ಇದೆ. ಆದ್ದರಿಂದ ನಾವೆಲ್ಲಿ ಹೋದರೂ ಈ ಧರ್ಮ ವೆಂಬುದು ನಮ್ಮ ಬೆನ್ನನ್ನೇ ಬಿಡುವುದಿಲ್ಲ. ನಮಗಾದರೋ ಅದು ಸೋಪಪತ್ತಿಕ ವಾಗಿ ಸತ್ಯವೆಂದೆನಿಸುವದಿಲ್ಲ. ಆದ್ದರಿಂದ ಅದರ ಮೂಲವನ್ನೇ ಪ್ರತ್ಯಕ್ಷೀಕರಿಸಿ ಕೊಂಡರೆ ಈ ತೊಡಕುಗಳೆಲ್ಲಾ ತಾವೇ ಬಿಟ್ಟು ಹೋಗುತ್ತವೆ– ಎಂದು ಬಗೆದು ನಾನು ಆಧ್ಯಾತ್ಮಕ್ಕೆ ಪ್ರವರ್ತಿಸಿದ್ದೆನು.

ಒಳಗಿನ :– ಈಗೊಂದು ವರ್ಷದಿಂದ ನಿನಗೆ ಧರ್ಮವೆಂಬುದರ ವಿಚಾರ ಗಳನ್ನೆಲ್ಲ ನಾನು ವಿಶದಪಡಿಸಿಲ್ಲವೆ ?

ನಾನು :– ಹೌದು,

ಒಳಗಿನ :– ಹಾಗಾದರೆ ನಿನ್ನ ಸಂಕಲ್ಪವು ಮುಗಿದಂತೆ ಆಗಲಿಲ್ಲವೋ ?

ನಾನು :– ಹಾಗೆ ಅನ್ನಲೇಬೇಕಾಗುತ್ತದೆ, ಆದರೆ......

ಒಳಗಿನ :– ಅದೇನು ಮತ್ತೆ ?

ನಾನು :– ಗುರು ಶ್ರೀ ಅರವಿಂದರ ತತ್ತ್ವದಂತೆ ಪೂರ್ಣತೆಯೆಂಬುದು ಇನ್ನೂ ಬಹುದೂರ.

ಒಳಗಿನ :– ಹೌದು, ಆದರೆ ಆರಂಭದಲ್ಲಿ ನೀನು ಆ ಪೂರ್ಣತೆಯನ್ನು ಅಪೇಕ್ಷಿಸಿದ್ದಿಯೇನು ?

ನಾನು :– ಇಲ್ಲ.

ಒಳಗಿನ :– ಮಧ್ಯದಲ್ಲಿ ನೀನು ಬೇಕಾದುದನ್ನು ಬಯಸುತ್ತೀ– ನಿನ್ನ ಮೂಲ ಸಂಕಲ್ಪವನ್ನು ನೀನು ಲಕ್ಷಿಸುವದಿಲ್ಲವೋ ? ಅದಿರಲಿ, ನೀನು ಆಧ್ಯಾತ್ಮಕ್ಕೆ ಪ್ರವರ್ತಿಸಿದ ಮೇಲೆ "ದೇವರು ಇದ್ದಾನೆಂಬುದಿಷ್ಟೇ ಗೊತ್ತಾದರೆ ಸಾಕು; ನನಗೆ ಹೆಚ್ಚಿನದೇನೂ ಬೇಕಾಗಿಲ್ಲ" ಎಂದು ಅನ್ನುತ್ತಿರಲಿಲ್ಲವೋ ?

ನಾನು :– ಹೌದು, ಹಾಗೆ ಅನ್ನುತ್ತಿದ್ದೆನು.

ಒಳಗಿನ :– ನಿನ್ನ ಆ ಇಚ್ಛೆಯನ್ನು ನೆರವೇರಿಸಿಕೊಟ್ಟು ಬಹುದಿನಗಳಾಗ ಲಿಲ್ಲವೋ ?

ನಾನು :– ಹೌದು.

ಒಳಗಿನ:– ಅಷ್ಟೇ ಅಲ್ಲ, ನಿನ್ನ ಅಸಂಖ್ಯ ಅವಾಂತರ. ಇಚ್ಛೆಗಳನ್ನು ನಾನೂ ಕೈಗೂಡಿಸಿಕೊಟ್ಟಿಲ್ಲವೋ ? ಖಂಡ–ಖಂಡಾಂತರದ ಬಹುವಸ್ತುಗಳನ್ನು ಸಹ ನಿನಗೆ ಒದಗಿಸಿಕೊಟ್ಟಿಲ್ಲವೋ ?

ನಾನು:– ಹೌದು ಸ್ವಾಮೀ ! ನಿನ್ನ ಆಶೀರ್ವಾದವನ್ನು ಬಹಳವಾಗಿ ಹೊಂದಿರುವುದು ನಿಜ.

ಒಳಗಿನ :– ನಿನ್ನ ಮಟ್ಟಿಗೇನೋ ನೀನು ಇಷ್ಟಕ್ಕೆ ತೃಪ್ತನಾಗು, ಪರಮಾತ್ಮನು ಹೊತ್ತು ಸಾಧಿಸಿ ನಿನಗೆ ಇನ್ನೂ ಹೆಚ್ಚಿಗೆ ತಾನಾಗಿ ಕೊಟ್ಟರೂ ಕೊಟ್ಟಾನು. ಆದರೆ ನಿನಗೆ ಅದನ್ನು ಆಶಿಸುವ ಬಾಧ್ಯತೆಯಿಲ್ಲ, ತಾನಾಗಿ ಇತ್ತರೆ ಆದೀತು.

ನಾನು :– ತಥಾಸ್ತು ಸ್ವಾಮೀ !!

೧೯೩೭ ರ ಬರೆಹ

## ಋಷಿಗಳ ಕಾಲದಲ್ಲಿ

ಆಧುನಿಕ ತರ್ಕಪ್ರಧಾನ ಅಧ್ಯಾತ್ಮ ಸಾಧಕರು ಉಪನಿಷತ್ಕಾಲದ ಋಷಿಗಳ ಉದಾರ ಜೀವನದ ಕಡೆಗೆ ಒಂದಿಷ್ಟು ಕಣ್ದೆರೆದು ನೋಡುವುದು ಅಗತ್ಯವಾಗಿದೆ. ಅವರಲ್ಲಿ ಛಲವಿಲ್ಲ, ಹಮ್ಮಿಲ್ಲ, ಏಕದೇಶೀಯತೆಯಿಲ್ಲ, ಅಸತ್ಯವಿಲ್ಲ, ಆತುರವಿಲ್ಲ. ಅವರು ಇಂಥ ಧೀರರು.

× × × ×

ನಾಲ್ಕು ಜನ ಋಷಿಗಳು ಒಂದೆಡೆ ಕಲೆತರೆ ತೀರಿತು. ಪರಮ ತತ್ತ್ವವನ್ನು ಕುರಿತು ಚರ್ಚೆಗೆ ಆರಂಭ. ಒಬ್ಬೊಬ್ಬರು ಒಂದೊಂದು ದಿಕ್ಕಿನಿಂದ ಮಂಡಿಸಲಾರಂಭಿಸುವರು. ಕೊನೆಗೆ ಅಭಿಪ್ರಾಯ ಭೇದವುಂಟಾದರೆ ಎಲ್ಲರೂ ಕೂಡಿಕೊಂಡು ತಮಗಿಂತ ಹೆಚ್ಚಿನ ಜ್ಞಾನಿಯನ್ನು ಹುಡುಕಿಕೊಂಡು ಅವನೆಡೆಗೆ ಹೋಗುವರು. ಆತನು ಇವರಲ್ಲಿ ಯಾರ ತತ್ತ್ವವೂ ಅಲ್ಲವೆಂದು ಹೇಳಲಾರನು. ಯಾಕಂದರೆ ಅವೆಲ್ಲವೂ ಅವರವರ ಅನುಭವದಿಂದಲೇ ಸಿದ್ಧವಾದವುಗಳು. ಆದರೂ ಆತನು ಅವೆಲ್ಲ ಎಳೆಗಳನ್ನು ಒಂದುಗೂಡಿಸಿ ಒಂದು ಹೊಸ ಹುರಿಯನ್ನು ಹೊಸೆದು ಅವರಿಗೆ ಕೊಟ್ಟು ಆಮೇಲೆ ಹೇಳುವದೇನಂದರೆ–

"ನೀವು ಒಬ್ಬೊಬ್ಬರು ಕಂಡದ್ದೂ ಸತ್ಯವೇ ಹೌದಾದರೂ ಇದು ಅಂಶಿಕ ಸತ್ಯ. ನಿಮ್ಮೆಲ್ಲರ ಅಂಶಗಳನ್ನು ಒಳಗೊಂಡ ಅಖಂಡ ಸತ್ಯವೊಂದಿದೆ. ಅದೇ ಪರಮ ಸತ್ಯ. ಇದನ್ನು ಅರಿಯದೆ ನೀವು ನಿಮ್ಮ ಸತ್ಯದ ದಿಶಾನುಸಾರವಾಗಿ ಇಂಥಿಂಥ ಅಂಗ-ವೈಕಲ್ಯಾದಿ ಹಾನಿಗಳೊದಗುತ್ತಿದ್ದವು."

ಹೀಗೆಂದು ಆ ಪರಮ ಜ್ಞಾನಿಯು ಉಪದೇಶಗೈಯಲು ಅವರು ತಮ್ಮೆಲ್ಲರ ಅನುಭವಗಳ ಅಪೂರ್ಣತೆಯನ್ನೊಪ್ಪಿಕೊಂಡು ಸರ್ವಸಮನ್ವಯದ ಅಖಂಡ ತತ್ತ್ವ ಪಿಂಡವೊಂದನ್ನು ಸಂಪಾದಿಸಿಕೊಂಡು ಹೋಗುತ್ತಿದ್ದರು.

× × × ×

ಇನ್ನೊಬ್ಬ ಋಷಿಯು ತನ್ನ ಮಗನಿಗೆ ಸಕಲಶಾಸ್ತ್ರಗಳನ್ನು ಕಲಿಸಿಕೊಟ್ಟು ರಾಜಸಭೆಗೆ ಕಳುಹಲು ಅಲ್ಲಿ ಆ ಋಷಿಕುಮಾರನಿಗೆ ಪರಿಚಯವಿಲ್ಲದ ಪ್ರಶ್ನೆಗಳನ್ನು

ಪ್ರಶ್ನೆಗಳನ್ನು ವಿಚಾರಿಸಿದ್ದರಿಂದ ಆತನು ಹಿಂದಿರುಗಿ ತಂದೆಯ ಬಳಿಗೆ ಬಂದು– "ನೀನು ನನಗೆ ಸ್ವಲ್ಪ ಮಾತ್ರವೇ ಕಲಿಸಿ ಎಲ್ಲಾ ಕಲಿಸಿದ್ದೇನೆಂದು ಹೇಳಿದೆಯಲ್ಲ" ಎಂದು ಮುನಿಸಿನಿಂದ ನುಡಿದಾಗ ಆ ತಂದೆಯು– 'ಅಯ್ಯೋ ! ನನಗೇ ಆ ಪ್ರಶ್ನೆಗಳು ಬಗೆಹರಿಯದಿರಲು ನಿನಗೇನು ಕಲಿಸಲಿ ? ನೀನು ಅನಕಾ ಇಲ್ಲಿಯೇ ಇರು. ಮೊದಲು ನಾನೇ ಅಲ್ಲಿಗೆ ಹೋಗಿ ಕಲಿತುಕೊಂಡು ಬರುತ್ತೇನೆ.' ಎಂದು ಹೇಳಿ ಶಿಷ್ಯಭಾವದಿಂದ ರಾಜನಲ್ಲಿಗೆ ಹೊರಟು ಹೋಗುತ್ತಾನೆ.

× × × ×

ಮತ್ತೊಬ್ಬ ಕುಮಾರನು ಬ್ರಹ್ಮವಿದ್ಯೆಗೆ ಮನಸೋತು ಅದನ್ನು ಸಂಪಾದಿಸುವದಕ್ಕೆಂದು ಗುರುಕುಲಕ್ಕೆ ಹೋಗಲು ಅಲ್ಲಿ ಆತನ ಗೋತ್ರಗಳನ್ನು ವಿಚಾರಿಸಿದಾಗ– "ನನ್ನ ತಾಯಿಯು ಯೌವನದ ಅಂಧತೆಯಲ್ಲಿ ಬಹುಜನರನ್ನು ಪರಿಚರಿಸಿದ್ದರಿಂದ ನಾನು ಯಾರಿಗೆ ಹುಟ್ಟಿದೆನೆಂಬುದನ್ನು ನಾನೂ ಅರಿಯೆ, ನನ್ನ ತಾಯಿಯೂ ಅದನ್ನರಿಯಳು" ಎಂದು ಹೇಳುತ್ತಾನೆ. ಅದಕ್ಕೆ ಆ ಗುರುಕುಲದ ಮಹರ್ಷಿಯು– "ಅಯ್ಯಾ, ಇಂಥ ಪ್ರಖರ ಸತ್ಯವನ್ನು ನುಡಿಯುವವನು ಬ್ರಹ್ಮವಿದ್ಯೆಗೆ ಎಂದೆಂದಿಗೂ ಅನರ್ಹನಿರಲಾರನು. ಆದ್ದರಿಂದ ನಿನ್ನ ಗೋತ್ರಸೂತ್ರಗಳು ಗೊತ್ತಾಗದಿದ್ದರೂ ಅಡ್ಡಿಯಿಲ್ಲ" ಎಂದು ಆಶೀರ್ವದಿಸುವನು.

× × × ×

"ಅದು ಹೇಗೆ ?" ಎಂದು ಶಂಕಿಸಿದಾಗ ಉಪನಿಷತ್ತಿನ ಋಷಿಗಳು "ಹೀಗೆ" ಎಂದು ತಟ್ಟನೆ ಸಮಾಧಾನವನ್ನು ಹೇಳದೆ– 'ಅಯ್ಯಾ, ತಪವೂ ಬ್ರಹ್ಮಚರ್ಯವೂ ಇಲ್ಲದೆ ನಿಜಜ್ಞಾನವು ನೆಲೆಗೊಳ್ಳಲಾರದು. ಆದ್ದರಿಂದ ಇಂತಿಷ್ಟು ವರ್ಷ ಬ್ರಹ್ಮಚರ್ಯ ನಿರತನಾಗಿ ತಪವನ್ನು ಆಚರಿಸಿ ಆಮೇಲೆ ಇಲ್ಲಿಗೆ ಬಾ ಅಂದರೆ ನಿನಗೆ ನನ್ನ ಹೇಳಿಕೆಯ ಅರ್ಥವಾದೀತು" ಎಂದು ಅಪ್ಪಣೆಯನ್ನು ವಿಧಿಸುವರು. ಜಿಜ್ಞಾಸುವು ಅದರಂತೆ ಕೆಲವು ವರುಷ ಆಚರಿಸಿ ಬಂದು ಸತ್ಯ ತತ್ತ್ವವನ್ನು ತಿಳಿದುಕೊಂಡು ಹೋದಮೇಲೆ ಕೆಲದಿನಗಳಲ್ಲಿ ಆತನಿಗೆ ಅದರಲ್ಲಿ ಪುನಃ ಅತೃಪ್ತಿ ಹುಟ್ಟಿ, 'ಸ್ವಾಮೀ, ಇನ್ನೂ ಮುಂದೆ ಏನಾದರೂ ಇದೆಯೇ ?' ಎಂದು ಗುರುವಿಗೆ ಬಿನ್ನೈಸಲು ಆತನು– 'ಪುನಃ ಇಂತಿಷ್ಟು ವರುಷ ಬ್ರಹ್ಮಚರ್ಯನಿರತನಾಗಿ ತಪವನ್ನಾಚರಿಸಿ ಆಮೇಲೆ ನನ್ನೆಡೆಗೆ ಬಾ' ಎಂದು ಅಜ್ಞಾಪಿಸುವನು. ಶಿಷ್ಯನು ಹಾಗೆ ಅನುಸರಿಸಿದ ಬಳಿಕ ಗುರುವು ಮತ್ತೆ ಬೋಧಿಸುವನು. ಅಷ್ಟಕ್ಕೇ ಎಲ್ಲವೂ ಎಲ್ಲಿ ತೀರುತ್ತದೆ ? ಶಿಷ್ಯನು ಪುನಃ ಬರುತ್ತಾನೆ. ಗುರುವು ಪುನಃ ಜ್ಞಾನಕ್ಕೆ ತಪಸ್ಸು ಮತ್ತು ಬ್ರಹ್ಮಚರ್ಯ ಇವುಗಳ ಮಹತ್ವವೆಷ್ಟಿದೆಯೆಂಬುದನ್ನು ತಿಳಿಸಿಕೊಡುತ್ತಾನೆ. ಆತನು ಪುನಃ ಅದರಂತೆ ಆಚರಿಸಿ ಬಂದ ಬಳಿಕ ಋಷಿಯು ಪುನಃ ಬೋಧಿಸುತ್ತಾನೆ. ಹೀಗೆ ಪುನಃ ತಪಸ್ಸು; ಮತ್ತು ಪುನಃ ಪುನಃ ಬೋಧನೆ. ಈ ಪ್ರಕಾರವಾಗಿ ಒಬ್ಬೊಬ್ಬರ ಜೀವನದಲ್ಲಿ ಪೂರ್ಣ ಜ್ಞಾನಪ್ರಾಪ್ತಿಗೆ ನೂರುಗಟ್ಟಲೆ ವರುಷಗಳು ಗತಿಸಿ ಹೋಗಿರುವವು.

× × × ×

ಹೀಗೆ ಆಧ್ಯಾತ್ಮವೆಂಬುದು ಕಣಜದೊಳಗಿನ ಧಾನ್ಯವನ್ನು ತೆಗೆದುಕೊಂಡು ಕುದಿಸಿ ಅನ್ನವನ್ನು ಮಾಡಿಕೊಳ್ಳುವಂತೆ ಇರದೆ ಅರಣ್ಯದೊಳಗಿನ ಕಾಳುಗಳನ್ನು ಆರಿಸಿ ತಂದು; ಕಾಡನ್ನು ಕಡಿದು, ಕಸವನ್ನು ಕಿತ್ತಿ, ನೆಲವನ್ನು ಹದಗೊಳಿಸಿ, ಉಚಿತಕಾಲದಲ್ಲಿ ಬಿತ್ತಿ, ಸಾವಧಾನತೆಯಿಂದ ಬೆಳೆಯನ್ನು ಕಾಪಾಡಿ ಹದಕ್ಕೆ ಬಂದ ಬಳಿಕ ರಾಶಿಯನ್ನು ಮಾಡಿ ವಿಪುಲ ಅನ್ನ ಸಾಮಗ್ರಿಯನ್ನು ದೊರಕಿಸಿಕೊಳ್ಳುವಂತೆ ದುರ್ಧರವಾಗಿದೆ.

× × × ×

ಆದರೆ ಇಂದಿನವರಾದ ನಾವು ಇದ್ದ ಕಲ್ಮಷಗಳನ್ನೆಲ್ಲ ಇದ್ದಕ್ಕಿದ್ದಂತೆ ಇಟ್ಟು ಕೊಂಡು ಒಂದೇ ದಿನದಲ್ಲಿ ಋಷಿಗಳ ಅಜ್ಜ ಮುತ್ತಂದಿರಾಗಿ ಬಿಡುತ್ತೇವೆ !!!

**ಶಿವಾನುಭವ ೧೩-೯, ೧೦ ಜೂನ, ಜುಲೈ ೧೯೩೯**

# ಇತಿಹಾಸ

ಅನಂತ ಕರ್ಮವೇ ವಿಶ್ವದ ಜೀವ. ಜೀವವಿರುವವರೆಗೆ ಜೀವನದ ಇರುವು. ಜೀವನದ ಕ್ರಮಬದ್ಧವಾದ ನೆನಪಿನ ಸರಳಪಳಿಯೆ ಚರಿತ್ರೆ, ಇತಿಹಾಸ.

ಕರ್ಮದ ಗಾಳಿಯಲ್ಲಿ ಅಲೆದಾಡುತ್ತಿರುವ ಇತಿಹಾಸದ ಪತಾಕೆಯು ಬಗೆ ಬಗೆಯ ಬಣ್ಣದೋರಿ ಜೀವನದ ಗತಿಯನ್ನು ಹಿಗ್ಗಿಸಲೂಬಹುದು; ತಗ್ಗಿಸಲೂ ಬಹುದು. ಕರ್ಮ-ಪ್ರವೃತ್ತ ಜೀವನನೌಕೆಯು ಇತಿಹಾಸದ 'ದಿಗ್ದರ್ಶನ' (ಉತ್ತರಮುಖಿ)ವಿಲ್ಲದಿದ್ದರೆ ತಮೋಮುಖಿಯಾಗುವುದು ಅನಿವಾರ್ಯ.

ಕರ್ಮಿಯು ಯಾವಾಗಲೂ ಮೇಲ್ಪಂಕ್ತಿಯ ಕಡೆಗೆ ಕಣ್ಣಿಟ್ಟು ಸಾಗುವನು. ಮೇಲ್ಪಂಕ್ತಿ (ಆದರ್ಶ)ಯಿಲ್ಲದ ಕರ್ಮವು ಗುರಿಯಿಲ್ಲದ ಗುಂಡಿನಂತೆ.

ವಿವೇಕಾನಂದರ ವೀರವಾಣಿಯಿದು– 'ಆದರ್ಶವೇ ಕರ್ಮಜೀವನದ ಪಂಚ ಪ್ರಾಣ...... ಈಗ ನಾವು ಏನಾದರೂ ಆಗಿದ್ದರೆ ಅದು ಆದರ್ಶದಿಂದಲೆ. ಇನ್ನೂ ಏನಾದರೂ ಆಗುವೆವಾದರೆ ಅದೂ ಆದರ್ಶದಿಂದಲೆ. ನಮ್ಮ ಬಾಳುವೆಯ ಕಡಿವಾಣವೆ ಅದರ ಕೈಯಲ್ಲಿದೆ.'

ಇತಿಹಾಸವೆಂದರೆ ರೂಪುಗೊಂಡ ಆದರ್ಶ; ಇತಿಹಾಸವೆಂದರೆ ವೇದಶಾಸ್ತ್ರಗಳ ಪ್ರತ್ಯಕ್ಷ ವ್ಯಾಖ್ಯಾನ.

ನಮ್ಮ ಹಿಂದಿನವರಿಗೆ ಪುರಾಣವೆ ಇತಿಹಾಸವಾಗಿದ್ದಿತು. ಆದರೆ ಇಂದಿನವರಿಗೆ ಇತಿಹಾಸವೆ ಪುರಾಣವಾಗಿಬಿಟ್ಟಿದೆ, ಪುರಾಣಪುರುಷರು ಭಾವಲೋಕದ ಜೀವರೇ. ಅಂತೆಯೆ ಇತಿಹಾಸವು ಪೌರುಷವನ್ನು ಬೋಧಿಸಿದರೆ ಪುರಾಣವು ಅಪೌರುಷೇಯದ ಕಡೆಗೆಳೆಯುತ್ತದೆ.

ಭವದಲ್ಲಿ ಮುಳುಗಿದ ಇಂದಿನ ಭವಿಯುಗವು ಭಾವಕ್ಕೆ ಎರವಾಗಿದೆ. ಅಂದಿನವರು ಮೌನವ್ಯಾಖ್ಯಾನದಿಂದ ಛಿನ್ನ ಸಂಶಯರಾಗುತ್ತಿದ್ದರು. ಇಂದಿನವರಿಗೆ ಮೇಜೂ, ಮನೆಯೂ ಕೂಡಿಯೇ ಗುಡುಗಿಡುವ 'ಲೆಕ್ಚರು' ಬೇಕು. ಇಂದಿನದು

ಶಬ್ದಯುಗ, ಅಂದಿನದು ಭಾವಯುಗ. ಶಬ್ದ ಬಂದು ಭಾವವನ್ನು ಕೊಂದಿತೆಂದು ಬಾಯ್ಬಲ್ಲಿನಲ್ಲಿದೆ,

ಶಬ್ದದಾಚೆಗೆ ಭಾವರಾಜ್ಯವಿಹುದಯ್ಯಾ ।
ಶಾಬ್ದಿಕರು ಬೇಗ ಭಾವಿಕರಾಗಲಯ್ಯ ॥

ಎಂದು ಇದೀಗ ಬಾಯ್ಬಲದ ನವಯುಗದ ಕೋಗಿಲೆಗಳು ಯುಗಧರ್ಮದ 'ಪ್ರ-ಣವ' ಮಂತ್ರವನ್ನು ಬಾಯ್ಬಿಚ್ಚಿ ಹಾಡುತ್ತಲಿವೆ. ಇಂದಿನ, 'ಅನು-ಭವ' ಗಾಮಿಯಾದ ಜಗವು ಅಂದಿನ 'ಅನು-ಭಾವ' ಮಂಟಪ ಸೇರಲಿಕ್ಕೆ, ಇತಿಹಾಸದ ಕಡೆಗೆ ಹೊರಳಿ ನೋಡಬೇಕಾದುದು ತೀರ ಅಗತ್ಯ.

ಹೇಡಿತನವು ಕೇಡಿನ ಬೀಡು. ಎಗ್ಗಿಲ್ಲದವನಿಗೆ ಮುಗ್ಗಲುಗೇಡಿತನವೇ ಗೊತ್ತು, ಅನಂತವಾದ 'ಅತಲ'ದಿಂದೆತ್ತಿ 'ಸತಲ'ಕ್ಕೆ ತರಬಲ್ಲ ದಿವ್ಯಶಕ್ತಿಯು ಹಮ್ಮೆಯೆ, ಈ ಹಮ್ಮೆಯಿಂದ ಹಮ್ಮು ಮಿಸುಕುವದು, ಹುರುಪಿನ ಕೆಚ್ಚಲು ತೊರೆದು ನಿಲ್ಲುವದು, ಹುರುಪು ಆವೇಶದ ಕಟ್ಟನ್ನು ಕತ್ತರಿಸಿಕೊಂಡಾಗಳೆ ಹುರಿಗಟ್ಟಿ ಹುರುಳಾಗುವದು, ಹೆಪ್ಪುಗಟ್ಟಿದ ಹೇಡಿತನದ ಹೊಟ್ಟೆಹರಿದೆದ್ದ ಹಮ್ಮು, ಹುರುಳುಹುರುಪಿನ ಬಿಸಿಯಲ್ಲಿ ಬೆಂದು ಹಣ್ಣಾಗುವದು. 'ಹಸಕು ಹಮ್ಮು ಹಣ್ಣಾದ ದಿನವೇ ದೇವಜೀವನದ ಆರಂಭ'ವೆಂದು ಗುರು ಅರವಿಂದರ ಗುರುಮಂತ್ರವುಂಟು.

ಇತಿಹಾಸವು ನೆನಪಿನ ಸರಪಳಿ. ಇದೂ ಒಂದು ಸ್ಮೃತಿ, ಮನುಸ್ಮೃತಿಯು ಅಂದಿನ ಧರ್ಮಗ್ರಂಥ. ಈ 'ಮನು-ಜ ಸ್ಮೃತಿಯು ಇಂದಿನ ಧರ್ಮಗ್ರಂಥ, ಏಕೆಂದರೆ ಅಂದಿನದು ಮನುಯುಗ. ಇಂದಿನದು ಮನುಜಯುಗ, 'ಯುಗವು ಬದಲಾಗಲೇ ಬೇಕು' (ಭಗಿನೀ ನಿವೇದಿತಾ), ಗುರು ಅರವಿಂದರಿದನ್ನೇ ಯುಗಧರ್ಮವೆಂದು ಹೇಳುವರು.

ನೆನಪಿಲ್ಲದೆ ನಾವು ಬಾಳಲೇ ಆರೆವು, ಹೆಜ್ಜೆಹೆಜ್ಜೆಗೂ ನೆನಪಿನ ಅಗತ್ಯ. ನೆನಪು ಧಾರೆಗಟ್ಟಿ ನೆನವಾಯಿತು, ಕರ್ಮ ಧಾರೆಗಟ್ಟಿ ಧರ್ಮವಾಯಿತು. ಕರ್ಮಕ್ಕೆ ನೆನಪೇ ಜೀವ. ಧರ್ಮಕ್ಕೆ ನೆನವೇ ಜೀವ. ಆದುದರಿಂದ ನೆನವಿನ ನೆಲೆಯಾದ ನೆನಪೇ ಧರ್ಮಕರ್ಮಗಳ ಸೆಲೆ.

ಒಬ್ಬನ ಬಾಳ್ವೆ ಇನ್ನೊಬ್ಬನಿಗೆ ಕೈನ್ನಡಿ, -ಚೆಲ್ಲಿದ ರುಮಾಲದವನನ್ನು ನೋಡಿ ತನ್ನ ತಲೆಗೆ ಕೈ ಒಯ್ಯುವುದು ಮನುಷ್ಯನ ಸ್ವಭಾವ; ಹಿಂದಿನ ಬಾಳ್ವೆ ಮುಂದಿನ ಮುಂಗುಡಿ. ಅದು ಮೇಲಾಗಿರಲೂಬಹುದು ಕೀಳಾಗಿರಲೂಬಹುದು. ಮೇಲು ಬಾಳ್ವೆಯು ಎಳೆತದಲ್ಲಿ ಸಾರೂಪ್ಯ, ಕೀಳು ಬಾಳ್ವೆಯ ಕಿಚ್ಚಿನಲ್ಲಿ ಸಾಮರಸ್ಯ. ಒಂದು ಪಡಿಯಚ್ಚಾದರೆ ಇನ್ನೊಂದು ಅಗ್ಗಿಷ್ಟಿಗೆ. ಎರಡರ ಮೇಳದಿಂದಲೇ ಮೂರ್ತಿ

ನಿರ್ಮಾಣ. ಬಾಳ್ವೆಯನ್ನು ಕೆತ್ತಿ ಕೊರೆದು ಪಡಿಯಚ್ಚುಗೊಳಿಸಿದರು ಪುರಾಣ ಮುನಿಗಳು, ಇತಿಹಾಸಕಾರರು! ಅದರಲ್ಲಿ ಎರಕಹೊಯ್ದು ತಮ್ಮನ್ನೇ ಮೂರ್ತಿಗೊಳಿಸಿ ತೋರಿದರು ಶರಣರು, ಮಹಾತ್ಮರು!

ಹಿಂದಿನವರು ಮುಂದಿನವರನ್ನು ತಮ್ಮ ಹಿಂದೆ ಹಿಂದೆ ಹರಿಯಹಚ್ಚಿದರು. ಆದರೆ ತಾವು ಮಾತ್ರ ಯಾರ ಹಿಂದೆಯೂ ಹರಿಯಲಿಲ್ಲ. ಅವರು ನಡೆದದ್ದೇ ಹಾದಿಯಾಯಿತು. ನುಡಿದದ್ದೇ ವೇದವಾಯಿತು! ಅವರಲ್ಲೇನಿತ್ತು? ನಮ್ಮಲ್ಲೇನಿಲ್ಲ? ಈ ಒಗಟನ್ನೊಡೆಯುವ ಕೀಲಿಯೇ ಇತಿಹಾಸ!

'ಸುಳುವು-ಹೊಳವು'
(ಇಪ್ಪತ್ತಾರು ಪ್ರಬಂಧ ಸಂಗ್ರಹ)
ಸಂಪಾದಕರು : ಜಿ. ಬಿ. ಜೋಶಿ
ಎಪ್ರಿಲ್-೧೯೩೯

# ಅಣ್ಣನ ಕಾರ್ಯ

---

ನಾಡಿನ ನಾಡಿಯನ್ನು ಹಿಡಿದು ಅದರ ಜೀವ ಜೀವಾಳವನ್ನು ತಮ್ಮ ಹಾಡಿನಲ್ಲಿಯೂ ಪಾಡಿನಲ್ಲಿಯೂ, ವೈಯಕ್ತಿಕವಾಗಿಯೂ ಸಾಂಘಿಕವಾಗಿಯೂ ಪಡಿಮೂಡಿಸಿ, ನಾಡಿನ ಮೇಲ್ಮೆಯನ್ನು ಸಾಧಿಸಲು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಹವಣಿಸಿದವರು ಅಣ್ಣ ಬೇಂದ್ರೆಯವರು.

'ಜೈನವಾಙ್ಮಯ ಮಧುವೆ, ವಚನಬ್ರಹ್ಮನ ವಧುವೆ, ಮುದ್ದು ವಿಠಲಗೆ ಮಾರಿಕೊಂಡ ದಾಸಿ' ಎಂದು ಕನ್ನಡ ಕಾವ್ಯದೇವಿಯ ಸನಾತನ ರಹಸ್ಯವನ್ನು ಸಾಕ್ಷಾತ್ಕರಿಸಿಕೊಂಡು, 'ಶರಣರ ದಾಸರ ಕರುಣೆ ಕಿರಣಿಸುವಂತೆ ಕೂಗುವಿಯಾ ಹೇಳು ಕೋಗಿಲೆ' ಎಂದು ಅಂಬಿಕಾತನಯನ ನಂಬುಗೆಗಿಂಬಾದ ನಿಜಗುಣದಲಿ ಬೆರೆತ (ತಮ್ಮ ಕಾವ್ಯ) ಕೋಗಿಲೆಗೆ ಕೇಳಿದರು ಈ ಅಣ್ಣ.

'ಮಾನ್ಯ ವಾಲ್ಮೀಕಿಯಂತೆ ಧನ್ಯ ಶುಕನೊಲು ಹಾಡು ಪುಣ್ಯಕಾವ್ಯವು ಹಾಡೆ ? ಕೋಗಿಲೆ !' ಎಂದು ಆದಿಕಾಲದಿಂದ ನಮ್ಮ ನಾಡಂನುಡಿಗಳ ನರನರಗಳಲ್ಲಿ ನೆರೆಯಾಗಿ ಹರಿಯುತ್ತಿರುವ ಭಾರತದ ಹಿರಿಗುರಿಯನ್ನು ಸಾಧಿಸಲು ಹೊರಟರು ತಮ್ಮ ಕವಿತೆಯಲ್ಲಿ, ಕೃತಿಯಲ್ಲಿ; ವೈಯಕ್ತಿಕವಾಗಿ, ಸಾಂಘಿಕವಾಗಿ.

'ಬಿತ್ತಿದರೆ ಬಿತ್ತುವುದು ಮುಕ್ಕು ಚಿಕ್ಕೆಯ ಕಾಳುಂ, ಮುತ್ತು ರತುನವ ಬಿತ್ತಿ ಮಾಡದಿರಂ ಹೊಲ ಹಾಳು' 'ಜೀವವನಂ ಚಾಚಿ, ಮುಗಿಲಂಗಳಕೆ ಹಚ್ಚಿ, ದೇವನೊಡ ನುಡಿವಂತೆ ಮಾಡು ಮೆಚ್ಚಿ !' 'ಏಳು ಮಲಗಿದೆಯೇಕೆ ಶರಣ ನಾಡೇ' ಎಂದಂ ತಮಗೆ ಸನಾತನ ಕಾವ್ಯದೇವಿ ಸಂದೇಶ ಬೀರಿದಳೆಂದು ಭಾವಿಸಿದರು ಈ ಅಣ್ಣ.

ಆದುದರಿಂದ ಅಂದಿನಿಂದಲೂ ಅಣ್ಣ,

'ಅದಯರಿದ್ದವರೆಲ್ಲ ಸದಯರಾಗುವಂತೆ'
'ವ್ಯೋಮಮಂಡಲ ಸುಖಧಾಮವಾಗುವಂತೆ'
'ಶರಣರ ದಾಸರ ಕರುಣೆ ಕಿರಣಿಸುವಂತೆ'
'ತನ್ನತನವನ್ನರಿತು ಭಿನ್ನಭಾವವ ಮರೆತು ಕನ್ನಡನಾಡ
ಚೆನ್ನರೇಳುವಂತೆ'

ಹಾಡಿನಲ್ಲಿ ನಡೆಯಲ್ಲಿ ನುಡಿಯಲ್ಲಿ ತಮ್ಮೊಬ್ಬರ ಮಟ್ಟಿಗಲ್ಲದೆ ಗುಂಪುಕಟ್ಟಿಕೊಂಡು ತಮ್ಮ ವಾಣಿಯನ್ನು ಗದ್ಯದಲ್ಲಿ, ಪದ್ಯದಲ್ಲಿ, ಮಾತಿನಲ್ಲಿ ಕೃತಿಯಲ್ಲಿ ಪಡಿಮೂಡಿಸುತ್ತ ಬಂದರು.

ಅವರ ಈ ಮಾತಿಗೆ ಸಾಕ್ಷಿಯಾಗಿ ಅವರದೇ ಒಂದು ಪತ್ರದ ಕೆಲವಂಶವನ್ನು ಇದರಡಿಯಲ್ಲಿ ಕೊಟ್ಟು ಅವರ ಗುರಿಯನ್ನು ಅದನ್ನು ನೆರವೇರಿಸುವ ಬಗೆಗೆ ಎಂದಿನಿಂದಲೂ ಅವರಿಗಿದ್ದ ಹಿರಿಹಂಬಲವನ್ನು ಮನಗಾಣಿಸಿ ಕೊಡುವೆನು.

ಸಿಕಂದ್ರಾಬಾದ
ವೈ. ವ. ೩೦ ರಕ್ತಾಕ್ಷಿ
(೨-೬-೧೯೨೪ ?)

ಒಲವಿನೊಲವೆ, ನಮ್ಮ ಗುಂಪಿಗೀಗ ಸುದಿನ ದಿವಸಗಳು ಬಂದಿರುವವು. ನಾನು ಬಲ್ಲೆ 'ಗೆಲುವಿಹುದು !' ಆದರೆ ? ಆದರೇನು ? "ದೇವನಲ್ಲಿ ನಿವೃತ್ತಿ" ಇದೊಂದೇ ಉಪಾಯ !...ಭೋಗಲಂಪಟವಾದ ಕನ್ನಡ ನಾಡನ್ನು ಬಸವ ಅಲ್ಲಮಾದಿ ಕಾರಣಿಕರು 'ದೇವನಲ್ಲಿ ನಿವೃತ್ತ'ರಾಗಿ ಆಮೇಲೆ ದೇವನಿಂದ ಪ್ರವೃತ್ತರಾಗಿ ಉದ್ಧರಿಸಿದರು... ಒಕ್ಕಟ್ಟಿಲ್ಲದೆ ಇಕ್ಕಟ್ಟಿನಲ್ಲಿ ಬಿದ್ದಿದ್ದ ಕಾರ್ಯ ಪರಾಙ್ಮುಖ ಕರ್ನಾಟಕವನ್ನು ಧುರಂಧರ ಮಾಡಲು ಮಧ್ವ ವಿದ್ಯಾರಣ್ಯಾದಿಗಳು ಆ ಮಾರ್ಗವನ್ನೇ ಅನುಸರಿಸಿದರು. ವ್ಯವಹಾರಲೋಲುಪರಾದ ಕನ್ನಡಿಗರನ್ನು ದಾಸ ಕೂಟದವರು ಮತ್ತೆ ಅದೇ ರೀತಿಯಿಂದ ಮೇಲಕ್ಕೆತ್ತಿದರು. ಹೀಗೆ ೧೨-೧೪-೧೬ ಶತಮಾನಗಳಲ್ಲಿ ಮೂರುಸಲದ ಧರ್ಮಗ್ಲಾನಿಯನ್ನು ಕರ್ನಾಟದ ಸೀಮಾ ಪುರುಷರು, ಕನ್ನಡದವ್ವನ ಪವಾಡ ಪುರುಷನು ಹೀಗೆ ಹೋಗಲಾಡಿಸಿದರು. ೧೮ನೆಯ ಶತಮಾನದಲ್ಲಿ ಚಿಕದೇವ-ರಾಯನು ಅಂಥದೇ ಒಂದು ಪ್ರಯತ್ನ ಮಾಡಿದನು, ಅದು ಅಷ್ಟು ಫಲಕಾರಿಯಾಗಲಿಲ್ಲ... ಮತ್ತೂ ಲೀಲೆಯ ರಂಗಸ್ಥಳವು ಮಹಾರಾಷ್ಟ್ರಕ್ಕೆ ಹೋಯಿತು. ಇದು ೨೦ ನೆಯ ಶತಮಾನ. ಈ ಸಲ ನಾವು ಇಮ್ಮಡಿ ಹುರುಪಿನಿಂದ ಶುದ್ಧ ಪ್ರೇರಣೆಯ ಮಂದಾಕಿನಿಯನ್ನು ಭೂಲೋಕಕ್ಕೆ ಭಾಗೀರಥಿಯಾಗಿ ತರಲಿಕ್ಕೆ ಬೇಕು. ಇದಕ್ಕೆ ದೇವನಲ್ಲಿ ನಿವೃತ್ತಿಯು ಸಂಪೂರ್ಣವಾಗಲಿಕ್ಕೆ ಬೇಕು. ಆಮೇಲೆ ಅಪೂರ್ವ ಪ್ರವೃತ್ತಿ, ಅಪೂರ್ವ ಲೀಲೆ, ಹೀಗೆ ನಾವು ನಿವೃತ್ತಿ ಪ್ರವೃತ್ತಿಗಳ ಸವ್ಯಸಾಚಿತ್ವದಿಂದ ಧನುರ್ಧರರಾಗುತ್ತಲೇ ನಮ್ಮಲ್ಲಿಯೇ ಅಲ್ಲವೇ ಯೋಗೇಶ್ವರ ? ಆಮೇಲೆ ಶ್ರೀಯೂ ವಿಜಯವೂ ವಶ್ಯೆಯಂತೆ ಬೆಂಬತ್ತಿ ಬರುವವು. ಜೀವಬಂಧವೆ, ಇದು ನಮ್ಮಿಂದಾದೀತೆ ? ...ಈ ನಿವೃತ್ತಿಯ ಪ್ರತಿಷ್ಠೆಯನ್ನು ಮಾಡೋಣ ! ಇದಕ್ಕಾದರೂ ಅವನ ಕೃಪೆ ಬೇಕು ! ಸತಿಯು ಭಿಲ್ಲತಿಯಾಗಿ ಪತಿಯಾದ ಪರಮೇಶ್ವರನನ್ನು ನರ್ತನ ಮಾಡಿ ಗೆದ್ದಳಂತೆ. 'ದೇವನು ಭಕ್ತಿಲಂಪಟ'ನೆಂದು ಭಕ್ತರು ಒಳಗುಟ್ಟು ಹೇಳಿರುವರು. ಒಲವೇ, ಈ ಭಕ್ತಿಯನ್ನು ಕಲಿಸುವ ಕಲಾವಿದರಾದ ಸಂತರ ಭೆಟ್ಟಿಯಾದೀತೇ ?

ಗೆಳೆಯರ ಗುಂಪು ಈ ಭಕ್ತಿಯ ಅಗ್ನಿಹೋತ್ರದ ವೇದಿಕೆಯಾಗಬೇಕು. ಆಗ ದೇವನು ಪ್ರತ್ಯಕ್ಷನಾಗಿ ಬಂದು ಹೇಳಿದ್ದೇ ನಮ್ಮ ಕಾರ್ಯ. ಒಲವೇ, ಈ ಜನ್ಮದಲ್ಲಿ ನಮ್ಮಿಂದಿದು ಆದೀತೇ ? ಬಿಡು. ಯಾವ ಜನ್ಮದಲ್ಲಾದರೂ ಆ ಜನ್ಮವೇ ಧನ್ಯ ! ಆ ಜನ್ಮವೇ ಧನ್ಯ !....

"ನಾನೆಲ್ಲಾ ಗೆಳೆಯರಿಗೆ ಬೇಡಿಕೊಳ್ಳುವುದಿಷ್ಟೆ – ಯಾರಾದರೂ ಈ ನಿವೃತ್ತಿ ಪಥದಲ್ಲಿ ಅತ್ಯುತ್ಕಟ ತೀವ್ರತೆಯಿಂದ ಮುಂದುವರಿಯಿರಿ; ಮತ್ತೆ ಹಿಂದುಳಿದವರನ್ನು ಹೊರಗೆಳೆಯಿರಿ. ಯಾಕೆ ? ನಾವು ಗುಂಪೆದು... ನಾವು ಪಾತ್ರಮಾಡಬೇಕಾದ ಲೀಲೆಯು ನಮಗೆ ಸುತ್ತಮುತ್ತಲೂ, ಮೇಲು ಕೆಳಗೂ ಒಳಗು, ಹೊರಗೂ ಕಾಣುತ್ತಿಲ್ಲ, ನಮ್ಮದೂ ಲೀಲಾಸೂತ್ರಧಾರಿಯದೂ ಭೆಟ್ಟಿಯಾಗಿಲ್ಲ. ನಮ್ಮ ಪಾತ್ರದ ವೇಷಭಾಷೆಯ ತಿಳಿಯರಿವು ನಮಗಿನ್ನೂ ಆಗಿಲ್ಲ. ಇದೇ ಬಂದ ಬಿಗಿ, ನಿವೃತ್ತಿಯ ಕಡೆಮೆಟ್ಟಿಗೆ ಮುಟ್ಟುವವರೆಗೆ ಈ ತಿಳಿಯರಿವು ಆಗುವಂತಿಲ್ಲ. ಈ ಪೂರ್ವದಲ್ಲಿ ನಮ್ಮಲ್ಲಿ ಆವಿರ್ಭವಿಸಿದ ಶಕ್ತಿಯೆಂದರೆ ಈ ಭಕ್ತಿಲಂಪಟನಾದ ಭಗವಂತನು ಕಣ್ಣು ಚಿವುಟಲು ನಮ್ಮಲ್ಲುಂಟಾದ ವಿಲಾಸ ವಿಭಾವೋನ್ಮಾದದ ಝುಳಕು. ಅವನು ಕಣ್ಸನ್ನೆ ಮಾಡಿ ಹೋಗಿದ್ದಾನೆ. ಇದು ನಮಗೆ ಗೊತ್ತು, ಅವನಿಗೆ ಗೊತ್ತು. ಹಗಲಿರುಳು ಅವನನ್ನೇ ಹುಡುಕಿ, ಕಂಡು ಕೂಡುವವರೆಗೆ ನಾವು ದಣಿವಾರಿಸಿಕೊಳ್ಳಲಾಗದು, ನಮ್ಮ ಗುಂಪಿಗೆ ಗುಂಪನ್ನೆಲ್ಲಾ ಆವರಿಸಿದ ಚಿಂತೆಯೂ ಆ ವಿರಹದ ಬಾಹ್ಯ ಚಿಹ್ನವಾಗಿದೆ. ಹರಿಹರನ ಪಂಪಾಶತಕವನ್ನೋದಿರುವಿಯಲ್ಲವೆ ? ಆ ವ್ಯಾಕುಲತೆ ನಮ್ಮಲ್ಲಿ ಬೇಕು. ಬಸವನ ವಚನದಲ್ಲಿಯ ವ್ಯಾಕುಲತೆ ನಮ್ಮಲ್ಲಿ ಬೇಕು. ವಾಸುದೇವಾ ! ವಿಠಲಾ ! ಒಡೆಯಾ ! ಇತ್ತನೋಡೋ ! ಎಂದು ಆರ್ತತೆಯಿಂದ ಒದರಿದ ದಾಸರಾಯರ ವ್ಯಾಕುಲತೆ ಬೇಕು. ಈ ವ್ಯಾಕುಲತೆಯನ್ನು ಯಾರಾದರೂ ನನ್ನಲ್ಲುಂಟುಮಾಡಿದರೆ ಅವರ ದಾಸಾನುದಾಸನು ನಾನಾಗುವೆನು. ಯಾಕೆ ? ಭಗವಂತನ ಹೊರತು ಈ ವ್ಯಾಕುಲತೆಯನ್ನುಂಟು ಮಾಡುವ ಶಕ್ತಿ ಯಾರಲ್ಲಿಯೂ ಇಲ್ಲವೆಂದು...... ಪ್ರತಿಯೊಂದು ಜೀವವು ಗರ್ಭಿತವಾಗಿ ಅವತಾರಿಯಾಗಿದೆ. ಅದರ ಒಂಬತ್ತು ತಿಂಗಳನ್ನು ತುಂಬಿಸುವದೇ ಯೋಗ. ಅಂದಿನಿಂದಲೇ ಕಾರ್ಯಕ್ಕೆ ಪ್ರಾರಂಭ, ಜೀವನದ ಆರಂಭ. 'ಅ ಮು ರ ಸ್ಯ ಪು ತ್ರಃ' ಎಂದು ಶ್ರುತಿಯು ಸಂಬೋಧಿಸಿದ್ದು ಅಂಥವರಿಗೆ, ಈ ಸಂಬೋಧನವು ಮುಗಿಲ ಮಲ್ಲಿಗೆಯಂದದ ಕುಸಿರಿನ ಮಾತಲ್ಲ, ಅಂಥ ಜೀವನವಿದೆ. ಅದನ್ನು ಕಂಡು ಫಲವಿಲ್ಲ, ಉಂಡು ಫಲವಿದೆ. ಜಗಜ್ಜೈತ್ರ ಸಾಮ್ರಾಟರೂ ದಿಗಂತಕೀರ್ತಿಯ ಕವಿಗಳೂ, ಕಲಾವಿದರೂ, ಅವಿದಿತ ಕೀರ್ತಿಯ ಸಂತ ಸಜ್ಜನರೂ ಹೆಚ್ಚುಕಡಿಮೆ ಆ ಜೀವನವನ್ನುಂಡವರಾಗಿದ್ದಾರೆ. ಶ್ರೀ ಅರವಿಂದರೂ, ರವೀಂದ್ರರೂ, ಮಹಾತ್ಮರೂ ಆ ಮಾಲೆಯೊಳಗಿನವರು. ವಿವೇಕಾನಂದರೂ ರಾಮಕೃಷ್ಣರೂ ಆ ಮಾಲೆಯೊಳಗಿ

ನವರಂ. ...ಇದು ಪಡೆಯುವದು ಅಂದರೆ ಹಡೆಯುವದು, ಹಡೆಯುವದೆಂದರೆ ಯಾವ ಭಾಗಕ್ಕೆ ಯಾವ ವ್ಯಥೆಗಳಿಗೆ ಯಾತನೆಗಳಿಗೆ ಈಡಾಗುವದೆಂಬುದನ್ನು ನೀನು ಕೇಳಿಬಲ್ಲೆ. ಹೆಂಗಳಿಗೆ ಅದು ಮರಣ ಅಥವಾ ಹೊಸ ಆನಂದದ ಜೀವನ. ಪಡೆಯುವದೂ, ಪಡೆದಪ್ಪನಾಗುವದೂ, ಇದಕ್ಕಿಂತ ಸಾವಿರಪಟ್ಟು ಹೆಚ್ಚಿನ ಭಾರಕ್ಕೂ, ಯಾತನೆಗೂ ಈಡಾಗುವದು. ಆದರೆ ದೇಹಧರಿಸದಲೇ ಆಮರಣ ಕುತ್ತಿನೊಳಗಿಂದ ಪಾರಾಗುವದು ಎಂದರೆ ಇದೇ ಜನ್ಮದಲ್ಲಿ ಜೀವನ್ಮುಕ್ತನಾಗುವದು... ಎಲ್ಲ ಗೆಳೆಯರನ್ನು ಒಮ್ಮೆ ಕೂಡಿಸಿ ಅವರಿಗೆ ಕೇಳು: ಕ್ಷುರಧಾರೆಯ ಮೇಲೆ ನಡೆಯುವಿರೇನೆಂದು.

ನಿನ್ನೊಲವಿನ
— "ದತ್ತ"

'ಕವಿವರ ಬೇಂದ್ರೆ'
ಮೇ_೧೯೪೬

# ಋಗ್ವೇದದ ಮುಖ್ಯ ಪಂಚದೇವತೆಗಳು ಹಾಗೂ ಪಂಚಕ್ಷಿತಿಗಳು

(೧. ಅಗ್ನಿ, ೨. ವಾಯು, ೩. ಇಂದ್ರ, ೪. ಸವಿತಾ, ೫. ಸೋಮ)
(೧. ಪೃಥಿವೀ, ೨. ಅಂತರಿಕ್ಷ, ೩. ದ್ಯೌ, ೪. ಸ್ವರ್, ೫. ಪರಮವ್ಯೋಮ)

ವೇದವು ಆಧ್ಯಾತ್ಮಿಕ ಮಹಾಮಂತ್ರ ಕಾವ್ಯವಾಗಿದೆಯೆಂದು ಶ್ರೀ ಅರವಿಂದರ "ಸೀಕ್ರೆಟ್ ಆಫ್ ದಿ ವೇದ" ("ವೇದರಹಸ್ಯ")ವನ್ನೋದಿದವರಿಗೆ ಸ್ಪಷ್ಟವಾಗಿ ಕಂಡು ಬರುವದು. ಅದು ನಿಸರ್ಗಶಕ್ತಿಗಳ ವರ್ಣನೆಯಾಗಿದೆಯೆಂದು ಪಾಶ್ಚಾತ್ಯ ಪಂಡಿತರೂ, ಯಜ್ಞಯಾಗಾದಿಗಳಿಗೆ ಫಲವನ್ನೀಯುವ ದೇವತೆಗಳ ಪ್ರಾರ್ಥನೆಯಾಗಿದೆಯೆಂದು ನಮ್ಮ ವಿದ್ವಾಂಸರೂ ಭಾವಿಸಿದ್ದಾರೆ. ಉಪನಿಷತ್ತುಗಳಲ್ಲಿ ಯಾವಾಗಲೂ ಪ್ರತಿಪಾದಿಸಲಾಗುವ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ತ್ರಿಮುಖೀ ವ್ಯಾಖ್ಯಾಪದ್ಧತಿಯಂತೆ ಉಳಿದೆರಡು ನಂಬುಗೆಗಳಲ್ಲಿಯೂ ತಥ್ಯಾಂಶವಿರಬಲ್ಲದು.

ನಮ್ಮೊಳಗೆ, ಜಗತ್ತಿನೊಳಗೆ ಹಾಗೂ ಸೂಕ್ಷ್ಮ ಜಗತ್ತಿನೊಳಗೆ ಅವೇ ಶಕ್ತಿಗಳು ಬೇರೆ ಬೇರೆ ಪ್ರಕಾರದಿಂದ ಕಾರ್ಯಮಾಡುತ್ತಿರುವವೆಂಬುದು ಉಪನಿಷತ್ಕಾರರ ಅನುಭವ. ನಮ್ಮೊಳಗೆ ಆತ್ಮಶಕ್ತಿಗಳಾಗಿಯೂ ಜಗತ್ತಿನೊಳಗೆ ನಿಸರ್ಗಕ್ರಿಯೆ ಗಳಾಗಿಯೂ ಸೂಕ್ಷ್ಮಜಗತ್ತಿನೊಳಗೆ ದೇವತೆಗಳಾಗಿಯೂ ಅವೇ ಶಕ್ತಿಗಳು ಬೇರೆ ಬೇರೆ ನಾಮಗಳಿಂದಲೂ ಸ್ವರೂಪಗಳಿಂದಲೂ ಕಾರ್ಯಮಾಡುವವೆಂಬುದು ಅವರ ಅನುಭವದ ಅರ್ಥ.

ಈ ದೃಷ್ಟಿಯಿಂದ ನೋಡಿದರೆ ವೇದಕ್ಕೆ ಮೇಲೆ ಹೇಳಿದ ಮೂರೂ ದೃಷ್ಟಿ ಯಿಂದ ಅರ್ಥ ಹಚ್ಚಲಿಕ್ಕೆ ಬರುತ್ತದೆಯೆಂಬುದು ಸ್ವಾಭಾವಿಕ. ಆದರೆ, ಬರಿಯ ಪ್ರಾಕೃತಿಕ ಶಕ್ತಿಗಳನ್ನು ವರ್ಣಿಸುವ ಕಾಡುಜನರ ಹಾಡಿನ ಸಂಗ್ರಹವೇ ಮಾತ್ರ ಆಗಿದ್ದರೆ, ಇಷ್ಟು ಕಾಲ ಇಷ್ಟು ಬೆಲೆ ಅದಕ್ಕೆ ಉಳಿಯುತ್ತಿದ್ದಿಲ್ಲವೆಂಬುದು ಶ್ರೀ ಅರವಿಂದರ ನಿರ್ಣಯ. ಅದರಂತೆ ಶ್ರೀಮದ್ಭಗವದ್ಗೀತೆಯು "ತ್ರೈವಿದ್ಯರು ಯಜ್ಞಯಾಗಾದಿಗಳನ್ನು ಮಾಡಿ ಅಶಾಶ್ವತವಾದ ಸ್ವರ್ಗಾದಿ ಗತಿಗಳನ್ನು ಪಡೆದು ಇಹದಿಂದ ಪರಕ್ಕೂ, ಪರದಿಂದ ಇಹಕ್ಕೂ ಎಡತಾಕುವರು." "ಯಜ್ಞಾದಿಕರ್ಮಗಳ ಫಲಸಿದ್ಧಿಗಾಗಿ ಇಹದೇವತೆಗಳನ್ನು ಆರಾಧಿಸುವರು." "ಇಹದೇವತೆಗಳನ್ನು

ಭಜಿಸುವವರು ಇಹದೇವತೆಗಳನ್ನು ಸೇರುವರು. ನನ್ನನ್ನು ಭಜಿಸುವವರು ನನ್ನೆಡೆಗೆ ಬರುವರು" ಎಂಬಿವೇ ಮೊದಲಾದ ವಾಕ್ಯಗಳಿಂದ ವರ್ಣಿಸಿದಂತೆ ವೇದವು ಐಹಿಕ ಫಲಪ್ರಾಪ್ತಿಗೆ ಕಾರಣರಾದ ಇಹದೇವತೆಗಳ ಸ್ತೋತ್ರ ಮಾತ್ರವಾಗಿದ್ದರೆ ಅದಕ್ಕೆ ನಿಜವಾಗಿಯೂ ಇಷ್ಟು ಬೆಲೆ ಬರುತ್ತಿದ್ದಿಲ್ಲ. ಋಷಿಗಳು ಯಾವುದರಿಂದ ಋಷಿಗಳಾದರೋ ಆ ಅಧ್ಯಾತ್ಮ ಸಿದ್ಧಿಯನ್ನು ಅಳಿಯದಂತೆ ದೈವೀಪ್ರೇರಣೆಯಿಂದ ಯಿಂದ ಪ್ರಾಪ್ತವಾದ ದಿವ್ಯ ವಾಣಿಯಲ್ಲಿ ಹುದುಗಿಸಿ ಇಟ್ಟಿದ್ದರಿಂದಲೇ ವೇದವು ಇಷ್ಟು ಪೂಜ್ಯಗ್ರಂಥವಾಗಿ ಇಷ್ಟೊಂದು ಕಾಲದವರೆಗೆ ಪವಿತ್ರಗ್ರಂಥವಾಗಿ ಉಳಿದಿದೆ ಯೆಂಬುದು ಶ್ರೀ ಅರವಿಂದರ ಸಿದ್ಧಾಂತ.

ಇರಲಿ, ಇನ್ನು ಅದರ ಆಂತರಿಕ ವಿಷಯವನ್ನು ಕುರಿತು ಆಲೋಚಿಸುವಾ.

ವೇದದಲ್ಲಿ ಅಗ್ನಿ, ವಾಯು, ಇಂದ್ರ, ಸವಿತಾ, ಸೋಮ ಎಂಬ ಪಂಚದೇವತೆಗಳ ಮಂತ್ರಗಳು ಮುಖ್ಯವಾಗಿವೆ. ಅವರು ಪೃಥಿವೀ, ಅಂತರಿಕ್ಷ, ದ್ಯೌ, ಸ್ವರ್, ಪರಮವ್ಯೋಮವೆಂಬ ಪಂಚಕ್ಷಿತಿಗಳ ಅಧಿಷ್ಠಾತೃಗಳು. ಈ ಪಂಚಕ್ಷಿತಿಗಳೆಂದರೆ ಉಪನಿಷತ್ತುಗಳಲ್ಲಿ ಹೇಳಿದ ಪಂಚಕೋಶಗಳು, ಅರ್ಥಾತ್ ಈ ಪಂಚದೇವತೆಗಳು ಪಂಚಕೋಶಾಧಿಷ್ಠಿತರಾದ ಅನ್ನಮಯ, ಮನೋಮಯಾದಿ ಪಂಚ ಪುರುಷರು. ಅಗ್ನಿಯು ಅನ್ನಮಯ ಪುರುಷ, ವಾಯುವು ಪ್ರಾಣಮಯ ಪುರುಷ. ಇಂದ್ರನು ಮನೋಮಯ ಪುರುಷ, ಸವಿತೃ ಅಥವಾ ಸೂರ್ಯನು ವಿಜ್ಞಾನಮಯ ಪುರುಷನು ಹಾಗೂ ಸೋಮನು ಆನಂದಮಯ ಪುರುಷನು.*

'ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂದು ಸ್ವಯಂ ವೇದವೇ "ಒಬ್ಬ ಸನ್ಮಯ ಪರಮಾತ್ಮನೇ ಸಕಲ ದೇವತೆಗಳಾಗಿದ್ದಾನೆ"ಂದು ವರ್ಣಿಸುತ್ತದೆ. "ಪುರುಷ ಏವ ಇದಂ ಸರ್ವಂ ಯದ್‌ಭೂತಂ ಯತ್ ಚ ಭಾವಂ" ಎಂದು ಪುರುಷ ಸೂಕ್ತದಲ್ಲಿ ವಿಶ್ವವ್ಯಾಪಕನೂ ವಿಶ್ವಾಧಾರನೂ ಆದ ಪರಮ ಪುರುಷ ಪರಮಾತ್ಮನೇ ಭೂತಭವ್ಯಗಳೆಲ್ಲವೂ (ಉಂಟಾದ, ಉಂಟಾಗಲಿರುವ ಸಚರಾಚರವೆಲ್ಲವೂ) ಆಗಿದ್ದಾನೆಂದು ಹೇಳಿದುದರ ಅರ್ಥವೂ ಅದೇ ಆಗಿದೆ. ಇದರಂತೆ ಒಬ್ಬ ಆತ್ಮನೇ ಕೋಶಭೇದದಿಂದ ಬೇರೆ ಬೇರೆ ಪುರುಷ ವಿಶೇಷನಾಗಿದ್ದಾನೆ.

ಒಬ್ಬ ಆತ್ಮನೇ ನಮ್ಮ ಬೇರೆ ಬೇರೆ ಕೋಶಗಳಲ್ಲಿ ಅಥವಾ ಪ್ರಕೃತಿ ಸ್ತರಗಳಲ್ಲಿ ಬೇರೆ ಬೇರೆ ಪುರುಷ ವಿಶೇಷನಾಗಿದ್ದಾನೆಂಬ ವಿಷಯವನ್ನು ಶ್ರೀ ಅರವಿಂದರು ತಮ್ಮ ''Life Divine'' ಎಂಬ ಪ್ರಕಾಂಡ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ :

* "ದಿವಾಯಾಂತಿ ಮರುತೋ (ಇಂದ್ರಸಖಾ) ಭೂಮ್ಯಾ ಅಗ್ನಿರಯಂ, ವಾತೋ ಅಂತರಿಕ್ಷೇಣ ಯಾತಿ" (ಇಂದ್ರಸಖರಾದ ಮರುತರು ಅರ್ಥಾತ್ ಇಂದ್ರನು ಸಹ ದಿವದಲ್ಲಿಯೂ ಅಗ್ನಿಯು ಪೃಥ್ವಿಯಲ್ಲಿಯೂ, ವಾಯುವು ಅಂತರಿಕ್ಷದಲ್ಲಿಯೂ ಸಂಚರಿಸುತ್ತವೆ.) (ಪು. ೧-೧೬೧-೧೪)

"In each status of the gradation of Nature, the spirit takes a poise of its being proper to that gradation; in Mind-Nature it becomes the mental being, in Life Nature it becomes the vital being, in nature of Matter it becomes the physical being, in supermind it becomes the being of knowledge; in the supreme spiritual status it becomes the being of Bliss and pure existance"

(Vol. II, Pt 1 Page 85, Ed. 1st.)

"ಪ್ರಕೃತಿಯ ಭೂಮಿಕಾಕ್ರಮದ ಪ್ರತಿಯೊಂದು ನೆಲೆಯಲ್ಲಿ ಆತ್ಮನು ಆ ಭೂಮಿಕೆಗುಚಿತವಾದ ತನ್ನದೇ ಆದ ಒಂದು ಪುರುಷ ವಿಶೇಷದ ಸ್ವರೂಪವನ್ನು ತೆಗೆದುಕೊಳ್ಳುವನು; ಮಾನಸ ಪ್ರಕೃತಿಯಲ್ಲಿ ಆತನು ಮನೋಮಯ ಪುರುಷನಾಗುವನು, ಅನ್ನಮಯ ಜಡಪ್ರಕೃತಿಯಲ್ಲಿ ಆತನು ಅನ್ನಮಯ ಪುರುಷನಾಗುವನು, ಅತಿಮಾನಸ ವಿಜ್ಞಾನದಲ್ಲಿ ಆತನು ವಿಜ್ಞಾನಮಯ (ಜ್ಞಾನಮಯ) ಪುರುಷನಾಗುವನು, ಪರಮ ಆಧ್ಯಾತ್ಮಿಕ ಭೂಮಿಕೆಯ ನೆಲೆಯಲ್ಲಿ ಆತನು ಆನಂದಮಯ ಹಾಗೂ ಶುದ್ಧ ಸನ್ಮಯ ಪುರುಷನಾಗುವನು."

ಮನೋಮಯ ಪುರುಷನು ಶುದ್ಧವೂ ಸಮರ್ಥವೂ ಆದ ಬುದ್ಧಿಶಕ್ತಿಯನ್ನು ಕೊಡುವನು. ಪ್ರಾಣಮಯ ಪುರುಷನು ವಿಶಾಲವೂ ಉದಾರವೂ ಆದ ಶಕ್ತಿ ಆನಂದಗಳನ್ನು ಕೊಡುವನು. ಅನ್ನಮಯ ಪುರುಷನು ಸಬಲ ಶರೀರವನ್ನೂ ನಿಪುಣ ವ್ಯವಹಾರ ಕೌಶಲ್ಯವನ್ನೂ ಕೊಡುವನು. ವಿಜ್ಞಾನಮಯ ಪುರುಷನು ಶಕ್ತಿಯುಕ್ತ ದಿವ್ಯಜ್ಞಾನವನ್ನೂ, ಜ್ಞಾನಯುಕ್ತ ದಿವ್ಯಶಕ್ತಿಯನ್ನೂ ಕೊಡುವನು, ಹಾಗೂ ಆನಂದಮಯ ಪುರುಷನು ಅಮರವಾದ ದೈವೀ ಅಮೃತಾನಂದವನ್ನು ಕೊಡುವನು.*

ಋಗ್ವೇದದ ಪ್ರಮುಖ ಪಂಚದೇವತೆಗಳು ನಮಗೆ ಕೊಡುವ ದಾನಗಳೂ ಇವೇ ಆಗಿವೆ.‡ ಈ ಆತ್ಮಿಕ ಸಮೃದ್ಧಿಯನ್ನು ಪಡೆದು ದೇವತೆಗಳಿಂದೊಡ

---

* ಪೂರ್ಣಯೋಗದಿಂದ ನಮ್ಮ ಆಧಾರದಲ್ಲಿ ಬರುವ ಪೂರ್ಣತೆಗಳು ಇಂತಿವೆ—

೧) ದೇಹದಲ್ಲಿ— ಮಹತ್ವ, ಬಲ, ಲಘುತೆ, ಧಾರಣಸಾಮರ್ಥ್ಯ.

೨) ಪ್ರಾಣದಲ್ಲಿ— ಪೂರ್ಣತೆ, ಪ್ರಸನ್ನತೆ, ಸಮತೆ, ಭೋಗಸಾಮರ್ಥ್ಯ.

೩) ಚಿತ್ತದಲ್ಲಿ— ಸೌಮ್ಯತ್ವ, ತೇಜಸ್ಸು, ಕಲ್ಯಾಣಶ್ರದ್ಧೆ, ಪ್ರೇಮಸಾಮರ್ಥ್ಯ.

೪) ಬುದ್ಧಿಯಲ್ಲಿ— ವಿಶುದ್ಧಿ, ಪ್ರಕಾಶ, ವಿಚಿತ್ರಬೋಧ, ಸರ್ವಜ್ಞಾನಸಾಮರ್ಥ್ಯ.

—ಶ್ರೀ ಅರವಿಂದರ "Synthesis of yoga"

‡ ಗೋ, ಅಶ್ವ, ಪುತ್ರ, ವೀರ, ಧನ, ವಾಜ, ರಯಿ ಮೊದಲಾದ ಬಾಹ್ಯರೂಪಕಗಳು, ಜ್ಯೋತಿ, ಶಕ್ತಿ ಮೊದಲಾದ ಆಂತರಿಕ ವಸ್ತುಗಳ ನಿದರ್ಶಕಗಳೇ ಆಗಿವೆ.

ಗೂಡಿ ಬಾಳುವುದೇ ವೈದಿಕ ಋಷಿಗಳ ಮಹದಿಚ್ಛೆಯು. ಅವರ ಶಾಂತಿಮಂತ್ರ ಗಳಲ್ಲೊಂದಿದು—

"ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ॥
ಸ್ಥಿರೈರಂಗೈಸುಷ್ಟುವಾಂಸಸ್ತನೂಭಿ
ರ್ವ್ಯಶೇಮ ದೇವಹಿತಂ ಯದಾಯುಃ ॥

—(ಮಂಡಲ ೧, ಸೂಕ್ತ ೮೯)

"ಹೇ ದೇವತೆಗಳಿರಾ, ನಿಮ್ಮ ಕೃಪೆಯಿಂದ ನಾವು ನಮ್ಮ ಕಿವಿಗಳಿಂದ ಚೆನ್ನಾಗಿ ಕೇಳುವೆವು (ದಿವ್ಯ ಶ್ರುತಿಯನ್ನು ಪಡೆಯುವೆವು). ದಿವ್ಯ (ಸಮರ್ಪಣ) ಯಜ್ಞಾರ್ಹ ದೇವತೆಗಳಿರಾ, ನಿಮ್ಮ ಕೃಪೆಯಿಂದ ನಾವು ನಮ್ಮ ಕಣ್ಣುಗಳಿಂದ ಚೆನ್ನಾಗಿ ನೋಡುವೆವು(ದಿವ್ಯ ದೃಷ್ಟಾರರಾಗುವೆವು). ಸ್ಥಿರತಾಪೂರ್ಣ ಅಂಗಗಳಿಂದೊಡಗೂಡಿದ ಶರೀರವುಳ್ಳವರಾಗಿ ನಿಮ್ಮನ್ನು ಸ್ತುತಿಸುತ್ತ ದೇವತಾಯುಕ್ತರಾಗಿ ಬಾಳುವ ಆಯುಷ್ಯದಲ್ಲಿ ಪ್ರವೇಶಿಸುವೆವು(ಅಥವಾ ದಿವ್ಯ ಜೀವನವನ್ನು ಉಣ್ಣುವೆವು)."

ದಿವ್ಯ ಜೀವನವೆಂದರೆ ಇದೇ. ಋಷಿಗಳು ಬಯಸಿದ್ದು ಇದು. ಇಂದು ಶ್ರೀ ಅರವಿಂದರು ಹೇಳುವ ದೈವೀ ಜೀವನವೂ ಇಂತಹದೇ. ಜ್ಞಾನಪ್ರಾಪ್ತಿಗಾಗಿ, ಮೋಕ್ಷಪ್ರಾಪ್ತಿಗಾಗಿ ಜೀವನವನ್ನು ಬಹಿಷ್ಕರಿಸುವ ಯೋಗವು ಅವರದಲ್ಲ. ಸಾಮಾನ್ಯ ಪ್ರಕೃತಿಯನ್ನು ದೈವೀ ಪ್ರಕೃತಿಯಾಗಿ ರೂಪಾಂತರಿಸಿ ದೇವನಿಗಾಗಿ ಬಾಳಿ ಬದುಕುವವರಾಗಬೇಕೆಂಬುದೇ ಅವರ ಉಪದೇಶ.

ನಮ್ಮೊಳಗಿನ ದೇವತೆಗಳು ಅಥವಾ ಪುರುಷರು ಅರಳುವದರಿಂದಲೇ ಇದು ಸಾಧ್ಯ. ಆದುದರಿಂದ ಅವರನ್ನು ಅರಳಿಸಿಕೊಳ್ಳುವುದೇ ಶ್ರೀ ಅರವಿಂದರ ಪೂರ್ಣ ಯೋಗದ ಸಾಧನೆ. ಋಷಿಗಳ ವೇದ ಸಾಧನೆಯ ರೀತಿಯೂ ಇದೇ ಪ್ರಕಾರವಾಗಿದ್ದಿತೆಂಬುದು ಶ್ರೀ ಅರವಿಂದರ "ಸೀಕ್ರೆಟ್ ಆಫ್ ದಿ ವೇದ"("ವೇದರಹಸ್ಯ") ವನ್ನೋದಿದವರಿಗೆ ಮನದಟ್ಟಾಗುವದು.

ವೇದಕಾಲದಲ್ಲಿ ಸಾಮಾನ್ಯ ಜನತೆಯಲ್ಲಿ ಪ್ರಚಾರದಲ್ಲಿದ್ದ ಯಜ್ಞಯಾಗಾದಿ ಕ್ರಿಯೆಗಳ ಹಾಗೂ ಅವರ ಸುತ್ತಮುತ್ತಲಿನ ನಿಸರ್ಗ ಶಕ್ತಿಗಳ ರೂಪಕದಲ್ಲಿಯೇ ಋಷಿಗಳು ತಮ್ಮ ದಿವ್ಯ ಮಂತ್ರಗಳನ್ನು ರಚಿಸಿರುವದರಿಂದ ಈ ಪರಿಭಾಷೆಯಲ್ಲಡಗಿರುವ ಆಂತರಿಕ ಜ್ಞಾನಯಜ್ಞದ ರಹಸ್ಯವನ್ನು ಹುಡುಕಿಕೊಂಡು ಆ ರೀತಿಯಲ್ಲಿ ಅರ್ಥ ಮಾಡಿಕೊಂಡರೆ ಆಗ ನಮಗೆ ವೇದವೊಂದು ಮಹಾ ಅಗಾಧವಾದ ದಿವ್ಯಗ್ರಂಥವಾಗಿ ಕಂಗೊಳಿಸುವದು. ಅದರ ಮಂತ್ರಗಳು ನಮಗಾಗ ಅಂತಃಸ್ಫೂರ್ತಿಯನ್ನು ಕೊಡುವವು.

ಶ್ರೀ ಅರವಿಂದರ "Rose of God" (ಪರಮಾತ್ಮನ ಗುಲಾಬಿ ಹೂ) ಎಂಬ ಕವಿತೆಯನ್ನೋದಿದರೆ ವೈದಿಕ ದೇವತೆಗಳ ರಹಸ್ಯವೂ ವೇದಮಂತ್ರಗಳ ಓಜಸ್ಸೂ ವಿದಿತವಾಗುವವು. ಅದನ್ನು ಅಣ್ಣ ಶ್ರೀ ಬೇಂದ್ರೆಯವರು "ಪೆರುಮಾಳನ ಕೆಂದಾವರೆ" ಎಂದು ಕನ್ನಡಿಸಿದ್ದಾರೆ. ಅದನ್ನೇ "ಪರಮಾತ್ಮನ ಕೆಂದಾವರೆ" ಎಂದು ಓದಿಕೊಂಡರೆ ಅರ್ಥವು ಸುಲಭವಾಗುವದು. ಗುಲಾಬಿಗೆ ಬದಲು ತಾವರೆ ಎಂದಿರುವುದು "ಹೃತ್ಕಮಲ" ಮುಂತಾದ ನಮ್ಮ ಆಧ್ಯಾತ್ಮಿಕ ಶಬ್ದಗಳ ಸರಣಿಯನ್ನು ಅನುಸರಿಸಿದ್ದಾಗಿದೆ. ಆದುದರಿಂದ ಆ ಪದ್ಯವನ್ನು (ಅಣ್ಣ ಶ್ರೀ ಬೇಂದ್ರೆಯವರ ಕನ್ನಡ ಅನುವಾದವನ್ನು) ಇಲ್ಲಿ ಕೆಳಗೆ ಕೊಡುವೆನು. ಅದಕ್ಕಿಂತ ಮೊದಲು ಪಂಚ ದೇವತೆಗಳ ಒಂದೊಂದು ಮಂತ್ರವನ್ನು ಇಲ್ಲಿ ಅನುವಾದ ಸಹಿತವಾಗಿ ಬರೆಯುವೆನು—

೧

ಅಗ್ನಿಮೀಳೇ ಪುರೋಹಿತಂ
ಯಜ್ಞಸ್ಯ ದೇವಂ ಋತ್ವಿಜಂ ।
ಹೋತಾರಂ ರತ್ನಧಾತಮಂ ॥

೨

ವಾಯವಾ ಯಾಹಿ ದರ್ಶತೇ ಮೇ
ಸೋಮಾ ಅರಂಕೃತಾಃ ।
ತೇಷಾಂ ಪಾಯಿ ಶ್ರುಧೀ ಹವಂ ॥

೩

ಇಂದ್ರ ವಯಂ ಮಹಾಧನ
ಇಂದ್ರಮರ್ಭೇ ಹವಾಮಹೇ
ಯುಜಂ ವೃತ್ರೇಷು ವಜ್ರಿಣಂ ॥

೪

ತತ್ ಸವಿತುರ್ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋನಃ ಪ್ರಚೋದಯಾತ್ ॥

೫

ಸ್ವಾದಿಷ್ಠಯಾ ಮದಿಷ್ಠಯಾ
ಪವಸ್ವ ಸೋಮ ಧಾರಯಾ ।
ಇಂದ್ರಾಯ ಪಾತವೇ ಸುತಃ ॥

—ಋಗ್ವೇದ

ಭಾವಾರ್ಥ—

(೧) ಜಡದಲ್ಲಿ ಅಡಗಿರುವ ಚಿನ್ಮಯ ತಪಃಶಕ್ತಿರೂಪನಾದ ಅಗ್ನಿಯನ್ನು ಪೂಜಿಸುವೆನು. ಸಮರ್ಪಣ ರೂಪವಾದ ಯಜ್ಞದಲ್ಲಿ ಎಲ್ಲಕ್ಕಿಂತ ಇದಿರಿಗೆ ಇರುವವನೀತನು. ಕಾಲಾಕಾಲವನ್ನರಿಯುವ ಋತುವಿದನು. ದೇವಶಕ್ತಿಗಳಿಗೆ ನಮ್ಮ ಸಮರ್ಪಣ ರೂಪವಾದ ನೈವೇದ್ಯವನ್ನು ಒಯ್ದು ಮುಟ್ಟಿಸುವ ಹೋತಾರನು. ಆನಂದ ಸಂಪತ್ತನ್ನು ನಮ್ಮಲ್ಲಿ ಪ್ರತಿಷ್ಠಿಸುವವನು ಈ ಅಗ್ನಿಯು.

(೨) ಜ್ಞಾನದೃಷ್ಟಿಯಿಂದೊಡಗೂಡಿ (ಅಂದರೆ ಅಂಧತನವನ್ನು ತೊರೆದು) ಹೇ ವಾಯುವೇ, ಹೇ ಪ್ರಾಣಶಕ್ತಿಯೇ, ಸಿದ್ಧಗೊಳಿಸಲ್ಪಟ್ಟ ದಿವ್ಯ ಆನಂದದೆಡೆಗೆ (ನಿಮ್ಮ ಆನಂದವನ್ನು ತೊರೆದು) ಇಲ್ಲಿ ಬಾ. ಇದನ್ನು ಕುಡಿ (ಅದನ್ನು ಬೇಡ). ನಮ್ಮ ವಿಜ್ಞಾಪನೆಗಳನ್ನು ಕೇಳು.

(೩) ನಮ್ಮ ಆತ್ಮಿಕ ಸಂಪತ್ತು ಹೆಚ್ಚಾಗಿರುವಾಗಲೂ ಕಡಿಮೆಯಾಗಿರುವಾಗಲೂ ಸಹ ನಾವು ಇಂದ್ರನನ್ನೇ, ಕೇವಲ ಇಂದ್ರನನ್ನೇ ಕರೆಯುವೆವು. ದೇಹ ಪ್ರಾಣ ಮನಗಳ ನಿಮ್ನಮುಖೀ ಆಕರ್ಷಣ ರೂಪವಾದ ಆವರಣವನ್ನು (ವೃತ್ರವನ್ನು) ಭೇದಿಸುವ ಸಮರ್ಥ ಜ್ಞಾನರೂಪವಾದ ಸಿಡಿಲನ್ನು (ವಜ್ರಾಯುಧವನ್ನು) ಕೈಯಲ್ಲಿ ಧರಿಸುವ ಇಂದ್ರನಿಂದ ನಾವು ಒಡಗೂಡಿದವರಾಗಿರುವೆವು.

(೪) ಶ್ರೇಷ್ಠನಾದ, ದಿವ್ಯ ಜ್ಯೋತಿಸ್ವರೂಪನಾದ, ಹಾಗೂ ನಮ್ಮ ಅಂತರ್ಬುದ್ಧಿಗೆ (ಧೀಶಕ್ತಿಗೆ) ಪ್ರಚೋದನೆ ಕೊಡುವವನಾದ ಆ (ಪರಾತ್ಪರನಾದ) ಸವಿತೃ (ಸೂರ್ಯ) ದೇವನನ್ನು ಧ್ಯಾನಿಸುವೆನು.

(೫) ಹೇ ಆನಂದಮಯ ಪುರುಷನಾದ ಸೋಮನೇ, ನಮ್ಮೊಳಗಿನ ಶುದ್ಧ ಮನೋಮಯ ಪುರುಷನಾದ ಇಂದ್ರನಿಗಾಗಿ, ಆತನು ಕುಡಿದು ಪುಷ್ಟನಾಗುವ ಸಲುವಾಗಿ, ಸ್ವಾದಿಷ್ಠವೂ ತನ್ಮಯಕಾರಕವೂ ಆದ ದಿವ್ಯ ಸಚ್ಚಿದಾನಂದ ರಸವನ್ನು ಧಾರಾಕಾರವಾಗಿ ಪ್ರವಾಹಿತಗೊಳಿಸು.

## ಶ್ರೀ ಅರವಿಂದರ Rose of God ಅಥವಾ ಪೆರುಮಾಳನ ಕೆಂದಾವರೆ

ಪೆರುಮಾಳನ ಕೆಂದಾವರೆ ಅರಳಿದೆ ನಸುನಕ್ಕೆ
ಹರಿನೀಲದ ಬಾನೊಳಗಿನ ಸಿಂಧೂರದ ಚುಕ್ಕೆ
ನಲಿವಿನ ನಲಿನವು ತಾನೇ ತಾನಾಗಿಯೆ ಬಿಚ್ಚೆ
ಏಳ್ಮಡಿ ಧಾಳಾಧೂಳಿಯ ಏಳ್ಬಣ್ಣದ ಕಿಚ್ಚೇ
ಕಾರಣ ತನುವಿನ ಕೃತಿಯೇ ಸುರಿಯೇ ಹರಿವರಿಯೇ

ಮನು ಹೃದಯದಿ ಚಿಗಿ ನಿಗಿನಿಗಿ ಜಿಗಿ ಮೇಲಕ್ಕುರಿಯೇ
ಹೆಸರಾಚೆಯ ಭಾವದ ಹೂ ಸುರಿಸಿದ ಹಿರಿಹಿಗ್ಗೇ
ಬೆಡಗಿನ ಸುಡಿ ಮೌನದ ಕುಡಿ ಮುಗುಳೇ ಮುಮ್ಮೊಗ್ಗೇ ॥

ಪೆರುಮಾಳನ ಕೆಂದಾವರೆ ಬಾಳಿನ ತಾಣವಿದೋ
ವರ್ಣಕ್ರಮ ಬಣ್ಣಸರಂಗೊಂಡಿಹ ವೀಣೆಯಿದೋ
ದಿವ್ಯೇಚ್ಛೆಯೆ ಮೈದಾಳಿದೆ ನೇರಿಳೆ ಬಣ್ಣದೊಳು
ಶತದಳದೊಲು ದಳದಳದಲಿ ಮಣ್ಣಿನ ಕಣ್ಣನೊಳು
ನೆಲ ಬಾನಿಗು ನಿಚ್ಚಣಿಕೆಯು ನಿಲ್ಲಿಸು ನಿಲ್ಲಿಸೆಲೆ
ಮರ್ತ್ಯವು ಮರಣವನರಿಯದ ಹಾಗಿರಲಲ್ಲಿ ಸೆಲೆ
ಮಧುಮಂತ್ರದ ಛಂದಸ್ಸನು ಪಲ್ಲಟಿಸುವ ಹಾಗೆ
ಕಾಲನ ಕಂದರ ಮಾಡೈ ಮಾರ್ಕಂಡೆಯರಾಗೆ ॥

ಪೆರುಮಾಳನ ಕೆಂದಾವರೆ ಬೆಳಕಿನ ಚೆಂದಿರುಳೇ
ಬಾಳಿನ ತಿರು ಕೋಡೊಳಗಿನ ಬಲು ಅರುವಿನ ಅರಳೇ
ಕಗ್ಗೊನೆಗಾಣ್ಕೆಯ ಬೆಳಗಿನ ಅಕಲಂಕಿತ ಕೆಚ್ಚೇ
ನೆಲದೆದೆಯಲಿ ನೆಲೆಮಾಡೆಲೆ ಹೊನ್‌ಹೂ ಮನಮೆಚ್ಚೆ
ಗುಟ್ಟೇ ಹುಟ್ಟೇ ಮೊಟ್ಟೆಯೆ ಹುರುಳಡಗಿದ ಹೆಸರೇ
ನಿಷ್ಕಾಲದ ನಡುನೆತ್ತಿಯ ನೇಸರೆ ಹೊಂಬಸಿರೇ
ದಿವ್ಯ ಮುಹೂರ್ತದ ಅತಿಥಿಯೆ ಕಾದಿರುವದು ಈಗ
ಮೂರಾಳದ ಕತ್ತಲೆ ಅದು ಬೆಳಗಿಸು ಬಾ ಬೇಗ ॥

ಪೆರುಮಾಳನ ಕೆಂದಾವರೆ ರತ್ನಪ್ರಭೆ ಬೀರೆ
ಇರುಳಿಗಿಂತು ಮರ್ತ್ಯರ ಸಂಕಲ್ಪವೆ ಹೊತ್ತುತಿರೆ
ಅನಂತ್ಯದ ತಪ ಚಿತ್ರಿತ ಚೀನಾಂಶುಕವಾಗೆ
ದಿವ್ಯ ಪ್ರತಾಪದ ಮಾಣಿಕ್ಯದ ಮೂರ್ತಿಯ ಹಾಗೆ
ಕಾರ್ಮೋಡದ ತಿಳಿನೀರಲಿ ಕೆಮ್ಮಿಂಚುರಿವಂತೆ
ದಾಳಿಂಬರ ಮೈದುಂಬಿರೆ ತಾನೇ ಬಿರಿವಂತೆ
ನಿನ್ನಾ ಹಂಚಿಕೆ ಮಾಟಕೆ ಬೆಳಗಾದೊಲು ಹಣತೆ
ವಿಗ್ರಹಗೊಂಡೊಲು ಅಮರತೆ ನರನಾರಾಯಣತೆ ॥

ಪೆರುಮಾಳನ ಕೆಂದಾವರೆ ನಲುಮೆಯ ನಲಿನವಿದೋ
ಗುರುಕಾರುಣ್ಯದ ಭಾವಜ್ವಾಲಾ ಮಾಲೆಯಿದೋ
ಎಂದೆಂದಿನ ಮೊಗದೊಳಗಿಹ ಹಿಗ್ಗಿನ ನಾಚಿಕೆಯೋ

ಬಾಳಿನ ಆಳದಿ ತುಂಬಿದ ಮಾಣಿಕ ವೀಚಿಕೆಯೋ
ಪ್ರಕೃತಿಯು ಪಾತಾಳದ ಎದೆಯಾಳದಿ ಬಿಕ್ಕುತಿರೆ
ಬಾ ಬಲವೇ ಬಾ ನಲಿವೇ ಚೆಲುವೇ ಉಕ್ಕುತಿರೆ
ಬಿಸವಂದದ ನಂದನ ಬನ ಮಾಡಿ ಜಗವಿಂದು
ಬಾಳಾಗಲಿ ಚಿನ್ಮೋದದ ಮುಂತ್ತಿನ ಸರವೊಂದು ॥

× × × ×

ಪೂರಕ—

ಚಂದ್ರಮಾ(ಸೋಮಃ)ಮನಸೋಜಾತಃ
ಚಕ್ಷೋಃ ಸೂರ್ಯೋ(ಸವಿತಾ)ಅಜಾಯತ ।
ಮುಖಾತ್ ಇಂದ್ರಶ್ಚ ಅಗ್ನಿಶ್ಚ
ಪ್ರಾಣಾತ್ ವಾಯುರಜಾಯತ ॥

ನಾಭ್ಯಾ ಆಸೀತ್ ಅಂತರಿಕ್ಷಂ
ಶೀರ್ಷ್ಣೋದ್ಯೌಃ ಸಮವರ್ತತ ।
ಪದ್ಭ್ಯಾಂ ಭೂಮಿಃ ದಿಶಃ ಶ್ರೋತ್ರಾತ್
ತಥಾ ಲೋಕಾನ್ ಅಕಲ್ಪಯನ್ ॥

(ಋಗ್ವೇದ ಪುರುಷಸೂಕ್ತ, ಮಂಡಲ ೧೦-೯೦-೧೩, ೧೪)

ಅದಿತಿಃ ದ್ಯೌರದಿತಿಃ ಅಂತರಿಕ್ಷಂ
ಅದಿತಿಃ ಮಾತಾ ಸ ಪಿತಾ ಸ ಪುತ್ರಃ ।
ವಿಶ್ವದೇವಾ ಅದಿತಿಃ, ಪಂಚಜನಾ
ಅದಿತಿಃ ಜಾತಂ ಅದಿತಿಃ ಜನಿತ್ವಂ ॥

(ಋಗ್ವೇದ ಮಂ. ೧-೮೯–೧೦)

ಜೀವನ ೧೦–೩ ಜುಲೈ ೧೯೪೯

# ಗುರುದೇವ

---

"ಸ ಗುರೋರಪಿ ಮಹಾಗುರುಃ" ಆತನು (ಅಂದರೆ ಪರಮಾತ್ಮನು) ಗುರುಗಳೆಲ್ಲರ ಮಹಾಗುರುವು ಎಂದು ಪತಂಜಲಿ ಮುನಿಗಳು ತಮ್ಮ ಯೋಗಶಾಸ್ತ್ರದಲ್ಲಿ ಹೇಳಿರುವರು. God himself is the Guru ಎಂದರೆ ಸ್ವಯಂ ಪರಮಾತ್ಮನೇ ಗುರುವು ಎಂದು ಭಗವಾನ್ ಶ್ರೀ ಅರವಿಂದರು ತಮ್ಮ "ಯೋಗ ಮತ್ತು ಆದರ ಉದ್ದೇಶಗಳು" ಎಂಬ ಗ್ರಂಥದಲ್ಲಿ ಹೇಳಿರುವರು.

"ಸಾಯುವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು... ಮಲ್ಲಿಕಾರ್ಜುನನೆ ನನಗೆ ಗಂಡನಾಗಬೇಕು" ಎಂದು ಶಿವಶರಣೆ ಅಕ್ಕಮಹಾದೇವಿ ಅಂದು ಜಯಘೋಷ ಮಾಡಿದರು. ಶ್ರೀ ವಿವೇಕಾನಂದರು ಕಂಡ ಕಂಡ ಸಾಧುಗಳಿಗೆಲ್ಲ "ದೇವರನ್ನು ಕಂಡಿರುವಿರೇನು ?" ಎಂದು ಕೇಳಿ ಕೇಳಿ ಬೇಸತ್ತು ಕೊನೆಗೆ "ಹೌದು ಕಂಡಿದ್ದೇನೆ, ನಿನಗೆ ಕಾಣಿಸಿಕೊಡಬೇಕೇನು ?" ಎಂದು ಗುಡುಗು ಹಾಕಿದ ಶ್ರೀ ರಾಮಕೃಷ್ಣ ಪರಮಹಂಸ ದೇವರಿಗೆ ಪರಮ ಶಿಷ್ಯರಾದರು.

ಇಂದು ಪುನಃ ಅಂಥ ಗುರುಗಳು ಬೇಕು. ಇಂದು ಮನೆಮನೆಗೆ ನರೇಂದ್ರನ ಮರಿಗಳು ಹುಟ್ಟಿದ್ದಾರೆ. ನಾನು ಗುರು ನೀನು ಗುರು ಎಂದು ಅರಿಚಿಕೊಳ್ಳುವವರ ನುಡಿಗೆ ಇವರು ಕಿವಿಗೊಡರು. "ಕಂಡಿರುವಿರೇನು ?" ಎಂಬ ಯಕ್ಷ ಪ್ರಶ್ನವು ಇವರ ತುದಿನಾಲಗೆಯ ಮೇಲೆಯೇ ಇರುವದು, ಇಷ್ಟೇ ಅಲ್ಲ "ಇದರ ಪ್ರಯೋಜನವೇನು ?" ಎಂದು ವಾದಿಸಲು ಸಹ ಇವರು ಹಿಂದೆ ಮುಂದೆ ನೋಡರು.

"ಹೌದು ಕಂಡಿದ್ದೇವೆ, ನಿಮಗೂ ಕಾಣಿಸಿಕೊಡುತ್ತೇವೆ, ನೀವೆಲ್ಲ ಬಯಸುವ ಸುಖ-ಶಾಂತಿಗಳು ಜಗತ್ತಿನ ಮೇಲೆಲ್ಲಾ ಬರುವುದೆ ಇದರ ಗುರಿಯಾಗಿದೆ" ಎಂದು ಗರ್ಜಿಸುವ ಅವತಾರವಾಣಿಯು ಬಹುಜನರ ಕಿವಿಗೆ ಇನ್ನೂ ಬಿದ್ದಿಲ್ಲ. ಯಾರ ಕಿವಿಗೆ ಬಿದ್ದಿರುವದೋ ಅವರೇ ಧನ್ಯರು.

"Command is now" ಇದೋ ಆಜ್ಞೆ ಇಲ್ಲಿದೆ ! ಭರತಖಂಡವು ಪರಮೇಶ್ವರನಿಗಾಗಿ ಆರಿಸಿಟ್ಟ ದೇಶವಿದೆ. ಎಂಥ ಪರಿಸ್ಥಿತಿಯಲ್ಲಿಯೂ ಇಲ್ಲಿಯ ಯೋಗಿಗಳು ಯೋಗವನ್ನು ಕಾಯ್ದುಕೊಂಡು ಇರುತ್ತಾರೆ. ಯೋಗದಿಂದಲ್ಲದೆ

ಈಗ ಏತರಿಂದಲೂ ಕೊಂಕಿದ ಜಗವನ್ನು ತಿದ್ದಲು ಸಾಧ್ಯವಿಲ್ಲ. ಹೊರಗಿನ ಯಾವ ಎತ್ತುಗಡೆಯಿಂದಲೂ ಅದು ಸಾಧಿಸದು. ಮಾನವನ ಸಂಪೂರ್ಣ ಹೃದಯ ಪರಿವರ್ತನವಾಗಬೇಕಾಗಿದೆ. ಅದು ಯೋಗದಿಂದಲೇ ಸಾಧ್ಯ."

"ಯೋಗವೆಂದರೆ ಅಂಥಿಂಥ ಯೋಗವಲ್ಲ. ಆತ್ಮ ಸಮರ್ಪಣಯೋಗ, ಆಧ್ಯಾತ್ಮಯೋಗ, ಸಮಗ್ರಯೋಗ (Integral yoga), ಪೂರ್ಣಯೋಗ, ಪರಮಾತ್ಮನಿಗೆ ಎಲ್ಲವನ್ನೂ ಅರ್ಪಿಸು, ಆತ್ಮಭಾವದಲ್ಲಿರು, ಸರ್ವಸಂಪೂರ್ಣನಾಗು, ಅವನ ಯಂತ್ರವಾಗಿ ದುಡಿ. ಇದೇ ನಿನ್ನ ಗುರಿ, ಇದೇ ನಿನ್ನ ಯೋಗ,"

"ಏನಾಗುವುದೆಲ್ಲ ನಿನ್ನ ಶಕ್ತಿಯಿಂದಲ್ಲ, ಅವನ ಶಕ್ತಿಯಿಂದ. The power that governs the world is atleast as wise as you. ಜಗತ್ತನ್ನೆಲ್ಲ ಆಳುವ ಶಕ್ತಿಯು ಕನಿಷ್ಟ ಪಕ್ಷಕ್ಕೆ ನಿನ್ನಷ್ಟಾದರೂ ಜಾಣವಿದೆ. ಆ ತಾಯಿಗೆ ನಿನ್ನನ್ನು ಒಪ್ಪಿಸು, ಆ ತಾಯಿ ನಿನ್ನೊಳಗೆ ಕೆಲಸ ಮಾಡಲಿ. ಅವಳೇ ನಿನ್ನೊಳಗಿನಿಂದ ಹೊರದೂಡಬೇಕಾದುದನ್ನೆಲ್ಲ ಹೊರದೂಡುವಳು. ನಿನ್ನೊಳಗೆ ಕಟ್ಟಬೇಕಾದುದನ್ನೆಲ್ಲ ಕಟ್ಟುವಳು, ನಿನ್ನನ್ನು ಶುದ್ಧಗೊಳಿಸುವಳು, ಪರಿಪೂರ್ಣಗೊಳಿಸುವಳು, ಅವಳಿಗೇ ನಿನ್ನನ್ನು ಸಂಪೂರ್ಣವಾಗಿ ಒಪ್ಪಿಸು. ಅವಳೇ ನಿನ್ನ ಸಾಧನದ ಸಮುದ್ರ ನೌಕೆಯನ್ನು ನಡೆಸುವ ಉಗಿಶಕ್ತಿಯು, ಸ್ವಯಂ ಪರಮಾತ್ಮನೇ ನಾವಿಕನು. ಸಮರ್ಪಣವೇ ನಿನ್ನ ಹೋಕಾಯಂತ್ರವು, ಬ್ರಹ್ಮವಿದ್ಯೆಯೇ ಜಹಜು."

"ಈ ಯೋಗಸಿದ್ಧಿಗೆ ನಾಲ್ಕು ವಸ್ತುಗಳು ಬೇಕು. ಅವು ಯಾವವೆಂದರೆ— ಶಾಸ್ತ್ರ, ಗುರು, ಕಾಲ, ಉತ್ಸಾಹ, ಶಾಸ್ತ್ರವೋ ಇದೋ ನಾನು ಹೇಳಿದ್ದೇ ಶಾಸ್ತ್ರವು. ಕಾಲವೋ ನಿನ್ನಿದುರಿಗೇ ಅನಂತ ಕಾಲವು ಬಿದ್ದುಕೊಂಡಿದೆ. ಉತ್ಸಾಹವೋ ಅದು ನಿನ್ನೊಳಗೇ ಇದೆ. ಇನ್ನೇನು ? ಗುರುವೋ ಸ್ವಯಂ ಶ್ರೀ ಪರಮಾತ್ಮನೇ ನಿನಗೆ ಗುರುವು. ನಿನ್ನ ಸುತ್ತಮುತ್ತಲಿನ ಸಣ್ಣ–ಪುಟ್ಟ ಪರಿಸ್ಥಿತಿಯೆಲ್ಲಾ ನಿನ್ನ ಸಾಧನಕ್ಕೆ ಅನುಕೂಲವಾಗುವಂತೆಯೇ ಹೇಗೆ ನಿರ್ಮಿಸಲ್ಪಡುತ್ತಿದೆಯೆಂಬುದು ನಿನಗೆ ಗೊತ್ತಾದಾಗ, ನಿನಗೆ ಸ್ವಯಂ ಪರಮಾತ್ಮನೇ ಗುರುವೆಂಬ ಮಾತು ತಿಳಿಯುತ್ತದೆ. God Himself is Guru ಸ್ವಯಂ ಪರಮಾತ್ಮನೇ ಗುರುವು."

ಎಂದು ಭಗವಾನ್ ಶ್ರೀ ಅರವಿಂದರು ಉಪದೇಶಿಸಿದ ಈ ಅಮೃತ ವಾಣಿಯು ನಮಗೆ ಮಾರ್ಗದರ್ಶಕವಾಗಲಿ ! ಆ ಸ್ವಯಂ ಪರಮಾತ್ಮನೇ ಗುರುದೇವನಾಗಿ ಸದಾ ನಮ್ಮನ್ನು ತನ್ನ ದಿವ್ಯಪಥದಲ್ಲಿ ನಡೆಸಲಿ !

ಓಂ ಗುರುದೇವ, ಓಂ ಗುರುದೇವ, ಓಂ ಗುರುದೇವಿ ಮಹಾಮಾತೇ ಓಂ.

೩೦-೪-೪೬ ರ ಬರೆಹ

# ನಾಲ್ಕು ಶಕ್ತಿಗಳು

---

ನಮಗೆ ಬೇಕಾದ ಮಾತುಗಳು ಯಾವವೆಂದರೆ : ಜ್ಞಾನ, ಬಲ, ಸಾಮರಸ್ಯ, ಪೂರ್ಣತೆ. ಜ್ಞಾನವೆಂದರೆ ಸರ್ವರೂ ಸರ್ವಪ್ರಾಣಿಗಳೂ ಸರ್ವವಸ್ತುಗಳೂ ಒಬ್ಬನೇ ಪರಮಾತ್ಮನ ಅಂಶರೆಂದು ತಿಳಿದುಕೊಳ್ಳುವದು. ಬಲವೆಂದರೆ, ಪರಮಾತ್ಮನೆಡೆಗಲ್ಲದೆ ದೈವೀ ವಿಷಯಗಳೆಡೆಗಲ್ಲದೆ ಇನ್ನೊಂದೆಡೆಗೆ ಹೋಗುವ ಮನಸ್ಸನ್ನು ತಡೆದು ನಿಲ್ಲಿಸುವದು. ಸಾಮರಸ್ಯವೆಂದರೆ ಆತ್ಮ–ಬುದ್ಧಿಗಳೊಳಗಿನ ಹೊಂದಿಕೆ, ಬುದ್ಧಿ–ಹೃದಯಗಳೊಳಗಿನ ಹೊಂದಿಕೆ. ಪೂರ್ಣತೆಯೆಂದರೆ ಕಾರ್ಯರೂಪಕ್ಕಿಳಿಸುವಿಕೆ ಅಥವಾ ಭೌತಿಕದಲ್ಲಿ ಪ್ರಕಟಗೊಳಿಸುವ ಕರ್ಮಕೌಶಲ್ಯ. ಸರ್ವರನ್ನು, ಸರ್ವಪ್ರಾಣಿ ಹಾಗೂ ವಸ್ತುಗಳನ್ನು ಪರಮೇಶ್ವರನ ಅಂಶವೆಂದರಿಯದಿದ್ದರೆ ಅದೇ ಅಜ್ಞಾನ, ಇನ್ನೊಬ್ಬರ ಬಗ್ಗೆ, ಅನ್ಯಪ್ರಾಣಿಗಳ ಹಾಗೂ ವಸ್ತುಗಳ ಬಗ್ಗೆ ನಮ್ಮ ಅಡ್ಡತಿಡ್ಡ ಆಚರಣೆಗಳು ಇದೇ ಕಾರಣದಿಂದ ಆಗುತ್ತವೆ. "ಇನ್ನೊಬ್ಬರಿಗೆ ತೊಂದರೆ ಕೊಡಬೇಡ. ಇನ್ನೊಬ್ಬರಿಂದ ತೊಂದರೆ ಪಟ್ಟುಕೊಳ್ಳಬೇಡ" ಎಂಬ ಸುವರ್ಣನೇಮಕ್ಕೆ ಇದೇ ಕಾರಣದಿಂದ ನಮ್ಮಲ್ಲಿ ಭಂಗವುಂಟಾಗುತ್ತದೆ.

ಪರಮಾತ್ಮನ ಕೃಪೆಗಾಗಿ ಒಮ್ಮೆ ಹಂಬಲ ಹುಟ್ಟಿದ ಬಳಿಕ ನಾವು ಬೇರೆ ವಿಷಯಗಳಿಗಾಗಿ ಹಂಬಲಿಸಬೇಕಾಗಿಲ್ಲವೆಂಬುದು ಸಹಜ. ಆದರೆ ನಮ್ಮ ಬಹುಕಾಲದ ಹಿಂದಿನ ರೂಢಿಯಿಂದಲೂ ಅಂತಃಸೃಷ್ಟಿಯೊಳಗಿನ ಕೆಟ್ಟ ಶಕ್ತಿಗಳ ಪ್ರೇರಣೆಯಿಂದಲೂ ತಿರುತಿರುಗಿ ನಾವು ಅನ್ಯವಿಷಯಕ್ಕೆ ಎಳೆಸುವ ಕೆಟ್ಟಹಾದಿಗೆ ಹೋಗುವದುಂಟು. ಆದರೆ ಇದು ಮಹಾ ಈಶ್ವರಿ ಕೋಪಕ್ಕೆ ಕಾರಣವಾಗುತ್ತದೆ. ಪರಮಾತ್ಮನ ಅವಕೃಪೆಯೆನಿಸುತ್ತದೆ. ಅಂದರೆ ಅವನ ಕೃಪೆ ಹಿಂದಿರುಗಿ ಹೋಗುತ್ತದೆ.

ಒಬ್ಬನೇ ಪರಮಾತ್ಮನೇ ಹಲವು ವ್ಯಕ್ತಿಗಳಾಗಿಯೂ ವಸ್ತುಗಳಾಗಿಯೂ ಪ್ರಕಟವಾಗಿರುವಾಗ ಅವೆಲ್ಲವುಗಳೊಳಗೆ ಪರಸ್ಪರ ಹೊಂದಿಕೆ ಇರುವದು ಸ್ವಾಭಾವಿಕವೇ ಸರಿ. ಆದರೆ ಅಲ್ಪಜ್ಞಾನವುಳ್ಳ ಮಾನವ ಬುದ್ಧಿಗೆ ಆ ಹೊಂದಿಕೆಯು ಹೊಳೆಯುವದಿಲ್ಲ. ಅಲ್ಲದೆ, ಸಂಕುಚಿತವಾದ ಮಾನವ ಹೃದಯವು ಹಾಗೂ ಪ್ರಾಣವು ಆ ಹೊಂದಿಕೆಗೆ ಹೊಂದಿಕೊಂಡು ನಡೆಯುವದಿಲ್ಲ. ಇದೇ ಅಸಾಮರಸ್ಯ ಹಾಗೂ

ಅಸೌಂದರ್ಯಗಳ ಮೂಲ. ಮಾನವನು ಹೊರಗಿನ ವ್ಯಕ್ತಿಗಳು ಹಾಗೂ ವಸ್ತುಗಳು ಇವುಗಳೊಂದಿಗಷ್ಟೇ ಅಸಾಮರಸ್ಯದಿಂದ ನಡೆದುಕೊಳ್ಳುವವನಂತಲ್ಲ. ಆದರೆ ತನ್ನೊಳಗಿನ ಅನೇಕ ಸಂಗತಿಗಳಿಗೂ ತಾಳಮೇಳವಿಲ್ಲದವನಾಗಿರುತ್ತಾನೆ. ಆತ್ಮದೊಳಗೆ ಒಂದು ಮಾತು ಅನಿಸಿದರೆ ಬುದ್ಧಿಯಲ್ಲಿ ಅದರ ವಿರುದ್ಧ ಬೇರೆ ತರ್ಕ ಮಾಡುತ್ತಾನೆ. ಬುದ್ಧಿಗೊಂದು ಮಾತು ಸತ್ಯವೆನಿಸಿದರೆ ಹೃದಯದಲ್ಲಿ ಅದರ ಬಗ್ಗೆ ಹಿಗ್ಗು ಇರುವದಿಲ್ಲ. ಹೃದಯಕ್ಕೆ ಸೊಗಸಿದರೂ ಆಶಾಮಯ ಪ್ರಾಣಕ್ಕೆ ಬೇರೊಂದರ ಆಶೆ ಹತ್ತಿಕೊಂಡಿರುತ್ತದೆ. ಪ್ರಾಣದ ಆಶೆಯು ಅದರ ಕಡೆಗೆ ಹೊರಳಿದರೂ ಅದನ್ನು ಆಚರಣೆಗೆ ತರುವಲ್ಲಿ ದೇಹದಲ್ಲಿರುವ ಆಲಸ್ಯವೂ ಅಶಕ್ತತೆಯೂ ಅಡ್ಡಬರುತ್ತದೆ. ಇದರಂತೆ ಇನ್ನೂ ಎಷ್ಟೋ ತೊಡಕುಗಳುಂಟು. ಇವೆಲ್ಲಾ ದೂರವಾಗಲೇ ಬೇಕು. ಇವು ನಮ್ಮಲ್ಲಿ ಇರುವವರೆಗೆ ಪರಮಾತ್ಮನ ಕೃಪೆಯು ನಮ್ಮೊಳಗೆ ಪೂರ್ಣವಾಗಿ ಇಳಿಯಲಾರದು.

ಕೊನೆಯದಾಗಿ ದೈಹಿಕ ಕ್ರಿಯಾಶಕ್ತಿ ಕ್ರಿಯಾರೂಪಕ್ಕೆ ಬರದಿದ್ದರೆ ಎಲ್ಲವೂ ಅಪೂರ್ಣವಾಗಿಯೇ ಉಳಿದುಬಿಡುತ್ತದೆ. ಜ್ಞಾನ, ಬಲ, ಸಾಮರಸ್ಯ ಎಲ್ಲಾ ಅಪೂರ್ಣವಾಗಿಯೇ ಉಳಿಯುತ್ತವೆ. ಕೃತಿಗಿಳಿಸದ ತಿಳುವಳಿಕೆ, ಕೃತಿಗಿಳಿಸದ ನಿಷ್ಠೆ, ಕೃತಿಗಿಳಿಸದ ಪ್ರೇಮ ಎಷ್ಟಿದ್ದರೇನು, ಏನಿದ್ದರೇನು ? ಎಲ್ಲಾ ವ್ಯರ್ಥ. ಜಡಸೃಷ್ಟಿಯಲ್ಲಿ ಸ್ಥೂಲದೇಹ ಧರಿಸಿಬಂದ ಆತ್ಮನು ತನ್ನೊಳಗೆ ಪಡೆದ ಜ್ಞಾನ, ಬಲ, ಸಾಮರಸ್ಯ ಮೊದಲಾದವುಗಳನ್ನು ಅನುಭವಿಸಿ ಹೊರಗೆ ಅವುಗಳನ್ನು ಕಾರ್ಯರೂಪಕ್ಕೆ ತರದೇ ಹೋದರೆ ಅವು ಸಾರ್ಥಕವೇ ಆಗುವುದಿಲ್ಲ. ಹಾಗೂ ವೈಯಕ್ತಿಕವಾಗಿ ವ್ಯಾಯಾಮವಿಲ್ಲದ ಶರೀರದಂತೆ ಅವುಗಳನ್ನು ಗಳಿಸಿದವನಲ್ಲಿಯೂ ಅವು ನಿಸ್ತೇಜವಾಗಿ ಬಿದ್ದುಬಿಡುತ್ತವೆ. ಆದುದರಿಂದ ಅವರ ವೈಯಕ್ತಿಕ ಜೀವನವೂ ತೇಜೋಮಯವಾಗಲಾರದು. ಆದುದರಿಂದ ಒಳಗೆ ಎಷ್ಟೇ ಏನೇ ಬಂದರೂ ಹೊರಗೆ ಅವು ಕಾರ್ಯರೂಪಕ್ಕೆ ಬಾರದೆ ಹೋದರೆ ಅಪೂರ್ಣತೆಯು ಕಟ್ಟಿ ಇಟ್ಟದ್ದೇ ಸರಿ.

ಹೀಗೆ ಈ ನಾಲ್ಕು ಶಕ್ತಿಗಳನ್ನು ದೊರಕಿಸಿಕೊಂಡು ಸರ್ವದಾ ಸರ್ವ ಅಂತೆ ಬಾಹ್ಯ ಪರಿಸ್ಥಿತಿಗಳಲ್ಲಿ ನಾವು ಆನಂದಭರಿತರಾಗಿ ಪರಮಾತ್ಮನನ್ನು ಕೊಂಡಾಡುತ್ತ ಆತನನ್ನು ನೆನೆನೆನೆಯುತ್ತ ಜೀವನಪಥದಲ್ಲಿ ಸದಾ ಸಂತುಷ್ಟರಾಗಿ (ಸಂತುಷ್ಟಸ್ಸತತಂ ಯೋಗೀ) ಸಾಗತೊಡಗಿದೆವಾದರೆ ಅಧ್ಯಾತ್ಮರಾಜ್ಯದ ಮಹಾ ಶಿಖರಕ್ಕೆ ಮುಟ್ಟಿ ವಿಜ್ಞಾನ ಸೂರ್ಯೋದಯದ ಸುಖವನ್ನು ಉಣ್ಣುತ್ತೇವೆ. ಇದೇ ನಮ್ಮ ಗುರಿ. ಇದನ್ನೇ ಪಡೆಯಿರೆಂದು ಗುರುದೇವ ಶ್ರೀ ಅರವಿಂದರೂ ಸದ್ಗುರುದೇವಿ ಶ್ರೀ ಮಹಾತಾಯಿಯವರೂ ನಮಗೆಲ್ಲ ಬೋಧಿಸುತ್ತಿದ್ದಾರೆ. ನಾಲ್ಕು ಮಂದಿ ತಾಯಿಯರನ್ನು ಒಲಿಸುವದೆಂದರೂ ಇದೇ. ಐದನೆಯ ತಾಯಿ ಆನಂದಶಕ್ತಿಯ ಸಹಾಯದಿಂದ ವಿಜ್ಞಾನವನ್ನು ಪಡೆಯುವದೆಂದರೂ ಇದೇ.

ನಮ್ಮ ನಮ್ಮ ಶಕ್ತಿಗಳಿಗನುಸಾರವಾಗಿ ನಮ್ಮ ನಮ್ಮ ಸ್ವಭಾವ ಪ್ರಕೃತಿಗನುಸಾರವಾಗಿ ಶೀಘ್ರಗತಿಯಿಂದಾಗಲಿ, ಮಂದಗತಿಯಿಂದಾಗಲಿ, ಒಂದು ರೀತಿಯಿಂದಾಗಲಿ, ಇನ್ನೊಂದು ರೀತಿಯಿಂದಾಗಲಿ ಇದನ್ನೇ ಸಾಧಿಸುವದು ನಮ್ಮ ಗುರಿಯಾಗಿದೆ.

ಓಂ ಶ್ರೀ ಓಂ

೫-೩-೪೯ ರ ಬರೆಹ

# ವಾಙ್ಮಯ-ಪರೀಕ್ಷಣ

"ವಾಙ್ಮಯ ಪರೀಕ್ಷಣ"ವೆಂಬ ಉದಾತ್ತ ವಿಚಾರಗಳುಳ್ಳ ಗ್ರಂಥವೊಂದು ಮೊನ್ನೆ ಮೊನ್ನೆ ಆವನೋ ಒಬ್ಬನ ಕನಸಿನಲ್ಲಿ ದೃಷ್ಟಿಗೋಚರವಾಗಿದ್ದಿತಂತೆ. ಅದನ್ನು ಓದಿ ಮನಗಂಡವರು ಅದರ ಪರಿಚಯವನ್ನು ತಮ್ಮೆಲ್ಲರಿಗೆ ಮಾಡಿಕೊಡುವುದು ಹೇಗೆಂದರೆ :–

"ಈ ಗ್ರಂಥವು ಶಾಲಿವಾಹನ ಶಕಕ್ಕೆ ಮುಂಚೆಯೇ ಎಷ್ಟೋ ಶತಮಾನಗಳ ಹಿಂದೆ ಬರೆಯಲ್ಪಟ್ಟಿರಬೇಕು." ಎಂದು ಗ್ರಂಥ ಕರ್ತರು ತಾವೇ ಸ್ವತಃ ಪೀಠಿಕೆಯಲ್ಲಿ ಹೇಳಿದ್ದಾರೆ. ಹೀಗೆಂದ ಮೇಲೆ ಆ ಗ್ರಂಥಕರ್ತರು ಇನ್ನಾವ ಕಾಲದಲ್ಲಿದ್ದಿರಬೇಕೋ ವಾಚಕರೇ ತರ್ಕಿಸತಕ್ಕದ್ದು.

ಈ ಗ್ರಂಥದ ನಟ್ಟನಡುವೆ ಎಲ್ಲಿಯೋ ಒಂದು ಕಡೆಗೆ ಗಣಪತಿ, ಶ್ರೀರಾಮ, ಸರಸ್ವತಿ ಇವರುಗಳನ್ನು ಕ್ರಮದಿಂದ ವರ್ಣಿಸಿದುದೇನೆಂದರೆ :–

ಸಿಂಧುರವದನ ಸುಶೋಭಿತ ।
ಸುಂದರತನುವಾಂತ ಗಿರಿಸುತಾ–ತನುಜಾತಾ ॥
ಮಂದಮತಿಯು ಬಳಲಿದಪೆಂ ।
"ನೀಂ ದೇವನೋ ಪಶುವೋ" ಎಂಬ ಸಂದೆಗದಿಂದಂ ॥

ನೆಲವಂ ನೆಲದಣುಗಿಯನುಂ ।
ಸತಿ ಪಾಲಿಸಿ ಭೂಮಿ–ಭೂಮಿಜೆಯರಿಗೆ ಪತಿಯೆಂ ॥
ದೆಲೆ ರಘುಪತಿ ಪೆಸರಾಂತಯ್ ।
ತಿಳುಹಿಸೆಲೈ "ಸೀತೆ ನಿನಗೆ ಸತಿಯೋ ಸುತೆಯೋ" ॥

ಸರಸತಿಯೆ, "ನಿನಗೆ ನಳಿನಜ ।
ನರಸನೊ ಮೇಣ್ ಪಿತನೊ" ತಿಳಿಯದಳಲು ತಮಿರ್ಪೆಂ ॥
ಚರಮುಚರಕೋಟಿಯೆಲ್ಲಮು ।
ನುರೆ ಪದೆವನ ಹೊರತು ನಿನ್ನನಾವಂ ಪಡೆದಂ ? ॥

ಈ ಗ್ರಂಥದ ಪ್ರತಿಪರಿಚ್ಛೇದದ ಕೊನೆಗೂ ಇದರಡಿಯಲ್ಲಿ ಕಾಣಿಸಿರುವ ಗದ್ಯವಿದೆ :-

"ಇಂತಿದು ಮುಖ್ರಾನಲಾನಿಲನುಮವಿಚಾರಿಗಳರಸನಂಮಸಂಬದ್ಧವಾದ ವಿಶಾರದನುಂ ಭಗವತ್ಸೇನಾಚಾರ್ಯ ಚರಣಾರವಿಂದ ಮಧುಪನುಮಪ್ಪ ನಾಣಿಲಿದೇವ ವಿರಚಿತವಾದ ವಾಙ್ಮಯ ಪರೀಕ್ಷಣವೆಂಬ ಮಹಾಪ್ರಬಂಧದೊಳ್"

ನಾಣಿಲಿದೇವನು ತನ್ನ ಕಲದೇವತೆಯನ್ನೂ ಗುರುಪರಂಪರೆಯನ್ನೂ ಹೀಗೆ ಹೇಳಿದ್ದಾನೆ :–

೧. ಚಂಡಿ (ಜೈಮಿನಿ ಭಾರತದಲ್ಲಿ ಇವಳ ಮಹಾತ್ಮ್ಯವು ವಿಶದವಾಗಿ ವಿವರಿಸಲ್ಪಟ್ಟಿದೆ. ಇವಳೇ ಕವಿಯ ಕುಲದೇವತೆಯು.)

೨. ಅರಗೊಡ್ಡಿ (ಮೇಲೆ ಹೇಳಿದ ಚಂಡಿಯ ವರಪ್ರಸಾದದಿಂದ ಇವರು ಅವತರಿಸಿದರು. ಇವರಿಂದಲೇ ಗುರುಪರಂಪರೆಯು ಪ್ರಾರಂಭವಾಗುವದು. ಗುರುಹಿರಿಯರ ಆಜ್ಞೆಯನ್ನುಲ್ಲಂಘಿಸುತ್ತಲಿರುವ ಈಗಿನ ವಿದ್ಯಾರ್ಥಿಗಳಿಗೆ ಇವರೇ ಬೋಧಕರಂತೆ.)

೩. ಗಾಂಪರೊಡೆಯ (ನಗೆಗಡಲಿನಲ್ಲಿ ಇವರ ಪ್ರಸಿದ್ಧಿಯು ವಿಶೇಷ.)

೪. ಮಂಕ, ಮರುಳ, ಮಡ್ಡಿ, ಮುಠ್ಠಾಳ, ಮಡಿಯ (ಈ ಐವರು ಶಿಷ್ಯರಲ್ಲಿ ಮಂಕನೇ ಪಟ್ಟದ ಶಿಷ್ಯನು.)

೫. ಕಾಂತಪ್ಪ (ಇವರು ಮಂಕನ ಪಟ್ಟದ ಶಿಷ್ಯರಲ್ಲದಿದ್ದರೂ, ಅವನ ಅನುಗ್ರಹದಿಂದ ಆ ಯೋಗ್ಯತೆಗೆ ಬಂದವರು.)

೬. ಭಗವಂತ (ಈಗಿನ ಮುಲಕೀ ಪರೀಕ್ಷೆಯ ವಿದ್ಯಾರ್ಥಿಗಳೆಲ್ಲ ಇವನ ಪ್ರಿಯ ಶಿಷ್ಯರೆಂಬುದನ್ನು ಬೇರೆ ಹೇಳಲಿಕ್ಕೆ ಬೇಡ, ಇವನಿಗೆ "ಬುದ್ಧಿಗೇಡಿ" "ಮೂರ್ಖಾಗ್ರೇಸಚಕ್ರವರ್ತಿ" ಮುಂತಾದ ಬಿರುದುಗಳಿದ್ದುದು ಸರ್ವಶ್ರುತ.)

೭. ನಾಣಿಲಿಗ* (ಇವರ ಹೆಸರು ಇವರಿಗೆ ಅನ್ವರ್ಥಕವಾದುದೆಂಬುದನ್ನು ಇವರು ರಚಿಸಿದ "ವಾಙ್ಮಯ-ಪರೀಕ್ಷಣ"ವೆಂಬ ಗ್ರಂಥವನ್ನೋದಿಯೇ ತಿಳಿಯಬೇಕು.)

ಇವರ ಗ್ರಂಥದಿಂದ ಒಂದೊಂದೇ ವಿಚಾರವನ್ನು ಉದ್ಧರಿಸಿ ಬರೆಯುತ್ತೇನೆ :–

೧. ಕನ್ನಡ ಕಾವ್ಯಗಳಲ್ಲಿ ಸುಳ್ಳುಸುಳ್ಳು ಏನಾದರೊಂದನ್ನು ಬರೆಯುವದು ಬಹಳ, ಅದು ಹೇಗೆಂದರೆ :–

ಸರ್ವಜ್ಞ ಮೂರ್ತಿಯು—

"ಉಂಡು ನೂರಡಿಯಿಟ್ಟು ಕೆಂಡದಲಿ ಕೈಕಾಸಿ
ಗಂಡ ಮೇಲ್ಮಾಡಿ ಮಲಗಿದಡೆ, ವೈದ್ಯನಾ
ಗಂಡ ತಾನಕ್ಕು ಸರ್ವಜ್ಞ"

* ನಾಣಿಲಿಗನೆಂದರೆ ನಾಚಿಕೆಗೇಡಿ

ಎಂದು ಹೇಳಿರುವನಷ್ಟೆ. ನಾನು ಬಹಳ ಬಡವನಿದ್ದುದರಿಂದ ನನಗೆ ಯಾರೂ ಹೆಣ್ಣು ಕೊಡಲಿಲ್ಲ. ಆದುದರಿಂದ ಇದೇ ಸುಲಭವೆಂದು ಇಂದಿಗೆ ಹತ್ತು ವರುಷಗಳಿಂದಲೂ ಈ ನಿಯಮವನ್ನು ಪಾಲಿಸಿ, ಪಾಲಿಸಿ ಬೇಸತ್ತೆನು. ಒಬ್ಬ ವೈದ್ಯನೂ ನನ್ನ ಹೆಂಡತಿಯಾಗಲಿಲ್ಲ. ಹೆಂಡತಿಯಾಗುವದಂತೂ ಒತ್ತಟ್ಟಿಗಿರಲಿ, ನನಗೆ ಬೇನೆ ಬಂದರೆ ಔಷಧವನ್ನಾದರೂ ಕೊಡುವರೋ ಇಲ್ಲವೋ ದೇವರೇ ಬಲ್ಲ.

೨. ಕನ್ನಡನಾಡಿನ ಪ್ರಸಿದ್ಧ ವಿದ್ವಾಂಸರಾಗಿದ್ದ ದಿವಂಗತರಾದ ರಘುನಾಥರಾಯರು ತಮ್ಮದೊಂದು ಲೇಖನದಲ್ಲಿ "ಹದಿನಾರನೆಯ ಶತಮಾನದಲ್ಲಿ ಮರಾಠಿಯ ಪ್ರಾಬಲ್ಯವಿರಲಿಲ್ಲ"ವೆಂದು ಹೇಳಿರುತ್ತಾರೆ. ಇದು ನಿಜವೋ? ಹನ್ನೆರಡನೆಯ ಶತಮಾನದಲ್ಲಿದ್ದ ನೇಮಿಚಂದ್ರನೂ ರುದ್ರಭಟ್ಟನೂ ತಮ್ಮ ಕಾವ್ಯಗಳಲ್ಲಿ "ಚಾರಿ" ಎಂಬ ಮರಾಠಿ ಗ್ರಾಮ್ಯ ಶಬ್ದವನ್ನು ಪ್ರಯೋಗಿಸಿದ್ದಾರೆ. ಇದು ಕನ್ನಡಿಗರಿಗೆ ಏಕೆ ತೋರೀತು :–

ಮೆರೆಯೆ ಕುಚಮಂಡಲಂ ನಸು ।
ದೆರೆಯೆ ನಿವೃತ್ತೋರುಮಂಡಲಂ ರಸದಿಂ ಮೆ ।
ಯ್ಮರೆಯೆ ಸಭಾಮಂಡಲಮೇಂ ।
ಮೆರೆದಳೊ ಮಂಡಲಮನಾಕೆ 'ಚಾರಿ' ಗಳಿಂದಂ ॥

('ಲೀಲಾವತಿ' ೪–೧೪೦)

'ಚಾರಿ' ಮೆಟ್ಟುವ ಭಂಗಿದೋರ್ವಲನಂ ಮನಂಗೊಳೆ... ।
.................................ಸಂ ।
ಸಾರ ನಾಟಕ ಸೂತ್ರಧಾರಿ ಮುರಾರಿ ಕೈಪರೆದಾಡಿದಂ ॥

('ಜಗನ್ನಾಥ ವಿಜಯ' ೩–೫೩)

ಮರಾಠೀ ದೇಶದಲ್ಲಿ ಕಾಳುಕಸರುಗಳನ್ನಳೆಯುವಾಗ ಹುಂಬಜನರು "ಹೇ ಚಾರಿ ಹೇ ಪಾಚ" ಎಣಿಸುತ್ತಿರುವುದನ್ನು ಆರು ಕೇಳಿಲ್ಲ?

೩. ಕನ್ನಡ ನಾಡಿನಲ್ಲಿ ಇಂಗ್ಲೀಷ್ ತಿಂಗಳುಗಳನ್ನೆಣಿಸುವ ಪ್ರಚಾರವು ಎಂದಿನಿಂದಲೂ ಇದ್ದಿತು :–

ಅ) 'ಜನವರಿ'ಯುಲಂತಾಗಿಯಾತನು । ನಿನಗೆ ಮಂತ್ರಿತನಕ್ಕೆ ತಕ್ಕವ । ನೆನಲಿದೆಲ್ಲವ ಕೇಳ್ದು ಮಂದದಿಂದುಬ್ಬಿ ಬಿಜ್ಜಳನು (ಬಸವಪುರಾಣ).

ಬ) ನ ಕಥಾ ಕಟುಘೂತ್ಕೃತಾದ್ವ್ಯಥಾ "ಮೇ" (ವಿಜಯನಗರದ ಗಂಗಾದೇವಿ). ಸಾಕು, ಸಾಕು, ಕನ್ನಡ ವಾಙ್ಮಯವೆಲ್ಲ ಪರಪುಟ್ಟ ಅದರಲ್ಲೇನು ಹುರುಳಿದೆ? (ಹೀಗೆನ್ನುವ ಮಹಾಶಯರೆಲ್ಲ ಈ ನಾಣಲಿಗನ ಪಂಥದವರಲ್ಲವೇ?) ಇಂಥವರನ್ನು ನಾಣಲಿಗರೆಂದೇ ಹೇಳುವದು ಹೆಚ್ಚು ಸಮಂಜಸವೆಂದು ತೋರುತ್ತದೆ.

ಜ. ಕ. ೧–೯ ಜುಲೈ ೧೯೨೩

## ನಡೆಯುಂತೆ ನುಡಿ

---

೧) ಮೊದಲು ಮೊದಲು ಕನ್ನಡಿಗರು ದೋತರವನ್ನುಡುತ್ತಿರಲಿಲ್ಲ. ಚಣ್ಣದಂತಹ ಆವುದೋ ಒಂದು ತೊಡಿಗೆಯನ್ನು (ತೊಡೆ ತೆರೆಯದಂತೆ) ಧರಿಸುತ್ತಿದ್ದರೆಂದು ತೋರುತ್ತದೆ, ಏಕೆಂದರೆ :–
'ತೊಡೆ' ( = ಅಂಕ ) [ ಧಾ – ತೊಡು ]
'ತೊಡು' ಎಂದರೆ 'ಸುತ್ತಿಕೊಳ್ಳು' ಎಂದರ್ಥವಾಗುಂವದಿಲ್ಲ. ದೋತರ ಮುಂತಾದವುಗಳನ್ನು ತೊಡುವದಿಲ್ಲ; ಉಡುತ್ತೇವೆ.

೨) ಹೆಣ್ಣುಮಕ್ಕಳು ತೊಡೆ ತೆರೆಯದಂತೆ ಏನೋ ಒಂದು ತೊಡಿಗೆಯನ್ನು ಧರಿಸಿ ("ನನ್ನ ತೊಡೆ ತೆರೆದರೆ ನನಗೇ ನಾಚಿಕೆ" –ಗಾದೆ) ಮೇಲೊಂದು ಅರಿವೆಯನ್ನು ಸುತ್ತಿಕೊಳ್ಳುತ್ತಿದ್ದರೆಂದು ತೋರುತ್ತದೆ. ಇಂತಹ ಮೇಲ್ಬಟ್ಟೆಯನ್ನು ಗೊಲ್ಲರು ಈಗಲೂ ಧರಿಸಂತ್ತಾರೆ. –'ಉಡಿ' (ಧಾ – ಉಡು = ಸುತ್ತಿಕೊಳ್ಳು)

೩) ಕಾಳಂಕಡಿಗಳನ್ನು, ಒಜ್ಜೆ ಒತ್ತಲುಗಳನ್ನು ಎತ್ತುಗಳ ಮೇಲೆಯೇ ಹೇರಂತ್ತಿದ್ದರೆಂದು ತೋರುತ್ತದೆ.
'ಎತ್ತು' ( = ವೃಷಭ) [ಧಾ – ಎತ್ತು] 'ಹೇರು' ( = ಚೀಲ ) [ಧಾ–ಹೇರು]

೪) ಹೆಣಗಳನ್ನು 'ಸುಡುವ ಪದ್ಧತಿ'ಯು ಕನ್ನಡಿಗ (ದ್ರಾವಿಡ)ರಲ್ಲಿಯೂ ಇದ್ದಿತು.
'ಸುಡುಗಾಡು' ( = ಶ್ಮಶಾನ, ಸುಡುವ ಕಾಡು)

೫) ಸಹಗಮನ ಪದ್ಧತಿಯು ಕನ್ನಡಿಗರಲ್ಲಿಯೂ ಇದ್ದಿರಬೇಕು.
'ಮಡದಿ' ( = ಪತ್ನಿ ) [ ಧಾ–ಮಂಡಿ ]

೬) ಆ ಕಾಲದಲ್ಲಿ ಸಾಮಾನ್ಯ ನಾಣ್ಯವೆಂದರೆ 'ಹಣ'ವೇ ಸರಿ. ("ಹಣವೆಂದರೆ ಹೆಣವು ಬಾಯ್ದೆರೆಯುತ್ತದೆ" –ಗಾದೆ) ಹತ್ತು'ಹಣ'ಗಳೆಂದರೆ ಒಂದು 'ಗದ್ಯಾಣ', ಒಂದು ಗದ್ಯಾಣದ ಬೆಲೆ ೨ ರೂ. ೧೪ ಆ, ೮ ಪೈ.

ಬಹಳವಾಗಿ ಬಳಕೆಯಲ್ಲಿದ್ದ ನಾಣ್ಯವೆಂದರೆ 'ಹಣ'ವೇ. ಅಂತೇ ಕನ್ನಡಿಗರು 'ಹಣ'ವನ್ನೇ ಸಾಮಾನ್ಯವಾಚಕವಾಗಿ ಎಣಿಸಿದ್ದಾರೆ.

೭) ಆಗಿನ ಕೂಲಿಕಾರರ ದಿನಗೂಲಿಯು ಒಂದು 'ಪಡಿ' ಕಾಳಾಗಿರಬೇಕು.
ಪಡಿ ( = ಅಳತೆ, ಮಾಪು ) [ ಧಾ – ಪಡೆ = ಹೊಂದು, ದೊರಕಿಸು ]

ಜ. ಕ. ೧–೧೨, ಅಕ್ಟೋಬರ ೨೩

# ಭಾವಬಂಧನ

ಹೋದಬಾರಿ ನಮ್ಮ ಗೆಳೆಯರಲ್ಲಿ ಒಂದು ಮಾತು ಹೊರಟಿದ್ದಿತು. 'ಕತೆ–ಕತೆ' ಎಂದರೇನು ? ಕೇಳಿದುದನ್ನೇ ಮೇಳೈಸಿ ಹೇಳಿದರೆ ತಾನೆ ಅದೊಂದು ಕತೆ; ನೋಡಿದುದನ್ನೇ ನಾಲಗೆಗೆ ನೀರೊಡೆಯುವಂತೆ ಬಿಡು ಬಿಡುವಾಗಿ ನುಡಿದರೆ ಅದೂ ಒಂದು ಕತೆ. ಈ ಮಾದರಿಯಾಗಿ ಬರೆದುದರಲ್ಲಿ ಇದು ಮೊದಲನೆಯ ಕತೆ.

ಇದೀಗ ನಮ್ಮ ಗೋದುವಿಗೆ ಆರು ಮೀರಿ ಏಳು ವರುಷ. ಚಿಕ್ಕವಳಾದರೂ ಬಲು ಜಾಣೆ. ಇದ್ದುದನ್ನು ಇದ್ದಕ್ಕಿದ್ದ ಹಾಗೆ ಹೇಳುವುದು ಮಕ್ಕಳಲ್ಲಿರುವ ಒಂದು ಗುಣ. ಮಕ್ಕಳ ಬುದ್ಧಿ ಮುದುಕರಿಗಿಲ್ಲ.

ಗೋದು ಇದೀಗ ಉಂಡು ಒಳಬಾಗಿಲಲ್ಲಿ ಬಂದು ನಿಂತಿದಾಳೆ. "ಊಂಚ್ ಮುತ್ತಾ ! ಮೂಗಿನಾಗ ನತ್ತಾ !" ಎಂದು ಹೇಳಿದ್ದುದನ್ನೇ ತಿರು ತಿರುಗಿ ಹೇಳುತ್ತಲೂ ನಡು ನಡುವೆ ನನ್ನ ಕಡೆಗೆ ನೋಡಿ ಅಣಕಿಸುತ್ತಲೂ ಇದಾಳೆ.

"ಗೋದು ಬಾ" ಎಂದೆ.

"ಏನ್ ಕೊಡ್ತಿ ?" ಎಂದಳು.

"ಏನು ಬೇಕು ?"

"ಅವ್ ಅವಲಕ್ಕಿ ಕೊಟ್ಟು, ನೀ ?"

"ಆಕೆ ಏನು ಕೊಟ್ಟರೂ ಈಟೆ* ಕೊಟ್ಟಳು, ನಾನು ಏಟ ಬೇಡಿದರೂ ಕೊಡುವೆನು......"

"ಊಂ ಒಲ್ಲೆ, ಬಡಕೋತೀ ಎಂದು ತೋರುತ್ತೆ"

"ಇಲ್ಲ ಬಾ, ಕಲ್ಸಕ್ಕರೀ ಕೊಡ್ತೇನೆ, ಇಲ್ಲಿ ಬಾ"

---

* ಈಟು = ಸ್ವಲ್ಪ, ತಿಂಡಿ (from eat ಈಟ್ = ತಿನ್ನು) ಏಟು = ಬೇಕಾದಷ್ಟು, ಬಡತ. ಇದಕ್ಕೆಲ್ಲಾ ನಮ್ಮ 'ಅನುಕೂಲ ಸಿಂಧು'ವಿನಲ್ಲಿ ಆಧಾರಗಳಿವೆ. ಮುಂದಿಯಂತೆ ನಾವು ಅನೇಕ ಗ್ರಂಥಗಳನ್ನೋದಿದವರಲ್ಲ. ನೋಡಿ ಸ್ವಾಮಿ, ನಾವು ಅಧ್ಯಯನ ಮಾಡಿರುವದು ಇದೊಂದು ಗ್ರಂಥವನ್ನೇ ಮಾತ್ರ, ಇದರಲ್ಲಿ ಬೇಕಾದ್ದೆಲ್ಲ ಇದೆ. ಬೇಡಾದುದು ಇಲ್ಲವೇ ಇಲ್ಲ, ನೋಡಿ ಸ್ವಾಮಿ.

"ಮೊದಲು ಕೊಡು, ಆಮೇಲೆ ಬರತೇನೆ"

"ಬಾರದೆ ಹೇಗೆ ಕೊಡೋದು'

'ಬಂದೆ ಕೊಡು" ಬಂದಳು.

"ಸಿ ಕ್ಕೀ!" ಎಂದು ಎಳೆದು ಎದೆಯ ಮೇಲೆ ಹಾಕಿಕೊಂಡೆ.

"ಗೋದೂ, ನಿನ್ನೆ ಆಕೆಯ ಇದಿರಿಗೆ ಏನೇನೋ ಹೇಳ್ತಾ ಇದ್ದೆಯಲ್ಲ?"

"ಆಕೆ – ಎಂದರೆ ?"

"ನಿನಗೆ ಗೊತ್ತಿಲ್ಲೇ ?"

"ಇಲ್ಲ–ಆಕೆಯಾಣೆಯಾಗಿಯೂ ಹೇಳುತ್ತೇನೆ, ನನಗೆ ಗೊತ್ತಿಲ್ಲ"

"ಗೊತ್ತಿಲ್ಲದೆ ಆಕೆಯ ಆಣೆಯನ್ನು ಹೇಗೆ ಕೊಟ್ಟೆಯೋ ಕಳ್ಳಿ ?"

ಕೊಳ್ಳನೆ ನಕ್ಕಳು.

ಕಲ್ಸಕ್ಕರೆ ಕೊಟ್ಟೆ, ಬಾಯಲ್ಲಿಟ್ಟಳು, "ಹೇಳಲೇ ?" ಎಂದಳು

"ಹೂಂ" ಎಂದೆ. ಹೀಗೆ ಹೇಳಿದಳು :–

"ಸಣ್ಣ ಹುಡಿಗೆ, ಹಾದಿ ಹಿಡಿದು ಹೊರಟೆ, ನಾನು ಹೋಗಬೇಕಾದುದು ಷೆಪರ್ಡ ಹಾಲಿನಲ್ಲಿರುವ ನಮ್ಮ ಸ್ಕೂಲಿಗೆ. ಸ್ಕೂಲಿನ ಹೆಸರಿಗೆ ನೀವು ನಗಬಹುದು. ನಮ್ಮ ಮನೆ ಮಠಗಳಿಗೆ ಫಿರಂಗಿಸಾಯಬರ ಹೆಸರಿಡುವುದು ಇದೀಗ ನಮ್ಮವರ ಪರಿಪಾಠ, 'ಶಾರದಾ ಸದನ' 'ಸರಸ್ವತೀ ಮಂದಿರ' ಎಲ್ಲಿಗೆ ಹೇಳಹೆಸರಿಲ್ಲದೆ ಓಡಿ ಹೋದವೋ ಕಾಣೆ. ಈ ರೂಢಿಯು ಬರಬರುತ್ತ ಎಲ್ಲಿ ತೊಟ್ಟಿಲ ಬಳಿಗೆ ಹಾಯುವದೋ ಎಂಬ ಶಂಕೆ.

ನಮ್ಮ ನೆರಮನೆಯ ಕಿಟ್ಟು ಓದುವದು ನ್ಯಾಶನಲ್ ಸ್ಕೂಲಿನಲ್ಲಿ. ('ರಾಷ್ಟ್ರೀಯ ವಿದ್ಯಾಲಯ'ವೆಂದು ಹೇಳಿದರೆ ಕತೆಗೆ ಕಳೆಯಿಲ್ಲ.) ಕಿಟ್ಟು ಕೂಡಿದಾಗಲೆಲ್ಲ ನನ್ನನ್ನು 'ಕುರಿ' 'ಕುರಿ' ಎಂದು ಕಾಡುತ್ತಾನೆ. ಆ ಸುಡಗಾಡು ಫಿರಂಗಿಯವರ ಮಾತಿನಲ್ಲಿ ನಮ್ಮ ಸ್ಕೂಲಿಗೆ "ಕುರುಬರ ದಡ್ಡಿ" ಎಂದರ್ಥವಾಗುತ್ತದಂತೆ, "ಸ್ಕೂಲೋ ಕುರುಬರ ದಡ್ಡಿ, ಮೇಷ್ಟರೋ ಕಗ್ಗ ಕುರುಬ, ಕಲಿಯುವ ಮಕ್ಕಳೋ ಕುರಿಗಿಂತ ಕುರಿ" ಎಂದು ಹಿಯಾಳಿಸುವನು. ಇದರಲ್ಲಿ ಸತ್ಯಾಂಶವಿರಲಿಕ್ಕಿಲ್ಲವಷ್ಟೆ? ಇದೇನಂ? ಎಲ್ಲಿಗೋ ಹೊರಟು ಏನೇನೋ ಹೇಳುತ್ತಿರುವೆ. ಕ್ಷಮಿಸಿ, ಸಣ್ಣ ಹುಡಿಗೆಯೆಂದು ಮೊದಲೇ ಹೇಳಿದ್ದೇನೆ.

ಬಲ್ಲವರು ಭಾಷೆಗೆ ನಾಲ್ಕು ಮೆಟ್ಟಲುಗಳೆಂದು ಹೇಳುತ್ತಾರೆ. ಹಾದೀ ಹಿಡಿದು ಹೊರಟಿರುವಾಗ ಮನಸ್ಸ ಒಂದೇ ಸ್ಥಳದಲ್ಲಿ ನಿಲ್ಲಲಿಕ್ಕೆ ಹವಣಿಸುತ್ತಿರುತ್ತದೆ. ಆಗಳೆ ಭಾಷೆಯು ಒಂದು ಮೆಟ್ಟಲು ಒಳಗಿಳಿಯುತ್ತದೆ. ಅದುವೆ ಮಧ್ಯಮಾ ವಾಣಿಯಂತೆ. ಅದು ಇದ್ದಲ್ಲಿ ಇರದು. ಹಾಡಿನ ಹೆಡೆಯಾಗಿ ಹೊರಬೀಳುವದು. ಅಂತೆಯೇ

'ಹಾದೀ ಹಿಡಿದು ಹಾಡದವರಿಲ್ಲ' ಎಂದೆನ್ನುವರು, ನನಲ್ಲಿ ನಾನು ಏನೇನೋ ಸಣ್ಣಾಗಿ ಹಾಡಿಕೋತ ಹೊರಟಿದ್ದೆ.

ಕೆಟ್ಟ ಕಲಿ ಕಾಲಿಟ್ಟು। ಕಟ್ಟೆಯೇರಿತೇ ॥ ತಂಗಿ ॥
ಕಟ್ಟೆಯೇರಿತೇ ॥ ಪಲ್ಲವಿ ॥

ಎಂದೇನೇನೋ ಗೊಣಗುತ್ತಿದ್ದೆ. 'ರಾಗ ರಸ, ಹಾಡು ಕಸ' ಎಂದು ಹೇಳುವುದನ್ನು ಕೇಳಿರಬಹುದು. ಹಾಡಿನ ಕಡೆಗೆ ನನ್ನ ಮನಸಿರಲಿಲ್ಲ. ನನ್ನ ಇಂಪಾದ ದನಿಯಲ್ಲಿಯೇ ನಾನು ಗರಕಾಗಿ ಬಿಟ್ಟಿದ್ದೆ. ಹಾದೀ ಹಿಡಿದು ಹೋಗಿ ಬರುವವನರಿಯೆ, ತಿರಿಗಿ ಕೇಳಿದರೆ ನನ್ನನ್ನೂ ಅರಿಯೆ. ಮಧ್ಯಮಾ ವಾಣಿಯ ಮೋಹನ ಮಂತ್ರವೇ ಇಂತಹದಂತೆ.

ಇಷ್ಟೊತ್ತಿಗೆ ಬೀದಿಯ ಬದಿ 'ಕಿಲಿಕಿಲಿ' ನಗುವ ಕಿರುದನಿ, ನೋಡುತ್ತೇನೆ ಕಿಟ್ಟು ಹೊರಟಿದ್ದ. ಆಗ ಎಂದೂ ಇಲ್ಲದೆ ಎಲ್ಲಿಂದಲೋ ನಾಚಿಕೆ ಬಂದಿತು. ನಾಚಿ ನೆಲವನ್ನು ನೋಡಹತ್ತಿದೆ. "ಕುರಿ" ಎಂದಾನೆಂದು ನಾನು ನಾಚಿದೆನೆಂತಲ್ಲ. ಇದು ಬಾಲದಂಪತಿಗಳ ಮೋಹದ ಮಾಟ. ಕಣ್ಣಲ್ಲಿ ಕುಣಿಯುವದೊಂದು ಲೀಲೆಯ ನೋಟ. ಇಷ್ಟೊತ್ತಿಗೆ ಇದಿರಿನಿಂದ ಬಂದ ಕಿಟ್ಟು ಒಂದೆರಡು ಹೆಜ್ಜೆ ಹಿಂದಾದ. ಇದಿರಿಗಿರುವಾಗ ನೋಡುವುದಾಗಲಿಲ್ಲ. ಹಿಂದಾದ ಬಳಿಕ ಹೊರಳಿ ನೋಡಿದೆ. ಹಾಗೆಯೇ ಅವನೂ ನೋಡಿ ನಾಚಿದ. "ಕರೆದು ಉಣಸಬಂದಾಗ ಹಟಹಿಡಿದು, ಹೊಟ್ಟೆಹಸಿದಾಗ ಯಾರಿಗೂ ಕಾಣದಂತೆ ಕಳವಿನಿಂದುಣಹೋಗಿ, ಅತ್ತೆಯ ಕೈ ತುಳಿದ ಅಳಿಯನಂತೆ" ನಮ್ಮ ಹಣೆಯ ಬರಹ.

ಹೀಗೇತಕ್ಕೋ ನಾನರಿಯೆ. ಮದಿವೆಯಾಗಿರದಿದ್ದರೆ ಚೆನ್ನಾಗಿದ್ದಿತೆಂದು ಆಲೋಚಿಸಿದೆ. ಕೂಡಿ ಆಡಿದ ಕಿಟ್ಟುವನ್ನು ಕಾಣಲಿಕ್ಕೆ ಇಷ್ಟೊಂದು ಕಷ್ಟ! ಇದೆಲ್ಲಿಯ ಮದುವೆಯೋ ಕಾಣೆ, ಮೊದಲಿನ ಮಾತೆಲ್ಲ ಮಾಯವಾದುದಕ್ಕಾಗಿ ಮರುಗಿದೆ. ಕರೆಯಬೇಕೆಂದೆ. ಮನಸ್ಸು ಒಪ್ಪಲಿಲ್ಲ. ಹಾಗೇ ಹೊರಟೆ.

ಹೀಗಿರುವಷ್ಟರಲ್ಲಿಯೇ ಪಿರಂಗಿಯವರದೊಂದು ಜೋಡನ್ನು ನೋಡಿದೆ. ಕೈ ಕೈ ಹಿಡಿದಿದಾರೆ. ತಿರುತಿರುಗಿ ಮುತ್ತಿಡುತ್ತಾರೆ. ಮಾತನಾಡುತ್ತಾರೆ. 'ಕುಸು–ಕುಸು' ನಗುತ್ತಾರೆ. ಅವರೇನು ಮೊನ್ನೆ ಮೊನ್ನೆ ಹುಟ್ಟಿದ ಅಣ್ಣ–ತಂಗಿಯರೋ ಎಂದೆ. ಅವರದು ಎಳಮಕ್ಕಳ ಸ್ವಭಾವ–ಅಲ್ಲಲ್ಲ–ಮದುವೆಯಾಗದ ಎಳಮಕ್ಕಳ ಸ್ವಭಾವ, ಹಿಗ್ಗಿದೆ. ನಮ್ಮದನ್ನು ನೆನೆದು ಕುಗ್ಗಿದೆ. ಇಷ್ಟರಲ್ಲಿ ಸಾಯಂಬತಿಗೆ ಏತಕ್ಕೋ ಸಿಡುಕು ಬಂದಿತು. ಸಾಯುಬರ ಮೋರೆ ಒಣಗಿ ಸಂಡಿಗೆಯಾಯಿತು. 'ಡ್ಯಾಮ್' 'ಫೂಲ್' ಏನೇನೋ ಕಿರಚುತ್ತ ಹೋಗಿಬಿಟ್ಟರು.

ಅವರ ಪ್ರೀತಿಯೇನೋ ಮಕ್ಕಳಾಟದಂತೆ (ಹುಡುಗಾಟವೆಂದು ಹೇಳಿದರೆ ಹೆಚ್ಚು ಒಪ್ಪುವದೆಂದು ತೋರುತ್ತದೆ.) ಒಂದು ತಮಾಷೆಯಾಗಿರುವುದೆಂದಂಕೊಂಡೆ, ಮರೆತೆ-ಮಿಂಚಿನ ಮಾಲೆಯಂಥ ಮಾಟದ ಮಾತೆಂದೆ. ನಮ್ಮವರದು ಸರೋವರ ದಲ್ಲೇಳುವ ಸುಳಿದೆರೆಗಳಂಥ ಸೂಕ್ಷ್ಮಪ್ರೇಮ. ಅವರದು ಸಮುದ್ರಲ್ಲಿ ಏರಿಳಿತ ಗಳೊಂದಿಗೆ ಮೂಡಿ ಮರೆಯಾಗುವ ತರಂಗಮಾಲೆಯಂಥ ತುಣುಕು ಮಿಣುಕಿನ ಪ್ರೇಮ.

ಹೀಗೆ ಒಂದು ಕ್ಷಣದಲ್ಲಿ ಒಂದು ತೆರನಾಗಿಯೂ, ಇನ್ನೊಂದು ಕ್ಷಣದಲ್ಲಿ ಇನ್ನೊಂದು ತೆರನಾಗಿಯೂ ಭಾವಿಸುತ್ತ ನಡೆದೆನು. ಇದೀಗ ನನ್ನ ಮನದ ಹೊಯ್ದಾಟವನ್ನು ನೋಡಿ, ತಂತಿಯ ಮೇಲೆ ತೂಗಾಡುತ್ತ ನಡೆದ ಆಟಗನನ್ನು ನೆನಪಿಗೆ ತಂದುಕೊಂಡೆ, ಹೋಲಿಕೆಯು ಸರಿಹೋಯಿತು.

ನಿಂತು ನೋಡುತ್ತೇನೆ ಸ್ಕೂಲು ಹಿಂದೆ ಹೋಗಿದೆ, ಸ್ಕೂಲು ಬಿಟ್ಟು ಮೈಲು ದೂರ ಬಂದಿದ್ದೇನೆ. ವೇಳೆಯೋ ಎಂಟು ಗಂಟೆಯಾಗಿದೆ. ಒಮ್ಮೆಲೆ ಎದೆಗೆ ದಿಗಿಲು ಬಡಿಯಿತು. ಮೇಷ್ಟರು ಇನ್ನೆಷ್ಟು ಹರಿಹಾಯುವರೋ ಎಂದು ಚಿಂತಿಸುತ್ತ ಹಿಂತಿರುಗಿದೆನು.

ಆದುದಾಗಲಿ, ನೆನಪಾದ ಕೈಯಿಂದ ಮೇಷ್ಟರುಗಳ ಸ್ಥಿತಿಯನ್ನಿಷ್ಟು ಹೇಳು ವೆನು. ಬಿಡುವಾಗಿದ್ದರೆ ಕೇಳಿ. ನಮ್ಮ ಮೇಷ್ಟರೋ 'ರುದ್ರಾವತಾರನಿರಿವ ಬೆಡಂಗಂ.' ಮೇಷ್ಟರುಗಳಿಗೆ ಹಣ್ಣಾದ ಮೇಲೆ ಹೆಣ್ಣು ಮಕ್ಕಳ ಸ್ಕೂಲು ತೊಡಕಾಗಿದೆ. ಸಂಬಳವೋ ಹತ್ತು ರೂಪಾಯಿಗೊಂದು ಕಾಸು ಕೂಡ ಹೆಚ್ಚಿಲ್ಲ. ಮನೆಯಲ್ಲಿ ಮಕ್ಕಳೋ ಬೆರಳಲ್ಲಿ ಎಣಿಸಲಿಕ್ಕಾಗದಷ್ಟಿದ್ದಾರೆ. ಮನೆಯ ತೊಂದರೆ ಹೆಚ್ಚಿದಂತೆಲ್ಲ ಮೇಷ್ಟರುಗಳ ಸಿಡುಕತನವೂ ಹೆಚ್ಚಿದೆ. ಹೆಂಡತಿಯ ಮೇಲಿನ ಹಲ್ಲು ಹುಡಿಗಿಯರ ಮೇಲೆ ! ಫೀ ಮೊಬಲಗನ್ನು ಬಳಸಿ 'ಕೈಗೆ ಬರಲಿಲ್ಲ'ವೆಂದು ಹಿಂದೆ ಹಾಕಿದುದೆಷ್ಟು ಸಲವೋ ಎಣಿಕೆಯಿಲ್ಲ. ಎಷ್ಟಾದರೂ ಸಾಲದು. ಹನುಮನ ಹೊಟ್ಟೆಗೆ ಹೊನ್ನಮ್ಮನ ರೊಟ್ಟಿಯೇ ? ನಮ್ಮ ಮುಂದಿ ಮೇಷ್ಟರುಗಳ ತೊಂದರೆ ನೋಡಲಾಸಲ್ಲ !

ತಗ್ಗಿರುವ ಕಡೆಗೆ ನೀರು ಹರಿಯುತ್ತದೆ. ಟ್ರೇಂಡ ಮೇಷ್ಟರುಗಳಿಗೊ ಸಂಬಳವು ಶ್ರೇಣಿಯಂತೆ ಬೆಳೆಯುತ್ತಲೇ ಇದೆ. ಸಾಲದುದಕ್ಕೆ ಮೇಲೆ ಸಿಲೆಕ್ಶನ್ ಗ್ರೇಡಂತೆ. ಆದರೆ ಅನ್‌ಟ್ರೇನ್ಡ ಮೇಷ್ಟರುಗಳ ಗತಿಯೋ ಇದಕ್ಕೆ ವಿಪರೀತ. ಸಂಸ್ಥಾನಗಳಲ್ಲಂತೂ ಹೇಳುವಂತಿಲ್ಲ. ಹಜಾಮರಿಗಿಂತ ಕಡಿಮೆ ತಲಬು ! ಇದಿದ್ದರೂ ಇರಲಿ, ಸಾಲದುದಕ್ಕೆ ನಮ್ಮ ಮೇಷ್ಟರುಗಳಿಗೆ ಮೊನ್ನೆ ಇನ್‌ಸ್ಪೇಕ್ಟರರು ಓಂಬಡತಿ ಮಾಡಿಸಿದರಂತೆ, ಅಯ್ಯೋ, ಇದೆಲ್ಲಿಯ ನ್ಯಾಯ ! ದಂಡ್ಡಿಲ್ಲದಾಗ ದುಂರಗಿಯ ಕಾಟ !

ಇನ್‌ಸ್ಪೇಕ್ಟರು ಸ್ಕೂಲಿನಲ್ಲಿ ಕಾಲಿಟ್ಟಾಗಲೇ "ಇದೇನಯ್ಯಾ, ಎಲ್ಲ ಎಳೆಮಕ್ಕಳೇ ಇದಾರಲ್ಲ!" ಎಂದರು. ಮಿಂಡೆಯರನ್ನೆಲ್ಲಿಂದ ತರಬೇಕು ? ಅವರಿಗೆ ಸೊಗಸಾಗ ಲಿಲ್ಲವಂತೆ, ಹಾಡು ಹೇಳಿದರು. ನಮ್ಮ ಸಾವಿತ್ರಿ ಬಲು ಕಿಡಗೇಡಿ ಹುಡಿಗಿ, ಇನ್‌ಸ್ಪೇಕ್ಟರುಗಳ ಗೊಡಚೆಗಣ್ಣಿನ ಮೇಲೆ ಹಾಡಿಬಿಟ್ಟಳು. ಅವರಿಗೆ ಇನ್ನಷ್ಟು ಕೋಪ. "ಈ ಮೇಷ್ಟರು ಚೆನ್ನಾಗಿ ಕಲಿಸಿಕೊಡಲಾರ. ಅಂತೆಯೆ ಹಿರಿಹುಡಿಗಿಯರು ಸ್ಕೂಲಿಗೆ ಬರುವಂತಿಲ್ಲ" ಎಂದು ನೆವ ತೋರಿಸಿ ನಮ್ಮ ಮೇಷ್ಟರುಗಳ ಸಂಬಳದಲ್ಲಿ ಎರಡು ರೂಪಾಯಿ ಕಡಿಮೆ ಮಾಡಿಸಿ ಪುಣ್ಯಕಟ್ಟಿಕೊಂಡರಂತೆ. ನಮ್ಮ ಮೇಷ್ಟರು ಬೇಡಿಕೊಂಡರೂ ಕೇಳದೆ ನಾಲ್ಕಾರು ದಿನದ ಅಡಿಗೆಯ ವೆಚ್ಚವನ್ನು ಕೂಡ ಕೊಡದೆ ಜುಲುಮೆಯಿಂದ ಸುಳ್ಳು ಪಾವತಿ ಬರಿಸಿಕೊಂಡು ಹೋದರಂತೆ, ಪಾಪ! ಬಡಮೇಷ್ಟರಿಗೀ ಗತಿಯೇ !

ಅಂದಿನಿಂದ ನಮ್ಮ ಮೇಷ್ಟರುಗಳಿಗೆ ಗಾಯದ ಮೇಲೆ ಬರೆಯಿಟ್ಟಂತಾಗಿದೆ. ಹುಡಿಗೆಯರನ್ನು ನೋಡಿದರೆ ಕಿಡಿಕಿಡಿಯಾಗುತ್ತಾರೆ.

ಇಷ್ಟೊತ್ತಿಗೆ ಸ್ಕೂಲು ಬಂದಿತು. ಅತ್ತಿತ್ತ ನೋಡಿದೆ, ಮೇಷ್ಟರು ಬಾಗಿಲಲ್ಲಿ ನಿಂತಿದ್ದರು, ಬೆಚ್ಚಿದೆ. ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಮೆಲ್ಲಮೆಲ್ಲನೆ ಹೊರಟೆ, ಮೇಷ್ಟರು ನನ್ನನ್ನು ನೋಡುತ್ತಲೇ. ಈದ ಹುಲಿಯಂತೆ ಹಲ್ಲು ಕಚ್ಚಿ "ಗೋದೂ ಎಷ್ಟೊತ್ತು !!!" ಎಂದು ಕೂಗಿದರು. ಬೆಚ್ಚಿಬಿದ್ದೆ, ಫಳ್ಳನೆ ಕಣ್ಣು ತೆರೆದವು. ಆ ಕೂಗು ಮೇಷ್ಟರುಗಳದಾಗಿರದೆ ನನ್ನ ಹಾಸಿಗೆ ಬಳಿ ನಿಂತು ಕಿಲಿಕಿಲಿ ನಗುತ್ತಿದ್ದ ಕಿಟ್ಟುವಿನದಾಗಿದ್ದಿತು. ಕನಸಿನಲ್ಲಿ ಕಿಟ್ಟುವನ್ನು ಗಂಡನೆಂದಿದ್ದೆನಲ್ಲ, ಎಂಥ ಆಶ್ಚರ್ಯ! ಮೇಷ್ಟರುಗಳ ಏಟು ತಪ್ಪಿತಲ್ಲ ಎಂದು ಸಂತೋಷ! ಎದೆಯೋ ಇನ್ನೂ ಡವಡವನೆ ಹಾರುತ್ತಿದೆ !

"ಹೂಂ! ಆಯ್ತು ನೋಡ್" ಎಂದವಳೇ ಕೋಣೆಯ ಕಡೆಗೆ ಓಡಿದಳು......!!

ಜ. ಕ. ೨-೧ ಸಪ್ಟೆಂಬರ, ೧೯೨೬

# ಕ್ರೈಸ್ತ ವಾಙ್ಮಯ

---

ಆಧುನಿಕ ಕರ್ನಾಟ ವಾಙ್ಮಯದಲ್ಲಿ ಅರ್ಧಕ್ಕರ್ಧ ಸ್ಥಳವನ್ನು ಒಡಿದುಕೊಂಡಿರುವ ಕ್ರೈಸ್ತ ವಾಙ್ಮಯವನ್ನು ಕುರಿತು ಸಮಾಲೋಚನೆ ಮಾಡಿದಲ್ಲಿ–ಇತ್ತೀಚಿನ ಪಾದ್ರಿಗಳು ಬರೆದ ಪುಸ್ತಕಗಳೆಂದೂ, ಪ್ರಾಚೀನ ಗ್ರಂಥಗಳ ಪರಿವರ್ತನೆಗಳೆಂದೂ ಎರಡು ಗುಂಪುಗಳು ಕಣ್ಣೆದಿರಿಗೆ ಬರುತ್ತವೆ. ಈ ಮೊದಲನೆಯ ಬರಹದಲ್ಲಿ ನಾವು ಮೊದಲನೆಯ ಪ್ರಕಾರದ ಗುಂಪನ್ನು–ಆಧುನಿಕ ಪುಸ್ತಕಗಳನ್ನು–ವಿಮರ್ಶಿಸುವೆವು.

ಈ ತೆರನಾದ ಪುಸ್ತಕಗಳು ಕನ್ನಡದಲ್ಲಿ ಒಂದು ಸಾವಿರದ ಮನೆಯನ್ನು ಮುಟ್ಟಿವೆ. ಇವುಗಳ ಆಕಾರವು ದೊಡ್ಡದಲ್ಲ. ಬೆಲೆಯೂ ಕೂಡ ಬಹಳ ಕಡಿಮೆ. ಧರ್ಮಪ್ರಸಾರವೇ ಇವುಗಳ ಮುಖ್ಯೋದ್ದೇಶವು. ತಮ್ಮ ಧರ್ಮದ ಶ್ರೇಷ್ಠತೆಯನ್ನು ತೋರಿಸಿಕೊಡುವ ಉದ್ದೇಶದಿಂದ ಇವರು ಎಂತಹ ಮಾರ್ಗವನ್ನಾದರೂ ಅನುಸರಿಸಲಿಕ್ಕೆ ಹೇಸುವವರಲ್ಲ.

ಇಂತಹ ಪುಸ್ತಕಗಳ ಗುಂಪಿನಲ್ಲಿ ಭಾರತೀಯರ ಪ್ರಾಚೀನ ಗ್ರಂಥಗಳೂ ಕೆಲವು ಸೇರಿಕೊಂಡಿವೆ. ಆವುದಾದರೊಂದು ಧರ್ಮದ ಖಂಡನೆಯಿದ್ದರೆ ತೀರಿತು. ಅದನ್ನು ಯಾರೇ ಬರೆಯಲೊಲ್ಲರೇಕೆ; ಈ ಪಾದ್ರಿಗಳು ಅವುಗಳನ್ನು ಮುದ್ರಿಸುವರು. ಆ ಗ್ರಂಥದ ಕೊನೆಗೊಂದು ತಮ್ಮ ಉಪಸಂಹಾರವನ್ನು ಮೊಂಡು ಮಸೆದು ಬಿಟ್ಟರೆಂದರೆ ತೀರಿತು, ಅದು ಕ್ರೈಸ್ತ ದೀಕ್ಷೆಯನ್ನು ಹೊಂದಿ ಕ್ರೈಸ್ತ ವಾಙ್ಮಯದಲ್ಲಿ ಸೇರಿಕೊಳ್ಳುವದು. ನೇಪಾಳ ದೇಶದ ಅಶ್ವಘೋಷನೆಂಬ ಬೌದ್ಧ ವಿದ್ವಾಂಸನು ಸಂಸ್ಕೃತದಲ್ಲಿ ರಚಿಸಿದ "ವಜ್ರಸೂಚಿ" ಎಂಬುದೇ ಇಂತಹವುಗಳಲ್ಲಿ ಮುಖ್ಯವಾದುದು.

### ಅಸಹಿಷ್ಣುತೆಯು

ಪಾದ್ರಿಗಳಿಗೆ ತಮ್ಮದೊಂದು ಧರ್ಮವನ್ನು ಬಿಟ್ಟರೆ ಜನತ್ತಿನೊಳಗಿನ ಆವ ಧರ್ಮವೂ ವಿಶುದ್ಧವಾಗಿ ತೋರುವದಿಲ್ಲ. ಇವರ ಈ ಗುಣವನ್ನು ನಾವು 'ಸ್ವಧರ್ಮನಿಷ್ಠತೆ'ಯೆಂದು ಕರೆಯಬಹುದು. ಹತ್ತೆಂಟು ಹುಡುಗರು ಆಟವಾಡುತ್ತಿರುವಲ್ಲಿ ಎಲ್ಲ ಹುಡುಗರಿಗಿಂತ ತನ್ನ ಮಗನೇ ತನಗೆ ಹೆಚ್ಚು ಚೆಲುವನೆಂದು

ತೋರುವದು ಸ್ವಾಭಾವಿಕ. ಆದರೆ ಆ ಬೇರೆ ಹುಡುಗರ ಮನೆಯವರನ್ನೆಲ್ಲ ಒಂದು ಕಡೆಗೆ ಕೂಡ್ರಿಸಿ "ಅಯ್ಯಾ, ನಿಮ್ಮ ಮಕ್ಕಳೆಲ್ಲ ಹೊಲಸಾಗಿವೆ, ಅಷ್ಟಾವಕ್ರನೂ ಕೂಡ ಇವರಷ್ಟು ಕುರೂಪಿಯಾಗಿರಲಿಕ್ಕಿಲ್ಲ. ಅದೇ ನನ್ನ ಮಗುವನ್ನು ನೋಡಿರಿ! ನೋಡಿದೊಡನೆ ಮುದ್ದಿಡುವ ಹಾಗೆ ಅಕ್ಕರತೆಯು ಉಕ್ಕಿಬರುತ್ತದೆ. ಆದುದರಿಂದ ನೀವೆಲ್ಲರೂ ನಿಮ್ಮ ಮಕ್ಕಳನ್ನು ಹೊರದೂಡಿ ನನ್ನ ಮಗುವನ್ನು ಮುದ್ದಿಡಿರಿ" ಎಂದು ಹೇಳುವದು ಎಂತಹ ಹುಚ್ಚುತನವೋ ನಮಗೆ ತಿಳಿಯದು.

ಈ ಕೆಳಗಿನ ಅವತರಣಗಳಿಂದ ಇವರ ಈ ಗುಣವು ಸ್ಪಷ್ಟವಾಗಿ ಕಾಣಿಸುವದು:—

೧) "ಮನುಧರ್ಮಶಾಸ್ತ್ರದ ೧೨ ನೆಯ ಅಧ್ಯಾಯದ ೯ ನೆಯ ಶ್ಲೋಕದಲ್ಲಿ ಹೇಳಿರುವದೇನಂದರೆ :— ಕೈಕಾಲು ಮೊದಲಾದ ಅವಯವಗಳಿಂದ ದುಷ್ಕರ್ಮ ಮಾಡುವವರು ಗಿಡಮರಗಳಾಗಿ ಹುಟ್ಟಬೇಕು. ಮಾತಿನಿಂದ ಪಾಪಮಾಡುವವರು ಮೃಗ ಪಕ್ಷಿಗಳಾಗಿ ಹುಟ್ಟಬೇಕು. ಮನಸ್ಸಿನಿಂದ ಪಾಪಮಾಡುವವರು ಚಂಡಾಲ ರಾಗಿ ಹುಟ್ಟಬೇಕು. ನಿಮ್ಮ ಶಾಸ್ತ್ರವು ಹೇಳುವ ಈ ಮೂರು ಕ್ರಮಗಳನ್ನು ಸ್ವಲ್ಪ ನೋಡೋಣ. ಕೈಕಾಲು ಮೊದಲಾದ ಅವಯವಗಳಿಂದ ಪಾಪಮಾಡುವವರು ಗಿಡಮರಗಳಾಗಿ ಹುಟ್ಟಬೇಕೆಂದು ಹೇಳಿಯದೆ. ಅಂದರೆ ಘಟಿಂಗತನ, ಕಳವು, ಮೋಸಮಾಡುವವರೆಲ್ಲರೂ ಮತ್ತೊಬ್ಬರನ್ನು ಹೊಡೆಯುವವರೆಲ್ಲರೂ ಗಿಡಮರ ಗಳಾಗಿ ಹುಟ್ಟಬೇಕೆಂದ ಹಾಗಾಯಿತು. ಈ ಮಾತು ನಿಜವಾದಂದೇ ಆದರೆ, ನೂರು ವರುಷಗಳೊಳಗೆ ಹಿಂದೂ ಜನರೆಲ್ಲರೂ ಕಾಣದೆ ಹೋಗುವರು. ಮೇಲೆ ಹೇಳಿದ ಪಾಪ ಮಾಡಿದವರೆಲ್ಲರೂ ಗಿಡಮರಗಳಾಗಿ ಹುಟ್ಟಬೇಕು; ಅಂದ ಮೇಲೆ ಹಿಂದೂ ಜನರೆಲ್ಲರೂ ಗಿಡಮರಗಳಾಗಿ ಹುಟ್ಟಬೇಕಲ್ಲ. ಬಾಯಿಂದ ಪಾಪಮಾಡುವವರೆಲ್ಲರೂ ಮೃಗಪಕ್ಷಿಗಳಾಗಿ ಹುಟ್ಟಬೇಕಂತೆ, ಅಂದರೆ ಸುಳ್ಳು ಹೇಳುವವರೆಲ್ಲರೂ, ಮತ್ತೊಬ್ಬ ರನ್ನು ಬಯ್ಯುವಂಥವರೆಲ್ಲರೂ, ಚಾಡಿ ಹೇಳುವವರೆಲ್ಲರೂ ಮೃಗ ಪಕ್ಷಿಗಳಾಗಿ ಹುಟ್ಟ ಬೇಕು. ಈ ಮಾತು ನಿಜವಾದರೆ ಹಿಂದೂ ಜನರೊಳಗೆ ಮುಂದಿನ ಜನ್ಮದಲ್ಲಿ ಯಾರೂ ಮನುಷ್ಯರಾಗಿ ಹುಟ್ಟುವ ಹಾಗಿಲ್ಲ. ಮನಸ್ಸಿನಿಂದ ಪಾಪ ಮಾಡುವವ ರೆಲ್ಲರೂ ಚಾಂಡಾಲರಾಗಿ ಹುಟ್ಟಬೇಕಂತೆ; ಅಂದರೆ ಮತ್ತೊಬ್ಬರ ಹೆಂಡಿರನ್ನು ಮೋಹಿಸುವವರೆಲ್ಲರೂ, ಮತ್ತೊಬ್ಬರ ಮೇಲೆ ಹೊಟ್ಟೆಕಿಚ್ಚು ಮಾಡುವವರೆಲ್ಲರೂ, ಮತ್ತೊಬ್ಬರ ಆಸ್ತಿಯನ್ನು ಆಶಿಸುವಂಥವರೂ ಚಾಂಡಾಲರಾಗಿ ಹುಟ್ಟಬೇಕು ಎಂದು ಹೇಳಿದ ಹಾಗಾಯಿತಲ್ಲವೇ ? ಆ ಮಾತು ಖರೆಯಾದ ಪಕ್ಷದಲ್ಲಿ ನಿಮ್ಮ ದೇಶವೆಲ್ಲಾ ಒಂದೇ ಹೊಲಗೇರಿ ಆಗುವದು ನಿಶ್ಚಯ."

—ಜನ್ಮಾಂತರ ಪರೀಕ್ಷೆ, ಪೃಷ್ಠ ೯–೧೦

ಇಲ್ಲಿ ಮಾತ್ರ ಪಾದ್ರಿಗಳ ಪರಧರ್ಮ ಸಹಿಷ್ಣುತೆಯು ಚೆನ್ನಾಗಿ ಒಡಮೂಡಿದೆ. ಹಿಂದೂಗಳ ವಿಷಯಕ್ಕೆ ಇವರ ಅಭಿಪ್ರಾಯವೆಂತಹ ಉದಾರವಿದೆ, ನೋಡಿ!

(ಮೇಲಿನ ಅವತರಣದಲ್ಲಿ) ಮನುಧರ್ಮಸೂತ್ರವನ್ನು ಖಂಡಿಸುವದಿಷ್ಟೇ ಈ ಪಾದ್ರಿಗಳ ಉದ್ದೇಶವಾಗಿದ್ದರೆ ಇಡಿ ಜಗತ್ತನ್ನೇ ಆದರ್ಶವಾಗಿಟ್ಟುಕೊಳ್ಳದೆ, ಹಿಂದೂಗಳನ್ನೇ ಎತ್ತಿ ಹಿಡಿದಿರುವದನ್ನು ನೋಡಿದರೆ ಅವರು ತಮ್ಮ ಕ್ರೈಸ್ತರನ್ನು ವಿಶುದ್ಧರೆಂದು ಭಾವಿಸಿರುವರೆಂದು ತೋರುತ್ತದೆ. ಮುಹಮ್ಮದ ಶುಕ್ರಿಯು ತಾನೇ ಬರೆದ ತನ್ನ ಚರಿತ್ರೆಯಲ್ಲಿ ಕ್ರೈಸ್ತರಿಂದ ತನಗಾದ ಕಾಟವನ್ನು ಹೃದಯವಿದಾರಣೆಯಾಗುವಂತೆ ಹೇಳಿ– "ಆ ಕಾಲದಲ್ಲಿ ನನಗಿದ್ದ ಕಷ್ಟವನ್ನು ವರ್ಣಿಸಿ ತೀರೀತೇ ! ಒಂದು ಕಡೆ ಬಡತನ; ಅತ್ತಕಡೆ ಕ್ರೈಸ್ತರ ಕ್ರೂರತನ !!" ಎಂದು ಗೋಳಿಟ್ಟಿದ್ದಾನೆ. (ಮುಹಮ್ಮದ ಶುಕ್ರಿಯ ಚರಿತ್ರೆ ಪೃಷ್ಠ–೭೮) ಮನುಧರ್ಮ ಸೂತ್ರದಂತೆ ಇವರು ಯಾವ ವರ್ಗದಲ್ಲಿಯೂ ಬರುವದಿಲ್ಲವೋ ? 'ತಾನಿರುವಂತೆಯೇ ತನಗೆ ಪರರು ಕಾಣುತ್ತಾರೆ' ಎಂಬುದು ಸ್ವಾಭಾವಿಕವಲ್ಲವೇ.

೨) ದೊಡ್ಡದೊಂದು ನಿಘಂಟು, ನಾಗವರ್ಮನ ಛಂದೊಂಬುಧಿ, ಶಬ್ದಮಣಿದರ್ಪಣ, ಇಂಗ್ಲೀಷಿನಲ್ಲಿ ಕನ್ನಡ ವ್ಯಾಕರಣ ಮುಂತಾದವುಗಳನ್ನು ಬರೆದು ಕನ್ನಡಿಗರಿಗೆ ಉಪಕಾರ ಮಾಡಿದ ಮೆ॥ ಕಿಟೆಲ್ ಸಾಹೇಬರ ಉದಾರಬುದ್ಧಿಯನ್ನೇನೆಂದು ಕೊಂಡಾಡಲಿ !

ಛಂದೋಂಬುಧಿಯ ಆದಿಗಿರುವ ದೇವತಾಸ್ತೋತ್ರಗಳನ್ನು ಪರಧರ್ಮಸಹಿಷ್ಣುತೆಯಿಂದ ಮುದ್ರಿಸದೆ ಬಿಟ್ಟರು ! ಇವರು ಬರೆದ "ಪರಮಾತ್ಮ ಜ್ಞಾನ"ವೆಂಬ ಪಾದ್ರೀ ಪುಸ್ತಕದಲ್ಲಿ ಹಿಂದೂ ದೇವತೆಗಳೆಲ್ಲ ಉದ್ಧಾರವಾದುದು ಇವರ ಅಸಹಿಷ್ಣುತೆಯ ಪ್ರಭಾವದಿಂದಲೇ ಅಲ್ಲವೇ ?

'ಪರಮಾತ್ಮಜ್ಞಾನ'ವೆಂಬ ಪುಸ್ತಕದಲ್ಲಿ ಇವರು ಎಲ್ಲೆಲ್ಲಿಯೂ ಶ್ರೀ ಶಂಕರಾಚಾರ್ಯರ ಹೆಸರಿಗೆ ಏಕವಚನವನ್ನು ಜೋಡಿಸಿರುವರು. ವಾಹವಾ ! ಇಂತಹ ದೊಡ್ಡ ಸಾಹೇಬರದೀ ಗತಿ !! ಇಂತಹ ಸಾಹೇಬರ ಹೆಸರನ್ನು ಬರೆಯುವಾಗ ನಾವು ಹಿಂದೆ "ಮೆಹರ್ಬಾನ್" "ಮಿಸ್ಟರ್" ಮುಂತಾದ ಬಿರುದುಗಳನ್ನಿಡದಿದ್ದರೆ ಇವರಿಗೆ ಅವಮಾನ ಮಾಡಿದಂತಾಗುವದಂತೆ. ನಮ್ಮ ಶಂಕರಾಚಾರ್ಯರನ್ನು ಇವರು ಏಕವಚನದಲ್ಲಿ ಕರೆದರೆ ಆವ ಅಪಮಾನವೂ ಆಗುವದಿಲ್ಲ !(?) ಇದೆಲ್ಲಿಯ ನ್ಯಾಯವೋ ನಾವರಿಯೆವು.

೩) ಮೆ॥ ವರ್ಥ ಸಾಹೇಬರು "ಪ್ರಾಕ್ಕಾವ್ಯಮಾಲಿಕೆ" ಯೆಂಬುದೊಂದು ಪ್ರಾಚೀನ ಕರ್ನಾಟ ಕಾವ್ಯಾಂಶಾವಲಿಯನ್ನು ಟಿಪ್ಪಣೆಗಳೊಂದಿಗೆ ಪ್ರಕಟಿಸಿದ್ದಾರೆ ಇದರಲ್ಲಿ :—

ಜೈನ ಕಾವ್ಯಗಳ ಮಾದರಿಯನ್ನು ತೋರಿಸಲಿಕ್ಕೆ ಇವರಿಗೆ ಹೇರಳವಾಗಿರುವ ಬೇರೆ ಜೈನ ಗ್ರಂಥಗಳೇ ಸಿಕ್ಕಲಿಲ್ಲವೆಂದು ತೋರುತ್ತದೆ. ಬ್ರಾಹ್ಮಣ ಧರ್ಮವನ್ನು

ನಿಂದಿಸುವ 'ಶಾಸ್ತ್ರಸಾರ' 'ಧರ್ಮಪರೀಕ್ಷೆ' ಎಂಬೆರಡೇ ಗ್ರಂಥಗಳು ಇವರಿಗೆ ಸಿಕ್ಕಿರ ಬಹುದಲ್ಲವೇ ? ಮರಾಠಿಯವರಾಡುವ 'ಕೃಷ್ಣ ಕಾರಸ್ಥಾನ'ವೆಂಬ ಮಾತೂ ಕನ್ನಡಿ ಗರು ಹೇಳುವ 'ಹೊಯ್ಸಳೆತನ'ವೆಂಬ ಮಾತೂ ನಮಗೆ ತಟ್ಟನೆ ನೆನಪಿಗೆ ಬರುವವು ? ವರ್ಥ ಸಾಹೇಬರ ಈ ಪರಧರ್ಮ ದ್ವೇಷವು ಎಂತಹ ಸುಂದರವಾದುದೆಂಬುದನ್ನು ವರ್ಣಿಸಲಿಕ್ಕೆ ನಮ್ಮ ಲೆಕ್ಕಣಿಯು ಒಪ್ಪುವದಿಲ್ಲ.

ವರ್ಥ ಸಾಹೇಬರು ಪ್ರತಿಯೊಂದು ಕಾವ್ಯಾಂಶವು ಪ್ರಾರಂಭವಾಗುವಲ್ಲಿ ಒಂದೊಂದು ಉಪೋದ್ಘಾತವನ್ನು ಬರೆದಿದ್ದಾರೆ. "ವರ್ಥ ಪ್ರಾಯಿರಝ್ ಪರೀಕ್ಷೆ"ಯ ಪಠ್ಯಪುಸ್ತಕದ ಈ ಉಪೋದ್ಘಾತಗಳನ್ನು ಎಷ್ಟು ಹೊಗಳಿದರೂ ಸ್ವಲ್ಪವೇ ಸರಿ.

ಒಂದು ಹಣ್ಣನ್ನು ತಿನ್ನಲಿಕ್ಕೆ ಕೊಡುವ ಮೊದಲು "ಈ ಹಣ್ಣು ಬಲು ಹುಳಿ, ಒಳಗೆ ಹುಳಗಳೂ ಬಹಳವಾಗಿವೆ" ಎಂದು ಹೇಳಿದರೆ ಆ ಹಣ್ಣಿನ ವಿಷಯವಾಗಿ ಇದಿರಿಗಿರುವವನಲ್ಲಿ ಆದರವುಳಿಯುವುದೆಂತು ? ಹೀಗೆಯೇ ಇವರ ಉಪೋದ್ಘಾತವು. ರಂಗನಾಥನ ಅನುಭವಾಮೃತಕ್ಕೆ ಉಪೋದ್ಘಾತವನ್ನು ಬರೆಯುವಾಗ ವೇದಗಳಲ್ಲಿ ರುವ ವಿಷಯಗಳನ್ನು ಮುಖ್ಯವಾಗಿರುವ ಸಾಂಖ್ಯ, ನ್ಯಾಯ, ವೇದಾಂತಗಳಲ್ಲಡಗಿ ರುವ ವಿಷಯಗಳನ್ನು ಚೆನ್ನಾಗಿ ವಿವೇಚಿಸಿರುವುದೇನೋ ವಿಹಿತ. ಆದರೆ :—

"......ಆಕಾಶ, ನೀರು, ಗಾಳಿ, ಬೆಂಕಿ ಇವರು ವೇದಗಳಲ್ಲಿ ಮುಖ್ಯದೇವತೆ ಗಳೆಂದು ಹೇಳುತ್ತಾರೆ. ಇವರೇ ಕಾಲಾಂತರದಿಂದ ಬ್ರಹ್ಮ, ವಿಷ್ಣು, ಶಿವಗಳಾದರು. ಹೀಗಿರಲಾಗಿ ಈ ದೇಶದವರು ನಿರ್ಮಾಣಕನಾದ ದೇವರಿಗಲ್ಲ, ನಿರ್ಮಿತವಾದ ಪಂಚಭೂತಗಳಿಗೆ ನಡಕೊಳ್ಳುವವರಾಗಿರುತ್ತಾರೆ." (ಪು-೧೮೮)

"ಈ (ಷಟ್) ದರ್ಶನಗಳನ್ನು ಮಾಡಿದವರು ಒಂದು ತರದ ರೋಗದಲ್ಲಿ ಬಿದ್ದಿದ್ದರೆಂದು ತೋರುತ್ತದೆ. ಇಂಥವರು ಹೇಳಿದ ಮಾತಿನ ಮೇಲೆ ಭರವಸೆ ಇಡಲಾಗದು. ಚಂದಾಗಿ ಶೋಧಿಸಿ ನೋಡತಕ್ಕದ್ದು. ಬಹಳವಾಗಿ ಅವರ ಮಾತು ವಿದ್ಯೆಕ್ಕೂ, ಸರ್ವಾನುಭವಕ್ಕೂ ವಿರೋಧವಾಗುವದು." (ಪು-೨೩೪)

ಎಂದು ಹೇಳಿದ ಮೇಲೆ ಸಾಮಾನ್ಯ ವಾಚಕರು ಅನಾದರವನ್ನು ಪ್ರದರ್ಶಿಸ ಲಿಕ್ಕಿಲ್ಲವೇ ? ಹೀಗೆಯೇ ಬಸವಪುರಾಣದ ಅಂಶಗಳನ್ನಾಯುವಾಗ:—

"ಬಸವನು ವೀರಶೈವ ಮತವನ್ನು ಸ್ಥಾಪನೆ ಮಾಡಲಿಕ್ಕೆ ತನ್ನ ಅಧಿಕಾರ ಪ್ರಯೋಗಿಸಿ, ಹೆಣ್ಣು, ಹೊನ್ನು, ಮಣ್ಣು ಕೊಟ್ಟು ಅವರ ಚಿತ್ತ ಸಂಪಾದಿಸಿ ತನ್ನ ಮತಕ್ಕೆ ಬರುವ ಹಾಗೆ ಭ್ರಮೆಗೊಳಿಸಿ ಅನೇಕರನ್ನು ತನ್ನ ಮತಕ್ಕೆ ಕೂಡಿಸಿಕೊಂಡನು... ಕಡೆಗೆ... ಸಂಗಮೇಶ್ವರನ ಕಲ್ಲಿನ ವಿಗ್ರಹದಲ್ಲಿ ಐಕ್ಯವಾದನಂತೆ." (ಪು-೨೫೧)

ಎಂದು ಹೇಳಿ ಅನಾದರವನ್ನು ಹುಟ್ಟಿಸಿದ್ದಾರೆ. ಹೀಗೆಯೇ ಚೆನ್ನಬಸವನ ವಿಷಯಕ್ಕೆ ಕೆಲವು ಕೀಳ್ಮಾತುಗಳನ್ನು ಹೇಳಿ, ಅವುಗಳನ್ನೆಲ್ಲ ತಮಗೆ ಜೈನರು ಹೇಳಿದ

ರೆಂದು ಉಲ್ಲೇಖಿಸಿದ್ದಾರೆ. ಪ್ರತ್ಯಕ್ಷ ಗ್ರಂಥಗಳನ್ನು ಅಪ್ರಮಾಣವೆಂದು ಭಾವಿಸುವ ಇವರು ಪರಧರ್ಮವನ್ನು ನಿಂದಿಸುವ ವೇಳೆಗೆ ಬಾಯ್ಮಾತನ್ನು ಪ್ರಮಾಣವೆಂದು ಗ್ರಹಿಸುವದು ಆಶ್ಚರ್ಯವಲ್ಲವೇ !

ಪರಧರ್ಮಗಳ ವಿಷಯಕ್ಕೆ ಪಾದ್ರಿಗಳಲ್ಲಿ ಅಸಹಿಷ್ಣುತೆಯು ಮನೆಮಾಡಿಕೊಂಡು ಕುಳಿತಿರುತ್ತದೆ. ಆದುದರಿಂದ ಇವರಿಗೆ ಆವ ಧರ್ಮವೂ ವಿಶುದ್ಧವಾಗಿ ತೋರುವ ದಿಲ್ಲ. ಆದುದರಿಂದಲೇ ಇವರ ಪುಸ್ತಕಗಳಲ್ಲಿ ಇಂಥ ದೋಷಗಳು ಹೇರಳವಾಗಿ ಸೇರಿಕೊಳ್ಳುತ್ತವೆ.

## ಅಕ್ಷಮ್ಯ ದೋಷಗಳು

೧) ಅನ್ಯಗ್ರಂಥಗಳ ಅವತರಣಗಳನ್ನು ತೆಗೆದುಕೊಂಡು ಅಸಂಬದ್ಧವಾದ ಅರ್ಥವನ್ನು ಇದಿರಿಗಿಟ್ಟು ಸಾಮಾನ್ಯ ವಾಚಕರನ್ನು ಗೊಂದಲದಲ್ಲಿ ಹಾಕುವುದು.

'ಮಾರುವ ಕಟ್ಟೆಯ ಮೇಲೆ ಮಾವಿನ ಹಣ್ಣುಗಳು ಬಂದಿವೆ' ಎಂದು ಹೇಳಿ ದೊಡನೆ 'ನಿಮ್ಮ ಕಡೆಗೆ ಮಾವಿನ ಹಣ್ಣುಗಳಿಗೆ ಕಾಲುಗಳಿರುವವೋ ?' ಎಂದು ಕೇಳುವ ಮೂರ್ಖರಿಗೇನೆನ್ನಬೇಕು ? 'ಹಾದೀ ಬಿಟ್ಟು ನಡೆಯಬಾರದು' ಎಂದು ಬೋಧಿಸುವ ಹಿರಿಯರಿಗೆ 'ನಮ್ಮ ಆಕಳು ಅಡವೀ ಬಿದ್ದು ಓಡಹತ್ತಿದರೆ ಅದನ್ನು ಹಿಡಿಯಲಿಕ್ಕೆ ಹಾದೀ ಬಿಟ್ಟು ಹೋಗಬಾರದೇ ?' ಎಂದು ಕೇಳುವವರನ್ನು ಏನೆಂದು ಕರೆಯಬೇಕೋ ನಾವರಿಯೆವು. ಹೀಗೆಯೇ ಈ ಪಾದ್ರಿಗಳ ಗತಿಯು.

"ಮನುಸ್ಮೃತಿಯನ್ನು ಅಧ್ಯಯನ ಮಾಡುವವರಿಗೆ ಮುಕ್ತಿಯಾಗುತ್ತದೆ ಎಂದು ಅದರ (ಮನುಸ್ಮೃತಿಯ) ಮೊದಲನೆಯ ಅಧ್ಯಾಯದ ೧೦೬ ನೆಯ ಶ್ಲೋಕದಲ್ಲಿ ಹೇಳಿಯದೆ... ಹಾಗಾದರೆ ನೀವು ಸಾಯುವವರೆಗೆ ಬೇಕಾದ ಹಾಗೆ ಪಾಪ ಮಾಡಿ ದರೂ (ಕಡೆಗೊಂದು ಸಲ ಮನುಸ್ಮೃತಿಯನ್ನು ಪಠಿಸಿದರೆ) ನೀವು ಕರ್ಮಫಲಕ್ಕೂ ಜನ್ಮಾಂತರಕ್ಕೂ ತಪ್ಪಿಸಿಕೊಳ್ಳುವಿರಿ."

—ಜನ್ಮಾಂತರ ಪರೀಕ್ಷೆ ಪೃ-೨೨

ವಾಹವಾ ! ಈ ಪಾದ್ರೀ ಸಾಹೇಬರು 'ಶತಶ್ಲೋಕೇನ ಪಂಡಿತಃ' ಎಂಬ ಶ್ಲೋಕಾಂಶವನ್ನೋದಿ ಇದ್ದುಬಿದ್ದ ೧೦೦ ಶ್ಲೋಕಗಳನ್ನು ಒಂದು ಸಲ ಘೋಕ ಹೊಡೆದು ತಮ್ಮ ಹೆಸರಿನ ಹಿಂದೆ "ಪಂಡಿತ" ಎಂಬ ಬಿರುದನ್ನು ಸೇರಿಸಿಕೊಳ್ಳಲಿಕ್ಕೆ ಹಿಂದು ಮುಂದು ನೋಡವವರಲ್ಲವೆಂದು ತೋರುತ್ತದೆ !

೨) ಇವರು ತಮಗೆ ಅನುಕೂಲವಾಗುವಂತೆ ವಿಧಾನಗಳನ್ನು ಹೇಳುವರು. ಮೊದಲಿನ ಮಾತಿಗೂ ತದನಂತರದ ಮಾತಿಗೂ ಹೊಂದಿಕೆಯಿರದಿದ್ದರೂ ಚಿಂತೆಯಿಲ್ಲ.

"ನರಸಿಂಹ ಹಿರಣ್ಯಕಶ್ಯಪ ಎಂಬ ದೈತ್ಯನ ಸಂಹಾರ ಮಾಡಲಿಕ್ಕೆ ಬಂದ ಅವತಾರ. ಅದು ವಾಕ್ಚಾತುರ್ಯದ ಕತೆ ಎಂತ ಹೇಳತಕ್ಕದ್ದಷ್ಟೆ !"

(ಸುಭಾಷಿತ ಪ್ರ. ಶ. ಪೃ-೯೫)

ಇಲ್ಲಿ ಹೇಳಿದ ಮಾತಿಗೂ ಇನ್ನು ಮುಂದೆ ಹೇಳುವ ಮಾತಿಗೂ ಎಷ್ಟು ಹೋಲಿಕೆ !

'ಇನ್ನೊಂದು ಮಾತೆಂದರೆ – ನಮ್ಮ ತಂದೆ ಆರಾಧಿಸಿದ ದೇವರನ್ನು ನಾವು ಆರಾಧಿಸಬೇಡವೋ ? ತಂದೆಯ ಆಜ್ಞೆಯನ್ನು ಮೀರಬಹುದೇ ? ದೋಷವಲ್ಲವೋ ? (ಎಂದು ಕೇಳುವರು). ಅದಕ್ಕೆ ಉತ್ತರ ಹಿರಣ್ಯಕಶ್ಯಪನ ಮಗ ಪ್ರಹ್ಲಾದ ಏನು ಮಾಡಿದ ? ತಂದೆಯ ದೇವರಿಗೆ ಯಾಕೆ ನಂಬಲಿಲ್ಲ ? ಎಂಬ ಸಂಗತಿ ನೀವೇ ವಿಚಾರಿಸಿರಿ" (ಅದೇ ಪ್ರಸ್ತಕ ಪ್ರ. – ೧೧೨) ಹೀಗೆಂದವರೇನು ? ಮೊದಲು ಕಟ್ಟುಕಥೆಯೆಂದು ಹೇಳಿದುದನ್ನೇ ಹಿಂದಿನಿಂದ ಪ್ರಮಾಣ ತೋರಿಸಿದರೆ ಆರು ನಂಬಬೇಕು ? ಘನವಿದ್ವಾಂಸರೆಂದು ಮೆರೆದು ಹೋದ ಕಿಟ್ಟೆಲ್ ಸಾಹೇಬರೂ ಕೂಡ ಇಂತಹ ದೋಷಗಳ ಮೊಟ್ಟೆಯನ್ನು ಹೊತ್ತಿದ್ದಾರೆ.

"ವೇದ ಶಾಸ್ತ್ರಗಳು... ಸುಳ್ಳಾಗಿವೆ. ಮತ್ತು ಅದನ್ನು ರಚಿಸಿದವರು... ಜ್ಞಾನಹೀನತ್ವದಿಂದ ಸುಳ್ಳಾಡಿದರು."

(ಪರಮಾತ್ಮ ಜ್ಞಾನ, ಪೃ. ೩೯)

ಪ್ರಾಚೀನ ಋಷಿಗಳು ಸುಳ್ಳಾಡಿದರು ! ಈ ಸಾಹೇಬರು ಮಾತ್ರ ಸಂಪೂರ್ಣವಾಗಿ ಸತ್ಯವನ್ನಾಡಿದರು !!

"ಕೃಷ್ಣ ಮತ್ತು ರಾಮದೇವರೆಂಬವರನ್ನು ಕುರಿತು ಒಂದೇ ಮಾತಾದರೂ ಮೂಲ ವೇದಗಳಲ್ಲಿ ಇಲ್ಲ" (ಪರಮಾತ್ಮ ಜ್ಞಾನ, ಪೃ. ೯೧) ವೇದಗಳಲ್ಲಿ ಇವುಗಳ ಹೆಸರು ಹೇಳಲ್ಪಟ್ಟಿದ್ದರೆ ದೇವರೆಂದು ನಂಬಬೇಕೋ ? ಮೊದಲು ವೇದಗಳನ್ನು ತಿರಸ್ಕರಿಸಿ ಹಿಂದಿನಿಂದ ಪುರಸ್ಕರಿಸುವದೆಂದರೇನು ?

೩) ವಿಷಯಾಂತರವಾಗುವದನ್ನು ಲಕ್ಷಿಸದೆ ಪರಧರ್ಮವನ್ನು ನಿಂದಿಸುವುದು.

ದೇವರ ದಶೋಪದೇಶಗಳನ್ನು ವಿಸ್ತರಿಸಿ ಹೇಳುವಾಗ 'ದಾಂಪತ್ಯ ಭಂಗ ಮಾಡಬಾರದು' ಎಂಬ ಸೂತ್ರಕ್ಕೆ ವ್ಯಾಖ್ಯಾನವನ್ನು ಒರೆಯುವಾಗ ಸುಮ್ಮಸುಮ್ಮನೆ ಎಂತಹ ದೇವರನ್ನು ನಂಬಬೇಕೆಂಬ ವಿಷಯವನ್ನು ಹೂಡಿ ಕೃಷ್ಣನ ಟೀಕೆಯನ್ನು ಮಾಡಿದರೆ ಫಲವೇನು ? (ನೀತಿಸಾರದ ೩೩ ನೆಯ ಪುಟ ನೋಡಿರಿ)

ಈ ಪಾದ್ರಿಗಳು ಸ್ವಧರ್ಮ ಶ್ರೇಷ್ಠತೆಯನ್ನು ಸ್ಥಾಪಿಸುವಾಗ ಆವ ಅರಿವನ್ನೂ ಹಿಡಿಯುವದಿಲ್ಲ.

## ಸಮಾಲೋಚನೆ

ಈ ವರೆಗೆ ಪ್ರಾಸ್ತಾಪಿಸಿರುವದನ್ನು ನೋಡಿದರೆ ಕ್ರೈಸ್ತ ವಾಙ್ಮಯವೆಲ್ಲ ಅಬದ್ಧವಾದುದೆಂದು ಭಾವಿಸಬಹುದು. ಆದರೆ ಎಷ್ಟೋ ಗುಣಗಳಿರುವವೆಂಬುದನ್ನು ಮರೆಯಕೂಡದು. ಅಲ್ಲಲ್ಲಿ ಸಿಕ್ಕುವ ಬೇರೆ ಬೇರೆ ಪುರಾಣ ಕಥನಗಳು, ವೇದ ಶಾಸ್ತ್ರಾದಿಗಳ ಸಾರಾಂಶಗಳು, ಬೇರೆ ಬೇರೆ ಧರ್ಮದ ತತ್ತ್ವಗಳು, ಸೃಷ್ಟಿಶಾಸ್ತ್ರ... ಜ್ಯೋತಿಃಶಾಸ್ತ್ರ... ಶರೀರ ಶಾಸ್ತ್ರಾದಿಗಳ ಸಚಿತ್ರ ವರ್ಣನೆಗಳು ಇವೇ ಮೊದಲಾದ ಅಮೌಲ್ಯ ವಿಷಯಂಗಳು ಅಲ್ಲಲ್ಲಿ ಅಡಕವಾಗಿರುವವು. ಆದರೆ ಅವುಗಳ ಸುತ್ತು ಮುತ್ತು ವಿಷವನ್ನು ಕಾರುವ ಹಾವುಗಳು ಹರಿದಾಡುತ್ತಿರುವದೇನೊ ನಿಜ. ಅವುಗಳಿಂದ ಕಚ್ಚಿಸಿಕೊಂಡರೆ ಉಳಿದ ಅಮೌಲ್ಯ ರತ್ನಗಳೆಲ್ಲ ಹಚ್ಚಗಾಗಿ–ವಿಕಾರವಾಗಿ–ಕಾಣಿಸುತ್ತವೆ. ಆದರೆ ಆ ಹಾವುಗಳ ವಿಷವೇರದಂತೆ ಸಿದ್ಧಿಯನ್ನು ಹೊಂದಿದವರಿಗೆ ಆವ ಹಾನಿಯೂ ಇಲ್ಲ; ಕಡಿಮೆ ಹಣದಿಂದ ಹೆಚ್ಚು ಲಾಭವಾಗುವದು.

"ಛೀ–ಛೀ–ಪಾದ್ರಿ ಪುಸ್ತಕಗಳನ್ನೋದಬಾರದು!" ಎಂದು ಹೇಳುವ ಹಿರಿಯರ ಮಾತಿನಲ್ಲಿ ತಥ್ಯವಿಲ್ಲವೆಂದಲ್ಲ. ಸಾಮಾನ್ಯ ವಾಚಕರು ಸಂಶಯಗಳ ಗೊಂದಲದಲ್ಲಿ ಸಿಕ್ಕು ಬಿದ್ದು ಅಲ್ಲಾಕುಲ್ಲಿಯಾಗಬಹುದು. ಆದರೆ ತಮ್ಮ ಧರ್ಮವೆಂದರೆ ತಮ್ಮ ಜೀವವೆಂದು ಭಾವಿಸುವವರಿಗೆ ಆವ ತೊಂದರೆಯೂ ಆಗದು. ಎರಡನೆಯವರು ನಿಮ್ಮ ಮಗನ ಮೋರೆಗೆ ಮಸಿ ಹಚ್ಚಿ ಇನ್ನೊಂದು ಮಗುವನ್ನು ಮುಂದಿಟ್ಟರೆ ನೀವು ಆರನ್ನು ಅಂಗೀಕರಿಸುವವರು ? ನಿಮ್ಮ ಮಗುವನ್ನು ತಿರಸ್ಕರಿಸಿ ಇನ್ನೊಬ್ಬರ ಕೂಸನ್ನು ಮನೆಗೆ ಕರೆತರುವಿರೋ ? ತಮ್ಮ ಧರ್ಮವೇ ತಮಗೆ ಜೀವಕ್ಕಿಂತ ಪ್ರೀತಿಯದು ಎಂದು ಯಾರೂ ಮರೆಯುವದಿಲ್ಲ.

ಜ. ಕ. ೨-೯, ಜುಲೈ ೧೯೨೪

## ಶಿಲ್ಪಿ
(ಅನುವಾದ – ಬೆಂಗಾಲಿಯಿಂದ)

---

೧

ಶಿಲ್ಪಿ ಚಿತ್ರ ಬರೆಯುತ್ತಿರುವನು.

ಅರಸರಿಗೆ ಸೇರುತ್ತಿಲ್ಲ; ಓಲಗದವರು ಗೇಲಿ ಮಾಡಿ ನಗುವರು. ಊರವರು ಮೂಗು ಮುರಿಯುವರು !

ಶಿಲ್ಪಿ ಗೀಚೇ ಗೀಚುವನು ! ಮುಗಿದೇ ಇಲ್ಲ !!

೨

ಆದರೆ ಕೂಳಿಲ್ಲದೆ ಕೊರಗಿದ. ಸೊರಗಿದ ಕೈಯಿಂದ ಕುಂಚವು ತಾನೇ ಕಳಚಿ ಬೀಳುವ ಹೊತ್ತು ಒಮ್ಮೆ ಬಂತು. ಗೃಹಲಕ್ಷ್ಮಿಯೆಂದಳು–ಅರಸನಲ್ಲಿ ಹೋಗು; ಅವನ ಒಲಿಮೆಯಿಂದ ಎಲ್ಲಾ ಕೊರತೆ ಹಿಂಗೀತು !!! ಅರೆ ಬರೆದ 'ಮನ ಮೋಹಿನಿ' ಪಟವನ್ನು ಅಪ್ಪಕ್ಕೆ ತೂಗು ಹಾಕಿ ಅರಮನೆಗೆ ನಡೆದನು ! ಅರಸನೆಂದನು–ಹೂ ದೋಟದ ಹೊಸಗೋಡೆಗಳ ಮೇಲೆ ನಮ್ಮ ಹಿರಿಯರ ಕೀರ್ತಿ ಕಂಗೊಳಿಸಲಿ !!!

ಓಲಗದವರೆಂದರು : 'ಮನಸಾರೆ ಮನ್ನಣೆಯಾದೀತು !'

ಊರವರು – ಕಣ್ದಣಿ ನೋಡಿ ನಲಿಯಬಹುದೆಂದರು !

ಅರಸನ ಅನ್ನದಿಂದ ಬಲಪಟ್ಟ ಕೈ ಮತ್ತೆ ಕುಂಚ ಹಿಡಿಯಿತು.

೩

ಗೋಡೆಗಳ ಮೇಲೆ ನೂರಾರು ಅರಸರ ಮೋರೆ ಮೂಡತೊಡಗಿದವು. ಅಮಾತ್ಯರ ಸುಳಿದಾಟವೂ ಸಾಗಿತು ! ಊರವರ ಸಪ್ಪಗಿನ ಮೋರೆಗಳೂ ಸೊಬಗಿನ ಸಂತೆಯಲ್ಲಿಯೇ ಸುಳಿದಾಡ ಹತ್ತಿದವು !

ಶಿಲ್ಪಿಯ ಕೆಲಸವೆಲ್ಲಾ ಕೊನೆಗೊಂಡಿತು.

ಅರಸನು ಮನ್ನಣೆ ಮಾಡಿದನು, ಓಲಗದವರು ತಲೆದೂಗಿದರು, ಊರವರು ಸೈಗೊಟ್ಟರು !

ಶಿಲ್ಪಿಯ ಮೋರೆ ಕಳೆದುಂಬಿ ಅರಳಿತು !!!

ಳ

ಶಿಲ್ಪಿಯು ಮನೆಯನ್ನು ಸೇರುತ್ತಿರುವಂತೆಯೇ ಮನಮೋಹಿನಿಯ ಚಿತ್ರವೂ ಮುಗಿದು ಆಯಿತು.

ಆದರೂ ಜೀವಕಳೆ ಬರಲಿಲ್ಲ, ಕಷ್ಟಪಟ್ಟೂ ಕೇಡು !

ತಕ್ಕ ಬಣ್ಣ, ತಕ್ಕ ನಿಲುವು, ಆದರೂ ಹಾಳು ಕಳೆ ಹರಿದುಹೋಗಲಿಲ್ಲ.

ಶಿಲ್ಪಿ ಕೂಳು ಬಿಟ್ಟನು. ನಿದ್ದೆಗೆಟ್ಟನು. ಗಳಿಕೆ ಮರೆತನು. ಸುಖಕ್ಕೆ ಶರಣು ! ಆದರೂ ಹಾಳು ಮೋರೆ !!

೫

ಆಗ ಶಿಲ್ಪಿ ಕಲಾದೇವಿಗೆ ಕೈ ಮುಗಿದನು !!
ದೇವಿ ನುಡಿದಳು :–
“ಶಿಲ್ಪಿಯು ನೆತ್ತರವನ್ನು ಹೀರಿಯೇ ಅವನ ಮನಮೋಹಿನಿಗೆ ಜೀವ ಕೊಟ್ಟೇನು!
ಶಿಲ್ಪಿಯ ಹರಣ ಹೀರಿದಾಗಳೇ ಮನಮೋಹಿನಿಗೆ ಪ್ರಾಣಪ್ರತಿಷ್ಠೆ !!!”
ಶಿಲ್ಪಿಯೆಂದನು–ಹಾಗಾದರೆ ನನ್ನ ಪಡಿಬೋನವನ್ನು ಈಗಲೆ ಉಂಡು ಬಿಡು!!!
ದೇವಿಯೆಂದಳು–ಹಾಗೆ ಆಗಲೇ ಆರದು !
ಬಂಗಾರದ ಬಣ್ಣದಲ್ಲಿ ನಿನ್ನ ಕುಂಚ ತೊಯ್ದ ದಿನವೇ ನೀನು ಸತ್ತೆ !
ನಿನಗೀಗ ನಿನ್ನನ್ನು ನೀಡುವ ಒಡೆತನವೇ ಇಲ್ಲ ! ಫಲವೂ ಇಲ್ಲ !!
ನಿಂತಿರುವ ಹಾಗೆಯೇ ಕೈಯೊಳಗಿನ ಕುಂಚ ಕಳಚಿ ಬಿತ್ತು !
‘ಮನಮೋಹಿನಿ’ಯ ಅಳುಮೋರೆ ಮುಗಿಲ ಕಡೆಗೇ ಉಳಿಯಿತು.

**ಜ. ಕ. ೩–೩ ಜನೇವರಿ, ೧೯೨೫**

# ಮರ್ಕಟ ವಿಚಾರ

ಮಂಗ ಹೇಗೆ ಕುಣಿಯುತ್ತದೆ ? ಒಂದು ಮರವೇರುತ್ತಲೆ ಇನ್ನೊಂದಕ್ಕೆ ಹಾರುವದು. ಅಲ್ಲಿಂದ ಇನ್ನೊಂದಕ್ಕೆ ಅಲ್ಲಿಂದ ಮತ್ತೊಂದಕ್ಕೆ. ಎಲ್ಲಿಂದ ಹೊರಟು, ಯಾವ ಹಾದಿಯಿಂದ, ಎಲ್ಲಿಗೆ ಬಂದೆನೆಂಬ ನೆನಪೇ ಅದಕ್ಕಿಲ್ಲ. ಎಲ್ಲಿಂದಲೋ ಹೊರಟು ಎಲ್ಲಿಗೋ ಬಂದು ಅಲ್ಲಾಕುಲ್ಲಿಯಾಗುವುದು ಮಂಗನ ಸ್ವಭಾವ. ಇದಕ್ಕೇ ಅರುವಾಳಿತನವೆನ್ನುವುದು. ಈಗಿನ ಕಾಲದಲ್ಲಿ ಇಂಥ ಅರುವಾಳಿತನದ ಪ್ರಾಬಲ್ಯವೇ ಕಣ್ಣಿಗೆ ಬೀಳುತ್ತದೆ.

ಪ್ರವಾಹದ ದಡದಮೇಲೆ ನಿಂತು ಆಚೆಯ ದಡದಲ್ಲಿ ಗುರಿಯಿಟ್ಟು, ಇಲ್ಲಿಂದ ಅಲ್ಲಿಯವರೆಗೆ ಸಾವಧಾನದಿಂದ ಕಟ್ಟುತ್ತ ಸಾಗುವುದು ಸೇತುಬಂಧವಿಚಾರ. ಇದರ ಉಲಿವೇ ಬಹು ಪ್ರದೇಶದಲ್ಲಿಲ್ಲ. ಗುರಿಯಿಲ್ಲದೆ ಸಿಕ್ಕಂತೆ ಕುಣಿಯುವ ವಿಚಾರವೇ ಕಾಡು ಬೇಗೆಯಂತೆ ಬೆಳೆದು ಬರುತ್ತಿದೆ.

ಹಿಂಡುಗಟ್ಟಿಕೊಂಡು ಮಾತನಾಡುತ್ತ ಕುಳಿತಿರುವವರ ಹತ್ತಿರ ಹೋಗಿ ನೋಡಿರಿ. "ಸಂಸಾರ ಸಾಕಾಯ್ತು ಪ್ಪಾ !" ಎಂದು ಸುರುವಾದ ಮಾತು. "ಶ್ರೀ ಕೃಷ್ಣನ ಹಾದರ"ದವರೆಗೆ ಬಂದು ನಿಲ್ಲುತ್ತದೆ. ಎಲ್ಲಿ ಇವರ ಸಂಸಾರ ತಾಪ, ಎಲ್ಲಿ ಆ ಪೂರ್ಣಾವತಾರ ಶ್ರೀ ಕೃಷ್ಣನ ಹಾದರ ಗೊತ್ತಿಲ್ಲ, ಗುರಿಯಿಲ್ಲ; ಅಗತ್ಯ ವಿಲ್ಲ, ಉದ್ದೇಶ್ಯವಿಲ್ಲ. ವಾಹವ್ವಾ !

ಮತಿಯಿಂದಲೇ ಮಾನವ. ಅದರ ಬಳಕೆಯೇ ಇಲ್ಲದಿದ್ದರೆ ಮಾನವನಂಥಾ ದ್ದೊಂದು ಪಶುವೇ ಸರಿ. ಮಾನವನಂಥಾದ್ದು ಯಾವ ಪಶುವೆಂಬುದು ಗೊತ್ತಿಲ್ಲವೇ ? ಮಂಗ ! ಮರ್ಕಟ !!

ಇಂಥವರು ಖಾನೇಸುಮಾರಿಗೆ ಭಾರವೇ ವಿನಾ, ಮನುವಿನ ಮಕ್ಕಳೆಂದು ಹೇಳಿಕೊಳ್ಳುವ ವೀರಾಧಿವೀರರಲ್ಲ.

ಮತಿಯ ಮಾಲಿನ್ಯ ತೊಳೆಯದೆ ಮಾನವನ ಮೇಲ್ಮೆಯಿಲ್ಲ. ಆದ್ದರಿಂದಲೇ ಮರ್ಕಟ ವಿಚಾರವನ್ನು ಇಷ್ಟೊಂದು ಕುತೂಹಲದಿಂದ ಆದರದಿಂದ ಆತುರತೆಯಿಂದ ಪರಿಶೀಲಿಸಿ ನೋಡಬೇಕಾಗಿದೆ.

ಮರ್ಕಟ ವಿಚಾರದ ಮಾದರಿಯೊಂದನ್ನು ಹೇಳೋಣವೇ ? "ಈಗ ಧ್ಯಾನ ಮಾಡುವದಕ್ಕೆ ಕುಳಿತೆನು, ಧ್ಯಾನದ ಹೊತ್ತಿನಲ್ಲಿ ಬೇರೆ ವಿಚಾರಗಳು ಸುಳಿಯಲೇ ಬಾರದು. ವಿಚಾರವೆಂಬುದು ಬಲು ಮಂಗ. ಅಂತೇ ಸಪ್ಪಣ್ಣಪ್ಪನವರು ತಮ್ಮ ಕೈವಲ್ಯದಲ್ಲಿ "ಮನವೆಂಬ ಮರ್ಕಟವ ತಾಳಲಾರೆನು ದೇವ" ಎಂದಿರುವರು. ಸಪ್ಪಣ್ಣಪ್ಪನವರೇನು ಸಾಮಾನ್ಯರೇ ? ಇಂಥ ಅಸಾಮಾನ್ಯರ ಆಳಿಕೆಯದೊಂದು ಕಾಲವೇ ಇತ್ತು. ಅದೇಕೆ ಇಂದೂ ಇರಲೇ ಬೇಕು. ಇಲ್ಲದೆ ಜಗವು ಹೇಗೆ ನಡದೀತು ! "ಹಿಂದಿನದು ಇಂದೂ ಉಂಟು, ಇಂದಿನದು ಹಿಂದೂ ಇತ್ತು. ಮುಂದಿನದು ಇಂದುಂಟು. ಇಂದಿನದೂ ಮುಂದಿರುವದು" ಎಂದು ಬಾಯ್ಬಲ್ಲಿನಲ್ಲಿ ಹೇಳಿದ್ದು ತೀರ ನಿಜ. ಅಯ್ಯೋ ! ಬಾಯ್ಬಲ್ಲು ಎಷ್ಟೆಷ್ಟು ಭಾಷೆಗಳಲ್ಲಿ ಆಗಿರುವ ದಪ್ಪಾ ! ಭಾಷೆಗಳೇನು ಒಂದೇ ಎರಡೇ ? ಜಗದಲ್ಲಿ ಮೂವತ್ತೆರಡು ನೂರಾ ಇಪ್ಪನ್ನಾಲ್ಕು ಭಾಷೆಗಳುಂಟಂತೆ. ಅಬ್ಬಬ್ಬ ! ಭಾಷಾಭಿಮಾನಿಗಳಿಲ್ಲದಿದ್ದರೆ ಭಾಷೆಗಳು ಉಳಿಯಬಲ್ಲವೇ ? ಆದರೆ ಭಾಷಾಭಿಮಾನದ ಜೊಳ್ಳು ಮಾತು ಹೇಳಿ, ದೇಶಾಭಿಮಾನವಿಲ್ಲದಿದ್ದರೆ ಎಲ್ಲಾ ವ್ಯರ್ಥ. ದೇಶವಾಸಿಗಳೇ ಅಳಿದರೆ ಇವರ ಭಾಷೆಯನ್ನುಳಿಸುವವರಾರು ? ಮೂರ್ತಿಯಂತ ಅಭಿಮಾನದೇವತೆಯೆಂದರೆ ಯುರೋಪ ದೇಶವೇ ಸರಿ. ಎಲ್ಲಿ ಆ ಜರ್ಮನಿ, ಎಲ್ಲಿ ಈ ಕರ್ನಾಟಕ ? ಕಿಟ್ಟೆಲ್ ಸಾಹೇಬರು ಅಲ್ಲಿಂದಿಲ್ಲಿಗೆ ಬಂದು ಕನ್ನಡ ಕಲಿತು, ಕನ್ನಡಿಗರಿಗೇ ಕನ್ನಡ ಕಲಿಸುವ ನಿಘಂಟು ಬರೆದು ಹೋದರು. ಆದರೂ ಅವರು ಪಾದ್ರಿಗಳು. ಪಾದ್ರಿಗಳಲ್ಲಿ ಎಲ್ಲಾ ಚಲೋದಿದೆ. ಆದರೆ ಒಂದು ಮಾತ್ರ ಕೆಟ್ಟದು. ಪರಧರ್ಮ ನಿಂದೆಯು ಅವರ ಜನ್ಮಸಿದ್ಧ ಹಕ್ಕಾಗಿಬಿಟ್ಟಿದೆ. ಹಕ್ಕು ಹಕ್ಕು ಎನ್ನುತ್ತ ತಿಲಕರೊಬ್ಬರು ಹೋಗಿಯೇ ಬಿಟ್ಟರಲ್ಲಪ್ಪಾ ! ಕಲಿಕಾಲದಲ್ಲಿ ತ್ರಿಪಾದ ಪಾಪವಿದ್ದದ್ದರಿಂದ ಸತ್ಯವಂತರಿಗೆ ಉಜ್ಜ್ವಳವಿಲ್ಲ. ಏನಪ್ಪಾ ಕಲಿಕಾಲ ಬಂದು ಈಗೀಗ ನಾಲ್ಕೈದು ಸಾವಿರ ವರುಷವಾಗಿದೆ. ಇನ್ನೂ "ಚಾರಲಾಖ ಬತ್ತೀಸ ಹಜಾರ" ಆಗಲಿಕ್ಕೇನು ಸ್ವಲ್ಪ ಕಾಲ ಬೇಕೆ ? ಆದರೂ ಅರವಿಂದ ಮಹರ್ಷಿಗಳೂ ವಿವೇಕಾನಂದರೂ "ಸತ್ಯ ಯುಗವು ಸನಿಯಾಯಿತೆಂ"ದು ಸಾರಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ! ಆಹಾ, ಇವರೇನು ಕಡಿಮೆ ಬುದ್ಧಿವಂತರೇ ? ಅರವಿಂದರು ಹದಿನೆಂಟು ವಯಸ್ಸಿಗೆ ಐಸಿಯೆಸ್ಸಾದರಂತೆ. ಇಂದು ಎಮ್ಮೆಗಳೂ ಐಸಿಯೆಸ್ಸಗಳೂ ಹೇರಳವಾಗಿರುವರಾ ಗಲಿ. ಪರದೇಶದಲ್ಲಿ ಮಡ್ಡಮ್ಮಗಳ ಬಲೆಗೆ ಬೀಳದೆ ತಿರುಗಿ ಬರುವವರೇ ಕಡಿಮೆ. ಯುರೋಪಿನಲ್ಲಿ ಮಡ್ಡಮ್ಮಗಳ ಹಾವಳಿಯು ನಮ್ಮಲ್ಲಿಯ ಮರಂಗಿಯ ಪಿಡುಗಿನಂತೆ ಬೆಳೆದು ಬಿಟ್ಟಿದೆಯಂತೆ ! ಏನು ಈ ಸ್ತ್ರೀ ಸ್ವಾತಂತ್ರ್ಯದ ಗೊತ್ತೆಯೋ ಮಹಾರಾಯ, ಹೇಳಲಾಸಲ್ಲ ! ಹೌದು, ಇದಾದರೂ ಯಾಕೆ ಸರಿಯಲ್ಲ ? ಹೆಂಗಸರು ಹಡೆದವರನ್ನು ಬಿಡಬೇಕು, ಒಡಹುಟ್ಟಿದವರನ್ನು ಬಿಡಬೇಕು. ಎಲ್ಲವನ್ನು ಎಲ್ಲರನ್ನು ಬಿಡಬೇಕು. ಇಷ್ಟೆಲ್ಲ ನೀರು ಬಿಟ್ಟು ಎಲ್ಲಿಯೋ ಹುಟ್ಟಿ ಬೆಳೆದ ಬೋಳಪ್ಪನೊಬ್ಬನಿಗೆ ತಮ್ಮನ್ನು

ಸರ್ವಸ್ವೀ ನೀಡಿ ಬಿಡಬೇಕಂತೆ! ಎಂಥಾ ಆತ್ಮಯಜ್ಞದ ಫಲವೋ ಹೇಳಲಾಸಲ್ಲ! ಅತ್ತೆಯ ಕಾಟ, ಗಂಡನ ಹಾರಾಟ, ಚೀರಾಟ! ಬೀಡಿ ಸಿಗರೇಟುಗಳನ್ನು ಆಹುತಿಗೊಳ್ಳುವ ಇವನ ಮುಖವೇದಿಕೆಯ ಮುಂದೆ ಮಲಗಿದವಳಿಗೆ ಗಟಾರದ ರೊಜ್ಜಿನ ವಾಸನೆಯೇ ಸಕಲಸುಗಂಧ! ಇಂಥಾ ಸುಫಲಗಳನ್ನು ಭೋಗಿಸಬೇಕು! ನರಕ ಯಾತನೆಯೆಂದರೆ ಇನ್ನಾವುದು? ಯಾವ ಪಾಪಮಾಡಿ ಹೆಣ್ಣು ಹುಟ್ಟಿತೋ ನಾಕಾಣೆ! ಅಲ್ಲವಪ್ಪಾ ಗ್ರಂಥಕರ್ತರ ನಿಷ್ಪಕ್ಷಪಾತವನ್ನಾದರೂ ಎಷ್ಟೆಂದು ಕೊಂಡಾಡಲಿ? ಸ್ತ್ರೀಯರಿಗೆ ಪಾತಿವ್ರತ್ಯವೇ ಭೂಷಣವಂತೆ, ಇದೇನೋ ಒಳ್ಳೆಯದೇ. ಆದರೂ ಪುರುಷರಿಗೆ ಸತಿವ್ರತವನ್ನು ಬೋಧಿಸಿ ಇದಕ್ಕೆ ತಪ್ಪಿದರೆ ಗಂಡುಸೂಳೆಗಳೆಂದು ಕುಲದ ಹೊರತಾಗಿಡಬೇಕೆಂದು ಯಾವ ಪುಣ್ಯಾತ್ಮನು ಬರೆದಿದ್ದಾನೆ? ಅಯ್ಯೋ! ಇದೇನಪ್ಪಾ! ಧ್ಯಾನಕ್ಕಾಗಿ ಕುಳಿತವನು ಎಲ್ಲೆಲ್ಲಿಗೆ ಬಂದೆನಪ್ಪಾ! ಹೋಗಲಿ, ಆದಷ್ಟಕ್ಕೆ ಚಿಂತಿಸಿ ಫಲವಿಲ್ಲ. ಹೊತ್ತು ಬಹಳವಾದ ಹಾಗಿದೆ. ಊಟಕ್ಕೆ ಹೋಗುವಾ!"

ಇಂತಿದು ಮರ್ಕಟವಿಚಾರದ ಬಳ್ಳಿಗೆ ಬಿಟ್ಟ ಫಲ! ಇನ್ನುಳಿದ ವಿಚಾರಗಳನ್ನ ನಮ್ಮ ಮರ್ಕಟ ವಿಚಾರಕ್ಕೆ ತಕ್ಕಂತೆ ಕೊಂಡಾಡುವಾ!

**ಸ್ವಧರ್ಮ ೩-೧೧, ೧೯೨೬**

# ಯದ್ವಾ ತದ್ವಾ ವಿಚಾರ

ಮರ್ಕಟ ವಿಚಾರದ ಆವ್ವಾಳಿಗಿಂತ ಯದ್ವಾತದ್ವಾ ವಿಚಾರದ ಚಪಲರು ಚುರುಕು ಬುದ್ಧಿಯವರು ! ಇವರ ಚುರುಕು ಬುದ್ಧಿಯೆಂದರೆ ಎಂಥಾದ್ದೆನ್ನುವಿರಾ ? ಚುರುಕು ಹತ್ತಿದಾಗಳೊಮ್ಮೆ ಹಾ ಎನ್ನುವುದು. ಚುರುಕು ಹತ್ತುತ್ತಿರುವವರೆಗೂ ಇವರ ಹಾರಾಟ. ಚುರುಕು ತಪ್ಪಿದರೆ ಮತ್ತೆ ಮಿಸುಕುವುದಕ್ಕೂ ಕೂಡ ಆಣೆ. ಇವರಿಗೆ ಆಗಾಗ ಹೊರಗಿನ ಚುರುಕು ಬೇಕು. ಅದಿಲ್ಲದಿದ್ದರೆ ಇವರು ಇದ್ದಾರೆಯೋ ಇಲ್ಲವೋ ಎಂದು ಗೊತ್ತುಪಡಿಸುವದು ಕಷ್ಟ. ಇಂಥ ಚುರುಕು ಬುದ್ಧಿಯವರಿಗೆ ಈ ಕಾಲದಲ್ಲಿ ಕೊರತೆಯೇನೂ ಇಲ್ಲವೆಂಬುದು ದಿನದಿನಕ್ಕೂ ಕಾಣುತ್ತಿದೆ. ವ್ಯಾಖ್ಯಾನಕಾರರೊಬ್ಬರು ಒಂದು ವ್ಯಾಖ್ಯಾನ ಹೇಳಿದರೆ ತೀರಿತು ! ಎಲ್ಲೆಲ್ಲೂ ಹಾರಾಟ–ಚೀರಾಟ ! ಮುಂದೆ ನಾಲ್ಕೇ ದಿನಗಳಲ್ಲಿ ನೋಡಿದರೆ ಎಲ್ಲೆಲ್ಲೂ ಮೂಕು ! ಇಂಥ ಸಂಧಿಯಲ್ಲಿ ಇನ್ನೊಬ್ಬ ವ್ಯಾಖ್ಯಾನಕಾರ ಬಂದು ಗಂಟಲು ಹರಕೊಂಡು ಮೇಜು ಮುರಿದು, ಕೈ ನೋಯಿಸಿ ಕೊಂಡು ಅತ್ತುಕರೆದು ವ್ಯಾಖ್ಯಾನ ಕೊಟ್ಟರೆ ತೀರಿತು ! ಸಂದಿಗೊಂದಿಗಳಲ್ಲಿ ಬಿದ್ದ ಖಾದೀ ಅರಿವೆಗಳೂ ಮುರುಕು ರಾಟಿಗಳೂ ಮತ್ತೆ ಮುಗಿಮುಚ್ಚುವವು ! ವಾಹವಾ, ಇದೇ ನೋಡಿರಿ ಆ ದಿವ್ಯವಾದ ಚುರುಕುಬುದ್ಧಿ !

ಒಬ್ಬರನ್ನು ನೋಡಿ ಒಬ್ಬರಂತೆ ಕುಣಿಯುವುದೂ ಕೂಡ ಈ ಚಾಪಲ್ಯವೇ. ಇವರಿಗೆ ಆಧಾರವೆಲ್ಲಾ ಇನ್ನೊಬ್ಬರೇ. ಇವರು ತಮ್ಮ ಸ್ವತಂತ್ರತೆಯನ್ನು ಕಳಕೊಂಡು ಇನ್ನೊಬ್ಬರ ನೆರಳಾಗಿ ಬಿಡುತ್ತಾರೆ. ಹಲವರು ಹಲವು ವಿಧದ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಆದ್ದರಿಂದ ಈ ಅನುಕರಣಶೀಲರಾದ ಚಪಲಬುದ್ಧಿಗಳು ಒಂದು ಗಳಿಗೆ ಒಬ್ಬರಂತೆ ಇನ್ನೊಂದು ಗಳಿಗೆ ಇನ್ನೊಬ್ಬರಂತೆ, ಬೇರೊಂದು ಗಳಿಗೆ ಬೇರೊಬ್ಬರಂತೆ ಕುಣಿಯ ಹೋಗಿ ತಮ್ಮ ಬಾಳುವೆಯ ಮೇಲೆ ಮಣ್ಣು ಹಾಕಿಕೊಳ್ಳು ತ್ತಾರೆ. ಇಂಥವರಿಗೆ ಯಾವಾಗಲೂ ಇನ್ನೊಬ್ಬರ ಹುಚ್ಚು ಬಹಳ. ಇದೇ ಇವರ ಗುರುಮಂತ್ರ.

ಭೀಮೂ ಮುಲಕೀ ಪರೀಕ್ಷೆಗೆ ಹೋಗಿದ್ದ. ಅವನಪ್ಪನು ಮನೆಯಲ್ಲಿ ಮಗನ ಧ್ಯಾನದಲ್ಲಿಯೇ ಹೊತ್ತು ಹಾಕುತ್ತಿದ್ದಾನೆ. ಏನೋ ಮಗ ಒಮ್ಮೆ ಪರೀಕ್ಷೆಯನ್ನು ಮುಗಿಸಿಕೊಂಡು ಮನೆಗೆ ಬಂದ. ತಂದೆಯ ಕುತೂಹಲಕ್ಕೇನು ಸೀಮೆಯೇ ? ಮಗನನ್ನು ಕೇಳಿದ :-

"ಪಾಸಾಯಿತೇ ?"

"ಇಲ್ಲ."

"ಥೂ ಕುಲನಾಶಕಾ"

"ಅದೇಕಪ್ಪ ! ನೆರೆಮನೆಯ ರಂಗನೂ ನಾಪಾಸಾಗಿದ್ದಾನೆ !"

ಇಲ್ಲಿ ನಗಬೇಕೊ ಅಳಬೇಕೊ ತಿಳಿಯದು ! ಒಂದೆ ಖಾದೀ ಧರಿಸುತ್ತಿದ್ದವನು ಇಂದು ಖಾದಿಯ ನೆನಪಿಲ್ಲದೆ ತಿರುಗುತ್ತಿರುವುದಕ್ಕೆಲ್ಲಾ ಇಂಥಾ ಕಾರಣವೇ ! "ಅಂವಾ ಬಿಟ್ಟಾ, ಇಂವಾ ಬಿಟ್ಟಾ: ಅಂಥವ ಬಿಟ್ಟಾ, ಇಂಥವ ಬಿಟ್ಟಾ" ಎಂಬ ಇತಿಹಾಸವೇ ಇಂಥವರ ಬಾಯಿಯಲ್ಲಿರೋದು ! ಒಂದರಲ್ಲೇ ಎರಡರಲ್ಲೇ ? ಎಲ್ಲದರಲ್ಲಿ ಹೀಗೆಯೇ ನೆಲ ಗಟ್ಟಿಲ್ಲದೆ ಮನೆ ಕಟ್ಟಿದಂತೆ ಇಂಥವರ ಬಾಳ್ವೆ. ಇಂದಿನ ಜಗದಲ್ಲಿ ಬಹಳ ಕಾರ್ಯಗಳು ಕೊನೆಗಾಣದಿರುವುದಕ್ಕೆ ಇಂಥ ಚುರುಕು ಬುದ್ಧಿಯೇ ಕಾರಣ.

ಮಾಸಪತ್ರಿಕೆಯೊಂದು ಮನೆಗೆ ಬಂದರೆ ತೀರಿತು. ತಾನೂ ಒಂದು ಲೇಖ ವನ್ನಾಗಲಿ ಕವಿತೆಯನ್ನಾಗಲಿ ಬರೆಯಬೇಕೆಂಬ ಹಂಬಲ ! ಕೂಡಲೇ ಗೀಚುವುದಕ್ಕೆ ಆರಂಭ. ಎಲ್ಲಿಗೋ ಬಂದು ಕೈಕಟ್ಟಾಯಿತು. ಅಲ್ಲಿಗೇ ಸಮಾಪ್ತಿ. ತಿರುಗಿ ಒಮ್ಮೆ ಓದಿ ಯಾವುದಾದರೊಂದು ತಲೆಕಟ್ಟು (ಶಿರೋಲೇಖ) ಕಲ್ಪಿಸಿದರೆ ಕೃತಾರ್ಥರಾದರು. ಏನು ಬರೆಯಬೇಕೆಂಬ ಗುರಿಯಿಲ್ಲ. ಏನೋ ಬರೆದು ಏನೋ ಒಂದು ಹೆಸರಿಟ್ಟು ಬಿಟ್ಟರೆ ಸ್ವರ್ಗ ಮೂರೇ ಗೇಣು ! ಇಂಥವರಿಗೇನೂ ಕೊರತೆಯಿಲ್ಲ.

ಹಿಟ್ಟು ಕಲೆಸುವುದೇನೊ ಕಲೆಸುವುದು. ಅಳಕವಾದರೆ ಅಂಬಲಿ, ಗಟ್ಟಿಯಾ ದರೆ ರೊಟ್ಟಿ ! ಹರಿದಷ್ಟೇ ಹಳ್ಳ; ನಿಂತಲ್ಲಿಗೇ ತೀರ್ಥ.

ಒಬ್ಬನು ಕಸುವಿನಿಂದೇನೋ ಓಡುತ್ತಿದ್ದಾನೆ. ಆದರೆ ಎಲ್ಲಿಗೆಂದು ಕೇಳಿದರೆ ಮಾತ್ರ ಉತ್ತರವಿಲ್ಲ. ಏನೋ ಕಾಲು ಸೋತು ನಿಂತನು. ಎಲ್ಲಿಗೆ ಹೋಗಬೇಕಾ ಗಿದ್ದಿತೆಂದು ಕೇಳಿದರೆ ಇಲ್ಲಿಗೇ ಎಂದು ಹೇಳಿ ನಡೆದನು. ಇಂಥವರಿಂದ ಏನಾಗ ಬಲ್ಲುದು ! ಗುರಿಯಿಲ್ಲದ ಗುಂಡಿನಂತೆ ಇವರ ಬಾಳ್ವೆ. ಗುಂಡೇನೊ ಸಾಗುವುದು. ಯಾತಕ್ಕೆ ಬಡಿಯುವುದೆಂಬ ನಿಯಮವಿಲ್ಲ. ಬಡಿಯುವದೇನೋ ನಿಜ. ಹಕ್ಕಿ ಗುಬ್ಬಿಗೆ ಬಡಿದರೆ ಬೇಟೆ; ಮಂದಿ ಮಕ್ಕಳಿಗೆ ಬಡಿದರೆ ಕೊಲೆ; ಹಾಗೇ ಹೋಗಿ ಬಿಟ್ಟರೆ ಹೌಸು !

ಯಾವ ಗಿಡದ್ದೋ ಬೇರು ತಂದು, ಯಾತ್ರರ ಮೇಲೋ ಅರೆದು, ಯಾತಕ್ಕೋ ಹಚ್ಚಿದರೆ ಏನಾಗಬೇಕು ? ಎಂತಾಗಬೇಕು ? ಅಂತಾಗುವುದೋ ಇಂತಾಗುವುದೋ ಯಾರು ಹೇಳಬೇಕು ? ಏನಾದರೊಂದು ಆಗುವುದು ಮಾತ್ರ ನಿಜ. ಇಂಥಾ ಯದ್ವಾ ತದ್ವಾ ವಿಚಾರದಿಂದ ಯಾರು ಏನಾದರು, ಎಂತಾದರು ಎಂಬ ನಿಯಮವೇ ಇಲ್ಲ. ಇದುವೆ ಬೆಳೆದರೆ ಸಂದಿಗ್ಧ ವಿಚಾರವಾಗಿ ಮನುಷ್ಯನನ್ನು ಸಿಕ್ಕ ಸಿಕ್ಕ ಸಂಬೇಹದಲ್ಲಿ ತಿಕ್ಕಿ ಮುಕ್ಕಿ ಮಣ್ಣು ಪಾಲು ಮಾಡುಂದರಲ್ಲಿ ಸಂದೇಹವಿಲ್ಲ :

ಸ್ವಧರ್ಮ ೩-೧೨, ೧೯೨೬

# ವಿಚಾರ ವೀಚಿ

---

## ಕುವಿಚಾರ

ಕುಬುದ್ಧಿಗಳಲ್ಲಿ ಕುವಿಚಾರವಿರುವುದು ಸ್ವಾಭಾವಿಕವೇ ಸರಿ. ಆದರೆ ಯಾವುದು ಕುಬುದ್ಧಿಯೋ ಯಾವುದು ಸುಬುದ್ಧಿಯೋ ಗೊತ್ತುಪಡಿಸುವುದೇ ಕಠಿಣವಾಗಿದೆ. ಯಾಕೆಂದರೆ ಈ ಲೋಕದಲ್ಲಿ ಎಲ್ಲರೂ ತಮ್ಮತಮ್ಮ ವಿಚಾರವೇ ಸುವಿಚಾರವೆಂದು ಗಟ್ಟಿಯಾಗಿ ನಂಬಿದ್ದಾರೆ. ತಮ್ಮಂತೆ ಇಲ್ಲದ ವಿಚಾರವನ್ನೆಲ್ಲಾ ಕುವಿಚಾರವೆಂದು ಎಲ್ಲರೂ ತಿರಸ್ಕರಿಸುತ್ತಿದ್ದಾರೆ! ಎಲ್ಲರೂ ಲೋಕವನ್ನು ತಮ್ಮ ವಿಚಾರದಂತೆ ನಡೆಯಿಸಬೇಕೆಂದೇ ಹವಣಿಸುತ್ತಿರುತ್ತಾರೆ. ಇನ್ನೊಬ್ಬರನ್ನು ತನ್ನ ಹಾದಿಯಲ್ಲಿ ಸೇರಿಸುವದಕ್ಕೆ ಒಬ್ಬೊಬ್ಬನೂ ಹವಣಿಸುತ್ತಿರುತ್ತಾನೆ. ತನ್ನ ವಿಚಾರಕ್ಕೆ ಒಪ್ಪದವರನ್ನು ಕುವಿಚಾರಿಗಳೆಂದು ಹಳಿಯುತ್ತಿರುತ್ತಾನೆ. ಎಲ್ಲರೂ ಹೀಗೆಯೇ ನಡೆಯಿಸಿದ್ದಾರೆ. ಹೀಗೆಂದ ಬಳಿಕ ಯಾರದು ಸುವಿಚಾರ, ಯಾರದು ಕುವಿಚಾರ? ನಾವು ಸುವಿಚಾರವೆಂದು ಹೇಳುತ್ತಿರುವುದನ್ನು ಇನ್ನೊಬ್ಬರು ಕುವಿಚಾರವೆಂದು ಹಳೆಯುತ್ತಿರುತ್ತಾರೆ. ನಾವು ಕುವಿಚಾರವೆಂದು ತಿಳಿದಿರುವುದು ಇನ್ನೊಬ್ಬರಿಗೆ ಸುವಿಚಾರವಾಗಿರುವದುಂಟು. ಹೀಗೆಂದ ಬಳಿಕ ಕು, ಸು ವಿಂಗಡಿಸುವ ಬಗೆ ಹೇಗೆ? ಮಾನವ ಸ್ವಭಾವದಂತೆ ನಾವು ನಮ್ಮಂತಿರಲೊಲ್ಲದವರನ್ನೆಲ್ಲ ನಾವು ಕುವಿಚಾರಿಗಳೆಂದು ಹೇಳುತ್ತಿರಬಹುದಲ್ಲವೆ? ನಮಗೆ ನಮ್ಮದೇ ಸುವಿಚಾರವಾಗಿಬಿಟ್ಟಿರಲಾರದೆ? ಅದು ನಿಜವಾಗಿಯೂ ಸುವಿಚಾರವೋ, ಕುವಿಚಾರವೊ, ಗೊತ್ತುಪಡಿಸುವ ಬಗೆ ಹೇಗೆ? ಆದರೆ ಯಾವ ಉಪಾಯವೂ ಇಲ್ಲದಿರುವಾಗ ತಮ್ಮ ವಿಚಾರವನ್ನಾದರೂ ನಂಬಿಕೊಂಡಿರಬೇಕಷ್ಟೆ? ಹಾಗಿಲ್ಲದಿದ್ದರೆ ಇದ್ದೊಬ್ಬರ ಆಸ್ತಿಯೂ ಹೋಯಿತು, ಬೇರೊಂದು ಭಿಕ್ಕಿಯೂ ಹೋಯಿತು! ಹೀಗಾಗಲಿಕ್ಕಿಲ್ಲವೆ? ಪುರಪಂಡಿತರ ಮರ್ಕಟವಿಚಾರಕ್ಕೇನೋ ಇದುವರೆಗಿನ ದಿವ್ಯ ವಿಚಾರಗಳೆಲ್ಲ ಕುವಿಚಾರವಾಗಿ ಕಾಣುತ್ತಿದ್ದದುಂಟು. ಇಷ್ಟು ಮಾತ್ರ ಸರಿ, ಅವರಿಗೆ ಅವರದೊಂದು ವಿಚಾರವುಂಟು.

ಜ. ಕ. ೯-೭ ಮೇ, ೧೯೩೧

## ಸುವಿಚಾರ

ಸುವಿಚಾರವು ಬುದ್ಧಿವಂತರಲ್ಲಿ ಮಾತ್ರವೇ ಇರಬೇಕಷ್ಟೇ, ಬುದ್ಧಿವಂತನೇ ಮನುಷ್ಯನು. ಬುದ್ಧಿಗೇಡಿ ಮನುಷ್ಯತ್ವವಿಲ್ಲದೆ ಮನಬಂದಂತೆ ಕುಣಿಯುವದನ್ನು ಮಾತ್ರ ಬಲ್ಲೆವು! ತನ್ನ ತಾನರಿಯದ ಪಶುವಿಗೆ ಮನುಷ್ಯತ್ವದ ಅರುವೆಲ್ಲಿ? ತನ್ನ ಪರಿವೆಯಿಲ್ಲದ ಪಶುವಿಗೆ ಉಳಿದದ್ದರ ಪರಿವೆಯೇನು ?

ಸು ಎಂದರೆ ಒಳ್ಳೆಯದು. ಎಂದೆಂದೂ ಉಳ್ಳದ್ದೇ ಒಳ್ಳೆಯದು. ಸು ಎಂದರೆ ಸತ್, ತ್ರಿಕಾಲಾಭಾದಿತವಾದದ್ದು ಸತ್ಯ. ಸತ್ಯದ ರುಚಿಯನ್ನೇ ಅರಿಯದವನು ಯಾವುದನ್ನು ಸರಿಯಾಗಿ ತಿಳಿದುಕೊಂಡಾನು. ಸತ್ಯವೆಂದರೆ ಇಂಥಾದ್ದೆಂಬುದೇ ಗೊತ್ತಿಲ್ಲದಿದ್ದರೆ ಸರಿಯಾಗಿ ಹೆಜ್ಜೆಯೊಗೆಯುವದಕ್ಕೆ ಬಾರದು. ಸತ್ಯವೇ ಮನುಷ್ಯತ್ವದ ಕಣ್ಣಾಗಿದೆ. ಕಣ್ಣಿಲ್ಲದವನಿಗೆ ಹಗಲೂ ಇಲ್ಲ, ಇರುಳೂ ಇಲ್ಲ. ಅವನ ಪಾಲಿಗೆ ಏನೇನೂ ಇಲ್ಲ. ಅಲ್ಲದೆ ತಾನೂ ಕಾಣುವುದಿಲ್ಲ. ಸತ್ ಇಲ್ಲದಿದ್ದರೆ ಸತ್ವವಿಲ್ಲ. ಸತ್ವವಿಲ್ಲದವನು ಬರೇ ತಮದಲ್ಲಿ ಹಾದಿಯ ಹುಡಿಯಾಗಿ (ರಜಃಕಣವಾಗಿ) ಏನೋ ಹಾರಾಡುತ್ತ, ಗಳಿಗೆ ಬೀಳುತ್ತ ಗಳಿಗೆ ಏಳುತ್ತ ಹೊತ್ತುಗಳೆಯದೆ ನಿರ್ವಾಹವಿಲ್ಲ. ಕಣ್ಣೇನೋ ಉಂಟು, ನೋಡುವದಿಲ್ಲ. ಕಣ್ದೆರೆದಲ್ಲದೆ ಕತ್ತಲೆಯ ಕಾಟ ತಪ್ಪದು. ಕಿವಿಯೇನೋ ಉಂಟು, ಕೇಳುವದಿಲ್ಲ. ಕೇಳುವವರೆಗೂ ಕಣ್ಣೆರೆದು ನೋಡುವದಿಲ್ಲ. ಅಂತೆಯೇ 'ಈಶ'ನು "ಕಣ್ಣಿದ್ದವರು ಕಾಣಲಿ, ಕಿವಿಯಿದ್ದವರು ಕೇಳಲಿ" ಎಂದಿರುವನು.

ಸು ಎಂದರೆ ಸತ್, ಸತ್ ಎಂದರೆ ಓಂ। ಸುವಿಚಾರವೆಂದರೆ ಸದ್ವಿಚಾರ, ಸದ್ವಿಚಾರವೆಂದರೆ ಪರಮಾತ್ಮನನ್ನು ಕುರಿತು ವಿಚಾರ. ಇದಿಲ್ಲದಿದ್ದರೆ ಏನಿದ್ದರೂ ಕುವಿಚಾರ, ಸತ್ಯದ ನೆಲೆಯಿಲ್ಲದವರು ಇದ್ದೂ ಸತ್ತಂತೆ. "ಹುಟ್ಟಿಯೂ ಹುಟ್ಟದಂತಿರುವ ನಾನಿಂದು! ಹುಟ್ಟಿ ಹೊಸ ಜಗವನ್ನು ಹೊಗುವೆ ನಾನೆಂದು!" ಇದೀಗ ಸವಿಚಾರ.

**ಜ. ಕ. ೯-೯ ಜುಲೈ, ೧೯೩೧**

## ನಿರ್ವಿಚಾರ

ಬುದ್ಧಿಗೇಡಿಗಳಲ್ಲಿ ನಿರ್ವಿಚಾರವು ಮನೆಮಾಡಿಕೊಂಡು ಕುಳಿತಿರುತ್ತದೆ. ಪಂಗಡಗಳೂ, ಬಣಗಳೂ, ಸಂಪ್ರದಾಯಗಳೂ ಸೊಕ್ಕುವದು ಇಂಥ ನಿರ್ವಿಚಾರಗಳ ಖೋಗೀರ ಭರತಿಯಿಂದಲೇ, ಇವರಿಗೆ ಎಲ್ಲಾ ಗೊತ್ತು. ಆದರೆ ಎರಡು ಶಬ್ದಗಳ ಮಟ್ಟಿಗೆ ಮಾತ್ರ ಕೊರತೆ. 'ಯಾಕೆ' 'ಹ್ಯಾಗೆ' ಇವೆರಡು ಇವರಿಗೆ ಗೊತ್ತೇ ಇಲ್ಲ. ಇಂಥವರಿಂದ ಕಾಲಕಾಲಕ್ಕೆ ಹಿಂಡುಗಳು ಹೇಗೆ ಬೆಳೆದು ಬರುವವೆಂಬುದು ನಿಮಗೆ ಗೊತ್ತಿಲ್ಲದೆ ಇಲ್ಲ. ದಿನವೂ ನೋಡುತ್ತೀರಿ, ಗೊತ್ತಿಲ್ಲವೆ ?

೧) ಶೀರ ಹೊಸದು :– ವಿಜಾಪುರ ಜಿಲ್ಲೆಯು ಶಿವಶರಣ ಜನ್ಮಭೂಮಿ; ಸೊಲ್ಲಾಪುರ ಜಿಲ್ಲೆಯು ಜ್ಞಾನದೇವಾದಿ ಭಾಗವತರ ಲೀಲಾಕ್ಷೇತ್ರ. ಆದ್ದರಿಂದ ಹೊಸ

ಲೀಲೆಗಳೆನಾದರೂ ನಡೆಯಬೇಕಾದರೆ ಇಂಥಲ್ಲಿಯೇ ಅಲ್ಲವೇ ? ಇಲ್ಲಿ ಮೊನ್ನೆ ಮೊನ್ನೆ, ಈ ಅಕ್ಷಯ ಸಂವತ್ಸರದ ಆದಿಭಾಗದಲ್ಲಿಯೇ ಯುಗಾವತಾರವೊಂದಾದದ್ದು ನಿಮಗೆ ಗೊತ್ತಿಲ್ಲವೆ ? ಕೇರವ್ವನ ಶುಭಾಗಮನವಾಗಿದ್ದಿತು ! ಊರೂರಿಗೂ ಅರ್ಧ ಕ್ಕರ್ಧ ಜನರ ಹಣೆಯ ಮೇಲೆಲ್ಲಾ ಕೇರಿನ ಗಾಯ. ಯಾಕೆನ್ನುವಿರೋ ? ಯಾರಿಗೋ, ಯಾರೋ, ಎಲ್ಲೋ, ಏದೋ, ಯಾಕೋ, ಏನೋ ಹೇಳಿದರಂತೆ ! ಏಕೆಂದರೆ 'ಕೇರವ್ವನ ಹಾವಳಿಯೆದ್ದಿದೆ. ಇರುಳಲ್ಲಿ ಅವರವರ ಹೆಸರುಗೊಂಡು ಕೂಗುವಳು. ಓ, ಎಂದರೆ ತೀರಿತು. ಮೈಯಲ್ಲ ಕೇರುಬಿದ್ದು ಮರುದಿನವೇ ಸಾಯುತ್ತಾರೆ ! ಆದರೆ ಹಣೆಯ ಮೇಲೆ ಕೇರಿನ ಗುರುತು ಮಾಡಿಕೊಂಡವರನ್ನು ಅವಳು ಬಾಧಿಸುವದಿಲ್ಲ !' ನೋಡಿರಿ ಈ ದಿವ್ಯ ವಿಚಾರ ! ಎಲ್ಲಿ ಯಾರು ಸತ್ತರೆಂದು ಕೇಳುವವರೇ ಇಲ್ಲ ! ಹುಚ್ಚು ತಿಳಿಯಿತು, ಅಂಜಿಕೆ ತಾಯೆನ್ನುವದೇ. ಕೇರು ಹಾಕಿಕೊಂಡೇ ಎರಡನೆಯ ಕೆಲಸ. ಎರಡನೆಯ ಕೆಲಸವೆಂದರೇನೆನ್ನುವಿರೋ ಮನೆ ಮಾರಿನದಲ್ಲವದು. ಕೇರವ್ವನ ಪ್ರತಾಪವನ್ನು ಸಾರುತ್ತ ಉಳಿದವರಿಗೆ ಕೇರು ಹಾಕಿಸು ವದೇ ಇವರ ಆ ಪವಿತ್ರ ಕರ್ತವ್ಯ ! ಪ್ರತಿಭಾಶಾಲಿಗಳಾದ ಕವೀಂದ್ರ ರವೀಂದ್ರರೂ ಇಂಥದೊಂದು ಸೋಜಿಗವನ್ನು ನೋಡಿ ಅಪ್ರತಿಭರಾಗಿದ್ದರಂತೆ ! ಅದೇನು ಹೇಳೋಣವೇ ? ಹಾಗಾದರೆ ಕೇಳಿರಿ :–

೨) ರವೀಂದ್ರನಾಥರ ಆಶ್ಚರ್ಯ :– "ನಮ್ಮ ಶಾಂತಿನಿಕೇತನದ ಶಾಲೆಯಲ್ಲಿ ಸಂಭವಿಸಿದ ಒಂದು ಸಂಗತಿಯನ್ನು ಹೇಳುವೇನು. ನನ್ನ ವರ್ಗದಲ್ಲಿರುವ ಇಪ್ಪತ್ತು ಹುಡುಗರ ಹಣೆಯ ಮೇಲೂ ಒಮ್ಮೆಗೇ ಕಪ್ಪು ಕಲೆಗಳು ಕಂಡವು. ಕಾರಣವೇನೆಂದು ಕೇಳಿದೆನು. ಹಣೆಯ ಒಂದು ಭಾಗದ ಮೇಲೆ ಕಲೆಯನ್ನು ಮಾಡಿಕೊಳ್ಳುದರಿಂದ ಪಾಪವೆಲ್ಲ ತೊಳೆದು ಹೋಗುವದೆಂದು ಯಾವನೋ ಒಬ್ಬ ಹುಡುಗನು ಹೇಳಿದ್ದ ನೆಂದು ಉತ್ತರ ಬಂದಿತು. ಅದರಂತೆ ಎಲ್ಲರೂ ಒಬ್ಬರ ನೋಡಿ ಒಬ್ಬರು ವಿಚಾರ ಮಾಡದಲೇ ವರ್ತಿಸಿಬಿಟ್ಟರಂತೆ ! ಇದನ್ನು ಕೇಳಿ ಅಳಬೇಕೋ ನಗಬೇಕೋ ನನಗೇನೂ ತಿಳಿಯದು !! ಆರೋಗ್ಯ ಶಾಸ್ತ್ರದ ನಿಯಮಗಳನ್ನು ಪ್ರತ್ಯಕ್ಷ ಪ್ರಯೋಗಗಳಿಂದ ತಿಳಿಸಿ ಗಂಟಲ ಹರಕೊಂಡು ಬೊಬ್ಬಿಟ್ಟರು ಪರಿಣಾಮವಾಗಂವ ದಿಲ್ಲ. ಆದರೆ ಏನೂ ಸಬಲಕಾರಣವಿಲ್ಲದ ಅವಿಚಾರಕ್ಕೆ ಕಣ್ಣು ಮುಚ್ಚಿ ಬಲೆ ಬೀಳುವ ಹುಚ್ಚಾಟಕ್ಕೆ ನಮ್ಮವರಲ್ಲಿ ಕೊರತೆಯೇ ಇಲ್ಲ !!!'

(ವಾಗ್ಭೂಷಣ, ವರ್ಷ ೨೫, ಸಂಚಿಕೆ–೭, ಪುಟ–೧೨೧)

೩) ವಿವೇಕಾನಂದರ ಹೇಳಿಕೆ :– ಗಾಜೀಪುರದ ವಿಖ್ಯಾತ ಯೋಗೀಂದ್ರರಾದ 'ಪವ್ಹಾರೀ ಬಾಬಾ' ಎಂಬವರು ನನಗೆ ಪರಮಹಂಸರ ಅನಂತ ಆಚಾರ್ಯಸ್ಥಾನ ದಲ್ಲಿದ್ದರು. ಇವರಿಗೊಮ್ಮೆ ನಾನು ಮೌನವನ್ನೇ ಏಕೆ ವಹಿಸುತ್ತೀರಿ ? ಸದ್ಬೋಧ ದಿಂದ ಲೋಕಕಲ್ಯಾಣವನ್ನು ಏಕೆ ಮಾಡಬಾರದು ? ಎಂದು ಕೇಳಲು ಗಹಗಹಿಸಿ ನಕ್ಕು, ಕಥೆಯನ್ನು ಹೇಳಿದರು. ಅದೇನಂದರೆ– 'ಒಬ್ಬ ಅವಿವೇಕಿಯ ಅವಿವೇಕಕ್ಕೆ

ಶಾಸನರೂಪವಾಗಿ ಯಾವನೋ ಒಬ್ಬನು ಅವನ ಮೂಗು ಕೊಯ್ದನು. ಜನರಲ್ಲಿ ಮೋರೆ ತೋರಿಸಲಾರದೆ ಅವನು ಅಡವೀ ಸೇರಿ ಒಂಟಿಯಾಗಿದ್ದನು. ಆದರೆ ನರಪಶುಗಳು ಹಿಂಡುಗಟ್ಟಿಕೊಂಡು ಬಂದು ಅವನನ್ನು ಮೂಕೊರತೆ ಸಾಧುವೆಂದು ಸೇವಿಸ ಹತ್ತಿದವು! ದಿನ ದಿನಕ್ಕೂ ಅವನ ಅಂತಸ್ತು ಏರುತ್ತ ಬಂತು! ಕೊನೆಗೊಮ್ಮೆ ಅವರು ಅವನಿಗೆ ಉಪದೇಶಕೊಡೆಂದು ಒತ್ತಾಯ ಪಡಿಸಹತ್ತಿದರು. ಕಡೆಗೆ ದುರ್ಧರ ಪ್ರಸಂಗ ಬರುವದಾಗಿ ಕಾಣಲು, ಅವನು ಒಬ್ಬನಿಗೆ – ನಾಳೆ ಒಂದು ಚೂರಿಯನ್ನು ತೆಗೆದುಕೊಂಡು ಬಂದರೆ ಸರಿಯಾಗಿ ಉಪದೇಶ ಕೊಡುವನೆಂದು ಹೇಳಿದನು. ಅದಕ್ಕವನು ಹಿಗ್ಗಿ ಗುರುವಿನ ಅಪ್ಪಣೆಯಂತೆ ಮರುದಿನ ಚೂರಿಯನ್ನು ತೆಗೆದುಕೊಂಡು ಬಂದನು. ಮೂಕೊರತೆ ಸಾಧುವು ಅವನನ್ನು ಏಕಾಂತದಲ್ಲಿ ಕರೆದೊಯ್ದು ಆ ಚೂರಿಯಿಂದವನ ಮೂಗು ಕೊಯ್ದು, ನನ್ನ ಗುರುವಿನಿಂದ ನಾನು ಪಡೆದುಕೊಂಡಿರುವ ಉಪದೇಶವು ಇದೇ ನೋಡೆಂದು ಗಟ್ಟಿಯಾಗಿ ಗಂಭೀರಭಾವ ದಿಂದ ಹೇಳಿದನು. ಆಗ ಶಿಷ್ಯನು ಉಪಾಯವಿಲ್ಲದೆ ನಿರುತ್ತರನಾಗಿ, ತಾನೂ ತನ್ನ ಗುರುವಿನಿಂದ ಪಡೆದುಕೊಂಡದ್ದನ್ನು ಮುಕ್ತ ಹಸ್ತದಿಂದ ದಾನಮಾಡುತ್ತ ನಡೆದನು! ತುಸುದಿನಗಳಿಗೆ ಮೂಕೊರತೆ ಸಾಧುಗಳದೊಂದು ಸಂಪ್ರದಾಯವೇ ಉಂಟಾಯಿತು! ಏನಯ್ಯಾ! ನನಗೂ ಇಂಥಾದ್ದೊಂದು ಸಂಪ್ರದಾಯದ ಸಂಸ್ಥಾಪಕನಾಗೆನ್ನುತ್ತೀಯಾ?"

(ವಿವೇಕಾನಂದ ಸ್ವಾಮಿಗಳು ಬರೆದ ಪವಹಾರೀ ಬಾಬಾ ಚರಿತ್ರದ ೩ ನೆಯ ಅಧ್ಯಾಯದಲ್ಲಿ)

ಹೀಗೆ ಒಂದೇ, ಎರಡೇ? ಎಷ್ಟು ದೃಷ್ಟಾಂತಗಳು ಬೇಕು? ಮಂದ ವಿಚಾರಿಗಳು ಮುಂದಾಳುಗಳಾಗಿ ಮೆರೆಯುತ್ತಿದ್ದರೆ ನಿರ್ವಿಚಾರಿಗಳ ಹಿಂಡುಗಳು ಹೆಚ್ಚುತ್ತಿರುವುದು ಅನಿವಾರ್ಯ, ನಾವು ಮೂವತ್ಮೂರ್ಕೋಟಿ ಹಿಂದುಗಳೆಂದು ಹೆಮ್ಮೆ ಪಡುತ್ತಿರುವದೆಲ್ಲಾ ಹುರುಳಿಲ್ಲದ ಹೊಟ್ಟೇ ಆಗಿದೆ. ಯಾಕೆಂದರೆ ಆ ಸಂಖ್ಯೆಯು ಇಂಥಿಂಥ ಮಹಾನುಭಾವರಿಂದಲೇ ಪುಷ್ಟವಾಗಿ, ಬರೆಯುವುದಕ್ಕೆ ಭಾರವಾಗಿದೆ. ಪಡುವಣ ನಾಡಿನ ಹಿರಿಯರು ಹೀಗೆನ್ನುವರಂತೆ – "ಹಿಂದುಸ್ಥಾನವು ಬಹು ವಿಸ್ತಾರವಾದ ದೇಶವಾದರೂ ಮನುಷ್ಯವಸತಿಯಿಲ್ಲದೆ ಹಾಳುಸುರಿಯುತ್ತಿರುವುದನ್ನು ನೆನಸಿದರೆ ದುಃಖವಾಗುತ್ತದೆ. ಅಂಥಾ ವಿಶಾಲವಾದ ಭೂಖಂಡದಲ್ಲಿ ನಾಲ್ಕೆಂದರೆ ನಾಲ್ಕೇ ಜನರಿರುವರು! ಗಾಂಧಿ, ಟಾಗೋರ್, ಘೋಷ, ಭೋಸ!!" ಹೀಗೆಂದ ಬಳಿಕ ನಾವೆಲ್ಲಾ ಏನಾದೇವು? ನಾನೇನೋ ಮರಮರ ಹಾರಾಡುವ, ಮರಪಂಡಿತ ಮಾರುತಿಯೇ ಇದ್ದೇನೆ; ನಿಮ್ಮದು ಹೇಳಿರಿ! ನಿರ್ವಿಚಾರ ನಿರ್ಬುದ್ಧಿಗಳಲ್ಲಿ ತಿಳಿಗೇಡಿತನವೇ ನಂದಾದೀಪ! ಅದರ ಬೆಳಕಿನಲ್ಲಿ ಅನೈಕ್ಯವಲ್ಲದೆ ಇನ್ನೇನೂ ಕಂಗೊಳಿಸದು, ಅನೈಕ್ಯಕ್ಕೂ ಅವನತಿಗೂ ಎಷ್ಟು ಅಂತರವಿದ್ದೀತು? ಒಂದು ಸಲ ಭಾವಿಸಿ ನೋಡಬಾರದೇ!

**ಜ. ಕ. ೧೧–೯ ಅಗಸ್ಟ, ೧೯೩೩**

# ಹರಟೆ

---

ನೀಚರಲ್ಲಿಯೇ ನೀಚವಿಚಾರವಿರಬೇಕಾದದ್ದು ನ್ಯಾಯ. ಜಡಬುದ್ಧಿಗಳಿಗೂ ನೀಚರಿಗೂ ಬಹಳ ಹೆಚ್ಚು ಕಡಿಮೆಯೇನೂ ಇಲ್ಲ. ಜಡವಿಚಾರವು ಷ್ಯೆಗಳ್ಳತನವಾಗಿ ಷ್ಯೆದೋರಿದಂತೆ ನೀಚವಿಚಾರವು ಇಂದ್ರಿಯವಾಸನೆ (ಚೈಸಿ)ಯಲ್ಲಿ ಪರಿಣಮಿಸುವದು. ಆದರೂ ಊರುಗೋಲೆಂದರೆ ಇಬ್ಬರಿಗೂ ನೆವನವೊಂದೇ. ತಂಬಾಕು ಸೇದದೆ ಮಲಶುದ್ಧಿಯಾಗದಂತೆ, ಚಹಾ ಕುಡಿಯದೆ ಅನ್ನ ಪಚನವಾಗದಂತೆ, ಗಾಂಜಿ ಸೇದದೆ ಚಿತ್ತ ಸ್ಥಿರವಾಗದಂತೆ ! ಒಂದೊಂದಕ್ಕೂ ಒಂದೊಂದು ನೆವನದ ಕೋಟೆಕಟ್ಟಿ ನಿರಪಾಯವಾಗಿ ಉಳಿದುಕೊಳ್ಳಲೆಳಸುವರು ! ಹೌದು, ಇದು ಸುಳ್ಳಲ್ಲ. ಇದು ಅನ್ನಯುಗ. ಅನ್ನವೆಂದರೆ ಔಷಧಿ. ಅದೇ ಇಂದಿನವರ ಔಷಧಿ. ಆದ್ದರಿಂದ ನಾವು ಹುಟ್ಟಲಿಕ್ಕೂ, ಬದುಕಲಿಕ್ಕೂ, ಸಂಸಾರಮಾಡಲಿಕ್ಕೂ, ಉಳ್ಳಿಕ್ಕೂ, ಉಂಡದ್ದನ್ನು ಅರಗಿಸಲಿಕ್ಕೂ, ನಿದ್ದೆ ಹತ್ತಲಿಕ್ಕೂ, ಎಚ್ಚರಾಗಲಿಕ್ಕೂ, ಒಂದೊಂದಕ್ಕೂ ಒಂದೊಂದು ಔಷಧವು ಬೇಕೇ ಬೇಕು ! ಅದೇ ನಮ್ಮ ಜೀವನ ಸರ್ವಸ್ವ. ಹೀಗೆಂದ ಬಳಿಕ ಅದನ್ನು (ಔಷಧರೂಪೀ ತಂಬಾಕು ಚಾ ಕಾಫಿಗಳನ್ನೂ) ವಂದಿಸಲೇ ಬೇಕಲ್ಲವೆ ? ಯಾಕೆಂದರೆ ಇದು ಯುಗಧರ್ಮ.

ಧರ್ಮಕರ್ಮಗಳೆಂದರೆ ಇವರ ಪಾಲಿಗೆ ಕಿಚ್ಚಿನಕೊಂಡ; ವಿಧಿ ನಿಷೇಧಗಳು ಕಲಕುರೊಜ್ಜಿನ ಹೊಂಡ. ಇವೆಲ್ಲಾ ಹುರುಳಿಲ್ಲದ ಹಾಳು ರಗಳೆಗಳಂತೆ. ಋಷಿಗಳು ಇವರ ದಿವ್ಯ ದೃಷ್ಟಿಯನ್ನು ಪಡಕೊಳ್ಳದೆ ಕುರುಡರಾಗಿ ಕೊಳ್ಳ ಕೂಡಿದರಲ್ಲವೆ ! ಪಾಪ.

ಗೂಳಿಗಳು ಪೇಟೆಯಲ್ಲಿ ಕಾಳುಕಡಿಗಳಲ್ಲಿ ಬಾಯಿಹಾಕುತ್ತ ಹೋಗುವಂತೆ, ಸಿಕ್ಕ ಅಂಗಡಿಯಲ್ಲಿ ಫರಾಳ ತಿಂದು, ಹೋಟೇಲಿನಲ್ಲಿ ಬಿಸಿನೀರು ಕುಡಿದು, ಸಿಕ್ಕ ನಳದಲ್ಲಿ ಬಾಯ್ದೊಳೆಯುತ್ತ ಬಾಯಲ್ಲಿ ಬೆಂಕಿ ಹಿಡಕೊಂಡು ಗದಗ–ಹೊಟಗಿ ಬಂಡಿಯಂತೆ ಜೋತಾಡುತ್ತ ನಡೆಯುವದೇ ಇವರ ದೇವಲೀಲೆ. ಈ ರೈಲು ನಿಂತಲ್ಲಿಯೆ ಸ್ಟೇಶನ್ನು. ಅಲ್ಲಲ್ಲಿ ಇಂಥ ಅನೇಕ ರೈಲುಗಳು ಕೂಡಿ ಜಂಗ್ಶನ್ನಾಗುವುದೂ ಉಂಟು. ಇವರಿಗೆ ಮನೆಯೊಳಗಿನ ಊಟ ಉಡಿಗೆಗಳಿಂದ ಮನದಣಿಯುವದಿಲ್ಲ. ಎಲ್ಲಾ

ಹೊರಗೇ ಆಗಬೇಕು. ಕುಟುಂಬ ಸಂಬಂಧವೂ ಕೂಡ ಇವರಿಗೆ ಅಷ್ಟಕಷ್ಟೆ. ಮನೆಗಿಂತ ಹೊರಗೇ ಹೆಚ್ಚು ಪ್ರಾಶಸ್ತ್ಯ; ಧನ್ಯ ! ಧನ್ಯ !

ಕೆಳಗಿನ ಅಂತಸ್ತಿನಲ್ಲಿದ್ದವರಿಗೆ ಕೆಳಗಿನದಷ್ಟೇ ಸತ್ಯ. ಮೇಲಿನ ಸುದ್ದಿ ಇವರಿಗೇನು ? ತಮ್ಮ ನೀಚಕರ್ಮಗಳನ್ನು ಬಿಟ್ಟರೆ ಇವರಿಗೆ ಇನ್ನಾವ ಸತ್ಕರ್ಮದಲ್ಲಿಯೂ ಶ್ರದ್ಧೆಯಿಲ್ಲ. ಇವರು ತಾವೂ ಮೇಲಕ್ಕೇಳುವದಿಲ್ಲ. ಇನ್ನೊಬ್ಬರಿಗೆ ಏಳಗೊಡುವದಿಲ್ಲ. ಇಂಥ ಬಿದ್ದ ಬೀಳಕನೊಬ್ಬನಿಗೂ. ಅದೇ ಏಳುತ್ತಿದ್ದ ಏಳಕನೊಬ್ಬನಿಗೂ ಆದ ಗೋಜಿನ ಪ್ರಸಂಗವೊಂದು ನೆನಪಿಗೆ ಬಂತು. ಹೇಳೋಣವೆ ?

ಬೀಳಪ್ಪ– "ಏನಯ್ಯಾ ! ಉಂಡುಂಟ್ಟು ಸುಖದಿಂದ ಕಾಲಕಳೆಯುವದನ್ನು ಬಿಟ್ಟು, ಕೈಲಾಗದ ನಾಯಿ ಮೈಯೆಲ್ಲಾ ಹರಕೊಂಡಂತೆ ಧರ್ಮಕರ್ಮವೆಂದು ಗೋಳಿಟ್ಟು, ತೊಂದರೆಪಡುವದನ್ನು ಯಾರು ಹೇಳಿದ್ದಾರು ?"

ಬಾಳಪ್ಪ– "ಯಾರಿಗ್ಯಾರೂ ಹೇಳಿಲ್ಲವಪ್ಪಾ, ಸುಖಕ್ಕಾಗಿ ಹರಿದಾಡುವ ಜೀವವು ಸುಖಕ್ಕಾಗಿಯೇ ಧರ್ಮಕರ್ಮಗಳನ್ನು ಹುಡುಕಿಕೊಂಡಿದೆ. ಒಬ್ಬನಿಗೆ ಸುಖಕೊಡುವ ವಸ್ತುವು ಇನ್ನೊಬ್ಬನಿಗೂ ಸುಖವನ್ನು ಕೊಟ್ಟೀತೆಂಬ ನಿಯಮವಿಲ್ಲ. ಒಂದು ಕಾಲದಲ್ಲಿ ಸುಖಕೊಡುವ ವಸ್ತು ಇನ್ನೊಂದು ಕಾಲದಲ್ಲಿಯೂ ಸುಖವನ್ನೇ ಕೊಟ್ಟೀತೆಂಬ ನಿಯಮವಿಲ್ಲ. ಒಂದು ನಾಡಿನ ಸುಖವಸ್ತುವು ಇನ್ನೊಂದು ನಾಡಿನಲ್ಲಿಯೂ ಸುಖದಾಯಕವಾಗಿಯೇ ಇದ್ದೀತೆಂಬುದೂ ಭರವಸವಿಲ್ಲ. ಆದ್ದರಿಂದ ಸ್ಥಿರ ಸುಖಕ್ಕಾಗಿ ಪಡಕೊಂಡ ಧರ್ಮಕರ್ಮಗಳು ಸರ್ವತ್ರ ಸ್ವಾಭಾವಿಕವಾಗಿವೆ. ಯಾರು ಯಾರಿಗೂ ಹೇಳಿಕೊಡಬೇಕಾದ ಅಗತ್ಯವೇನೂ ಇಲ್ಲ. ಹಸಿದವನಿಗ ಉಣ್ಣುವುದನ್ನು ಯಾರೇನೂ ಕಲಿಸಿಕೊಡಬೇಕು?"

ಬೀಳಪ್ಪ– ಹಾಗಾದರೆ ನಿಮ್ಮ ಧರ್ಮಸಾಧನವೆಂಬುದೂ ಒಂದು ಸ್ವಾರ್ಥ ಸಾಧನವೇ ಸರಿ. ಸ್ವಾರ್ಥವನ್ನು ಬಿಟ್ಟಲ್ಲದೆ ಪರಮಾರ್ಥ ಸಾಧಿಸುವದಿಲ್ಲವೆನ್ನುವ ಮಾತಿಗೆ ಗತಿಯೇನು ? ನಮ್ಮಂತೆ ನೀವೂ ಸ್ವಾರ್ಥಿಗಳೇ ಸರಿ !

ಬಾಳಪ್ಪ– ಸೈ ಸೈ ! ತೀರ ನಿಜವಾದ ಮಾತು. ಧರ್ಮವೆಂಬುದು ಅತೀವ ಸ್ವಾರ್ಥ. ಧರ್ಮಶಾಸ್ತ್ರದ ಪೂರ್ವ ಭಾಗವಾದ ನೀತಿಯು, ತನ್ನೊಡನೆ ಇನ್ನಾರೂ ಅನೀತಿಯಿಂದ ನಡೆಯಬಾರದೆಂಬುದರ ಸಲುವಾಗಿಯೇ ಆಚರಿಸಲ್ಪಡುವದು. ತಾನು ಅನ್ಯಾಯ ಮಾಡದಿರುವುದು, ಉಳಿದವರು ತನಗೆ ಅನ್ಯಾಯ ಮಾಡದಿರುವುದಕ್ಕಾಗಿಯೇ. ತಾನು ಹಿಂಸಿಸದಿರುವುದು, ತನಗೆ ಹಿಂಸೆಯಾಗಬಾರದೆಂದೇ. ತನ್ನ ಬಾಳುವೆ ನಿರ್ವಿಘ್ನವಾಗಿ ಸಾಗುವದಕ್ಕಾಗಿಯೇ ನೀತಿ ನ್ಯಾಯಂಗಳ ಅವಶ್ಯಕತೆ. ಬಾಳುವೆ ಸರಿಯಾಗಿ ಸಾಗದಿದ್ದರೆ ಪರಮಾತ್ಮನನ್ನು ಪಡಕೊಳ್ಳುವದಕ್ಕೆ ಅನುವಾಗುವದು. ಆದಾದರೂ ಯಾತಕ್ಕೆನ್ನುವಿರೋ ? ತಿರುಗಿ ನೆಟ್ಟಗೆ ಬಾಳುವದಕ್ಕಾಗಿಯೇ.

ಸ್ವಾರ್ಥ, ಅಹಂಕಾರ, ಮಮತೆ ಇವೇ ನೋಡಪ್ಪಾ ಧಾರ್ಮಿಕರ ಇಡಿಗಂಟು. ಇಷ್ಟೇ ಆದರೆ ನೀನು ಹೇಳುವುದು ಹಸಕು ಹಮ್ಮು. ಇದು ಹಣ್ಣಾದ ಹಮ್ಮು. ಏನಾದರೂ ಹಮ್ಮೇ ಸರಿ.

ಬೀಳಪ್ಪ– ಪರಮಾತ್ಮನನ್ನು ಪಡಕೊಂಡು ನೆಟ್ಟಗೆ ಬಾಳುವುದೆಂದೆನ್ನುವುದರ ಅರ್ಥವೇನು ? ಪರಮಾತ್ಮನೆಂದರೆ ಏನದು ? ನೀರ ಮೇಲಿನ ಗುರುಳಿಯಂತೆ ಮೂಡುತ್ತಲೂ ಒಡೆಯುತ್ತಲೂ ಸಾಗುವುದು ಜಗಕ್ಕೆ ಸ್ವಾಭಾವಿಕವಾಗಿದೆ. ಧರ್ಮ ಕರ್ಮಗಳು ಸರ್ವತ್ರ ಸ್ವಾಭಾವಿಕವಾಗಿರುವವೆಂದು ನೀವೆನ್ನುವಂತೆ ಈ ವಿಶ್ವವ್ಯಾಪಾರವೂ ಸದಾ ಸ್ವಾಭಾವಿಕವಾಗಿದೆ. ಇದಕ್ಕೆ ನಿಮ್ಮ ಪರಮಾತ್ಮನ ದೊಡ್ಡಿಸ್ತನವೇತಕ್ಕೆ ಬೇಕು ?

ಬಾಳಪ್ಪ– ಸರಿಯಾಗಿದೆ. ನಿನ್ನ ಪ್ರಶ್ನೆಯಲ್ಲಿಯೇ ಉತ್ತರವಿದೆ. ನೋಡಪ್ಪಾ, ನೀನೆನ್ನುವಂತೆ ನಾನೂ ಒಪ್ಪುವೆ. ವಿಶ್ವವ್ಯಾಪಾರವು ನಿಜವಾಗಿಯೂ ನೀರಮೇಲಿನ ಗುರುಳಿಯಂತೆಯೇ ಸರಿ. ಆದರೆ ನೀರ ಮೇಲೆ ಗುರುಳೀ ಎದ್ದೊಡೆಯುವದೆಂದು ಹೇಳುವಿಯಲ್ಲ. ಇದು ತಪ್ಪು. ಹಾಗಿದ್ದರೆ ಮನೆಯಲ್ಲಿ ತಂದಿಟ್ಟ ಪಾತ್ರೆಗಳಲ್ಲೇಕೆ ಗುರುಳಿಗಳೆದ್ದೊಡೆಯಲಾರವು ? ಗಾಳಿ ಒಳಗೆ ಸೇರಿ ತೆರೆಯನ್ನೆಬ್ಬಿಸಿ ಗುರುಳಿಯಾಗಿ ಹೊರಬೀಳುತ್ತದೆ. ಅದು ಹಾರಿ ಹೋಗುವಾಗ ಗುರುಳಿ ಒಡೆಯುತ್ತದೆ. ಅಲ್ಲದೆ ಆ ನೀರು ಕೂಡ ಗಾಳಿಯಿಂದಲೇ ಹುಟ್ಟಿತೆಂದು ಭೌತಿಕವಾದಿಗಳೂ ಹೇಳುವರು, ಎಂದ ಬಳಿಕ ಗಾಳಿಯ ಘನತೆಯಲ್ಲಿ ಗಾಳಿಯಿಂದಲೇ ಗುರುಳಿಯೆದ್ದು ಗಾಳಿಯಿಂದಲೇ ಒಡೆಯುವದು. ಇದು ತಾನೇ ಆದ ಹಾಗಾಯಿತು. ಹೀಗೆಯೇ ವಿಶ್ವವ್ಯಾರವೆಲ್ಲ ಪರಮಾತ್ಮನಿಂದಲೇ ಆಗುತ್ತಿದೆಯೆಂಬುದು ನಿರ್ವಿವಾದ !

ಬೀಳಪ್ಪ– ಇಷ್ಟೆಲ್ಲಾ ಬರೇ ಹೇಳುವವಕ್ಕಷ್ಟೇ ಸರಿ. ಪರಮಾತ್ಮನನ್ನು ನೋಡಿದವರಾರು ? ಇದ್ದ ಬಗ್ಗೆ ಸಾಕ್ಷಿಯಾರು ?

ಬಾಳಪ್ಪ– ಮಾತು ನುಡಿದವರು. ಮಾತುಕೊಟ್ಟವರು. ಇವರೆಲ್ಲಾ ಅವನ ಸಾಕ್ಷಿಗೊಡುವದಕ್ಕೆ ಬಂದವರು. ಅಯ್ಯೋ ! ಈಗ ತಾನೆ ನಿನಗೊಂದು ಮಾತು ಕೇಳುವೆ, ಹೇಳು ನೋಡುಂಪಾ. ಏನೇನೂ ಇಲ್ಲದ ಒಂದು ಶಬ್ದವನ್ನು ಹೇಳು. ಅದು ಬರೇ ಶಬ್ದ ಮಾತ್ರವೇ ಇರಬೇಕು. ಹೇಳಬಹುದೆ? ಎಂದಿಗೂ ಆಗದು. ಅಪ್ಪಾ. ಇಂಥಾದ್ದೊಂದು ಶಬ್ದವೂ ಉಂಟು, ಅದು ಬರೇ ಶಬ್ದ ಮಾತ್ರ ಆಗಿದೆ. ನಿನಗೆ ಗೊತ್ತಿರದಿದ್ದರೆ ಕೇಳು. "ಇಲ್ಲ" ಇದೊಂದು ಬರೇ ಶಬ್ದ. ಇಲ್ಲವೆಂಬುಂದೇ ನಾದರೂ ಜಗದಲ್ಲಿ ಉಂಟೇ ? "ಇಲ್ಲ' ವೇ ಇಲ್ಲ. ಉಳ್ಳದು ಉಂಟೇ ಉಂಟು.

ಬೀಳಪ್ಪ– ಇದ್ದರೆ ನಮಗೂ ತೋರಿಸಿರಿ, ನಾವೂ ನಿಮ್ಮಂತೆ ಧರ್ಮಕರ್ಮ ಗಳನ್ನು ತೊಡಕಿಸಿಕೊಂಡೇವು.

ಬಾಳಪ್ಪ– ಅಯ್ಯೊ ! ನಿನಗೆ ತೊಡಕಿಸುವುದಕ್ಕೆ ನಾನೇನೂ ಗುತ್ತಿಗೆ ಹಿಡಿದು ಬಂದಿಲ್ಲ. ವಿಳ್ಯವನ್ನೆತ್ತಿಯೂ ಬಂದಿಲ್ಲ, ನನ್ನಂತೆಯೇ ನೀನೂ ಒಮ್ಮೆ ನಿನಗಾಗಿಯೇ ತೊಡಕಿಸಿಕೊಳ್ಳುವೆಯೆಂಬುದು ನನಗೆ ಗೊತ್ತುಂಟು. ಇನ್ನೊಬ್ಬ ತೊಡಕಿಸಿದರೆ ಯಾಕೆ ತೊಡಕೀತಪ್ಪಾ ! ಹಿಂದೆ ಎಂದೊ ಯಾರೊ ಯಾರಿಗೊ ಧರ್ಮಕರ್ಮಗಳನ್ನು ತೊಡಕಿಸಿದವರೇನೋ ಉಂಟು. ಆದರೆ ಬಿಟ್ಟೀ ಹಿಡಿದು ತೊಡಕಿಸಿದವರಿಲ್ಲ. ಪಡೆದವರೇನೋ ನೀಡಿ ಒಲಿಸಿದ್ದುಂಟು. ಆದರೆ ತನಗಿಲ್ಲದ ತಿರುಕ ತಂಗಿಗೇನು ನೀಡೀತು ? ನಾನು ನಿನಗೇನು ಕೊಡಬಲ್ಲೆನಪ್ಪಾ ! ಅಲ್ಲದೆ ಇದೊಂದು ತೊಡಕೆನ್ನುವಿ. ಇದು ತೊಡಕಲ್ಲ, ಊರುಗೋಲು, ಇದ್ದರೆ ತೋರಿಸಿರೆನ್ನುತ್ತೀ, ಯಾವುದಿಲ್ಲ ? ವಿದ್ಯೆಯಿಲ್ಲವೆ, ಮರಣವಿಲ್ಲವೆ, ತಾರುಣ್ಯವಿಲ್ಲವೆ ? ಇವುಗಳನ್ನೆಲ್ಲಾ ಒಮ್ಮೆಗೆಯೇ ತೋರಿಸಿಕೊಡಲಾಗುತ್ತದೆಯೇ ? "ಮೊದಲು ವಿದ್ಯೆಯನ್ನು ಕೊಡಿರಿ, ಬಳಿಕ ನಾನೂ ಪಾಟಿ ಪುಸ್ತಕ ಹಿಡಕೊಂಡು ಸಾಲೆಗೆ ಬರುವೆ" ಹೀಗೆಂದರೇನು ? ಪಡಕೊಂಡ ಮೇಲೆ ಎಡತಾಕುವದೆಂದರೇನು ? ಯಾರಾದರೂ ಸತ್ತು ತೋರಿಸಬಲ್ಲರೋ ? ಸತ್ತು ತೋರಿಸಿದರೂ ಆ ಸಾವಿನ ಸವಿ ಸುಖಗಳು ನಿನಗೇನು ತಿಳಿಯಬಲ್ಲವು ? ಸ್ವತಃ ಸತ್ತಲ್ಲದೆ ಸ್ವರ್ಗ ಕಾಣದು. ಇದಿರಲಿ, ಈಗ ನಾನು ಮೂರು ತಿಂಗಳಿಂದಲೂ ತಣ್ಣೀರಿನಲ್ಲಿ ಈಸುತ್ತಿರುವದರಿಂದ ಕಿವಿ ಮಂದಗಟ್ಟಿ ಕೊಂಯ್ ಎಂದು ಕೀಸರಿಟ್ಟಿದೆ. ಆದರೆ ನಿನ್ನ ಕಿವಿಗೂ ಅದನ್ನು ಕೇಳಿಸೇನೆಂದರೆ ಸಾಧ್ಯವೆ ? ಅಲ್ಲದೆ ನಾನೂ ಕೂಡ ಈಗೀಗ ಶಾಲೆಗೆ ಹೋಗುತ್ತಿರುವವನಂತೆ ಇದ್ದೇನೆ ! ತುಂಬಾ ಪಡೆದವರು ಕೊಟ್ಟರೆ ಕೊಡಬಲ್ಲರೋ ಏನೋ ! ಆದರೆ ನಾನೇನು ಕೊಡಬಲ್ಲೆನಪ್ಪಾ?

ಬೀಳಪ್ಪ– ಸ್ವತಃ ಸಾಯದೆ ಸ್ವರ್ಗಕಾಣದೆಂದರೇನಿದು ? ಎಲ್ಲಾ ತನ್ನ ಕೈಯಲ್ಲಿಯೇ ಇದ್ದರೆ ಗುರುವಿನದೇನು ಕಾರಣ ? "ಶ್ರೀ ಗುರು ವಚನೋಪದೇಶವನಾಲಿಸದಾಗಳೆ ನರರಿಗಪುದು ಮುಕ್ತಿ ?" ಎಂದು ನಿಜಗುಣಶಿವಯೋಗಿಗಳು ಹೇಳಿದ್ದು ಸುಳ್ಳೇನು ? ನಮಗೇನೋ ಅಂಥಾ ಸಾಮರ್ಥ್ಯವಿಲ್ಲ. ನಾವು ನಿರ್ಬಲರು ಇನ್ನೊಬ್ಬರಿಗೆ ತೋರಿಸಿಕೊಟ್ಟರೆ ಮಾತ್ರ ಒಪ್ಪುವೆವು. ಅಂತೆಯೇ ಜಗದಲ್ಲಿ "ಗುರು ದೇವೋ ಮಹಾದೇವೋ" ಮುಂತಾದುದಾಗಿ ಖ್ಯಾತಿಯಿದೆ. ನಮಗೆ ಆಯಾಸವಿಲ್ಲದೆ ತೋರಿಸಿಕೊಡುವವರು ಬೇಕು !

ಬಾಳಪ್ಪ– ಹೌದು ಹೌದು ! ಇಂಥವರುಂಟು ! ಇಂಥ ಸ್ವಭಾವವನ್ನೆ ಹಿಂದಿನವರು ಶೂದ್ರವೃತ್ತಿಯೆಂದು ಹೇಳಿರುವರು. ಇಂಥವರ ಪ್ರಾಬಲ್ಯದಿಂದಲೇ ಲೋಕದಲ್ಲಿ ಗುರುಗಳ ಸಂತೆಗಳಾದವು. ಗುರುವೆಂದರೆ ಎಂಥವನಪ್ಪಾ ? ನಿನ್ನ ಶ್ರೀ ನಿಜಗುಣರೇ ಹೇಳಿದ್ದಾರಲ್ಲವೆ ? "ಶ್ರೀ ಗುರು" ಶ್ರೀ ಎಂದರೆ ಸಂಪತ್ತು. ಕೈವಲ್ಯ ಸಂಪತ್ತುಳ್ಳವ ಗುರುವೆಂದು ಹೇಳಿರುವರಪ್ಪಾ, ಜಾತಿ ಗುರುಗಳನ್ನು ಹೇಳಿಲ್ಲ. ಅಂಥಾ "ಪಡೆದಪ್ಪ"ನವರು ನಿನಗೆಲ್ಲಿ ಸಿಕ್ಕಬೇಕು ? ಮಂತ್ರವನ್ನು ಕಿವಿಯಲ್ಲೂದುವ ಮಂತ್ರ

ಗುರುಗಳು ಸಿಗಬಲ್ಲರು. ಕ್ರಿಯೆಯನ್ನು ಹೇಳಿಕೊಡುವ ಕ್ರಿಯಾಗುರುಗಳು ಸಿಗಬಲ್ಲರು. ಶಾಸ್ತ್ರಗಳನ್ನು ತಿಳಿಸಿ ಹೇಳುವ ಶಿಕ್ಷಾಗುರುಗಳು ಸಿಗಬಲ್ಲರು. ಆದರೆ ದೀಪ ಹಚ್ಚಿ ದೀಪಗೊಳಿಸುವ ದೀಕ್ಷಾಗುರುಗಳು ಎಲ್ಲಿ ಸಿಗುವರು ? ಗುರುವೆಂದರೆ ಎಂಥವನೆಂಬುದನ್ನರಿಯದೆ ನಿಮ್ಮಂಥವರಿಂದಲೇ ಗುರು ಪೀಳಿಗೆ ಬೆಳೆದು ಜಾತಿಗತವಾಗಿ ಹೋಯಿತು. ಅಲ್ಲದೆ ಸಿಕ್ಕ ಸಿಕ್ಕ ಕಡೆಗೆ ತಿರುಗಾಡಿ ಉಪದೇಶ ಕೊಡುವ ಗುರುಗಳೂ ತುಂಬಿ ತುಳುಕುತ್ತಿರುವರು. ಗುರುತನವೆಂಬುದೇನಪ್ಪಾ ? ಅದೊಂದು ದಿವ್ಯಶಕ್ತಿ. ಉಳಿದ ಶಕ್ತಿಗಳಂತೆ ಇದು ಕೂಡ ಎಲ್ಲರಲ್ಲಿಯೂ ಇರಬಲ್ಲುದು. ಒಂದೇ ಜಾತಿಯವರಲ್ಲಿರಲಿಕ್ಕೆ ಅದೇನು ಕರಾರು ನಾಮೆಯನ್ನು ಬರಕೊಟ್ಟು ಬಂದಿದೆಯೆ ? ಜಾತಿಯಲ್ಲಿ ಗುರುಶಕ್ತಿಯನ್ನು ಹಿಡಿದು ಕಟ್ಟಿಹಾಕಿರುವೆವೆಂದು ಉಬ್ಬಿ ಕುಳಿತವರನ್ನು ಅದು ಮೆಟ್ಟಿ ಹಾರಿಹೋಗಿ ಎಷ್ಟೋ ಕಾಲವಾಯಿತು. ಇನ್ನು ಇವರು ಉಬ್ಬುಬ್ಬಿನಲ್ಲಿಯೇ ಇರುವರು. ಉಬ್ಬಿದ್ದು ಒಡೆಯುವವರೂ ಕೂಡ ಸಮೀಪಿಸಿದೆ. ಇದಿರಲಿ; ಗುರುವಿಲ್ಲದೆ ಗತಿಯಿಲ್ಲವೆನ್ನುವಿಯಲ್ಲವೆ ? ಇದೇನೂ ಸುಳ್ಳಲ್ಲ. ಆದರೆ ನೀನು ತಿಳಕೊಂಡಿರುವುದು ಮಾತ್ರ ತಪ್ಪು. ಗುರುವೇ ಗತಿಗೊಡುವನಷ್ಟೇ ? ಹಾಗಾದರೆ ನಿನ್ನ ಗುರುವಿಗ್ಯಾರು ಕೊಟ್ಟರು ? ಅವನ ಗುರು, ಅವನಿಗೆ ? ಅವನ ಗುರು, ಅವನಿಗೆ ? ಮೊದಲಿಗನಿಗೆ ? ಏನು ಹೇಳುವಿಯಪ್ಪಾ ? ಎಲ್ಲರಿಗೂ ಕೊಟ್ಟವನು ಅವನಿಗೂ ಕೊಟ್ಟವನಲ್ಲವೆ ? ಅವನೇ ಎಲ್ಲರ ಗುರು ! ಗುರುವಿನ ಗುರು ಪರಮಗುರು, ಸದ್ಗುರು ಈ ಜಗದ್ಗುರುವಿನಲ್ಲಿ ಗುರುಶಕ್ತಿಯನ್ನು ಪಡೆದ ಗುರುಗಳು ಇಂದೆಷ್ಟು ಜನರಿದ್ದಾರೆ? ಗುರುಗಳ ಸೋಗು ಮಾತ್ರ ಬೇಕಾದಷ್ಟು ಸಿಗಬಹುದು. ಅವರಿಗಿಂತ ಇನ್ನು ನೀನೇ ಮೇಲು ! ಯಾಕೆಂದರೆ, ನೀನು ಒಳಗಿರುವಷ್ಟೇ ಹೊರಗಿದ್ದೀ. ಇದ್ದಷ್ಟಾದರೂ ನಿಜವಾಗಿಯೇ ಇದ್ದೀ. ಆದರೆ ನೀನು ಹೇಳುವ ಗುರುಗಳಿಗೆ ಇಷ್ಟು ಭಾಗ್ಯವೂ ಕೂಡ ಇಲ್ಲ. ಅವರು ಒಳಗಿದ್ದ ವಿಧವೇ ಬೇರೆ, ಹೊರಗೆ ತೋರಿಸುವ ಸೋಗೆ ಬೇರೆ. ಇಂಥ ಡಾಂಭಿಕರಿಂದ ನಿನಗೆ ಏನಾಗಬೇಕು ? "ನಂಬದ ಡಂಬಕರನೇನೆಂಬನಯ್ಯಾ" 'ನಂಬಿ ಭಜಿಸುತಿರ್ಪವರಿಗೆ ಇಂಬು ನೀನೇ ಬಸವಲಿಂಗ !" "ಪಾಪಿಗಳ ನರಕಕ್ಕಿಂತ ಡಾಂಭಿಕರ ನರಕವು ತೀರ ತಳಕ್ಕೆ" (ಪವಿತ್ರ ಕುರಾಣ-ಸೂರತುನ್ನಿಸಾ-೧೪೫) "ಅಪ್ಪಾ, ಮಸ್ತಕದೊಳಗಿನ ಮಹಾಬೆಳಗ ತಂದು ಇಷ್ಟಲಿಂಗದಲ್ಲಿರಿಸಿದನೆನ್ನ ಗುರುಮೂರ್ತಿ" ಯೆಂದು ಮಹಾನುಭಾವರಾದ ಬಸವಣ್ಣನವರು ಕೊಂಡಾಡಿದಂಥ ಗುರುಮೂರ್ತಿಗಳು ನಿನಗೆಲ್ಲಿ ಸಿಕ್ಕಾರು ? ಅವನ ಒಲಿಮೆಯಾಗುವದಕ್ಕೆ ಅವನವರ ಒಲಿಮೆ ಬೇಕೆಂಬುದೇನೋ ನಿಜ, ಆದರೆ ಅದೂ ಕೂಡ ಅವನು ಒಲಿದಲ್ಲದೆ ಇಲ್ಲ. ಅಂತೆಯೇ ಇಂದಿನ ಯುಗಾವತಾರವು ಕಿವಿಯಲ್ಲಿ ಕೂಗುತ್ತಿದ್ದುದೇನೆಂದರೆ "ನಿನಗೀಗ ಅಗತ್ಯವಾಗಿ ಬೇಕಾದದ್ದು ಮೂರೆಂದರೆ ಮೂರೇ ! ಶಾಸ್ತ್ರ, ನಿಷ್ಠೆ, ಗುರು ಅಲ್ಲವೆ ? ಇವುಗಳಲ್ಲಿ ಶಾಸ್ತ್ರವಾದರೋ ನಿನ್ನ ಇದಿರಿಗೇ ಇದೆ, ಅದಕ್ಕೆ ಕೊರತೆಯೇ ಇಲ್ಲ. ನಿಷ್ಠೆಯನ್ನು ಹೊರಗೆಲ್ಲಿಯೂ ಹುಡುಕಬೇಕಾಗಿಲ್ಲ, ನಿನ್ನಲ್ಲಿಯೇ ಇದೆ ? ಇನ್ನೇನು ?

ಗುರುವಲ್ಲವೇ ? ಸ್ವಯಂ ಭಗವಾನ್ ! ಜಗದ್ಗುರುವು ನಿನ್ನ ಸಲುವಾಗಿ ವರದ ಹಸ್ತವನ್ನು ಶಿರದ ಮೇಲೆ ಹಿಡಿದಿರುವನು ! ಹೂಂ ಏಳು !"

—(ಗುರು ಅರವಿಂದರ 'ಯೋಗದ ಗೊತ್ತು ಗುರಿಗಳು')

ಇದೆಲ್ಲಾ ಒತ್ತಟ್ಟಿಗೆ ಇರಲಿ ಬಿಡು. ಅಪ್ಪಾ, ಒಬ್ಬೊಬ್ಬನೂ ಒಂದೊಂದು ಧರ್ಮದವನೆಂದು ಹೇಳಿಕೊಂಡು ಹೆಮ್ಮೆ ಪಡುತ್ತಿದ್ದಾನೆ. ನಾವಿಕ ಮಗನಿಗೆ ಹುಟ್ಟು ಹೋಡೆದು ನೀರು ಕಡಿಯುವ ಕಲೆಯೇ ಗೊತ್ತಿಲ್ಲದಿದ್ದರೆ ಅವನು ನಾವಿಕ ನೆಂದು ಹೇಳಿಕೊಂಡು ಹೆಮ್ಮೆ ಪಡುವದರಲ್ಲಿ ಏನು ಹುರುಳಿದೆ ? ಧರ್ಮವನ್ನು ಬದಿ ಗೊತ್ತಿ ಧಾರ್ಮಿಕನೆಂದು ಹೆಮ್ಮೆ ಪಡುವ ಡಂಬಕರು ಈಗೇನು ಮಾಡಬೇಕು ? ತಿಳಿಯಿತೇ ? ನೋಡಪ್ಪಾ ! ಜಗದ ಗೋಳಾಟವೆಲ್ಲಾ ನಿಂತು ಸುಖಶಾಂತಿಗಳುಂಟಾ ಗುವುದು ಇನ್ನಾವುದರಿಂದಲೂ ಶಕ್ಯವಿಲ್ಲ. ಧರ್ಮದ ನೆಲೆಯು ಎಷ್ಟೆಷ್ಟು ಸನಿಯಾಗು ವದೋ ಅಷ್ಟಷ್ಟು ಜಗದ ಕಲ್ಯಾಣವಾಗುವುದು. ಇದಿಲ್ಲದೆ ಇಂದು ಧರ್ಮದ ಹೆಸರಿನಿಂದ ನಡೆಯುತ್ತಿರುವ ಅನಾಹುತಗಳು ಅನಿವಾರ್ಯ. ಅಪ್ಪಾ, ನೀನೆನ್ನು ವಂತೆ ಸುಖಬೇಕಾದರೆ ಈಗೇನು ಮಾಡಬೇಕು ? ಇಂಥಾದೊಂದು ಧರ್ಮದವರು ನಾವೆಂದು ಹೇಳಿಕೊಳ್ಳುವವರೆಲ್ಲರೂ ತಮ್ಮ ತಮ್ಮ ಧರ್ಮವನ್ನು ತುಂಬಾ ಅನುಸರಿಸ ಬೇಕಾದದ್ದು ಮನುಷ್ಯ ಮಾತ್ರರ ಕರ್ತವ್ಯ ಕರ್ಮವಾಗಿದೆ. ಇಷ್ಟು ಮಾತ್ರ ಹೇಳಬಲ್ಲೆ ನೋಡಪ್ಪಾ.

ಬೀಳಪ್ಪ– ಇರಲಿ ಬಿಡಪ್ಪಾ, ಯಾರು ಹೇಳಿದರೆ ಯಾರು ಕೇಳುವರು? ತಮಗೆ ತಿಳಿದರೆ ತಾವೇ ಮಾಡುವರು. ಯಾರಿಗೆ ಯಾರು ಕೈ ಹಚ್ಚುವರು ? ಮುಂಗಿಲೇ ಹರಿದಿದೆ, ಎಲ್ಲಿಯೇನು ಕೈ ಹಚ್ಚುವದಿದೆ ? ಇನ್ನು ನಾವು ಇದರಲ್ಲಿಯೇ ಹೊರಳಾಡಬೇಕಾಗಿದೆ. ಇದಕ್ಕೆ ಯಾರೇನು ಮಾಡಿಯಾರು ? ಸಾಕು ಬಿಡಿರಿನ್ನು ಇತ್ಯಾದಿ.

ಹೀಗೆ ಜಡರೂ, ನೀಚರೂ ತಮ್ಮ ನೀಚತನವನ್ನೇ ಅಂಟಿಕೊಂಡು ನೆವನದ ರಕ್ಷಾಕವಚದ ಬಲದಿಂದ ಉಳಕೊಳ್ಳುವೆವೆಂದು ಹಿಗ್ಗಿಕೊಂಡಿರುತ್ತಾರೆ.

**ಜ. ಕ. ೧೧–೧೦ ಸಪ್ಟೆಂಬರ, ೧೯೩೩**

## ಜನಜೀವನ

(ನಾಟಕ)

(ಲೇ : ಸಿಂಪಿ ಲಿಂಗಣ್ಣ)

---

ತನ್ನ ವಿಷಯವಾಗಿ ತಾನಾಗಿ ಹೇಳಿಕೊಳ್ಳುವದಕ್ಕೆ ಎಷ್ಟು ನಾಚಿಕೆಯೋ ತನ್ನ ಗೆಳೆಯನ ವಿಷಯ ವಿವರಿಸುವದಕ್ಕೂ ಅಷ್ಟೇ ನಾಚಿಕೆ. ಆದರೆ ಶುಭಶೋಭನ ಹೂಡಿ ನಿಂತಾಗ ಹೇಳಿ ತೀರದೆ ನಿರ್ವಾಹವಿಲ್ಲ.

ಗೆ, ಲಿಂಗಣ್ಣನನ್ನು ನಾನು ಮೊದಲಿನಿಂದ ತುಂಬಾ ಬಲ್ಲೆ. ಈ ಸಸಿಯೂ ಏಳು ವರುಷಗಳ ಹಿಂದೆಯೇ ಸರಸತಿಯ ತೋಟಕ್ಕೆ ಸೇರಿ, ಅಂದಿನಿಂದಲೂ ಭರದಿಂದ ಚಿಗಿಯುತ್ತ ನೆಗೆಯುತ್ತ ಮೂರ್ನಾಲ್ಕು ವರುಷಗಳಲ್ಲಿಯೇ ಹೂ ಬಿಡುವದಕ್ಕೆ ಮೊದಲು ಮಾಡಿ 'ಜಯಕರ್ನಾಟಕ'ದ ಪೇಟೆಯಲ್ಲಿಯೂ 'ನವಕರ್ನಾಟಕ'ದ ಸಂತೆಯಲ್ಲಿಯೂ ಆಗಾಗ ಕನ್ನಡಿಗರಿಗೆ ಕಂಪು ಬೀರದೆ ಇಲ್ಲ. ಪ್ರಕಟವಾದದ್ದು ತುಸುವೆಯಾದರೂ ಅದು ಬೆಳೆಯದಿದ್ದ ಗಳಿಗೆಯಿಲ್ಲ. ಫಲಫಲಿಸುವ ಸಸಿಗೆ ಇದೇ ಲಕ್ಷಣವಲ್ಲವೇ ?

ಇದುವರೆಗೆ ಅವನು ಬರೆದ ಕವಿತೆಗಳೆಷ್ಟೊ, ಪ್ರಬಂಧಗಳೆಷ್ಟೊ, ನಾಟಕಗಳೆಷ್ಟೊ, ಲೇಖನಗಳೆಷ್ಟೊ. ಆದರೂ ಅವೆಲ್ಲ ಗಳಿಗೆಯ ಮಟ್ಟಿಗೆ ನೋಡಿ ನಲಿಯುವ ಎಲೆಗಳೇ, ಮೂಸಿ ಮೋದಿಸುವ ಹೂಗಳೇ, ಇಷ್ಟಕ್ಕೆ ನಿಂತುಬಿಟ್ಟರೆ ಅಂಥ ಸಾಹಿತ್ಯವು ಸಾರ್ಥಕವಲ್ಲ. ಹುಟ್ಟಿದ ಮರವು ಹಸುರಾಗಿ ಕಾಯಾಗುವದಕ್ಕೆ ಮರೆತರೆ ಎಷ್ಟಾದರೂ ನಿಷ್ಫಲವೇ ಸರಿ. ಜನಜೀವನದ ಹಸಿವು ಹಿಂಗಿಸದ ಸಾಹಿತ್ಯವು, ಮದುವೆಯ ಮಂಟಪದಂತೆ ಮೂರು ದಿನದ್ದೇ. ಶ್ರೀಮತಿ ಸರೋಜಿನಿದೇವಿಯವರೂ ದಿವಂಗತ ಚಿತ್ತರಂಜನರೂ ಕವಿತೆಯ ಕುಂಜವನದಲ್ಲೇ ಫಲಕೊಟ್ಟು ಲಾಕ್ಷಣಿಕರಾದದ್ದನ್ನು ಮರೆತರೆ ಸಾಹಿತ್ಯಕರಿಗೆ ಸಾರ್ಥಕತೆಯಿನ್ನೆಲ್ಲಿ ?

ಏಳು ವರುಷದ ಸಾಹಿತ್ಯ ಸಾಧನೆ ಮುಗಿದು, ಈ ಮೂರಾರು ತಿಂಗಳಲ್ಲಿ "ಲಿಂಗಣ್ಣನ ಸಾಹಿತ್ಯವನದ ತರುಣ ತರುವಿಗೆ ಮೂರು ಹಣ್ಣು ಬಿಟ್ಟವೆ" ಅವು ಬುದ್ಧದೇವ (ನಾಟಕ), ಹಳ್ಳಿಯ ಮಹಾತ್ಮ (ಚರಿತ್ರ), ಜನಜೀವನ (ದೃಶ್ಯ).

ಕರುಣದಿಂದ ಕರುಳು ಕರಗುವದು ಇಲ್ಲದಂತಾಗಿ ಜನಜೀವನಕ್ಕೆ ಜೀವವಿಲ್ಲದಂತಾದದ್ದನ್ನು ಕಂಡು ಕರಗಿ, ಶ್ರೀ ಬುದ್ಧದೇವನಿಗೆ ಬೆನ್ನು ಬಿದ್ದಿದ್ದಾನೆ. ಆದರೆ ಈ ಬುದ್ಧದೇವನನ್ನು ಕಾಣುವದಕ್ಕೆ ನಮಗೆ ಇನ್ನೆಷ್ಟು ದಿನಬೇಕೊ ತಿಳಿಯದು. ಆದರೆ ಕುಳಿತಲ್ಲೆ ಕುಳಿತು ಕೈಲಾಸಕ್ಕೆ ಕೈ ಹಚ್ಚಿದ ಹಳ್ಳಿಯ ಮಹಾತ್ಮನನ್ನು ಮಾತ್ರ ತುಸು ದಿನಗಳಲ್ಲಿಯೇ ಸ್ವಾಗತಿಸುವ ಭಾಗ್ಯ ನಮಗೆ ಬರುವದಿದೆ. ಸದ್ಯ ಜೀವನದ ದಿಕ್ಕುಗಾಣದೆ ಬಡಬಡಿಸುವ ಕಾಲದಲ್ಲಿ ಜನಜೀವನದ ಆದರ್ಶವು ರಂಗಭೂಮಿಗೆ ಬಂದದ್ದು ಪ್ರಾಸಂಗಿಕ.

ಹೊಟ್ಟೆಗೆ ಅನ್ನ, ಮೈಗೆ ಬಟ್ಟೆ ಇವು ಎಲ್ಲಕ್ಕೂ ಮೊದಲಿಗೆ ಬೇಕು. ಇಲ್ಲದಿದ್ದರೆ ನಿಲ್ಲುವದಕ್ಕೆ ಬಲವೆಲ್ಲಿಯದು? ಆ ಮೇಲೆ ಮನಸಿಗೆ ಮೋಜು ಬೇಕು. ಅಂಥ ಸಾಹಿತ್ಯ ಸಿಕ್ಕದಿದ್ದರೆ ಜೀವನವೆಂಬುದೊಂದು ಯಮನ ಕೊಂಡವಾಡೆಯೇ ಸರಿ. ಆ ಬಳಿಕ ಬುದ್ಧಿ ಸತ್ಯಕ್ಕೆ ಬಾಯ್ಬಿಡುತ್ತದೆ. ಅಂಥ ಜ್ಞಾನ ಲೋಪವೆಂದದ್ದೇ ಆದರೆ ಆತ್ಮಕ್ಕೆ ಶಾಂತಿಯೆಂಬುದು ಆಕಾಶ ಪುಷ್ಪವೇ. ಆಗ ಜೀವನವೆಂಬುದೊಂದು ನರಕಾಗ್ನಿ. ಸದ್ಯದ ಪ್ರಳಯಕಾಲದಲ್ಲಿ ಯಾವ ಯಾತನೆಗೂ ಕೊರತೆಯಿಲ್ಲ. ಮೈಗೆ ಬಲವಿಲ್ಲ, ಮನಕ್ಕೆ ಮೋಜಿಲ್ಲ. ಆತ್ಮಕ್ಕೆ ಶಾಂತಿಯಿಲ್ಲ. ಬೆಳೆಬಾರದ ಇರುವಾಗ ಬೆಳೆದಷ್ಟಾದರೂ ಉಳಿಯದೆ ಹೋದರೆ. ತಕ್ಕ ಬೆಲೆ ಬಾರದಾದರೆ ಹೊಟ್ಟೆ ಬಟ್ಟೆಗೇನು ಗತಿ? ದೇವರಾಯನ ಕೋಪ, ನರರಾಯನ ತಾಪ ಮುತ್ತಿ ಮುಸುಕಿರುವ ಹೊತ್ತಿನಲ್ಲಿ ಮೂಗಿಗೆ ಬೆರಳಿಟ್ಟು ಮೋಜು ನೋಡುವ ಭಿಕಾರಿ ಲೇಖಕರು ಬೇರೆ ಕಾಸಿಗೆ ಕಾಳಾಗುತ್ತಿದ್ದಾರೆ. ಇಂಥಾ ಬಿಕ್ಕಿ ಬಾಯ್ಬಿಡುವ ಸಂಕಟಸಮಯಕ್ಕೆ ಧರ್ಮದ ಬಿರಂದಾವಳಿಯ ಬುಡುಬುಡಿಕೆ ಬಾರಿಸುತ್ತ ಗುರುಗಳೆಂದೋ, ಮಾರಾಜರೆಂದೋ ಮೂಗು ಮೇಲೆ ಮಾಡಿಕೊಂಡು ಜನರ ಹೊಟ್ಟೆಯ ಮೇಲೆ ಕಾಲುಕೊಟ್ಟು ಜೋರಿನಿಂದ ದುಡ್ಡನ್ನೆತ್ತಿ ಮತಮಾನ್ಯ ಬೆಳೆಸುವ ಅಷ್ಟದರಿದ್ರತನ ಬೇರೆ ಕರಿಮೋರೆ ಕಟ್ಟಿಕೊಂಡು ಬೆನ್ನು ಹತ್ತಿದೆ. ಇಂಥಾ ನಿಬ್ಬಣವು ಬಿಡುವಿಲ್ಲದೆ ನೆರೆದು ನಿಂತಿರುವಾಗ ದಾರಿಮಾಡಿಕೊಂಡು ಮುಂದರಿಯುವ ಬಗೆ ಯಾವುದೋ ತಿಳಿಯದ ಜೀವ ಬೆರಗಾಗುತ್ತದೆ.

ಒಟ್ಟಿಗೆ ನಾಡತುಂಬಾ ಇಷ್ಟೊಂದು ಹಾ ಹಾಕಾರ! ಅದರಲ್ಲಿಯೂ ಪಟ್ಟಣಗಳ ಕಷ್ಟನಷ್ಟಗಳ ಹಾದಿಯೇ ಬೇರೆ; ಹಳ್ಳಿಗಳ ತಾಪತ್ರಯದ ರೀತಿಯೇ ಬೇರೆ. ಪಟ್ಟಣಗಳು ದೇಶದ ಮುಖಗಳು. ಆದರೆ ಹಳ್ಳಿಗಳು ದೇಶದ ಸರ್ವಾಂಗ ವ್ಯಾಪ್ತಿಯಾದ ರಕ್ತಾಣುಗಳು! ಯಾವ ಅಂಗ ಕೊಬ್ಬಿ ಸೊಕ್ಕಿದ್ದರೂ ಈ ನೆತ್ತರವನ್ನು ಹೀರಿ ಹಿಪ್ಪೆ ಮಾಡಿಯೇ ಪಟ್ಟಣಗಳು ತೋರಿಬರುವ ಬಾಹ್ಯಾವಯವಗಳಂತಿರುವದರಿಂದ ದೇಶದ ಮೇಲೆ ಬೀಸುವ ಗಾಳಿಯ ಅರಿವು ಅವುಗಳಿಗಿರುತ್ತದೆ. ಆದರೆ ಆ ಗಾಳಿಯ ಮುಖ್ಯ ಪರಿಣಾಮಗಳೆಲ್ಲಾ ಒಂದೂ ಬಿಡದೆ ಹಳ್ಳಿಗಳಿಗೇ ಅಪ್ಪಳಿಸುವವಾದರೂ ಆ ಹಳ್ಳಿಗಳಿಗೆ ಅದರ ನಿಜವಾದ ಪರಿವೆಯಿರುವದಿಲ್ಲ. ಎಲ್ಲ ತಾಪತಡೆಗಳೂ ಅದಕ್ಕೆ

ಭೂತಾಟಿಕೆಯಂತೆ ಗೂಢವಾಗಿಯೇ ತೋರುವವು. ಯಾವುದರ ನಿಜವಾದ ಕಾರಣವೂ ಹಳ್ಳಿಗೆ ತಿಳಿಯುವಂತಿಲ್ಲ. ಅಂತೇ ಸಮಸ್ತದ ಕಲ್ಪನೆಯು ಅಲ್ಲಿ ಮೂಡು ವಂತಿಲ್ಲ. ತನ್ನ ಪೂರ್ತಿ ತನಗೆ ಗೊತ್ತು. ಆದ್ದರಿಂದ ಹಳ್ಳಿಗಳಿಗೆ ಎಲ್ಲಕ್ಕೂ ಹೆಚ್ಚಿನ ಮಾನವ್ಯದ ಕಲ್ಪನೆ ಮಾಡಿಕೊಡುವದೂ ಕೂಡ ಸುಲಭವಾದೀತಾದರೂ ದೇಶಿಯಂತೆ ಯನ್ನು ತಿಳಿಸಿಕೊಡುವದು ಕಷ್ಟಕರವಾಗಿದೆ. ಅಂತೇ ಅರಿವಿಲ್ಲದ ಹಳ್ಳಿಯ ಹುಂಬ ರಲ್ಲಿ ಠಕ್ಕ ಗುರುಗಳ ಕೈ ಸಾಧಿಸಿದಷ್ಟು ದೇಶ ಸೇವಕರ ಆಟ ಸಾಗುವದಿಲ್ಲ.

ಬಡತನ, ಹುಸಿ, ಹಾದರ, ಹಮ್ಮು, ಕಳವು, ಅಜ್ಞಾನ ಇವೇ ಈಗ ಹಳ್ಳಿಯ ಷಟ್‌ಸಂಪತ್ತಿಗಳು. ಹೊಟ್ಟೆಬಟ್ಟೆಗಳೇ ಜೀವನದ ಮುಖ್ಯಾಂಗಗಳಾಗಿರುವಾಗ ಅನ್ನ ವಸ್ತ್ರಗಳನ್ನು ಹುಟ್ಟಿಸುವದೇ ದೇಶದ ಮುಖ್ಯ ಉದ್ಯೋಗ. ಒಕ್ಕಲುತನ, ನೇಕಾರಿಕೆ ಇವೆರಡು ಬಿಟ್ಟರೆ, ಉಳಿದ ಉದ್ಯೋಗಗಳಲ್ಲಿ ಮನೆಮಾರುಗಳಿಗೆ ಬೇಕಾಗುವ ಸಾಮಾನುಗಳನ್ನು ತಯಾರಿಸುವವರನ್ನು ಬಿಟ್ಟರೆ. ಉಳಿದವರೆಲ್ಲಾ ದಲಾಲರೆ. ದೇಶಕ್ಕೆ ಜೀವಕೊಡುವ ಎರಡು ಮುಖ್ಯವಾದ ಉದ್ಯೋಗಗಳ ಹಣೇ ಬರಹಕ್ಕೆ ಕಲ್ಲು ಬಡಿದದ್ದ ರಿಂದ ಬಡತನಕ್ಕೆ ವತನ ಸಿಕ್ಕಿದೆ. ಒಕ್ಕಲುತನದ ಕುತ್ತನ್ನಂತೂ ಮೇಲೆಯೇ ವಿವರಿಸಿದೆ. ಇನ್ನುಳಿದದ್ದು ವಸ್ತ್ರದ ಉದ್ಯೋಗ. ಅದಂತೂ ರಾಕ್ಷಸನ ಬಾಯಿಂಗೆ ತುತ್ತಾಗಿ ಮಾನವರ ಬಾಯಿಗೆ ಮಣ್ಣು ಹಾಕಿದೆ. ಹತ್ತೀ ಅರಿಯೋದು ಯಂತ್ರ, ಅರೆದ ಅರಳೆಯನ್ನು ನೂಲೋದು ಯಂತ್ರ. ನೂತ ನೂಲನ್ನು ನೇಯ್ಯೋದೂ ಯಂತ್ರ; ಇನ್ನೇನು ? ನೂರು ಮಂದಿ ನೂರು ದಿನಗಳಲ್ಲಿ ಮಾಡುವ ಕೆಲಸವನ್ನು ಮೂರು ಮಂದಿ ಮೂರೇ ತಾಸುಗಳಲ್ಲಿ ಯಂತ್ರ ಮುಖದಿಂದ ಮುಗಿಸುತ್ತಾರೆ. ಉಳಿದ ಬಹುಜನರು ಹೊಟ್ಟೆಗೇನು ಕೇರು ಹಾಕಿಕೊಳ್ಳಬೇಕೋ ? ದಾರಿಯೇನು ? ಅವರು ಬೇರೆ ಏನಾದರೂ ಉದ್ಯೋಗ ಮಾಡಬೇಕೆಂದು ನಿಮ್ಮ ಉತ್ತರವಲ್ಲವೆ ? ಯಾವ ಉದ್ಯೋಗ ಮಾಡಬೇಕು? ಮೊದಲು ತಮ್ಮ ಮನೆತನದ ಕಸಬಾಗಿದ್ದದ್ದನ್ನು ಶರಣು ಹೊಡೆದು, ಇನ್ನೊಬ್ಬರ ಕಸಬುಗಳಿಗೆ ಬೆನ್ನು ಹತ್ತಿ, ಅವರ ಅರ್ಧ ರೊಟ್ಟಿ ಯಲ್ಲಿ ಇವರಿಷ್ಟು ಹೋಗಿ ಸೇರಿ, ಅವರೂ ಇವರೂ ಕೂಡಿಯೇ ಅರಹೊಟ್ಟೆ ಯುಂಡೋ ಉಪವಾಸವಿದ್ದೋ ಬದುಕಿಕೊಳ್ಳಬೇಕು.

ದುಡಿದು ಹೊಟ್ಟೆ ತುಂಬುವ ದಾರಿ ತಪ್ಪಿದರೆ, ಕಸಗೊಂಡು ಹೊಟ್ಟೆ ತುಂಬಿಸಿ ಕೊಳ್ಳುವುದೂ, ಇಸಗೊಂಡು ಹೊಟ್ಟೆ ಹೊರಕೊಳ್ಳುವುದೂ, ಅಂಜಿಸಿ ಬೇಳೆಬೇಯಿಸಿ ಕೊಳ್ಳುವುದೂ ತಾನಾಗಿ ಸುರುವಾಗುವದು. ಕೀಳು ಜನರು ರಾತ್ರಿಯಲ್ಲಿ ಕಳುವು ಮಾಡಿದರೆ, ಮೇಲು ಮಂದಿ ಹಗಲೊತ್ತೇ ಕುತ್ತಿಗೆ ಕೊಯ್ಯುತ್ತಾರೆ. ಅಯ್ಯೋ ಮೊದಲೇ ಅಷ್ಟ ದಾರಿದ್ರ್ಯ, ಮೇಲೆ ಈ ಬೀಳು ಜನಗಳ ಭಿಕ್ಕೆ. ಕೀಳು ಜನಗಳ ಕಳವು, ಮೇಲು ಜನಗಳ ಮೋಸ, ಪುಂಡ ಜನಗಳ ಅಬ್ಬರ, ಇಷ್ಟಾದರೆ ದೇಶಕ್ಕೆ ಎಷ್ಟು ಸುಖ ? !! ಬುಭುಕ್ಷಿತಂ ಕಿಂ ನ ಕರೋತಿ ಪಾಪಮ್ ? ಹೊಟ್ಟೆಯುರಿವವನು ಯಾವ ಪಾಪಕ್ಕೆ ಹೇಸ್ಯಾನು ?

ಸತ್ಯದ ಮೋರೆಗೆ ಮಸಿ ಹಚ್ಚಿ, ಸುಳ್ಳಿನ ಮೇಲೆ ಛತ್ರ ಹಿಡಿದು, ಹೊಟ್ಟೆಹೊರ ಕೊಳ್ಳುವ ನಿಪುಣ ವಕೀಲಿಯು ಜಗದ್ಗುರು ಪಟ್ಟಕ್ಕೆ ಬಂದಂದಿನಿಂದಂತೂ ಸರ್ವರಿಗೂ ಕಚೇರಿಗಳು ನೆರೆಮನೆಯಾಗಿ ಬಿಟ್ಟಿವೆ. ಯಾವ ಕೆಟ್ಟ ಕೆಲಸ ಮಾಡಿದರೂ. ಕಚೇರಿ ಕಂಡ ಬಳಿಕಾದರೂ ವಕೀಲರ ಆಶೀರ್ವಾದದಿಂದ ಉಳಿದುಕೊಳ್ಳುವೆವೆಲ್ಲಾ ! ಎಂಬ ಆತ್ಮವಿಶ್ವಾಸವು ಜನಾಂಗದ ಮೈಯುಂಡು ಹೋಗಿದೆ. ಮೊದಲೇ ಮನುಷ್ಯನ ಮನಸ್ಸು ನೀಚ. ಅದರಲ್ಲೀಗ ದರಿದ್ರಕಾಲ. ಮೇಲೆ ಈ ಬೆಂಬಲ. ಆದ್ದರಿಂದ ಅಜ್ಞಾನಿಗಳಾದ ಹುಂಬರು, ಹೆಂಡ ಕುಡಿದ ಹುಚ್ಚ ಮಂಗನಂತೆ ವ್ಯರ್ಥ ಹಿರಸು ಹಮ್ಮುಗಳಿಗೀಡಾಗಿ, ಖೊಟ್ಟಿ ಕಾಯಕದಲ್ಲಿ ಕುಣಿದು ಸ್ವ–ಪರ ಕುಟುಂಬಗಳನ್ನೆಲ್ಲ ಸ್ವ–ಪರ ಹಸ್ತಗಳಿಂದ ಕಷ್ಟಕ್ಕೆ ಗುರಿ ಮಾಡುತ್ತಾರೆ.

ಮನುಷ್ಯನ ಮನಸ್ಸು ಮೂಲತಃ ಅನೀತಿಯ ಕಡೆಗೆ ಎಳೆಯುವಂಥಾದ್ದು. ಈ ಮನಸ್ಸೆಂಬ ಕುದುರೆಗೆ ಧರ್ಮಬುದ್ಧಿಯೇ ಕಡಿವಾಣ. ವಿವೇಕವು ಎಚ್ಚತ್ತ ವಿನಾ ಮನಸ್ಸು ಸನ್ಮಾರ್ಗದ ಕಡೆಗೆ ತಿರುಗುವದಿಲ್ಲ. ಹಾವಿನ ಬಾಯಲ್ಲಿ ಸಿಕ್ಕ ಕಪ್ಪೆ ನೊಣಗಳನ್ನು ನುಂಗುವದಕ್ಕೆ ಹೊಂಚು ಹಾಕುವಂತೆ, ಅಷ್ಟದಾರಿದ್ರ್ಯದಲ್ಲಿ ಮುಳುಗಿದ್ದರೂ ತಿಂಡಿ ತೀರಿಸಿಕೊಳ್ಳುವ ಹವ್ಯಾಸ ತಪ್ಪುವದಿಲ್ಲ. ಸೆರೆಗುಡುಕರನ್ನು ನೋಡಿರಿ, ಅವರು ಹಣಾ ಹಾಳುಮಾಡುವುದು ಶ್ರೀಮಂತಿಕೆಯ ಬಲದಿಂದಲ್ಲ, ತಲಬಿನ ಬಲದಿಂದ, ವ್ಯಸನದ ತಿಂಡಿಯಿಂದ. ಸದ್ಯಃ ಕಾಲದಲ್ಲಿ ಧರ್ಮಾಚಾರ್ಯರೆಂಬರೆಲ್ಲಾ ಲೂಟಿಗೆ ಮನಸೋತು, ಧರ್ಮಜ್ಞಾನ. ಧರ್ಮಬೋಧನೆಗಳ ಕರ್ತವ್ಯವನ್ನು ಮರೆತು, ಸಾವುಕಾರಿಕೆಗೆ ಮರುಳಾಗಿದ್ದರಿಂದ ದೇಶದಲ್ಲಿ ಧರ್ಮಸಂತಾನವು ಲೋಪವಾಗಿ ಅಧರ್ಮದ ಅಭಿವೃದ್ಧಿಗೆ ಕಾರಣವಾಗಿದೆ. ಮೊದಲೇ ಕಡಿವಾಣವಿಲ್ಲದ ಕತ್ತೆಗಳು, ಮೇಲೆ ದಿನಕ್ಕೊಂದು ಪರಿಯಿಂದ ಮೋಹಪಾಶ ಹಾಕುವ ಮಾಯಾ ಬಾಜಾರಗಳು ಬೇರೆ ಬೆಳೆಯುತ್ತಲೇ ಇವೆ. ಹೀಗಾಗಿ ಹಾದರ, ಚಹಾ, ಫರಾಳ, ಹೆಂಡ ಮುಂತಾದ ಘಾತಕ ವ್ಯಸನಗಳು ಭರದಿಂದ ಬೆಳೆಯುತ್ತಲಿವೆ.

ಇಷ್ಟೆಲ್ಲಾ ಇದ್ದು ಮೇಲೆ ವಿದ್ಯಾವಿಹೀನತೆಯೊಂದು ತಪ್ಪಿಲ್ಲ. ಒಟ್ಟು ಜನರಲ್ಲಿ ಎಷ್ಟೋ ಜನರು ಕಲಿಯದವರೇ. ಉಳಿದ ಅಷ್ಟಿಷ್ಟು ಜನರು ಕಲಿತಿದ್ದರೂ ಇನ್ನೊಬ್ಬರಲ್ಲಿ ಕಾರಕೂನಿಕೆಯನ್ನು ಮಾಡಿ, ಲೆಕ್ಕಾ ಬರೆದು, ಮುತ್ತು ಹೊತ್ತ ಕತ್ತೆಯಂತೆ ಅನ್ಯರ ಲಾಭಕ್ಕೆ ಮೈ ಮಣ್ಣಾಗುವ ಹಣೆಬರಹ ತಪ್ಪಿಲ್ಲ. ಸದ್ಯದ ಶಿಕ್ಷಣ ಕ್ರಮದಿಂದ ಮನುಷ್ಯನು ಅಕ್ಷರವಂತನಾಗುವದಿಷ್ಟೇ ನಿಜ. ಈ ವಿದ್ಯಾಶಕ್ತಿಯ ಯಂತ್ರಗಳು ಇನ್ನೊಬ್ಬರ ಸುಖಸಾಧನಗಳೇ ವಿನಾ, ಸ್ವಸುಖದ ಹಾದಿ ಹಿಡಿಯುವ ಸ್ವಾತಂತ್ರ್ಯ ಬಲವು ಅವುಗಳಿಗಿಲ್ಲ. ಇಂಥ ಪರಪೂಜಕ ಅಕ್ಷರವಂತರು ಇದ್ದೂ ನಿಷ್ಫಲ, ಇರದೆಯೂ ನಿಷ್ಫಲ.

ಇಂತಿದು ಹಳ್ಳಿಗಳ ಹೈರಾಣ; ದೇಶದ ದುರ್ಗತಿ !!! ಇಷ್ಟೆಲ್ಲ ವಿಚಾರಮಾಡಿ ನೋಡಿದರೆ. ದೇಶದ ಕಲ್ಪನೆಯುಳ್ಳ ದೇಶಭಕ್ತರಿಂದ ಸಾಧಿಸಬೇಕಾದ ಕಾರ್ಯವೇ

ಬಹಳವಿದೆ. ದೇಶೀಯತೆಯ ಸ್ವರೂಪ ಜ್ಞಾನವಿಲ್ಲದ ಹಳ್ಳಿಗಳಲ್ಲಿ ಮಾಡಬೇಕಾದ ಕಾರ್ಯವೇ ಬೇರೆ ತರದ್ದಾಗಿದೆ. ಹಳ್ಳಿಗಳಲ್ಲಿ ಕಾಗದಗಳಿಂದಲೂ, ಕೂಗಿಕೊಳ್ಳುವ ವ್ಯಾಖ್ಯಾನಗಳಿಂದಲೂ ಸ್ಥಾಯೀ ಪ್ರಯೋಜನಗಳಾಗುವದಿಲ್ಲ. ಈ ಹಾದಿಯಿಂದ ಹಳ್ಳಿಗಳಲ್ಲಿ ಶ್ರಮಬಟ್ಟು ವ್ಯರ್ಥ. ತಲೆಹಾಕಿ ಹೆಚ್ಚು ಹುಟ್ಟುವಳಿ ತೆಗೆಯುವ ಹಂಚಿಕೆಯನ್ನು ಸಪ್ರಾಯೋಗಿಕವಾಗಿ ಮನಗಾಣಿಸಿಕೊಡುವುದೂ, ಧರ್ಮಬುದ್ಧಿಯನ್ನು ನಡೆನುಡಿಗಳಿಂದ ಎಚ್ಚರಿಸುವುದೂ ಹಳ್ಳಿಯ ಸುಧಾರಣೆಯ ಕೀಲವಾಗಿದೆ. ಹಳ್ಳಿಗಳಲ್ಲಿ ಯಶಸ್ವಿಯಾಗಿ ಕಾರ್ಯಮಾಡುವವರು ಎಂಥವರಿರಬೇಕೆಂದರೆ: (೧) ಆಯಾ ಹಳ್ಳಿಯ ಸ್ವಸ್ಥಳದವನೇ ಇರಬೇಕು. ಅಂದರೆ ಸದಾ ಸಹವಾಸಿಯಾಗಿರಬೇಕು. (೨) ಪ್ರತಿಷ್ಠಿತ ವಂಶದವನಿರಬೇಕು. ಅಂದರೆ ಊರ ಪ್ರಭು, ಗುರು ಪೀಠಾಚಾರ್ಯ, ಶೆಟ್ಟಿ, ಸಾವುಕಾರ, ದೇಸಾಯಿ, ದೇಶಪಾಂಡೆ ಅಥವಾ ಸಾಲೆಯ ಮಾಸ್ತರ– ಇವುಗಳಲ್ಲಿ ಯಾವುದಾದರೊಂದು ಪ್ರತಿಷ್ಠಿತ ವರ್ಗಕ್ಕೆ ಸೇರಿರಲೇ ಬೇಕು. (೩) ಸರ್ವ ಜಾತಿಯವರನ್ನು, ಸರ್ವ ರೀತಿಯವರನ್ನು ಆದರದಿಂದ ಕಾಣುವವನಿರಬೇಕು. ಸರ್ವರನ್ನು ಹಚ್ಚಿಕೊಂಡು ಹೊಂದಿಕೊಂಡು ಹೋಗಬೇಕು. (೪) ಸದಾಚಾರ ಸದ್ವಿಚಾರಗಳ ಪ್ರಭಾವವುಳ್ಳವನಿರಬೇಕು. ಎಂದರೆ ತುಂಬಾ ನೀತಿವಂತನಿರಬೇಕು. ಅಹಂಕಾರವೆಳ್ಳಷ್ಟಿದ್ದರೂ ನಡೆಯದು. ನಿಷ್ಕಪಟ, ನಿಸ್ವಾರ್ಥ, ಕರುಣ, ಸಹಾನುಭೂತಿ ಇವು ಜನಪೂಜೆಯ ಮಂತ್ರಗಳೆಂದು ತಿಳಿದಿರಬೇಕು (೫) ದುರುಳರ ಉಪದ್ರವಗಳಿಗೆ ಪ್ರತಿಕಾರ ಮಾಡುವ ಪೇಚಿಗೆ ಬೀಳದೆ, ಸಹಿಸಿಕೊಳ್ಳುವುದರಲ್ಲೇ ಶೌರ್ಯ ತೋರಿಸಬೇಕು. ಸತ್ಯ, ಸಹನೆ, ನಿರ್ಭಯ ಈ ಮೂರಿಲ್ಲದವನಿಂದ ಏನೂ ಉಪಯೋಗವಿಲ್ಲ. ಸತ್ಯವಿಲ್ಲದವನ ಸಹನವು ಹೊಂಚುಗಾರಿಕೆಯಾಗಿ ಪರಿಣಮಿಸುವದು. ಸಹನವಿಲ್ಲದವನ ಸತ್ಯವು ತಲೆತಿರುಕತನವಾಗುವದು. ನಿರ್ಭಯವಿಲ್ಲದವನ ಸತ್ಯ ಸಹನಗಳು ಹೇಡಿತನವೆಂದು ತೋರುವವು. ಸತ್ಯ ಸಹನಗಳಿಲ್ಲದ ನಿರ್ಭಯವು ಪುಂಡತನವೆಂದು ತೋರುವದು. ಆದ್ದರಿಂದ ಈ ಮೂರು ಗುಣಗಳು ಜೊತೆಯಾಗಿ ಅವನಲ್ಲಿ ತುಂಬಾ ಅಳವಡಬೇಕು. ಅಂದರೇನೇ ಅವನಲ್ಲಿ ಕರ್ತೃತ್ವಶಕ್ತಿ ಸೂಸುವದು. (೬) ಧರ್ಮಜ್ಞಾನವಿರಬೇಕು. (೭) ಸದಾ ಉದ್ಯೋಗಿಯಾಗಿ, ಸದುದ್ಯೋಗದಿಂದ ಥಳಿಸುವವನಿರಬೇಕು. (೮) ಶಕ್ತ್ಯಾನುಸಾರವಾಗಿ ಸ್ವಪರ ಹಸ್ತಗಳಿಂದ ಕಷ್ಟಜೀವಿಗಳಿಗೆ ಸಹಾಯ ಮಾಡುವಷ್ಟು ಉದಾರತನವಿರಬೇಕು. (೯) ದಣಿಯದ ಧೈರ್ಯೋತ್ಸಾಹಗಳಿರಬೇಕು. (೧೦) ಜನಕ್ಕೆ ಸಂಶಯ ಬರದಂತೆ ಒಳಹೊರಗೂ ಒಂದೆ ಆಚರಣೆಯಿರಬೇಕು. (೧೧) ಮಂದಿಗೆ ಹೇಳುವ ಬುದ್ಧಿಯನ್ನು ಮೊದಲು ತಾನೇ ಅನುಸರಿಸಬೇಕು. ತನ್ನ ಯೋಚನೆಯಂತೆ ನಡೆಯುವದಕ್ಕೆ ತನಗೇ ಅಶಕ್ಯವಾದರೆ ಅನ್ಯರಿಗಂತೂ ದೂರತೋಪಾಸ್ತವೇ ಸರಿ. (೧೨) ತನ್ನ ಬುದ್ಧಿವಾದವನ್ನು ತನ್ನ ಮನೆಯವರೂ ಅನುಸರಿಸಿ ಸುಧಾರಣೆ ಹೊಂದುವಂತೆ ಮಾಡಿರಬೇಕು. ಮನೆಯನ್ನು ಸುಧಾರಿಸದೆ ಮಂದಿಗೆ ಬುದ್ಧಿ ಹೇಳಹೊರಟರೆ ಜನದಲ್ಲಿ ನಗೆಗೇಡೆಯೇ ವಿನಾ ಫಲವಿಲ್ಲ.

ಇಂಥ ಗುಣಶಾಲಿಯಿಂದ ಹಳ್ಳಿಯಲ್ಲಿ ಬೇಕಾದ ಸಲಕರಣೆಯಾದೀತು. ಅನ್ಯಥಾ ಮಾರ್ಗವಿಲ್ಲ. ನಾನ್ಯಃ ಪಂಥಾ ವಿದ್ಯತೇಯ ನಾಯ. ಆದರೆ ಇಂಥ ಗುಣ ಅಳವಡುವುದು ಸುಲಭವಲ್ಲ. ಪಟ್ಟಣದ ಗಾಳಿಯನ್ನು ಬುದ್ಧಿ ಪುರಸ್ಸರವಾಗಿ ಅಂಟಿಸಿಕೊಳ್ಳದ್ದರಿಂದ ಸ್ವತಃ ನನಗೇ ದೇಶೀಯತೆಯೂ ಇಲ್ಲ; ಇತ್ತ ಹಳ್ಳಿಯ ಸೇವೆಗೆ ಬೇಕಾದ ಗುಣಗಳೂ ಸರ್ವಾಂಗೀಣವಾಗಿ ಅಳವಟ್ಟಿಲ್ಲ. ಆದ್ದರಿಂದ ಮನೆಯಲ್ಲಿ ಕೂತು, ಮನದಲ್ಲೇ ಏನಾದರೂ ಮಾಡುತ್ತಿದ್ದೇನೆ.

ನನ್ನ ಗೆಳೆಯ ಲಿಂಗಣ್ಣನು ತನ್ನ ನಾಟಕದಲ್ಲಿ ಇವೆಲ್ಲಾ ಮಾರ್ಗಗಳನ್ನು ಮನಗಾಣಿಸಿ ಕೊಟ್ಟಿದ್ದಾನೆ. ಹಳ್ಳಿಗಳಲ್ಲಿ ಈ ನಾಟಕವು ರಂಗಭೂಮಿಯ ಮೇಲೆ ಬಂದರೆ, ಸದ್ಯದ ದುಷ್ಕಾಲದಲ್ಲಿ ಜನಕ್ಕೆ ಎಷ್ಟೋ ಮಟ್ಟಿಗೆ ಮುಂದಿನ ದಾರಿಯ ಕಲ್ಪನೆಯಾಗುವದು.

೧೯೨೯

# ಭಕ್ತಿರಹಸ್ಯ ಅಥವಾ ಶ್ರೀ ಸಿದ್ಧರಾಮೇಶ್ವರ ನಾಟಕವು

(ಲೇ : ಸಿಂಪಿ ಲಿಂಗಣ್ಣ)

---

## ಮುನ್ನುಡಿ

"ಗೆಳೆಯಾ ನನ್ನಂತೆ ನೋಡು, ಅಂಬರೆ ಇದರ ಮರ್ಮ ಹೊಳೆದೀತು"

(ಭಕ್ತಿರಹಸ್ಯ)

ನಾಟಕವು ಇತಿಹಾಸವಲ್ಲ, ಅದು ಕಾವ್ಯ. ಒಂದು ತೋರಿಸಿ ಮತ್ತೊಂದನ್ನು ಕೈಗೆ ಹಚ್ಚುವ ಮಾಟಗಾರ್ತಿಯ ರೀತಿ ಕಾವ್ಯದ್ದು. ಸಿದ್ಧರಾಮನ ಸೋಗು; ಭಕ್ತಿಯ ರಹಸ್ಯ; ಹಿಂದಿನ ಕಥೆ; ಇಂದಿನ ಸ್ಥಿತಿ. ಪುರಾಣದ ಸಿದ್ಧರಾಮನು ಪುರಾಣ ಕಾಲಕ್ಕೆ ಅನುಗುಣನಾಗಿದ್ದರೆ, ಇಂದಿನ ನಾಟಕದ ಸಿದ್ಧರಾಮನು ಸದ್ಯದ ಕಾಲಕ್ಕೆ ಅನುರೂಪನು.

ಇವನು ಕೋಣೆಯಲ್ಲಿ ಕುಳಿತು ಹರಕು ಎಲೆ, ಮುರುಕು ಹೂವುಗಳಿಂದ ಪೂಜಿಸುವ ಪ್ರಪಂಚಿಯಲ್ಲ. ಕೋಟೆಯಿಲ್ಲದ ರಾಜಧಾನಿಯಲ್ಲಿ ಲೆಕ್ಕವಿಲ್ಲದ ಭಾಂಡಾರ ವನ್ನು ಮುಟ್ಟಿ ಮಾಸದ ಮುನ್ನ ಉಂಡು ಉಸುರುವ ಸವಿಗಾರನು. ಇಂದಿನವರಿಗೆ ಈ ಕಣ್ಣು ಮೂಡಬೇಕು, ಭಕ್ತಿಯ ಬಾಗಿಲು ಆಗ ತೆರೆದೀತು. ಮುತ್ತಿನಂತ ಗಾಳಿ ಒಳಗೆ ಬಂದೀತು. ಈ ಜೀವನ ಬಾರದವನ ಭಕ್ತಿ, ನೀರು ಬೀಳದ ಬಾವಿ.

ಮಯೂರನ ರೂಪ ಮಯೂರಿಗೆ ಗೊತ್ತು. ಬೇಡನೇನು ಬಲ್ಲ. ಬೇಡನಿ ಗೇನು ಮೊದಲೇ ಬೇಡ. ಬೇಡದೇ ಸಿಕ್ಕೀತೇ, ನೋಡದೆ ಕಂಡೀತೇ ? ಕಾಮಿಗಿಂತ ಕಾಮಿಯಾಗಿ ಸೃಷ್ಟಿಯ ಸವಿಯನ್ನು ಉಣಬಲ್ಲರೆ ಅವ ಸವಿಗಾರ. ಬದಲಿಗೆ ಬಡ ಕೊಳ್ಳುವ ಕಂಗಾಲ ಅವನೇನು ಬಲ್ಲ !

ಅತ್ತಾಲಿಂದ ಬಂದೇವಮ್ಮಾ ।<br>
ಮುತ್ತಿನ ಡೇರೆ ಹೊಡದೇವಮ್ಮಾ ।<br>
ಪಾಪಿ ಕಣ್ಣಿಗೆ ಬಿದ್ದೇವಮ್ಮಾ ।<br>
ಪರದೇಶಾಗೀ ಹೋದೇವಮ್ಮಾ ॥ (ಮಕ್ಕಳ ಒಗಟು)

ಎಂದು ಮೆಲ್ಲಗೆ ಇಂಥವರಿಗಾಗಿ ಅಳುತ್ತದೆ.

"ಅಡವಿ ದೇವರ ಅರಮನೆ. ಅಲ್ಲಿಯು ಗಿರಿದರಿಗಳಲ್ಲಿ ಅವನು ಕೂಸಾಗಿ ಅಡಗಿದನು. ಅವನ ಗಾಳಿಗೊಳಲಿನ ದನಿಯು ಅಲ್ಲಿ ಝೇಂಕರಿಸುತ್ತದೆ. ತರಗೆಲೆಗಳು ತಾಳು ಬಾರಿಸುವವು. ಹೊಳೆಹಳ್ಳಗಳು ನರ್ತಿಸುವವು. ಪಚ್ಚರತ್ನದಂಥ ಹಚ್ಚನ್ನ ಹಸಿರು ಹುಲ್ಲಿನ ಹಾಸಿಗೆಯ ಮೇಲೆ ಒರಗಿ, ಗರಿಗೆದರಿದ ಗಂಡು ನವಿಲನ್ನು ಕಣ್ತುಂಬ ನೋಡಿದರೆ ಅಪ್ಸರೆಯರ ಪೀತಾಂಬರದ ಸೆರಗಿಲ್ಲದ ಸೊಬಗು ಕಂಗೊಳಿಸುವದು. ಅದರ ತುರಾಯಿಯ ಚೆಲುವಿಕೆಯು ಅರಸನ ಕಿರೀಟದ ತುರಾಯಿಯ ಮೋರೆಯ ಮೇಲೆ ಹೊಡೆಯುವದು. ಎದೆ ಬಿಚ್ಚಿದ ಅರಳುಗಂಣಿನಂಥ ಸರೋವರದ ದಡದ ಗಿಡದ ಸಾಲಿನಲ್ಲಿ ನಿಂತರೆ ಅದೊಂದು ದೇವರಾಯನ ಅರಮನೆಯ ಅಂಗಳವೆ. ಅಲ್ಲಿ ಶುಕಪಿಕಗಳ ಮಂದಮಂದ ಕಿಲಿಕಿಲಿಯಲ್ಲಿ ನೆಲಮುಗಿಲೆಲ್ಲ ಒಂದೆ ಬಾಯಿಂದ ಕುಲಕುಲು ಕೂಸಿನಂತೆ ನಗುತ್ತಿರುವದು. ಇರುಳೆಲ್ಲ ಇಂದ್ರನೀಲದ ನೆಲೆಗಟ್ಟಿನ ಮೇಲೆ ಅರಳು ಮಲ್ಲಿಗೆ ಉದುರಿಸಿದಂತೆ ಚಿಕ್ಕೆಗಳು ತಮ್ಮೊಳಗೇ ತಾವು ಸೂಸುನಗೆ ಬೀರಿ ಸೂಚುಕೊಡುತ್ತಿರುವಾಗ ಆಗ ಏನಿದೆ, ಎಲ್ಲಾ ನಿಶ್ಶಬ್ದ. ಉಷಾಳ ಗಾಳಿ ಕೂಡ ಬೆರಗಾಗಿ ಆಗ ಬೆಪ್ಪಾಗಿ ನಿಂತಿರುತ್ತದೆ. ಆ ದಟ್ಟ ನಿಶ್ಶಬ್ದತೆಯೊಡನೆ ಆತ್ಮವೊಂದೇ ಮೌನದಿಂದ ಭಕ್ತಿಗೀತವನ್ನು ಹಾಡುತ್ತಿರುತ್ತದೆ. ತರುಮರಗಳು ಎವೆ ಬಡೆಯಂದೆ ಮೈಯ್ಯುಲುಕದೆ ಆ ಅಶ್ರುತ ವೀಣಾರವದ ಕಡೆಗೇ ಕಿವಿಗೊಟ್ಟು ಕೇಳುತ್ತ ಎಚ್ಚರುದಪ್ಪಿ ನಿಂತುಕೊಂಡಿರುತ್ತದೆ." (ಅಹಾ ! ಹಾ ಹಾ !! ಸೈಸೈ !!!)

ಇಂಥ ಭಕ್ತಿಯ ಭಾಂಡಾರದಲ್ಲಿ ಬೆಳೆದವ ಸಿದ್ಧರಾಮ. ಅವನಲ್ಲಿ ತಾರ್ಕಿಕ ಬುದ್ಧಿಯಿಲ್ಲ, ಮಾರ್ಮಿಕ ಹೃದಯವಿದೆ. ಸಂಸಾರದ ಸೀಮೆ ಮುಟ್ಟಿದ ಆ ಸುಕುಮಾರ ಹೃದಯದಲ್ಲಿ ಎಂಥಾ ಕಲ್ಯಾಣ ಗುಣ ತುಂಬಿ ತುಳುಕುತಿದ್ದೀತು ! ಇದನ್ನು ಅಡವಿಯ ಹುಡುಗಿ ಬಲ್ಲಳು. ಪಟ್ಟಣದ ಪ್ರಭುವಿಗೆ ಅರಿದು.

ಒಮ್ಮೆ ಮರಿಹಾವು ಜುಳುಜುಳು ಹರಿದಾಡುವದನ್ನು ನೋಡನೋಡುತ್ತ ಹಿಗ್ಗು ಹೆಚ್ಚಾಗಿ, ಅಣ್ಣಾ ಬಾರೋ ಇಲ್ಲಿ ನೋಡುಬಾರೆಂದು ಕರೆದ ಮುದ್ದು ಹುಡುಗಿಯೊಬ್ಬಳು ಹೇಳಬಾರದ್ದು ಹೇಳಿ ಹುಚ್ಚಿಯಾದಳು. ಅಣ್ಣ ಬಂದವನೆ ಕಲ್ಲು ಹಾಕಿ ಕೊಂದುಬಿಟ್ಟ. ಬಲಗೈ ಹಿಡಿದರೆ ಎಡಗೈ; ಎಡಗೈ ಹಿಡಿದರೆ ಬಲಗೈ, ಪಾಪ, ಮಗುವೇನು ಮಾಡಬೇಕು ! ನಾನಾಗಿ ಕೊಲಿಸಿದಂತಾಯಿತಲ್ಲಾ ಎಂದು ಊಟ ಸವಿಹತ್ತದೆ ದಿನವೆಲ್ಲಾ ಅತ್ತಂಥ ದೃಷ್ಟಾಂತಗಳು ಕಣ್ಣಿಗೆ ಬೀಳುವದನ್ನು ಕಂಡಿಲ್ಲವೇ? ! ಸಿದ್ಧರಾಮನ ಅನುತಾಪ ಅಂಥಾದ್ದು. ಅಂತೇ ಅವನು ಮನೆ ಮಾರು ಬಿಟ್ಟು ಹೋದೇ ಹೋದನು. ಕಮಲದ ಮೊಗ್ಗೆ ಅರಳಿದರೆ ಕೋಮಲ. ತುಸು ಮುಟ್ಟಿದರೆ ಅದು ಮಾಸುವದು ಮುಂಕುವದು, ಕಂದುವದು ಕುಂದುವದು, ಬಾಡುವದು ಬಸವಳಿಯುವದು. ಇಂಥ ಅರಳೆದೆಯ ಮಗು ಸಾವಿಗೆ ಕೈಮಾಡಿ ಕರೆದನಲ್ಲಾ ! ಇದರ ನೆಲೆ ಬಲ್ಲವನೆ ಬಲ್ಲಾ !

'ಹೊನ್ನೆ ಹುಳವ ಕಂಡು ನರಿ ತನ್ನ ಬಾಲವ ಹುಣ್ಣು ಮಾಡಿಕೊಂಡರೆ ಹೋಲಬಲ್ಲದೆ?" ಹೂವಿನಂಥ ಹೃದಯವಿಲ್ಲದೆ ಸಿದ್ಧರಾಮನಂತೆ ಸೆಡವು ಮಾಡಿದರೆ ಮರಣಕ್ಕೆ ಶರಣು. ಇಂಥ ಮೂರು ಉದಾಹರಣೆಗಳನ್ನು ನಾನು ಬಲ್ಲೆ. ಅಲ್ಲದೆ ಈ ಮರುಳು ನನಗೂ ಹಿಡಿದಿತ್ತು. ನನ್ನ ನಾ ಹೊರಳಿ ನೋಡಿಕೊಂಡಾಗ ಬಿಟ್ಟಿತು. ಇಂದಿನ ಅಣ್ಣಗಳಿಗಾಗಿ ಇಲ್ಲಿ ಇದನ್ನು ಒಡೆದು ಹೇಳಿದೆ. "ಭಕ್ತಿಲತೆಯ ವಿಕಲತೆಯ ನೇನು ಬೆಸಗೊಂಬಿರಯ್ಯಾ! ಕಾಮಿಗೆ ಉಂಟೆ ಲಜ್ಜೆ ನಾಚಿಕೆ! ಕಾಮಿಗೆ ಉಂಟೆ ಮಾನಾಪಮಾನ! ದೇವನಿಗೊಲಿದ ಮರುಳ್ತನಿಗೇನು ಬೆಸಗೊಂಬಿರಯ್ಯ॥" ಇಂತೆಂಬುದು ಬಸವಣ್ಣನ ವಚನ. ಇತಿ.

೫-೧೨-೨೯

## ಮಲ್ಲಿಗೆ ದಂಡೆ

(ಜನಪದ ಹಾಡುಗಳ ಸಂಗ್ರಹ)

ಸಂಗ್ರಾಹಕರು – ಕಾಪಸೆ ರೇವಪ್ಪ

---

### ಮುನ್ನುಡಿ

"ನುಡಿದದ್ದೇ ವೇದ, ನಡೆದದ್ದೇ ಯೋಗ" ಎನ್ನುವ ಸಹಜ ಸುಮ್ಮಾನಿಗಳ ಜೀವನದೊಳಗಿನ ತೀರ ಸಾಮಾನ್ಯ ಸಂಗತಿಗಳು ಕೂಡ ಉಳಿದವರಿಗೆ ತೀರ ಬೋಧಪ್ರದವಾಗಿರುವಂತೆ "ನುಡಿದದ್ದೆಲ್ಲ ಕವಿತೆ, ನಡೆದದ್ದೆಲ್ಲ ರಸ"ವಾಗಿ ಪರಿಣಮಿಸಿದ ರಸಪುರುಷರ ಅಂತರಂಗದಿಂದುಕ್ಕಿ ಬಂದ ಒಂದು ಚಿಕ್ಕ ನುಡಿಯು ಕೂಡ ಸರ್ವ ಸಾಮಾನ್ಯರಿಗೆ ಅರಗಳಿಗೆಯ ಮಟ್ಟಿಗಾದರೂ ಸ್ವರ್ಗದ ಸುಳುವನ್ನು ತೋರದಿರದು. ಅಂತಹ ಸ್ವರ್ಗದ ಮಕ್ಕಳು ಇನ್ನೆಂದಿಗೇ ಆಗಲಿ ನಮ್ಮ ನಾಡಿನಲ್ಲಿ ಉದಯಿಸಲಿಕ್ಕಿರುವರೆಂಬುದಕ್ಕೆ ಪೂರ್ವಚಿಹ್ನವೆಂಬಂತೆ, ಇದೀಗ ಅಂತಹ ಜೀವನಕ್ಕೆ ಆಶೆಪಟ್ಟು ಹರಿದಾಡುವವರು ಹಲಕೆಲವರು ಹುಟ್ಟಿರುವರಷ್ಟೆ! ವರಕವಿಗಳು ಉದಯಿಸುವ ಮುಂಚೆ ನಮ್ಮಂಥ ನರಕವಿಗಳ ಜಂಗುಳಿಯೇಳುವುದು ಅನಿವಾರ್ಯ. ಇವರ ಕಾವ್ಯ ಶಕ್ತಿಯು ಸಾಗುವಳಿಯಿಂದ ಬೆಳೆಯಬೇಕಾದದ್ದು. ಇವರ ಸಸಿಗೆ ಹೊರಗಿನ ನೀರೂ ಹವೆಯೂ ಕಾಲಕಾಲಕ್ಕೆ ಒದಗಬೇಕು. ಈ ದೃಷ್ಟಿಯಿಂದ ಸಂಗ್ರಹಿಸಿದ ಪ್ರಸ್ತುತ ಗೀತಗುಚ್ಛವು ನಮ್ಮ ಕಾವ್ಯಕುಮಾರಿಯ ಕಳೆಯನ್ನು ಹೆಚ್ಚಿಸುವುದಕ್ಕೆಂದು ಅವಳಿಗೆ ಕಟ್ಟಿದ "ಮಲ್ಲಿಗೆ ದಂಡೆ" ಯಾಗಿದೆ.

ಜನಪದ ಸಾಹಿತ್ಯದ ಬೆಲೆಯನ್ನು ನಾನಿಲ್ಲಿ ಹೊಸದಾಗಿ ನಿರ್ಣಯಿಸುವ ಗೊಡವೆಗೇನೂ ಹೋಗಲಾರೆ. ಏಕೆಂದರೆ ಗೆಳೆಯ ಬೇಂದ್ರೆಯವರು 'ಗರತಿಯ ಹಾಡಿ'ನ ಪ್ರಸ್ತಾವನೆಯಲ್ಲಿ ಆ ಮಾತನ್ನು ವಿವರವಾಗಿ ಪ್ರತಿಪಾದಿಸಿದ್ದಾರೆ. ಇದೀಗ ನನ್ನ ಚಿತ್ತಕ್ಕೆ ಅಂಟಿಕೊಂಡಿರುವ ಒಗಟುಗಳು ಎರಡು. ಇವೆರಡರಲ್ಲಿ ಮೊದಲನೆಯದು 'ಕಾವ್ಯದ ಉಗಮ', ಎರಡನೆಯದು 'ಕಾವ್ಯದ ಲಕ್ಷಣ'. ಸದ್ಯಕ್ಕೆ ಕವನ ಪ್ರವೃತ್ತಿಯೇನೋ ಬಹಳ ಜನರಲ್ಲಿ ಕಾಣುತ್ತಿದೆ; ಆದರೆ ಅದರ ಸೆಲೆಯು ನಮಗೆ ಇನ್ನೂ ಸರಿಯಾಗಿ ಸಿಕ್ಕಿಲ್ಲವೆಂದೇ ಹೇಳಬೇಕು. ಅಲ್ಲದೆ ಕವಿತೆ ಬರೆಯುವ ಉಬ್ಬು ಕಾವ್ಯಸುಂದರಿಯ ರೂಪಲಾವಣ್ಯವನ್ನು ಇನ್ನೂ ತಕ್ಕಷ್ಟು ಕಂಡಿಲ್ಲವೆಂದೇ ಹೇಳಬೇಕು. ಹದಿನಾರು ವರುಷಗಳ ಹಿಂದೆ 'ಪ್ರಭಾತ' ಸಮಯದಲ್ಲಿ ಛಂದಸ್ಸೊಂದೇ

ಕವಿತೆಯು ಮುಖ್ಯ ಲಕ್ಷಣವಾಗಿ ಇದ್ದದ್ದು ಹಾಗೆ ಒಂದು ಪಟ್ಟ ಕಳೆದ ಮೇಲೆ ಈ ನಾಲ್ಕಾರು ವರುಷಗಳಲ್ಲಿ ಭಾವವು ಕಾವ್ಯದ ಜೀವವೆಂಬ ವ್ಯಾಖ್ಯೆಗೆ ಬಂದು ಮುಟ್ಟಿದೆ. ಆದರೆ ಈ ಮಾತೂ ಕೂಡ ತಕ್ಕಷ್ಟು ಸ್ಪಷ್ಟವಲ್ಲವೆಂದೇ ಎನ್ನಬೇಕು.

ಇದೀಗ ನಾನು ಮಾತನಾಡುತ್ತಿರುವುದೆಲ್ಲಾ ಒಂದು ಗ್ರಹಿಕೆಯಿಂದ. ಅದೇನೆಂದರೆ— ಎಲ್ಲ ವಿದ್ಯೆಗಳಂತೆ ಕಾವ್ಯಕಲೆಯೂ ಒಂದು ವಿದ್ಯೆ. ಅದನ್ನು ವ್ಯಾಸಂಗ ಮಾಡಿ ಅದರಲ್ಲಿ ತಜ್ಞತೆಯನ್ನು ಗಳಿಸಬಹುದು. ವರಕವಿಗಳ ಮಾತನ್ನು ಒತ್ತಟ್ಟಿಗಿಟ್ಟರೆ ಪ್ರಯತ್ನಸಿದ್ಧರಾದ ನಮ್ಮಂಥ ನರಕವಿಗಳ ಮಟ್ಟಿಗಾದರೂ ಈ ಮಾತು ತುಂಬಾ ದಿಟವಾಗಿದೆಯೆಂದು ನನ್ನ ಭಾವನೆ. ಕಾವ್ಯರತ್ನವನ್ನು ಯಾವ ಗಣಿಯಲ್ಲಿ ಅರಸಬೇಕು ? ಮತ್ತು ಅದನ್ನು ಗುರುತಿಸುವುದಕ್ಕೆ ಕುರುಹುಗಳಾವವು ? ಎಂಬೆರಡು ಮಾತುಗಳನ್ನು ಸರಿಯಾಗಿ ತಿಳಿದಲ್ಲದೆ ನಮ್ಮ ವ್ಯವಸಾಯವು ಎಂದಿಗೂ ಊರ್ಜಿತ ದಶೆಗೆ ಬಾರದು. ನಮಗೆ ಬೇಕಾಗಿರುವ ಮೇಲ್ಕಾಣಿಸಿದ ಎರಡು ಮಾತುಗಳ ಜ್ಞಾನವು ನಮಗಾಗಬೇಕಾದರೆ ಅದಕ್ಕೆ ಎರಡೇ ಮಾರ್ಗಗಳುಂಟು, ಜಗತ್ತಿನ ಪುರಾತನ ನೂತನ ಮಹಾಕವಿಗಳ ಕೃತಿಗಳನ್ನು ಪರಿಶೀಲಿಸುವುದೊಂದು; ಮತ್ತು ಕವಿಗಳೆಂದಿನಿಸಿಕೊಳ್ಳುವ ಹಂಬಲದ ಸೋಂಕು ಎಳ್ಳಷ್ಟೂ ಇಲ್ಲದ ಅಶಿಕ್ಷಿತ ಪುರಾತನರ ಜನಪದ ಸಾಹಿತ್ಯವನ್ನು ಸೋಸಿ ನೋಡುವುದು ಇನ್ನೊಂದು. ಒಂದು ಕವಿಗಳ ಕವಿತೆ, ಇನ್ನೊಂದು ಕವಿಗಳಲ್ಲದವರ ಕವಿತೆ. ಕವಿಗಳಲ್ಲದವರಲ್ಲಿಯೂ ಜೀವನದಲ್ಲಿ ಒಮ್ಮೊಮ್ಮೆ ರಸನಿಮಿಷಗಳು ಬಂದಾಗ ಕಾವ್ಯೋದ್ಗಾರಗಳು ಹೊರಹೊಮ್ಮಬಲ್ಲವು. ಬೌದ್ಧಿಕ ಸಂಘರ್ಷಣವಿಲ್ಲದ ಇಂಥ ಪುರಾತನ ಗ್ರಾಮ್ಯಗೀತಗಳ ಅನುಶೀಲನದಿಂದ ಕಾವ್ಯವಿಷಯಕವಾಗಿರುವ ಒಗಟುಗಳು ಒಡೆಯುವ ಸಂಭವವು ಹೆಚ್ಚಿಗೆ ಇದೆ.

ಒಮ್ಮೆ ಗೆಳೆಯ ಬೇಂದ್ರೆಯವರೂ ನಾನೂ ಕೂಡಿಕೊಂಡು ನಮ್ಮ ಹಳ್ಳಿಯಲ್ಲಿಯೇ ಕುರುಬರ ಬೀರನ ಹಾಡನ್ನು ಕೇಳುತ್ತಿರುವಾಗ ಆ ಹಾಡಿನಲ್ಲಿ ನೀರಿಗೆ ನಡೆದ ಬಾಲೆಯೊಬ್ಬಳ ವರ್ಣನೆ ಬರಲು ನನ್ನನ್ನು ಆ ವರ್ಣನ ರೀತಿಯು ಬಹಳ ಅಗಾಧಗೊಳಿಸಿಬಿಟ್ಟಿತು. ಪೂರ್ವ ಕಾಲದ ಕುರುಬರು ಇಂತಹ ಹೆಣ್ಣನ್ನು ಎಲ್ಲಿ ಕಂಡಿದ್ದಾರು ? ಕಲ್ಪನೆಯು ಆಂತರಿಕವಾದ ಒಂದು ಸತ್ಯ ಸಾಮ್ರಾಜ್ಯಕ್ಕೆ ಸಂಬಂಧಿಸಿದ್ದಾಗಿರಬೇಕೇನು ? ಅಲ್ಲಿ ಕಂಡ ಅಮರ ಕನ್ನಿಕೆಯು ಇಲ್ಲಿ ಹಾಡಿನೊಳಗಿನ ಹೆಣ್ಣಾಗಿರಬೇಕೇನು ? ಈ ಮಾತು ನನ್ನ ಅಂತರಂಗದಲ್ಲಿ ಅತಿಶಯವಾಗಿ ದೃಢಪಟ್ಟಿತು. ಆವಾಗಲೇ ನನ್ನ ಈ ಒಳ ಅನಿಸಿಕೆಯನ್ನು ಗ॥ ಬೇಂದ್ರೆಯವರಿಗೆ ತಿಳಿಸಿದೆನು. ಅಲ್ಲದೆ ಅಷ್ಟರಲ್ಲಿ ಏ. ಈ. ಯವರ ಗ್ರಂಥಗಳಲ್ಲಿ ಈ ವಿಷಯಕ್ಕೆ ಇದೇ ಅಭಿಪ್ರಾಯವಿರುವುದಾಗಿಯೂ ಲಕ್ಷ್ಯಕ್ಕೆ ಬಂದಿತು. ಆದರೆ ಈಗ ಆ ಪುಸ್ತಕವು ಬೇಗನೆ ನನ್ನ ಕೈಗೆ ಲಭಿಸದಷ್ಟು ದೂರಗತವಾಗಿದ್ದಿತು. ಮುಂದೆ ಅದನ್ನು ದೊರಕಿಸುವುದಕ್ಕೆ ಬೇಕಾದ ಕಾಲಾವಧಿಯೊಳಗಾಗಿ ನನಗೆ ಮತ್ತೆ ಎರಡು ಪ್ರಸಂಗಗಳಲ್ಲಿ ಮೇಲ್ಕಂಡ ಮಾತು

ಅನುಭವಕ್ಕೆ ಬಂದಿತು. ಒಮ್ಮೆ ಪುಣೆಯಲ್ಲಿ ಬೇಂದ್ರೆಯವರೊಡನೆ ಅತ್ಯಂತ ತಲ್ಲೀನತೆಯಿಂದ ಅಧ್ಯಾತ್ಮ ಚರ್ಚೆ ನಡೆದಾಗ; ಇನ್ನೊಮ್ಮೆ ಈ ಪ್ರಸ್ತುತ ಕವನ ಸಂಗ್ರಹದೊಳಗಿನ 'ಹಣ್ಣ ಬಂದಾವ ಹಣ್ಣ' ಎಂಬ ಹಾಡನ್ನು ಒಬ್ಬ ಹೆಣ್ಣುಮಗಳು ಅತ್ಯಂತ ಸುಸ್ವರದಿಂದ ಹಾಡುವಾಗ. ಈ ಮೂರು ಪ್ರಸಂಗಗಳಲ್ಲಿ ಮೊದಲನೆಯದು ಕವಿಕಲ್ಪನೆಗೂ ಎರಡನೆಯದು ಶುದ್ಧ ತರ್ಕಕ್ಕೂ ಮೂರನೆಯದು ರಾಗ ತತ್ವಕ್ಕೂ ಸಂಬಂಧಿಸಿದವುಗಳಾಗಿವೆ. ಇವೆಲ್ಲವುಗಳಿಗೂ ನಮ್ಮ ಒಳಗಿನ ಯಾವುದೋ ಒಂದು ಸತ್ಯರಾಜ್ಯದ ನಿಕಟ ಸಂಬಂಧವಿದೆಯೆಂದು ನನಗೆ ಘನವಾಗಿ ಎನಿಸಿತು.

ಇತ್ತೀಚೆಗೆ ಏ.ಈ.ಯವರ ಕ್ಯಾಂಡಲ್ ಆಫ್ ವ್ಹಿಜನ್ ಎಂಬ ಪುಸ್ತಕವು ದೂರಗತವಾದದ್ದು ಪುನಃ ನನ್ನ ಕೈಗೆ ಬಂತು. ಅದರಲ್ಲಿ ಅವರ ಈ ಮುಂದಿನ ವಾಕ್ಯವು ಕಣ್ಣಿಗೆ ಬಿತ್ತು.

I am convinced that all poetry is, as Emerson said, first written in the heavens, that is, it is conceived by a self deeper than appears in normal life......

"ಇಮರ್ಸನ್ನರು ಹೇಳಿದಂತೆ ನನಗೂ ಮನವರಿಕೆಯಾದದ್ದೇನೆಂದರೆ– ಸಮಸ್ತ ಕವಿತೆಯು ಮೊದಲಿಗೆ ಸ್ವರ್ಗದಲ್ಲಿ ಬರೆಯಲ್ಪಟ್ಟಿರುತ್ತದೆ. ಸಹಜ ಜೀವನದಲ್ಲಿ ಕಾಣಸಿಕೊಳ್ಳುವುದಕ್ಕಿಂತ ಆಳದಲ್ಲಿರುವ ಆತ್ಮವು ಅದನ್ನು ಗ್ರಹಿಸಬಲ್ಲುದು."

ಏ.ಈ.ಯವರು ತಮ್ಮ ಅನುಭವವನ್ನು ಹೇಳಿದ್ದಲ್ಲದೆ ಅದಕ್ಕೆ ಇಮರ್ಸನ್ನರ ಸಾಕ್ಷಿಯೊಂದನ್ನು ಬೇರೆ ತೋರಿಸಿಕೊಟ್ಟಿರುವರು. ಒಟ್ಟಾರೆ ನನ್ನ ಅನಿಸಿಕೆಗೆ ಹೀಗೆ ದ್ವಿಗುಣಿತ ಬಲವು ಲಭಿಸಿದಂತಾಯಿತು.

ಸತ್ಯಮಯವಾದ ಸೌಂದರ್ಯಮಯವಾದ ಶುಭಮಯವಾದ ಆ ಒಳಗಿನ ರಾಜ್ಯಕ್ಕೆ ಏ.ಈ.ಯವರು "ಬಹುವರ್ಣಗಳ ದೇಶ"ವೆಂದು (ಮೆನಿ ಕಲರ್ಡ ಲ್ಯಾಂಡ) ಹೆಸರಿಟ್ಟಿದ್ದಾರೆ. ಆ ರಾಜ್ಯದ ಬಗೆಗೆ ತಾವು ಕಂಡ ಕನಸುಗಳನ್ನು ಒಂದೆಡೆಯಲ್ಲಿ ಹೇಳಿದ್ದು ಹೇಗೆಂದರೆ–

"Sometimes lying on the hill side with the eyes of the body shut as in sleep, I could see valleys and hills, lustrous as a jewel, where all was self shining, the colours brighter and purer, yet making a softer harmony together than the colours of the world I know...... There too, in that land, I saw shining folk. They were, I believe, those who in the ancient world gave birth to legends of nymph and dryad. The perfectness was like the perfectness of a flower."

"ಆಗಾಗ್ಗೆ ನಾನು ಗುಡ್ಡದ ಓರೆಯಲ್ಲಿ ನಿದ್ರಿತನಂತೆ ಹೊರಗಣ್ಣುಗಳನ್ನು ಮುಚ್ಚಿಕೊಂಡು ಬಿದ್ದುಕೊಂಡಿರುವಾಗ ನನಗೆ ರತ್ನದಂತೆ ಪ್ರಕಾಶಿಸುವ ಕಂದರಗಳೂ ಗಿರಿ ಶಿಖರಗಳೂ ಕಂಗೊಳಿಸುತ್ತಿದ್ದವು. ಅವು ಸ್ವಯಂ ಪ್ರಕಾಶಿತವಾಗಿರುತ್ತಿದ್ದವು. ಅವುಗಳ ಬಣ್ಣಗಳು ಪ್ರಭಾಮಯವಾಗಿಯೂ ನಿರ್ಮಲವಾಗಿಯೂ ಇರುತ್ತಿದ್ದವು. ನನಗೆ ಗೊತ್ತಿರುವ ಜಗತ್ತಿನ ಬಣ್ಣಗಳಿಗಿಂತ ಅವುಗಳಲ್ಲಿ ಕೋಮಲ ಸಾಮರಸ್ಯವು ಹೆಚ್ಚಾಗಿ ಇದ್ದಿತು. ಆ ನಾಡಿನಲ್ಲಿ ನಾನು ಥಳಥಳಿಸುವ ಜನರನ್ನು ಕೂಡ ಕಾಣುತ್ತಿದ್ದೆನು. ಪೂರ್ವಕಾಲದ ಯಕ್ಷಿಣಿಯರ ಕತೆಗಳು ಹುಟ್ಟುವುದಕ್ಕೆ ಇವರೇ ಕಾರಣರಾದರೆಂದು ನನ್ನ ನಂಬುಗೆ. ಅವರ ಪರಿಪೂರ್ಣತೆಯು ಹೂಗಳ ಪರಿಪೂರ್ಣತೆಗೆ ಸದೃಶವಾದದ್ದು."

ಈ ಜಗತ್ತಿನ ಸಂಗತಿಗಳು ನಮ್ಮ ಚಿತ್ತಕ್ಕೆ ಸ್ಪರ್ಶಿಸಲು ಭಾವಗಳೇಳುವವು. ಆದರೆ ಆ ಭಾವಗಳಿಗೆ ತಕ್ಕ ಕಲ್ಪನಾ ಕವಚವು ಒಳಗಿನ ಬಹುವರ್ಣಗಳ ದೇಶದಿಂದ ಲಭಿಸುವುದು. ಇವೆರಡರ ಸಮ್ಮಿಲನವೇ ಕವಿತೆ. ನಮ್ಮ ಚಿತ್ತಕ್ಷೇತ್ರವು ಸುಂದರವೂ ನಿರ್ಮಲವೂ ಆದ ಹಾಗೆಲ್ಲ ನಮ್ಮಲ್ಲಿ ಸತ್ಯ ಕವಿತೆಯ ಆವಿರ್ಭಾವಕ್ಕೆ ಆಸ್ಪದವಾಗುವದು, ಸೃಷ್ಟಿ ಜನನಿಯ ಇದಿರಿಗೆ ಸರಲವಾದ ಶಿಶು ಬುದ್ಧಿಯಿಂದ ನಾವು ಹರಿದಾಡಬಲ್ಲೆವಾದರೆ, ಆಗ ನಾವು ಕಾವ್ಯದೇವಿಯ ಕೃಪೆಗೆ ಪಾತ್ರರಾಗಬಲ್ಲೆವು. ಇದೀಗ ಸಂಗ್ರಹಿಸಿರುವ ತಿಳಿ ಹೃದಯದ ಹೆಣ್ಣುಮಕ್ಕಳ ಪುರಾತನ ಕೃತಿಗಳ ಸಂಗ್ರಹವು ನಮ್ಮನ್ನು ಈ ದಾರಿಯಲ್ಲಿ ಮುಂದುವರಿಸದಿರಲಾರದೆಂದು ನನ್ನ ಶ್ರದ್ಧೆ.

ಇನ್ನು ಸದ್ಯದ ಪುಸ್ತಕದ ಬಾಹ್ಯಾಂಗವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವೆನು. ಪ್ರಸ್ತಾವನೆಯಲ್ಲಿ ಹೇಳಬೇಕಾಗಿರುವ ವಿಷಯದ ಬಹುಭಾಗವನ್ನು ಕೊನೆ ಟಿಪ್ಪಣಿಯ ಪ್ರವೇಶಿಕೆಗಳಲ್ಲಿ ಅಲ್ಲಲ್ಲಿಯೇ ಹೇಳಿ ಮುಗಿಸಿದೆ. ಆದುದರಿಂದ ವಾಚಕರು ಟಿಪ್ಪಣಿಯ ಪುಟಗಳನ್ನು ಅಲಕ್ಷಿಸಬಾರದಾಗಿ ಬಿನ್ನವಿಸುವೆ.

ಹೆಣ್ಣುಮಕ್ಕಳ ಈ ಹಾಡುಗಳಲ್ಲಿ ತ್ರಿಪದಿಗೆ ಸಂಬಂಧಿಸಿರುವವುಗಳೇ ತೀರ ಹೆಚ್ಚು. ಕೆಲವೇ ವೃತ್ತಗಳು ಭಾವಕ್ಕೆ ತಕ್ಕಂತೆ ಬೇರೆ ಬೇರೆ ವಿಧದ ಮಟ್ಟುಗಳಿಂದ ಹಾಡಲ್ಪಡುವುದನ್ನು ಬಗೆದರೆ ನಮಗೆ ಏಕಮೇವ ಪರಮಾತ್ಮನ ಅನಂತ ಲೀಲೆಯೇ ಇಲ್ಲಿ ನೆನಪಾಗುವುದು. ಈ ಹಾಡುಗಳನ್ನು ಪ್ರತ್ಯಕ್ಷವಾಗಿ ಅವುಗಳ ನೆಲೆಯರಿತ ಹೆಣ್ಣುಮಕ್ಕಳ ಬಾಯಿಂದ ಹಾಡಿಸಿ ಕೇಳಿದರೆ ವಾಚಕರಿಗೆ ಈ ಮಾತಿನ ಮನವರಿಕೆಯಾಗಿ ಅತ್ಯಾಶ್ಚರ್ಯವಾಗದಿರದು. ದೇವತಾ ಸ್ತುತಿಯ ಹಾಡುಗಳು ಶುದ್ಧ ರಗಳೆಯ ವೃತ್ತಗಳಾಗಿರುವುದನ್ನು ನೆನೆದರೆ ಅತ್ಯಗಾಧವೆನಿಸುವುದು. ದ್ರೌಪದಿಯ ಹಾಡು ಭೋಗಷಟ್ಪದಿಯಾಗಿರುವುದನ್ನು ಬಗೆದರೆ ಹೆಣ್ಣುಮಕ್ಕಳ ಹಾಡುಗಳ ಸಂಶೋಧನದ ಮಹತ್ವವು ಸ್ಪಷ್ಟವಾಗಿ ವಿದಿತವಾಗುವಂತಿದೆ.

ಇನ್ನು ಈ ಹಾಡುಗಳ ಭಾಷೆ ಕೇವಲ ಇದ್ದಕ್ಕಿದ್ದಂತೆ ಗ್ರಾಮ್ಯವಾಗಿಯೇ ಅದನ್ನು ಇಡಬೇಕೆಂದು ಕೆಲವರ ಅಭಿಪ್ರಾಯ. ತುಸು ಮಟ್ಟಿಗೆ ಸಂಸ್ಕರಿಸಿ ಗ್ರಾಂಥಿಕ ಸ್ವರೂಪಕ್ಕೆ ತರಬೇಕೆಂದು ಇನ್ನು ಕೆಲವರ ಅಭಿಪ್ರಾಯ. ಆದರೆ ಇವೆರಡೂ ಮಾತುಗಳು ಈ ಪುಸ್ತಕದಲ್ಲಿ ಸರಿಯಾಗಿ ಸಾಧಿಸಲಿಲ್ಲ. ಕೆಲವು ಹಾಡುಗಳು ಹಾಗೂ ಇವೆ ಇನ್ನು ಕೆಲವು ಹೀಗೂ ಇಡಲ್ಪಟ್ಟಿವೆ. ಮುಂದಿನವರು ಈ ಕೆಲಸವನ್ನು ತಕ್ಕಂತೆ ಸರಿಪಡಿಸಿಕೊಳ್ಳಲಿ.

ಈ ಹಾಡುಗಳಲ್ಲಿ ಅಕ್ಷರಗಳನ್ನು ಎಳೆದೆಳೆದು ಉಚ್ಚರಿಸಿ ಗಣ ಪೂರ್ತಿಗೊಳಿಸುವ ರೂಢಿಯುಂಟು. ಈ ಮೇರೆಗೆ ಅಂಥಲ್ಲಿ ಅವಗ್ರಹ ಚಿಹ್ನದಿಂದ ಸೂಚಿಸಲಾಗಿದೆ. ಅಲ್ಲದೆ ಕೆಲಕೆಲವು ಕಡೆಗಳಲ್ಲಿ ಒಂದು ಚರಣದಲ್ಲಿರಬೇಕಾದದ್ದಕ್ಕಿಂತ ಹೆಚ್ಚು ಇಲ್ಲವೆ ಕಡಿಮೆ ಗಣಗಳಿರುವುದುಂಟು. ಆದರೆ ಇಂಥ ಸಂದರ್ಭಗಳು ಬಹಳ ಕಡಿಮೆ.

ಒಂದೆ 'ಗರತಿಯ ಹಾಡ'ನ್ನು ಸಂಗ್ರಹಿಸಿದವರಲ್ಲೊಬ್ಬರಾದ ಗೆಳೆಯ ಕಾಪಸೆ ರೇವಪ್ಪನವರು ಈ ಸಾರೆ ಎರಡು ಮೂರು ತಿಂಗಳುಗಟ್ಟಲೆ ಶ್ರಮಪಟ್ಟು ಈ 'ಮಲ್ಲಿಗೆ ದಂಡೆ'ಯನ್ನು ಹೆಣೆದಿರುವರು. ಕನ್ನಡ ನಾಡು ಅವರ ಈ ಶ್ರಮವನ್ನು ಸಾರ್ಥಕಗೊಳಿಸದಿರಲಾರದೆಂದು ನಾನು ನಂಬಿರುವೆನು.

೧೫-೫-೧೯೩೫

# ಮಿಲನ

( ಖಂಡಕಾವ್ಯ )

ಅನುವಾದಕರು : ಸಿಂಪಿ ಲಿಂಗಣ್ಣ

---

## ನಮ್ಮ ಮಾತು

"ಮಿಲನ"ದ ಮೇಲ್ಮೆಯನ್ನು ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಹದಿನಾರು ವರುಷಗಳಲ್ಲಿ ಇದರ ಮೂಲ ಹಿಂದೀ ಪುಸ್ತಕದ ಎಂಟು ಆವೃತ್ತಿಯಾಗಿದ್ದು, ಹದಿನಾಲ್ಕು ಸಾವಿರ ಪ್ರತಿಗಳು ರಸಿಕರನ್ನು ರಂಜಿಸಿವೆ !!! ಹೀಗೆಂದ ಬಳಿಕ ಕನ್ನಡ ನಾಡಿನ ಅಣ್ಣಂದಿರು ಇದರ ರುಚಿಯನ್ನು ಸವಿದು ನೋಡದಿರಲಿಕ್ಕಾದೀತೇ ???

ಕನ್ನಡ ನಾಡಿನ ಆಧುನಿಕ ಕವಿಶ್ರೇಷ್ಠರಲ್ಲೊಬ್ಬರಾದ ಗೆಳೆಯ ದ.ರಾ. ಬೇಂದ್ರೆ ಎಂ.ಎ. ಯವರು ಈ 'ಮಿಲನ'ದ ಮೂಲ ಹಿಂದೀ ಕಾವ್ಯದ ಬಗೆಗೆ ಎದೆ ತುಂಬಿ ನುಡಿಯುವ ಯಥಾರ್ಥವಾಣಿಯನ್ನಷ್ಟು ಆಲಿಸುವಾ :

"ಮಿಲನವೆಂಬೀ ಪ್ರಣಯ ಕಥಾನಕವುಳ್ಳ ಖಂಡಕಾವ್ಯವು ಹಿಂದೀ ಭಾಷೆಯಲ್ಲಿ ಸುಕೀರ್ತಿತರಾದ ಶ್ರೀಯುತ ರಾಮ ನರೇಶ ತ್ರಿಪಾಠೀಜೀಯವರಿಂದ ಬರೆಯಲಾಗಿದೆ. ಪಥಿಕ, ಸ್ವಪ್ನ, ಮಾನಸೀ ಎಂಬ ಅವರ ಬೇರೆ ಖಂಡಕಾವ್ಯಗಳಂತೆ ಇದಾದರೂ ಪ್ರಾಕೃತಿಕ ಸೌಂದರ್ಯ ವರ್ಣನೆ, ಧ್ಯೇಯ ಪ್ರೀತಿ, ಆತ್ಮಬಲ, ಅನುರಾಗಾತಿಶಯ ದೇಶಭಕ್ತಿಗಳ ಸರಸ ಸಮ್ಮಿಶ್ರಣದಿಂದ ಮಧುರರಸ ಪೇಯವಾಗಿದೆ. ಅದರಲ್ಲಿಯೂ ಕೆಲವೇ ವರುಷಗಳಲ್ಲಿ ಏಳೆಂಟು ಆವೃತ್ತಿಯಾಗಿ ಪ್ರಕಟವಾದ 'ಮಿಲನ' ಕಾವ್ಯವು ಹಿಂದೀ ಜನರಲ್ಲಿ ಪಡೆದ ಮೆಚ್ಚುಗೆಯನ್ನು ಎಷ್ಟೆಂದು ಹೊಗಳಬೇಕು ! ವಸ್ತುವಿನ ರಹಸ್ಯಮಯತೆ, ಪಾತ್ರಗಳ ಆದರ್ಶ ಜೀವನ, ಶೃಂಗಾರ–ವೀರ–ಕರುಣಾದ್ಭುತಗಳ ಸಹಜ ರಮಣೀಯತೆ, ಹ ದ ಗೊ ೦ ಡ ಹಿಂದೀ ಭಾಷೆಯ ಸೌಲಭ್ಯ, 'ಜಯ ಸ್ವದೇಶಕೀ ಜಯ ಸ್ವದೇಶಕೀ, ಪಡಾ ಸುನಾಯೀನಾದ' ಎಂದು ಬೆಡಗಿನ ನಡಿಗೆ ಯಲ್ಲಿ ನೀರ ತೆರೆಗಳಲ್ಲಿ ತೂಗಾಡುತ್ತ ಬರುವ ನೌಕೆಯಂತೆ ಹೊರಟ ಛಂದದ ಅಂದ ಇವೆಲ್ಲವುಗಳಿಂದ 'ಮಿಲನ'ವು ಲೋಕಪ್ರಿಯವಾದುದು ಆಶ್ಚರ್ಯವಲ್ಲ ?"

ಹಿಂದೀ ಭಾಷೆಯ ಲಲಾಟಕ್ಕೆ ರಾಷ್ಟ್ರ ಭಾಷೆಯ ರಾಜಪಟ್ಟವನ್ನು ಕಟ್ಟಬೇಕೆಂಬ ಸಂಕಲ್ಪವು ಆಸೇತುಹಿಮಾಚಲವಾಗಿ ಪ್ರತಿನಿನಾದವಾಗುತ್ತಿರುವ ಈ ಸಮಯದಲ್ಲಿ ಹಿಂದೀ ಸಾಹಿತ್ಯದ ನವಕೃತಿಗಳ ಪರಿಚಯವನ್ನು ಕನ್ನಡಿಗರಾದ ನಾವು ಮಾಡಿ

ಕೊಳ್ಳುವುದು ಕೃಪಾಪ್ರಾಪ್ತವೇ ಆಗಿದೆಯಲ್ಲವೇ ? ನಮ್ಮೀ ಪ್ರಬಲ ಮನೋರಥಕ್ಕೆ ಬೆಲೆ ಮಾಡಿ ಶ್ರೀ ತ್ರಿಪಾಠೀ ಮಹಾಶಯರು ತಮ್ಮ ಲೋಕಪ್ರಿಯ ಕಾವ್ಯದ ಕನ್ನಡ ಅನುವಾದಕ್ಕೂ ಪ್ರಕಟನೆಗೂ ಉದಾರಾಂತಃಕರಣದಿಂದ ಒಪ್ಪಿಗೆಯನ್ನಿತ್ತು ದನ್ನು ನಾವು ಎಷ್ಟು ಕೊಂಡಾಡಿದರೂ ಸ್ವಲ್ಪವೇ ಎಂದು ನಮ್ಮ ಭಾವನೆ. ಕವಿವರ್ಯ ತ್ರಿಪಾಠಿಯವರ ಔದಾರ್ಯ, ನಮ್ಮ ಮಹದಾಕಾಂಕ್ಷೆ, ನಮ್ಮ ಗೆಳೆಯ ರಾದ ಸಿಂಪಿ ಲಿಂಗಣ್ಣನವರ ದೀರ್ಘ ಪರಿಶ್ರಮ ಇವುಗಳನ್ನೆಲ್ಲ ಮನಗಂಡು ನಮ್ಮ ನಾಡಿನ ಅಣ್ಣಂದಿರು ಹರುಷವೇರಿ ಈ ಅನುವಾದವನ್ನು ಮುದ್ದಾಡಿದರೆ ನಾವು ಕೃತಾರ್ಥರು !

ಇಲ್ಲಿ ಒಂದು ಮಹತ್ವದ ಮಾತಾವುದೆಂದರೆ— ಮೂಲ ಮತ್ತು ಭಾಷಾಂತರ ಗಳು ಯಾವ ಕಾಲದಲ್ಲಿಯೂ, ಯಾವ ಭಾಷೆಯಲ್ಲಿಯೂ, ಯಾವ ದೇಶದಲ್ಲಿಯೂ ಸಂಪೂರ್ಣವಾಗಿ ಸಮಸ್ವರೂಪದಲ್ಲಿರಲಾರವು. ಯಾಕೆಂದರೆ, ಮೂಲವು ಮೂಲವೇ, ಅನುವಾದವು ಅನುವಾದವೇ. ಅವೆರಡೂ ಸೂರ್ಯ ಚಂದ್ರರಿದ್ದಂತೆ. ಒಂದರ ಪ್ರತಾಪವು ಇನ್ನೊಂದರಲ್ಲಿ ಕೇವಲ ಪ್ರಕಾಶ ಮಾತ್ರವಾಗಿ ತೋರುವದು. ಬಹುಶಃ ಎಲ್ಲ ಅನುವಾದಗಳಿಗೇ ಸಂಬಂಧಿಸುವ ಈ ವಿಷಯವು ಪ್ರಸ್ತುತ ಅನುವಾದದ ಈ ಕನ್ನಡ 'ಮಿಲನ'ಕ್ಕೂ ಸಂಬಂಧಿಸಿರುವುದು ಸ್ವಾಭಾವಿಕವೇ. ಅದರಲ್ಲಿಯೂ ಮೂಲ ದೊಳಗಿನ ಸಕಲ ಸೌಂದರ್ಯವನ್ನು ಅನುವಾದದಲ್ಲಿ ಇಳಿಸಿಯೇ ತೋರಿಸೇನೆಂಬ ದರ್ಪದಿಂದ ಹೊರಟದ್ದರೆ ಆ ಮಾತು ಒಂದಿಷ್ಟು ಬೇರೆಯಿರುತ್ತಿದ್ದಿತು. ಆದರೆ ಪ್ರಸ್ತುತ ಅನುವಾದದಲ್ಲಿ ಅಷ್ಟು ಆಳಕ್ಕೆ ಇಳಿಯದೆ ಕೇವಲ ಗದ್ಯದಲ್ಲಿ ಭಾಷಾಂತರಿಸು ವದಕ್ಕಿಂತ ಪದ್ಯಮಯವಾಗಿಯೇ ಪದ್ಯ ಗ್ರಂಥವನ್ನು ಕನ್ನಡಿಸಿದರೆ ಒಂದಿಷ್ಟು ಹೆಚ್ಚು ಸೊಗಸೆಂದು ಭಾವಿಸಿ ಹಾಗೆ ಮಾಡಲಾಗಿದೆ; ಇಷ್ಟೆ. ಅನುವಾದದ ಶೈಲಿಯು ಹಲವೆಡೆಗಳಲ್ಲಿ ಗದ್ಯಕ್ಕೂ ಪದ್ಯಕ್ಕೂ ತಾಕಲಾಟವಾದಂತೆ ತೋರುವು ದೇನೋ ನಿಜವೇ. ಆದರೆ ಎಷ್ಟೋ ಕಡೆಯಲ್ಲಿ ಸೊಗಸಾದ ಪದ್ಯ ಶೈಲಿಯೂ ಕಂಗೊಳಿಸುತ್ತದೆಯೆಂದು ಸಹೃದಯರಿಗೆ ಹೊಳೆಯದಿರದು, ರಸಿಕರು ಅನುವಾದ ದೊಳಗಿನ ನ್ಯೂನತೆಗಳ ಜಾಳಿಗೆಯಲ್ಲಿ ತೋಡಿಕೊಳ್ಳುವ ಉಸಾಬರಿಗೆ ಹೋಗದೆ ಮೂಲ ಕವಿಯ ಉದ್ದೇಶ ವಾರಿಧಿಯಲ್ಲಿ ಮನದಣಿ ಓಲಾಡುವರೆಂದು ನಂಬಿದ್ದೇವೆ.

ಪ್ರೇಮಕಾವ್ಯ, ಪ್ರೇಮಕಾವ್ಯ ಎಂದ ಕೂಡಲೆ ಕಾಮುಕರ ಕಳವಳ ಕಾತರ ಗಳಿಗೂ, ಕಾದಲರ ತವಕ ತಾಮಸಗಳಿಗೂ ಇದರಲ್ಲಿ ಅಗ್ರಪಟ್ಟವಿರಬಹುದೆಂದು ಭಾವನೆಯಾಗುವುದು ಸಹಜ. ಆದರೆ ಇದು ನಲ್ಲನಲ್ಲೆಯರ ಪೂರ್ವರಾಗದ ಶೃಂಗಾರ ಸಾಧನೆಯ ರಂಗಸ್ಥಳವಾಗಿರದೆ ಧ್ಯೇಯಕ್ಕಾಗಿ ನಿಗ್ರಹ ವ್ರತವನ್ನು ಕೈಕೊಳ್ಳುವ ವೀರ ದಂಪತಿಗಳ ತಪೋಭೂಮಿಯಾಗಿದೆ. ಹೀಗಿದು ಧ್ಯೇಯಾತ್ಮಕ ಪ್ರೇಮ ಕಾವ್ಯ.

ಪ್ರೇಮದಲ್ಲಿ ಪರಿಪರಿಯ ಬಹು ಪರಿಗಳುಂಟು. ಕಾಮಕ್ಕಿಂತ ಹೆಚ್ಚಿನ ಪ್ರೇಮದ ಸವಿಯನ್ನು ಜಗತ್ತಿನಲ್ಲಿ ಕಂಡವರೇ ದುರ್ಲಭ. ಹೀಗಿರುವಾಗ ಪ್ರೇಮದ ಅಂಥ ಲಕ್ಷಣಗಳಿಗೆ ಅಪಾರ್ಥವಾಗುವದರಲ್ಲಿ ಅಚ್ಚರಿಯಿಲ್ಲ. ಪ್ರೇಮದ ತೀರ ಮೇಲು ಮೇಲಕಿನ ಸುಳುವುಗಳು ಮಾನವರ ಮಟ್ಟಿಗೆ ಸ್ವರ್ಗದ ಕನಸುಗಳೇ ಸರಿ. ಅಲ್ಲಿ ಪ್ರೇಮವೇ ದೇವನಾಗಿದೆ. ಆ ಸ್ಥಳದಲ್ಲಿ ಎಲ್ಲಾ ದೇವನೇ. ದೇವನ ಹೊರತು ಇನ್ನಾವ ಎಡೆಯಲ್ಲಿಯೂ ಆ ಸ್ವರ್ಗೀಯ ವಸ್ತುಗಳು ಲಭಿಸಲಾರವೆಂಬುದೇ ಅದರ ಅರ್ಥ. ಲಭಿಸಿದರೆ ಅವನೂ ಒಬ್ಬ ದೇವನೇ, ಸತ್ಯ, ಸೌಂದರ್ಯ, ಪ್ರೇಮ, ಸಂಪೂರ್ಣ ಒಳ್ಳೆಯತನ, ಸಂಪೂರ್ಣ ನ್ಯಾಯ ಇವು ದೇವ ದುರ್ಲಭ ವ್ಯಕ್ತಿಗಳ ಸಂಪತ್ತುಗಳಾಗಿವೆ. ಅಂತಲೇ ಇವುಗಳನ್ನುಳ್ಳವರಿಗೆ ವಿಭೂತಿಗಳೆಂದು ಹಿಂದಿನವರು ನಾಮಕರಣ ಮಾಡಿದ್ದಾರೆ. ಆ ನಾಡಿನ ಅಂಥ ಪ್ರೇಮವನ್ನು ಸಾಧಿಸುವದೇನು ಸಾಮಾನ್ಯವೇ ? ಅದನ್ನು ಸಾಧಿಸಿದವರು— "ಪ್ರೇಮ ಪೀಡೆಗೆ ಸಿಲುಕಿ ಉಬ್ಬೆಗವ ನೆಂದೆಂದು ಸವಿಯದಿಹ ಜೀವವದು ಜೀವವಹುದೇ ?" ಎಂದು ಕೇಳುವದು ಆಶ್ಚರ್ಯವೇ ? ಅಂಥ ಮಿಲನ ಮಹಾಸುಧೆಯನ್ನು ಇಲ್ಲಿ ಸವಿಯೋಣ ಬನ್ನಿರಿ–

"ಪ್ರೇಮವೆಂಬುದು ಸ್ವರ್ಗ, ಆ ಸ್ವರ್ಗವೇ ಪ್ರೇಮ
ದೇವನಿರುವನು ಪ್ರೇಮರೂಪದಲ್ಲಿ ।
ಪ್ರೇಮದಿಂದ ವಿಶ್ವ ಜನ್ಮತಾಳಿತು ಮತ್ತೆ
ಪ್ರಾಣವಾಗಿದೆ ಅದುವೆ (ಭುವನದಲ್ಲಿ) ॥"

ಪುಟ ೨೭, ಪದ್ಯ ೨೫

ಹೀಗೆಂದು ಕಂಡುಂಡ ಅಮರರೇ ತಮ್ಮ ಸರ್ವಸ್ವವನ್ನು ವಿಶ್ವಮಾತೆಯ ಪದತಲಕೆ ಮುಡುಪಾಗಿ ಇಡಬಲ್ಲರಲ್ಲವೆ ? ಅಂಥ ಮಿಲನೋನ್ಮಾದದ ಅಮರಗೀತೆಯನ್ನಿಲ್ಲಿ ಕೇಳೋಣ ಬನ್ನಿರಿ—

"ತನು (ಮನದ) ಶಕ್ತಿಪ್ರೇಮ ನೀಡಿ ಜಗಪದತಲಕೆ
ಬೆಳೆಸುವುದು ಲೋಕ ಸುಖ–ಶಾಂತಿಗಳನು ।
ಮನುಜ ಜನ್ಮದ ಮರ್ಮ ಇದುವೆ ಕೇಳ್ ಮಡದಿಯಳೆ
ಪರಮೇಶ್ವರ ಭಕ್ತಿ ಇದೆ ತಿಳಿಯೆ ನೀನು ॥

ಪುಟ ೧೫, ಪದ್ಯ ೫೬

ಇಲ್ಲಿ ಬನ್ನಿರಿ. ಇನ್ನು ನೀವು ಹೀಗೆ ಇಂಥ ಮಾತುಗಳಿಗೆ ಒಪ್ಪುವದಿಲ್ಲವೋ ನೋಡೋಣ—

"Love is of God ! and every one that loveth is begotten of God, and knoweth God." ( Love has its origin in God, and every one who loves is a child of God; and has begun to know God.)

—Saint John

"ಪ್ರೇಮದ ನಿಜಧಾಮವು ದೇವದೇವನೇ. ಆದ್ದರಿಂದ ಪ್ರೇಮವುಳ್ಳವರು ಅವನವರು, ಅಲ್ಲದೆ ಆತನನ್ನು ಅರಿಯುವರು."

ಇನ್ನೊಂದು ಮಾತು ಶ್ರೀ ದೇವುಡು ಅವರು ಬರೆದ ಕನ್ನಡದೊಳಗಿನ 'ಮಯೂರ'ವೆಂಬ ಕಾದಂಬರಿಯನ್ನೋದಿದವರೆಲ್ಲ ಒಂದು ಮಾತನ್ನು ಬಲ್ಲರು. ಅದೇನೆಂದರೆ, ಕದಂಬ ಕುಲದ ಮಯೂರಶರ್ಮನ ಕಾಲದಲ್ಲಿ ನಾಡಿನ ಬಿಡುಗಡೆಗಾಗಿ ವನಾಂತರದಲ್ಲಿದ್ದ ಮುನಿಯೊಬ್ಬನ ಬಳಿಯಲ್ಲಿ ಆತನು ಬೋಧಿಸಲ್ಪಡುತ್ತಿದ್ದನು. ಅದೇ ಮಾತನ್ನೇ ಆಧಾರವಾಗಿಟ್ಟುಕೊಂಡು ಪ್ರಸ್ತುತ ಕಾವ್ಯದ ಕಥೆಯನ್ನು ಈ ಅನುವಾದದಲ್ಲಿ ಕರ್ನಾಟಕದ ಇತಿಹಾಸ ಪ್ರಸಿದ್ಧ ಪಟ್ಟಣವಾದ ಬನವಾಸಿಗೆ ತಂದು ಹಾಕಿದೆ. ನಾಡಿಗರು ತಪ್ಪು ಹೊರಿಸಲಾರರೆಂದು ಭಾವಿಸಿದ್ದೇವೆ.

ಬೇರೆ ಬೇರೆ ಭಾಷೆಗಳೊಳಗಿನ ಪ್ರಕಾಶವನ್ನು ಸವಿದು ಕನ್ನಡಿಗರು ಸ್ವಪ್ರತಾಪವನ್ನು ಅರಳಿಸಿಕೊಳ್ಳಬೇಕೆಂಬುದೇ ಅರವಿಂದ ಗ್ರಂಥಮಾಲೆಯ ಒಂದು ಬಯಕೆ. ಅದು ಈ ಪ್ರಸ್ತುತ ಕೃತಿಯಿಂದಲೂ ಕೆಲಮಟ್ಟಿಗೆ ಸಾಧ್ಯವಾದೀತೆಂದು ನಮ್ಮ ಆಶೆ.

ತಮ್ಮ ಕಾವ್ಯವನ್ನು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಲು ಒಪ್ಪಿಗೆಯನ್ನಿತ್ತುದಕ್ಕಾಗಿ ಶ್ರೀ ರಾಜಾ ನರೇಶ ತ್ರಿಪಾಠೀ ಮಹಾಶಯರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಅಲ್ಲದೆ ಈ ಪುಸ್ತಕದ ಮುದ್ರಣದ ಕಾಲದಲ್ಲಿ ಕೊನೆಯವರೆಗೆ ಫಾಯನಲ್ ಪ್ರೂಫನ್ನು ನೋಡುವ ಶ್ರಮವನ್ನು ವಹಿಸಿದ ಬಾಗಲಕೋಟೆಯ ಸುಸಾಹಿತಿಗಳಾದ ಶ್ರೀ ಎಸ್. ಟಿ. ಸಾಸನೂರ, ಬಿ. ಎ., ಎಲಿಲ್. ಬಿ. ಅವರಿಗೆ ನಾವು ಋಣಿಯಾಗಿದ್ದೇವೆ. ಮತ್ತು ಸಕಾಲಕ್ಕೆ ಸುಂದರವಾಗಿ ಮುದ್ರಿಸಿಕೊಟ್ಟ ಬಾಗಲಕೋಟೆ ಪ್ರೆಸ್ಸಿನ ಒಡೆಯರಿಗೂ, ಪ್ರೆಸ್ಸಿನ ಮ್ಯಾನೇಜರರಾದ ಶ್ರೀ ಬಂಡರಗಲ್ಲ ಮಹಾದೇವಪ್ಪನವರಿಗೂ ನಾವು ಉಪಕೃತರಾಗಿದ್ದೇವೆ.

ಓಂ ಶ್ರೀ ಓಂ

೧೯೩೬

69)

# ವೀರಪಥಿಕ

(ಕವನ ಸಂಗ್ರಹ)

ಪಿ. ಧೂಲಾ

---

## ಮುನ್ನುಡಿ

ಗೆಳೆಯ ಧೂಲಾಸಾಹೇಬರ ಹಲಕೆಲವು ಕತೆಗಳೂ ಕವಿತೆಗಳೂ "ಕವಿ ಕಾಡ ಹಕ್ಕಿ – ಹಲಸಂಗಿ" ಎಂಬ ಉಪನಾಮದಿಂದ ಹಿಂದೆ 'ವಸಂತ'ದಲ್ಲಿಯೂ 'ಜಯ ಕರ್ನಾಟಕ'ದಲ್ಲಿಯೂ ಬರುತ್ತಿದ್ದವು. ಲಾವಣಿ ಸಾಹಿತ್ಯಕ್ಕೆ ಸಂಬಂಧಿಸಿದ 'ಜೀವನ ಸಂಗೀತ'ದ ಸಂಗ್ರಾಹಕರಿಬ್ಬರಲ್ಲಿ ಇವರೊಬ್ಬರು. ೧೮ – ೨೦ ವರುಷಗಳ ಹಿಂದೆ ಧಾರವಾಡದಲ್ಲಿ 'ಪ್ರಭಾತ'ವೆಂಬ ಕವಿತೆಯ ಮಾಸಿಕವು ಹೊರಡುತ್ತಿದ್ದ ಕಾಲದಲ್ಲಿ ಇವರಿಗೂ ನನಗೂ ಕವಿತೆ ಬರೆಯುವ ಅಭಿಲಾಷೆ ಹುಟ್ಟಿದ್ದು. ಈಚೆಗಿನ ದೀರ್ಘ ಕಾಲದಲ್ಲಿ ನಮ್ಮ ಕವಿತಾಕುಮಾರಿಯು ಆ ಕಲ್ಲಿಗೆ ಬಡೆದು ಈ ಕಲ್ಲಿಗೆ ಬಡೆದು ಕೊನೆ ಗೊಮ್ಮೆ ಪಥಕ್ಕೆ ಹತ್ತಿದಳು.

ಮಹಾಕವಿ ಕಾಳಿದಾಸನು, ಕೇವಲ ನೀತಿಯು ಭೀರುತ್ವವೆಂದೂ ಕೇವಲ ಶೌರ್ಯವು ಪಶುವೃತ್ತಿಯೆಂದೂ ಹಳಿದು ಅವೆರಡರ ಹೊಂದುವಳಿಯಲ್ಲಿಯೇ ಸಿದ್ಧಿ ಯೆಂದು ಹೇಳಿದ್ದು ಸರ್ವಶ್ರುತ. "ಕಾತರ್ಯಂ ಕೇವಲಾ ನೀತಿಃ, ಶೌರ್ಯಂ ಶ್ವಾಪದ ಚೇಷ್ಟಿತಮ್, ಅತಃ ಸಿದ್ಧಿಂ ಸಮೇತಾಭ್ಯಾಮ್ ಉಭಾಭ್ಯಾಂ ಅನ್ವಿಯೇಷ ಸಃ" (ರಘು– ೧೭–೪೭). 'ವೀರಪಥಿಕ'ನು ಬರೇ ನೀತಿಯನ್ನಾಗಲಿ, ಬರೇ ಶೌರ್ಯ ವನ್ನಾಗಲಿ ಅವಲಂಬಿಸಿದವನಲ್ಲ. ಇವನಲ್ಲಿ ಎರಡೂ ಸಮವೇತವಾಗಿವೆ. 'ಪಡೆದು ದುಡಿದವ ಜಾಣ' ಮತ್ತು 'ತ್ಯಕ್ತೇನ ಭುಂಜೀಥಾ' ಎನ್ನುವ ದಿವ್ಯೋಪದೇಶವನ್ನು ಈತನು ಸಫಲಗೊಳಿಸಿದ್ದಾನೆ. ಈತನಿಗೆ ಆತ್ಮನಿರೀಕ್ಷಣವೂ ಉಂಟು; ಕರ್ಮಪರೀ ಕ್ಷಣವೂ ಉಂಟು. ಮೊದಲು ಪಡೆಯುತ್ತಾನೆ; ಬಳಿಕ ಕರ್ತವ್ಯವನ್ನು ಕೊನೆಗಾಣಿಸು ವುದಕ್ಕೆಂದು ದುಡಿಯುತ್ತಾನೆ.

ಗೆಳೆಯ ಧೂಲಾಸಾಹೇಬರಿಗೆ ಕರೆಯುವುದೊಂದು ಬರೆಯುವುದೊಂದು ಹೀಗೆ ೨ ಹೆಸರುಗಳಿದ್ದು, 'ಕಾಸೀಮ' ಸಾಹೇಬರೆಂಬುದು ಇವರ ಇಟ್ಟ ಹೆಸರು. ತಮ್ಮ ಹೆಸರಿನ ಮಹಾಪುರುಷರ ಜೀವನದ ಮೇಲ್ಮೆಯನ್ನು ಮನನ ಮಾಡುವದರಿಂದ ಬಹಳ ಲಾಭವುಂಟು. ಬಹಳ ದಿನಗಳ ಹಿಂದೆ ಒಮ್ಮೆ ಗೆಳೆಯ ಬೇಂದ್ರೆಯವರು

ನನಗೆ– 'ನಿನ್ನ ಹೆಸರನ್ನೇ ನೆನೆ ಆಗ ಅದರಲ್ಲೇ ನಿನಗೆ ಬೇಕಾದ್ದು ಕಂಡೀತು' ಎಂದು ಬರೆದದ್ದುಂಟು. 'ಅರಬ್ಬಿಯುದ ಅಭಿಮನ್ಯು' ಅಥವಾ 'ವೀರಕಾಸೀಮು' ಎಂಬ ದೀರ್ಘ ಕವಿತೆಯ ತಳದಲ್ಲಿ ಇಂಥದೊಂದು ಭಾವನೆಯುಂಟು.

ಒಟ್ಟಿನ ಮೇಲೆ ಇವರ ಕವಿತೆಗಳ ಬಗೆಗೆ ಹೇಳಬಹಂದಾದುದೇನೆಂದರೆ– ತಮ್ಮ ತಮ್ಮ ಜೀವನವನ್ನು ವಿಶಿಷ್ಟ ಧ್ಯೇಯದ ಪಡಿಯುಚ್ಚಿನಲ್ಲಿ ಎರಕಹೊಯ್ಯುವ ಆಧುನಿಕ ಧ್ಯೇಯವಾದೀ ಯುಂವಕರೆಲ್ಲರ ಜೀವನಪಥದಲ್ಲಿ ಬರುವ ದುರಂತ ಉತ್ಥಾನಪತನಗಳ ಹೃದಯೋಚ್ಛ್ವಾಸದ ತರಂಗಗಳೇ ಈ ಕವಿತೆಗಳು. ಹೊರಗಿನ ಒಳಗಿನ ಅಪರಿಮಿತ ವಿಘ್ನಬಾಧೆಗಳನ್ನು ಎದುರಿಸಿ ತಮ್ಮ ಧ್ಯೇಯದೆಡೆಗೆ ಸಾಗುವ ವೀರಪಥಿಕರ ಹಾದಿಯ ಹಾಡುಗಳಿವು. ಇಂಥ ಗೀತೆಗಳು ಈಗೀಗ ಅಲ್ಲಲ್ಲಿ ಒಂದೊಂದಾಗಿ ಹಣಿಕಿ ಹಾಕತೊಡಗಿವೆ. ಅವುಗಳೆಷ್ಟೋ ಇನ್ನೂ ಸಾಹಿತ್ಯದ ಸಂತೆಗೆ ಬಾರದೆ ಅಲ್ಲಲ್ಲಿಯೇ ದಾರಿ ಕಾಯುತ್ತಲಿವೆ. ಇಂಥವಗಳೆಷ್ಟೋ ನನಗೆ ಈಚೆಗೆ ಭೆಟ್ಟಿಯಾದದ್ದುಂಟು. ಅವೂ ಇಂದಿಲ್ಲ ನಾಳೆ ಬೈಲಿಗೆ ಬಂದಾವು.

ಗೆಳೆಯ ಧೂಲಾಸಾಹೇಬರ ಕವಿತೆಗಳ ವಸ್ತುವು ಇಂಥ ಮಹತ್ತರವಾದದ್ದು. ಆದರೆ ಅವುಗಳ ಮೈಬೆಡಗು ಹಲವೆಡೆಯಲ್ಲಿ ಹುರಬರಕಾಗಿ ತೋರುತ್ತಿದೆಯೆಂಬುದು ಒಪ್ಪಿಕೊಳ್ಳತಕ್ಕ ಮಾತು. ಅನ್ಯಸಹಾಯವಿಲ್ಲದೆ ನಮ್ಮಿಂದ ನಾವೇ ಬೆಳೆದು ಬರಬೇಕಾದ ಹೀನಪರಿಸ್ಥಿತಿಯ ಮೂಲಕ ಈ ಕೊಂಕು ಸಂಭವಿಸದೆ ನಿರ್ವಾಹವಿರಲಿಲ್ಲವೆಂದು ಮಾತ್ರ ಹೇಳಿಬಿಡುತ್ತೇನೆ. ಆಪತ್ಕಾಲದಲ್ಲಿ ನಡೆದದ್ದೇ ಧರ್ಮವಾದರೂ ಅದೇ ಸರ್ವಥೈವ ಯೋಗ್ಯವೆಂದು ಭಾವಿಸಿದರೆ ಮಾತ್ರ ಕ್ಷಮಿಸಲಾರದ ತಪ್ಪು. ಇದೇನೇ ಇರಲಿ.

'ವೀರಪಥಿಕ'ನ ಬಿಡಿ ಕವಿತೆಗಳನ್ನೆಲ್ಲ ಬೇಕಂತಲೇ ಒಂದು ಕ್ರಮದಲ್ಲಿ ಸೇರಿಸಿ, ಭಾವದ ಏಕತಾನತೆಯನ್ನು ತರಲಾಗಿದೆ. ಇದರ ಪ್ರಯೋಜನವು ವಿಪುಲವಾಗಿದೆಯೆಂದು ನನ್ನ ಭಾವನೆ. ಓದುಗರು ಈ ಜಾತಿಯ ಕೃತಿಗಳ ಒಳತಿರುಳಿಗೆ ಮೆಚ್ಚಿದರೆ ನಾಡಿನಲ್ಲಿ ಅಲ್ಲಲ್ಲಿ ದಾರಿ ಕಾಯುತ್ತಲಿರುವ ಇಂಥವೇ ಇನ್ನುಳಿದ ಕೃತಿಗಳಿಗೆ ಬೇಗನೆ ಬರುವದಕ್ಕೆ ಧೈರ್ಯವುಂಟಾಗುತ್ತದೆ.

ಜನೆವರಿ ೧೯೩೮

## ಮುಗಿಲ ಜೇನು

(ಕವನ ಸಂಗ್ರಹ)

ಸಿಂಪಿ ಲಿಂಗಣ್ಣ

---

### ಪರಿಚಯ

ಭಗವಾನ್ ಶ್ರೀ ಅರವಿಂದರು 'ಭಾವೀ ಕವಿತ್ವ' ಎಂಬ ಹೆಸರಿನ ಇಂಗ್ಲೀಷ ಪುಸ್ತಕದಲ್ಲಿ ಬರಲಿರುವ ಕವಿತ್ವದ ಸ್ವರೂಪವನ್ನು ಕುರಿತು ಹೀಗೆ ಹೇಳಿರುವರು :–

"ಈ ಕವಿತ್ವವು ನೂತನ ವಿಷಯಗಳನ್ನು ಹಾಗೂ ಪುರಾತನ ವಿಷಯಗಳನ್ನು ಹೊಸ ಮಾರ್ಗದಿಂದಲೂ ಹೊಸ ವಾಣಿಯಿಂದಲೂ ಬಣ್ಣಿಸುವದು. ಅದು ತನ್ನ ಕ್ಷೇತ್ರದೊಳಗಿಂದ ಏನನ್ನೂ ಬಹಿಷ್ಕರಿಸದೆ ಹಾಗೂ ಇಳಿಸದೆ– ಮೇಲ್ಗಡೆಗೆ ಅತಿಯಾಗಿ ಉನ್ನತಗೊಳಿಸುವದರ ಮೂಲಕವೂ, ಒಳಗಡೆಗೆ ಮೂಲದ ಸುತ್ತಮುತ್ತಲೂ ಅತಿಯಾಗಿ ಬೆಳೆಸುವದರ ಹಾಗೂ ವಿಸ್ತಾರಗೊಳಿಸುವದರ ಮೂಲಕವೂ ಅಂತರತಮ ವಸ್ತುಗಳ ದರ್ಶನವನ್ನೂ ಮತ್ತು ಆ ಕಾರಣದಿಂದ ಜಗತ್ತಿನ ಹಾಗೂ ಜೀವನದ ಮತ್ತು ಆತ್ಮಾನುಭವದ ಅನುಕ್ತ ಸಂಭವನೀಯತೆಗಳ ಬಗೆಗೆ ಮಾರ್ಪಾಡು ಹೊಂದಿದ ಕಾಣ್ಕೆಯನ್ನೂ ಅದು ಬಣ್ಣಿಸುವದು. ಅದು ನಮಗೆ ಶಾಶ್ವತದ ಬಗೆಗೆ. ಪರಮಾತ್ಮನ ಸಾನಿಧ್ಯದ ಬಗೆಗೆ, ಯಾವವುಗಳನ್ನು ನಾವು ಅತಿ ಸಂಕುಚಿತತರವಾಗಿಯೂ ಆಶ್ಚರ್ಯಕರವಾಗಿಯೂ ಬಾಹ್ಯಿಕ ಜಡಜಗತ್ತಿನ ಮೇಲೆ ಅಂಟಿಕೊಂಡು ಕುಳಿತ ಒಂದು ಬಗೆಯ ಯಾವ ತರ್ಕಬುದ್ಧಿಯ ಮೂಲ ಕೆಲಕಾಲದ ಮಟ್ಟಿಗೆ ಕಳೆದು ಕೊಂಡು ಬಿಟ್ಟಿದ್ದೆವೋ ಅವುಗಳ ಬಗೆಗೆ ಅನುಭೂತಿಯನ್ನು ದೊರಕಿಸಿಕೊಡುವದು. ಆದರೆ ಈ ವಿಷಯವನ್ನು ಅದು ಪರಂಪರಾಗತ ಧರ್ಮದ ನಿಸ್ತೇಜವಾದ ಹಾಗೂ ಪದ್ಧತಿ ರೂಢವಾದ ಧ್ವನಿಯಲ್ಲಿ ಬಣ್ಣಿಸದೆ ಅಂತರ್ಜ್ಞಾನದ ಅನುಭವ ವಾಣಿಯಂತೆಯೂ, ಶಾಶ್ವತ ಸಾನ್ನಿಧ್ಯದ ದಿವ್ಯಪ್ರಕಟನೆಯ ಛಂದ ಹಾಗೂ ಮಂತ್ರದಂತೆಯೂ ಬಣ್ಣಿಸುವದು. ಕವಿಯ ವಾಣಿಯು ಸಕಲವಸ್ತು ಮಾತ್ರಗಳ ಹಾಗೂ ನಿಖಿಲ ಜೀವಜಾತಗಳ ಆತ್ಮಸ್ವರೂಪನಾದ ದೇವನನ್ನೂ ಹಾಗೂ ವಿಶ್ವದ ಮಹಾ ಜೀವನವನ್ನೂ ಮತ್ತು ಮಾನವನೊಳಗಿನ ದೇವಾಂಶವನ್ನೂ ನಮಗೆ ಪ್ರಕಟಗೊಳಿಸಿ ಕೊಡುವದು. ಅಲ್ಲದೆ, ಯಾವುದರೊಳಗೆ ಮಾನವನಿಗೆ ತನ್ನ ಸ್ವತಃದ ಸತ್ತೆಯ ಹಾಗೂ ಜೀವನದ ಮತ್ತು ಹವಣಿಕೆಗಳ ಸಮರ್ಥವಾದ ಝರಿಗಳಿರುವುದಾಗಿ ಅನಿಸು

ವದೋ ಹಾಗೂ ವಿಶ್ವಗತ ಸಕಲ ಅನುಭವಗಳೊಡನೆಯೂ, ಮಹಾನಿಸರ್ಗದೊಡನೆಯೂ ಸಕಲ ಜೀವರಾಶಿಗಳೊಡನೆಯೂ ತನ್ನ ಸಮೃದ್ಧಿಯನ್ನೂ ಏಕತೆಯನ್ನೂ ಯಾವುದರೊಳಗೆ ಆತನು ಅನುಭವಿಸುವನೋ ಅಂಥ ಆ ತನ್ನೊಳಗಿನ ದೇವತ್ವದ ಸ್ಪರ್ಶವನ್ನೂ ಹರ್ಷವನ್ನೂ ಪಡೆಯಬಿಳಿಸುವ ಮಾನವ ಅಂತರಾತ್ಮದ ಪ್ರಯತ್ನಗಳ ಸಕಲ ಭಾವನೆಗಳನ್ನೂ ಆನಂದಗಳನ್ನೂ ಆತನು (ಕವಿಯು) ಬಣ್ಣಿಸುವನು. ವ್ಹಿಟ್ಮನ್, ಕಾರ್ಪೆಂಟರ್, ಎ. ಈ. ಮತ್ತು ಟಾಗೋರ್ ಇವರಲ್ಲಿ ಯಾವ ತಾನವು ಆರಂಭವಾಗಿ ತನ್ನ ಹಲವು ಆಲಾಪನೆಗಳನ್ನು ಇದೀಗ ತಾನೇ ಕಂಡುಕೊಂಡಿದೆಯೊ, ಅದು ಹೆಚ್ಚು ಹೆಚ್ಚು ಸಮೃದ್ಧವೂ ಸನ್ನಿಕಟವೂ ಘನಿಷ್ಠವೂ ಆದ ಕಾವ್ಯ ಸಂಬಂಧೀಯ ಜ್ಞಾನ-ದರ್ಶನ-ಭಾವನೆಗಳಲ್ಲಿ ಪರಿಣಮಿಸಿ, ಕೇವಲ ರಹಸ್ಯ ಕವಿತೆಯ ರಾಜ್ಯವಾಗಿರುವ ಅಪರೂಪವಾದ ಆಂತರಿಕ ಅವಸ್ಥೆಗಳನ್ನು ಹಾಗೂ ಸಂಸ್ಪರ್ಶಗಳನ್ನು ಮಾತ್ರವೇ ಅಲ್ಲದೆ ನಮ್ಮ ಆಂತರಿಕ ಹಾಗೂ ಬಾಹ್ಯಿಕ ಅಸ್ತಿತ್ವಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯವನ್ನು ಸಹ ಸಮಸ್ತ ಜೀವನ ಹಾಗೂ ಅನುಭೂತಿಗಳು ಆತ್ಮಿಕ-ಪ್ರತೀತ ಹಾಗೂ ಆತ್ಮಿಕ ವ್ಯಾಖ್ಯೆಗೆ ಬಂದು ಮುಟ್ಟುವಂತೆ ಹೆಚ್ಚು ಹೆಚ್ಚಾಗಿ ಆಲಿಂಗಿಸಲು ಮುಂದುವರಿಯುವದು."

ಗೆಳೆಯ ಲಿಂಗಣ್ಣನವರು "ಮಿಲನ" ಕನ್ನಡಿಸಿ ಮುಗಿಸಿದ ಮೇಲೆ ಕೆಲದಿನಗಳ ನಂತರ ಅವರ ಹೃದಯದಲ್ಲಿ, ಹೊಸ ಕವಿತೆಗಳ ಹೊಸ ಝರಿಯೊಂದು ಒಡೆಯುವ ಸುಳುಹು ಅವರಿಗೆ ಹತ್ತಿತೆಂದು ಅವರ ಕವಿತೆಗಳ ಕೈಬರಹ ಪುಸ್ತಕದಿಂದ ಪ್ರತೀತವಾಗುತ್ತದೆ. ಆಗ ಅವರ ಜೀವನವು ಒಂದು ರೂಪಕ್ಕೆ ಬರಲಿದ್ದ ಕಾಲ. ಪ್ರತಿ ವ್ಯಕ್ತಿಗೂ ಅವರವರ ಜೀವನವು ತನ್ನದೊಂದು ವಿಶಿಷ್ಟ ಸ್ವರೂಪವನ್ನು ಸ್ಪಷ್ಟವಾಗಿ ಧಾರಣ ಮಾಡುವ ಕಾಲವು ಬರುತ್ತದೆ. ಬಹುಕಾಲದ ಪರಿಶೀಲನದ ಭಟ್ಟಿಯಲ್ಲಿ ಕರಗಿ ದೈವಾನುಗ್ರಹದಿಂದ ಕಾಲಕ್ರಮದಲ್ಲಿ ಪ್ರಾಪ್ತವಾಗುವ ಒಂದು ಸ್ವೋಚಿತವಾದ ಪಡಿಯಚ್ಚಿನಲ್ಲಿ ಎರಕಹೊಯ್ಯಲ್ಪಟ್ಟು ಜೀವನ ವೈಶಿಷ್ಟ್ಯವು ರೂಪಗೊಳ್ಳುವ ಮಾಹೇಂದ್ರ ಮುಹೂರ್ತದಲ್ಲಿ ಹೃದಯವು ಮಂಗಲಗೀತವನ್ನು ಹಾಡತೊಡಗುತ್ತದೆ. 'ಮುಗಿಲಜೇನು' ( Honey of the Infinity ) ಅಂಥ ಗೀತಗಳದೊಂದು ಸಂಗ್ರಹ,

ಸಂತತವಾಗಿ ಮೂರು ತಿಂಗಳಲ್ಲಿ ಬಂದ ಮೂವತ್ತು ಮೂವತ್ತೈದು ಗೀತಗಳು ಹಾಗೂ ಆ ಮೇಲಿನ ಮತ್ತು ಆದಕ್ಕೂ ಮುಂಚಿನ ಇಪ್ಪತ್ತು ಇಪ್ಪತ್ತೈದು ಗೀತಗಳು ಸೇರಿದ್ದು 'ಮುಗಿಲಜೇನು'. ಅಲ್ಲದೆ ಅನಂತರದ ಬೇರೆ ಕೆಲವು ಕವಿತೆಗಳೂ ಇದರಲ್ಲಿ ಪವಣಿಸಲ್ಪಟ್ಟಿರುವವು. ಅವು ಇದಕ್ಕೆ ಪೂರಕವಾದವುಗಳೇ.

ಇದನ್ನು "ಕರವಾಳ" ಎಂದರೆ "ದೇವನಾಯುಧ" ಎಂಬ ಹೆಸರಿನಿಂದ ಪ್ರಕಟಿಸಬೇಕೆಂದು ಲಿಂಗಣ್ಣನವರ ಬಲುದಿನದ ಬಯಕೆಯಿದ್ದಿತು. ಆದರೆ ವಿಷಯ

ವೈಶಿಷ್ಟ್ಯದ ಮೂಲಕ "ಮುಗಿಲಜೇನು" ಎಂಬ ಸವಿ ಹೆಸರೇ ಅದಕ್ಕೆ ಒಪ್ಪುವದೆಂದು ನಾನು ಸೂಚಿಸಿದ್ದರ ಮೂಲಕ ಹಾಗೂ ಮೂಲ ಸಂಗ್ರಹದಲ್ಲಿಯೇ ಆ ಹೆಸರಿನದೂ ಒಂದು ಕವಿತೆ ಇದ್ದುದರಿಂದ ಹಾಗೆ ಮಾಡಲಾಯಿತು. "ಮಹಾಕಾವ್ಯ" ಎಂಬ ಕವಿತೆಯನ್ನೋದಿದರೆ ಈ ಹೆಸರಿನ ಸವಿಯು ಸಾರ್ಥಕವೆಂದೆನಿಸುವದು.

ಸೃಷ್ಟಿ ಹಾಗೂ ಜೀವನ ಇವುಗಳ ರಹಸ್ಯವೇನು ? ಎಂಬುದು ಅನಾದಿ ಕಾಲದ ಕೂಟಪ್ರಶ್ನೆ. ಎಲ್ಲ ಜ್ಞಾನಾಭಿಲಾಷಿಗಳು ಇದನ್ನು ಬಿಡಿಸುವದಕ್ಕೆ ಗೋಳಾಡಿರುವರು, ಗೋಳಾಡುವರು. ಆದರೆ ಬಿಡಿಸದೆ ಗತ್ಯಂತರವಿಲ್ಲ. ಯಕ್ಷ ಪ್ರಶ್ನೆಯಿದ್ದ ಹಾಗೆ. ಉತ್ತರ ಹೇಳಬೇಕು. ಇಲ್ಲದಿದ್ದರೆ ಜೀವನ ವ್ಯರ್ಥ. ಟಾಲ್‌ಸ್ಟಾಯರ ಆತ್ಮಚರಿತ್ರೆಯಲ್ಲಿ ಈ ಹೋರಾಟದ ಸ್ವರೂಪವನ್ನು ಅರಿತುಕೊಳ್ಳಬಹುದು.

ಒಬ್ಬೊಬ್ಬರಿಗೆ ಒಂದೊಂದು ವಿಧದಿಂದ ಉತ್ತರದ ಅರಿವು ಹುಟ್ಟುತ್ತದೆ. ಒಬ್ಬರಿಗೆ ಒಳಗಿನಿಂದ, ಇನ್ನೊಬ್ಬರಿಗೆ ಹೊರಗಿನ ಸೃಷ್ಟಿಯಿಂದ, ಮತ್ತೊಬ್ಬರಿಗೆ ಗ್ರಂಥದಿಂದ, ಮಗುದೊಬ್ಬರಿಗೆ ಒಬ್ಬರ ಉಪದೇಶದಿಂದ. ನಮ್ಮ ಭಾರತೀಯ ಪುರಾತನರಲ್ಲೊಬ್ಬರಿಗೆ ಸೃಷ್ಟಿಯೊಳಗಿನ ಅನೇಕ ಪ್ರಾಣಿ ಹಾಗೂ ವಸ್ತುಗಳಿಂದ ಜ್ಞಾನೋದಯವಾಗಿದೆ. 'ಸೃಷ್ಟಿಯ ಸದುಪದೇಶ'ವೆಂಬ ಹೆಸರಿನಿಂದ ಈ ಸಂಗತಿಯು ಕನ್ನಡದಲ್ಲಿ ಪುಸ್ತಕರೂಪದಿಂದ ಬಹಳ ದಿನಗಳ ಹಿಂದೆಯೇ ಪ್ರಕಟವಾದದ್ದುಂಟು.

ಗೆಳೆಯ ಲಿಂಗಣ್ಣನವರು ಸೃಷ್ಟಿಯಿಂದ ಸದು–ಉಪದೇಶ ಪಡೆದುಕೊಳ್ಳಲು ಹವಣಿಸಿದುದನ್ನು ನಾವು "ಮುಗಿಲಜೇನು" ವಿನಲ್ಲಿ ಕಾಣಬಹುದು. "ಎಂದು ?" ಎಂಬ ಕವಿತೆಯ ಪಲ್ಲವಿಯಲ್ಲಿ ಈ ಮಾತು ಒಡೆದು ಕಾಣುವದು. "ಮಾಂಗಲ್ಯ ಮುತ್ತು" ಎಂಬ ಕವಿತೆಯಲ್ಲಿ ಮೋಡ, ಮಿಂಚು, ಗದ್ದರಣೆ, ಬಿರುಗಾಳಿಗಳಿಂದ ಒಂದು ಮಾತನ್ನು ಕಲಿತರೆ, "ಅಕ್ಕಸಾಲೆ"ಯಲ್ಲಿ ಕಾವು, ಏಟು, ಸೆಳೆತ, ಎಳೆತಗಳಿಂದಲೂ ಮುಗಿದು ಮುಗಿಯದ ಸಣ್ಣ ದೊಡ್ಡ ಆಭರಣಗಳಿಂದಲೂ, ಕಂಬಿ ಕಡ್ಡಿಗಳಿಂದಲೂ ಇನ್ನೊಂದು ಮಾತನ್ನು ಕಲಿಯಲು ಉಜ್ಜುಗಿಸಿರುವರು. "ಕೊನೆಯಂತೊ" ಎಂಬುದರಲ್ಲಿ ಮಾಮರದ ಹಗರಣದಲ್ಲಿ ಹೈರಣಿಸಿ, "ಬಂಗಾರ ಬೆಟ್ಟ"ದಲ್ಲಿ ಕರ್ತವ್ಯ ಕರ್ಮದ ಹಿರಿಮೆಯನ್ನು ಮನಗಂಡಿರುವರು. ಮುಳ್ಳು ತುಂಬಿದ "ಡಬ್ಬುಗಳ್ಳಿ"ಯಿಂದಲೂ ಒಂದು ಮುತ್ತಿನಂತಹ ಮಾತನ್ನು ಕಲಿಯಲು ಅವರು ಹಿಂಜರಿಯರು. "ಕಳ್ಳಿಯೆ ! ನಿನಗೆಂದಿಗು ಮರಣವಿಲ್ಲವು ನೀನು ಭಾರತದ ಸಂಸ್ಕೃತಿಯಂತೆ" ಎಂದು ಅಮರತ್ವವನ್ನು ಹಾಡಿರುವರು. "ಬಯಲಾಟ"ದಲ್ಲಿ 'ಕಲ್ಲು ಕಲ್ಲಿಗು ಕಣ್ಣು, ಹುಲ್ಲು ಕಡ್ಡಿಗು ಕಿವಿಯು' ಎಂದು ಸಚರಾಚರದ ಸಜೀವತೆಯನ್ನು ಅನುಭವಿಸಿ, "ಭಯ"ದಲ್ಲಿ 'ಅಗೊ ! ಬೆಟ್ಟ ಬೆಟ್ಟಗಳ ಸಾಲು ಭಯಂದಿ ಕೈ ಕೈ ಹಿಡಿದಿವೆ !' ಎಂದು, 'ಭಯವೆ ದೇವನ ಆಜ್ಞೆ, ಭಯವೆ ದೇವನ ಸಂಜ್ಞೆ'

ಎಂದು 'ಭಯಾತ್ ತಪತಿ ಸೂರ್ಯಃ,' ಮೊದಲಾದ ಉಪನಿಷತ್ತಿನ ಸನ್ನಿವೇಶಗಳನ್ನು ನೆನೆಸಿಕೊಂಡಿರುವರು. ಸೃಷ್ಟಿ ವಿಕಾಸದ ಹಿರಿತತ್ತ್ವವನ್ನರಿಯದೆ ನರಳುವವರಿಗೆ "ಅಕ್ಕಸಾಲೆ"ಯಲ್ಲಿ 'ಮರುಳರಿರಾ, ಏಕಿಂತು ಮರುಗುತಿಹಿರೆಲೆ? ಆ ಹಾಡೆ ಮೊದಲು ನನಗೂ ಇತ್ತು. ಕರ್ತಾರನೊಲಿದು ಕೈ ಹಿಡಿದ ಗಳಿಗೆಯೇ ಹಿರಿಯೋಗ!' ಎಂದು ಹಿರಿ ಭರವಸೆಯನ್ನು ಕೊಡುವರು. ವಿಶ್ವವೆಂಬ "ಒಂದೇ ಮನೆ"ಯಲ್ಲಿ ದೇವದೇವನ ಒಂದೇ ಮನೆಯಲ್ಲಿ ವಿಷ್ಟು ಒಡಕುಗಳು? "ಮುಗಿಲೊಂದೆ, ಮಳೆಯೊಂದೆ, ಉಸಿರೊಂದೆ, ಹಸಿರೊಂದೆ, ಆದರೇನು?.........ಕದನಗಳು ಕಾಳಗಗಳು ಕತ್ತಿಯಾವೇಶಗಳು: ಮೋಸಗಳು ದ್ರೋಹಗಳು, ವಿಷವಾಯು ಮದ್ದುಗಳು!!" ಎಂದು ಕಳಕಳಿಸಿದರೂ "ಮಹಾಕಾವ್ಯ"ದಲ್ಲಿ ಮಾನವರು ದಾನವರು, ಮುಗಿಲ ಜಲ ಚಿಕ್ಕೆಗಳು! ಮರಬಳ್ಳಿ ಹೂ ಕಾಯಿ ಮುಳ್‌ಕಲ್ಲು ಹುಲ್ಲುಗಳು ಸರ್ವವೂ ಆ ಮಹಾಕಾವ್ಯದಲ್ಲಿ ವಸ್ತುಗಳು' ಎಂದು ದಾನವರನ್ನೂ ಮುಳ್ಳುಕಲ್ಲುಗಳನ್ನೂ ಕೂಡ ಪ್ರೇಮದಿಂದ ನೋಡಿರುವರು. "ಬೇಡಲಾರೆ" ಎಂಬ ಕವನದಲ್ಲಿ 'ಕಡಲ ನೀರು ತಾನು, ಕೊಡದ ನೀರು ನಾನು ಬಲ್ಲೆನದನು, ಕಡಲ ನೀರ ಬಣ್ಣ ರೂಪ, ಸವಿಯು ಕೊಡದ ನೀರಿಗುಂಟು, ಅದರ ಶಕ್ತಿ ಅದರ ಬೆಡಗು ಅಣುವಿನಷ್ಟು ಇಲ್ಲವೇನು?' ಎಂದು ದೇವರ ಅಪಾರಶಕ್ತಿ, ಶಾಂತಿ, ಜ್ಯೋತಿ, ಆನಂದ ಮೊದಲಾವುಗಳನ್ನು ತಮ್ಮೊಳಗಿನ ಆತ್ಮನಲ್ಲಿ ಅನುಭವಿಸುವ ಆಶೆಯನ್ನು ತಳೆಯುವರೆಂತಲೇ "ಬೀಜರಾಶಿ"ಯಲ್ಲಿ 'ಮಾನವರೆ ನಾವೆಲ್ಲಿ? ಮಾನಿಸರೆ ನಾವೆಲ್ಲಿ? ಕಲ್ಪನೆಯ ಮೊಳೆಯಾಗಿ ಕಲ್ಪತರು ನಮ್ಮಲಿದೆ, ಅದ್ಭುತದ ಶಕ್ತಿಶಿಶು ನಮ್ಮ ಗರ್ಭದಲುಂಟು' ಎಂದು ಕಣೆಯನ್ನು ಹೇಳಿರುವರು. "ಕದಲಿನಾಳದಲ್ಲಿ" "ಶರಾವತಿ" ಮೊದಲಾದವುಗಳಲ್ಲಿಯೂ ಇದೇ ಭಾವವು ಅಡಕವಾಗಿ ಮೊಳೆಕೆಯಾಗುವದು. ಆದರೆ ಇಂದು ಆ 'ಶಿಶು' ಎಂಥ ಅವಸ್ಥೆಯಲ್ಲಿದೆ? 'ಮರದ ಕೊಂಬೆಗೆ ಒಂದು ತೊಟ್ಟಿಲವ ಕಟ್ಟಿಹುದು......ಮರದ ಮೇಲ್ಬದಿಯಲ್ಲಿ ಮರಜೇನು ಹುಟ್ಟಿಹುದು......ದೇವರಾಯನ ಕರುಣೆಯಿಂದ... ಹನಿಯುತಿದೆ ಸವಿಜೇನು ಒಂದೊಂದು ಹನಿಯಾಗಿ!' ಆದರೆ 'ತೂಗುತಿದೆ ತೊಟ್ಟಿಲವು......ಇಂತಿರಲು ಆ ಅಮೃತ, ತನ್ನ ಬಾಯಿಗೆ ಎಂದು ಎಂತು ಬೀಳುವದದನು ತಿಳಿಯುವುದೆ ಆ ಕೂಸು?' 'ಜೀಕು ನಿಂತಿರಲಾಗ ಲೇಸು ಲೇಸು' ಹೌದು ಎಂಥ ಲೇಸು! ನಮ್ಮ ಹೊಯ್ದಾಟ, ಚಾಂಚಲ್ಯ ನಿಂತು ಎಲ್ಲ ಸ್ಥಿರವಾದಾಗಲ್ಲವೇ ಅನಂತದಲ್ಲಿ ಅಮೃತಧಾರೆಯಾಗಿ ಇಳಿಯುವ 'ಮುಗಿಲಜೇನ'ನ್ನು ನಾವು ಸವಿಯುವದು? ಅಂತಲೇ 'ಮಹಾಕಾವ್ಯ'ದಲ್ಲಿ ಉಸುರಿದಂತೆ "ಹೆಜ್ಜೆ ಹೆಜ್ಜೆಗೂ ಹಾಡು, ಜಾವ ಜಾವಕೂ ರಾಗ, ಯುಗ ಯುಗಗಳಳಿದರೂ ಈ ಬಗೆಯ ಹಾಡು ಹೊಸದು" ಎಂದು ನಾವು ಹಿಗ್ಗಬೇಕಲ್ಲವೆ?

ಹಿಂದಿನಿಂದ ಬರೆದ ಕವಿತೆಗಳೆಂದರೂ ಅದೇ ಉಸುರಿನಿಂದ ಬಂದವುಗಳೇ ಹೆಚ್ಚು. "ಆಶೆ" ಮತ್ತು "ಮನದಾಸೆ"ಗಳಲ್ಲಿ ಈ ಅಭೀಪ್ಸೆಯನ್ನು ಮನಗಾಣ

ಬಹುದು. "ಈಸು ದಿನವ ಕಳೆದರೇನು, ಏಸು ವರುಷ ಗತಿಸಲೇನಂ? ನಾನು ಗಳಿಸಲಿರುವುದೊಂದೆ, ಏನು ಹಾಡಲದನೆ ತಂದೆ ನುಡಿಯುತಿರುವನು, ವೀಣೆ ಮಿಡಿಯುತಿರುವದಂ" ಎಂದು ಧ್ಯೇಯದ ಸ್ಥಿರತೆಯನ್ನು ಸ್ಪಷ್ಟಪಡಿಸಿ, "ವಿಶ್ವವೃಕ್ಷ ಕಾನು ಅರಳು, ಕಾಯಿ, ಹಣ್ಣು ಆಗದಿರಲು, ರೆಂಬೆಗೆಂಟಿನಿಂತ ಹಸಿರು, ಎಲೆಯದಾಗ ಲೆನುವ ಉಸಿರಂ ಸೂಸುತಿರುವದು, ಎದೆಗೆ ಬೀಸುತಿರುವದು" ಎಂದು ತಮ್ಮ ಹಿರಿಯಾಸೆಯ ಸ್ವರೂಪವನ್ನು ನಿಚ್ಚಳವಾಗಿ ಕಾಣಿಸಿರುವರು. "ಒಂದೇ ಆಶೆಯು ಎನಗಿದೆ ತಂದೇ, ಅದ ಪಡೆಯುವುದೇ ಮೊದಲಾಸೆ, ಇಂದೇ ಸಿಗದಿರೆ ಇನ್ನೆಂದಾದರೂ ದೊರಕೊಳಲೆನ್ನುವುದಾಸೆ" ಗೀತಾಂಜಲಿಯಲ್ಲಿ "ಈ ಜನ್ಮದಲ್ಲಿ ನಿನ್ನ ದರುಶನವಾಗದಿದ್ದರೂ ಆಗದಿರಲಿ, ಆದರೆ ನಿನ್ನನು ಪಡೆಯಲಿಲ್ಲವಲ್ಲಾ ಎಂಬ ತಿಳಿವಳಿಕೆಯು ನಿದ್ರೆಯಲ್ಲಿಯೂ ಎಚ್ಚರಿಕೆಯಲ್ಲಿಯೂ ಕನಸಿನಲ್ಲಿಯೂ ಮನಸಿನಲ್ಲಿಯೂ ಸಹ ಜಾಗೃತವಾಗಿ ಉಳಿಯಲಿ" ಎಂಬ ಅಮರಗೀತದ ಒಂದಣುವನ್ನು ನಾವಿಲ್ಲಿ ಅನುಭವಿಸುವದಿಲ್ಲವೆ? ಹೀಗೆ ಹಿರಿಯಾಸೆ ಪಟ್ಟ ಕವಿಯು ತನ್ನ ಆಸೆ ಫಲಿಸುವುದಕ್ಕೆ "ದೇವ ಶಿಲ್ಪಿಯೇ, ಕೇಳು ನಾ ಬಲು ಬಿರುಸು ಕಲ್ಲಾಗಿರುವೆನು, ಯಾವ ಒಡವೆಯ ಮಾಡಿ ಬಿಡುವೆಯೊ, ನಿನ್ನ ಕೈಯಲಿ ಕೊಡುವೆನು" ಎಂದು ಸರ್ವ ಸಮರ್ಪಣದ ಮಂತ್ರವನ್ನು ಜಪಿಸಿ "ಸ್ವೀಕರಿಸು" ಎಂದು ಜಗದೀಶನಡಿಗೆ ತಮ್ಮನ್ನು ನಿವೇದಿಸಿರುವರು.

ಹೀಗಿರಲು ಇವರು ಕಂಡ "ಉಷಾತಾಯಿ" ದಿನದ ಒಂದು ಜಾವ ಮಾತ್ರವಲ್ಲ. ಅನಾದ್ಯನಂತಕಾಲದ ಆದಿ ಮಾತೆ ಅವಳು. "ಬಂದಳು ಬಂದಳು ಉಷೆ ಬಂದಳು ಅದೋ! ......ನಿಂದಳು ನಿಂದಳು ಮುಗಿಲ್ನಗೆ ಸಾಗರ! ......ತಂದಳು ತಾಯಿಯು ಶಾಂತಿಯ ರಸವನು" ಇತ್ಯಾದಿಯಾಗಿ ಈ ಮಹಾತಾಯಿಯ ಮಹಿಮೆಯನ್ನು ಕೊಂಡಾಡಿ "ಕಡೆತನಕಿಡು ಇದೆ ಕೃಪೆಯೆಂದೆನ್ನುತ ಭಕ್ತಿಯ ಭರದಲಿ ಪೊಡಮಡುವೆ" ಎಂದು ಆದಿಮಾತೆಗೆ ಬೇಡಿಕೊಂಡಿರುವರು. ಜ್ಞಾನಸೂರ್ಯನ ಸಂದರ್ಶನ ಮಾಡಿಸುವ ತಾಯಿಯು ಇವಳೇ. ಒಂದು ರೀತಿಯಿಂದ "ದ್ಯಾವಾ ಪೃಥಿವಿ" ಯರೆಂದರೂ ಇವರೇ.

ಇಷ್ಟೆಲ್ಲ ಆದ ಮೇಲೆ "ಮನೆಯವಳ ವಿಷಯ ಹಿರಿಯಾಸೆಯ ಕವಿಯ ಹೃದಯವನ್ನು ಹರಣಮಾಡುವುದು ಸಹಜವೇ ಅದೆ. ತಾನು ನಡೆದ ದಾರಿಯಲ್ಲಿ ಅವಳೂ ನಡೆಯದೆ ಗತ್ಯಂತರವಿಲ್ಲ. "ಮನೆಯವಳೆ, ನೀನಿನ್ನು ಮನದವಳು ಆಗೇ... ನನ್ನವಳು ನೀನಾಗಿ ಈ ಮನೆಗೆ ಬಂದಂತೆ, ನೀ ಮಾಡೇ ನಿನ್ನವನು ನಾನಾಗುವಂತೆ... ನಾವಿನ್ನು ನಡುಹೊಳೆಯ ಈಸಬೇಕಿಹುದಂ, ನಿನ್ನ ಸಂಗಡ ನಾನೆ, ಗಟ್ಟಿಹಿಡಿ ಬೆಚ್ಚದಲೆ ಮುಳುಗಿ ಮುಳುಗಿಸಬೇಡ ಕೈ ಬಿಟ್ಟು ನಲ್ಲೆ...... ನನ್ನ ಒಡವೆಯ ನಾನು ಗಳಿಸಬೇಕೆಂದು ದುಡಿಯುತ್ತಿರುವೆನು. ಮಿಡುಕಿ, ಎಲ್ಲೆಲ್ಲು ಹುಡುಹುಡುಕಿ, ಗೋಳಿಡುವ ಬಿಡುವಿಲ್ಲ ಶುಭ ನುಡಿಯೆ ಹಕ್ಕಿ!" ಎಂದು ತನ್ನ ಹೃದಯದ ಹಕ್ಕಿಗೆ ತನ್ನ

'ಸಹಧರ್ಮಿಣಿ' ಯಾಗಲು 'ಅರ್ಧಾಂಗಿ' ಯಾಗಲು, ಸಹಧೈರ್ಯಗಾತಿಯಾಗಲು ಕೇಳಿಕೊಳ್ಳುವರು. ಇದೇ ಅಲ್ಲವೇ ದಾಂಪತ್ಯದ ಶುಭಸಾಫಲ್ಯ.

'ಹರಿಹರ' 'ಜೀವಶಿಲೆ' ಪ್ರವಾಸ ವೃತ್ತವನ್ನು ಬಣ್ಣಿಸುವ ಕವಿತೆಗಳು. "ಜೀವಶಿಲೆ" ಅತ್ಯುತ್ತಮ ಕವಿತೆ ಅಲ್ಲವೆಂದು ಯಾರು ಅನ್ನುವರು? 'ಮದಿರಾ ಮಂದಿರ'ವು ಅನುವಾದ. 'ಸಂಧ್ಯಾವಂದನೆ'ಯು ನನ್ನದೊಂದು ಕವಿತೆಯ ಪೂರಕವಾಗಿ ಬರೆದ ಪ್ರತಿಪದ್ಯ. ಇನ್ನು ಕವಿತೆಯಂತೆ ನಾವೂ "ಆಟ ಸಾಕು" ಎಂದು ನಮ್ಮ ಕಿರಿ ಬರಹವನ್ನು ಮುಕ್ತಾಯಗೊಳಿಸಬೇಕಲ್ಲವೇ? "ಕಣ್ಣುಮುಚ್ಚುವಾಟ ಸಾಕು, ಕಣ್ಣು ತೆರೆಯುವಾಟ ಬೇಕು" ಎಂದು ಅಜ್ಞಾನದ ಕತ್ತಲೆಯಿಂದ ಮಬ್ಬಗವಿದ ನಮ್ಮ ಕಣ್ಣನ್ನು ತೆರೆಯಿಸುವ ದಿವ್ಯ ವಿಜ್ಞಾನ ಸೂರ್ಯನೆಡೆಗೆ ಹಾಗೂ ಅದರ ಸಹಕಾರಿಣಿಯಾದ ದಿವ್ಯ ಉಷಾತಾಯಿಯು ಕಡೆಗೆ ನಮ್ಮ ಮುಖವನ್ನು ಹೊರಳಿಸುವಾ.

೧೦-೭-೧೯೪೫

## ತರಂಗಿಣಿ
(ಕವನ ಸಂಕಲನ)
ಎಸ್. ಡಿ. ಇಂಚಲ

---

### ಮುನ್ನುಡಿ

ಗೆಳೆಯರಾದ ಇಂಚಲರವರ ಈ ಕವನ ಸಂಗ್ರಹವು ಅವರ ಬಳಗದ ಇನ್ನುಳಿದ ಬಂಧುಗಳ ಕವನ ಸಂಗ್ರಹಗಳ ಹೊರಬರುವಿಕೆಯ ಮುಂಗುರುಹಾಗಿ ಇದೀಗ ಪ್ರಕಟವಾದುದು ಆನಂದದ ಸಂಗತಿ. ಗೆಳೆಯರಾದ ಕರ್ಕಿ, ತೂರವುರಿ, ಅಂಗಡಿ, ಇಂಚಲ ಎಂದರೆ ಗೆಳೆಯರಾದ ಸಣಕಲ್ಲರವರ ಮರದ ನಾಲ್ಕು ಹಿರಿಕೊಂಬೆಗಳಿದ್ದಂತೆ. ಈ ಎಲ್ಲ ಗೆಳೆಯರ ಕವನ ಸಂಗ್ರಹಗಳೂ ಪ್ರಕಟವಾಗಬೇಕೆಂದು ಅವರ ಪಕಳೆಗಳ ಸಂಗ್ರಹವಾದ "ತುಂಬಿ"ಯನ್ನು ನೋಡಿದವರೆಲ್ಲರೂ ಬಯಸದಿರಲಾರರು. ಗೆಳೆಯ ಕರ್ಕಿಯವರ ಅಮೌಲ್ಯ ಕವಿತೆಗಳ ಸಂಗ್ರಹವೂ ಅಚ್ಚಾಗುತ್ತಲಿದೆಯೆಂಬ ಸಮಾಚಾರವನ್ನು ಗೆಳೆಯರ ಮುಖದಿಂದ ಕೇಳಿದ್ದೇನೆ. ಇದು ಇನ್ನೊಂದು ಆನಂದದ ಸಂಗತಿ. ಹೀಗೆಯೇ ಈ ಗೆಳೆಯರೆಲ್ಲರ ಕವನ ಸಂಗ್ರಹಗಳು ಪ್ರಕಟವಾಗಿ ಈ ಎಲ್ಲ ಉಪನದಿಗಳಿಂದ ಕೂಡಿ ಗೆಳೆಯರಾದ ಶ್ರೀ ಈಶ್ವರ ಸಣಕಲ್ಲರವರ ಕಾವ್ಯಗಂಗೆಯು ವಿಸ್ತಾರ ಹೊಂದಿ ಅಬ್ಬರಿಸಿ ಮೇರೆವರಿದು ಕನ್ನಡಿಗರಿಗೆ ಕಾವ್ಯಪಂಚನದವಾಗಿ ಆನಂದಗೊಳಿಸಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

ಬೆಳಗಾವಿಯ "ಕನ್ನಡ ಟ್ರೇನಿಂಗ ಕಾಲೇಜಿ"ನ ಪ್ರಿನ್ಸಿಪಾಲರಾದ ಗೆಳೆಯ ಶ್ರೀ ಎಸ್. ಡಿ. ಇಂಚಲರವರ "ತರಂಗಿಣಿ" ಎಂಬ ಈ ಕವನ ಸಂಗ್ರಹವು ಮುಖ್ಯವಾಗಿ ನಾಡಿನ ಹಾಡುಗಳ ವರ್ಗಕ್ಕೆ ಸೇರಿದುದಾಗಿದೆ. ನಾಡತಾಯಿಯ ಹಿರಿಮೆ, ನಾಡಿನ ವೀರವಿಭೂತಿಗಳು, ನಾಡಿನ ವರ್ತಮಾನ ಕಷ್ಟ ಮೊದಲಾದವುಗಳಿಗೆ ಸಂಬಂಧಿಸಿದ ಕವಿತೆಗಳು ಸದ್ಯದ ಪುಸ್ತಕದ ಬಹುಭಾಗವನ್ನು ವ್ಯಾಪಿಸಿವೆ. "ಕನ್ನಡದೇವಿಯ ತೇರು" "ಕಿತ್ತೂರ ರಾಣಿ" "ಶ್ರೀಯವರಿಗೆ" "ದುರ್ಭಾಗ್ಯ ಬಂಗಾಲ" "ಸ್ವಾಂತತ್ರ್ಯ ಧ್ವಜ" ಮೊದಲಾದ ಕವಿತೆಗಳು ಈ ಮಾತಿಗೆ ಸಾಕ್ಷಿಯಾಗಿವೆ.

ಕವಿಯ ಮುಖ್ಯ ಕಾರ್ಯವಾದ ಸೃಷ್ಟಿ-ಸೌಂದರ್ಯದ ವರ್ಣನೆಯನ್ನು "ವೈಜನಾಥನ ಬೆಟ್ಟದ ಮೇಲೆ" ಹಾಗೂ "ಮಗುವಿನ ಹಂಬಲ" ಎಂಬ ಕವಿತೆಗಳಲ್ಲಿ ನಾವು ಮನವಾರೆ ನೋಡಬಹುದು:

ಒಂದು ವೀರಗೀತೆಯ ಜಾತಿ, ಇನ್ನೊಂದು ರಮ್ಯವರ್ಣನೆಯ ರೀತಿ. ಇವೆರಡು ಪದ್ಧತಿಗಳಿಗೆ ಆದರ್ಶ ಪುರುಷರಾದ ಆಂಗ್ಲಕವಿ ಟೆನಿಸನ್ ಹಾಗೂ ಭಾರತೀಯ ಆಂಗ್ಲಭಾಷಾ ಕವಿ ಶ್ರೀ ಹರೀಂದ್ರನಾಥ ಚಟ್ಟೋಪಾಧ್ಯಾಯ ಇವರ ಎರಡು ಕವಿತೆಗಳ ಭಾವಾನುವಾದ "ಹೊರೆ" ಮತ್ತು "ಕಲ್ಯಾಣ ಮಂಟಪ" ಎಂಬ ಕವನಗಳಲ್ಲಿರುವ ಭಾವವನ್ನು ನೋಡಿ ನಾವು ಬೆರಗಾಗಬಲ್ಲೆವು.

ಈ ಎರಡು ಪ್ರಕಾರದ ಕವನಗಳಲ್ಲದೆ ವ್ಯಕ್ತಿಗಳ ಕಷ್ಟಕ್ಕೆ ಮರುಗಿ ಬರೆದ "ತಬ್ಬಲಿ", "ಎರಡು ಸ್ಮೃತಿಗಳು" ಮೊದಲಾದ ಕವಿತೆಗಳು ಮುಂಚೆ ಹೇಳಿದ ಸಮಷ್ಟಿ ದುಃಖದ ಕವನಗಳಿಗೆ ಮೂಲ ಬೀಜಗಳಂತೆ ಇವೆ.

"ಧರ್ಮದೃಷ್ಟಿ" "ನಮ್ಮ ಭಾಗ್ಯದೇವ (ಶ್ರೀ ಬಸವೇಶ್ವರರು)" ಮೊದಲಾದ ಕವನಗಳು ಆಧುನಿಕ ಯುರೋಪಿಯನ್ನರಂತೆ ನಮ್ಮ ಭಾರತೀಯರು ಲೋಕದ, ತನ್ನ, ಇತರರ ಕಷ್ಟದ ಕತೆಗೆ ಕಂಗೆಟ್ಟು ನಾಸ್ತಿಕರಾಗಿ ದೇವರಿಗೆ ಬಯ್ಯುವ ದುರ್ಭಾವಕ್ಕೆ ಬಲಿಬೀಳಲಾರರೆಂಬ ಮಾತಿಗೆ ಸಾಕ್ಷಿಯಾಗಿವೆ. ಅನಾಥ ಬಾಲಕನ ಅವರ್ಣನೀಯ ಕಷ್ಟವನ್ನು ಕಣ್ಣಾರೆ ಕಂಡೂ ಕೂಡ ಕವಿಯು :—

ಅವನ ಕರುಣೆ ಪಡೆವುದೊಂದೆ
ಇಳೆಯ ಬಾಳ ಗುರಿಯದೆಂಬೆ
ಬಿಸಿಲ ಬದಿಗೆ ನೆರಳು ಇಹುದೆ
ತಿರೆಯ ಮರ್ಮವು ॥

ಎಂದು ಧೀರತನದಿಂದ ಸತ್ಯವನ್ನೇ ಸಾರುವವನ್ನು ನೋಡಿದರೆ ಯಾವ ಭಾರತೀಯನಿಗೆ ಆನಂದವಾಗಲಿಕ್ಕಿಲ್ಲ ?

ಈ ಕವನ ಸಂಗ್ರಹದ ಮೊದಲ ಕವನವಾದ "ತರಂಗಿಣಿ" (ಹೊಳೆ) ಯಾಗಿ ಹರಿದುದರ ಹಾಡಾಗಿದೆ. ಅದರ ಮುಂದಿನ "ಬೆಳಗು" ಎಂಬ ಕವಿತೆಯು ನಮ್ಮ ನಾಡಿನ ಮೇಲೆ ಹೊಸ ಕಾಲದ ಬೆಳಗು ಬರುತ್ತಿದೆಯೆಂಬುದನ್ನು ಸೂಚಿಸುತ್ತದೆ. ಹೀಗೆ ಕವನಸಂಗ್ರಹವು, ಮೊದಲು ನಾನು ಸೂಚಿಸಿದಂತೆ, ಒಂದು ಬಗೆಯಿಂದ ನಾಡಿನ ಹಾಡುಗಳ ಸಂಗ್ರಹವಾಗಿದೆಯೆಂದು ಇನ್ನೊಮ್ಮೆ ವಾಚಕ ಮಹಾಶಯರ ನೆನಪಿಗೆ ತಂದುಕೊಡುತ್ತೇನೆ.

ಇನ್ನೇನು ? ಶಬ್ದಾಲಂಕಾರವು ಕಾವ್ಯದ ದೇಹ, ಅರ್ಥಾಲಂಕಾರವು ಕಾವ್ಯದ ಜೀವ. ಪ್ರಾಸ, ಛಂದಸ್ಸು ಮೊದಲಾದವುಗಳು ಕಾವ್ಯದ ಬಹಿರಂಗ. ಭಾವ, ಧ್ವನಿ ಮೊದಲಾದವುಗಳು ಕಾವ್ಯದ ಅಂತರಂಗ. ೨೫ ವರುಷಗಳ ಹಿಂದೆ ಮೊದಮೊದಲಿಗೆ ಕವಿತಾ ಪ್ರಯೋಗಕ್ಕೆ ಮುಂದೆ ಬಂದವರು, ಛಂದೋಬದ್ಧ, ಪ್ರಾಸಬದ್ಧವಾದರೆ

ಅದು ಕವಿತೆಯಾಯಿತು ಎಂಬ ಭಾವನೆಯುಳ್ಳವರಾಗಿದ್ದರು. ಆಮೇಲೆ ಆಂಗ್ಲ ಸಾಹಿತ್ಯ ಹಾಗೂ ಶ್ರೀ ರವೀಂದ್ರರ ಗೀತಾಂಜಲಿಗಳನ್ನೋದಿ ಕವಿತಾ ರಚನೆಗೆ ಪ್ರವರ್ತಿಸಿದವರು ಭಾವಮಯವಾದ ವಾಣಿಯು ಕವಿತೆಯೆಂಬ ಭಾವನೆಯನ್ನು ತಾಳಿದರು. ಎರಡೂ ಸತ್ಯವೇ. ಎರಡರಲ್ಲಿ ಯಾವದೇ ಒಂದನ್ನು ಮಾತ್ರ ಅನುಸರಿಸಿದರೆ ಅದು ಅಪೂರ್ಣತೆಯೇ ಸರಿ. ಸದ್ಯದ ಕಾಲಕ್ಕೆ ಅನೇಕ ಪ್ರಕಾರದ ಹೊಸ ಛಂದಸ್ಸುಗಳ ಸಂಶೋಧನವು ನಡೆದಿದೆ. ಪ್ರಾಸವಿಲ್ಲದ ಸರಳ ರಗಳೆಗಳ ಮಾತಂತೂ ಸಾರ್ವತ್ರಿಕವಾಗಿದೆ. ಆದರೆ ಗಣನಿಯಮವಿಲ್ಲದ ಮುಕ್ತಛಂದ (Free Verse) ಎಂಬುದರ ಪ್ರಯೋಗವು ಪರಭಾಷೆಗಳಲ್ಲಿ ಭರದಿಂದ ಸಾಗಿದೆ. ಸದ್ಯದ ಸಂಗ್ರಹವಾದ ಈ ತರಂಗಿಣಿಯಲ್ಲಿ ಅರ್ಧಕರ್ಧ ಕವಿತೆಗಳಿಗೆ ಅಂತ್ಯಪ್ರಾಸವಿದೆ. ಪ್ರಾಸರಹಿತ ಪದ್ಯಗಳನ್ನು ಧೈರ್ಯದಿಂದ ಪ್ರಕಟಿಸುವಲ್ಲಿ ಕವಿಗಳಾದ ಗೆಳೆಯ ಶ್ರೀ ಇಂಚಲರವರು ಸಾಹಸವನ್ನೇ ತೋರಿದ್ದಾರೆಂದು ಹೇಳಬಹುದು. ಹೊಳೆಗೆ (ತರಂಗಿಣಿಗೆ) ಹೊರಗಿನ ಕಟ್ಟುನಿಟ್ಟುಗಳಿರುವುದುಂಟೆ ? ಅದು ಸ್ವಾಭಾವಿಕವಾಗಿ ತನ್ನಿಷ್ಟದಂತೆ ಹರಿಯಬಲ್ಲುದು. ಎಂಬುದನ್ನು ಸೂಚಿಸುವುದಕ್ಕಾಗಿಯೇ ಈ ಪುಸ್ತಕಕ್ಕೆ 'ತರಂಗಿಣಿ' (ಹೊಳೆ) ಎಂಬ ಹೆಸರನ್ನಿಟ್ಟದ್ದಾರೆಯೋ ಏನೋ ತಿಳಿಯದು.

ಕವಿಯ ಪರವಾಗಿಯೇ ಹೇಳುವದಾದರೆ ಸಂಸ್ಕೃತ ಸಾಹಿತ್ಯದಲ್ಲಿ ಪ್ರಾಸವು ಇಲ್ಲವೇ ಇಲ್ಲವೆಂಬುದನ್ನು ನೆನಪಿಗೆ ತಂದುಕೊಡುತ್ತೇನೆ. ಆದರೂ ಜನಪದ ಸಾಹಿತ್ಯದ ಗರತಿಯ ಹಾಡು ಮೊದಲಾದವುಗಳಲ್ಲಿ ಕಟ್ಟುನಿಟ್ಟಿನ ಪ್ರಾಸವಿದ್ದರೂ, ಯಮಕ ಪ್ರಾಸವು ಸ್ವಾಭಾವಿಕವಾಗಿ ಮೈದೋರಿ ಭಾವಕ್ಕೆ ಬೆಡಗನ್ನು ಕೊಟ್ಟಿದೆ ಎಂಬುದನ್ನು ಮರೆಯುವಂತಿಲ್ಲ. ಅಂತೆಯೇ ಶ್ರೀ ಇಂಚಲರವರಿಗೆ ಅರ್ಧದಷ್ಟು ಕವಿತೆಗಳಲ್ಲಿ ಅಂತ್ಯಪ್ರಾಸವನ್ನಾದರೂ ಇಟ್ಟುಕೊಳ್ಳುವ ಮನಸ್ಸಾಗಿದೆ.

ಅಲ್ಲಲ್ಲಿ ಕೆಲವು ಚರಣಗಳಲ್ಲಿ ಒಂದರ್ಧ ಮಾತ್ರೆಗಳು ಹೆಚ್ಚು ಇಲ್ಲವೆ ಕಡಿಮೆ ಇವೆ. ಇದು ಸಂಗೀತದಲ್ಲಿ ಸ್ವಾಭಾವಿಕ. ಇದರೊಳಗಿನ ಎಷ್ಟೋ ಕವಿತೆಗಳು ಹಾಡುಗಳಾಗಿವೆ ಎಂದು ಸಹಜವಾಗಿ ಅನಿಸುತ್ತದೆ. ಹಾಡಿನಲ್ಲಿ ಕೆಲವು ದೀರ್ಘಗಳನ್ನು ಹ್ರಸ್ವಮಾಡಿ ಹೇಳುವುದೂ ಸ್ವಾಭಾವಿಕ. ಅಣ್ಣ ಶ್ರೀ ಬೇಂದ್ರೆಯವರ ಪುಸ್ತಕಗಳಲ್ಲಿರುವಂತೆ ಅಂಥ ಕೆಲವಡೆಗಳಲ್ಲಿ ಅವಗ್ರಹ ಮೊದಲಾದ ಚಿಹ್ನಗಳಿಂದ ಈ ಹ್ರಸ್ವ-ದೀರ್ಘಗಳ ಸಂಕೇತವನ್ನು ಮುಂದಿನ ಆವೃತ್ತಿಯಲ್ಲಿ ತೋರಿಸಬಹುದೆಂದು ನನ್ನ ಗೆಳೆಯರಾದ ಶ್ರೀ ಇಂಚಲರವರಿಗೆ ನನ್ನ ಸವಿನಯವಾದ ನೆನಪನ್ನು ಮಾಡಿಕೊಡುತ್ತೇನೆ.

ಏನೇ ಇರಲಿ, ಎಲ್ಲ ಮಾತುಗಳಲ್ಲಿಯೂ ಈಗಿನದು ಪ್ರಯೋಗದ ಕಾಲ. ಆ ರೀತಿಯಿಂದ ಇಲ್ಲೊಂದು ಹೊಸ ಪ್ರಯೋಗವನ್ನು ನಾಡಿನ ಇದುರಿಗೆ ಇಡಲಾಗಿದೆ.

ನಾಡಿನ ಓದುಗರು ಇದನ್ನು ಆದರದಿಂದ ಕಾಣುವರೆಂದು ನಾನವರಲ್ಲಿ ವಿನಮ್ರಭಾವದಿಂದ ನನ್ನ ಗೆಳೆಯರ ಪರವಾಗಿ ಬಿನ್ನವಿಸುತ್ತೇನೆ.

ಮತ್ತೊಂದು ಮಾತೇನೆಂದರೆ, ಬೆಳಗಾವಿಯ ಕಿರಿಯರ ಬಳಗದ ಎಲ್ಲ ಗೆಳೆಯರ ಕವನಸಂಗ್ರಹಗಳೆಂಬ ಉಪನದಿಗಳು ತುಂಬಿಹರಿದು ತಮ್ಮ ಮುಖ್ಯ ನದಿಯಾದ ಶ್ರೀ ಈಶ್ವರ ಸಣಕಲ್ಲರವರ ಮಹಾನದಿಗೆ ಮಹಾಪೂರ ಬರುವಂತೆ ಮಾಡಲೆಂದು ನಾನು ನನ್ನ ಗೆಳಯರಲ್ಲೆಲ್ಲ ಪ್ರತ್ಯಪೂರ್ವಕವಾಗಿ ಬಿನ್ನವಿಸಿ ನನ್ನೀ ಮುನ್ನುಡಿಯನ್ನು ಮುಗಿಸುತ್ತೇನೆ.

ಓಂ ಶ್ರೀ ಓಂ

೩೦-೧೨-೪೮

# ಅರೆಯೊಳು

(ಎರಡು ನೀಳ್ಗತೆಗಳ ಸಂಗ್ರಹ)

ಕತೆಗಾರರು – ಕುಲಕರ್ಣಿ ಬಿಂದುಮಾಧವ

---

## ಮುನ್ನುಡಿ

ಶ್ರೀನಿವಾಸರ ಕತೆಗಳು ನಾಡಿನಲ್ಲಿ ಹಬ್ಬಿ ಕೆಲಕಾಲವಾದ ಮೇಲೆ ಆನಂದರ ಕತೆಗಳು ಮೈದೋರಿ ವಾಚಕರನ್ನು ಆನಂದ ಸಾಗರದಲ್ಲಿ ಮುಳುಗಿಸಿದಂತೆ, ಉತ್ತರ ಕರ್ನಾಟಕದಲ್ಲಿ ಆನಂದಕಂದರ ಕತೆಗಳು ನಾಡಿಗರನ್ನು ನಲಿಸಿ ಕೆಲವು ವರುಷ ಗತಿಸಿದ ಮೇಲೆ ಇದೀಗ ಶ್ರೀಮಾನ್ ಕುಲಕರ್ಣಿ ಬಿಂದುಮಾಧವರ ಕತೆಗಳು ನಮಗಿಂದು ಪುನಃ ಭವ್ಯ ಭವಿಷತ್ತನ್ನು ನೆನಪಿಗೆ ತಂದು ಕೊಡುತ್ತವೆ. ಹಳ್ಳಿಯ ಹೃದಯವನ್ನು ಸರಳವಾದ ಶೈಲಿಯಲ್ಲಿ ಚಿತ್ರಿಸುವದು ಇವರೀರ್ವರ ಕತೆಗಾರಿಕೆಯ ರೀತಿ.

ಇವರ "ತಾಯಿ" "ಸೆರೆಯಾಳು" ಮೊದಲಾದ ಚಿಕ್ಕ ಕತೆಗಳ ಹೊತ್ತಿಗೆಗಳು ಈಗಾಗಲೇ ಪ್ರಕಟವಾಗಿದ್ದು, ಇದೀಗ ಇವರ "ಅರೆಯಾಳು" "ಬರಿಗೋಳು"ಗಳು "ಸೆರೆಯಾಳ"ನ್ನು ಕೂಡಿಕೊಂಡು ಪ್ರಕಟವಾಗುತ್ತಲಿವೆ. ಪೂರ್ವಾರ್ಧದಂತಿರುವ "ಬರಿಗೋಳು" ಉತ್ತರಾರ್ಧದಂತಿರುವ 'ಅರೆಯಾಳು"ಗೆ ಪೂರಕವಾಗಿದೆ.

"ಸೆರೆಯಾಳಿ"ನ ಒಂದೇ ಪುಟವನ್ನು ಓದಿ ನೋಡಿದರೂ "ಇಷ್ಟು ಸ್ವಾಭಾವಿಕತೆಯು ಕತೆಗಾರರಿಗೆ ಹೇಗೆ ಸಾಧಿಸಿರಬಹುದು ?" ಎಂದು ಓದುಗರಿಗೆ ಆಶ್ಚರ್ಯವಾಗದಿರದು !!! ಇದಕ್ಕಿಂತ ಹೆಚ್ಚಿಗೆ ನಾನೇನೂ ಇದರ ಬಗೆಗೆ ಹೇಳಬಯಸುವದಿಲ್ಲ. ಏಕೆಂದರೆ ಅದು ಮೊದಲೊಮ್ಮೆ ಅಚ್ಚಾಗಿ ಓದುಗರ ಅವಗಾಹನೆಗೆ ಬಂದ ಕತೆಯೇ ಇರುತ್ತದೆ. ಈಗ ಪುನಃ ಅದರ ಬಗೆಗೆ ಹೆಚ್ಚಿಗೆ ಹೇಳಬೇಕಾದ ಅವಶ್ಯಕತೆಯಿಲ್ಲ.

ಶ್ರೀ ಮಾರ್ಟಿನ್ ಎಂಬವರು ಬರೆದ "ಸಂಭಾಷಣೆ"ಯ ಪುಸ್ತಕದಲ್ಲಿ (ಡಾಯಲಾಗ್) ಎರಡು ಪರಸ್ಪರ ವಿರೋಧಿ ವಿಷಯಗಳನ್ನು ತೆಗೆದುಕೊಂಡು ಎರಡರ ಮಹತ್ವವನ್ನು ಪ್ರಾಂಜಲವಾಗಿ ಸಮರ್ಥಿಸಿ ಕೊನೆಗೆ ಎರಡೂ ವಿಷಯಗಳ ಸಮನ್ವಯವನ್ನು ಸಾಧಿಸಿದಂತೆ "ಬರಿಗೋಳಿ"ನಲ್ಲಿ ಶ್ರೀ ಕುಲಕರ್ಣಿಯವರು ಹಳ್ಳಿ ಪಟ್ಟಣಗಳ ಹೆಣ್ಣುಮಕ್ಕಳಿಬ್ಬರ ಮನೋಭಾವನೆಗಳನ್ನು ಪ್ರಾಂಜಲವಾಗಿಯೂ, ಮಾರ್ಮಿಕವಾಗಿಯೂ, ಹೃದಯಂಗಮವಾಗಿಯೂ ಚಿತ್ರಿಸಿದ್ದಾರೆ.

ಅದೇ ಮಾತಿನ ಕೊನೆಯ ನಿರ್ಣಯವು "ಅರೆಯಾಳಿ"ನಲ್ಲಿ ಆಗಿದೆ. ಪಟ್ಟಣದ ಗಂಡು ಹೆಣ್ಣುಗಳಿಗೆ, ಹಳ್ಳಿಯ ಜನಸಮುದಾಯದ ಸಾಮುದಾಯಿಕ ಉತ್ಸಾಹ

ಸಂತೋಷಗಳ ಸುಗ್ಗಿಯಲ್ಲಿ ಹೆಣ್ಣು ಗಂಡೆಂಬ ಭೇದ ಭಾವವು ಕೂಡ ಅಳಿದು ಎಲ್ಲರೂ ಒಬ್ಬ ತಂದೆಯ (ದೇವರಾಯನ) ಚಿಕ್ಕ ಮಕ್ಕಳೋ ಎಂಬಂತೆ ಉತ್ಸವಾದಿಗಳಲ್ಲಿ ಭಾಗವಹಿಸುತ್ತಿರುವ ವಿಶ್ವರೂಪ ದರ್ಶನವಾದ ಕೂಡಲೆ, ತಾವು ಸುಸಂಸ್ಕೃತರು ಇವರು ಅಸಂಸ್ಕೃತರು ಎಂಬ ಪೂರ್ವಗ್ರಹವೆಲ್ಲ ಓಡಿ ಹೋಗಿ ಹಳ್ಳಿಗರ ಹೃದಯ ಪರಿಚಯವಾಗುತ್ತದೆ. ಬುದ್ಧಿಗೊಂದು ಬೆಲೆಯಿದ್ದಂತೆ ಹೃದಯಕ್ಕೂ ಒಂದು ಬೆಲೆಯಿದೆಯೆಂಬುದು ಸುಸ್ಪಷ್ಟ. ಪಟ್ಟಣಿಗರು ಬುದ್ಧಿ ಪ್ರಧಾನರು, ಹಳ್ಳಿಗರು ಹೃದಯ ಪ್ರಧಾನರು. ಹಳ್ಳಿಯ ಹೃದಯ ಪ್ರಧಾನತೆ ಒಮ್ಮೊಮ್ಮೆ ಮೂಢತನವಾಗಿ ಪರಿಣಮಿಸಬಹುದಾದರೆ, ಪಟ್ಟಣಿಗರ ಬುದ್ಧಿ ಪ್ರಧಾನತೆಯು ಒಮ್ಮೊಮ್ಮೆ ಆಕಾಶ ಕುಸುಮದಂತೆ ಪರಿಣಮಿಸಬಹುದು. ಹಳ್ಳಿಗರ (ನೈಸರ್ಗಿಕತೆ ಇದ್ದಕ್ಕಿದ್ದಂತೆ ಇರುವದು) ಪಟ್ಟಣಿಗರ ಸಂಸ್ಕರಣ (ತಿದ್ದುಪಡಿ) ಇವೆರಡೂ ಹೊಂದುಗೂಡಬೇಕೆಂಬುದು ಸ್ಪಷ್ಟ. ಇದಾಗಬೇಕಾದರೆ ಈ "ಅರೆಯಾಳಿ" ನೊಳಗಿನ ಹಿರಿಯಾಳಾದ ರಾಮುವಿನಂತೆ ಕಲಿತವರು ಹಳ್ಳಿ ಸೇರದೆ ಗತ್ಯಂತರವಿಲ್ಲ – ಎಂಬುದೇ ಈ ಕತೆಯ ಸಾರ ಮರ್ಮ.

ಸ್ವಂತದ ತರ್ಕದಿಂದಲೂ, ಸರ್ವಶಾಸ್ತ್ರಗಳ ಪಠನದಿಂದಲೂ ಜಗತ್ತಿನ ಸಮಸ್ಯೆಯ ಪ್ರಶ್ನೆ ಬಗೆಹರಿಯದೆ, ಮಹರ್ಷಿ ಟಾಲಸ್ಟಾಯರಿಗೆ ಕೊನೆಗೆ ಹಳ್ಳಿಗರ ದೃಢಶ್ರದ್ಧಾಮಯ ಸ್ವಾಭಾವಿಕ ಸರಳ ಜೀವನದಲ್ಲಿಯೇ ಬೆಳಕು ಕಂಡಿತೆಂಬ ವಿಷಯವನ್ನು ಸರ್ವರೂ ಓದಿ ಬಲ್ಲರು. "ಜೀವನದ ಸರ್ವ ಸಂಕಟಗಳನ್ನೆಲ್ಲಾ ಅವರು ಯಾವ ಧೃಢಶ್ರದ್ಧೆಯ ಆಧಾರದಿಂದ ಸಹಿಸಿಕೊಂಡು ಜೀವನ ಪಥದಲ್ಲಿ ಮುಂದೆ ಸಾಗುತ್ತಾರೋ ಅದೇ ನಿಜವಾದ ತತ್ತ್ವ" ಎಂದು ಅವರು ಕಂಡುಕೊಂಡರು. ಹಳ್ಳಿಯ ಒಬ್ಬ ಹೆಣ್ಣುಮಗಳು ತನ್ನ ಗಂಡನ ಸುಖಕ್ಕಾಗಿ ಮೊದಲಿನಿಂದ ಕೊನೆಯವರೆಗೂ ಎಷ್ಟು ಸಹನೆಯಿಂದ ಎಷ್ಟು ಕಷ್ಟ ಸಹಿಷ್ಣುತೆಯಿಂದ, ತನ್ನ ಸುಖದ ಪರಿವೆಯಿಲ್ಲದೆ ದುಡಿಯುತ್ತಾಳೆಂಬುದರ ಭವ್ಯ ಚಿತ್ರವನ್ನೇ ಶ್ರೀಮಂತಿ ಪರ್ಲ ಬಕ್ಕರು ತಮ್ಮ ವಿಶ್ವವಿಖ್ಯಾತ ಕಾದಂಬರಿಯಲ್ಲಿ ("ಭೂಮಿತಾಯಿ") ಜಗತ್ತಿನ ಕಣ್ಣೆದಿರಿಗಿಟ್ಟಿರುವರು.

ಇದೆಲ್ಲ ದೊಡ್ಡವರ ಮಾತಾಯಿತು. ಆದರೆ ದೊಡ್ಡವರೊಳಗಿನ ಮಹಾ ಪ್ರವಾಹವೇ ಇಂದು ಸಣ್ಣಸಣ್ಣವರಲ್ಲಿಯೂ ಕೂಡ ಚಿಕ್ಕ ಚಿಕ್ಕ ಸೆಲೆಗಳ ರೂಪವನ್ನು ತೆಗೆದುಕೊಳುತ್ತದೆ. ಶ್ರೀ ಬಿಂದುಮಾಧವರು ಇಂದು ತಮ್ಮ ಹೃದಯದ ಚಿಕ್ಕ ಕನ್ನಡಿಯಲ್ಲಿ ಹಳ್ಳಿಗರ ಜೀವನದ ಹಿಂಬದಿಗಿರುವ ಭವ್ಯವಿಶ್ವರೂಪ ದರ್ಶನವನ್ನು ಈ ಕತೆಯಲ್ಲಿ ಕಂಡಿದ್ದಾರೆ. ಇದನ್ನು ಕಾಣುವವರೆಗೆ ಮನುಷ್ಯನು ಪೂರ್ಣನೇ ಅಲ್ಲ ಎಂಬುದನ್ನು ತೋರಿಸಿಕೊಡುವದಕ್ಕಾಗಿ ಅವರು ಈ ಕತೆಗೆ "ಅರೆಯಾಳು" (ಅರ್ಧ ಮನುಷ್ಯ) ಎಂದು ಹೆಸರು ಇಟ್ಟಿದ್ದಾರೆ.

ಇವರ ಕಥಾಶೈಲಿಯೂ ಅಷ್ಟೇ ಚಮತ್ಕೃತಿಯಿಂದ ಕೂಡಿದೆ. ಇದೇ ಕಲಾವಿದನ ನಿಜವಾದ ಶಕ್ತಿ. ಪರಮೇಶ್ವರ–ಪರಮೇಶ್ವರಿಯರು ಇವರ ಕೃತಿಗಳನ್ನು ಬೆಳೆಯಿಸಿ ಬೆಳಗಿಸಲಿ !

೧೫-೪-೧೯೫೦

# ನನ್ನ ಹಾಡು

(ಕವನಸಂಗ್ರಹ)

ಬ. ಗಿ. ಯಲ್ಲಟ್ಟಿ

---

## ಹರಕೆ

ರಬಕವಿ–ಬನಹಟ್ಟಿಗಳೆಂದರೆ ಒಂದರ ಅಂಗವು ಒಂದಾಗಿರುವಂಥ ಅಕ್ಕ–ತಂಗಿ ಊರುಗಳು. ಇವೆರಡರ ನಡುವೆ ಒಂದು ಮೈಲು ಸಹ ಅಂತರವಿಲ್ಲ. ಇವೆರಡೂ ಪರಸ್ಪರ ಸಲ್ಲಗ್ನವಾದ ವ್ಯಾಪಾರೋದ್ಯಮಗಳ ಊರುಗಳೆಂಬುದು ಎಲ್ಲರಿಗೆ ಗೊತ್ತಿದ್ದ ಮಾತು. ಈ ಊರುಗಳೆರಡೂ ವ್ಯಾಪಾರೋದ್ಯಮದಂತೆ ಸಾಹಿತ್ಯಕ್ಷೇತ್ರದಲ್ಲಿಯೂ ಅಕ್ಕ–ತಂಗಿ ಊರುಗಳಾದದ್ದು ಪರಮಾನಂದಕರವಾದ ಸಂಗತಿಯು.

ಗೆಳೆಯರಾದ ಶ್ರೀ ಈಶ್ವರ ಸಣಕಲ್ಲರನ್ನು ರಬಕವಿ ಹೆತ್ತಿದ್ದರೆ ಮಿತ್ರವರ ಶ್ರೀ ಬ. ಗಿ. ಯಲ್ಲಟ್ಟಿಯವರನ್ನು ಬನಹಟ್ಟಿ ದೇವಿಯು ಹಡೆದಿದ್ದಾಳೆ. ಅಲ್ಲದೆ ಇಲ್ಲಿಯೇ ಮಗ್ಗುಲಲ್ಲಿರುವ ಮಹಿಷವಾಡಿಯದೇವಿಯು ಇನ್ನೊಬ್ಬ ಕವಿಗಳಾದ ಮಿತ್ರವರ ಶ್ರೀ ಭುಜೇಂದ್ರ ಮಹಿಷವಾಡಿಯವರಿಗೆ ಜನ್ಮವಿತ್ತಿದ್ದಾಳೆ. ಹೀಗೆ ಮೂವರು ಕವಿಗಳಿಗೆ ಜನ್ಮಕೊಟ್ಟ ರಬಕವಿ–ಬನಹಟ್ಟಿದೇವಿಯರ ಮಹಿಮೆಯು ಮಿಗಿಲಾಗಿದುದಾಗಿಯೆಂದು ಯಾರಿಗಾದರೂ ಅನಿಸುವಂತಿಲ್ಲವೆ ?

ರಬಕವಿಯ ಸಾಹಿತ್ಯಸಮ್ಮೇಲನದ ಸೇವೆಗೆ ಮೆಚ್ಚಿ ಕನ್ನಡ ತಾಯಿಯು ಬನಹಟ್ಟಿಯಲ್ಲಿ ಈ ಇನ್ನಿಬ್ಬರು ಮಕ್ಕಳನ್ನು ತಂದಳೇನೋ ಎಂದು ಅವಳ ಮೇಲೆ ಭಕ್ತಿಯುಳ್ಳ ಅವಳ ಅಣುಗರಿಗೆ ಅನಿಸುವದು. ಏಕೆಂದರೆ ಸೇವೆಯ ಫಲವು ಸುನಿಶ್ಚಿತವೆಂಬುದು ಹಿಂದಿನ ಕಾಲದಿಂದಲೂ ಕಂಡುಂಡ ಮಾತಾಗಿರುವುದು.

ಏನೇ ಇರಲಿ, ಕನ್ನಡ ತಾಯಿಯು ಹೊಸ ಕಾಲದ ಕವಿಸಂತಾನದಲ್ಲಿ ಮೊದಲಿನ ಗುಂಪಿಗೆ ಸೇರಿದ ಅನೇಕ ಜನ ಕೀರ್ತಿಶಾಲಿ ಕವಿಗಳು ಬಂದಬಳಿಕ ಮಧ್ಯಂತರದಲ್ಲಿ ಮತ್ತೆಯೂ ಕೆಲ ಜನ ಬೆರಗುಗೊಳಿಸುವ ಕವಿಗಳ ಗುಂಪು ಬಂದು ಕನ್ನಡಿಗರಿಗೆ ಸಂತಸವನ್ನು ಬೀರಿದಂತೆ, ಇದೀಗ ಮತ್ತೆ ಕೆಲ ಜನ ಅತಿ ನೂತನ ತರುಣ ಕವಿಗಳ ಗಡಣವೊಂದು ಉದಿಸಿ ಕನ್ನಡ ಕಾವ್ಯಗಂಗೆ ಇನ್ನೆಂದಿಗೂ ಬತ್ತಲಾರಳೆಂಬ ಭರವಸೆಯನ್ನು ನಾಡಿಗರ ಹೃದಯಕ್ಕೆ ನೀಡಿದೆ. ಪ್ರಿಯ ಬಂಧುವರ ಶ್ರೀ ಕಣವಿ, ಶ್ರೀ ಕಣೇಕಲ್.

ಶ್ರೀ ಪುರಾಣಿಕ, ಶ್ರೀ ಯಕ್ಕುಂಡಿ, ಶ್ರೀ ಹೊಸಮನಿ, ಶ್ರೀ ಯಲ್ಲಟ್ಟಿ, ಶ್ರೀ ಮಹಿಷವಾಡಿ ಮೊದಲಾದವರೇ ಈ ನೂತನ ಆಶಾಕಿರಣರು.

ಇಂಗ್ಲೀಷಿನಲ್ಲಿ ನೂರು ವರುಷಗಳ ಹಿಂದೆ ನವಯುಗದ ಆರಂಭದ ಮಹಾಕವಿಗಳನೇಕರು ಬಂದು, ಇಂದಿಗೂ ಅಂಥವರು ಮತ್ತೆ ಮತ್ತೆ ಬರುತ್ತಾ ಇದ್ದು, ಈಗಲೂ ಸಾಹಿತ್ಯ ವಿಷಯಕ ಪತ್ರಿಕೆಗಳಲ್ಲಿ ಸದಾ ಒಳ್ಳೊಳ್ಳೆಯ ಕವಿತೆಗಳು ಅವ್ಯಾಹತವಾಗಿ ಪ್ರಕಟವಾಗುತ್ತಲಿರುವಂತೆ ನಮ್ಮ ಕನ್ನಡ ವಾಙ್ಮಯದಲ್ಲಾದರೂ (ಭರತ ಖಂಡದ ಎಲ್ಲ ಪ್ರಾಂತೀಯ ವಾಙ್ಮಯಗಳಲ್ಲಿ ಸಹ) ಇನ್ನು ಮುಂದೆ ಹೀಗೆಯೇ ಕವಿಕುಲವೂ ಒಳ್ಳೆಯ ಕಾವ್ಯಸಂಪತ್ತೂ ಹರಿಗಡಿಯದೆ ಸಾಗಿಕೊಂಡು ನಡೆಯುವದೆಂಬ ಭವ್ಯಭವಿಷತ್ತು ನಮ್ಮ ಕಣ್ಣು ಮುಂದೆ ಕಾಣುತ್ತಿರುವದನ್ನು ನೆನೆಸಿದರೆ ನಮಗೆ ಎಷ್ಟು ಆನಂದವಾಗಲಿಕ್ಕಿಲ್ಲ ?

ರಬಕವಿಯು "ನಿರಾಶಾವಾದ"ದ ಕಾಲ್ತುಳಿತದಲ್ಲಿ ಬಳಲಿಬೆಂಡಾದ ಕವಿಪುತ್ರನನ್ನು (ಗೆ॥ ಶ್ರೀ ಈಶ್ವರ ಸಣಕಲ್ಲರನ್ನು) ನಮಗೆ ಕೊಟ್ಟರೆ ಬನಹಟ್ಟಿದೇವಿಯು ನಿರಾಶಾವಾದದ ಹುದುಲಿನೊಳಗಿಂದ ಕಿತ್ತುಕೊಂಡು ಎದ್ದು ಆಶಾವಾದದ ಅಮರ ಮಂತ್ರವನ್ನು ಕೈವಶ ಮಾಡಿಕೊಂಡ ಶ್ರೀ ಯಲ್ಲಟ್ಟಿಯವರನ್ನು ಶ್ರೀ ಭುಜೇಂದ್ರ ಮಹಿಷವಾಡಿಯವರನ್ನು ನಮಗೆ ಇತ್ತಿದ್ದಾಳೆ. ಇದು ಮಹದಾನಂದದ ಸಂಗತಿಯಲ್ಲದೆ ಇನ್ನೇನು ?

ಶ್ರೀ ಮಹಿಷವಾಡಿಯವರ "ಮಾಯಾಮಂದಿರ"ವು ಪ್ರಕಟವಾದ ಆರು ತಿಂಗಳೊಳಗಾಗಿಯೇ ಶ್ರೀ ಯಲ್ಲಟ್ಟಿಯವರ ಈ "ನನ್ನ ಹಾಡು" (ನಿಜವಾಗಿ ಇದಕ್ಕೆ "ಆಶಾವಾದ" ಎಂಬ ಹೆಸರು ಇರಬೇಕಾಗಿದ್ದಿತೆಂದು ನನ್ನ ಮತ) ಪ್ರಕಟವಾದುದು ಅತ್ಯಾನಂದದ ಸಂಗತಿಯೇ ಸರಿ. "ನನ್ನ ಹಾಡು" ಎಂಬುದು "ನನ್ನ ಹಿಗ್ಗಿನ ಹಾಡು" ಎಂಬರ್ಥದಲ್ಲಿ ಓದುಗರ ಹೃದಯದಲ್ಲಿ ಪರಿವರ್ತಿತವಾಗಲೆಂದು ನಾನು ಹಾರೈಸುತ್ತೇನೆ.

ಇವರ ಈ ಕವನಸಂಗ್ರಹದ ಕೊನೆಯ ಏಳೆಂಟು ಕವಿತೆಗಳ ಗುಂಪು ಹೀಗೆ ಆಶಾವಾದದ ಕ್ರಮ ಪ್ರಗತಿಯ ಒಂದು ರಕ್ಷಾಪುಟವಾಗಿರುವಂತೆ, ಆರಂಭದ ಏಳೆಂಟು ಕವಿತೆಗಳ ಗುಂಪು ಈ ಆಶಾವಾದಕ್ಕೆ ಜೀವಸ್ಫುರಿಯಾದ ಆತ್ಮಶಕ್ತಿ, ಗುರುಸಹಾಯ, ಈಶಕೃಪೆ, ಯೋಗಪರವಶತೆ ಮೊದಲಾದ ಘನವಸ್ತುಗಳನ್ನೊಳಗೊಂಡ ಇನ್ನೊಂದು ರಕ್ಷಾಪುಟವಾಗಿದೆ.

ಇವೆರಡರ ನಡುವೆ "ಮೊರೆಯುತಿರುವ ಸಾಗರ"ದಿಂದ ಮೊದಲು ಮಾಡಿ "ಸೊಸೆಯ ಮೊರೆ"ಯ ವರೆಗೆ ತನ್ನ, ಪರರ, ನೆರೆಯುವರ, ಹೊರೆಯುವರ, ಗೆಳೆಯರ, ಹೆಂಗಳೆಯರ ಬಗೆಬಗೆಯ ಕಷ್ಟಗಳ ಕಥೆಗಳನ್ನು ಸರಗೊಳಿಸಿ ಅಡಿಗಿಸಿದ್ದಾರೆ.

ಅಡಗಿಸಿದ್ದಾರೆಂದರೆ ನಿಜವಾಗಿಯೂ ಎಡಬಲದ ಎರಡು ಮೇಲುಹೊದಿಕೆಗಳಲ್ಲಿ ಮುಚ್ಚಿ ಮರೆಮಾಡಿದ್ದಾರೆಂತಲೇ ತಿಳಿಯಬೇಕು. ಕವಿವರ್ಯ ಅಣ್ಣ ಶ್ರೀ ಬೇಂದ್ರೆಯವರ "ನನ್ನ ಕೈಯ ಹಿಡಿದಾಕೆ, ಅಳು ನುಂಗಿ ನಗು ಒಮ್ಮೆ, ನಾನೂನು ನಕ್ಕೇನ" ಎಂಬ ಸತಿಪತಿಯ ಹಿತೋಕ್ತಿಯಂತೆ ಮಿತ್ರವರ ಶ್ರೀ ಯಲ್ಲಟ್ಟಿಯವರು ಹೀಗೊಮ್ಮೆ ಅಳು ನುಂಗಿ ನಕ್ಕು ಸರ್ವರನ್ನು ನಗಿಸಿ ಬಿಟ್ಟಿದ್ದಾರೆ.

ಈ ಕವನ ಸಂಗ್ರಹದ ಆರಂಭದ ನಾಲ್ಕು ಕವಿತೆಗಳನ್ನೋದಿದರೆ ದಿವಂಗತ ವಿಶ್ವಕವಿ ಶ್ರೀ ರವೀಂದ್ರನಾಥ ಠಾಕುರರ "ಗೀತಾಂಜಲಿ"ಯ ಮಾರ್ಗವನ್ನನುಸರಿಸಿದ ಅಲ್ಪ ಹೆಜ್ಜೆಗಳು ಇವೆಂದು ಅನಿಸದಿರದು. "ಪ್ರಾರ್ಥನೆ" ಎಂಬ ಪ್ರಥಮ ಕವಿತೆಯ ಪ್ರಥಮ ಪದ್ಯದಲ್ಲಿ—

"ಹೊರಗೆ ಬಾ ಹೊರಗೆ ಬಾ ಒಳಗಿನಮಲ ಸತ್ವವೆ
ಇರವಿನಸ್ತವ್ಯಸ್ತ ಸ್ಥಿತಿಯ ಮಾಣಿಸು ಘನ ಸತ್ವವೆ"

ಎಂಬ ಕವಿಹೃದಯದ ಹಾರೈಕೆಯು ನಮ್ಮ ಪುರಾತನ ಋಷಿಮುನಿಗಳಿಗೆ ವೇದ್ಯವಾದ ಆತ್ಮತತ್ವದ ಮಹತಿಯ ಕಡೆಗೆ ನಮ್ಮನ್ನು ಬೆರಳು ಮಾಡಿ ಸಾಗಿಸುವದಿಲ್ಲವೇ ?

"ನಿನ್ನ ಹೆಸರನೊರೆದನೊಬ್ಬ ಪುಣ್ಯವಂತ ಕೊನೆಯಲಿ
ಆತ ವಾಸಿಯಾದನಂತೆ ನಿನ್ನ ಕೈಯ ಗುಣದಲಿ !
ಹೊಳೆಯ ಬಾ ಕಳೆಯ ಬಾ ಮನಸಿನನಾರೋಗ್ಯವ,
ತೋರ ಬಾ ಬೀರ ಬಾ ನಿನ್ನ ಸತ್ವಭಾವವ !!"

ಅಹಾ ! ಇವರಿಗೆ ಸುಖಸುವಾರ್ತೆ ಸಾರಿದ ಪುಣ್ಯಾತ್ಮರು ಎಲ್ಲರಿಗೂ ಸಿಗಬಾರದೇ ? ಇಂಥ ಸುವಾರ್ತೆಯನ್ನು ಎದೆತಟ್ಟಿ ಸಮಸ್ತ ಜಗತ್ತಿನಲ್ಲಿ ವೇದಾಂತ ಕೇಸರಿಯಾದ ಸ್ವಾಮಿ ಶ್ರೀ ರಾಮತೀರ್ಥರು ಮೊನ್ನೆ ಮೊನ್ನೆ ಸಾರಿದ್ದು ನಮ್ಮೆಲ್ಲರಿಗೆ ನೆನಪಿದೆ. ಇಂದು ಭಗವಾನ್ ಶ್ರೀ ಅರವಿಂದರು "ಆತ್ಮ ಅರಳುವದರ ಮೂಲಕವೇ ಜಗತ್ತಿನ ಮೇಲೊಂದು ನವಕ್ರಾಂತಿ ಬರತಕ್ಕದ್ದಿದೆ. ತಮ್ಮೊಳಗಿನ ದೈವತ್ವವನ್ನು ಅರಳಿಸಿಕೊಂಡವರಿಂದಲೇ ಈ ದೇಶದ ಉದ್ಧಾರವಾಗುವದು" ಎಂದು ಜಗದ ಮೇಲೆ ಜಯಭೇರಿಯನ್ನು ಮೊಳಗಿಸಿದ್ದಾರೆ.

"ನೀಡ ಬಾ ನೋಡ ಬಾ ನನ್ನ ಈ ಅವಸ್ಥೆಯ
ಹರಸು ಬಾ ಸುರಿಸು ಬಾ ನಿನ್ನ ದಯಾ ವೃಷ್ಟಿಯ
ಸಲಹು ಬಾ ತಿಳುಹು ಬಾ ಯುಕ್ತಿ, ದೋಷ ಮುಕ್ತಿಗೆ
ಯಾವ ಮದ್ದು, ಏನು ಪಥ್ಯ ? ಹೇಳು ಆತ್ಮಶಾಂತಿಗೆ ॥"

ಹೀಗೆಂದು ಕವಿಯು ನಮಗೆ ಬೇಕಾದ ಎಲ್ಲಾ ಜ್ಞಾನ, ಶಕ್ತಿ, ಆನಂದ, ಒಳಗಿನ ಆತ್ಮನಲ್ಲಿಯೇ ಇದೆಯೆಂಬ ವಿಶ್ವಾಸವುಳ್ಳವರಾಗಿದ್ದಾರೆ.

ಎರಡನೆಯ "ಆರಿಕೆ" ಎಂಬ ಕವಿತೆಯಲ್ಲಿ—

"ಹಾದಿಯಲಿ ಏನಿಹುದೊ, ಕಲ್ಲಿಹಂದೊ, ಮುಳ್ಳಿಹುದೊ ?" ಎಂಬ ಶಂಕೆ ಉದ್ಭವಿಸಿದಾಗ "ಏನಿದ್ದರೇನಂತೆ ? ಈ ಹಾದಿಯಲ್ಲಿ...... ಸಾಗಿ ಹೋಗದೆ ಅಲ್ಲಿ, ಹೊಳೆಯುಬಹುದೇನಿಲ್ಲಿ ? ॥ ಹೊರಟಿರಲು ಹಾದಿಯಲಿ ಏನಿರುವದೆಲ್ಲ ಹೊಳೆಯ ಲಾರದೆ ತಾನೆ ಅನುಭವದೊಳೆಲ್ಲ ?" ಎಂಬ ಆತ್ಮವಿಶ್ವಾಸ ಹುಟ್ಟುತ್ತದೆ. ಆದರೂ– "ಹೆಜ್ಜೆಹೆಜ್ಜೆಗೆ :ನಾನು ಹಾದಿ ತಪ್ಪಿದರೇನು ? ಆಗಾಗ ಪ್ರೇರೆಯುತಿರು ಸಲಹೆ ಯನು ನೀಡಿ, ಸರಿದಾರಿ ತೋರುತಿರು ಗುರುವೆ ದಯಮಾಡಿ ॥" ಎಂದು ಗುರು ಸಹಾಯುವನ್ನು ಯಾಚಿಸಿರುವರು. ಭಗವಾನ್ ಶ್ರೀ ಅರವಿಂದರೂ ಕೂಡ– "ಅಧ್ಯಾತ್ಮಸಿದ್ಧಿಗೆ ಶಾಸ್ತ್ರ, ಗುರು, ಕಾಲ, ಉತ್ಸಾಹ ಎಂಬ ನಾಲ್ಕು ಸಹಾಯಕಗಳು ಅವಶ್ಯವಾಗಿ ಬೇಕು" ಎಂದು ಸಾರಿ, ನಾವು ಕುಸಿದು ಬಿದ್ದಾಗ ತಮ್ಮ ಶಕ್ತಿಯಿಂದ ಕೈಹಿಡಿದು ಎತ್ತಿ ನಿಲ್ಲಿಸಿ ಮುನ್ನಡಿಸುವ ಪೂರ್ಣಸ್ಥಿತಿಗೆ ಮುಟ್ಟಿದ ಗುರುಗಳ ಅವಶ್ಯ ಕತೆಯನ್ನು ತೋರಿಸಿದ್ದಾರೆ. ಇಂಥ ಪೂರ್ಣಸ್ಥಿತಿಗೆ ಮುಟ್ಟಿದ ಅಧ್ಯಾತ್ಮಸಿದ್ಧ ವ್ಯಕ್ತಿ ಗಳಿಂದಲೇ ಈ ದೇಶದ ಉದ್ಧಾರವಾಗುವದೆಂಬ ಮಾತಿನಲ್ಲಿ ಏನು ಸಂಶಯವಿದೆ ?

ಮೂರನೆಯ ಕವಿತೆಯಾದ "ಆಡಿಸಾಡಿಸು ದೇವ" ಎಂಬುದರಲ್ಲಿ ನಮ್ಮ ಉತ್ಥಾನಪತನಗಳೆಲ್ಲಾ ಪರಮಾತ್ಮನ ಇಚ್ಛೆಯಿಂದಲೇ ನಡೆಯುವದರಿಂದ ಅವೆರಡ ರಲ್ಲಿಯೂ ನಮ್ಮ ಹಿತವೇ ಇರುವದೆಂಬ ಭಾವವಿದೆ. ತಂದೆ ಉಲ್ಲಾಸದಿಂದ ಮಗು ವನ್ನು ಮೇಲಕ್ಕೆ ಹಾರಿಸಿದಾಗ ಮಗುವಿಗೆ ತಂದೆಯ (ಪರಮಾತ್ಮನ) ಪುಣ್ಯ ಮಸ್ತಕದ ದರ್ಶನವಾಗುತ್ತದೆ; ಅದರಂತೆಯೇ ಲೀಲಾಭರದಲ್ಲಿ ವೇಗದಿಂದ ಕೆಳಕ್ಕೆ ತಂದಾಗ ಪುಣ್ಯ ಪಾದಗಳ ದರ್ಶನವಾಗುತ್ತದೆ. ಹೀಗೆ ಮೇಲು ಕೀಳು ಎರಡರಲ್ಲಿಯೂ ಪರಮಾತ್ಮನ ಪ್ರಸಾದ ಪ್ರಾಪ್ತಿಯೇ ನಮಗಿರುವದೆಂಬ ಸನಾತನ ಸಿದ್ಧಾಂತವನ್ನು ಕವಿಯು ಇಲ್ಲಿ ಸಾರಿ ಹೇಳಿದ್ದಾರೆ. "ಶೀತೋಷ್ಣ, ಸುಖದುಃಖ, ಮಾನಾಪಮಾನ, ಜಯಾಪಜಯ, ಲಾಭಾಲಾಭ"ಗಳಲ್ಲೆಲ್ಲ ಸಮಚಿತ್ತದಿಂದಲೇ ಇರಬೇಕೆಂದು ನಮ್ಮ ಪುರಾತನ ಅಧ್ಯಾತ್ಮ ಶಾಸ್ತ್ರಗಳೆಲ್ಲಾ ಘಂಟಾಘೋಷವಾಗಿ ಹೇಳಿವೆ. ಭಗವದ್ಗೀತೆ ಯಲ್ಲಿ ಈ ಮಾತು ಹೆಜ್ಜೆಹೆಜ್ಜೆಗೆ ಬರುತ್ತದೆ. ಎಲ್ಲಾ ಕಷ್ಟ ನಿಷ್ಠುರಗಳಲ್ಲಿಯೂ ಅಧ್ಯಾತ್ಮಿಯಾದವನು ಸದಾ ಸಂತೋಷಚಿತ್ತನಾಗಿಯೇ ಇರಬೇಕೆಂಬುದು ಅನಿವಾರ್ಯ ವಾದ ನಿಯಮವಾಗಿದೆ.

"ಸಂತುಷ್ಟಸ್ಸತತಂ ಯೋಗೀ ।" (ಗೀತೆ)

ನಾಲ್ಕನೆಯದಾದ "ಆತ್ಮನಿವೇದನೆ" ಎಂಬ ಕವಿತೆಯಲ್ಲಿ—

"ಅರಿಯದಾನೆಸಗಿರುವ ಹೀನ ಕೃತ್ಯಗಳನು
ಅದಕಾಗಿ ಹೊಂದಿರುವ ದೀನ ಗತಿಗಳನು
ಹೇ ದೇವ ಎದೆಬಿಚ್ಚಿ, ನಿನ್ನೋರ್ವನನೆ ನೆಚ್ಚಿ

ಆತ್ಮಶುದ್ಧಿಯ ಬಯಸಿ ತೋಡಿಕೊಳ್ಳುವೆನು
ಮನ್ನಿಸೆನ್ನನು ಹರಸಿ, ಬೇಡಿಕೊಳ್ಳುವೆನು ॥"

ಎಂದು ಕವಿಯು ಜೀವರಾಶಿಗೆಲ್ಲ ಸ್ವಾಭಾವಿಕವಾದ ಅಶುದ್ಧಿಗೆ ಈಶಕೃಪೆಯೇ ಮದ್ದೆಂಬ ಉಜ್ವಲ ಆಶಾದಾಯಕ ಸನಾತನ ಸಿದ್ಧಾಂತದ ಕಡೆಗೆ ನಮ್ಮ ದೃಷ್ಟಿಯನ್ನು ಹೊರಳಿಸಿರುವರು. "ನೀ ಮಾಡಿದ ಮಾಯೆ ನೀ ಬಿಡಿಸಿದಲ್ಲದೆ ನನಗೆ ಬಿಟ್ಟೀತೆ !" ಎಂದು ಪುರಾತನ ಶಿವಶರಣರು ಪರಮಾತ್ಮನಿಗೆ ಶರಣು ಹೊಕ್ಕದ್ದನ್ನು ಅವರ ಅಮರ ವಚನಗಳಲ್ಲಿ ನಾವು ಕಾಣುತ್ತಾ ಇಲ್ಲವೆ? ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು "ಮಮ ಮಾಯಾ ದುರತ್ಯಯಾ" (ನನ್ನ ಮಾಯೆಯನ್ನು ದಾಟಲಿಕ್ಕೆ ಇನ್ನಾರಿಗೂ ಶಕ್ಯವಿಲ್ಲ.) ಎಂದು ಹೇಳಿ, "ನನ್ನನ್ನು ಭಜಿಸುವವರ ಮಾಯೆಯನ್ನು ನಾನೇ ದೂರ ಮಾಡುತ್ತೇನೆ" ಎಂದು ಅಭಯವಚನವನ್ನಿತ್ತಿದ್ದಾನೆ. ಶ್ರೀ ಅರವಿಂದರೂ ಕೂಡ ತಮ್ಮ "ಯೋಗ ತಳಹದಿ" (ಬೇಸಿಸ್ ಆಫ್ ಯೋಗ) ಎಂಬ ಗ್ರಂಥದಲ್ಲಿ ಬುದ್ಧಿಯ ಚಾಂಚಲ್ಯ, ಪ್ರಾಣದ ದುರ್ವಾಸನೆ, ದೇಹದ ಬೇನೆ-ಬೇಸರಿಕೆ ಮೊದಲಾದ ಸರ್ವ ದೋಷಗಳನ್ನು ಗೆದಿಯಲಿಕ್ಕೆ ಮೂರೇ ಉಪಾಯಗಳು ಸಾಕೆಂದು ಹೇಳಿದ್ದಾರೆ. ಅವು ಯಾವವೆಂದರೆ— ೧. ದೃಢ ಸಂಕಲ್ಪ ೨. ದೋಷಗಳು ಸಾರ್ವತ್ರಿಕ ಸೃಷ್ಟಿಯೊಳಗಿಂದ ಬಂದು ಸೇರಿಕೊಳ್ಳುವವೆಂಬ ತಿಳುವಳಿಕೆ, ೩. ಪರಮಾತ್ಮನ ಶಕ್ತಿಯ ಸಹಾಯವನ್ನು ಕುರಿತು ಪ್ರಾರ್ಥಿಸುವುದು. ಈ ಮೂರರ ನೆರವಿನಿಂದ ಬೇಕುಬೇಕಾದಂಥ ಅಶುದ್ಧಿಗಳನ್ನೆಲ್ಲ ಗೆದಿಯಲಿಕ್ಕೆ ಶಕ್ಯವಿದೆಯೆಂದು ಶ್ರೀ ಅರವಿಂದರು ತಮ್ಮ ಗ್ರಂಥದ ತುಂಬೆಲ್ಲ ಹೇಳಿದ್ದಾರೆ.

"ಯೋಗನಿದ್ರೆ" ಎಂಬ ಇನ್ನೊಂದು ಕವಿತೆಯಲ್ಲಿ—

ಸೌಹಾರ್ದಶೂನ್ಯತೆಯು, ತನ್ನತನ ಹೀನತೆಯ
ಕಹಿ ಕೂಳ ತಿಂದುಂಡು ಓಕರಿಸಿದೆ;
ವಿಮಲ ಅಂತಃಕರಣ, ಆತ್ಮೀಯ ಸಂಸ್ಕರಣ-
ದಮೃತ ರುಚಿಗಾಗಿ ಮನ ಹಾರಯಿಸಿದೆ ॥"
"ಯೋಗಿಗಳ ಚಿರನಿದ್ರೆ, ಶಾಂತಿ ಸೌಖ್ಯದ ಮುದ್ದೆ
ನಿನ್ನ ಹದ್ದಿಯೊಳೆನ್ನ ಬರಮಾಡಿಕೊ
ಸಾಕು ಈ ಜನ ಸುದ್ದಿ, ನಿನ್ನ ಸೆರಗನು ಹೊದ್ದಿ
ಎದೆಗವಚಿಕೊಂಡೆನ್ನನಾವರಿಸಿಕೊ ॥"

ಎಂದು ಕವಿಯು ತೂರ್ಯಾವಸ್ಥೆ, ಉನ್ಮನಿ, ಯೋಗಸಮಾಧಿ, ಐಕ್ಯಸ್ಥಲ ಮುಂತಾದ ದಿವ್ಯನಾಮಗಳಿಂದ ಕರೆಯಲ್ಪಡುವ ಯೋಗ ಪರವಶತೆಯನ್ನು ಪಡೆದು ಜಗದ ಸರ್ವಸಂಕಟಗಳನ್ನು ಜಯಿಸಲಪೇಕ್ಷಿಸುತ್ತಾರೆ. ಹೊರಗಡೆಗೆ ಭಿನ್ನಭಿನ್ನವಾಗಿ ತೋರುವ ಪ್ರಾಣಿರಾಶಿಗಳೆಲ್ಲ ಯಾವ ಮೂಲ ಸೆಲೆಯಲ್ಲಿ ಒಂದಾಗಿ ಕಾಣಿಸಿಕೊಳ್ಳು

ವದೋ ಆ ಆತ್ಮನ ಪರಮಾನುಭವಕ್ಕೆ ನಾವು ಮುಟ್ಟಿದ ಹೊರತು "ಆತ್ಮವತ್ ಸರ್ವಭೂತಾನಿ" ಎಂಬ ವಿಶಾಲ ಭಾವವು ನಮಗೆ ಅಳವಡದು. ಮೇಲೆ ಕಾಣುವ ಬೇರೆ ಬೇರೆ ಬಾವಿಗಳಿಗೆಲ್ಲ ಕೆಳಗಡೆಗೆ ನೀರಿನ ತಳವು ಒಂದೇ ಆಗಿರುವಂತೆ ಹೊರಗೆ ತೋರುವ ಭಿನ್ನ ಭಿನ್ನ ಜೀವರಾಶಿಗಳಿಗೆಲ್ಲ ಒಳಗೆ ಸೂತ್ರಾತ್ಮನು ಒಬ್ಬನೇ ಆಗಿರುವ ನೆಂಬುದು ಪುರಾತನ ಋಷಿಮುನಿಗಳ ದಿವ್ಯಾನುಭವ. ನಮ್ಮ ಹೊರಗೆ ಹರಿದಾಡುವ ಮನವನ್ನೆಲ್ಲ ಒಳಗೆ ಶೇಖರಿಸಿಕೊಂಡರೆ ಆಗ ನಾವು ಆ ಮೂಲ ಸೆಲೆಗೆ ತಲುಪುವೆ ವೆಂಬುದು ಸಹಜವಾದ ಮಾತಾಗಿದೆ. ಇದಕ್ಕೇ ಪುರಾತನರು ಯೋಗವೆಂದು ಅಂದಿರುವರು. ಒಣಮಾತು ಗಾಳಿಗೆ ಹಾರಿಹೋಗುವದು, ಅನುಭವವನ್ನು ಯಾರೂ ಕದಲಿಸಲಾರರು. ಆದ್ದರಿಂದ ಕವಿಯು ಇಂಥ ಆ ಅಮೃತೋಪಮವಾದ ಪರಮ ಅನುಭವದ ಮೆಟ್ಟಲಿಗೆ ಮುಟ್ಟಿ ಜಗದ ವೈಷಮ್ಯವನ್ನೆಲ್ಲ ಮೀರಿ ನಿಲ್ಲಬೇಕೆನ್ನುತ್ತಾರೆ. ನಿಜವಾಗಿಯೂ ಕರಾಳ ವೈಷಮ್ಯವು ಕೊನೆಗಾಣಬೇಕಾದರೆ ಇದೊಂದೇ ಪರಮೌಷಧ ವೆಂದು ಶ್ರೀ ಅರವಿಂದರು ಘಂಟಾಘೋಷವಾಗಿ ಸಾರತೊಡಗಿದ್ದಾರೆ. "ಸರ್ವ ಭೂತೇಷು ಚ ಆತ್ಮಾನಂ, ಸರ್ವಭೂತಾನಿ ಚ ಆತ್ಮನಿ" (ಸರ್ವಪ್ರಾಣಿಗಳಲ್ಲಿ ತನ್ನನ್ನು ಹಾಗೂ ತನ್ನಲ್ಲಿ ಸರ್ವಪ್ರಾಣಿಗಳನ್ನು ಕಾಣಬೇಕು) ಎಂದು ಗೀತೋಪನಿಷತ್ತುಗಳ ಅನುಭವವಾಗಲಿ, "ದಯುವೇ ಬೇಕು ಸರ್ವಪ್ರಾಣಿಗಳಲ್ಲಿ" ಎಂಬ ಶಿವಶರಣರ ಸ್ವಾನು ಭವವಾಗಲಿ ತಾರ್ಕಿಕ ಮನದ ಸೊತ್ತಾಗಬಹುದೆ ? ಅದು ಹೃದಯದ ಆಳದ ಆಳ ದಲ್ಲಿ ಅಡಗಿರುವ ಆತ್ಮನ ಪ್ರತ್ಯಕ್ಷ ಅನುಭವ ಬಂದ ಬಳಿಕ ಮಾತ್ರವೇ ಸಾಧ್ಯವೆಂಬುದು ಸಹಜವಾಗಿ ಹೊಳೆಯುವ ಮಾತಾಗಿದೆ. ಪರಮಾತ್ಮನ ಕೃಪೆಯಿಂದ ಇಂದು ನಮಗೀ ಅವಸ್ಥೆ ಅಳವಡಬೇಕು. ಆವಾಗಲೇ ಜಗತ್ತಿನ ಸಮಸ್ಯೆಯ ಪರಿಹಾರ— ಎಂಬುದು ಶ್ರೀ ಅರವಿಂದರ ಸ್ಪಷ್ಟ ಸಿದ್ಧಾಂತ. ಆದ್ದರಿಂದ ಕವಿಯು—

"ನಿನ್ನ ಸಂಗದ ತಿರುಳು ಸಿಗುವದೊಟ್ಟಿಗೆ ವಿರಳ,
ಶುದ್ಧ ತಪ ಬೇಕಮ್ಮ ನಿನ್ನ ಗೆಲಿಯೆ;
ನಿನ್ನ ಮೇಲಿರೆ ಮನನ ಅವರಿಗಾಗುವೆ ಶರಣ
ಭಕ್ತಿ, ಆಸಕ್ತಿಯಿರದವರಿಗೊಲಿಯೆ !"

ಎಂದು ಇಂಥ ಜೀವನಕ್ಕಾಗಿ ಜನ್ಮವನ್ನೂ ಮುಡಿಪಿಟ್ಟವರಿಗೆ ವಂದನೆಗಳನ್ನರ್ಪಿಸಿದ್ದಾರೆ. ಈ ಮಾತು ತುಂಬಾ ಸತ್ಯ. ನಾವೂ ಇವರೊಂದಿಗೆ ಕೊಂಡಾಡುವಾ. ಹಾಗೂ ಅವರು ಪಡೆದದ್ದರಲ್ಲಿ ಒಂದು ಅಗಳಿನಷ್ಟಾದರೂ ನಾವು ಪಡೆಯುವಾ. ಇದೇ ನಮ್ಮ ಸಂಸ್ಕೃತಿಯ ಹಿರಿಗುಟ್ಟು.

ಈ ಕವನಸಂಗ್ರಹದ ಆರಂಭದ ಮೂರರಲ್ಲೊಂದು ಪಾಲು ಕವಿತೆಗಳು ಈ ವರ್ಗಕ್ಕೆ ಸೇರಿದವುಗಳು. ಕೊನೆಯ ಸುಮಾರು ಒಂದು ಮೂರಾಂಶ ಕವಿತೆಗಳೂ ಈ ಭಾವಕ್ಕೆ ಪೋಷಕವಾಗುವಂಥವುಗಳು. "ಹೇ ಪ್ರಭೋ, ಕಷ್ಟಗಳನ್ನು ಕೊಡಬೇಡ

ವೆಂದು ನಾನು ಪ್ರಾರ್ಥಿಸಲಾರೆ, ಆದರೆ ತಾಳಿಕೊಳ್ಳುವ ಬಲವನ್ನು ದಯಪಾಲಿಸು" ಎಂದು ಗೀತಾಂಜಲಿಯಲ್ಲಿ ದಿವಂಗತ ಕವಿಸಾಮ್ರಾಟ ರವೀಂದ್ರನಾಥರು ಹಾಡಿದ ಗೀತಗಳ ಮಹಾಪಥದಲ್ಲಿ ಪುಟ್ಟ ಹೆಜ್ಜೆ ಇಟ್ಟಂಥವುಗಳು ಇವು. ನಡುವಿನ ಸುಮಾರು ಒಂದು ಮೂರಾಂಶ ಗೀತಗಳು ಗೋಳಾಟದ ಹಾಡುಗಳು.

ಇನ್ನು ಈ ಕವಿಯ ಕವಿತೆಗಳ ಬಾಹ್ಯಾಂಗವನ್ನು ಕುರಿತು ಸ್ವಲ್ಪ ಪುಟ್ಟಿಗೆ ಹೇಳುವಾ. ಬಹುಶಃ ಯಾವ ಕವಿತೆಯಲ್ಲಿಯೂ ದ್ವಿತೀಯಾಕ್ಷರದ ಪ್ರಾಸವಿಲ್ಲ. ಆದರೆ ಅಂತ್ಯಪ್ರಾಸವಿದೆ. ಯಾವುದಾದರೂ ಒಂದಿದೆ. ಯಾವ ಪ್ರಾಸವನ್ನೂ ಇಟ್ಟು ಕೊಳ್ಳದೆ ಕವಿತೆ ಬರೆಯುತ್ತಲಿರುವ ಪ್ರಯೋಗಗಳಿಗೂ ಏನೂ ಕೊರತೆಯಿಲ್ಲ. ಮೂಲತಃ ಸಂಸ್ಕೃತ ಕಾವ್ಯಗಳಿಗೆ ಯಾವ ಪ್ರಾಸವೂ ಇಲ್ಲವೇ ಇಲ್ಲವೆಂಬುದು ಸರ್ವರಿಗೆ ತಿಳಿದ ಮಾತು. ಇಂಗ್ಲೀಷ ಹಾಗೂ ಮರಾಠಿ (ಅಲ್ಲದೆ ಉತ್ತರ ಭಾರತದ ಸರ್ವ ಭಾಷೆಗಳ) ಕಾವ್ಯಗಳಲ್ಲಿ ಅಂತ್ಯಾಕ್ಷರ ಪ್ರಾಸ ರೂಢಿಯಿದೆ. ಇನ್ನು ಯತಿ ಇದ್ದಲ್ಲೆಲ್ಲ ಪ್ರಥಮಾಕ್ಷರದ ಯಮಕವು ಕನ್ನಡ ಜನಪದ ಸಾಹಿತ್ಯದಲ್ಲಿ ವಿಪುಲವಾಗಿ ಕಂಡುಬರು ತ್ತದೆ. ಯಾವ ಭಾಷೆಯಲ್ಲಿಯೇ ಆಗಲೊಲ್ಲದೇಕೆ, ಒಂದಿಲ್ಲೊಂದು ಬಗೆಯ ಯಮಕ ಪ್ರಾಸವು ಇಲ್ಲದೆ ಇರುವದೇ ಇಲ್ಲ. ಏಕೆಂದರೆ ಅರ್ಥಾಲಂಕಾರದಂತೆ ಶಬ್ದಾಲಂಕಾರವು ಕಾವ್ಯಮಾತೆಯ ಚರಣಕಮಲಗಳಿಗೆ ಬೇಕೇ ಬೇಕು.

ಇನ್ನು ಶಬ್ದ ಪ್ರಯೋಗದ ವಿಷಯ. ರಬಕವಿ–ಬನಹಟ್ಟಿಗಳು ಮೊನ್ನೆ ಮೊನ್ನಿನವರೆಗೆ ಮರಾಠಿ ಸಂಸ್ಥಾನದ ಅಂಗಗಳಾಗಿದ್ದವು. ಆದ್ದರಿಂದ ಅಲ್ಲಿಯ ಸಾಮಾನ್ಯ ಬಳಕೆಯ ಭಾಷೆಯಲ್ಲಿ ಅನೇಕ ಮರಾಠಿ ಶಬ್ದಗಳು, ಅಲ್ಲಿಯವರಿಗೆ ಕನ್ನಡವೋ ಮರಾಠಿಯೋ ಎಂದು ಸಹ ಗೊತ್ತಾಗದಂತೆ, ಕೂಡಿಕೊಂಡಿದ್ದವೆಂಬುದ ರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಆದ್ದರಿಂದ ಪ್ರಸ್ತುತ ಕವನ ಸಂಗ್ರಹದಲ್ಲಿ ಅಂಥ ಹಲ ಕೆಲವು ಪರಭಾಷಾ ಶಬ್ದಗಳೂ ವ್ಯಾಕರಣಕ್ಕೆ ಸರಿಹೋಗದ ಅಲ್ಪಸ್ವಲ್ಪ ಪ್ರಯೋಗ ಗಳೂ ಕೆಲವೆಡೆಗಳಲ್ಲಿ ಕಾಣಿಸಿಕೊಂಡಿರುವವು. ಮುಂದಿನ ಆವೃತ್ತಿಯಲ್ಲಿ ಅವೆಲ್ಲವನ್ನು ಸರಿಪಡಿಸಬೇಕೆಂದು ಅವರಿಗೆ ನಾನು ಸೂಚಿಸುತ್ತೇನೆ.

ಇರಲಿ, ಹಣ್ಣಿನ ಗುಣ ಹೀಚಿನಲ್ಲಿ ನೋಡು ಎಂಬಂತೆ ನವ ತಾರುಣ್ಯದಲ್ಲಿಯೇ ಜೀವನದ ಹಿರಿಯಾಸೆಯಿಂದ ಪ್ರೇರಿತರಾದ ರಬಕವಿ–ಬನಹಟ್ಟಿಯ ಈ ಉಭಯ ನವಕವಿಗಳನ್ನು ಕನ್ನಡಿಗರು ಸುಸ್ವಾಗತಿಸುವರೆಂದು ಹಾರೈಸುವೆ. ಕನ್ನಡ ತಾಯಿಯು ಕರುಣೆಯಿಂದ ತನ್ನೀ ಉಭಯ ನವಸುತರನ್ನು ಹರಸಿ ಹಿರಿ ಮೇಲ್ಮೆಗೇರಿಸಲೆಂದು ಆ ತಾಯಿಯ ದಿವ್ಯ ಶ್ರೀ ಚರಣಗಳಲ್ಲಿ ಪ್ರಾರ್ಥಿಸುವೆ.

ಓಂ ಶ್ರೀ ಓಂ

೧೨-೧೦-೧೯೫೦

# ಗಾಂಧೀ ಉಪದೇಶಾಮೃತ

ಸಂಗ್ರಾಹಕರು : ಜೀವಣ್ಣ ಮಸಳಿ

---

## ಮುನ್ನುಡಿ

'ಶಿಮ್ಮಲಿಗೆಯ ಚೆನ್ನ ರಾಮರಾಮಾ' ಎಂದು ಪುರಾತನ ಕಾಲದಲ್ಲಿ ವಚನಗಳನ್ನು ಹಾಡಿದ ಚಂದಿಮರಸು ಶರಣರು ವಾಸವಾಗಿದ್ದ ಪುಣ್ಯಭೂಮಿಯಾದ ಚಿಮ್ಮಲಗಿಯಲ್ಲಿ ಹನ್ನೆರಡನೆಯ ಶತಮಾನದ ಇನ್ನೊಬ್ಬ ನಿಸ್ಪೃಹೀ ಶರಣರಾದ ಶ್ರೀ ಮೌನೇಶ್ವರರ ವಚನಗಳನ್ನು ಸಂಗ್ರಹಿಸುವ ಕಾರ್ಯವೂ, ಆಧುನಿಕ ಮಹಾಶರಣರಾದ ಪೂಜ್ಯ ಮಹಾತ್ಮಾಜಿಯವರ ದಿವ್ಯೋಪದೇಶಪರ ವಚನಗಳ ಪುಸ್ತಕ ಪ್ರಕಟಿಸುವ ಕಾರ್ಯವೂ ನಡೆಯುತ್ತಿರುವುದೆಂದರೆ, ನಾಡಿನ ನರನರಗಳಲ್ಲೆಲ್ಲ (ಮೂಲೆ-ಮೂಲೆಗಳಲ್ಲೆಲ್ಲ-ಹಳ್ಳಿ ಪಳ್ಳಿಗಳಲ್ಲೆಲ್ಲ) ನವ ಜಾಗೃತಿಯ ಅಮೃತಧಾರೆಯು ಸೆಲೆಯಾಗಿ ಹರಿಯತೊಡಗಿದೆಯೆಂದು ಅರ್ಥವಾಗುವದಿಲ್ಲವೆ ?

ಹುನಗುಂದ ಶಾಲೆಯ "ಬಾಲಸಾಹಿತ್ಯ" ಎಂಬ ವಾರ್ಷಿಕ ಪುಸ್ತಿಕೆಯು ಎರಡು ಮೂರು ವರ್ಷಗಳಿಂದ ಪ್ರಕಟವಾಗುತ್ತಿರುವುದೂ, ವಿಜಯಪುರದಲ್ಲಿ "ಆಶಾ ಸಾಹಿತ್ಯ ಮಂದಿರ"ವೆಂಬ ಪುಸ್ತಕಾಲಯವು ತೀರ ಮೊನ್ನೆ ಮೊನ್ನೆ ಸ್ಥಾಪಿತವಾಗಿರುವುದೂ, ವಿಜಾಪುರ ಜಿಲ್ಲೆಯ ಅರ್ಧಕ್ಕಿಂತ ಹೆಚ್ಚು ಭಾಗವನ್ನು ವ್ಯಾಪಿಸಿದ ಈ ಆಶಾವಾದೀ ನವತರುಣರ ಹೊಸ ಹುಮ್ಮಸದ ಆಶಾಕಿರಣಗಳ ಸ್ವರೂಪವೇ ಆಗಿವೆಯೆಂದು ಐತಿಹಾಸಿಕನಾದ ನಾನು ನಿರ್ದೇಶಪಡಿಸದಿರುವುದು ನನ್ನ ಸ್ವಭಾವಕ್ಕೆ ಮೀರಿದ ಮಾತಾದೀತಲ್ಲವೇ ? ವಾಚಕರು ನನ್ನ ಈ ವಿಷಯಾಂತರ ದೋಷವನ್ನು ಕ್ಷಮಿಸುವರೆಂದು ವಿನಮ್ರಭಾವದಿಂದ ಕೋರುತ್ತೇನೆ.

'ಮಹಾತ್ಮರ ಮನೋರಂಗ' 'ಗಾಂಧೀ ವಿಚಾರದೋಹನ' ಮೊದಲಾದ ಅನೇಕ ಗ್ರಂಥಗಳು ಕನ್ನಡದಲ್ಲಿರುವಾಗ 'ಗಾಂಧೀ ಉಪದೇಶಾಮೃತ'ವೆಂಬ ಈ ಚಿಕ್ಕ ಹೊತ್ತಿಗೆಯ ಆವಶ್ಯಕತೆಯೇನಿದ್ದಿತೆಂದು ಕೆಲವರು ಕೇಳಬಹುದು. (ಆದರೆ ಹೀಗೆ ಯಾರೂ ನಿಜವಾಗಿ ಕೇಳಲಾರರೆಂದು ನಮ್ಮೆಲ್ಲರ ಮನೋದೇವತೆ ಹೇಳುತ್ತಾಳೆ. ಆದರೂ ತರ್ಕಪ್ರಧಾನ ವ್ಯಕ್ತಿಗಳು ಹೀಗೆ ಕೇಳಿದರೂ ಕೇಳುವ ಸಂಭವವಿದೆಯೆಂಬ ಕಾರಣದಿಂದ ಇಲ್ಲಿ ಈ ಪ್ರಶ್ನೆಯನ್ನೆತ್ತಲಾಗಿದೆ; ಇಷ್ಟೆ.) ಇದಕ್ಕೆ ಉತ್ತರವಿಷ್ಟೇ,

ಅದೇನಂದರೆ – ಪುರಾತನ ಕಾಲದಲ್ಲಿ ರಾಮಾಯಣ ಮಹಾಭಾರತಗಳ ಹೆಬ್ಬೊತ್ತಿಗೆಗಳು ಎಷ್ಟೇ ಇದ್ದರೂ, ಪ್ರತಿಯೊಂದು ಭಾಷೆಯಲ್ಲಿ ಮುಂದು ಮುಂದಿನ ಕವಿಗಳೆಲ್ಲರೂ ರಾಮಾಯಣ ಮಹಾಭಾರತಗಳ ಸಣ್ಣ ದೊಡ್ಡ ಪದ್ಯಾನುವಾದಗಳನ್ನು ವಿವಿಧ ಛಂದಗಳಲ್ಲಿ ಮಾಡಿಯೇ ಮಾಡಿರುವರು. ಕೊನೆಗೆ ಏಕಶ್ಲೋಕೀ ರಾಮಾಯಣ ಏಕಶ್ಲೋಕೀ ಭಾರತ, ಏಕಶ್ಲೋಕೀ ಭಾಗವತ ಮೊದಲಾದ ಅತಿ ಸಂಕ್ಷಿಪ್ತ ಪುಣ್ಯ ಶ್ಲೋಕಗಳು ರಚಿತವಾಗಿವೆಯೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಹೀಗೆಂತಲೇ 'ರಾಮಾಯಣಂ ಶತಕೋಟಿ ಪ್ರವಿಸ್ತರಂ' ಎಂಬ ಮಹಿಮಾದ್ಯೋತಕವಾದ ಗಾದೆಯು ಮಾತು ಸರ್ವತ್ರ ಪ್ರಚಾರವಾಗಿದೆ.

ಇದೇ ಮಾತು ಇಂದಿನ ಮಹಾತ್ಮರೂ, ಮಹಾವಿಭೂತಿಗಳೂ, ಪರಮಾತ್ಮನ ದಿವ್ಯ ಅವತಾರಸ್ವರೂಪರೂ ಆದ ಶ್ರೀ ಅರವಿಂದರು, ಮಹಾತ್ಮಾ ಗಾಂಧೀಜಿಯವರು, ಕವೀಂದ್ರ ರವೀಂದ್ರರು, ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮಿ ಶ್ರೀ ವಿವೇಕಾನಂದರು, ಸ್ವಾಮಿ ಶ್ರೀ ರಾಮತೀರ್ಥರು, ಶ್ರೀ ರಮಣ ಮಹರ್ಷಿಗಳು ಮೊದಲಾದ ಚಿರಸ್ಮರಣೀಯ ಮಹಾಪುರುಷರ ಪುಣ್ಯವಾಣಿಯ ಬಗೆಗಾದರೂ ಏಕೆ ಸತ್ಯವಾಗಲಾರದು ?

ವಿದ್ಯಾರ್ಥಿಗಳಿಗೂ, ಹೆಣ್ಣುಮಕ್ಕಳಿಗೂ, ಹಳ್ಳಿಯ ಅಲ್ಪ ಶಿಕ್ಷಿತರಿಗೂ ಸಹ ಅನುಕೂಲವಾಗಬೇಕೆಂದು ಸಂಗ್ರಹಕಾರರು ಅಮೃತೋಪಮವಾದ ಗಾಂಧೀ ಉಪದೇಶದ ಸಾರವನ್ನೇ ಈ ಚಿಕ್ಕ ಹೊತ್ತಿಗೆಯಲ್ಲಿ ಅಡಕಗೊಳಿಸಿದ್ದಾರೆ. ಎಲ್ಲರೂ ಅಮೃತವನ್ನು ಸವಿದು ಅಮರತ್ವ ಸಾಧಿಸೋಣ.

ಗೆಳೆಯರಾದ ಶ್ರೀ ಮಸಳಿ ಜೀವಣ್ಣನವರು ಇಂಥ ಈ ಅಪೌಲ್ಯ ಪ್ರಯತ್ನವನ್ನು ನಡೆಸಿರುವುದು ಅತ್ಯಂತ ಸ್ತುತ್ಯವಾದದ್ದಲ್ಲವೆ ? ನಾಡಿನ ವಾಚಕರು ಇವರ ಈ ಸ್ತುತ್ಯ ಪ್ರಯತ್ನಕ್ಕೆ ನೆರವಾಗಿ ನಾಡಿನ ಅಭಿವೃದ್ಧಿಯ ಅನೇಕ ಮುಖೀ ಪ್ರಯತ್ನಗಳಲ್ಲೊಂದಾದ ಇದನ್ನು (ಹಳ್ಳಿಯ ಕಾರ್ಯವನ್ನು) ಯಶಸ್ವಿಯನ್ನಾಗಿ ಮಾಡುವರೆಂದು ನಾನು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

೧೪-೧-೧೯೫೨

**ಪುಷ್ಪಗುಚ್ಛ**
(ಕವನ ಸಂಗ್ರಹ)
ಸಂಗಮೇಶ ಹೊಸಮನಿ

---

## ಆನಂದೋದ್ಗಾರ !

ಇಂಗ್ಲಂಡದ ಹೊಸಕಾಲದುದಯದ ಹಿರಿಯ ಕವಿಗಳಲ್ಲೊಬ್ಬನಾದ 'ಬಾಯರನ್' ತನ್ನ ಎಂ. ಎ. ಪರೀಕ್ಷೆಯ ಪ್ರಬಂಧವನ್ನು ಪ್ರಖ್ಯಾತವಾದ ಒಂದೇ ಪಂಕ್ತಿಯಲ್ಲಿ ಬರೆದು ಮೊದಲನೆಯ ಸ್ಥಾನವನ್ನು ದೊರಕಿಸಿದನೆಂದೂ, ವಿಶ್ವವಿದ್ಯಾಲಯದವರು ಪರೀಕ್ಷೆಯ ತೀರ್ಮಾನದ ದಿವಸ ಅದನ್ನು ಲೋಕದ ಅವಗಾಹನೆಗಾಗಿ ವಿಶ್ವವಿದ್ಯಾಲಯದ ಗೋಡೆಯ ಮೇಲೆ ದೊಡ್ಡ ದೊಡ್ಡ ಅಕ್ಷರಗಳಿಂದ ಬರೆಯಿಸಿದರೆಂದೂ ಹೇಳುತ್ತಾರೆ. ಹಾಗೆಯೇ ನಾನೂ ಗೆಳೆಯರಾದ ಶ್ರೀ ಹೊಸಮನಿ ಸಂಗಮೇಶರ ಈ ಪ್ರಸ್ತುತ ಕವನ ಸಂಗ್ರಹಕ್ಕೆ ಒಂದೇ ಪಂಕ್ತಿಯಲ್ಲಿ ನನ್ನ ಆನಂದೋದ್ಗಾರವನ್ನು ವ್ಯಕ್ತಮಾಡಬೇಕೆನ್ನುತ್ತೇನೆ. ಆದರೆ, ನನ್ನೀ ಪಂಕ್ತಿಯು ಮಹಾಕವಿಯಾದ 'ಬಾಯರನ್'ನ ಆ ಪ್ರಖ್ಯಾತ ಪ್ರಬಂಧ ಪಂಕ್ತಿಯಂತೆ ಸುವಿಖ್ಯಾತವಾದದ್ದೆಂಬ ಹೆಮ್ಮೆಯಿಂದ ಮಾತ್ರ ಅಲ್ಲ. ಆದರೆ ಆ ಸುವಿಖ್ಯಾತ ಕವಿಯು ಯಾವ ಆಶ್ಚರ್ಯದಿಂದ ತನ್ನ ಆ ಪಂಕ್ತಿಯನ್ನು ಬರೆದನೋ ಅದೇ ಪ್ರಕಾರದ ಆಶ್ಚರ್ಯದಿಂದ ನಾನೀ ನನ್ನ ಪಂಕ್ತಿಯನ್ನು ಬರೆಯುತ್ತಿದ್ದೇನೆ.

'ಬಾಯರನ್' ಕವಿಯ ಆ ಪಂಕ್ತಿಯ ವಿಷಯವನ್ನು ಮೊದಲಿಗೆ ಹೇಳುವೆ. ಕ್ರೈಸ್ತಧರ್ಮದ ಪವಿತ್ರ ಗ್ರಂಥವಾದ ಬಾಯ್ಬಲ್ಲಿನಲ್ಲಿ ಕ್ರಿಸ್ತದೇವನು ಒಂದು ಲಗ್ನ ಸಮಾರಂಭದಲ್ಲಿ ದ್ರಾಕ್ಷಾರಸ ಮುಗಿದು ಹೋದಾಗ ನೀರನ್ನೇ ದ್ರಾಕ್ಷಾರಸವನ್ನಾಗಿ ಮಾಡಿದನೆಂದು ಅವರ ಪ್ರಥಮ ಪವಾಡದ ವರ್ಣನೆಯುಂಟಷ್ಟೆ. ಪರೀಕ್ಷೆಯ ಪ್ರಬಂಧವು ಆ ವಿಷಯವನ್ನು ಕುರಿತದ್ದು. ಒಡೆಯನು ತನ್ನ ಹತ್ತಿರ ಬಂದರೆ ಮಂಡದಿಯು ನಾಚುವದು ಸ್ವಾಭಾವಿಕವಷ್ಟೆ? ನಾಚಿದರೆ ಮುಖವು ಕೆಂಪೇರುವುದೆಂಬುದನ್ನು ಸರ್ವರೂ ಬಲ್ಲರು. ಕ್ರಿಸ್ತದೇವನು ಪ್ರಭುವಿನ ಅವತಾರ. ಪ್ರಭುವು ತನ್ನೆಡೆಗೆ ಬಂದು ಕೃಪಾದೃಷ್ಟಿ ತೋರಲು ಅವಳು (ಜಲದೇವಿಯು) ತನ್ನ ಪ್ರಭುವಿಗೆ ನಾಚಿದಳು. ಅದರಿಂದ ಅವಳ ಮುಖವು ಕೆಂಪೇರಿತು. ಆದ್ದರಿಂದ ನೀರು ಹೋಗಿ ದ್ರಾಕ್ಷಾರಸವಾಯಿತು !!! ಇದು ಆ ಮಹಾಕವಿಯ ಪ್ರಬಂಧ ಪಂಕ್ತಿಯ ಸಾರ ಸರ್ವಸ್ವ.

"ಜಲರಮಣಿಯುಂ ತಾ ವಿನಿಯದೊಳು !
ಪ್ರಭುವರನ ನೋಡಿ ನಾಚಿದಳುಂ !!!"

ಇನ್ನು ನಾನು ಬರೆಯಬೇಕಾಗಿರುವ ಪಂಕ್ತಿಯ ವಿಷಯವನ್ನು ಸ್ವಲ್ಪ ಹೇಳು ವೆನು. ಗೆಳೆಯರಾದ ಶ್ರೀ ಸಂಗಮೇಶರ ಜನ್ಮಸ್ಥಾನವಾದ ಹುನಗುಂದ ತಾಲೂಕು "ಕೂಡಲ ಸಂಗಮದೇವರ" ಪರಮ ಕೃಪಾಮಯವಾದ ಪಾವನ ಪ್ರದೇಶವು. ಅದರಲ್ಲಿಯೂ ಇವರ ಸ್ವಗ್ರಾಮವಾದ ರಾಮವಾಡಗಿಯು ಪವಿತ್ರವಾದ "ಕಪ್ಪಡಿ ಸಂಗಮ"ಕ್ಕೆ ಮೂರೇ ಹರದಾರಿ. ಕನ್ನಡಿಗರ ಕರುಣಾಳು ತಂದೆಯಾದ ಆ "ಕೂಡಲ ಸಂಗಮದೇವ" ಪರಮ ಕೃಪೆಯಿಂದಲೇ ತಮ್ಮ ಕವಿತಾಕನ್ನಿಕೆಯು ಹುಟ್ಟಿ ಬೆಳೆದಳೆಂಬ ಬಲವಾದ ಭರವಸೆಯು ಕವಿ ಸಂಗಮೇಶರ ಹೃದಯದಲ್ಲಿ ಮನೆ ಮಾಡಿ ಕೊಂಡಿದ್ದರಿಂದಲೇ ತಮಗೆ ತಮ್ಮಲ್ಲಿ ಹಿರಿಯರಿಟ್ಟ ಹೆಸರು "ಸಂಗನಗೌಡ" ಎಂದಾಗಿ ದ್ದರೂ ತಮ್ಮ ಕವಿತ್ವದ ಕರ್ತೃತ್ವವು ನಿಜವಾಗಿ ತಮ್ಮನ್ನು ಕವಿಗಳನ್ನಾಗಿಸಿದ ಪರಮ ಪ್ರಭುವರನಿಗೇ ಸಲ್ಲುವುದೆಂದು ತಮ್ಮ ಕವಿನಾಮವನ್ನು ಸಂಗಮೇಶ ಎಂದು ಹಿರಿ ಕವಿಗಳಲ್ಲೊಬ್ಬರಾದ ಅಣ್ಣ ಮಾಸ್ತಿಯವರ ರಾಜಮಾರ್ಗವನ್ನನುಸರಿಸಿ (ಅವರ ತಮ್ಮ ಸಾಹಿತ್ಯ ಮತ್ತು ಕಾವ್ಯ ಕೃತಿಗಳಿಗೆಲ್ಲ ಭಗವತ್ಕರ್ತೃತ್ವವನ್ನು ಸೂಚಿಸುವುದ ಕ್ಕಾಗಿ "ಶ್ರೀನಿವಾಸ" ಎಂಬ ಕವಿನಾಮವನ್ನಿಟ್ಟುಕೊಂಡಂತೆ) ಇಟ್ಟುಕೊಂಡಿರುವರು. ಧನ್ಯಧನ್ಯ !! ಇಂತಹ ಭಾವುಕ ಕವಿಯೇ ಧನ್ಯ ! ಇದೇ ನಮ್ಮ ಭಾರತ ಸಂಸ್ಕೃತಿಯ ಪರಮಾದರ್ಶವಲ್ಲವೆ ?

ಇರಲಿ, ಗೆಳೆಯ ಸಂಗಮೇಶರು ಎರಡು ವರುಷಗಳ ಹಿಂದೆ ತಮ್ಮ ಪ್ರಥಮ ಕವನಸಂಗ್ರಹವಾದ 'ಮೊಗ್ಗುಮಾಲೆ'ಯ ಪ್ರಕಟನೆಯ ಸಮಯದಲ್ಲಿ ಅದರ ಮುದ್ರಿತ ಹಾಳೆಗಳನ್ನು ನನ್ನ ಮೊದಲ ಭೆಟ್ಟಿಯ ಕಾಲಕ್ಕೆ ನನಗೆ ತೋರಿಸಿದ್ದರು. ಆಗ ನನಗಿ ವರ ಕವಿತೆಗಳಲ್ಲಿ ಜೀವಕಳೆ ಇರುವುದಾಗಿ ಕಂಡಿದ್ದರಿಂದಲೂ, ಇವರಿಗೆ ತಮ್ಮ ಕವಿತ್ವ ಶಕ್ತಿಯ ಬಗೆಗೆ ಪರಮಾತ್ಮನ ಕೃಪೆಯೇ ಇದಕ್ಕೆ ಕಾರಣವೆಂಬ ದೃಢವಾದ ಭಾವನೆ ಯಿದ್ದುದರಿಂದಲೂ ನಾನಿವರಿಗೆ ಆಗ ಹೇಳಿದ್ದೇನೆಂದರೆ:- ಮೊಗ್ಗುಮಾಲೆ ಅರಳಿ ಪುಷ್ಪ ಗುಚ್ಛವಾಗುವದರಲ್ಲಿ ಏನೂ ಸಂಶಯವಿಲ್ಲ. ನಿಮ್ಮ ಕವಿತೆಯಲ್ಲಿ ಜೀವಕಳೆ ಇದೆ. ನಾನು ಮುಖ್ಯವಾಗಿ ಇದನ್ನೇ ನೋಡುತ್ತಿರುತ್ತೇನೆ. ತಪ್ಪು ಒಪ್ಪುಗಳ ಪ್ರಶ್ನೆ ಬಹಳ ದೊಡ್ಡದಲ್ಲ. 'ಜೀವಕಳೆ' ಇರುವುದೇ ಮುಖ್ಯಮಾತು. ಅದಿದ್ದರೆ ತಪ್ಪು ತಡೆಗಳನ್ನೆಲ್ಲ ಹಿಂದಿನಿಂದ ಯಾರ ಸಹಾಯದಿಂದಲೊ ತಿದ್ದಿಕೊಳ್ಳಬಹುದು. 'ಜೀವಕಳೆ'ಯೇ ಇಲ್ಲದಿದ್ದರೆ ಅದನ್ನು ಯಾರ ಸಹಾಯದಿಂದ ತಿದ್ದಿಕೊಳ್ಳಲಿಕ್ಕಾದೀತು !!!

ಮುಂದೆ ಒಂದೆರಡು ದಿವಸಗಳಲ್ಲಿ ತಮ್ಮ ಊರಿಗೆ ಹೊರಟ ಗೆಳೆಯ ಸಂಗಮೇಶರು ಇನ್ನೂ ತಮ್ಮ ಊರಿಗೆ ಮುಟ್ಟದೆ ನಡುದಾರಿಯಲ್ಲಿರುವಾಗಲೇ

ಬಾಗಲಕೋಟೆಯಲ್ಲಿ "ದೀಪಗಂಬ" "ಕರಿಮಾವು" ಎಂಬ ಎರಡು ಕವನಗಳನ್ನು ಬರೆದು ಕೂಡಲೇ ಅವುಗಳನ್ನು ನನಗೆ ಕಳಿಸಿಕೊಟ್ಟರು. ಅವುಗಳನ್ನು ನೋಡಿದಾಗಲೇ ಇವರ ಕವಿತೆಗಳಲ್ಲಿ "ಹೊಸಮಿಂಚು" ಒಡಮೂಡಿದ್ದು ನನಗೆ ಪರಮ ಸಂತೋಷವಾಯಿತು; ಎಷ್ಟು ಬೇಗನೆ ಇವರ ಕವಿತೆಗಳಲ್ಲಿ ಹೊಸ ಪ್ರಗತಿಯು ಆರಂಭವಾಯಿತಲ್ಲಾ !!! ಎಂದು ನನಗೆ ಆಶ್ಚರ್ಯವೂ ಆಯಿತು !!! ಕೂಡಲ ಸಂಗಮ ದೇವರ ಕೃಪೆಯು ಇವರ ಮೇಲೆ ಇದ್ದುದು ತುಂಬ ಸತ್ಯವಾಗಿದೆ !!!" ಎಂದು ನನ್ನ ಹೃದಯಕ್ಕೆ ಸಂಪೂರ್ಣವಾಗಿ ಅನಿಸಿ ಪರಮಾಶ್ಚರ್ಯವಾಯಿತು !!!

ಈಗಾರು ತಿಂಗಳ ಹಿಂದೆ ಇವರ ಎರಡನೆಯ ಕವಿತಾಸಂಗ್ರಹವಾದ 'ಪುಷ್ಪಗುಚ್ಛ'ವು ನನ್ನ ಕಡೆಗೆ ಅವಲೋಕನಕ್ಕಾಗಿ ಬಂದಿತು. ಈ ಇಡೀ ಸಂಗ್ರಹವನ್ನು ನೋಡಿಯಂತೂ ನನಗೆ ತೀರ ಆನಂದವಾಯಿತು !!! ಪರಮಾತ್ಮನ ಕೃಪೆಯಿದ್ದರೆ ಎಷ್ಟು ಬೇಗನೆ ಮೊಗ್ಗು ಹೂವಾಗುವುದಲ್ಲಾ ! ಹೀಚು ಹಣ್ಣಾಗುವುದಲ್ಲಾ ! ಎಂದು ನನ್ನ ಹೃದಯಕ್ಕೆ ಬಹಳ ಆನಂದವೂ ಬಹಳ ಆಶ್ಚರ್ಯವೂ ಉಂಟಾದುವೆಂದು ಬೇರೆ ಹೇಳಬೇಕಾಗಿಲ್ಲ.

ಮುಖ್ಯವಾಗಿ ಆತನ ಕೃಪೆಯಿಂದ, ಮುಖ್ಯವಾಗಿ ಆತನ ಕೃಪೆಯಿಂದ, ಮುಖ್ಯವಾಗಿ ಆತನ ಕೃಪೆಯಿಂದ ಎಂದು ನಾರದ ಮಹರ್ಷಿಗಳು ತಮ್ಮ ದಿವ್ಯವಾದ "ಭಕ್ತಿ ಸೂತ್ರ" ಗ್ರಂಥದಲ್ಲಿ ತ್ರಿವಾರವಾಗಿ ಹೇಳಿದುದರ ರಹಸ್ಯವನ್ನೇ ನಾವಿಲ್ಲಿ ಕಂಡುಕೊಳ್ಳಬಹುದು !!

ಈ ಕವನ ಸಂಗ್ರಹದ ಬಗೆಗಿರುವ ನನ್ನ ಪಂಕ್ತಿಯನ್ನು ಇನ್ನು ನಾನು ಹೇಳುವೆನು. ಅದು ಹೀಗಿದೆ—

ಈಶಕೃಪೆಯಿಂ ಪುಟ್ಟಿ ಮೊಗ್ಗದು
ಈಶಗರ್ಪಿತವಾಗಲು !
ಈಶನೇತ್ರದ ಸೂರ್ಯಕಿರಣದ
ಬೆಳಗಿನಲಿ ತಾನರಳಿತು !!!

ಬಾಗಲಕೋಟೆಯಲ್ಲಿ ರಾತ್ರಿ ನಿದ್ದೆ ತಿಳಿದೊಡನೆ ಎದುರಿಗೆ ಓಣಿಯಲ್ಲಿದ್ದ ದೀಪಗಂಬವನ್ನು ಕಂಡಾಗ, ಕೂಡಲೆ ಕವಿ ಮಿತ್ರರ ಭಾವದಲ್ಲೊಂದು ಮಹಾಪರಿವರ್ತನವುಂಟಾಗಿ ಕಣ್ಣುಕುಕ್ಕುವ ಆ ಬೆಳಕು ಈಶನ ಮಹಾಜ್ಯೋತಿಯಂತೆ ಅನಿಸತೊಡಗಿದ್ದರಿಂದ 'ದೀಪಗಂಬ' ಎಂಬ ಇವರ ಆ ಪ್ರಥಮೋಕ್ತ ಕವಿತೆಯ ಉದಯವಾಯಿತು. ಇದೇ ಈ ನವ ಪುಷ್ಪಗುಚ್ಛದ ಮೊಟ್ಟಮೊದಲನೆಯ ಹೂವಾಗಿರುವುದು !! (ಪ್ರಸ್ತುತ ಕವನ ಸಂಗ್ರಹದಲ್ಲಿ ಇದು ಕೊನೆಕೊನೆಯ ಭಾಗದಲ್ಲಿ ಸೇರಿಸಲ್ಪಟ್ಟಿದೆ.)

ಇರಲಿ, ಒಂದು ಪಂಕ್ತಿಗೆ ಬದಲಾಗಿ ಅನೇಕ ಪುಟಗಳಾದದ್ದಕ್ಕೆ ವಾಚಕರು ನನ್ನನ್ನು ಕ್ಷಮಿಸಬೇಕೆಂದು ವಿಜ್ಞಾಪಿಸುವೆ.

ಈ ಕವಿ ಮಿತ್ರರಿಂದ ಈ "ಪುಷ್ಪಗುಚ್ಛ"ದ ಅನಂತರವೂ ಇನ್ನೂ ಅನೇಕ "ಹಣ್ಣಿನ ಗೊಂಚಲು"ಗಳು ಕನ್ನಡ ತಾಯಿಯ ಅಡಿದಾವರೆಗಳಲ್ಲಿ ಅರ್ಪಿಸಲ್ಪಡಲೆಂದು ಶ್ರೀ ಪರಮೇಶ್ವರ – ಪರಮೇಶ್ವರಿಯರ ದಿವ್ಯ ಶ್ರೀ ಚರಣಗಳಲ್ಲಿ ಭಕ್ತಿಪೂರ್ವಕ ಅನಂತಾನಂತ ಪ್ರಣಾಮಗಳೊಂದಿಗೆ ಪ್ರಾರ್ಥಿಸುತ್ತೇನೆ.

ಓಂ ಶ್ರೀ ಓಂ

೨-೧೨-೫೨

## ಭಕ್ತ ಪ್ರಹ್ಲಾದ

(ಭಕ್ತಿರಸಪ್ರಧಾನ ಏಕಾಂಕ ನಾಟಕ)

ಲೇಖಕರು : ಎ. ಜೆ. ಮುಸಳಿ

---

### ಮುನ್ನುಡಿ

ಶ್ರೀ ಅರವಿಂದಾಶ್ರಮದಲ್ಲಿ ಕೆಲ ವರ್ಷಗಳಿಂದ ಸಾಧಕರಾಗಿರುವ ಗೆಳೆಯ ಶ್ರೀ ಆದಮಸಾಹೇಬರು ಬಹು ವರ್ಷಗಳ ಹಿಂದೆ ಹಲಸಂಗಿಯ ಹರಿಜನ ಶಾಲೆಯ ಶಿಕ್ಷಕರಿದ್ದಾಗ ಶಾಲೆಯ ಮಕ್ಕಳ ಕಡೆಯಿಂದ "ಮೊದಲನೆಯ ದೇಶದ್ರೋಹಿ" (ಪೋರಸ), "ಸೊಹ್ರಾಬ್ ರುಸ್ತುಂ", "ಭಕ್ತ ಪ್ರಹ್ಲಾದ" ಮೊದಲಾದ ಚಿಕ್ಕ ಚಿಕ್ಕ ನಾಟಕಗಳನ್ನಾಡಿಸಿದ್ದರು. ಇವುಗಳಲ್ಲಿ ಈ "ಭಕ್ತ ಪ್ರಹ್ಲಾದ" ಎಂಬ ಚಿಕ್ಕ ಮಕ್ಕಳ ಏಕಾಂಕ ನಾಟಕವನ್ನು ಸ್ವತಃ ತಾವೇ ಬರೆದಿದ್ದಾರೆ. ಅದು ಈಗ ಅವರು ಆಶ್ರಮ ವಾಸಿಗಳಾದ ಮೇಲೆ ಕನ್ನಡನಾಡಿನ ಚಿಕ್ಕಮಕ್ಕಳ ಕೈಗೆ ಪುಸ್ತಕ ರೂಪದಿಂದ ಮುದ್ರಿತ ವಾಗಿ ಲಭಿಸುತ್ತಿರುವದು ನಮ್ಮ ನಾಡಿನ ಮಕ್ಕಳ ಮಹಾಭಾಗ್ಯವೇ ಸರಿ.

ಚಿಕ್ಕ ಮಕ್ಕಳಿಗಾಗಿ ಬರೆಯುವ ಪುಸ್ತಕಗಳ ವಿಷಯವು ಉಚ್ಚತರವಾಗಿಯೂ ಭಾಷೆಯು ಸರಳವಾಗಿಯೂ ಶೈಲಿಯು ಲಲಿತವಾಗಿಯೂ ಇರಬೇಕಷ್ಟೇ ? ಪ್ರಸ್ತುತ ನಾಟಕದಲ್ಲಿ ಈ ಮೂರೂ ಮಾತುಗಳು ತಕ್ಕಷ್ಟು ಸಾಧಿಸಿವೆಯೆಂಬುದರಲ್ಲಿ ಎಷ್ಟೂ ಸಂಶಯವಿಲ್ಲ. ಶಾಲೆಯ ಮಕ್ಕಳಿಂದ ಆಡಿಸುವುದಕ್ಕೆ ಹಾಗೂ ಅವರಿಗೆ ಓದಿಸುವು ದಕ್ಕೆ, ಅಲ್ಲದೆ ಇದೀಗ ಭರದಿಂದ ಹಬ್ಬುತ್ತಿರುವ ಪ್ರೌಢ ಶಿಕ್ಷಣದ (ಸಾಮಾಜಿಕ ಶಿಕ್ಷಣದ) ಪ್ರೌಢ ವಿದ್ಯಾರ್ಥಿಗಳಿಗೆ ಓದಿಸಲಿಕ್ಕೆ ಈ ಚಿಕ್ಕ ನಾಟಕವು ಬೇಕಾದಷ್ಟು ಉಪಯುಕ್ತವಾಗಿದೆಯೆಂದು ನಿಃಸಂದೇಹವಾಗಿ ಹೇಳಬಹುದು.

ಇನ್ನೊಂದು ಮಾತೆಂದರೆ, ಇತ್ತೀಚಿಗೆ ಕೆಲವರು ಈ ನಾಟಕದ ಕಥೆಯನ್ನು ಶೈವ-ವೈಷ್ಣವ ವಾದಕ್ಕೆ ಎಳೆದದ್ದು. ಹಿರಣ್ಯಕಶಿಪುವು ಶಿವನ ಭಕ್ತನೆಂದೂ ಪ್ರಹ್ಲಾದನು ವಿಷ್ಣುವಿನ ಭಕ್ತನೆಂದೂ ಭಾವಿಸಿ, ತಂದೆ ಎಷ್ಟು ಹೇಳಿದರೂ ಕೇಳದೆ, ಮಗನು ಶಿವನ ನಾಮಸ್ಮರಣೆ ಮಾಡದೆ ವಿಷ್ಣುವಿನ ನಾಮಸ್ಮರಣೆಯನ್ನೇ ಮಾಡಿದನೆಂದೂ ಅದಕ್ಕಾಗಿ ಆತನ ತಂದೆಯು ಮುನಿದನೆಂದೂ ಮುಂತಾಗಿ ಕಲ್ಪಿಸಿ, ಶೈವ-ವೈಷ್ಣವ ವಾದಕ್ಕೆ ಈ ಕಥೆಯನ್ನು ಗುರಿಪಡಿಸಿದ್ದಾರೆ. ಇದರಂತೆ ರಾವಣನು ಮಹಾಶಿವಭಕ್ತನೆಂದೂ ವೈಷ್ಣವ ಧರ್ಮದ ರಕ್ಷಕನಾದ ಶ್ರೀ ರಾಮಚಂದ್ರನು ಅವನನ್ನು ಕೊಂದನೆಂದೂ

ಹೇಳಿಕೊಳ್ಳುತ್ತ ರಾಮಾಯಣ. ಮಹಾಭಾರತಗಳನ್ನೂ ಈ ವಾದಕ್ಕೆ ಸೇರಿಸಿದ್ದಾರೆ. ಇಷ್ಟೂ ಅಲ್ಲದೆ ರಾಕ್ಷಸರೆಂದರೆ ದ್ರಾವಿಡರೆಂದೂ ಅವರು ಶಿವಭಕ್ತರೆಂದೂ ಆರ್ಯರು ವೈಷ್ಣವರೆಂದೂ ಭಾವಿಸಿಕೊಂಡು ಮತ್ತೆ ಈ ಶೈವ ವೈಷ್ಣವ ವಾದಕ್ಕೆ ಆರ್ಯ–ದ್ರಾವಿಡ ವಾದದ ತೊಡಕನ್ನು ಬೇರೆ ಹಾಕಿದ್ದಾರೆ.

ಇದಾವುದರಲ್ಲಿಯೂ ಅರ್ಥವಿಲ್ಲ. ರಾಕ್ಷಸರಿಗೆ ಶಿವನೇ ದೈವತವಾಗಿದ್ದರೆ ತ್ರಿಪುರಾಸುರರನ್ನು ಸ್ವಯಂ ಶ್ರೀ ಮಹಾದೇವನೇ ಸಂಹರಿಸಿದ್ದೇಕೆ? ತಾರಕಾಸುರನ ವಧೆಯಾಗಿ ಸ್ವಯಂ ಶ್ರೀ ಶಂಕರ ಭಗವಂತನಿಂದ ಕಾರ್ತಿಕೇಯನ ಅವಿರ್ಭಾವವಾದದ್ದೇತಕ್ಕೆ? ಜಲಂಧರಾಸುರನ ವಧೆಯನ್ನು ಸ್ವಯಂ ಪರಶಿವ ಪರಮಾತ್ಮನೇ ಮಾಡಿದ್ದದ್ದೇತಕ್ಕೆ? ಅಸುರರು ಅಹಂಕಾರಿಗಳು; ದೇವತೆಗಳು ವಿನೀತರು. ಧರ್ಮಾಧರ್ಮಗಳೆಂದರೂ ಈ ವಿನಯ ಮತ್ತು ಅಹಂಕಾರಗಳೇ. ಶಿಷ್ಟ–ದುಷ್ಟರೆಂಬ ಶಬ್ದಗಳು ಈ ಪರ್ಯಾಯವನ್ನೇ ಸೂಚಿಸುತ್ತವೆ. ಶಿಷ್ಟ ಸಂರಕ್ಷಣ, ದುಷ್ಟ ಸಂಹಾರ ಇದೇ ಪರಮಾತ್ಮನ ವಿಶಿಷ್ಟ ಕಾರ್ಯ, ಧರ್ಮ ರಕ್ಷಣ–ಅಧರ್ಮ ನಾಶನ ಎಂಬ ಮಾತಿನ ಸಾರಾಂಶವಾದರೂ ಇದೇ. ಶಿವ ಪುರಾಣಗಳಲ್ಲಿಯೇ ಆಗಲಿ, ವಿಷ್ಣು ಪುರಾಣಗಳಲ್ಲಿಯೇ ಆಗಲಿ ಪರಮಾತ್ಮನು ಹೀಗೆ ದುಷ್ಟ ಸಂಹಾರ, ಶಿಷ್ಟ ಪರಿಪಾಲನ ಮಾಡಿದ ಕಥೆಗಳು ಅನೇಕಾನೇಕವಾಗಿವೆ. ಇದೇ ಅಸುರ ಸಂಹಾರದ ಮೂಲ.

ಅಸುರರೂ ದೇವತೆಗಳೂ ಮೇಲಣ ಲೋಕದ ಜೀವಿಗಳು. ಅವರು ಶೈವರೂ ಅಲ್ಲ, ವೈಷ್ಣವರೂ ಅಲ್ಲ. ದೇವತೆಗಳು ಈಶ ಕಾರ್ಯದಲ್ಲಿ ನಿರತರು, ಅಸುರರು ಭಗವತ್ಕಾರ್ಯಕ್ಕೆ ವಿರೋಧಿಗಳು. ಆದ್ದರಿಂದ ಅಸುರರು ಭಗವದ್ವಿರೋಧಿಗಳು, ಹಾಗೂ ದೇವತೆಗಳಿಗೂ ವಿರೋಧಿಗಳು. 'ದಂಭೋ ದರ್ಪೋ ಅಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ' ಎಂದು ಭಗವದ್ಗೀತೆಯಲ್ಲಿ ಹೇಳಿದ ಆ ದೈವೀ ಗುಣಗಳಿಗೆಡೆಯಾದವರೇ ಅಸುರರು. "ಅಹಿಂಸಾ ಸತ್ಯಂ ಅಕ್ರೋಧಃ ತ್ಯಾಗಃ ಶಾಂತಿಃ ಅಪೈಶುನಂ" ಇತ್ಯಾದಿಯಾಗಿ ವರ್ಣಿಸಲ್ಪಟ್ಟಿದ್ದೇ ದೇವತಾ ಲಕ್ಷಣವು.

ಈ ದೇವ–ದಾನವರು ಪರಮಾತ್ಮನಂತೆಯೇ ಒಮ್ಮೊಮ್ಮೆ ಭೂಲೋಕದಲ್ಲಿ ಮಾನವ ದೇಹದಿಂದಲೂ ಆವಿರ್ಭವಿಸುವರು. ಈ ವಿಷಯಕ್ಕೆ ಶ್ರೀ ಅರವಿಂದರು ಸಾರಿ ಹೇಳಿರುವರು. ಆದ್ದರಿಂದ ಇಂಥವರನ್ನು 'ಆ ಧರ್ಮದವರು, ಈ ಧರ್ಮದವರು' ಎಂದು ಅಭಿಮಾನಿಸುವವರಲ್ಲಿ ಎಳ್ಳಷ್ಟೂ ಅರ್ಥವಿಲ್ಲ. ಇದರಂತೆಯೇ ಶರಣರೂ ಸಂತರೂ ಪರಮಾತ್ಮನ ಪರಿವಾರವೇ ಆಗಿದ್ದರೆಂಬುದು ಸರ್ವರ ಹೃದಯಕ್ಕೆ ಸ್ಪಷ್ಟವಾಗಿ ಅನಿಸುವ ಮಾತು. ಹೀಗೆ ದೇವ–ದಾನವರೀರ್ವರೂ ಕಾಲ ಕಾಲಕ್ಕೆ ಭೂತಲದಲ್ಲಿ ಆವಿರ್ಭವಿಸುತ್ತಿರುವರೆಂಬುದು ಸ್ಪಷ್ಟವಾದ ಮಾತಾಗಿದೆ. ಆದ್ದರಿಂದ ಯಾವ ಧರ್ಮ, ಯಾವ ದೇಶ ಎಂಬ ಭೇದವನ್ನೂ ಮಾಡದೆ ಆ ಮಹಾತ್ಮರನ್ನು ಮಹಾತ್ಮರೆಂದೂ ಅಸುರರನ್ನು ಅಸುರರೆಂದೂ ನಿರ್ಧರಿಸಿ, ನಾವು

ಮಹಾತ್ಮರನ್ನು ಪ್ರೀತಿಸುವವರೂ ಅಸುರರನ್ನು ಅನುಸರಿಸದವರೂ ಆಗಬೇಕೆಂಬು ದಿಷ್ಟೇ ಅಂದಿನಿಂದ ಇಂದಿನವರೆಗಿನ ಉಪದೇಶದ ಸಾರಾಂಶವಾಗಿದೆ.

ಇತ್ತೀಚೆಗೆ ನಾನು ಓದಿದ ಮೂಲ ಪುರಾಣಗಳಲ್ಲಿಯೇ ಹಿರಣ್ಯಕಶಿಪುವು ಬ್ರಹ್ಮ ನಿಂದ ವರವನ್ನು ಪಡೆದಿದ್ದನೆಂದು ಉಲ್ಲಿಖಿತವಾಗಿದೆ (ಸೌರ ಮತ್ತು ಮತ್ಸ). ಸದ್ಯದ ನಾಟಕದಲ್ಲಿಯೂ ನನ್ನ ಗೆಳೆಯರು ಹೀಗೆಯೇ ಬರೆದಿದ್ದಾರೆ. ಇದರಿಂದ ಶೈವ–ವೈಷ್ಣವ ವಾದಕ್ಕೆ ಎಡೆಯೇ ಉಳಿಯುವದಿಲ್ಲ. ಆದರೆ ಧ್ರುವ–ಪ್ರಹ್ಲಾದರ ಕಥೆಗಳೇನೋ ವೈಷ್ಣವ ಪುರಾಣಗಳೊಳಗಿನವೇ ಆದರೂ ಎಲ್ಲರೂ ಸಮಾನ ಆದರ ದಿಂದ ಓದಬೇಕೆಂಬುದೇ ಇಂದಿನ ಯುಗವಾಣಿ. ಶ್ರೀ ಸಿದ್ಧರಾಮ, ಶ್ರೀ ಅಕ್ಕಮಹಾ ದೇವಿಯುವರ ಚರಿತ್ರೆಗಳೇ ಆಗಲಿ, ಧ್ರುವ-ಪ್ರಹ್ಲಾದರ ಚರಿತ್ರೆಗಳೇ ಆಗಲಿ. ಡೆವ್ಹಿಡ್-ಸಾಲೋಮನ್‌ರ ಚರಿತ್ರೆಗಳೇ ಆಗಲಿ, ಅಬೂಬಕರ್-ಹಸನ್-ಹುಸೇನರ ಚರಿತ್ರೆಗಳೇ ಆಗಲಿ, ಎಲ್ಲ ಧರ್ಮಗ್ರಂಥಗಳೊಳಗಿನ ಪುಣ್ಯ ಚರಿತ್ರೆಗಳೆಲ್ಲ ಪರಮಪಾವನವಾದವು ಗಳೇ ಆಗಿವೆಯೆಂಬುದರಲ್ಲಿ ರವೆ ತೂಕದಷ್ಟಾದರೂ ಸಂಶಯವಿಲ್ಲವೆಂಬುದಕ್ಕೆ ಸರ್ವರ ಹೃದಯಸ್ಥ ಆತ್ಮನ ಅನಿಸಿಕೆಯೇ ಸಾಕ್ಷಿ. "ಯಾವ ಅವತಾರವನ್ನಾದರೂ ನಂಬಿರಿ, ಆದರೆ ಇನ್ನಾವ ಬೇರೆ ಅವತಾರವನ್ನೂ ತಿರಸ್ಕರಿಸಬೇಡಿರಿ" ಎಂದು ಶ್ರೀ ಅರವಿಂದರು ಒಂದೆಡೆಗೆ ಹೇಳಿದ್ದಾರೆ.

ಅಲ್ಲದೆ, ಆರ್ಯ–ದ್ರಾವಿಡ ವಾದದಲ್ಲಿ ಏನೂ ಅರ್ಥವಿಲ್ಲವೆಂದೂ ಅವೆರಡೂ ಭಾಷಾ ವರ್ಗಗಳೂ ಹಾಗೂ ಭಾಷಾಶಾಸ್ತ್ರ ದೃಷ್ಟಿಯಿಂದ ಒಂದೇ ವರ್ಗದ್ದಾಗಿರು ವದನ್ನು ಸ್ವತಃ ತಾವು ಪರಿಶೀಲಿಸಿ ಮನಗಂಡದ್ದಾಗಿದೆಯೆಂದೂ ಶ್ರೀ ಅರವಿಂದರು 'ವೇದರಹಸ್ಯ' ಎಂಬ ಉದ್ಗ್ರಂಥದಲ್ಲಿ ನಿರೂಪಿಸಿದ್ದಾರೆ. ಅವರ ಶಿಷ್ಯ ಮಹಾನುಭಾವ ರೊಬ್ಬರು 'ಗ್ರೀಕ-ಲ್ಯಾಟಿನ್'ಗಳನ್ನು ಮಧ್ಯಸ್ಥವಾಗಿ ಇಟ್ಟುಕೊಂಡರೆ ಸಂಸ್ಕೃತ–ದ್ರಾವಿಡಗಳಿಗೆ ಸಂಬಂಧ ಜೋಡಿಸಲಿಕ್ಕಾಗುತ್ತದೆ. ಹೀಗೆ ನಾವು ಅನೇಕ ತಮಿಳು ಶಬ್ದಗಳಿಗೂ ಸಂಸ್ಕೃತ ಶಬ್ದಗಳಿಗೂ ಸಂಬಂಧ ಕಂಡುಕೊಂಡು ಮನಗಂಡಿದ್ದೇವೆ ಎಂದು ಬರೆದಿದ್ದಾರೆ. ರಾಮಾಯಣ–ಮಹಾಭಾರತಗಳಲ್ಲಿ ಹಿಂದುಸ್ತಾನದ ಮೂಲ ಅನಾಗರಿಕ ನಿವಾಸಿಗಳೇ ರಾಕ್ಷಸರೆಂದು ಕರೆಯಲಾಗಿದೆಯೆಂದು ಎಷ್ಟೋ ಜನರ ಊಹೆ. ಹಾಗಾದರೆ ಹಂಪೆ(ಕಿಷ್ಕಿಂಧಾ)ಯಿಂದ ಕನ್ಯಾಕುಮಾರಿಯವರೆಗೆ ಹಬ್ಬಿದ ದಂಡಕಾರಣ್ಯವಾಸಿಗಳಿಗೆ ರಾಮಾಯಣದಲ್ಲಿ ಗಿಡ್ಡ ಆಕಾರದ ಕಪಿಕುಲದವರೆಂದು ಕರೆದು ಅವರೊಡನೆ ಮೈತ್ರಿಯನ್ನು ಬೆಳೆಸಲಾಗಿದೆಯೇ ಹೊರತು ಅವರನ್ನು ರಾಕ್ಷಸ ರೆಂದು ಹೇಳಿಲ್ಲ ಹಾಗೂ ಹನುಮಂತನಿಗೆ ಉತ್ತಮ ಸಂಸ್ಕೃತ ಬರುತ್ತಿತ್ತೆಂದು ರಾಮಾಯಣದಲ್ಲಿ ಹೇಳಲಾಗಿದೆ. ಅದರ ಅರ್ಥವೇನು ? 'ಮೊದಲು ಬಂದ ಆರ್ಯರು, ಹಿಂದಿನಿಂದ ಬಂದ ಆರ್ಯರು' ಎಂದು ಮೊದಮೊದಲಿನ ಇತಿಹಾಸ ಕಾರರು (ಪಾಶ್ಚಾತ್ಯರೇ) ಹೇಳಿದ್ದರಲ್ಲಿಯೇ ಅರ್ಥವಿದೆಯೆಂದು ಇದರಿಂದ ಸಿದ್ಧ ವಾಗುವದಿಲ್ಲವೆ ? 'ಹಾಗಾದರೆ ದ್ರಾವಿಡ ಹಾಗೂ ಸಂಸ್ಕೃತ ಭಾಷೆಗಳು ತೋರಿಕೆ

ಯಲ್ಲಿ ಒಂದೇ ಬಗೆಯವಾಗಿ ಕಾಣುವದಿಲ್ಲವಲ್ಲ ? ಎಂದು ಕೇಳಬಹುದು. 'ಇಂಗ್ಲೀಷು ಮತ್ತು ಸಂಸ್ಕೃತ ಭಾಷೆಗಳು ಸಹ ತೋರಿಕೆಯಲ್ಲಿ ಒಂದೇ ಬಗೆಯಾಗಿ ಕಾಣುವದಿಲ್ಲ. ಆದರೂ ಅವು ಒಂದೇ ವರ್ಗದ್ದಾಗಿವೆಯೆಂದು ಭಾಷಾ ಶಾಸ್ತ್ರಜ್ಞರು ಹೇಳುತ್ತಾರಲ್ಲ; ಇದು ಹೇಗೆ ? ಎಂದು ಕೇಳಬಹುದು. 'ಕನ್ನಡ ಲಿಪಿ ಹಾಗೂ ದೇವನಾಗರೀ ಲಿಪಿ ಇವೆರಡೂ ತೋರಿಕೆಯಲ್ಲಿ ಬೇಕಾದಷ್ಟು ಭಿನ್ನವಾಗಿದ್ದರೂ ಅಶೋಕ ಮಹಾರಾಜನ ಬ್ರಾಹ್ಮೀ ಲಿಪಿಯೊಂದರಿಂದಲೇ ಇವೆರಡೂ ಲಿಪಿಗಳು ಹುಟ್ಟಿವೆ ಎಂಬುದು ಕಾಲ ಕಾಲದ ಅಲ್ಲಲ್ಲಿಯ ಶಿಲಾಲೇಖಗಳಿಂದಲೇ ಸಿದ್ಧವಾಗಿದೆಯಲ್ಲವೇ ?' ಎಂದು ಒಂದು ಮಾದರಿಯನ್ನು (ಪರಸ್ಪರ ವಿರೋಧವಾಗಿ ಕಾಣುತ್ತಿದ್ದರೂ ಮೂಲದಲ್ಲಿ ಒಂದೇ ಆಗಿರಬಲ್ಲವೆಂಬುದಕ್ಕೆ) ತೋರಿಸಬಹುದು. ಅಲ್ಲದೆ, ಸಿಲೋನಿನ ಓರ್ವ ನೂತನ ಭಾಷಾ ಶಾಸ್ತ್ರಜ್ಞರು (ಫಾದರ್ ಕ್ನೋಸೆಟ್‌ರು) ದ್ರಾವಿಡವು ಜಗತ್ತಿನ ಎಲ್ಲ ಭಾಷೆ ಗಳಿಗೆ (ಸಂಸ್ಕೃತ, ಗ್ರೀಕ್, ಲ್ಯಾಟಿನ್‌ಗಳಿಗೆ ಸಹ) ಹೊಂದಿಕೆಯಾಗುತ್ತದೆಯೆಂಬುದನ್ನು ಸೋದಾಹರಣವಾಗಿ ತೋರಿಸಿದ್ದಾರೆ. ಕಾಲ್ಡವೆಲ್‌ರು ಇರಾಣದ ಬೆಹಿಸ್ತುನ್ ಎಂಬಲ್ಲಿ ಸಿಕ್ಕ ಅತಿ ಪುರಾತನ ದ್ರಾವಿಡ ವರ್ಗದ ಶಿಲಾಲೇಖದ ಆಧಾರದಿಂದ ದ್ರಾವಿಡ, ಆರ್ಯ, ಐರೋಪ್ಯ ಭಾಷೆಗಳಿಗೆಲ್ಲ ಮಧ್ಯ ಏಶಿಯಾದ ಯಾವುದೋ ಒಂದೇ ಭಾಷೆಯು ಮೂಲ ಭಾಷೆಯಾಗಿರಬೇಕೆಂಬ ಸಿದ್ಧಾಂತಕ್ಕೆ ಸಮೀಪಿಸಿದ್ದಾರೆ. ಇದೆಲ್ಲದರ ಮೇಲಿಂದ ಸುಮ್ಮಸುಮ್ಮನೆ ನಾವು ಆರ್ಯ, ದ್ರಾವಿಡ ಮೊದಲಾದ ಭೇದಗಳಿಗೆ ಎಡೆಗೊಟ್ಟು ನಮ್ಮ ಹಿಂದುಸ್ತಾನದ ಪುರಾತನ ಪವಿತ್ರ ಸಂಸ್ಕೃತಿಗೆ ವಿರೋಧಿಗಳಾಗಿ ನಿಲ್ಲಬಾರದೆಂದು ಕಲಿತುಕೊಳ್ಳಬೇಕಾಗಿದೆಯಲ್ಲವೇ ? ಶೈವವಾದರೂ ಅಷ್ಟೇ. ವೈಷ್ಣವವಾದರೂ ಅಷ್ಟೇ; ಎರಡೂ ಆರ್ಯ ಸಂಸ್ಕೃತಿಗಳೇ ಸರಿ. ಜೈನ ಪುರಾಣಗಳಲ್ಲಿ ಶ್ರೀ ರಾಮ, ಶ್ರೀ ಕೃಷ್ಣ ಮೊದಲಾದ ಅವತಾರ ಪುರುಷರನ್ನು ಜೈನ ಧರ್ಮದವರೆಂದು ವರ್ಣಿಸಲಾಗಿದೆ. ಬೌದ್ಧ ಜಾತಕ ಕಥೆಗಳಲ್ಲಿ "ದಶರಥ ಜಾತಕ" ದಲ್ಲಿ ಶ್ರೀ ರಾಮ, ಸೀತಾದೇವಿ ಲಕ್ಷ್ಮಣರ ಕಥೆಯು ಬರುತ್ತದೆ. ಆದ್ದರಿಂದ ಅವರನ್ನು ಬೌದ್ಧರು ಬೌದ್ಧಧರ್ಮದವರೆಂದು (ಹಿಂದಿನ ಯುಗದ ಬುದ್ಧರಿಗೆ ಸಂಬಂಧಿಸಿದವರೆಂದು) ತಿಳಿದುಕೊಳ್ಳುತ್ತಿದ್ದರೆ ತಪ್ಪೇನು ? ಇದರಂತೆ ಶ್ರೀ ರಾಮ ಚಂದ್ರನು ರಾಮೇಶ್ವರದಲ್ಲಿ ಶ್ರೀ ರಾಮೇಶ್ವರ ಲಿಂಗವನ್ನು ಸ್ಥಾಪಿಸಿದಂದಿನಿಂದಲೂ ಶ್ರೀ ಕೃಷ್ಣನು ತನ್ನ ಮಗನಿಗೆ ಸಾಂಬನೆಂದು ಹೆಸರಿಟ್ಟಿದ್ದರ ಮೇಲಿಂದಲೂ ಅರ್ಜುನನು ತಪಶ್ಚರ್ಯದಿಂದ ಶ್ರೀ ಮಹಾದೇವನನ್ನು ಒಲಿಸಿಕೊಂಡು ಪಾಶುಪತಾಸ್ತ್ರ ವನ್ನು ಪಡೆದುಕೊಂಡನೆಂಬುದರ ಮೇಲಿಂದಲೂ ಶೈವರು ಇವರನ್ನೆಲ್ಲ ಶಿವೋಪಾಸಕ ರಿದ್ದರೆಂದು ಶೈವ ಪುರಾಣಗಳಲ್ಲಿ ನಂಬಿದ್ದರೆ ಇದರಲ್ಲಾದರೂ ಏನು ತಪ್ಪಿದೆ ? ಅದೇ ಮಹಾಪುರುಷರಿಗೆ ಶೈವರು ಶಿವಪುರಾಣಗಳಲ್ಲಿ ಶಿವೋಪಾಸಕರೆಂದೂ ವೈಷ್ಣವರು ವೈಷ್ಣವಪುರಾಣಗಳಲ್ಲಿ ವಿಷ್ಣೋಪಾಸಕರೆಂದೂ ಜೈನರು ಜೈನಪುರಾಣಗಳಲ್ಲಿ ಜಿನೋಪಾಸಕರೆಂದೂ ಬೌದ್ಧರು ತ್ರಿಪೀಟಕಗಳಲ್ಲಿ ಬುದ್ಧೋಪಾಸಕರೆಂದೂ ವರ್ಣಿಸ

ಬೇಕಾದರೆ ಶೈವ, ವೈಷ್ಣವ, ಬೌದ್ಧ, ಜೈನ ಧರ್ಮಗಳೆಲ್ಲ ಯಾವ ಒಂದು ಮೂಲ ಜನಾಂಗದಲ್ಲಿ ಹುಟ್ಟಿದವೋ ಆ ಮೂಲ ಆರ್ಯ ಜನಾಂಗವೊಂದಕ್ಕೆ ಮೇಲ್ಕಾಣಿಸಿದ ಮಹಾಪುರುಷರೆಲ್ಲ ಸೇರಿದವರಾಗಿದ್ದರು ಎಂದಿಷ್ಟೇ ಸಿದ್ಧವಾಗುವದಿಲ್ಲವೆ ?

ಅಲ್ಲದೆ 'ದೇವತೆಗಳು' ಹಾಗು 'ಅಸುರರು' ಎಂಬೆರಡು ಶಬ್ದಗಳಲ್ಲಿ 'ಅಸುರ'ರನ್ನು ಒಂದು ಜನಾಂಗವಾಚಕವಾದ 'ದ್ರಾವಿಡ' ಎಂಬ ಶಬ್ದಕ್ಕೆ ಪರ್ಯಾಯ ಶಬ್ದವಾಗಿ ಸ್ವೀಕರಿಸುವುದಾದರೆ 'ದೇವತೆಗಳು' ಎಂಬ ಶಬ್ದವನ್ನು ಆರ್ಯರು ತಮ್ಮ ಜನಾಂಗವಾಚಕವಾಗಿ ತಮ್ಮ ಯಾವ ಪುರಾತನ ಗ್ರಂಥಗಳಲ್ಲಾದರೂ ಹೇಳಿದ್ದು ಸಿಗುತ್ತದಯೇ ? ಇಲ್ಲವೇ ಇಲ್ಲ. ಅವರು ತಮ್ಮ ಉಪಾಸ್ಯ ದೇವತೆಗಳಾದ ಪರಲೋಕದಲ್ಲಿರುವ ದಿವ್ಯ ಜೀವಿಗಳಿಗೆ 'ದೇವತೆಗಳು' ಎಂದು ಕರೆದಿರುವರೇ ಹೊರತು ಇಹಲೋಕದಲ್ಲಿರುವ ಯಾರನ್ನೂ ಕುರಿತು ಅವರು ಆ ಶಬ್ದವನ್ನು ಉಪಯೋಗಿಸಿಲ್ಲ. ಇದರಂತೆಯೇ ವೃತ, ಪಣಿ, ನಮುಚಿ, ವಲ ಮೊದಲಾದ ಸಪ್ತ ಆಕಾರದ ಅಸುರರೂ ಕೂಡ ಪರಲೋಕದ ದೇವತಾ ವಿರೋಧೀ ಶಕ್ತಿಗಳಾಗಿರುವರೇ ಹೊರತು ಇಹಲೋಕದ ಯಾವದೇ ಜನಾಂಗವಾಚಿಯಾದ ಶಬ್ದಗಳು ಅವಲ್ಲ ಎಂಬುದು ಸುಸ್ಪಷ್ಟವಾಗಿದೆ.

ಕಾಲಕಾಲಕ್ಕೆ ಇಂಥ ದೇವ-ದಾನವರ ಆವಿರ್ಭಾವವು ಈ ಲೋಕದಲ್ಲಿ ಮಾನವ ದೇಹದಲ್ಲಿಯೇ ಆಗುತ್ತಿರುವದಾದರೂ ಅವರೂ ಆಯಾ ಜನಾಂಗದಲ್ಲಿ ವ್ಯಕ್ತಿ ವಿಶಿಷ್ಟರಾಗಿ ಇರುವರೇ ಹೊರತು ಇಡೀ ಒಂದು ಜನಾಂಗವನ್ನೇ ಅಸುರರೆಂದಾಗಲಿ, ದೇವತೆಗಳೆಂದಾಗಲಿ ಹೇಳಲಿಕ್ಕೆ ಬರುವಂತಿಲ್ಲ. ಒಂದು ಜನಾಂಗದಲ್ಲಿಯೇ ಅವರೂ ಬಂದಿರುವದುಂಟು; ಇವರೂ ಬಂದಿರುವದುಂಟು. ಯಾದವರಲ್ಲಿಯೇ ಶ್ರೀ ಕೃಷ್ಣನೂ ಬಂದಿದ್ದನು; ಕಂಸನೂ ಬಂದಿದ್ದನು. ರಾವಣನ ತಂದೆಯು ಮಹರ್ಷಿಗಳಲ್ಲೊಬ್ಬನಾಗಿದ್ದರೆ (ಪುಲಸ್ತ್ಯ), ರಾವಣನು ಮಹಾ ರಾಕ್ಷಸನಾಗಿದ್ದನು. ಘಟೋತ್ಕಚನು ರಾಕ್ಷಸನಾಗಿದ್ದರೂ ಅಭಿಮನ್ಯುವಿನ ಬಾಣದೇಟಗೆ ಮಣಿದು ದೇವ ಕಾರ್ಯಕ್ಕೆ ಸಹಾಯಕನಾಗಿದ್ದನು. ಹೀಗೆಯೇ, ಮಂಡೋದರಿಯು ಮಹಾ ದೇವಾಂಶ ಸಂಭೂತೆಯಾಗಿದ್ದಳು. ಅಂತಲೇ ಅವಳು ರಾವಣನನ್ನು ದುರ್ಮಾರ್ಗದಿಂದ ಹೊರಳಿಸುವದಕ್ಕೆ ಮಹಾಸಾಹಸ ಮಾಡಿ ಅಹಲ್ಯಾ, ಸೀತಾ, ದ್ರೌಪದಿ, ತಾರಾ ಮೊದಲಾದ ಪಂಚ ಕನ್ಯೆಯರಲ್ಲಿ ಸ್ಥಾನವನ್ನು ಪಡೆದಿರುವಳು. ವಿಭೀಷಣನು ಭಕ್ತಿ-ಶಾಸ್ತ್ರಾಚಾರ್ಯರಲ್ಲಿ ಒಬ್ಬನೆಂದು 'ನಾರದ ಭಕ್ತಿಸೂತ್ರ'ದಲ್ಲಿ ಹೇಳಲಾಗಿದೆ. 'ಕೆಟ್ಟ ಕೆಲಸ ಮಾಡಿ ಮನುಷ್ಯರೂ ಕೂಡ ಅಸುರ ಜನ್ಮಕ್ಕೆ ಹೋಗುತ್ತಾರೆ. ಆದರೆ ಇಲ್ಲಿ ಪರಿತಾಪ ಪಟ್ಟು, ಪಶ್ಚಾತ್ತಾಪ ಹೊಂದಿ ಪರಮಾತ್ಮನಿಗೆ ಶರಣಾಗತರಾದರೆ ಪುನಃ ಅವರ ದಿವ್ಯ ಪ್ರಗತಿಗೆ ಆರಂಭವಾಗುತ್ತದೆ' ಎಂದು ಶ್ರೀ ಅರವಿಂದರು ಒಂದೆಡೆಯಲ್ಲಿ ಹೇಳಿದ್ದಾರೆ.

ಇಹಲೋಕದಲ್ಲಿ ರಾವಣನಿಗೆ ಮಂಡೋದರಿ-ವಿಭೀಷಣರಿದ್ದಂತೆ ಪರಲೋಕದಲ್ಲಿ (ನಿಜವಾಗಿ ನೋಡಿದರೆ ದಶಾವತಾರಗಳೆಲ್ಲ ಪೃಥ್ವಿಯ ಮೇಲೆ ಆಗಿರುವದರಿಂದ

ನರಸಿಂಹಾವತಾರದ ಕಾಲಕ್ಕೆ ಬಂದ ಹಿರಣ್ಯಕಶಿಪುವೂ ಕೂಡ ಭೂಲೋಕದಲ್ಲಿಯೇ ಅರಸನಾಗಿ ಮಾನವ ರೂಪದಲ್ಲಿಯೇ ಆವಿರ್ಭವಿಸಿದ್ದನೆಂದು ತೋರುತ್ತದೆ.) ಹಿರಣ್ಯಕಶಿಪುವಿಗೆ ಪ್ರಹ್ಲಾದನು ಮಹಾದೇವಾಂಶ ಸಂಭೂತನಾಗಿದ್ದನು. 'ನಾರದ ಭಕ್ತಿ ಸೂತ್ರ'ದಲ್ಲಿ ಬರುವ ಹದಿಮೂರು ಜನ ಭಕ್ತ್ಯಾಚಾರ್ಯರ (ಭಕ್ತಿಶಾಸ್ತ್ರ ಪ್ರವರ್ತಕರ) ನಾಮ ನಿರ್ದೇಶದಲ್ಲಿ ಪ್ರಹ್ಲಾದನ ಹೆಸರು ಬಂದಿದೆಯೆಂದು ಈಗ ನನಗೆ ನೆನಪಿಗೆ ಬರುತ್ತಿದೆ. ಆದ್ದರಿಂದ ನಾವು ಹಿರಣ್ಯಕಶಿಪುವಿನಂತೆ ಅಸುರಗುಣದವರಾಗದೆ ಧ್ರುವ, ಪ್ರಹ್ಲಾದ, ಸಿದ್ಧರಾಮೇಶ್ವರ, ಅಕ್ಕಮಹಾದೇವಿಯರಂತೆ ಇಷ್ಟೇ ಏಕೆ, ಬಾಲ್ಯದಲ್ಲಿಯೇ ಪರಮೇಶ್ವರನಿಗಾಗಿ ಮನೆ – ಮಠಗಳನ್ನು ತೊರೆದ ಶ್ರೀ ಬಸವೇಶ್ವರರಂತೆ ಭಗವದ್ಭಕ್ತರಾಗಬೇಕೆಂಬುದೇ ಈ ನಾಟಕದ ಉದ್ದೇಶ. ಪರಶಿವನೆಂದರೂ ಒಬ್ಬನೇ ಆದಿನಾರಾಯಣನೆಂದರೂ ಆತನೇ, ಪರಬ್ರಹ್ಮನೆಂದರೂ ಅವನೇ. ಯಾವ ನಾಮದಿಂದಾದರೂ ಆ ಒಬ್ಬ ಪರಮಾತ್ಮನನ್ನೇ ಸ್ಮರಿಸುವವರು ನಾವಾಗಬೇಕು. ಇದೇ ನಮ್ಮ ಗುರಿ, ಇದೇ ನಮ್ಮ ತಾರಣೋಪಾಯ, ಇದೇ ಈ ಚಿಕ್ಕ ನಾಟಕದ ಮೂಲ ಉದ್ದೇಶ. ಶ್ರೀ ಅರವಿಂದಾಶ್ರಮದ ಶ್ರೀ ಮಹಾಮಾತೆಯವರು ಈ ಚಿಕ್ಕ ನಾಟಕದ ಪ್ರಕಟನೆಗೆ ತಮ್ಮ ದಿವ್ಯ ಅನುಜ್ಞೆಯನ್ನು ದಯಪಾಲಿಸಿದ್ದಾರೆ. ಇದು ನಮ್ಮ ನಾಡಿನ ಮಹಾಭಾಗ್ಯ.

ಸಾಧಕ ಬಂಧುವರರ ಕೃತಿ, ಶ್ರೀ ಮಹಾಮಾತೆಯವರ ದಿವ್ಯಾಶೀರ್ವಾದ, ಇಂಥ ಮಹಾಪರ್ವದಲ್ಲಿ ನನಗೆ ಮುನ್ನುಡಿ ಬರೆಯುವ ಸೇವೆ ಲಭಿಸಿದ್ದಕ್ಕೆ ನಾನು ಮಹಾಧನ್ಯನು. ಆದರೆ ಚಿಕ್ಕ ನಾಟಕಕ್ಕೆ ದೀರ್ಘ ಪ್ರಸ್ತಾವನೆಯನ್ನೇಕೆ ಬರೆದೆನೋ ? ಎಂದು ನನ್ನದು ನನಗೇ ದಿಗಿಲೆನಿಸುತ್ತದೆ. ಆದರೆ ಇತ್ತೀಚೆಗೆ ನಮ್ಮ ನಾಡಿನಲ್ಲಿ ಕಾಲಪ್ರವಾಹದಿಂದ ಇಣಿಕಿಹಾಕುತ್ತಿರುವ ಕೆಲವೊಂದು ಅವಸರ–ಬವಸರ ವಿಚಾರ ಸರಣಿಗೆ 'ನಿಜವಾದ ದಿಶೆಯ ಕಡೆಗೆ ಬೆರಳು ಮಾಡಿ ತೋರಿಸುವ ಉದ್ದೇಶದಿಂದ ಭಗವಾನ ಶ್ರೀ ಅರವಿಂದರ ಹಾಗೂ ಭಗವತಿ ಶ್ರೀ ಮಹಾಮಾತೆಯವರ ಪರಮ ಕೃಪೆಯೇ ನನಗೆ ಈ ರೀತಿ ಸುದೀರ್ಘವಾದ ಮುನ್ನುಡಿಯನ್ನು ಬರೆಯುವದಕ್ಕೆ ಪ್ರೇರಿಸಿತೋ ಏನೋ ಎಂದು ನಾನು ಭಾವಿಸುತ್ತೇನೆ.

ನನಗೀ ಮುನ್ನುಡಿಯನ್ನು ಬರೆಯುವ ಸುಸಂಧಿಯನ್ನು ಒದಗಿಸಿಕೊಟ್ಟದ್ದಕ್ಕಾಗಿ ಶ್ರೀ ಅರವಿಂದಾಶ್ರಮದಲ್ಲಿರುವ ನನ್ನ ಗೆಳೆಯರಾದ ಶ್ರೀ ಆದಮ ಸಾಹೇಬರಿಗೆ ನನ್ನ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುವೆನು. ಇದಲ್ಲದೆ ಉದ್ದವಾದ ಮುನ್ನುಡಿ ಬರೆದು ವಾಚಕರಿಗೆ ತೊಂದರೆ ಕೊಟ್ಟಿದ್ದಕ್ಕಾಗಿ ನಾನವರ ಕ್ಷಮೆಯನ್ನು ಹಾರೈಸುವೆನು.

ಜಗತಃ ಪಿತರೌ ವಂದೇ. ಓಂ ಶ್ರೀ ಓಂ.

೧೦–೧೨–೧೯೫೨

## ಸ್ತ್ರೀ ನೀತಿ ಸುಧಾಕರ

ಲೇಖಕರು : ಗಿರಿಯಪ್ಪಗೌಡ ಓದುಗೌಡರ

---

### ಮುನ್ನುಡಿ

ಭ್ರಾತೃವರ ಶ್ರೀ ಗಿರಿಯಪ್ಪಗೌಡರ ಈ ಪ್ರಸ್ತುತ ಗ್ರಂಥಕ್ಕೂ ಅವರ ಮನೆತನದ ಸಂಸ್ಕೃತಿಗೂ ನಿಕಟವಾದ ಸಂಬಂಧವಿದೆ. ಇವರ ಮನೆತನದಲ್ಲಿ ಬುನಾದಿಯಿಂದ ನಡೆದು ಸುಡಿದದ್ದನ್ನೇ ಇವರು ಈ ಗ್ರಂಥದಲ್ಲಿ ತಮ್ಮ ಮಗಳಿಗೆ ಉಪದೇಶಪರವಾಗಿ ಪತ್ರರೂಪದಿಂದ (ನಿಜವಾಗಿಯೂ ಮಗಳಿಗೆ ಪತ್ರಗಳನ್ನು ಬರೆದು) ಹೇಳಿದ್ದಾರೆ. ಇಂಥ ತಂದೆಯವರ ಕಡೆಯಿಂದ ಉಪದೇಶಗಳನ್ನು ಹೇಳಿಸಿಕೊಂಡ ಇವರ ಮಗಳೂ ಧನ್ಯ. ಆ ತಂಗಿಗೆ ಬರೆಯಲ್ಪಟ್ಟ ಉಪದೇಶಪರ ಪತ್ರಗಳನ್ನು ಓದಿ ಉಪಯೋಗ ಮಾಡಿಕೊಳ್ಳುವ, ಹೊಸದಾಗಿ ಸಂಸಾರದಲ್ಲಿ ಕಾಲಿಡಲಿರುವ ನಮ್ಮ ನಾಡಿನ ಉಳಿದೆಲ್ಲ ಅಕ್ಕ ತಂಗಿಯರಿಗೂ ಮಹತ್ ಲಾಭ ಎಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಹೆಣ್ಣುಮಕ್ಕಳಿಗೆ ವಾಚನಾಭಿರುಚಿ ಕಡಿಮೆಯೆಂದು ತಿಳಿದು ಅಂಥವರಿಗೆ ಅಭಿರುಚಿ ಹುಟ್ಟಿಸಲಿಕ್ಕೆಂದು ಗ್ರಂಥಕರ್ತರು ಬಹುಶಃ ಪ್ರತಿಯೊಂದು ಪತ್ರದಲ್ಲಿ ಸೇರಿಸಿದ ಪುರಾಣ ಕೀರ್ತನೆಗಳೊಳಗಿನ ವಿನೋದಪರ ಕಥೆಗಳನ್ನು ಬಿಟ್ಟು ಬರಿ ಇವರ ಪತ್ರಗಳ ಮೂಲ ವಿಷಯವನ್ನಷ್ಟೇ ಓದಿದರೆ ಹೊಸದಾಗಿ ಸಂಸಾರದಲ್ಲಿ ಕಾಲಿಡಲಿರುವ ಹೆಣ್ಣುಮಕ್ಕಳಿಗೆ ಇದೊಂದು ಅನುಭವ ಭಾಂಡಾರವೇ ಆಗಿರುವದೆಂದು ಯಾರಿಗಾದರೂ ಸ್ಪಷ್ಟವಾಗಿ ಅನಿಸದಿರದು.

ತವರು ಮನೆಯಿಂದ ಪತಿಗೃಹಕ್ಕೆ ಪ್ರಯಾಣ. ಅತ್ತೆಯ ಮನೆಯಲ್ಲಿ ನಡೆದುಕೊಳ್ಳಬೇಕಾದ ರೀತಿ, ಪತಿ ಸೇವೆ, ಸತಿಗೆ ಪತಿಯೇ ಗತಿ, ಗಂಡನ ಪ್ರೇಮವನ್ನು ಗಳಿಸುವ ರೀತಿ, ಪತಿವ್ರತಾ ಮಹಿಮೆ, ಅತ್ತೆಮಾವಂದಿರ ಸೇವೆ. ಅತ್ತಿಗೆ ನಾದಿನಿ ನೆಗೆಯಣ್ಣಿಯವರೊಡನೆ ಎಂತಿರಬೇಕು, ಹಟಮಾರಿತನ, ದುಷ್ಟ ಸ್ತ್ರೀಯರು, ಸವತಿ ಮತ್ಸರ, ಸದ್ಗುಣಗಳಿಂದ ಸದ್ಗತಿ, ದುರ್ಗುಣಗಳಿಂದ ದುರ್ಗತಿ, ಸತ್ಯಕ್ಕೆ ಸಾವಿಲ್ಲ; ಸುಳ್ಳಿಗೆ ಸುಖವಿಲ್ಲ, ನಿಂದೆಯಂಥ ಅಧಿಕ ಪಾತಕವಿಲ್ಲ, ಕ್ರೋಧವು ತಾಪದ ಬೀಡು,

ಆಭರಣಗಳ ಹುಚ್ಚು, ಸಿರಿಯು ಸ್ಥಿರವಲ್ಲ, ಅತಿಥಿ ಸತ್ಕಾರ, ಗರ್ಭಿಣಿ ಇದ್ದಾಗ್ಗೆ ಆಚರಿಸುವ ರೀತಿ. ಹೆರಿಗೆಯಾದ ಮೇಲೆ ಮಾಡಬೇಕಾದ ಉಪಚಾರ, ಶಿಶು ಸಂಗೋಪನ, ಅಜ್ಞಾನವೇ ದುಃಖಕ್ಕೆ ಕಾರಣ, ಆತ್ಮಸಾಕ್ಷಾತ್ಕಾರ ಎಂಬ ಇಪ್ಪತ್ನಾಲ್ಕು ವಿಷಯಗಳನ್ನು ಗ್ರಂಥಕರ್ತರು ವಿವೇಚಿಸಿರುವಗರ ಮೇಲಿಂದಲೇ ಹೆಣ್ಣುಮಕ್ಕಳಿಗೆ ಈ ಪುಸ್ತಕವು ಎಷ್ಟು ಉಪಯುಕ್ತವಾಗಿದೆಯೆಂಬುದು ಕಂಡುಬರುವಂತಿದೆ.

"ಕರ್ನಾಟಕದ ಗಾಂಧಿ"ಯುವರೆಂದು ಕನ್ನಡಿಗರ ಹೃದಯಕ್ಕೆಲ್ಲ ಅನಿಸುತ್ತಿದ್ದ ದಿವಂಗತರಾದ ಶ್ರೀ ಹರ್ಡೇಕರ ಮಂಜಪ್ಪನವರ "ಸ್ತ್ರೀ ನೀತಿ ಸಂಗ್ರಹ", "ಬುದ್ಧಿಯ ಮಾತು"ಗಳಂಥ ಮುತ್ತು ರತ್ನಗಳಂತಿರುವ ಪುಸ್ತಕಗಳು ಕನ್ನಡ ನಾಡಿನ ತರುಣ ತರುಣಿಯರಿಗೆ ಈಗ ಲಭ್ಯವಿಲ್ಲವಲ್ಲಾ !!! ಎಂದು ಎರಡು ಮೂರು ವರುಷ ಗಳಿಂದಲೂ (ದಿವಂಗತ ಮಂಜಪ್ಪನವರು ಪರಮಾತ್ಮನ ದಿವ್ಯವಾದ ಸನ್ನಿಧಿಯನ್ನು ಸೇರಿದಾಗಿನಿಂದಲೂ) ನನ್ನ ಹೃದಯದಲ್ಲಿ ಘನಘನವಾಗಿ ಅನಿಸತೊಡಗಿದ್ದಿತು. ಇಷ್ಟೇ ಅಲ್ಲ; ಮುನ್ನಾದಿನವೇ ಈ ವಿಷಯವನ್ನು ನನ್ನೊಬ್ಬ ಲೇಖಕ-ಪ್ರಕಾಶಕ ಮಿತ್ರರ ಇದಿರಿಗೆ ಪ್ರಕಟಮಾಡಿದ್ದೆ, ಮರುದಿನವೇ ಭ್ರಾತೃವರ ಶ್ರೀ ಗಿರಿಯಪ್ಪ ಗೌಡರು ತಮ್ಮೀ ಪ್ರಸ್ತುತ ಪುಸ್ತಕದ ಮುದ್ರಣದ ಸಿದ್ಧತೆ ಮಾಡಿಕೊಂಡು "ಮುನ್ನುಡಿ"ಯ ಸಲುವಾಗಿ ನನ್ನಡೆಗೆ ಬಂದರು. ಈ ಪುಸ್ತಕವನ್ನೋದಿದ ಬಳಿಕ ಅಂಥದೊಂದು ಕೊರತೆಯು (ಹೆಣ್ಣುಮಕ್ಕಳ ಮಟ್ಟಿಗಾದರೂ) ದೂರಾಯಿತೆಂದು ನನಗೆ ಬಹಳ ಸಂತೋಷವಾಯಿತು !!!

ಇವರ ಇಂಥ ಪುಟ್ಟ ಪುಸ್ತಕಕ್ಕೆ ಪ್ರಸ್ತುತ ಮುನ್ನುಡಿಯನ್ನು ಬರೆಯುವ ಸೌಭಾಗ್ಯವು ಲಭಿಸಿದ್ದಕ್ಕಾಗಿ ನನಗೆ ಪರಮಾನಂದವೆನಿಸುತ್ತದೆ. ಕನ್ನಡ ನಾಡಿನ ಬಂಧು ಭಗನಿಯರೆಲ್ಲರೂ ಇವರ ಈ ಪುಸ್ತಕವನ್ನು ಸ್ವಾಗತಿಸಿ ಇವರ ಶ್ರಮವನ್ನು ಸಾರ್ಥಕಗೊಳಿಸುವರೆಂದು ಹಾರೈಸಿ ನನ್ನೀ ಮುನ್ನುಡಿಯನ್ನು ಮುಗಿಸುತ್ತೇನೆ.

ಓಂ ಶ್ರೀ ಓಂ

ಜಗತಃ ಪಿತರೌ ವಂದೇ । ಪಾರ್ವತಿ ಪರಮೇಶ್ವರೌ ॥

ಜಗತ್ತಿನ ತಾಯಿ ತಂದೆಗಳಾದ ಶ್ರೀ ಪಾರ್ವತಿ ಪರಮೇಶ್ವರರ ದಿವ್ಯಚರಣ ಗಳಿಗೆ ಅನಂತಾನಂತ ಪ್ರಣಾಮಗಳು

ಓಂ ಶ್ರೀ ಓಂ

೧೯೫೩

# ಕೆಲವು ಮುದ್ರಣ ದೋಷಗಳು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫೧ | ೯ | ನೇವುಚಂದ್ರ | ನೇಮಿಚಂದ್ರ |
| ೭೧ | ೧೬ | ಚತಂಭುಜನಾದಂ | ಚತಂಭುರ್ಜನಾದಂ |
| ೧೦೧ | ೧೩ | ನೂರೆಂದು | ನೂರೊಂದು |
| ೧೬೭ | ೩ | ಸಂವೂರ್ಣ | ಸಂಪೂರ್ಣ |
| ೨೨೬ | ೨ | ವಿಚಾರಂತ್ಯ | ವಿಚಾರಾಂತ್ಯ |
| ೨೩೬ | ೯ | ಕಾಲವೊಂದು | ಕೆಲವೊಂದು |
| ೨೩೭ | ೧೯ | ಅರ್ಥ | ಅರ್ಧ |
| ೨೪೯ | ೧೧ | ಸಿಕ್ಕಿಪಂತಹರನ್ನು | ಸಿಕ್ಕದಂತಹರನ್ನು |
| ೨೬೭ | ೧೭ | ಪಣ | ಹೆಣ |
| ೨೬೮ | ೧೩ | ಹೊಳಿಗೀ | ಹೊಗೀ |
| ೨೭೩ | ೧೨ | ಕಲ್ಬ ನಾಶಕ್ತಿ | ಕಲ್ಪನಾಶಕ್ತಿ |
| ೨೫೦ | ೬ | ಕೆಲಬರಿವನಗಿ | ಕೆಲಬರಿವಸತಿ |
| ೨೯೮ | ೧೯ | ಅ ವೃಷ್ಟಿಗೆ | ಆ ದೃಷ್ಟಿಗೆ |
| ೩೦೯ | ೯ | ಒಳಿಕ | ಬಳಿಕ |
| ೩೧೧ | ೨೦ | ಕವಿಗಳೂ | ಕವಿಗಳ |
| ೩೩೭ | ೧ | ಸಿಟ್ಟೆಲುವ | ನಿಟ್ಟೆಲುವ |
| ೩೩೭ | ೨ | ಅಟ್ಟಿ | ಅಟ್ಟೆ |
| ೩೩೭ | ೧೮ | ಒಚ್ಚಬರಿಯ | ಬಚ್ಚಬರಿಯು |
| ೩೩೮ | ೪ | ಊಧ್ವಕ್ಕೇರಲು | ಊರ್ಧ್ವಕ್ಕೇರಲು |
| ೩೬೫ | ೨೨ | ರವಣಿ | ರಮಣಿ |
| ೩೯೦ | ೧೯ | ಪ್ರದೇಶಿಕತೆ | ಪ್ರಾದೇಶಿಕತೆ |
| ೪೨೫ | ೧೫ | ಅಘಾತ | ಅಘಾಟ |
| ೪೨೫ | ೨೦ | ವುಗಿಲುದ್ದದ | ಮುಗಿಲುದ್ದದ |
| ೪೫೫ | ೯ | ವಿಜಾರವು | ವಿಚಾರವು |
| ೪೬೦ | ೮ | ಸಪಸ್ತ | ಸಮಸ್ತ |
| ೪೬೦ | ೧೧ | ಒನವು | ಒನಪು |
| ೪೬೭ | ೯ | ವಿವೇಕಾನಂವರ | ವಿವೇಕಾನಂದರ |
| ೫೦೯ | ೧೪ | ಮೂರ್ತಿಯಂತ | ಮೂರ್ತಿಮಂತ |
| ೫೧೫ | ೧೮ | ಹಂಟ್ಟಿದಂತಿರಂವ | ಹುಟ್ಟಿದಂತಿರುವ |
| ೫೧೬ | ೩೧ | ವಾಚಬಾರದು | ಮಾಡಬಾರದು |

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿ ಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳಿವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳಿವಳಿಕೆಗಳು ಒಂದ ಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್‌ಭ್ರಮೆಯನ್ನೂ ತಂದಿವೆ. ಈ ತಿಳಿವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾ ಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆ ಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯ ವನ್ನೂ ಅದು ಪ್ರಕಟಿಸಬೇಕು. ಇದು ತಿಳಿವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ.

ಡಾ॥ ಗುರುಲಿಂಗ ಕಾಪಸೆಯವರು ಸಂಪಾದಿಸಿರುವ 'ಮಧುರಚೆನ್ನರ ಲೇಖನ ಗಳು' ಪುಸ್ತಕಗಳನ್ನು ಕನ್ನಡ ವಿಶ್ವವಿದ್ಯಾಲಯ ಮೊದಲ ಬಾರಿಗೆ ಪ್ರಕಟಿಸುತ್ತಿದೆ. ಕನ್ನಡದ ಉತ್ತಮ ಕವಿಗಳಲ್ಲಿ ಒಬ್ಬರಾದ ಮಧುರಚೆನ್ನರ ಲೇಖನಗಳಲ್ಲಿ ಒಳನೋಟ ಗಳಿವೆ. ಚದುರಿಹೋಗಿದ್ದ ಈ ಲೇಖನಗಳನ್ನು ಸಮರ್ಥವಾಗಿ, ಪ್ರೀತಿಯಿಂದ, ಅಚ್ಚುಕಟ್ಟಾಗಿ ಡಾ॥ ಗುರುಲಿಂಗ ಕಾಪಸೆಯವರು ಸಂಪಾದಿಸಿದ್ದಾರೆ.

ಚಂದ್ರಶೇಖರ ಕಂಬಾರ
ಕುಲಪತಿಗಳು

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧